# ಬಿ.ಎಚ್. ಶ್ರೀಧರ

# ಸಮಗ್ರ ಸಾಹಿತ್ಯ

ಸಂಪುಟ-೬

**ಅನುವಾದ-೨**



ಸಂಪಾದಕರು

ರಾಜಶೇಖರ ಹೆಬ್ಬಾರ




ತೇಜು ಪಬ್ಲಿಕೇಷನ್ಸ್

ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ

ಸಂಪುಟ – ೬

# ಅನುವಾದ – ೨

ಸಂಪಾದಕರು

ರಾಜಶೇಖರ ಹೆಬ್ಬಾರ



ತೇಜು ಪಬ್ಲಿಕೇಷನ್ಸ್

ನಂ. 1014, 24ನೇ ಮುಖ್ಯರಸ್ತೆ, 16ನೇ ಕ್ರಾಸ್,
ಬಿ.ಎಸ್.ಕೆ. 2ನೇ ಹಂತ, ಬೆಂಗಳೂರು – 560 070.

B.H. Shridhar's Complete Works
Volume - 6
**ANUVADA - 2**

Edited by
**Rajashekhar Hebbar**

Published by
V. Padmavathi, on behalf of **Teju Publications**
# 1014, 24th Main, 16th Cross, BSK 2nd Stage
Bangalore - 560 070. Mob : 9900195626



First Edition : 2019

Pages : 516 (Box Binding)

Price : ₹ 450 ಬೆಲೆ : ರೂ. ೪೫೦

No. of Copies : 1100

70 GSM N.S. Maplitho – 1/8 Demy

***ಸಲಹೆ ಸಹಕಾರ***
ಪ್ರೊ. ಎಚ್.ಆರ್.ಅಮರನಾಥ, ಡಾ. ಎಮ್.ಜಿ.ಹೆಗಡೆ, ಶ್ರೀ ಸಿ.ಆರ್.ಶಾನಭಾಗ,
ಡಾ. ಸುಮಿತ್ರ ಮೋತಿಲಾಲ ಹಲವಾಯಿ, ಶ್ರೀಮತಿ ರಾಜೇಶ್ವರಿ ಲೋಕರೆ, ಶ್ರೀಕೃಷ್ಣ ಲೋಕರೆ,
ಶ್ರೀಮತಿ ಭುವನೇಶ್ವರಿ ಹೆಗಡೆ

***Cover Design :*** **Bagur Markandaya**

***Typeset at :*** **Page Designers**
Bangalore - 560 004. Ph : 41691270 E-mail : bsmadhu75@gmail.com

***Printed at :*** **Sathyananada Printers**
Pipeline Service Road, Magadi Road,
Bangalore.

# ಅರ್ಪಣೆ

ನೋವು ನುಂಗಿ ನಕ್ಕ ಶ್ರೀಧರರ ಧರ್ಮಪತ್ನಿ
**ಶ್ರೀಮತಿ ರಮಾದೇವಿಯವರಿಗೆ**



## ಚಂದ್ರಲೋಕದ ತಾಯಿ

ತುಸುವೆ ನೋಡಿದೆವು ಎನ್ನುವಂತಿಲ್ಲ
ಅರೆಗಳಿಗೆ ಕಂಡರೂ ಅದು ಪೂರ್ಣವೇ
ಕಂಡದ್ದಲ್ಲ, ಕಣ್ಣ ತುಂಬಿತು ನೋಟ
ಕಣ್ಣುತುಂಬಿದ ಮೇಲೆ ಮನ ಬಾಕಿಯೇ?

ಹಲವೊಮ್ಮೆ ನೋಡಿದ್ದಕ್ಕೆ ಹೆಚ್ಚಾಗಲಿಲ್ಲ
ಹೊಟ್ಟೆಯಲಿ ಹುಟ್ಟಿದ್ದಕ್ಕೇ ಮಕ್ಕಳೆನಿಸಿದ್ದಲ್ಲ
ದೂರ ನಿಂತವರೂ ತಮ್ಮ ಹತ್ತಿರದ ಬಂಧುಗಳೇ
ಅರಿಯದಿದ್ದವರೂ ತಮ್ಮ ಸ್ವಂತದವರೇ!

ಹುಲ್ಲು ಸಸಿ ಕಲ್ಲುಗಳೆಲ್ಲವನೂ ಹಾದು
ಹೊಳೆಸುತ್ತ ಹರಿಸುತ್ತ ಮತ್ತೆ ಹಡೆದಿರಿ ತಾವು
ಭೂಮಿಯೆಂದೆನಲಾರೆ ಚಂದ್ರನಂಥವರನ್ನು
ಮಣ್ಣಾಗಬಹುದೇ ಬೆಳದಿಂಗಳು?

**–ಎಸ್.ಮಂಜುನಾಥ್**
(ಖ್ಯಾತ ಕವಿ)

# ಕವಿ ಕಾವ್ಯ ವಿಚಾರ

ಕವಿ, ಚಿಂತಕ, ವಿಮರ್ಶಕ, ವಾಗ್ಮಿ, ಬಹುಶ್ರುತ ವಿದ್ವಾಂಸ ಪ್ರೊ.ಬಿ.ಎಚ್.ಶ್ರೀಧರರ ಜನನ ೧೯೧೮, ಏಪ್ರಿಲ್ ೨೪ ರಂದು ಬಿಜೂರಿನ (ದ.ಕನ್ನಡ) ಬವಲಾಡಿಯಲ್ಲಿ. ತಂದೆ ಸೀತಾರಾಮ ಹೆಬ್ಬಾರ, ತಾಯಿ ನಾಗಮ್ಮ. ಲಕ್ಷ್ಮಿಯದಿಲ್ಲದಿದ್ದರೂ ಸರಸ್ವತಿಯ ಕೃಪಾಕಟಾಕ್ಷ ಧಾರಾಳವಾಗಿ ಇದ್ದ ಆಶುಕವಿಗಳ, ಪಂಡಿತರ, ಸತ್ಯವ್ರತರ ಕುಟುಂಬ. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಜ್ಞಾನನಿಧಿಗಳೂ, ಗುಣನಿಧಿಗಳೂ ಆದ ಶಿಕ್ಷಕರಿಂದ ಬೋಧನೆ, ಸಂಸ್ಕೃತ ಎಮ್.ಎ. ಪೂರೈಕೆ (೧೯೪೨). ರಮಾದೇವಿಯವರೊಡನೆ ೧೯೪೬ರಲ್ಲಿ ವಿವಾಹ. ನಾಲ್ಕು ಹೆಣ್ಣು, ಒಂದು ಗಂಡು ಮಕ್ಕಳ ತಂದೆ. ೧೯೪೨ರಲ್ಲಿ ಮಿಲಿಟರಿ ಅಕೌಂಟ್ಸ್ ಆಫೀಸಿನಲ್ಲಿ ಗುಮಾಸ್ತಗಿರಿಯಿಂದ ಆರಂಭವಾದ ಉದ್ಯೋಗಪರ್ವ ಶಿಕ್ಷಕವೃತ್ತಿ, ಪತ್ರಿಕೋದ್ಯಮ ಪ್ರಾಚಾರ್ಯಗಿರಿಯವರೆಗೆ ಹಬ್ಬಿದೆ. ಈ ಎಲ್ಲ ಕಾಲಘಟ್ಟಗಳಲ್ಲೂ (೧೯೪೫ರಿಂದಲೇ) ವಿವಿಧ ಸಾಹಿತ್ಯಪ್ರಕಾರಗಳಲ್ಲಿ ಅವಿರತವಾಗಿ ಬರಹ, ಬರಹ–ದೇಹ ಸಂಪೂರ್ಣವಾಗಿ ಸೋಲುವ (ನಿಧನ ೧೯೯೦ ಏಪ್ರಿಲ್ ೨೪) ತುಸು ಮುಂಚಿನವರೆಗೂ. ಶಿಶುಸಾಹಿತ್ಯದಿಂದ ಹಿಡಿದು ವಿಮರ್ಶೆ, ಇತಿಹಾಸ, ದರ್ಶನಗಳವರೆಗೂ ಶ್ರೀಧರರ ಆಸಕ್ತಿ, ಅಭ್ಯಾಸ, ಕೊಡುಗೆ. ಕಾವ್ಯಸೂತ್ರ, ಜ್ಞಾನಸೂತ್ರ, ರಾಷ್ಟ್ರಸೂತ್ರಗಳು ಸೂತ್ರತ್ರಯಗಳೆನಿಸಿಕೊಂಡವುಗಳು, ಬಹು–ಬಹುಮಾನಿತವಾದವುಗಳು. ಜೀವನದ ಮತ್ತು ಸಾಹಿತ್ಯ ಶ್ರೇಷ್ಠತೆಯ ನಿಕಷದ ಅನ್ವೇಷಣೆಯಲ್ಲಿ ಪಾಶ್ಚಾತ್ಯ–ಪೌರಾತ್ಯ ಇತಿಹಾಸ, ಸಾಹಿತ್ಯ, ದರ್ಶನಗಳನ್ನು ಅಭ್ಯಸಿಸಿ ಅರಗಿಸಿಕೊಂಡು ನಿಖರ ನಿಲುವಿಗೆ ಬಂದು ಅದನ್ನು ತಮ್ಮ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ, ಅಸಂಖ್ಯಾತ ಲೇಖನಗಳಲ್ಲಿ ಸ್ಪಷ್ಟವಾಗಿ ("ಧರ್ಮಾದರ್ಥಶ್ಚ ಕಾಮಶ್ಚ" ಎಂದ ವ್ಯಾಸನಷ್ಟೇ ಖಚಿತವಾಗಿ) ಅಭಿವ್ಯಕ್ತಿಸಿದ ವಿಶಿಷ್ಟ ಲೇಖಕ.

# ಸಂಪಾದಕೀಯ

ಯಾವುದೇ ಲೇಖಕನ ಕೃತಿಯೊಂದು ಇಂದಿಗೂ, ಎಂದಿಗೂ ಪ್ರಸ್ತುತವೆನಿಸುವದು ಅದು ಸಾರ್ವಕಾಲಿಕ ಮೌಲ್ಯವನ್ನು ಪ್ರತಿಪಾದಿಸುತ್ತಿದ್ದರೆ ಮಾತ್ರ. ಶತಕ–ದಶಕಗಳ ಹಿಂದಿನ ಶ್ರೇಷ್ಠ ಕೃತಿಗಳು ಇಂದಿಗೂ ಪ್ರಸ್ತುತವೆನಿಸುವದು ಇದೇ ಕಾರಣಕ್ಕೆ ಮತ್ತು ಬದಲಾದ ಕಾಲ–ದೇಶಗಳ ಆವರಣದಲ್ಲಿ ಅವುಗಳ ಪುನರಧ್ಯಯನ ಹೊಸ ಕಾಣ್ಕೆಗೂ, ಜಾಗರಕ್ಕೂ ಕಾರಣವಾಗುತ್ತದೆ. ಏಕೆಂದರೆ ಕಾಲ–ದೇಶಗಳು ಬದಲಾದರೂ ಸಮಾಜವನ್ನು ಕಟ್ಟಿ ನಿಲ್ಲಿಸುವ ಶಕ್ತಿ ಇಂದಿಗೂ ಬದಲಾಗಿಲ್ಲ ಮತ್ತು ಅದರ ಸ್ವರೂಪ ನೈತಿಕವಾದುದೆಂಬುದನ್ನು ಮಾನವಕುಲದ ಚರಿತ್ರೆಯನ್ನು ಅಭ್ಯಸಿಸಿ ಅರ್ಥೈಸಿಕೊಂಡ ಪೂರ್ವಗ್ರಹರಹಿತ ವಿವೇಕಿಗಳೆಲ್ಲರೂ ಒಪ್ಪುತ್ತಾರೆ.

ಪ್ರೊ.ಬಿ.ಎಚ್.ಶ್ರೀಧರರ ಎಲ್ಲ ಕೃತಿಗಳಲ್ಲೂ ಸಮಾಜದ ಸುದೃಢತೆಗೆ ಅನಿವಾರ್ಯವಾದ ಮತ್ತು ಅತ್ಯವಶ್ಯವಾದ ಈ ನೈತಿಕತೆಯ ಅಂತಃಸೂತ್ರದ ಅಭಿವ್ಯಕ್ತಿ ಖಚಿತವಾಗಿ ಮತ್ತು ಪ್ರಬಲವಾಗಿ ಪಡಿಮೂಡಿದೆ. ಹೀಗಾಗಿ ಅವು ಅಂದಿಗೂ, ಇಂದಿಗೂ ಸಲ್ಲುವಂಥವುಗಳೆಂಬ ವಿಚಾರವೇ ಅವುಗಳ ಪುನರ್ಮುದ್ರಣಕ್ಕೆ ಪ್ರೇರಣೆ. ಅವರ ಐವತ್ತಕ್ಕೂ ಹೆಚ್ಚಿನ ಕೃತಿಗಳಲ್ಲಿ ಹಲವಾರು ಪ್ರಾತಿನಿಧಿಕ ಕೃತಿಗಳ ಪ್ರತಿಗಳು ಮುಗಿದುಹೋಗಿ ವಾಚಕವರ್ಗಕ್ಕೆ ಲಭ್ಯವಾಗದ ಪರಿಸ್ಥಿತಿ ಇತ್ತು. ಈಗ ಶ್ರೀಧರರು ಕಾಲವಾದ ೨೨–೨೩ ವರ್ಷಗಳ ಬಳಿಕ ಅವೆಲ್ಲ ಮತ್ತೆ ಬೆಳಕು ಕಾಣುವ, ಬೆಳಕು ಬೀರುವ ಸುಯೋಗ ಬಂದೊದಗಿದೆ.

೧೯೪೫ರಲ್ಲಿ ಪ್ರಕಟವಾದ "ಮೇಘನಾದ" ಕವನಸಂಕಲನದೊಂದಿಗೆ ಆರಂಭವಾದ ಅವರ ಸಾಹಿತ್ಯಕೃಷಿ ೧೯೮೮ರಲ್ಲಿ ಬಂದ "ಭಾರತೀಯ ಮೂರ್ತಿಶಿಲ್ಪ" ಗ್ರಂಥದವರೆಗೂ ಅವಿರತವಾಗಿ ನಡೆಯಿತು. ಕಾವ್ಯ, ವಿಮರ್ಶೆ, ವೈಚಾರಿಕ ಪ್ರಬಂಧಗಳು, ವಿಡಂಬನೆ, ಇತಿಹಾಸ, ನಾಟಕ, ಯಕ್ಷಗಾನ, ಅನುವಾದ ಇತ್ಯಾದಿ ಸಾಹಿತ್ಯದ ಬಹುತೇಕ ಎಲ್ಲ ಪ್ರಕಾರಗಳಲ್ಲೂ ಅವರ ಕೊಡುಗೆ ಇದೆ. ಆದರೆ ಪ್ರಮಾಣದಿಂದಾಗಿ ಅಲ್ಲ, ಅವುಗಳೆಲ್ಲವೂ 'ಸಮ್ಯಗ್' ಜೀವನಕ್ಕೆ ಪೋಷಕವಾದ ಮೌಲ್ಯಗಳನ್ನು ಪ್ರತಿಪಾದಿಸುವುದರಿಂದ ಮಹತ್ವದ್ದೆನಿಸಿವೆ. ಶ್ರೀಧರರ ಪ್ರಕಾರ "ಸಾಹಿತ್ಯವು ಉತ್ತಮ ಜೀವನದಿಂದ ಸಂಪೂರ್ಣ ಪ್ರತ್ಯೇಕವೂ, ಸ್ವತಂತ್ರವೂ ಆದ ಅಸ್ತಿತ್ವ ಉಳ್ಳದ್ದಲ್ಲ. ಸತ್ಯವೂ, ಶಿವವೂ ಆದದ್ದಷ್ಟೇ

ನಿಜಸೌಂದರ್ಯ ಉಳ್ಳದ್ದು"–(ಕಾವ್ಯಸೂತ್ರ). ಶುಚಿ, ಸದಭಿರುಚಿ ಬದುಕು–ಬರಹಗಳಲ್ಲಿ ಅವರ ಅಪೇಕ್ಷೆಯಾಗಿತ್ತು, ಆಗ್ರಹವಾಗಿತ್ತು. ಅದಿಲ್ಲದುದು, ಅದಲ್ಲದುದು ವರ್ಜ್ಯ ಎಂಬುದವರ ಧೀರೋದಾತ್ತ ನಿಲುವು. ಶ್ರೇಷ್ಠ ಕಾವ್ಯಗಳಾದ ರಾಮಾಯಣ–ಮಹಾಭಾರತಗಳನ್ನು ಪೂಜಿಸಿದಷ್ಟೇ ಭಕ್ತಿಯಿಂದ ವಾಲ್ಮೀಕಿ–ವ್ಯಾಸರನ್ನೂ ಪೂಜಿಸುವ ಭಾರತೀಯ ಮನೋಭಾವ ಬದುಕು–ಬರಹಗಳಿಗೆ ಸಮಾನ ಮಹತ್ವ ನೀಡುತ್ತದೆ. ಶ್ರೀಧರರ ಈ ನಿಲುವು ಅವರ ಕೌಟುಂಬಿಕ, ಶೈಕ್ಷಣಿಕ ಹಾಗೂ ಅಂದಿನ ಸಾಮಾಜಿಕ ಪರಿಸರದಿಂದ ರೂಪಿತವಾಗಿದ್ದಿರಬಹುದು ಎಂದಿಟ್ಟುಕೊಂಡರೂ ಪಾಶ್ಚಾತ್ಯ ಕಾವ್ಯ, ವಿಮರ್ಶೆ, ದರ್ಶನಗಳನ್ನು ಓದಿದ ಬಳಿಕವೂ ಅವರ ಮೂಲಭೂತ ನಿಲುವು ಬದಲಾಗಲಿಲ್ಲ ಅಥವಾ ಇನ್ನಷ್ಟು ಗಟ್ಟಿಗೊಂಡಿತು – ಪಾಶ್ಚಾತ್ಯ ವಿಚಾರಧಾರೆಯ ದೋಷ, ಮಿತಿಗಳನ್ನು ಕಂಡುಕೊಂಡದ್ದರಿಂದ ಎಂಬುದು ಗಮನಾರ್ಹ. ಹೀಗಾಗಿ ಅವರ ಕೃತಿಗಳು, ಅವುಗಳಲ್ಲಿಯ ಖಚಿತ ನಿಗಮನಗಳು ಇಂದಿನ ಸಂದರ್ಭದಲ್ಲೂ ಚರ್ಚೆಗೆ ಯೋಗ್ಯವಾಗಿವೆ ಮತ್ತು ಸಮಕಾಲೀನತೆಯನ್ನು ಪಡೆದುಕೊಂಡಿವೆ. ತೆರೆದ ಮನಸ್ಸಿನ, ಪಾಶ್ಚಾತ್ಯ–ಪೌರಾತ್ಯ ಚಿಂತನೆಗಳನ್ನು ಅಭ್ಯಸಿಸಿ ಅರಗಿಸಿಕೊಂಡ, ಸಮಷ್ಟಿಕಲ್ಯಾಣದ ಕಳಕಳಿಯುಳ್ಳ ವಿದ್ವಾಂಸವೃಂದ ಶ್ರೀಧರರ ನಿಗಮನಗಳನ್ನು ಮರುಪರಿಶೀಲಿಸಬೇಕಿದೆ, ಸಮಾಜಸೌಧದ ಸುದೃಢತೆಗೆ. ಶ್ರೀಧರರ ಕೃತಿಗಳನ್ನೋದಿ ಅವರ ನಿಲುವನ್ನು ನಿಖರವಾಗಿ ಅರಿತು ಅರ್ಥೈಸಿಕೊಂಡ ಅವರ ಕುಟುಂಬಮಿತ್ರ ಮತ್ತು ಶ್ರೀಧರರ ಪುತ್ರ ಸಮಾನ ಪ್ರೊ.ಎಚ್.ಆರ್.ಅಮರನಾಥರು ತಮ್ಮ "ಪ್ರವೇಶ"ದಲ್ಲಿ ಈ ಕುರಿತು ಸವಿವರವಾಗಿ ಚರ್ಚಿಸಿದ್ದಾರೆ.

ಐದು ಸಂಪುಟಗಳಲ್ಲಿ ಶ್ರೀಧರರ ಎಲ್ಲಾ ಕೃತಿಗಳು ಆಯಾ ಪ್ರಕಾರಗಳಿಗೆ ಅನುಗುಣವಾಗಿ ಬರುತ್ತಿವೆ – ಕಾವ್ಯ, ವಿಮರ್ಶೆ, ವಿಚಾರ, ಸಂಕೀರ್ಣ, ಅನುವಾದ ಎಂಬುದಾಗಿ.

ಶ್ರೀಧರರ ಸಮಗ್ರಸಾಹಿತ್ಯದ ಪುನರ್ಮುದ್ರಣವೆಂಬ ಸುವಿಚಾರದ ಬೀಜವನ್ನು ನಮ್ಮೊಳಗೆ ಬಿತ್ತಿ, ಈ ಧನ್ಯ ಕಾರ್ಯಕ್ಕೆ ನಮ್ಮನ್ನು ಪ್ರೇರೇಪಿಸಿದ ಶ್ರೇಯಸ್ಸು ಶ್ರೀಧರರ ಶಿಷ್ಯೆ ಶ್ರೀಮತಿ ಡಾ, ಸುಮಿತ್ರ ಮೋತಿಲಾಲ ಹಲವಾಯಿ ಅವರಿಗೆ ಸಲ್ಲಬೇಕು. ಅವರಿಗೆ ನಮ್ಮ ಮೊದಲ ಕೃತಜ್ಞತೆಗಳು. ಇನ್ನು ಈ ಬೃಹತ್ (ಸುಮಾರು ೬೦೦೦ ಪುಟಗಳು) ಹಾಗೂ ಮಹತ್ತಾದ ಕಾರ್ಯ ಒಬ್ಬಿಬ್ಬರಿಂದ ಸಾಧ್ಯವಿಲ್ಲವೆಂಬುದು ಸುವಿದಿತ. ಇದರ ಹಿಂದೆ ಹಲವು ಹಿರಿಯರ, ಸ್ನೇಹಿತರ, ಶ್ರೀಧರರ ಶಿಷ್ಯರ, ಕುಟುಂಬ ಬಂಧುಗಳ ಸಲಹೆ, ಸಹಕಾರ, ಹಾರೈಕೆಗಳಿವೆ. ಅವರೆಲ್ಲರಿಗೂ ಹೃತ್ಪೂರ್ವಕ ನಮನಗಳು.

ಸಂಪುಟಗಳ ಪ್ರಕಟಣೆಯ ಕಾರ್ಯಭಾರವನ್ನು ಪ್ರೀತಿಯಿಂದ ಮತ್ತು ನಿಜ–ಆಸಕ್ತಿಯಿಂದ (ಇದು ಔಪಚಾರಿಕ ಮಾತಲ್ಲ) ವಹಿಸಿಕೊಂಡು ಶುದ್ಧವಾಗಿ ಮತ್ತು

ಮನೋಹರವಾಗಿ ಪ್ರಕಟಿಸಿಕೊಟ್ಟ ತೇಜು ಪ್ರಕಾಶನ, ಬೆಂಗಳೂರು ಅವರಿಗೆ ತುಂಬುಹೃದಯದ ವಂದನೆಗಳು. ಅವರನ್ನು ಪರಿಚಯಿಸಿದ ಖ್ಯಾತ ಹಾಸ್ಯ ಲೇಖಕಿ, ಶ್ರೀಮತಿ ಭುವನೇಶ್ವರಿ ಹೆಗಡೆಯವರಿಗೆ ಹಾರ್ದಿಕ ನಮನಗಳು.

ಈ ಎಲ್ಲಾ ಸಂಪುಟಗಳನ್ನು ಶ್ರೀಧರರ 'ಜೀವಯಾನ'ದ ಜತೆಗಾತಿ, ಜೀವಸಖಿ ಶ್ರೀಮತಿ ರಮಾದೇವಿಯವರಿಗೆ ಅರ್ಪಿಸುತ್ತಿದ್ದೇವೆ. ೨೦೦೭, ಏಪ್ರಿಲ್ ೨೪ರಂದು ರಮಾದೇವಿಯವರ ಹಸ್ತದಿಂದಲೇ ಬಿ.ಎಚ್.ಶ್ರೀಧರ ಪ್ರಶಸ್ತಿಯನ್ನು ಖ್ಯಾತ ಕವಿ ಶ್ರೀ ಎಸ್. ಮಂಜುನಾಥರು ಸ್ವೀಕರಿಸಿದ್ದರು. ಮುಂದೆ ಮೂರೇ ತಿಂಗಳಲ್ಲಿ (ಜುಲೈ ೨೦, ೨೦೦೭) ರಮಾದೇವಿಯವರು ದೈವಾಧೀನರಾದಾಗ ಸುದ್ದಿ ತಿಳಿದು ನೊಂದ ಮಂಜುನಾಥರು ಬರೆದು ಕಳುಹಿಸಿದ್ದ ರಮಾದೇವಿಯವರ ಒಳ–ಹೊರಗನ್ನು ತದ್ವತ್ ಕಟ್ಟಿಕೊಟ್ಟ ಕವನವನ್ನೇ ಅರ್ಪಣೆಯಲ್ಲಿ ಬಳಸಿಕೊಂಡಿದ್ದೇವೆ. ಅವರಿಗೆ ನಮ್ಮ ವಿಶೇಷ ಪ್ರಣಾಮಗಳು. ಹಾಗೆಯೇ ಸಂಪುಟದ ಬೆನ್ನುಡಿಗೆ ಶ್ರೀ ಸತೀಶ್ ಎಲ್ಲಾಪುರ ಅವರ ಕಾರ್ಟೂನನ್ನು ಉಪಯೋಗಿಸಿಕೊಂಡಿದ್ದೇವೆ. ಕಲಾವಿದನಿಗೆ ಕೃತಜ್ಞತೆಗಳು.

ನಂಬಿದಂತೆ ನಡೆದ, ನುಡಿದ, ಬರೆದ ಬಿ.ಎಚ್. ಶ್ರೀಧರರ ಕೃತಿ ನಿಮ್ಮ ಮುಂದಿದೆ. ಇವುಗಳ ವಾಚನ, ಮನನ ಬುದ್ಧಿಯ ಔನ್ನತ್ಯಕ್ಕೂ, ಹೃದಯ ಸಂಸ್ಕಾರಕ್ಕೂ ಕಾರಣವಾಗಲೆಂಬುದೇ ಆಶಯ. ಶ್ರೀಧರರು ಕಾಯೇನ–ವಾಚಾ–ಮನಸಾ ನಂಬಿದ್ದ ಶ್ರೀರಮಣರ ಅನುಗ್ರಹವೇ ಎಲ್ಲ ಕಾರ್ಯಕ್ಕೂ ಕಾರಣವೆಂಬ ಸತ್ಯದ ಅರಿವು ನಮ್ಮೊಳಗೆ ಇದ್ದೇ ಇದೆ. ಅವರಲ್ಲಿ ತುಡಿಯುತ್ತಿದ್ದ ಸಮಷ್ಟಿಯ ಒಳಿತಿನ ಬಯಕೆ ಶ್ರೀಗುರುವಿಗೆ ತಲುಪಲೆಂಬುದೇ ಹರಕೆ.

**– ರಾಜಶೇಖರ ಹೆಬ್ಬಾರ**

# ಪ್ರವೇಶ

ಪ್ರೊ.ಬಿ.ಎಚ್.ಶ್ರೀಧರರು ನನ್ನ ತಂದೆ ವಿದ್ವಾನ್ ರಾ.ಭ. ಹಾಸಣಗಿಯವರ ಮಿತ್ರರು, ಆಪ್ತರು, ನನಗೆ ತಂದೆ ಸಮಾನರು. ಇಬ್ಬರೂ ಕವಿ ದ.ರಾ.ಬೇಂದ್ರೆಯವರೊಂದಿಗೆ ಒಡನಾಟ, ವಿಶ್ವಾಸ ಹೊಂದಿವರು. ಈ ತ್ರಿಮೂರ್ತಿಗಳು ನನ್ನ ಚಾರಿತ್ರ್ಯವನ್ನು ರೂಪಿಸಿದ ಶಿಲ್ಪಿಗಳು. ಇವರಲ್ಲಿ ಶ್ರೀಧರರದು ವಿಷ್ಣುಸ್ಥಾನ. ಮೂರ್ತಿಪೂಜೆಯೇ ಕಂದಾಚಾರವಾಗಿ, ರಾಜಕೀಯವಾಗಿ, ಮೂರ್ತಿಭಂಜನೆಯೇ ಮೌಲ್ಯವಾಗಿ ಕಂಡುಬರುವ ಕಾಲದಲ್ಲಿ ಬರೆಯುತ್ತಿದ್ದೇನೆ. ಈ ಮೂವರಲ್ಲಿ ನನ್ನ ತಂದೆಯವರಿಗೆ ಇಂಗ್ಲೀಷ್ ಬರುತ್ತಿರಲಿಲ್ಲ. ಮೂವರಿಗೂ ಸಂಸ್ಕೃತ–ಕನ್ನಡ, ಮಾರ್ಗ–ದೇಸಿಗಳ ಹಾಸುಹೊಕ್ಕಿನ ಸೂಕ್ಷ್ಮ ಜ್ಞಾನವಿತ್ತು. ನಾನು ಇವರಿಂದ ಕಲಿತದ್ದು ತರಗತಿಯಲ್ಲಿ ಅಲ್ಲ, ಅಂತೇವಾಸದ (one-to-one)ಸಂಬಂಧದಲ್ಲಿ. ಇಂದಿಗೂ ನಾನು ಅವರೊಂದಿಗೆ ಮನೋಸಂವಾದದಲ್ಲಿ ತೊಡಗಿರುತ್ತೇನೆ. ಅವರ ಗ್ರಂಥಗಳಲ್ಲಿ ಏನನ್ನೋ ಹುಡುಕುತ್ತಿರುತ್ತೇನೆ. ಅವರನ್ನೂ ನನ್ನನ್ನೂ ಅರ್ಥೈಸಿಕೊಳ್ಳಲು ಯತ್ನಿಸುತ್ತೇನೆ. ಅವರ ನಿರೀಕ್ಷೆಯಂತೆ ನಾನು ಬೆಳೆದಿದ್ದೇನೆಯೇ ಎಂಬುದು ನನಗೆ ಗೊತ್ತಿಲ್ಲ. ಆದರೂ ಶ್ರೀಧರರ ಮಕ್ಕಳ ಅಪೇಕ್ಷೆಯಂತೆ ಅವರ ಸಮಗ್ರ ಸಾಹಿತ್ಯ ಸಂಪುಟಕ್ಕೆ ಒಂದು ಪ್ರಸ್ತಾವನೆ ಬರೆಯಲು ಅಳುಕುತ್ತಲೇ ಒಪ್ಪಿಕೊಂಡಿದ್ದೇನೆ. ಅವರ ಸಾವಿರಾರು ಪುಟಗಳ, ಹಲವು ಜ್ಞಾನ ಕ್ಷೇತ್ರಗಳ ಶಾಸ್ತ್ರ ಸಾಹಿತ್ಯವನ್ನೂ, ಸೃಜನಶೀಲ ಸಾಹಿತ್ಯ–ವಿಮರ್ಶೆಗಳನ್ನೂ ಹಿಂಡಿ ಭಟ್ಟಿ ಇಳಿಸಿ ಐದಾರು ಪುಟಗಳಲ್ಲಿ ಸಾರಾಂಶ ಕೊಡುವ ಅಸಾಧ್ಯ ಪ್ರಯತ್ನಕ್ಕೆ ಕೈ ಹಾಕುವುದಿಲ್ಲ. ಅವರ ಬರಹಗಳನ್ನು ಗಮನಿಸಬೇಕಾದ, ಅವು ನಮಗೆ ಪ್ರಸ್ತುತವಾಗುವ ಒಂದು ದಿಕ್ಸೂಚಿಯನ್ನು ಮಾತ್ರ ನೀಡಬಯಸುತ್ತೇನೆ.

ಶ್ರೀಧರರ ಬರಹಗಳಲ್ಲಿ ಎದ್ದು ಕಾಣುವ ಒಂದು ಮುಖ್ಯ ಅಂಶವೆಂದರೆ ಭಾರತೀಯತೆಯಲ್ಲಿ ಅಚಲ ವಿಶ್ವಾಸ ಮತ್ತು ಅದರ ಅಧಿಕಾರಯುತ ಪ್ರತಿಪಾದನೆ. ಮೂಲಭೂತವಾದ ಮತ್ತು ಪಾಶ್ಚಾತ್ಯೀಕರಣದ ಅತಿರೇಕಗಳ ನಡುವೆ ಅವರು ಒಂದು ಮಧ್ಯಮ ಮಾರ್ಗ ಕಂಡುಕೊಂಡಿದ್ದರು. ಭಾರತವೆಂಬುದು ಅವರಿಗೆ ಕೇವಲ ಭೌಗೋಳಿಕ/ರಾಜಕೀಯ ನಕಾಶೆ ಆಗಿರಲಿಲ್ಲ, ಒಂದು ಜೀವನ ದರ್ಶನವಾಗಿತ್ತು. ಅವರ ಸೂತ್ರತ್ರಯಗಳಲ್ಲಿ (ಜ್ಞಾನಸೂತ್ರ, ಕಾವ್ಯಸೂತ್ರ, ರಾಷ್ಟ್ರಸೂತ್ರ) ಇದು ಮಂಡಿಸಲ್ಪಟ್ಟಿದೆ. ಇದರ ಹಿನ್ನೆಲೆಯಲ್ಲಿ ಪ್ರಾಚೀನ ಭಾರತದ ಮೂವರು ಸೂತ್ರಕಾರರಿದ್ದಾರೆ– ಪಾಣಿನಿ,

ಭರತ ಮತ್ತು ವ್ಯಾಸ. ಇವರ ಸಾರ್ವಕಾಲಿಕ ಶ್ರೇಷ್ಠತೆ, ಪ್ರಸ್ತುತತೆಗಳ ಬಗ್ಗೆ ಅವರಿಗೆ ಯಾವುದೇ ಅನುಮಾನವಿರಲಿಲ್ಲ. ಪಾಣಿನಿಯನ್ನು ಸ್ಮರಿಸದ ಧ್ವನಿಶಾಸ್ತ್ರ, ಭಾಷಾಶಾಸ್ತ್ರ; ಭರತನನ್ನು ಮೆಚ್ಚದ ಸಾಹಿತ್ಯ ಸಿದ್ಧಾಂತ, ವಿಮರ್ಶೆ; ವ್ಯಾಸರ ಶಾಂತಿಪರ್ವಕ್ಕೆ ಮನ್ನಣೆ ನೀಡದ ರಾಜ್ಯಶಾಸ್ತ್ರ – ಇವು ಅವರಿಗೆ ದ್ರೋಹವಾಗಿ, ವಿದ್ರೋಹವಾಗಿ ಕಾಣುತ್ತಿದ್ದವು. ವ್ಯಾಸರ ಬ್ರಹ್ಮಸೂತ್ರಕ್ಕೆ ಶಾಂಕರ ಭಾಷ್ಯದ ಬಗ್ಗೆ ಅವರಿಗೆ ವಿಶೇಷ ಒಲವಿದ್ದಿತಾದರೂ ಅದ್ವೈತ–ದ್ವೈತ–ವಿಶಿಷ್ಟಾದ್ವೈತಗಳ ಅಂತಃಕಲಹದಲ್ಲಿ ಅವರು ಪಾಲ್ಗೊಂಡಿದ್ದು ನನಗಂತೂ ಕಂಡುಬಂದಿಲ್ಲ. ಭರತನ ನಾಟ್ಯಶಾಸ್ತ್ರ, ರಸಸಿದ್ಧಾಂತಗಳಲ್ಲಿ ನಾಟಕ–ಕಾವ್ಯ–ಸಾಹಿತ್ಯ–ಕಲಾ ಸಾಧಕರು ಮಾತ್ರವಲ್ಲ, ಮನೋವಿಜ್ಞಾನಿಗಳೂ ಆಸಕ್ತರಾಗಬೇಕು ಎಂಬುದು ಅವರ ಅಪೇಕ್ಷೆಯಾಗಿತ್ತು. ಅವರು ಮೆಚ್ಚಿದ ಚಾಣಕ್ಯ ಗದ್ದುಗೆಯ ಗುರಿಯಾಗಿ ಏನನ್ನೂ ಮಾಡುವ ದಾರಿ ಸರಿ ಎನ್ನುವ ಮೆಕೆವಿಲಿ ಆಗಿರಲಿಲ್ಲ; ಚಂದ್ರಗುಪ್ತನ ಸತ್ವವನ್ನು ಬೀಜರೂಪದಲ್ಲಿ ಗುರುತಿಸುವ, ಅಮಾತ್ಯ ರಾಕ್ಷಸನನ್ನು ಆಳದಲ್ಲಿ ಗೌರವಿಸುವ, ಅಂತರಂಗದಲ್ಲಿ ಸನ್ಯಾಸಿಯಾಗಿರುವ ಚಾಣಕ್ಯನ ನೀತಿ ಬೇಕೆನ್ನುತ್ತಿದ್ದರು. ನೀತಿಪ್ರಧಾನ ಸಮಾಜ, ಸರ್ವಧರ್ಮ ಸಾಮರಸ್ಯ, ಭ್ರಷ್ಟಾಚಾರರಹಿತ ಆಡಳಿತ ವ್ಯವಸ್ಥೆ ಅವರ ಕಾಳಜಿಯ ವಿಷಯಗಳಾಗಿದ್ದವು. ಆತ್ಮಪೌರುಷವಿಲ್ಲದ ನಾಡು ಪರಕೀಯರ ಪಾಲಾಗುವುದು ಎಲ್ಲ ರಾಷ್ಟ್ರಗಳ ಹಣೆಬರಹವೆಂದು ಇತಿಹಾಸ ಸಾರಿಸಾರಿ ಹೇಳುತ್ತದೆ. ಮನೆಮುರುಕರನ್ನು ಹೊರ ಹಾಕಬೇಕಾಗುತ್ತದೆ, ಸಮಯಸಾಧಕರ ಬಗ್ಗೆ ಎಚ್ಚರಿಕೆ ವಹಿಸಬೇಕಾಗುತ್ತದೆ. ನಮ್ಮೊಳಗೆ ಜಗಳವಾದರೆ ನಾವು (ಪಾಂಡವರು) ಐದು ಜನ, ಅವರು (ಕೌರವರು) ನೂರು ಜನ; ಹೊರಗಿನವರೊಂದಿಗೆ ಜಗಳ ಬಂದರೆ ನಾವು ನೂರೈದು ಜನ ಎಂಬ ಧರ್ಮರಾಯನ ಭ್ರಾತೃತ್ವದ ರಾಜನೀತಿ ಶ್ರೀಧರರಿಗೆ ಮಾನ್ಯವಿತ್ತು.

ಇಪ್ಪತ್ತನೆಯ ಶತಮಾನದ ಪಾಶ್ಚಾತ್ಯ ಚಿಂತಕರಲ್ಲಿ ಶ್ರೀಧರರ ಹೃದಯ ಗೆದ್ದವರು ಇಬ್ಬರು: ವಿಜ್ಞಾನಿಗಳಲ್ಲಿ ಐನ್‌ಸ್ಟೀನ್ ಮತ್ತು ಸಾಹಿತಿಗಳಲ್ಲಿ ಟಿ.ಎಸ್.ಎಲಿಯಟ್. ಅವರ ವಿಶೇಷ ಆಗ್ರಹವಿರುವುದು ಮಾರ್ಕ್ಸ್ ಮತ್ತು ಫ್ರಾಯ್ಡ್ ಕುರಿತು. ಮಾರ್ಕ್ಸ್‌ನದು ಅರ್ಥಮೂಲದ ದೃಷ್ಟಿ, ಫ್ರಾಯ್ಡನದು ಕಾಮಮೂಲದ ದೃಷ್ಟಿ. ಇವೆರಡೂ ವ್ಯಕ್ತಿಯ ಮತ್ತು ಸಮಾಜದ ಸ್ವಾಸ್ಥ್ಯಕ್ಕೆ ಪೂರಕವಲ್ಲ ಎಂಬುದು ಶ್ರೀಧರರ ಖಚಿತ ನಿಲುವು. ಪಂಪನ ಆದಿಪುರಾಣದಲ್ಲಿ ಭರತನ ಸ್ವಗತವಾಗಿ ಬರುವ ಒಂದು ಪದ್ಯದೆಡೆ ಓದುಗರ ಗಮನ ಸೆಳೆಯಬಯಸುತ್ತೇನೆ.

**ಧರ್ಮಂ ಪ್ರಧಾನಂ, ಅರ್ಥಂ**
**ಧರ್ಮಾಂಘ್ರಿಪ ಫಲಂ, ಅದರ್ಕೆ ರಸಮದು ಕಾಮಂ. (೧೦–೫೦)**

ಧರ್ಮವು ಮೂಲ, ಅರ್ಥವು ಧರ್ಮವೃಕ್ಷದ ಹಣ್ಣು, ಅದರ ರಸವೇ ಕಾಮ. ಇದು ಜೀವನ ಮೌಲ್ಯಗಳ ಆದ್ಯತಾ ಮಾರ್ಗಸೂಚಿ. ಈ ಬಗ್ಗೆ ಯಾವುದೇ ಭರತರ ಅಥವಾ ಬಾಹುಬಲಿಗಳ ಆಕ್ಷೇಪವಿರಲಾರದು ಎಂದು ಭಾವಿಸುತ್ತೇನೆ.

ಶ್ರೀಧರರು ಬರೆಯಲಾರಂಭಿಸಿದಾಗ ನವ್ಯಪಂಥ ಚಿಗುರೊಡೆಯುತ್ತಿತ್ತು. ಅಡಿಗರು ಶ್ರೀಧರರ ಸಮವಯಸ್ಕರು, ಸಂಬಂಧಿಗಳೂ ಕೂಡ. ಶ್ರೀಧರರು ನವ್ಯ ಪಂಥದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲಿಲ್ಲ. ಅವರು ಸಂಸ್ಕೃತ ಪ್ರಾಧ್ಯಾಪಕರಾಗಿದ್ದು, ಹೆಚ್ಚಿನ ನವ್ಯರು ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದುದು ಗಮನಾರ್ಹ ಸಂಗತಿ. (ಯುಗಧರ್ಮ, ವಯೋಧರ್ಮ, ಮನೋಧರ್ಮ ಮತ್ತು ವೃತ್ತಿಧರ್ಮಗಳ ಸಂಬಂಧವನ್ನು ಬಿಡಿಸಿ ವಿವರಿಸಿ ಹೇಳುವುದು ನನಗೆ ಸದ್ಯಕ್ಕಂತೂ ಸಾಧ್ಯವಿಲ್ಲ.) ವಿ.ಕೃ.ಗೋಕಾಕರ ನವ್ಯಕ್ಕೆ ಶ್ರೀಧರರ ಆಕ್ಷೇಪವಿರಲಿಲ್ಲ. ಉಳಿದವರ ಸಾಹಿತ್ಯ ಕೇವಲ 'ಸಂಕರ', 'ಸಂಸೃಷ್ಟಿ' ಅಲಂಕಾರಗಳ ಉದಾಹರಣೆ ಎಂದು ಒಂದೇ ವಾಕ್ಯದಲ್ಲಿ ನಿರ್ಣಯ ಹೇಳುತ್ತಿದ್ದರು. ದೇವರನ್ನು ತಲೆಹಿಡುಕನನ್ನಾಗಿ ಗ್ರಹಿಸಿ ಇಂತಿಂಥ ಹೆಣ್ಣುಗಳ ತನ್ನ ಬಳಿ ಕಳಿಸು ಎಂದು ಬೇಡುವ ಅಡಿಗರ 'ಪ್ರಾರ್ಥನೆ'ಯಂತೂ ವಿಕೃತಿಯ ಪರಮಾವಧಿ ಎನ್ನುತ್ತಿದ್ದರು. ಶಿಲ್ಪಶಾಸ್ತ್ರದಿಂದ ಹಿಡಿದು ಮಕ್ಕಳ ಸಾಹಿತ್ಯದವರೆಗಿನ ಅವರ ಆಸಕ್ತಿ ಮತ್ತು ಕೃಷಿ ನವ್ಯ ಪಾಳೆಯದಲ್ಲಿ ಕಂಡುಬರುವುದಿಲ್ಲ. ನವ್ಯರದೇನಿದ್ದರೂ ಬರಿ ಕಾವ್ಯಶಿಲ್ಪದ ಕಾಳಜಿ. ನವ್ಯರಲ್ಲಿ ಕಾಣದ ವಾತ್ಸಲ್ಯ ಭಾವ ಮತ್ತು ಹಾಸ್ಯ ಪ್ರಜ್ಞೆ ಶ್ರೀಧರರ ಕಾವ್ಯದಲ್ಲಿವೆ. ಹಲವು ಬಗೆಯ ಛಂದಸ್ಸುಗಳಲ್ಲಿ ಅವರ ಪ್ರಭುತ್ವ ಯಕ್ಷಗಾನ ಪ್ರಸಂಗಗಳ ದೇಸಿ ಮತ್ತು ಪಂಪಾದಿ ಮಾರ್ಗಕಾವ್ಯಗಳಿಂದ ಹೀರಿಕೊಂಡದ್ದಾಗಿದೆ. ಯಕ್ಷಗಾನದ ವೇಷ ಕಟ್ಟಿ ನಿಲ್ಲಿಸಿದರೆ ತಾನು ಕುಣಿಯಲಾರೆನಾದರೂ ಅರ್ಥ ಹೇಳಬಲ್ಲೆ ಎಂದು ಅವರು ಹೇಳಿದ್ದು ನನಗೆ ನೆನಪಿದೆ.

ಕನ್ನಡವು ನನ್ನ ತಾಯಿನುಡಿ, ಸಂಸ್ಕೃತವು ತಂದೆನುಡಿ ಎಂದು ಘೋಷಿಸಿದ ಶ್ರೀಧರರು ಕನ್ನಡ-ಸಂಸ್ಕೃತಗಳಿಗೆ ಬಾಂಧವ್ಯವಿದೆ, ದಾಯಾದಿತನವಿಲ್ಲ ಎಂದು ಸಾಧಿಸಿದ್ದಾರೆ. ತಾಯಿ-ತಂದೆಯರ ನಡುವೆ ವಿರಸವಾದಾಗ ಮಕ್ಕಳೇನು ಮಾಡಬೇಕೆಂಬುದು ಯಕ್ಷಪ್ರಶ್ನೆ. ವಾಗರ್ಥ ದಾಂಪತ್ಯದ ತಾಯಿತಂದೆ ಎಲ್ಲರಿಗೂ ಸಿಗುವುದಿಲ್ಲ. ತಾಯಿತಂದೆಯರನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಯಾವ ಮಕ್ಕಳಿಗೂ ಇರುವುದಿಲ್ಲ. ಹೆಚ್ಚೆಂದರೆ ರಾಮ-ಸೀತೆಯರ ಬಿಂಬವನ್ನು ಹೃದಯದಲ್ಲಿರಿಸಿಕೊಂಡು ಅವರು ಒಂದಾಗಲು ಶ್ರಮಿಸುವ ಹನುಮರಾಗಬಹುದು. ಸಂಸ್ಕೃತ=ಬ್ರಾಹ್ಮಣಿಕೆ=ಪುರೋಹಿತಶಾಹಿ=ಶೋಷಣೆ ಎಂಬ ಅತಾರ್ಕಿಕ ಸಮೀಕರಣವನ್ನಿಟ್ಟುಕೊಂಡು ಇಂಗ್ಲೀಷ್=ಉದ್ಧಾರ ಎಂಬ ನಿರ್ಣಯಕ್ಕೆ ಜಿಗಿಯುವವರ ಬಗ್ಗೆ ಶ್ರೀಧರರಿಗೆ ಯಾವ ಗೌರವವೂ ಇರಲಿಲ್ಲ. ಆಯಾ ಪ್ರಾಧ್ಯಾಪಕರು ತಮ್ಮದು ಅಂತರರಾಷ್ಟ್ರೀಯ ಮಟ್ಟ, ರಾಷ್ಟ್ರಮಟ್ಟ, ಪ್ರಾದೇಶಿಕ ಮಟ್ಟ ಎಂದು ಮೇಲರಿಮೆಯನ್ನೋ, ಕೀಳರಿಮೆಯನ್ನೋ ಬೆಳೆಸಿಕೊಳ್ಳುವುದು ಆರೋಗ್ಯದ ಲಕ್ಷಣವಲ್ಲ. ಎಂಥ ವಿಶ್ವಮಾನವನಾದರೂ ನಿಂತಷ್ಟು ನೆಲ ಪ್ರಾದೇಶಿಕವಾಗಿರುತ್ತದೆ ಎಂಬ ಅರಿವು ಕುವೆಂಪು ಅವರಿಗೂ ಇತ್ತು. "ಕನ್ನಡದ ಮನೆಯಲ್ಲಿ ಕನ್ನಡಿತಿ ಯಜಮಾನಿತಿ/ಮಿಕ್ಕ ಹೆಂಗಸರೆಲ್ಲ ಒಕ್ಕಲಷ್ಟೇ" ಎಂಬುದು ಶ್ರೀಧರರ ಒಂದು ಕವಿತೆಯ ಸಾಲು.

ಅವರ ಕನ್ನಡ ಪ್ರೀತಿ ಉಕ್ಕಿ ಹರಿಯುವುದು ಕದಂಬರ, ಅದರಲ್ಲೂ ಮಯೂರಶರ್ಮನ ಬಗ್ಗೆ ಬರೆಯುವಾಗ. ಬನವಾಸಿಯ ಕದಂಬರು (ಇತಿಹಾಸ ಸಂಶೋಧನೆ), ನೌಕಾಗೀತ (ಖಂಡಕಾವ್ಯ), ಕದಂಬ ವೈಭವ ('ರಘುವಂಶ' ಮಾದರಿಯ ಕಥನಕಾವ್ಯ), ಮಯೂರಶರ್ಮ (ಚಾರಿತ್ರಿಕ ನಾಟಕ)– ಎಲ್ಲದರ ಆಶಯ ಒಂದೇ: ರಾಷ್ಟ್ರ ಕಟ್ಟುವ ಕನಸು. ಸಮೃದ್ಧ, ಸ್ಥಿರ, ಸಮರ್ಥ ರಾಜ್ಯ ವ್ಯವಸ್ಥೆಯಲ್ಲಿ ವೇದಮಂತ್ರಗಳಿಂದ ಸ್ಫೂರ್ತಿ ಪಡೆದು ಬೇಡರು, ಬೆಸ್ತರವರೆಗೆ ಎಲ್ಲರ ಸಹಕಾರದೊಂದಿಗೆ ನಿರ್ಮಿಸಿದ ಸಕಾರಾತ್ಮಕ ಮಾದರಿಯ ಚಿತ್ರಣವಿದೆ. ಮಯೂರಶರ್ಮನ ವ್ಯಕ್ತಿತ್ವಕ್ಕೆ ಪರಶುರಾಮನ ಪುರಾಣಕಥೆಯ ಪ್ರೇರಣೆ ಇದೆಯಾದರೂ ಶ್ರೀಧರರಿಗೆ ಪುರಾಣ–ಇತಿಹಾಸಗಳ ವ್ಯತ್ಯಾಸದ ಸ್ಪಷ್ಟತೆ ಇದೆ. ಧರ್ಮ, ವಾಣಿಜ್ಯ, ವಿಜ್ಞಾನಗಳ ಸ್ಥಾನದ ಬಗ್ಗೆಯೂ ಕಾಳಜಿಯದೆ.

ಪರಶುರಾಮನ ಬಗ್ಗೆ ಸ್ವಲ್ಪ ಹೆಚ್ಚು ಬರೆಯಬೇಕೆನಿಸುತ್ತದೆ. ಸಂಪ್ರದಾಯ ಇವನನ್ನು ಚಿರಂಜೀವಿ ಎಂದೂ, ವಿಷ್ಣುವಿನ ಅವತಾರವೆಂದೂ ಪರಿಗಣಿಸುತ್ತದೆ. ಇವನ ತಂದೆ ಜಮದಗ್ನಿಯನ್ನು ಒಬ್ಬ ಗೋತ್ರ ಪ್ರವರ್ತಕನೆಂದು ವೈದಿಕ ಸಂಸ್ಕೃತಿ ಒಪ್ಪಿಕೊಳ್ಳುತ್ತದೆ. ಇವನ ತಾಯಿ ರೇಣುಕೆ=ಎಲ್ಲಮ್ಮ ಎಂಬ ನಂಬಿಕೆ ಕೆಲವು ತಳಸಮುದಾಯಗಳ ಜಾನಪದ ಆಚರಣೆಗಳಲ್ಲಿ ಕಂಡುಬರುತ್ತದೆ. (ಇದು ಬೆತ್ತಲೆ ಸೇವೆಯ ಸಮರ್ಥನೆಯಲ್ಲ). 'ರೇಣುಕಾ ಮಹಾತ್ಮೆ' ಜನಪ್ರಿಯ ಯಕ್ಷಗಾನ ಪ್ರಸಂಗವೂ ಹೌದು. ಶ್ರೀಧರರ ಕದಂಬ ವೈಭವದ ಮೊದಲ ಸಾಲಿನಲ್ಲೇ ಭಾರ್ಗವರಾಮ ಕಾಣಿಸಿಕೊಳ್ಳುತ್ತಾನೆ. ಮಯೂರಶರ್ಮ ನಾಟಕದಲ್ಲಿ ಬ್ರಾಹ್ಮಣ ವಟು ಮಯೂರಶರ್ಮ ಪಲ್ಲವ ದೊರೆ ಶಿವಸ್ಕಂದನಿಂದ ಅವಮಾನಿತನಾದಾಗ "ಬ್ರಾಹ್ಮಣನಾದ ಪರಶುರಾಮ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನೆಲ್ಲ ಸಮೂಲನಾಶ ಮಾಡಿದಂತೆ ನಿನ್ನ ಗರ್ವವನ್ನು ಹಿಂಡದಿದ್ದಲ್ಲಿ ನಾನು ಮಯೂರಶರ್ಮನಲ್ಲ" ಎಂದು ಪ್ರತಿಜ್ಞೆ ಮಾಡುತ್ತಾನೆ. ಇತರ ಕೃತಿಗಳಲ್ಲೂ 'ಇದಂ ಬ್ರಾಹ್ಮಂ ಇದಂ ಕ್ಷಾತ್ರಂ ಶಾಪಾದಪಿ ಶರಾದಪಿ" (ಪರಶುರಾಮ) ಮತ್ತು 'ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋ ಬಲಂ ಬಲಂ' (ವಿಶ್ವಾಮಿತ್ರ) ಎಂಬ ಮಾತುಗಳು ಕಾಣಿಸಿಕೊಂಡಿವೆ. ಕಾವ್ಯಸೂತ್ರದಲ್ಲಿ "ಧರ್ಮಕ್ಷೇತ್ರಕ್ಕೆ ಕುರುಕ್ಷೇತ್ರದ ಕಳೆ ಬಂದಿದೆ" ಎಂದಿದ್ದಾರೆ ಬೇಂದ್ರೆ. ಶ್ರೀಧರರ ಗದ್ಯ ಶೈಲಿಯಲ್ಲಿ ಕ್ಷಾತ್ರ ತೇಜಸ್ಸಿದೆ (ಆ ಪದ ಬಳಸಬಹುದಾದರೆ).

ಇಂದಿನ ಸಾಹಿತ್ಯಿಕ ಪರಿಸರದಲ್ಲಿ ಪರಶುರಾಮನ ಬಗ್ಗೆ ಎರಡು ಆಕ್ಷೇಪಗಳಿವೆ: ಒಂದು ಮಾತೃಹಂತಕ ಎಂದು, ಇನ್ನೊಂದು ಜನಾಂಗದ್ವೇಷಿ ಎಂದು. ಮಾತೃಹಂತಕ ಎನ್ನುವವರು ತಾಯಿಗೆ ಮತ್ತೆ ಜೀವ ತಂದುದನ್ನು ಒಪ್ಪಿಕೊಳ್ಳುವುದಿಲ್ಲ. ಅದು ಹೇಗೆ ಸಾಧ್ಯ ಎಂದು ಭೌತವಾದಿ, ವಿಚಾರವಾದಿ ನೆಲೆಯಿಂದ ಪ್ರಶ್ನಿಸುತ್ತಾರೆ. ಪುರಾಣ ಕಥೆಗಳಲ್ಲಿ ಎಲ್ಲವೂ ಸಾಧ್ಯ, ಸಮಗ್ರವಾಗಿ ಓದಿ ಎನ್ನಬೇಕಾಗುತ್ತದೆ. ಪುರಾಣದ ಪಠ್ಯ

ಸಾಹಿತ್ಯಿಕ ಪಥ್ಯದಂತಲ್ಲ; ಹಲವು ಆವೃತ್ತಿಗಳಿರುವುದು ಸಹಜ. "ತಾಯೀ ತಲೀ ಕಡದಾ/ಮತ್ತ ಮಾತೃಭಕ್ತನಾಗಿ ಉಳದಾ" ಎಂದಿದ್ದಾರೆ ಬೇಂದ್ರೆ. (ತಾ ಲೆಕ್ಕಣಿಕಿ ತಾ ದೌತಿ, ಪುಟ ೫೮). ಇನ್ನು ಜನಾಂಗ ದ್ವೇಷದ ಬಗ್ಗೆ. ವಶಿಷ್ಠ–ವಿಶ್ವಾಮಿತ್ರರ ಸಂಘರ್ಷ ವೈಯಕ್ತಿಕವೆಂದೂ, ಭಾರ್ಗವ ಬ್ರಾಹ್ಮಣರು ಮತ್ತು ಹೈಹೆಯ ಕ್ಷತ್ರಿಯರದು ಜನಾಂಗ/ವರ್ಗ/ಸಮುದಾಯಗಳ ಸಂಘರ್ಷವೆಂದೂ ವಿಶ್ಲೇಷಿಸಿದವರಿದ್ದಾರೆ. 'ಸಂಘರ್ಷ' ಪದ ಸ್ವಲ್ಪ ವಸ್ತುನಿಷ್ಠವೆನಿಸಿದರೆ 'ದ್ವೇಷ'ವು ಮನಃಕಷಾಯವನ್ನು ಸೂಚಿಸುತ್ತದೆ. ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚಲುವ ಕನ್ನಡನಾಡು' ಹಾಡಿನಲ್ಲಿ 'ರಾಜನ್ಯರಿಪು ಪರಶುರಾಮನಮ್ಮನ ನಾಡು' ಎಂಬ ಸಾಲಿನ ಬಗ್ಗೆ ಎದ್ದ ವಿವಾದವೂ ಇದೇ ನೆಲೆಯದು. ವಿನಾಯಕರ ಭಾರತ ಸಿಂಧುರಶ್ಮಿಯಲ್ಲಿ ವಿಶ್ವಾಮಿತ್ರರೆದುರು ಪರಶುರಾಮ ತನ್ನ ಸ್ವಭಾವದೋಷ ಒಪ್ಪಿಕೊಳ್ಳುತ್ತಾನೆ – "ಅಂಕಿತದೊಳಿಲ್ಲ ಹಲವಾರು ಮರ್ತ್ಯಾಂಶಗಳು:/ ಪ್ರಶಂಸೆಯ ಪ್ರೀತಿ, ಮುಂಗೋಪ, ಹಿತ್ತಾಳೆ ಕಿವಿ" (ಸಂಪುಟ ೨, ಪುಟ ೭೧೩). ಈ ಲೇಖನದ ಚಿಂತನೆ ಮಾಡುತ್ತಿರುವಾಗ ನಾನೊಂದು ಚುಟುಕ ಬರೆದೆ.

**ಪರಶುರಾಮನ ಶಪಥ ಕ್ಷತ್ರಿಯರ ಕುಲನಾಶ**
**ಜನಕ ದಶರಥರೆಂತೊ ಉಳಿದರಲ್ಲ ।**
**ಇನ್ನೊಂದು ಶಪಥ ಕ್ಷತ್ರಿಯಗೆ ಕಲಿಸುವುದಿಲ್ಲ**
**ಭೀಷ್ಮನಿವನಿಂದಲೇ ಕಲಿತನಲ್ಲ ॥**

ಈ ಚುಟುಕ ಮೂಡಿದ್ದು ನನ್ನ ಸ್ಪಷ್ಟತೆಗೇ ಹೊರತು ಯಾರದೋ ಕಾಮಾಲೆ ರೋಗಕ್ಕೆ ಔಷಧಿಯಾಗಿ ಅಲ್ಲ.

ಆಫ್ರಿಕಾ ಬಗ್ಗೆ ಜೊಸೆಫ್ ಕಾನ್ರಾಡನ ಕತ್ತಲೆಯ ಹೃದಯ (Heart of Darkness, 1899) ಕಾದಂಬರಿ ಯುರೋಪಿಯನ್ನರ 'ಹೃದಯದ ಕತ್ತಲೆ' ಎಂದು ವಾದಿಸುವ ಆಫ್ರಿಕಾದ ಲೇಖಕ ಚಿನುವಾ ಅಛಬೆ ಆ ಕಾದಂಬರಿಯಲ್ಲಿ ಜನಾಂಗವಾದದ ಕುರುಹುಗಳನ್ನು ಎಳೆ ಎಳೆಯಾಗಿ ಬಿಡಿಸುತ್ತಾನೆ. ಅವನ ಲೇಖನದ (೧೯೭೭) ಕೊನೆಯಲ್ಲಿ ಒಂದು ವಾಕ್ಯ ಬರುತ್ತದೆ: "ಕಾನ್ರಾಡ್ ಸಾಮ್ರಾಜ್ಯವಾದೀ ಶೋಷಣೆಯ ಕೇಡನ್ನು ಕಂಡನು, ಖಂಡಿಸಿದನು, ಆದರೆ ಅದು ತನ್ನ ಕಬ್ಬಿಣದ ಹಲ್ಲುಗಳನ್ನು ಮಸೆದುಕೊಂಡ ಜನಾಂಗವಾದದ ಬಗ್ಗೆ ಅವನಿಗೆ ಗೊತ್ತಿಲ್ಲದಿರುವುದು ವಿಚಿತ್ರವಾಗಿದೆ." ಅರ್ಧವಾಕ್ಯದಲ್ಲಿ ಸಾಧನೆ ಗುರುತಿಸಿ, ಇನ್ನರ್ಧದಲ್ಲಿ ಇತಿಮಿತಿ ತೋರಿದ ಅಛಬೆ ನನಗೆ ಒಪ್ಪಿಗೆ. ತ್ರಿಮೂರ್ತಿಗಳನ್ನಾಗಲೀ, ಅವತಾರಗಳನ್ನಾಗಲೀ ಒಪ್ಪದ ಬುದ್ಧನ ಹೃದಯ ಅಮಾಯಕರಿಗೆ ಕರುಣೆ ಹರಿಸುವಾಗ ಬ್ರಾಹ್ಮಣ ಅಬ್ರಾಹ್ಮಣ ಭೇದ ನೋಡುವುದಿಲ್ಲ ಎಂಬ ನಂಬಿಕೆ ನನಗಿದೆ. ಹೃದಯಕ್ಕೆ ಹೃದಯವೇ ಸಾಕ್ಷಿ, ಬೇರೆ ಇಲ್ಲ ಪ್ರಾಕ್ಸಿ (proxy). ವಾರಾನ್ನದ ವಿದ್ಯಾರ್ಥಿಯಾಗಿ, ಗುಮಾಸ್ತರಾಗಿ, ಚಾಕರಿ –

ನೌಕರಿಗಳಲ್ಲಿ, ಸಂಸಾರಿಕೆಯ ತಪಸ್ಸಿನಲ್ಲಿ ಶ್ರೀಧರರು ಎಲ್ಲೋ ಅನುಭವಿಸಿದ ಅವಮಾನ, ನಂಬಿಕೆ ದ್ರೋಹಗಳು ಥಲ, ನಿಷ್ಠುರತೆಯಾಗಿ ರೂಪುಗೊಂಡಿವೆ ಎಂದು ನನ್ನ ಅನಿಸಿಕೆ.

ಶ್ರೀಧರರ ಸ್ವಭಾವ, ಸಂಬಂಧಗಳನ್ನು ಎತ್ತಿ ತೋರುವ ಒಂದೆರಡು ನಿದರ್ಶನಗಳನ್ನು ನೀಡಬಹುದು. ಬೇಂದ್ರೆಯವರ ಕನ್ನಡ ಮೇಘದೂತದ ಮೊದಲನೇ ಪದ್ಯದಲ್ಲಿ 'ಶಪಿತ ವರುಷವನು' ಎಂಬ ಪದಪ್ರಯೋಗವಿದ್ದು 'ಶಪಿತ' ಎಂಬುದು ಅಪಾಣಿನೀಯ, 'ಶಪ್ತ' ಎಂದಾಗಬೇಕು ಎಂದು ಹೇಳಿದರಂತೆ. ಶಿವರಾಮ ಕಾರಂತರ ಕಾದಂಬರಿಯೊಂದರಲ್ಲಿ 'ಏನಕೇನ ಪ್ರಕಾರೇಣ' ಎಂಬ ಪದವಿದ್ದು 'ಏನಕೇನ' ತಪ್ಪು, 'ಯೇನ ಕೇನ' ಎಂದಾಗಬೇಕು ಎಂದರಂತೆ. ಆ ಹಿರಿಯರಿಬ್ಬರೂ 'ಬಾಲಾದಪಿ ಸುಭಾಷಿತಂ' ಎಂದು ಶ್ರೀಧರರನ್ನು ಒಪ್ಪಿಕೊಂಡರಂತೆ. ಇವರ ಧೈರ್ಯ, ಅವರ ಔದಾರ್ಯ ಎರಡೂ ಮೆಚ್ಚಬೇಕಾದ್ದೇ. ಈ ಘಟನೆಗಳಿಂದ ಅವರ ಸಂಬಂಧಗಳು ಹಾಳಾಗಲಿಲ್ಲ ಎಂಬುದು ಮುಖ್ಯ. ಲಿಪಿದೋಷ, ವ್ಯಾಕರಣ ದೋಷಗಳೇನೂ ನೈತಿಕ ಪತನವಲ್ಲ.

ಜೀವನದ ನಾಟ್ಯಶಾಲೆಯಲ್ಲಿ ಶ್ರೀಧರರು ಪಾಲ್ಗೊಂಡ ವಾರಾನ್ನದೂಟ, ಗುಮಾಸ್ತಗಿರಿ, ಪತ್ರಿಕಾವೃತ್ತಿ, ಆಡಳಿತ ನಿರ್ವಹಣೆ, ಶಾಸ್ತ್ರ ಸಾಹಿತ್ಯ ರಚನೆ, ಇತಿಹಾಸ ಸಂಶೋಧನೆ–ಈ ಯಾವುದರ ನೇರ ಕ್ಷೇತ್ರಾನುಭವವೂ ನನಗಿಲ್ಲ. ಅವರನ್ನು ಆತ್ಮಿಕವಾಗಿ ಹಚ್ಚಿಕೊಂಡವನೆಂಬ ಕಾರಣಕ್ಕಾಗಿ ನನ್ನಿಂದ ಈ ಲೇಖನ ಬರೆಸಿದ್ದಾರೆ. ಇದು ಪಾಮರರಿಗೆ ಅಜೀರ್ಣವೂ, ಪಂಡಿತರಿಗೆ ಅಪಥ್ಯವೂ ಆಗದೇ ಶ್ರೀಧರ ಸಾಹಿತ್ಯದ ಅನುಸಂಧಾನಕ್ಕೆ ಪೀಠಿಕೆಯಾಗಲಿ ಎಂದು ಆಶಿಸುತ್ತೇನೆ. ಒಳಗೆ ಬನ್ನಿ.

**ಎಚ್.ಆರ್. ಅಮರನಾಥ**
ಇಂಗ್ಲೀಷ್ ಸಹ ಪ್ರಾಧ್ಯಾಪಕ
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಸಾಗರ (ಶಿವಮೊಗ್ಗ ಜಿಲ್ಲೆ) ೫೭೭೪೦೧

# ಹರಕೆ

**ಡಿ.ವೀರೇಂದ್ರ ಹೆಗ್ಗಡೆಯವರು**

ಶ್ರೀ ಧರ್ಮಸ್ಥಳ – ೫೭೪೨೧೬
ದಕ್ಷಿಣ ಕನ್ನಡ, ಕರ್ನಾಟಕ
ಕಛೇರಿ : (೦೮೨೫೬) ೨೭೭೧೨೧
ಫ್ಯಾಕ್ಸ್ : ೨೭೭೧೧೬
ತಾ. ೩.೫.೨೦೧೨

ಶ್ರೀಮತಿ ರಾಜೇಶ್ವರಿ ಲೊಕಾರೆಯವರಿಗೆ,

ಖ್ಯಾತ ಸಾಹಿತಿಗಳೂ, ವಿಮರ್ಶಕರೂ ಆಗಿದ್ದ ಬಿ.ಎಚ್.ಶ್ರೀಧರರ ಸಮಗ್ರ ಕೃತಿಗಳ ಪುನರ್ ಮುದ್ರಣ ಮಾಡುವ ವಿಚಾರ ತಿಳಿದು ಸಂತೋಷವಾಯಿತು.

ತನ್ನ ವಿಭಿನ್ನ ಚಿಂತನಾ ಶೈಲಿಯಿಂದ ಅವರು ಕನ್ನಡ ನಾಡು–ನುಡಿಗೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಅವರ ಕೃತಿಗಳ ಪುನರ್ ಮುದ್ರಣ ಮಾಡುತ್ತಿರುವುದು ಅವರಿಗೆ ನೀಡುವ ಗೌರವವಾಗಿದೆ.

ನೀವು ಹಮ್ಮಿಕೊಂಡ ಕಾರ್ಯ ಯಶಸ್ವಿಯಾಗುವಂತೆ ಶ್ರೀ ಮಂಜುನಾಥ ಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಇತಿ,

(ಡಿ.ವೀರೇಂದ್ರ ಹೆಗ್ಗಡೆಯವರು)

# ಹಾರೈಕೆ

## ಜಿ. ವೆಂಕಟಸುಬ್ಬಯ್ಯ

ಶ್ರೀಮತಿ ರಾಜೇಶ್ವರಿಯವರೇ,

ನಿಮ್ಮ ತಂದೆಯವರನ್ನು ನಾನು ಚೆನ್ನಾಗಿ ಬಲ್ಲೆ. ನಾನು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಅತ್ಯಂತ ಕಿರಿಯ ಉಪನ್ಯಾಸಕನಾಗಿದ್ದಾಗ ಶ್ರೀ ಬಿ.ಎಚ್.ಶ್ರೀಧರ ಅವರು ಸಂಸ್ಕೃತ ವಿಭಾಗದಲ್ಲಿ ಐ.ಜೆ.ವಿದ್ಯಾರ್ಥಿಯಾಗಿದ್ದರು. ನಾವು ಆಗಾಗ ಸಂಧಿಸುತ್ತಿದ್ದೆವು. ೧೯೪೨ರಲ್ಲಿ ಪಂಪಮಹಾಕವಿಯ ಸಹಸ್ರಮಾನೋತ್ಸವವನ್ನು ನಾವೆಲ್ಲ ನೆರವೇರಿಸಿದಾಗ ಶ್ರೀ ಶ್ರೀಧರ ಅವರು ಪಂಪನ ಮೇಲೆ ಸಂಸ್ಕೃತ ಭಾಷೆಯಲ್ಲಿ ಹೊಗಳಿಕೆಯ ಸ್ತುತಿ ರಚಿಸಿ ಎಲ್ಲ ವಿದ್ವಾಂಸರ ಮನಸ್ಸನ್ನು ಗೆದ್ದರು. ಆ ಕಾಲದಲ್ಲಿಯೇ ಅವರು ಆಗಾಗ ಲೇಖನಗಳನ್ನು ರಚಿಸುತ್ತಿದ್ದರು. ನೇರವಾದ ಮಾತಿನ, ಗಟ್ಟಿ ನಿಲುವಿನ, ದೃಢವಿಶ್ವಾಸದ ವ್ಯಕ್ತಿಯಾಗಿದ್ದರು ಅವರು. ಅವರು ಉ.ಕನ್ನಡದಲ್ಲಿ ಸಂಸ್ಕೃತ ಉಪಾಧ್ಯಾಯರಾಗಿ ನಿಂತಮೇಲೆ, ಸಿದ್ಧಾಪುರದಲ್ಲಿ ಪ್ರಾಂಶುಪಾಲರಾಗಿದ್ದ ಕಾಲದಲ್ಲಿ ನಮ್ಮಿಬ್ಬರಿಗೂ ಸ್ವಲ್ಪ ಕಾಲ ಪತ್ರ ವ್ಯವಹಾರವಿತ್ತು. ಆ ಬಳಿಕ ನಾವಿಬ್ಬರೂ ವೃತ್ತಿಯ ಗೊಂದಲದಲ್ಲಿ ಮುಳುಗಿಬಿಟ್ಟಿತ್ತು. ಅವರು ರಚಿಸಿದ ಕೆಲವು ಪುಸ್ತಕಗಳು ಈಗಲೂ ನನ್ನ ಬಂಡಾರದಲ್ಲಿ ಮುಳುಗಿರುತ್ತವೆ. ಹುಡುಕಿದರೆ ಸಿಗುತ್ತವೆ. ಈ ವಯಸ್ಸಿನಲ್ಲಿ ಆ ಕೆಲಸ ಕಷ್ಟ.

ಶ್ರೀಧರರ ಪುಸ್ತಕಗಳನ್ನು ಪುನರ್ಮುದ್ರಿಸುವ ಕೆಲಸ ಸ್ತುತ್ಯವಾದುದು. ಅವರ ಎಲ್ಲ ಪ್ರಕಾರದ ಕೃತಿಗಳನ್ನು ಸಮಗ್ರವಾಗಿ ಒಂದೊಂದು ಸಂಪುಟವಾಗಿ ಪ್ರಕಟಿಸಿದರೆ ಕನ್ನಡಕ್ಕೆ ಸಹಾಯವಾಗುತ್ತದೆ. ನಿಮ್ಮ ಕಾರ್ಯದಲ್ಲಿ ನಿಮಗೆ ಗೆಲುವು ದೊರಕಲಿ. ನನ್ನ ಶುಭಾಶಯಗಳು.

ಇಂತೀ ನಿಮ್ಮ

**ಜಿ.ವೆಂಕಟಸುಬ್ಬಯ್ಯ**
೯–೩–೧೨

# ಶ್ರೀಧರರ ಅನುವಾದಗಳು

"ಕನ್ನಡವು ನನ್ನ ತಾಯ್ನುಡಿ, ಸಂಸ್ಕೃತವು ನನ್ನ ತಂದೆನುಡಿ" ಎಂದು **'ಕನ್ನಡ–ಸಂಸ್ಕೃತ ಬಾಂಧವ್ಯ'**ವೆಂಬ ಪ್ರಕರಣಗ್ರಂಥದ ಅರಿಕೆಯಲ್ಲಿ ಶ್ರೀಧರರು ಹೇಳಿಕೊಂಡಿದ್ದರು, ಜೊತೆಗೆ ಅತಿಥಿಯಾಗಿ ಬಂದ ಇಂಗ್ಲೀಷಿನಲ್ಲಿಯೂ ಅವರಿಗೆ ಸಾಕಷ್ಟು ಪರಿಶ್ರಮವಿತ್ತು. ಬಹುಶ್ರುತತೆ ಅವರ ಸಾಹಿತ್ಯದ ಒಂದು ಮಹತ್ವದ ಆಯಾಮ. ಹೀಗಾಗಿ, ತಾವು ತಿಳಿದ ಭಾಷೆಗಳ ನಡುವಿನ ಸಾಂಸ್ಕೃತಿಕ ವಿನಿಮಯದಲ್ಲಿ ಅವರು ಆಸ್ಥೆ ತಳೆದರು. ಕನ್ನಡದ ಪೂರ್ವ ಪರಂಪರೆಯ ಹಾಗೂ ಅದು ಸಂಬಂಧ ಬೆಳೆಸಿಕೊಂಡ ಇನ್ನಿತರ ಪರಂಪರೆಗಳ ಸ್ಪಷ್ಟವಾದ ತಿಳಿವಳಿಕೆ ಶ್ರೀಧರರಿಗೆ ಇದ್ದಿತ್ತಾದ್ದರಿಂದ ಅವರ ಮಧ್ಯಸ್ತಿಕೆಯಲ್ಲಿ ನಡೆದ ವಿನಿಮಯ ಕಾರ್ಯ ಮೌಲಿಕವಾದುದೂ ಆಯಿತು. ಆದರೂ, ನಮ್ಮ ಗ್ರಂಥವಿತರಣಾ ವ್ಯವಸ್ಥೆಯ ವೈಪರೀತ್ಯ, ಅನುವಾದದ ಕುರಿತ ಅನಾಸ್ಥೆ, ಅನಾದರ ಮೊದಲಾದ ಕಾರಣಗಳಿಂದ ಒಟ್ಟೂ ಅನುವಾದ ಸಾಹಿತ್ಯದಂತೆ ಶ್ರೀಧರರ ಅನುವಾದಗಳೂ ಚರ್ಚೆಗೆ ಬರಲಿಲ್ಲ. ಮುಂದೆ ಅವು ಕಣ್ಮರೆಯೂ ಆದವು. ಈಗ ಭಾಷಾಂತರ ಅಧ್ಯಯನ ಸಾಕಷ್ಟು ಬೆಳೆದಿರುವ ಹೊತ್ತಿನಲ್ಲಿ ಶ್ರೀಧರರ ಅನುವಾದಗಳ ಸಮಗ್ರ ಸಂಪುಟ ಪ್ರಕಟವಾಗುತ್ತಿದೆ. ಈ ಸಂಪುಟ ಶ್ರೀಧರರ ಆಸ್ಥೆಯ ಆಳ ಹಾಗೂ ವಿಸ್ತಾರದ ಒಂದು ಚಿತ್ರಣ ನೀಡುವುದರೊಂದಿಗೆ ಅವರು ನಡೆಸಿದ ಸಾಂಸ್ಕೃತಿಕ ವಿನಿಮಯದ ಮಹತ್ವವನ್ನು ಚರ್ಚಿಸಲೂ ಅನುವು ಮಾಡಿಕೊಡುತ್ತದೆ.

**'ಕಾವ್ಯಸೂತ್ರ'** ದಲ್ಲಿ ಕಾವ್ಯಮೌಲ್ಯಕ್ಕೆ ವಿಶ್ವವ್ಯಾಪಕ ನಿಕಷ ಅಗತ್ಯವೆಂದು ಶ್ರೀಧರರು ವಾದಿಸುತ್ತಾರೆ. ತಾತ್ವಿಕವಾಗಿ ವಿಶ್ವಸಾಹಿತ್ಯದ ಪರಿಕಲ್ಪನೆ ಅವರಿಗೆ ಸಮ್ಮತವಾದದ್ದು. ಇದೇ ರೀತಿ "ಭಾರತೀಯ ಸಾಹಿತ್ಯ"ದ ಪರಿಕಲ್ಪನೆ ಕೂಡ. ಭಾಷೆ ಮತ್ತು ಸಾಹಿತ್ಯಗಳ 'ಬಾಂಧವ್ಯ'ವನ್ನು ಚರ್ಚಿಸುವ ಹಿಂದಿನ ಅವರ ಗ್ರಹೀತ ಈ ಪರಿಕಲ್ಪನೆಯೇ. ಅನುವಾದಗಳ ನೆರವಿಲ್ಲದೆಯೇ ಇಂತಹ ಪರಿಕಲ್ಪನೆಗಳನ್ನು ಊಹಿಸಿಕೊಳ್ಳುವುದೂ ಸಾಧ್ಯವಾಗುವುದಿಲ್ಲ. ಈ ಕಾರಣದಿಂದ ಶ್ರೀಧರರ ವಾಙ್ಮಯದಲ್ಲಿ ಒಂದು ದೊಡ್ಡ ಸವಾಲು ಅನು–ವಾದ ಹಾಗೂ ಭಾಷಾಂತರಗಳದ್ದು.

ದಿಙ್ನಾಗನ **'ಕುಂದಮಾಲೆ'**ಯ ಅನುವಾದದ ಮೊದಲ ಮಾತಿನಲ್ಲಿ ಭಾಷಾಂತರ ನೀತಿಯ ಬಗ್ಗೆ ತಮ್ಮ ನಿಲುವನ್ನು ಶ್ರೀಧರರು ಸ್ಪಷ್ಟಪಡಿಸಿದ್ದಾರೆ. "ಅಪತಿವ್ರತೆಯಲ್ಲದ, ಆದರೆ ಆತ್ಮಹತ್ಯೆಗೆ ಕೂಡಲೇ ಸಿದ್ಧವಾಗುವ ಅತಿಪತಿವ್ರತೆಯೂ ಆಗದ ದಿಙ್ನಾಗನ ಸೀತೆಯಂತೆ ಭಾಷಾಂತರವು ಮಾಧ್ಯಮದ ಹಾಗೂ ರಂಗಪ್ರದರ್ಶನದ ವರ್ತಮಾನ ಕಾಲೀನ ರೂಢಿ – ಸಂಪ್ರದಾಯಗಳನ್ನು ಪಾತ್ರಗಾಂಭೀರ್ಯಕ್ಕೆ ಧಕ್ಕೆ ಬಾರದಂತೆ ಉಳಿಸಿಕೊಂಡು ಹೋಗುವುದು ಅಗತ್ಯ." ಅಂದರೆ, ಅವರ ಉದ್ದೇಶ ಸಾಮಾನ್ಯ

ಭಾಷಾಂತರಕಾರನ ಉದ್ದೇಶಕ್ಕಿಂತ ಸೃಜನಶೀಲವಾದದ್ದು. ಮೂಲಭಾಷೆ ಹಾಗೂ ಕೃತಿಗಿಂತ ಗುರಿ – ಭಾಷೆ ಮತ್ತು ಓದುಗರೊಡನೆಯ ಸಂಬಂಧವೇ ಅವರಿಗೆ ಮುಖ್ಯವಾದದ್ದು. ಕಾವ್ಯ – ನಾಟಕಗಳಲ್ಲದೇ ವೈಚಾರಿಕ ಗದ್ಯದ ಭಾಷಾಂತರದಲ್ಲೂ ಅವರು ಈ ನೀತಿಯನ್ನು ಅನುಸರಿಸಿದರು. ಹೀಗಾಗಿಯೇ ಅವೆಲ್ಲ ಅನು–ವಾದಗಳು.

ಶ್ರೀಧರರ ಅನುವಾದಗಳಲ್ಲಿ ಸಿಂಹಪಾಲು ಅರವಿಂದ ವಾಙ್ಮಯಕ್ಕೆ ಸಂದಿದೆ. ಅವರು ಅರವಿಂದರ **"The foundation of Indian culture"** ಗ್ರಂಥವನ್ನು **'ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ'** ಹಾಗೂ **'ಭಾರತೀಯ ವಾಙ್ಮಯ'** ಗಳಲ್ಲಿ ಅನುವಾದಿಸಿದ್ದರೆ, **"The secret of the Veda"** ವನ್ನು 'ವೇದರಹಸ್ಯ ಸಾರ' ಹಾಗೂ 'ವೇದರಹಸ್ಯ' ಗಳಲ್ಲಿ ಕನ್ನಡದ ಕೃತಿಗಳನ್ನಾಗಿಸಿದ್ದಾರೆ. ಇವು ಇಂದಿಗೂ ಚಾಲ್ತಿಯಲ್ಲಿರುವ ಪೌರಸ್ತ್ಯವಾದಿ ಚಿಂತನಕ್ರಮವನ್ನು ಅಲ್ಲಗಳೆದು ಪ್ರಾಚೀನ ಭಾರತದ ಕುರಿತು ಪುನರಾವಲೋಕಿಸುವಂತೆ ಒತ್ತಾಯಿಸುವ ಕೃತಿಗಳು. ಅದರಲ್ಲೂ **'ಭಾರತೀಯ ರಾಜ್ಯಧರ್ಮ'**ವು ಇಂದು ಸಾಮಾನ್ಯಜ್ಞಾನವೇ ಆಗಿಬಿಟ್ಟಿರುವ. ಮಧ್ಯಕಾಲೀನ ಭಾರತವೆಂದರೆ ಕೋಮುಸಂಘರ್ಷ ಹಾಗೂ ಅವನತಿಯತ್ತ ಸಾಗಿದ ಕಾಲಘಟ್ಟವೆಂಬುದನ್ನು ಅಲ್ಲಗಳೆದು ಬ್ರಿಟಿಷರದೊಂದೇ ಭಾರತ ಕಂಡ 'ಮೊಟ್ಟ ಮೊದಲಿನ ನಿಜವಾದ ಅವಿಚ್ಛಿನ್ನ ಪರಶಾಸನ' ಎಂದು ವಾದಿಸುತ್ತದೆ.

ನವ್ಯ–ಕಾವ್ಯವನ್ನು ಎಂದೂ ಒಪ್ಪಿಕೊಂಡಿರದ ಶ್ರೀಧರರು ಬ್ರ್ಯಾಡ್‌ಬ್ರೂಕಳ **'T.S. Eliot'** ನ್ನು ಅನುವಾದಿಸಿದ್ದು ಕುತೂಹಲಕಾರಿಯಾಗಿದೆ. ಎಲಿಯಟ್ ಇಂಗ್ಲೀಷ್ ನವ್ಯಕಾವ್ಯದ ಆದ್ಯರಲ್ಲೊಬ್ಬ ಹಾಗೂ ಬ್ರ್ಯಾಡ್‌ಬ್ರೂಕಳದು ಎಲಿಯಟ್ ಸಾಹಿತ್ಯದ ರಸವಿಮರ್ಶೆ. ಹೀಗಾಗಿ ಆಕೆ ಎಲಿಯಟ್ ಕಾವ್ಯ ಹಾಗೂ ಗೀತನಾಟಕಗಳಿಂದ ಧಾರಾಳವಾಗಿ ಉದ್ಧರಣೆಗಳನ್ನು ನೀಡಿದ್ದಾರೆ. ಶ್ರೀಧರರ ತಾತ್ವಿಕ ಭಿನ್ನಾಭಿಪ್ರಾಯ ಅವರ ಅನುವಾದವನ್ನು ಪ್ರಭಾವಿಸಿಲ್ಲವೆಂಬುದು ಮುಖ್ಯವಾದದ್ದು. ಹಾಗೆ ನೋಡಿದರೆ, ಎಲಿಯಟ್ ಕಾವ್ಯ–ಪಂಕ್ತಿಗಳ ಉತ್ತಮ ಅನುವಾದಗಳ ಉದಾಹರಣೆಗಳು ಈ ಕೃತಿಯುದ್ದಕ್ಕೂ ಕಾಣಿಸುತ್ತವೆ ಹಾಗೂ ನವ್ಯಕಾವ್ಯ ಕನ್ನಡ ಛಂದಸ್ಸಿನ ಜಾಯಮಾನಕ್ಕೆ ಹೊರತಾಗಿರಬೇಕಾಗಿಲ್ಲ ಎಂಬುದಕ್ಕೆ ಕೂಡ. ಉದಾಹರಣೆಗೆ, ಎಲಿಯಟ್ ತನ್ನ ಶೈಲಿಯನ್ನು ತಾನೇ ವಿಡಂಬಿಸಿಕೊಂಡು ಬರೆದ ಕಿರುಗವನದ ಅನುವಾದ ನೋಡಿ:

ಕಾರಕೂನನ ಲಕ್ಷಣಗಳಿಂದ
ಭಾರಿ ಬಿಗುಮೊಗವುಳ್ಳ ಮೇಣುಪ –
ಚಾರನಿರ್ಭರ ಬಾಯ ಸಂಭಾಷಣೆಯ ಶೈಲಿಯಲಿ।
ತೀರ ಸರಿತನ, 'ಬಹುಶಃ' 'ಆದರೆ' –
ತೋರ ರೇಫದುಪಾಧಿದೋರುವ
(ಶಾರದಾ) ಶ್ರೀ ಈಲಿಯಟ್ಟರನೊಳ್ಪುದೆಷ್ಟು ಸುಖ॥

ಅಥವಾ 'Marina' (ಶ್ರೀಧರರ ಅನುವಾದದಲ್ಲಿ 'ಸಾಮುದ್ರಿಕೆ') ಕವನದ ಸಾಲುಗಳನ್ನು ನೋಡಿ:

ಆವ ಕಡಲುಗಳಿಗಾವ ತೀರಗಳು, ಬೂದುಬಂಡೆ,
ನಡುಗಡ್ಡೆಗಳು?
ಆವ ನೀರು ಮಳೆಬಿಲ್ಲ ಸುತ್ತಿಹುದು, ಸೆಲ್ಲೆಯಾಗಿ
ಹೇಳೆಲೆ ಮಗಳೆ?
ಪೈನುಮರದ ಈ ಗಂಧವಾವುದಿದು, ಆವ ಮರಕುಟುಕ
ಹಾಡುತಿದೆ
ಮಂಜುಮುಸುಕಿನಲಿ? ಎಂಥ ಪ್ರತಿಮೆಗಳು ಕಣ್ಣಿನೆದುರು
ಗೋಚರಿಸುತಿವೆ?

ತಮ್ಮ ಎಲ್ಲ ಅನುವಾದಿತ ಕೃತಿಗಳಿಗೂ ಪ್ರಸ್ತಾವನೆ ಬರೆಯುತ್ತಿದ್ದ ಶ್ರೀಧರರು ಇದೊಂದು ಪುಸ್ತಕಕ್ಕೆ ಮಾತ್ರವೇ 'No comments' ಅನ್ನುವ ರೀತಿಯಲ್ಲಿ ಅನುವಾದವನ್ನಷ್ಟೇ ನೀಡಿದ್ದಾರೆಂಬುದರ ಮೇಲೇ ಎಲಿಯಟ್ ಕಾವ್ಯವನ್ನು ಕುರಿತ ಅವರ ನಿಲುವನ್ನು ಊಹಿಸಬೇಕು.

**'ಮನುಸ್ಮೃತಿ', 'ಸಂಸ್ಕೃತ ಸುಭಾಷಿತ'** ಇವನ್ನೆಲ್ಲ ವಿಶ್ವವಿದ್ಯಾಲಯದ ಪಠ್ಯಪುಸ್ತಕ ನಿರ್ದೇಶನಾಲಯಕ್ಕಾಗಿ ಅನುವಾದಿಸಿದ್ದು. ಇವು ಶ್ರೀಧರರದೇ ಆಯ್ಕೆಗಳಲ್ಲ. ಇಂಗ್ಲೀಷ್‌ನಂತಹ ಪರಕೀಯ ಭಾಷೆಯಿಂದ ಅನುವಾದಿಸುವಾಗ ಎದುರಿಸಬೇಕಾದ ತೊಡಕುಗಳೂ ಇಲ್ಲಿ ಅವರಿಗೆ ಎದುರಾಗಿಲ್ಲ. ಮೂಲಕ್ಕೆ ಅತ್ಯಂತ ನಿಕಟವರ್ತಿಯಾಗಿರುವ ಈ ಬರಹಗಳನ್ನು ಶ್ರೀಧರರು 'ಭಾಷಾಂತರ' ಎಂದು ಕರೆದಿದ್ದಾರೆ.

ಶ್ರೀಧರರ ಆರಂಭಿಕ ಅನುವಾದಗಳಲ್ಲೊಂದಾದ J.S. Mill ನ 'On Liberty' – **'ಸ್ವಾತಂತ್ರ್ಯ ಮೀಮಾಂಸೆ'**ಗೆ ಬರೆದ ಸುದೀರ್ಘವಾದ ಮುನ್ನುಡಿಯಲ್ಲಿ ಡಿ.ವಿ.ಜಿ.ಯವರು ಶ್ರೀಧರರನ್ನು "ವಿದ್ವಾಂಸರು, ಕನ್ನಡದಲ್ಲಿ ಬರವಣಿಗೆಯ ಅಭ್ಯಾಸಕ್ಕಾಗಿ ಪರಿಶ್ರಮ ಮಾಡಿರುವವರು, ಪ್ರಪಂಚದ ಇಂದಿನ ಪರಿಸ್ಥಿತಿಯನ್ನು ವಿಚಾರದಿಂದ ಕಂಡುಕೊಂಡಿರುವವರು, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಜನದಲ್ಲಿ ಜ್ಞಾನೋನ್ನತಿಯೂ, ವಿಚಾರೋನ್ನತಿಯೂ ಬೆಳೆಯಬೇಕೆಂದು ತಮ್ಮ ಹೃದಯದಲ್ಲಿ ಆಸೆ – ಆಕಾಂಕ್ಷೆಗಳನ್ನು ಬೆಳೆಸಿಕೊಂಡಿರುವವರು" ಎಂದು ಶ್ಲಾಘಿಸಿದ್ದಾರೆ. ಅನುವಾದಿಸಲು ಶ್ರೀಧರರಿಗಿದ್ದ ಅಧಿಕಾರ ಹಾಗೂ ಅವರ ಅನುವಾದಗಳ ಉದ್ದೇಶಗಳನ್ನು ಸೂಚಿಸುವ ಮಾತುಗಳಿವು.

**– ಡಾ. ಎಮ್.ಜಿ. ಹೆಗಡೆ**

# ಆರನೆಯ ಸಂಪುಟದ ಕುರಿತು.....

ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ ಸರಣಿಯಲ್ಲಿ ಈಗಾಗಲೇ ಕಾವ್ಯ, ವಿಮರ್ಶೆ, ವಿಚಾರ, ಸಂಕೀರ್ಣ, ಅನುವಾದ – 1 ಎಂಬ ಐದು ಸಂಪುಟಗಳು ಬಂದಿವೆ.

ಇದೀಗ ಈ ಆರನೆಯ ಸಂಪುಟ – ಅನುವಾದ – 2 – ಬರುತ್ತಿದೆ. ಐದನೆಯ ಸಂಪುಟದಲ್ಲಿ ಶ್ರೀಧರರು ಸಂಸ್ಕೃತದಿಂದ ಅನುವಾದಿಸಿದ ಕೃತಿಗಳಿದ್ದರೆ, ಈ ಸಂಪುಟದಲ್ಲಿ ಅವರು ಇಂಗ್ಲಿಷ್‌ನಿಂದ ಅನುವಾದಿಸಿದ – ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ, ಭಾರತೀಯ ವಾಙ್ಮಯ, ಟಿ.ಎಸ್. ಈಲಿಯಟ್, ಸ್ವಾತಂತ್ರ್ಯ ಮೀಮಾಂಸೆ ಮತ್ತು ಮಾತೃಶ್ರೀ ಎಂಬ ಐದು ಕೃತಿಗಳು ಸಂಕಲಿತವಾಗಿವೆ.

ಕುಮಟೆಯ ಸುಲಭ ಸಾಹಿತ್ಯ ಪ್ರಕಾಶನದವರು 1955ರಲ್ಲಿ ಪ್ರಕಟಿಸಿದ 'ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ' ಎಂಬುದು ಶ್ರೀಧರರ ಮೊದಲ ಅನುವಾದದ ಕೃತಿ. ಇದು ಶ್ರೀ ಅರವಿಂದರ – 'ದಿ ಫೌಂಡೇಷನ್ ಆಫ್ ಇಂಡಿಯನ್ ಕಲ್ಚರ್' ಎಂಬ ಆಂಗ್ಲಕೃತಿಯ ಮೊದಲ ಭಾಗ. ನಮ್ಮ ಗತಸಂಸ್ಕೃತಿಯ ಸರ್ವಾಂಗಸುಂದರತೆ ಮತ್ತು ಇಂದಿನ ಕೊರತೆಯ ಬಾಳಿನ ದುರ್ದೆಶೆ ಶ್ರೀಧರರನ್ನು ತುಂಬ ತಟ್ಟಿದ ಸಂಗತಿ. "ಅಂದಿನ ತುಂಬುಜೀವನದ ರಸ–ರುಚಿ ಪುನರುದಯವಾಗಲೆಂಬ ಉತ್ಕಟೇಚ್ಛೆ" ಅವರ ಸಾಹಿತ್ಯಸೃಷ್ಟಿಯ ಪ್ರೇರಕಶಕ್ತಿ. ಶ್ರೀ ಅರವಿಂದರ ಕೃತಿಯಲ್ಲಿಯೂ ಇದೇ ವಿಚಾರದ ವಿಸ್ತಾರವಿದೆ. ಪ್ರಾಚೀನ ಭಾರತದ ರಾಜಕೀಯ – ಸಾಮಾಜಿಕ ಜೀವನದ ಅಂಶಗಳನ್ನು ಪ್ರಸ್ತಾಪಿಸಿ, ಅದರ ಹಿಂದಿರುವ ಭಾರತೀಯ ಪ್ರಜ್ಞೆಯ ವೈಶಿಷ್ಟ್ಯವನ್ನು ಗುರುತಿಸಿ, ಅದೇ ಎಷ್ಟರ ಮಟ್ಟಿಗೆ ಭಾರತೀಯ ಮನಕ್ಕೆ ಅನುಗುಣವಾಗಿದ್ದು, ತತ್ಕಾರಣದಿಂದ ಸಮಂಜಸವೂ ಆಗಿತ್ತೆಂದು ನಿರೂಪಿಸುವ ಶ್ರೀ ಅರವಿಂದರ ರೀತಿ – "ಈಗ ಎಚ್ಚೆತ್ತ ಸ್ವತಂತ್ರ ಭಾರತ ತನ್ನ ಚೊಕ್ಕ ಕಣ್ಣಿಂದಲೇ ಗತೇತಿಹಾಸವನ್ನು ಅವಲೋಕಿಸಿದ" ಮಾದರಿ. ಅನನ್ಯ ಅರವಿಂದಶೈಲಿಯ "ಮೂಲ ಸರಸ್ವತಿಯ ರಸವಂತಿಕೆಗೆ ಭಂಗ ತಾರದಂತೆ" ಅನುವಾದಿಸುವಂಥ ಸವಾಲಿನ ಕೆಲಸವನ್ನು ಪ್ರೀತಿಪೂರ್ಣ ಪರಿಶ್ರಮದಿಂದ ನಿಭಾಯಿಸಿದ್ದಾರೆ ಶ್ರೀಧರರು.

ಈ ಅನುವಾದದ ಬೆನ್ನಿಗೇ, ಅದೇ ಸ್ಫೂರ್ತಿಯಲ್ಲೇ 1957ರಲ್ಲಿ ಬಂದದ್ದು ಶ್ರೀ ಅರವಿಂದರ ಅದೇ ಗ್ರಂಥದ ಮುಂದಿನ ಭಾಗದ ಅನುವಾದ – "ಭಾರತೀಯ ವಾಙ್ಮಯ". ವೈದಿಕ ವಾಙ್ಮಯದ ಆಳವನ್ನೂ, ಪುರಾಣ ಮಹಾಕಾವ್ಯಗಳ ಸೌಂದರ್ಯವನ್ನೂ, ಅಭಿಜಾತ ವಾಙ್ಮಯದ ವೈಶಿಷ್ಟ್ಯವನ್ನೂ ಮನಂಬುಗುವಂತೆ

ವರ್ಣಿಸಿದ್ದಾರೆ ಶ್ರೀ ಅರವಿಂದರು. ಪ್ರಾಚೀನ ಕೃತಿಗಳ ಉತ್ಕೃಷ್ಟತೆಯನ್ನು ವಿವರಿಸುತ್ತ – "ಭಾರತೀಯ ಮನ ಸಾಧಿಸಿದ ಸಿದ್ಧಿಯನ್ನು ಕೇವಲ ದೋಷೈಕದೃಷ್ಟಿಯುಳ್ಳವನೂ ದೂರಲಾರನು" ಎನ್ನುತ್ತಾರೆ. ಆದರೆ ಕೊನೆಯ ಅವಧಿಯಲ್ಲಿ ಅವನತಿಯತ್ತ ಸಾಗಿದ್ದು ಅವರನ್ನು ನೋಯಿಸಿದರೂ – "ಇನ್ನೇನು ಕೊನೆಗೊಳ್ಳುತ್ತದೆ ಎನ್ನುವಂತಹ ಕಾಲದಲ್ಲಿಯೂ ಈ ಸಂಸ್ಕೃತಿ ಮೊಟ್ಟಮೊದಲು ಕೈಗೆ ಸಿಕ್ಕ ಸಂದರ್ಭವನ್ನು ಬಳಸಿಕೊಂಡು ಮತ್ತೆ ಪುನರುಜ್ಜೀವನ ಹೊಂದಿದೆ, ಮತ್ತೊಂದು ಯುಗಚಕ್ರವನ್ನಾರಂಭಿಸಿದೆ" ಎಂಬ ಅರಿವು ಶುಭದ ನಿರೀಕ್ಷೆಗೆ ಮನವನ್ನು ಅನುಗೊಳಿಸುತ್ತದೆ. ಇದೇ ಶ್ರೀಧರರ ಮನದಾಳದ ಆಶಯ ಕೂಡ. ಶ್ರೀಧರರ ಈ ಅನುವಾದದಲ್ಲಿ ಭಾಷೆ ಮತ್ತೂ ಸೊಬಗು ತುಂಬಿಕೊಂಡಿದೆ. "ಮೂಲ ಸರಸ್ವತಿಯ ರಸವಂತಿಕೆ" ಒಂದಿಷ್ಟೂ ಕುಂದಿಲ್ಲ.

ಮುಂದಿನದು ಆಂಗ್ಲಕವಿಯೂ, ವಿಮರ್ಶಕನೂ, ನೋಬೆಲ್ ಪ್ರಶಸ್ತಿ ಪುರಸ್ಕೃತನೂ ಆದ ಟೀ.ಎಸ್. ಈಲಿಯಟ್‌ನ ಕುರಿತಾದ ಶ್ರೀ ಎ.ಸಿ. ಬ್ರ್ಯಾಡ್‌ಬ್ರೂಕ್‌ರ ಆಂಗ್ಲಪ್ರಬಂಧದ ಅನುವಾದ. ಮದ್ರಾಸಿನ ಬ್ರಿಟಿಷ್ ಕೌನ್ಸಿಲ್‌ನವರು ಆಂಗ್ಲಲೇಖಕರ ಮೇಲೆ ವಿದ್ವಾಂಸರಿಂದ ಬರೆಯಿಸಿದ ವಿಮರ್ಶನ ಪುಸ್ತಕಗಳ ಅನುವಾದ ಮಾಲೆಯಲ್ಲಿ ಇದು ಮೊದಲನೆಯದು. ಅವರ ಪರವಾಗಿ ಉಡುಪಿಯ ಎಂ.ಜಿ.ಎಂ. ಕಾಲೇಜಿನಿಂದ 1957ರಲ್ಲಿ ಪ್ರಕಟವಾದದ್ದು. ಟೀ.ಎಸ್. ಈಲಿಯಟ್ ಹತ್ತೊಂಬತ್ತನೇ ಶತಮಾನದ ಆಂಗ್ಲಕವಿ ಮತ್ತು ವಿಮರ್ಶಕರಲ್ಲಿ ಅಗ್ರೇಸರರು. ಅವರ "ವೇಸ್ಟ್ ಲ್ಯಾಂಡ್" ಕೃತಿಯನ್ನು ಗಮನಿಸದವರಿಲ್ಲ. "1920ರ ಉತ್ತರಕಾಲದಲ್ಲಿ ಬಂದ ತಲೆಮಾರು ಅದನ್ನು ಕೊಂಡು, ಹೀರಿ, ತನ್ನ ಮನದ ಒಂದು ಅಭ್ಯಾಸಾಂಗವನ್ನಾಗಿ ಮಾಡಿಕೊಂಡಿತು" ಎನ್ನುತ್ತಾರೆ ಬ್ರ್ಯಾಡ್‌ಬ್ರೂಕ್. ಈಲಿಯಟ್ಟರ ಹಲವಾರು ಗಮನಾರ್ಹ ಕೃತಿಗಳ ಭಾಷೆಯ, ಭಾವದ ವೈಶಿಷ್ಟ್ಯಗಳನ್ನು ಅವರಿಲ್ಲಿ ವಿವರವಾಗಿ ವಿಶ್ಲೇಷಿಸಿದ್ದಾರೆ. ಅದನ್ನು ಶ್ರೀಧರರು ಸಮರ್ಥವಾಗಿ ಕನ್ನಡಿಗರಿಗೆ ತಲುಪಿಸಿದ್ದಾರೆ. ಈಲಿಯಟ್ ಶ್ರೀಧರರ ವಿಮರ್ಶಕ ಮನಸ್ಸನ್ನು ಮುಟ್ಟಿದವರು ಕೂಡ.

ಹದಿನೆಂಟನೆಯ ಶತಮಾನದ ಪಾಶ್ಚಾತ್ಯ ಬೌದ್ಧಿಕವಾದವನ್ನು ಪ್ರಭಾವಿಸಿದ ಪ್ರಖರ ವಿಚಾರವಾದಿ ಜೆ.ಎಸ್. ಮಿಲ್ ಮಹಾಶಯನ 'ಆನ್ ಲಿಬರ್ಟಿ' ಎಂಬ ಆಂಗ್ಲಕೃತಿಯ ಅನುವಾದ "ಸ್ವಾತಂತ್ರ್ಯ ಮೀಮಾಂಸೆ" ಎಂಬ ಹೆಸರಿನಲ್ಲಿ 1961ರಲ್ಲಿ ಶ್ರೀಧರರಿಂದ ಅನುವಾದಿಸಲ್ಪಟ್ಟಿತು. ಇದಕ್ಕೆ ಶ್ರೀಯುತ ಡಿ.ವಿ. ಗುಂಡಪ್ಪನವರ ಹರಕೆಯಿದೆ. ಸತ್ಯದರ್ಶಕ ತರ್ಕಕ್ಕೆ ಅನುವು ಮಾಡಿಕೊಡುವ ಸ್ವಾತಂತ್ರ್ಯದ ಪ್ರತಿಪಾದಕ ಜೆ.ಎಸ್. ಮಿಲ್. ಇಂಥ ಸುತರ್ಕವನ್ನು ಅಪಾರವಾಗಿ ಮೆಚ್ಚಿದ್ದ ಶ್ರೀಧರರಿಗೆ ಮಿಲ್ಲನ ವಿಚಾರಸರಣಿ ಪ್ರಿಯವಾದದ್ದರಲ್ಲಿ ಅಚ್ಚರಿಯೇನೂ ಇಲ್ಲ. "ಪೂರ್ಣ ಸತ್ಯವೆಂದು ಸಿದ್ಧವಾದ ತತ್ತ್ವ ಪ್ರಣಾಲಿಕೆಗಳು ಕೂಡ ಪುನಃ ಪುನಃ ಪ್ರಶ್ನಿಸಲ್ಪಟ್ಟಾಗ ಮಾತ್ರ ತಮ್ಮ ಜೀವಂತಿಕೆಯನ್ನು ಉಳಿಸಿಕೊಳ್ಳುತ್ತವೆ" ಎಂಬ ಮಿಲ್ಲನ ಮಾತು – "ಚ್ಯುತಿಯಿಲ್ಲದ ಮತ್ತು ಅತ್ಯಮೂಲ್ಯವಾದ ಸಾಮಾಜಿಕ – ನೈತಿಕ ಸಿದ್ಧಾಂತವೊಂದರ ಸಲುವಾಗಿರುವ ನಿರರ್ಗಳ ಮತ್ತು ಪರಿಶುದ್ಧವಾದ ಕಳಕಳಿಯ ಬಿನ್ನಹ"ವಾಗಿ ಶ್ರೀಧರರಿಗೆ ಕಂಡಿದೆ. ಈ ಬಿನ್ನಹವನ್ನು ಸರಾಗವಾಗಿ, ಸುಲಲಿತವಾಗಿ ಕನ್ನಡಿಗರಿಗೆ ತಲುಪಿಸಿದ್ದಾರೆ.

ಅರವಿಂದದರ್ಶನವನ್ನು ತುಂಬ ಮೆಚ್ಚಿದ್ದ ಶ್ರೀಧರರು ಅರವಿಂದಾಶ್ರಮದ ಅಧಿಷ್ಠಾತ್ರಿಯೂ, ದಿವ್ಯಮಾತೆಯೂ ಎನಿಸಿದ್ದ ಶ್ರೀಮಾತೆಯವರ ವ್ಯಕ್ತಿತ್ವ, ವಿಚಾರಗಳ ಕುರಿತಾಗಿ ತುಂಬ ಗೌರವಾದರಗಳನ್ನು ಹೊಂದಿದ್ದರು. ಶ್ರೀಮಾತೆ ತುಂಬ ವಿನಯಶೀಲೆಯೂ, ಅರವಿಂದಾಶ್ರಮದ ಅಭಿವೃದ್ಧಿಯ ಚಟುವಟಿಕೆಗಳಲ್ಲಿ ಸತತವೂ ತೊಡಗಿಸಿಕೊಂಡ ಅವಿಶ್ರಾಂತ ಜೀವವೂ ಆದ್ದರಿಂದ ತನ್ನ ವೈಯಕ್ತಿಕ ಜೀವನದ ಬಗೆಗೆ ಹೇಳಿದ್ದೇ ಇಲ್ಲವೆನ್ನಬಹುದು. ಆದರೂ ಅಂಥದ್ದೊಂದು ದಿವ್ಯಚೇತನದ ಕುರಿತಾದ ವೈಯಕ್ತಿಕ ವಿವರಗಳನ್ನು ಪರಿಶ್ರಮದಿಂದ ಸಂಗ್ರಹಿಸಿ ಶ್ರೀ ಪಶುಪತಿ ಭಟ್ಟಾಚಾರ್ಯರು ಬಂಗಾಳಿಯಲ್ಲಿ "ಕೇಯೀಮಾ" ಎಂಬ ಗ್ರಂಥವನ್ನು ಪ್ರಕಟಿಸಿ, ತದನಂತರ "ಆನ್ ದ ಮದರ್ ಡಿವೈನ್" ಎಂಬ ಹೆಸರಿನಲ್ಲಿ ಇಂಗ್ಲೀಷಿಗೆ ಭಾಷಾಂತರಿಸಿದರು. ಅದನ್ನು "ಮಾತೃಶ್ರೀ" ಎಂಬ ಹೆಸರಿನಲ್ಲಿ ಶ್ರೀಧರರು ಕನ್ನಡಕ್ಕೆ ತಂದಿದ್ದಾರೆ. ಶಿವಮೊಗ್ಗೆಯ ಶ್ರೀ ಅರವಿಂದೊ ಸೊಸೈಟಿ 1975ರಲ್ಲಿ ಇದನ್ನು ಪ್ರಕಟಿಸಿತು. ಈ ಅನುವಾದಕ್ಕೆ ನಿರಾತಂಕವಾಗಿ, ಮಂಜುಳವಾಗಿ ಹರಿಯುವ ನದಿಯ ಗತಿಯಿದೆ.

ಶ್ರೀಧರರ ಸಮಗ್ರಸಾಹಿತ್ಯವನ್ನು ಅಭ್ಯಸಿಸಿ ಅರಗಿಸಿಕೊಂಡ ಖ್ಯಾತ ವಿಮರ್ಶಕ ಡಾ. ಎಮ್.ಜಿ. ಹೆಗಡೆಯವರು "ಶ್ರೀಧರರ ಅನುವಾದಗಳು" ಎಂಬ ತಮ್ಮ ನುಡಿಯಲ್ಲಿ ಅವರ ಅನುವಾದಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ, ಅವುಗಳ ವೈಶಿಷ್ಟ್ಯವನ್ನು ಪ್ರಸ್ತಾಪಿಸಿದ್ದಾರೆ. ಅವರಿಗೆ ನಮ್ಮ ವಿಶೇಷ ಕೃತಜ್ಞತೆಗಳು.

ಶ್ರೀಧರರ ಅನುವಾದಗಳು ಕೇವಲ ಅನುವಾದಗಳಾಗಿರದೆ ಅಭ್ಯಾಸಯೋಗ್ಯ ಆಕರಗ್ರಂಥಗಳೂ ಆಗಿರುವುದು ಇವುಗಳ ಗರಿಮೆ.

ಆರನೆಯ ಈ ಸಂಪುಟ ಬಿ.ಎಚ್. ಶ್ರೀಧರ ಸಮಗ್ರ ಸಾಹಿತ್ಯ ಸರಣಿಯಲ್ಲಿ ಕೊನೆಯದು. ಆದರೆ ಶ್ರೀಧರ ಸಾಹಿತ್ಯ ಇಲ್ಲಿಗೇ ಮುಗಿಯಿತು ಎನ್ನಲಾಗದು. ಹಲವು ಪತ್ರಿಕೆಗಳಲ್ಲಿ ವಿಶೇಷಾಂಕಗಳಲ್ಲಿ ಪ್ರಕಟವಾಗಿದ್ದ ಅಗಣಿತ ಮೌಲಿಕ ಬಿಡಿಲೇಖನಗಳಿವೆ. ಅವುಗಳನ್ನು ಸಂಗ್ರಹಿಸಿ ಪ್ರಕಟಿಸುವ ಕೈಂಕರ್ಯವಿದೆ. ಹಾಗೆಯೇ ಇದುವರೆಗೆ ಅಲಭ್ಯವಾಗಿದ್ದ ಶ್ರೀಧರರ ಸ್ವಾರಸ್ಯಪೂರ್ಣ ವಿಡಂಬನಾ ಕೃತಿ "ಬೇತಾಳಗಳ ಕುಣಿತ" ಈಗ ಪವಾಡಸದೃಶವಾಗಿ ಲಭ್ಯವಾಗಿರುವುದರಿಂದ ಅದನ್ನು ಶೀಘ್ರದಲ್ಲೇ ಹೊರತರುತ್ತಿದ್ದೇವೆ. ಅಷ್ಟೇ ಅಲ್ಲದೆ, ಶ್ರೀ ಸಾಧು ಓಂ ಮಹಾಶಯರ "ದ ಪಾತ್ ಆಫ್ ಶ್ರೀರಮಣ" ಪುಸ್ತಕದ ಭಾಗ – 1 ಮತ್ತು ಭಾಗ – 2 ಇವುಗಳ ಕನ್ನಡಾನುವಾದ ಪ್ರತ್ಯೇಕವಾಗಿ ಬರಲಿದೆ. ಶ್ರೀ ಅರವಿಂದರ "ದ ಸೀಕ್ರೆಟ್ ಆಫ್ ದಿ ವೇದ" ಆಂಗ್ಲಕೃತಿಯ ಕನ್ನಡಾನುವಾದ (ಶಿವಾ ಆಫ್‌ಸೆಟ್ ಪ್ರಿಂಟರ್ಸ್, ಬೆಳಗಾವಿ) ವತಿಯಿಂದ ಈಗಾಗಲೇ ಬೆಳಕು ಕಂಡಿದೆ. ಹಲವು ಇಂಗ್ಲಿಷ್ ಲೇಖನಗಳು, ಸಂಸ್ಕೃತ ಶ್ಲೋಕರಾಶಿಗಳು... ಅಗೆದಷ್ಟೂ, ಮೊಗೆದಷ್ಟೂ ಸಿಗುತ್ತಿವೆ. ಹೊರಬರಲು ಸಜ್ಜಾಗಿವೆ. ಈ ನಿಟ್ಟಿನಲ್ಲಿ ಮುಂದಿನ ನಮ್ಮ ಎಲ್ಲ ಸದುದ್ದೇಶದ ಸಾಹಸಕ್ಕೂ ಸದಭಿರುಚಿಯ ಪ್ರಕಾಶಕ ಮತ್ತು ವಾಚಕವರ್ಗದ ಬೆಂಬಲ, ಸಹಕಾರಗಳು ಎಂದಿನಂತೆ ಇರಲೆಂಬುದೇ ಆಶಯ.

ಸಂಪಾದಕರ ಪರವಾಗಿ

**ರಾಜೇಶ್ವರಿ ಶ್ರೀಧರ ಹೆಬ್ಬಾರ**

# ಪರಿವಿಡಿ

# ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ

ಮೂಲ – ಶ್ರೀ ಅರವಿಂದರು

(ದ ಫೌಂಡೇಶನ್ ಆಫ್ ಇಂಡಿಯನ್ ಕಲ್ಚರ್ – ೧)

# ಎರಡು ಮಾತು

ಶ್ರೀ ಅರವಿಂದರ ಬಹುಮುಖ ಪ್ರತಿಭೆಯು ಜಗತ್ಪ್ರಸಿದ್ಧ. ಅವರ ದಾರ್ಶನಿಕ ಪ್ರತಿಭಾಕ್ಷಿಗೆ ಕಾಣದ ವಾಸ್ತವಿಕ ಅಂತಃಸತ್ಯವಿಲ್ಲ. ಭಾರತೀಯ ಇತಿಹಾಸ, ನಾಗರಿಕತೆ, ಕಲೆ, ಸಂಸ್ಕೃತಿ, ತತ್ವಜ್ಞಾನಗಳ ಬಗ್ಗೆ ನಾವು ಪಾಶ್ಚಾತ್ಯ ವಿದ್ವಾಂಸರು ಬರೆದ ಅನೇಕ ಪುಸ್ತಕಗಳನ್ನು ಓದಿದ್ದೇವೆ.ಅವರು ಭಾರತೇತಿಹಾಸವನ್ನು ಬರೆಯುವಾಗ "Primitive" ಎಂಬ ಪದವನ್ನು ಅನೇಕ ಸಲ ಬಳಸುವುದನ್ನೂ ನಮ್ಮ ಪ್ರಾಚೀನ ಹಾಗೂ ಮಧ್ಯಯುಗೀನ ನಾಗರಿಕತೆಯಲ್ಲಿ 'Pessimism' ಕಾಣಬರುವುದೆಂಬುದನ್ನೂ ಕಂಡಿದ್ದೇವೆ. **ಈಗ ಎಚ್ಚೆತ್ತ ಸ್ವತಂತ್ರ ಭಾರತ ತನ್ನ ಚೊಕ್ಕ ಕಣ್ಣಿಂದಲೇ ಗತೇತಿಹಾಸವನ್ನು ಅವಲೋಕಿಸಲಾರಂಭಿಸಿದೆ. ಈ ಸ್ವತಂತ್ರಾವಲೋಕನದ ಒಂದು ಅತ್ಯುತ್ತಮ ಮಾದರಿಯೆಂದರೆ ಶ್ರೀ ಅರವಿಂದರ ಬರೆಹ.**

'ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ' ಎಂಬುದು ಶ್ರೀ ಅರವಿಂದರ "The Foundations of Indian Culture" ಎಂಬ ಹೆಬ್ಬೊತ್ತಿಗೆಯ ಒಂದು ಭಾಗ. ರಾಜಕೀಯ ದೃಷ್ಟಿ ಇಂದಿನ ಭಾರತದಲ್ಲಿ ಮಿಕ್ಕೆಲ್ಲ ಜೀವನ ಕ್ಷೇತ್ರಗಳನ್ನೂ ಆವರಿಸಿ ಕಾರ್ಯವೆಸಗುತ್ತಿರುವುದರಿಂದ ಆಧುನಿಕ ವಿದ್ಯಾವಂತರು ಭಾರತದ ಹಿಂದಿನ ರಾಜಕೀಯ–ಸಾಮಾಜಿಕ ಜೀವನದ ಅಂಶಗಳನ್ನು ಶ್ರೀ ಅರವಿಂದರು ಹೇಗೆ ಪ್ರತಿಬಿಂಬಿಸಿದ್ದಾರೆ ಎಂಬುದನ್ನು ತಿಳಿದುಕೊಳ್ಳುವುದು ಲಾಭಕರವಾದೀತೆಂದು ನಾವು ಈ ಅರವಿಂದ ವಿಚಾರ ಕುಸುಮದ ಮಕರಂದವನ್ನು ಕನ್ನಡಿಸಲು ಕೈಹಾಕಿದೆವು. ಆಂಗ್ಲ ಗದ್ಯಕ್ಕೂ ಕನ್ನಡ ಗದ್ಯಕ್ಕೂ ಬೆಳವಣಿಗೆಯಲ್ಲಿ ಭೂಮ್ಯಾಕಾಶದಷ್ಟು ಅಂತರವಿರುವುದು ಸರ್ವರಿಗೂ ವಿದಿತ. ಅದರಲ್ಲೂ ಹಿಂದಿನ ಕಾಲದಿಂದಲೂ ಶಾಸ್ತ್ರಜ್ಞಾನಕ್ಕೆ ಸಂಸ್ಕೃತವನ್ನೇ ಕಲಿಯುತ್ತಿದ್ದ ಕನ್ನಡ ವಿದ್ವಾಂಸರು ಕನ್ನಡ ಶಾಸ್ತ್ರವಾಙ್ಮಯಕ್ಕೆ ಸಲ್ಲಿಸಿದ ಸೇವೆ ಗಣ್ಯವಾಗಿಲ್ಲ. ಆದುದರಿಂದ ಇಂದಿನ ನಮ್ಮ ಪತ್ರಿಕೋದ್ಯೋಗಿಗಳಿಗೆ ನಿತ್ಯವೂ ಬರುತ್ತಿರುವ ಅನುಭವದಂತೆ ನಮಗಾದರೂ ಮೂಲದ ಆಂಗ್ಲಭಾಷೆಯ ಪದಪದ್ಧತಿಯ ಸೌಂದರ್ಯ, ಮಾಧುರ್ಯ, ವೈವಿಧ್ಯ, ಪಾರಿಭಾಷಿಕ ಪ್ರೌಢಿಗಳನ್ನು ಕನ್ನಡಕ್ಕೆ ತರುವಲ್ಲಿ ಸಾಕಷ್ಟು ಶ್ರಮ ಉಂಟಾಯಿತು. ಶ್ರೀ ಅರವಿಂದರ ಶೈಲಿಯ ಸೊಬಗಿಗೂ ವಸ್ತುವಿನ ಗಾಂಭೀರ್ಯಕ್ಕೂ ವಾಕ್ಯರಚನೆಯ ಉದ್ದಕ್ಕೂ ಭಂಗ ಬರದಂತೆ ಯಥಾವತ್ತಾಗಿ ಭಾಷಾಂತರಿಸ ಹೊರಟು ಶಕ್ಯವಿದ್ದಷ್ಟುಮಟ್ಟಿಗೆ ಕನ್ನಡ ವ್ಯಾಕರಣ, ಪಡೆನುಡಿ, ಮೇಳನುಡಿ, ಪದಬಂಧಗಳ ನೀತಿಯನ್ನು ಕಾಯ್ದುಕೊಂಡು ಮೂಲವನ್ನೋದಿದಷ್ಟೇ ಪ್ರಯೋಜನ ಓದುಗನಿಗೆ ಪದ–ಅರ್ಥಗಳ ದೃಷ್ಟಿಯಿಂದ ಲಭಿಸುವಂತೆ ಯತ್ನಿಸಿದ್ದೇವೆ. ಆದುದರಿಂದ ಓದುಗನು ಭಾಷಾಂತರದಲ್ಲಿ

ಧೀರ್ಘವಾಕ್ಯಗಳನ್ನೂ ಸಂಸ್ಕೃತ ಪಾರಿಭಾಷಿಕ ಪದಗಳನ್ನೂ ಎದುರಿಸುವಾಗ ದಯೆಯಿಟ್ಟು ನಮ್ಮ ಉಕ್ತ ಉದ್ದೇಶವನ್ನು ನೆನೆದು ಸಹಾನುಭೂತಿಯಿಂದ ನಿಧಾನವಾಗಿ ಓದಬೇಕೆಂದು ಪ್ರಾರ್ಥನೆ. ಜೊತೆಗೆ ಶ್ರೀ ಅರವಿಂದರ ಗದ್ಯದ ಪದಪುಷ್ಪ ಮಾಲೆ ಪ್ರಸಿದ್ಧ ಕವಿಯ ಕಾವ್ಯಾಲಂಕಾರಹಾರದಂತಿದೆ. ಅವರ ದೀರ್ಘ ವಾಕ್ಯಗಳನ್ನು ತುಂಡರಿದು ಅನಲಂಕೃತ ಶೈಲಿಗಿಳಿಸಿದರೆ ಮೂಲ ಸರಸ್ವತಿಯ ರಸವಂತಿಕೆಗೆ ಭಂಗ ತಂದಂತಾಗುತ್ತದೆ; ಅವರ ವಾಕ್ಯಗತಿಯ ಓಜಸ್ಸು, ಲಯ, ತೂಕಗಳನ್ನು ಕಳೆದೊಗೆದಂತಾಗುತ್ತದೆ; ಅವರ ವಾಕ್ಪ್ರೌಢಿಯನ್ನು ಮರೆಗಿಟ್ಟಂತಾಗುತ್ತದೆ. ಅಲ್ಲದೆ ನಾವು ಹಿಡಿದ ಈ ಮಾರ್ಗವನ್ನುಳಿದು ಬರಿ ಸಾರಾಂಶವನ್ನು ತಿಳಿಗನ್ನಡದಲ್ಲಿ ಕೊಟ್ಟರೆ ವಿದ್ವಾಂಸರು ಅರವಿಂದರ ಅಭಿಪ್ರಾಯವನ್ನು ಒಮ್ಮೆ ಉದ್ಧರಿಸಬೇಕೆಂದು ಹೊರಟರೆ ಆಂಗ್ಲಮೂಲವನ್ನೇ ಅರಸುವ ಪ್ರಸಂಗವುಂಟಾಗುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಈ ಅನುವಾದವನ್ನೇ ಆಧಾರವಾಗಿ ತೆಗೆದುಕೊಂಬ ಸೌಕರ್ಯವನ್ನು ಒದಗಿಸಹೊರಟು ಈ ಭಾಷಾಂತರವನ್ನು ಶ್ರೀ ಮಾತೆಯ ಕೃಪೆಯಿಂದ ಓದುಗರ ಮುಂದಿಡಲು ಶಕ್ತರಾಗಿದ್ದೇವೆ. ರಾಜನೀತಿಶಾಸ್ತ್ರದ ಮೇಲೆ ಕನ್ನಡದಲ್ಲಿ ಈ ಪ್ರಥಮಾವಸ್ಥೆಯಲ್ಲಿ ಬರೆದ ಹೊಸ ಪ್ರಯತ್ನವೆಂದು ಮಾನಿಸಿ ಕನ್ನಡಿಗರು ಈ ಕಿಬ್ಬೊತ್ತಿಗೆಯನ್ನು ಬರಮಾಡಿಕೊಂಡು ಈ ಕಾರ್ಯದಲ್ಲಿ ಮುಂಬರಿಯಲು ನಮಗೆ ಪ್ರೋತ್ಸಾಹ ನೀಡುವರೆಂದು ಹೃತ್ಪೂರ್ವಕವಾಗಿ ನಂಬಿದ್ದೇವೆ.

ಪಾರಿಭಾಷಿಕ ಹಾಗೂ ಇತರ ಕಠಿನವೆನಿಸಬಹುದಾದ ಪದಗಳ ಅರ್ಥಕೋಶವನ್ನು ಪುಸ್ತಕದ ಕೊನೆಗೆ ಅನುಬಂಧಿಸಲಾಗಿದೆ. ಮೂಲದಲ್ಲಿ ಅಧ್ಯಾಯವಲ್ಲದೆ ಉಪಶೀರ್ಷಿಕೆಗಳಿಲ್ಲ. ಓದುಗರ ಅನುಕೂಲಕ್ಕಾಗಿ ಅವನ್ನು ನಾವು ಸಿದ್ಧಗೊಳಿಸಿದೆವು.

**ಕೆನರಾ ಕಾಲೇಜು, ಕುಮಟೆ**

ಮಾರ್ಚ್ ೧೫, ೧೯೫೫, **ಅನುವಾದಕರು**

ಬಿ.ಎಚ್. ಶ್ರೀಧರ

# ಪರಿವಿಡಿ

## ಮೊದಲನೆಯ ಅಧ್ಯಾಯ:



## ಎರಡನೆಯ ಅಧ್ಯಾಯ:



## ಮೂರನೆಯ ಅಧ್ಯಾಯ:

**ನಾಲ್ಕನೆಯ ಅಧ್ಯಾಯ:**

# ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ

## ಮೊದಲನೆಯ ಅಧ್ಯಾಯ

## ೧. ಭಾರತೀಯ ರಾಜ್ಯಧರ್ಮದ ಮೇಲಿನ ಅಸಮರ್ಥತೆಯ ಆರೋಪ

ಮಾನವ ಸಂಸ್ಕೃತಿಯ ದೃಷ್ಟಿಯಿಂದ ಮುಖ್ಯವೆನಿಸುವ ವಿಷಯಗಳ ಬಗ್ಗೆ, ಅಂದರೆ ಯಾವ ಚಟುವಟಿಕೆಗಳು ಮಾನವನ ಮಾನಸಿಕ, ಆಧ್ಯಾತ್ಮಿಕ, ಧಾರ್ಮಿಕ, ಬೌದ್ಧಿಕ, ನೈತಿಕ, ರಸಾತ್ಮಕ ಅಸ್ತಿತ್ವದಲ್ಲಿ ಅವನನ್ನು ತನ್ನ ಅತ್ಯುದಾತ್ತ ಅಂತಃಶಕ್ತಿಗೆ ತಕ್ಕಂತೆ ಮೇಲ್ಮಟ್ಟಕ್ಕೊಯ್ಯುವವೋ ಆ ಸಂಗತಿಗಳ ಮೂಲಕ ಭಾರತೀಯ ನಾಗರಿಕತೆಯ ಮಹತ್ವವನ್ನು ಈವರೆಗೂ ಹೇಳಿದೆ. ಈ ಎಲ್ಲ ವಿಷಯಗಳಲ್ಲಿ ಪೂರ್ಣವಾಗಿ ಅಥವಾ ಬಿಡಿಬಿಡಿಯಾಗಿ ಈ ಸಂಸ್ಕೃತಿಯ ಸತ್ವ ಮತ್ತು ಉದ್ದೇಶಗಳ ದೃಷ್ಟಿಯಿಂದ ನೋಡಿದಾಗ ಕಂಡು ಬರುವ ವಿಶಾಲತೆ, ಗಹನತೆ ಮತ್ತು ಉನ್ನತಿಗಳ ಹಾಗೂ ವಾಸ್ತವಿಕವಾಗಿ ಸಾಧಿಸಿದ ಅಂಶಗಳ ಸೂಕ್ಷ್ಮಾವಲೋಕದ ಎದುರಿಗೆ ಎಂತಹ ಕುತ್ಸಿತ ವಿಮರ್ಶೆಯಾದರೂ ನುಚ್ಚುನೂರಾಗುತ್ತದೆ. ಅದರಿಂದ ಭಾರತೀಯ ನಾಗರಿಕತೆಯೆಂಬುದು ಒಂದು ಮಹಾನಾಗರಿಕತೆ ಅಷ್ಟೇ ಅಲ್ಲ, ನಮಗೆ ಉಪಲಬ್ಧವಿರುವ ಐತಿಹಾಸಿಕ ದಾಖಲೆಗಳಲ್ಲಿ ಕಾಣುವ ಆರು ನಾಗರಿಕತೆಗಳಲ್ಲಿ ಒಂದು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಅನೇಕ ಜನರು ಮನಸ್ಸು ಮತ್ತು ಆತ್ಮಗಳಿಗೆ ಸಂಬಂಧಿಸಿದ ವಿಷಯಗಳಲ್ಲಿ ಭಾರತವು ಸಾಧಿಸಿದ ಸಿದ್ಧಿಯ ಮಹತ್ವವನ್ನು ಒಪ್ಪಿದರೂ ಅದು ಜೀವನದಲ್ಲಿ ಅಯಶಸ್ವಿಯಾಗಿದೆ; ಯುರೋಪು ತೋರಿಸುವಂತೆ ಅದರ ಸಂಸ್ಕೃತಿ ಬಲಿಷ್ಠವೂ, ಯಶಸ್ವಿಯೂ ಅಥವಾ ಪ್ರಗತಿಪರವೂ ಆದ ಸಂಘಟಿತ ಜೀವನದಲ್ಲಿ ಪರಿಣಮಿಸಲಿಲ್ಲ; ಅಂತ್ಯದಲ್ಲಿ ಅದರ ಚೈತನ್ಯದ ಅತ್ಯುತ್ತಮಾಂಶವು ಇಹಜೀವನದಿಂದ ವಿಮುಖವಾಗಿ ತಾಪಸ ವೃತ್ತಿಯ ಕಡೆಗೆ ತಿರುಗಿತು, ಮತ್ತು ವ್ಯಕ್ತಿಯನ್ನು ತನ್ನ ಮೋಕ್ಷಕ್ಕಾಗಿ ಒಂದು ವಿಧವಾದ ನಿಷ್ಕ್ರಿಯವೂ ಅಪ್ರಾಪಂಚಿಕವೂ ಆದ ವೃತ್ತಿಯು ಕಡೆಗೆ ಹೊರಳಿಸಿತು ಎಂದು ಬೊಟ್ಟುಮಾಡಿತೋರಿಸುತ್ತಾರೆ. ಅಷ್ಟಲ್ಲವಾದರೂ ಹೆಚ್ಚೆಂದರೆ ಭಾರತವು ತನ್ನ ಪ್ರಗತಿಯಲ್ಲಿ ಒಂದು ವಿಶಿಷ್ಟ ಮಟ್ಟವನ್ನು ಮುಟ್ಟಿದ ಬಳಿಕ ಅಲ್ಲಿಗೇ ನಿಂತು ಕ್ಷಯವಾಗತೊಡಗಿತು ಎಂದು ಹೇಳುತ್ತಾರೆ.

ಈ ಆರೋಪವು ಇಂದು ಮೌಲ್ಯದ ತ್ರಾಸಿನಲ್ಲಿ ವಿಶೇಷ ಭಾರವನ್ನು ತೋರಿಸುತ್ತದೆ. ಏಕೆಂದರೆ ಆಧುನಿಕ ಮನುಷ್ಯನು–ಆಧುನಿಕ ಸುಸಂಸ್ಕೃತ ಮನುಷ್ಯ ಕೂಡ ಹಿಂದೆ ಎಂದೂ ಇಲ್ಲದಷ್ಟು ಮಟ್ಟಿಗೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಜೀವಿಯಾಗಿ ಬಾಹ್ಯಜೀವನದ ಉತ್ಕೃಷ್ಟತೆಯನ್ನು ಮತ್ತು ಯಾಂತ್ರಿಕ ಪ್ರಗತಿಗೆ ಸಹಾಯಕವೆಂದು ಮಾತ್ರ ಮಾನಸಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳನ್ನು ಅಂಗೀಕರಿಸುತ್ತಾನೆ. ಪೂರ್ವಜರ ಮಹೋನ್ನತ ದೃಷ್ಟಿಯಾಗಲಿ, ಮಾನಸಿಕ ಮತ್ತು ಆಧ್ಯಾತ್ಮಿಕ ಸಿದ್ಧಿಗಳನ್ನು ಮೌನವಾಗಿ ಮೆಚ್ಚುವುದು ಅಥವಾ ಅವನ್ನು ಭಯ ಭಕ್ತಿಗಳಿಂದ ನೋಡುವುದೇ ಸಿದ್ಧಿ ಎಂದು ತಿಳಿದುಕೊಳ್ಳುವದು ಸಂಸ್ಕೃತಿ ಮತ್ತು ಪ್ರಗತಿಗಳಿಗೆ ಮನುಷ್ಯನು ಕೊಡಬಲ್ಲ ಅತಿದೊಡ್ಡ ಕೊಡುಗೆ ಎಂಬ ಭಾವನೆಯಾಗಲಿ ಇಂದಿನ ಮಾನವನಲ್ಲಿ ಇಲ್ಲ.

ಈ ಆಧುನಿಕ ಪ್ರವೃತ್ತಿ ಅತಿಶಯೋಕ್ತಿಘಟಿತವೂ ಅಸುಂದರವೂ ತನ್ನ ಆ ಅತಿಶಯದಲ್ಲಿ ಅಧಃಪಾತಕವೂ ಮಾನವಕುಲದ ಆತ್ಮವಿಕಾಸಕ್ಕೆ ಹಗೆಯೂ ಎನಿಸಿದ್ದರೂ ಅದರಲ್ಲಿ ಈ ಮಟ್ಟಿನ ತಥ್ಯಾಂಶವಿದೆ; ಆಂತರಿಕ ಮಾನವನ, ಅವನ ಮನದ, ಆತ್ಮದ, ಸತ್ವದ ಉನ್ನತಿ–ವಿಸ್ತಾರಗಳನ್ನು ಸಾಧಿಸುವ ಶಕ್ತಿ ಸಂಸ್ಕೃತಿಯ ಪ್ರಥಮ ಮೂಲ್ಯವಾದರೂ ಆತನ ಬಾಹ್ಯ ಜೀವನವನ್ನು ರೂಪಿಸಿ ಮಹೋನ್ನತ ಧ್ಯೇಯಗಳತ್ತ ಏರುವ ಮುನ್ನಡೆಯ ಲಯವನ್ನಾಗಿ ಮಾಡುವವರೆಗೂ ಅದರ ಸಮರ್ಪಕತೆ ಸಂಪೂರ್ಣವೆಂದೆನಿಸದು ಎಂಬುದೇ ಆ ಸತ್ಯಾಂಶ. ಇದೇ ಪ್ರಗತಿಯ ನಿಶ್ಚಿತಾರ್ಥ ಮತ್ತು ಅದರ ಅಂಗವಾಗಿ ಒಂದು ಸಮರ್ಪಕವಾದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಜೀವನವಿರಬೇಕು; ಬದುಕಿ ಉಳಿಯಲು ಹಾಗೂ ಒಂದು ಸಾಮೂಹಿಕ ಪೂರ್ಣತೆಯತ್ತ ಸುರಕ್ಷಿತವಾಗಿ ಅಭಿವೃದ್ಧಿಹೊಂದುತ್ತಾ ಹೋಗಲು ಅನುಗೊಳಿಸುವ ಒಂದು ಶಕ್ತಿಯೂ ಕಾರ್ಯದಕ್ಷತೆಯೂ ಇರಬೇಕು; ಅಲ್ಲದೆ ಮನ–ಆತ್ಮಗಳ ಬಾಹ್ಯ ಅಭಿವ್ಯಕ್ತಿಯಲ್ಲಿ ಸತತವಾಗಿ ಮುಂಬರಿಯುವ ಅವಕಾಶವನ್ನೊದಗಿಸುವ ಅತಿ ಮುಖ್ಯವಾದ ಸ್ಥಿತಿಸ್ಥಾಪಕತೆ ಹಾಗೂ ಪ್ರೇರ್ಯತೆ ಇರಬೇಕು. ಒಂದು ಸಂಸ್ಕೃತಿ ಈ ಗುರಿಗಳ ಸಾಧನೆಗೆ ನೆರವಾಗದೆ ಹೋದರೆ ಸಂಪೂರ್ಣ ಹಾಗೂ ಸರ್ವಾಂಗ ಸಮನ್ವಿತ ಮೂಲ್ಯವೊಂದು ತನ್ನಲ್ಲಿದೆ ಎಂಬ ಅದರ ಹೇಳಿಕೆಯಿಂದ ಅದನ್ನು ಗಂಭೀರವಾಗಿ ದೂರ ಇಡುವ ಒಂದು ದೋಷ ಅದರ ಮೂಲಭೂತ ಕಲ್ಪನೆಗಳ, ಅದರ ಸಮಗ್ರತೆಯ ಅಥವಾ ಅದರ ಪ್ರಯೋಗದ ಯಾವುದಾದರೊಂದು ಎಡೆಯಲ್ಲಿ ಅಡಗಿದೆ ಎಂಬುದು ಸುಸ್ಪಷ್ಟ. ಭಾರತೀಯ ಸಮಾಜದ ಸತ್ವ ಮತ್ತು ಸ್ವರೂಪಗಳನ್ನು ನಿಯಂತ್ರಿಸಿದ ಧ್ಯೇಯಗಳು ಅತ್ಯುನ್ನತ ಬಗೆಯವಾಗಿದ್ದವು. ಅದರ ಸಾಮಾಜಿಕ ವ್ಯವಸ್ಥೆಯು ಅಳಿಸಲಶಕ್ಯವಾದ ಮೌಲಿಕ ಸ್ತಿಮಿತತೆಯನ್ನು ಸಾಧಿಸಿತು. ಅದರಲ್ಲಿ ಕಾರ್ಯಗತವಾಗಿದ್ದ ಶ್ರೇಷ್ಠ ಜೀವಸತ್ವವು ಅಸಾಧಾರಣ ಶಕ್ತಿಯನ್ನು ನಿರ್ಮಿಸುವಂಥದಾಗಿತ್ತು, ಅನುಪಮ ಸಂಪನ್ನತೆಯನ್ನು ಸದಾಸಕ್ತಿಯನ್ನೂ ಹುಟ್ಟಿಸುವಂಥಾಗಿತ್ತು. ಅದು ಸಂಘಟಿಸಿದ ಜೀವನವು ಐಶ್ವರ್ಯದಲ್ಲೂ ಐಕ್ಯಗತ ವೈವಿಧ್ಯದಲ್ಲೂ, ಅಂದದಲ್ಲೂ, ಉತ್ಪಾದಕತೆಯಲ್ಲೂ ಚಟುವಟಿಕೆಯಲ್ಲೂ

ಗಣ್ಯವಾಗಿತ್ತು. ಭಾರತೀಯ ಇತಿಹಾಸದ, ಕಲೆಯ ಹಾಗೂ ಸಾಹಿತ್ಯದ ಎಲ್ಲ ದಾಖಲೆಗಳೂ ಈ ಬಗೆಯ ಸಾಂಸ್ಕೃತಿಕ ಜೀವನಕ್ಕೆ ಸಾಕ್ಷಿಯಾಗಿವೆ. ಅವನತಿಯಲ್ಲೂ ಕ್ಷೀಣದಶೆಯಲ್ಲೂ ಎಷ್ಟೇ ಅಸ್ಪಷ್ಟವಾಗಿಯಾಗಲಿ ನಮಗೆ ಪ್ರಾಚೀನ ವೈಭವವನ್ನು ನೆನಪಿಗೆ ತಂದು ಕೊಡಲು ಅದರ ಕೆಲ ಕುರುಹುಗಳೂ ಉಳಿದಿವೆ. ಹಾಗಿದ್ದರೆ ಜೀವಸತ್ವದ ನಾಯಕ ಶಕ್ತಿಯಾಗಿ ನಿಂತ ಭಾರತೀಯ ಸಂಸ್ಕೃತಿಯ ವಿರುದ್ಧ ಎತ್ತಿದ ಆರೋಪಕ್ಕೆ ಏನು ಅರ್ಥ? ಮತ್ತು ಅದರ ಸಮರ್ಥನೆಯೆಂತು? ಅತಿ ರಂಜಿತ ರೂಪದಲ್ಲಿ ಆ ಆರೋಪವು ಅವನತಿ ಹೊಂದುತ್ತಿರುವ, ಛಿದ್ರವಾಗುತ್ತಿರುವ ಸಂಸ್ಕೃತಿಯ ಲಕ್ಷಣಗಳನ್ನು ಆಧರಿಸಿ ನಿಂತಿದೆ. ದುಃಸ್ಥಿತಿಯ ಲಕ್ಷಣಗಳನ್ನು ಸುಸ್ಥಿತಿಯ ಕಾಲಕ್ಕೆ ಅನ್ವಯಿಸಲಾಗಿದೆ. ಅದರ ಅರ್ಥವಿಷ್ಟೆ: ಭಾರತವು ಎಂದಿನಿಂದಲೂ ಸ್ವತಂತ್ರವೂ ಭದ್ರವೂ ಆದ ರಾಜಕೀಯ ಸಂಘಟನೆಗೆ ಅನರ್ಹತೆಯನ್ನು ತಾಳಿತ್ತು; ಮತ್ತು ಅದು ಯಾವಾಗಲೂ ಛಿನ್ನ-ಭಿನ್ನವೂ ಬಹಳಮಟ್ಟಿಗೆ ಇತಿಹಾಸದುದ್ದಕ್ಕೂ ಪರಾಧೀನ ರಾಷ್ಟ್ರವೂ ಆಗಿತ್ತು; ಅದರ ಅರ್ಥಪದ್ಧತಿಯು ಗತಕಾಲದ ಗುಣಗಳೆನಿತಿದ್ದರೂ-ಸುಧಾರಣೆ ಹೊಂದದ ಯಥಾಸ್ಥಿತಿಯಲ್ಲೇ ಉಳಿಯಿತು. ಅದರಿಂದ ನೂತನ ವಾತಾವರಣದಲ್ಲಿ ದಾರಿದ್ರ್ಯ ಮತ್ತು ಸೋಲುಗಳಿಗೆ ಎಡೆಯುಂಟಾಯಿತು; ಮತ್ತು ಭಾರತೀಯ ಸಮಾಜದಲ್ಲಿ ಅಪ್ರಗತಿಪರ ನೀಚೋಚ್ಚಭಾವನೆ, ಜಾತೀಯತೆ ಹಾಗೂ ಅನಾಗರಿಕ ನಡೆವಳಿಕೆಗಳೂ ಸಂಭವಿಸಿದವು. ಭಾರತೀಯ ಸಂಸ್ಕೃತಿಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಅಂಶಗಳು ಹಳೆಯ ಹಾಳಿನೊಡನೆ ಎಸೆಯಲು ಯೋಗ್ಯ; ಅವುಗಳ ಸ್ಥಾನದಲ್ಲಿ ಯುರೋಪಿಯನ್ನರ ಸಾಮಾಜಿಕ ವ್ಯವಸ್ಥೆಯ ಅನಿರ್ಬಂಧ, ಭದ್ರತೆ ಮತ್ತು ಪೂರ್ಣತೆ ಅಥವಾ ಕೊನೆಯ ಪಕ್ಷ ಪ್ರಗತಿಪರ ಪೂರ್ಣತೆ ಇವನ್ನು ಸ್ಥಾಪಿಸಬೇಕು. ವಸ್ತುಸ್ಥಿತಿಯನ್ನೂ ಅದರ ಅರ್ಥವನ್ನೂ ಮತ್ತೆ ದೃಢಪಡಿಸುವುದು ಅವಶ್ಯಕ; ಅನಂತರ ಪೂರ್ವೋಕ್ತ ಅಂಶಗಳ ಯೋಗ್ಯತೆಯನ್ನಳೆಯುವುದು ಯುಕ್ತವಾದೀತು.

ಭಾರತೀಯರ ರಾಜಕೀಯ ಅಸಮರ್ಥತೆಯ ಅಜ್ಞಿಕತೆ ಹುಟ್ಟಿದ್ದು ಐತಿಹಾಸಿಕ ಸಂಗತಿಗಳ ಅಸತ್ಯ ಅವಲೋಕನದಿಂದ, ದೇಶದ ಗತೇತಿಹಾಸದ ಅಪರಿಪೂರ್ಣ ಜ್ಞಾನದಿಂದ, ಭಾರತವು ಆದ್ಯ ಆರ್ಯ ಅಥವಾ ವೇದ ಕಾಲದ ಸಾಮಾಜಿಕ ಮತ್ತು ರಾಜಕೀಯ ಸಂಘಟನೆಯ ಸ್ವತಂತ್ರತರ ರೀತಿನೀತಿಗಳಿಂದ ಒಮ್ಮೆಲೇ ಬ್ರಾಹ್ಮಪ್ರಭುತ್ವಕ್ಕೂ ರಾಜಕೀಯವಾಗಿ ಪೌರಸ್ತ್ಯರ-ಅಂದರೆ ಪಶ್ಚಿಮ ಏಷ್ಯದ ಮಾದರಿಯ ನಿರಂಕುಶ ಪ್ರಭುತ್ವಕ್ಕೂ ತಿರುಗಿತು. ಮತ್ತು ಅಂದಿನಿಂದಲೂ ಈ ಎರಡರ ನಡುವೆ ಸಿಕ್ಕಿಕೊಂಡೇ ಇದೆ ಎಂದು ಇತ್ತೀಚೆಗೆ ಬಹುವಾಗಿ ನಂಬಲಾಗಿದೆ. ಆದರೆ ಸೂಕ್ಷ್ಮವೂ ಪ್ರೌಢವೂ ಆದ ಪಾಂಡಿತ್ಯವು ಭಾರತೇತಿಹಾಸದ ಇಂತಹ ಸ್ಥೂಲಾವಲೋಕನವನ್ನು ತಪ್ಪೆಂದು ಮತ್ತು ವಸ್ತುಸ್ಥಿತಿ ಇದಕ್ಕೆ ವಿರುದ್ಧವಾಗಿದೆ ಎಂದು ತೋರಿಸಿಕೊಟ್ಟಿದೆ. ಭಾರತವು ಲೋಭಗ್ರಸ್ತವೂ ದುರ್ಭರವೂ ಆದ ಉದ್ಯಮವಾದವನ್ನಾಗಲಿ, ಸ್ವಾತಂತ್ರ್ಯದ ಪಾರ್ಲಿಮೆಂಟರಿ ಸಂಘಟನೆಯನ್ನಾಗಲಿ ಯುರೋಪಿಯನ್ನರ ಪ್ರಗತಿಯ ಬೂರ್ಜ್ವ

ಅಥವಾ ವೈಶ್ಯಯುಗದ ಲಕ್ಷಣವುಳ್ಳ ಸ್ವಯಂಕೃತ ನಾಮಧೇಯವುಳ್ಳ ಪ್ರಜಾಪ್ರಭುತ್ವವನ್ನಾಗಲಿ ಎಂದೂ ವಿಕಾಸಗೊಳಿಸಿಕೊಳ್ಳಲಿಲ್ಲ ಎಂಬುದು ನಿಜ. ಇವೆಲ್ಲ ಆದರ್ಶ ಸ್ಥಿತಿ ಮತ್ತು ರಾಜಕೀಯ ಸಾಮಾಜಿಕ ಪ್ರಗತಿಯ ಕೊನೆಯ ಸಿದ್ಧಾಂತ ಎಂಬ ವಿಚಾರಹೀನ ಪ್ರಶಂಸೆಯ ಕಾಲ ಕಳೆದು ಹೋಗುತ್ತಲಿದೆ, ಮತ್ತು ಅವುಗಳ ನ್ಯೂನತೆಗಳು ಗೋಚರಕ್ಕೆ ಬರುತ್ತಲಿವೆ. **ಪೌರಸ್ತ್ಯ ಸಂಸ್ಕೃತಿಯ ಹಿರಿಮೆಯನ್ನು ಪಾಶ್ಚಾತ್ಯರ ಅಭಿವೃದ್ಧಿಯ ಮಾನದಂಡದಿಂದ ಅಳೆಯ ಬೇಕಾದ ಕಾರಣವಿಲ್ಲ.** ಭಾರತೀಯ ಪೂರ್ವೇತಿಹಾಸದಲ್ಲಿ ಸ್ವದೇಶೀಯ ವಿದ್ವಾಂಸರು ಆಧುನಿಕ ಕಲ್ಪನೆಗಳನ್ನೂ ಪ್ರಜಾಪ್ರಭುತ್ವದ ಪ್ರಭೇಧಗಳನ್ನೂ ಅಷ್ಟೇ ಏಕೆ, ಪಾರ್ಲಿಮೆಂಟರಿ ಪದ್ಧತಿಯನ್ನೂ ಕಾಣಹೋಗಿದ್ದಾರೆ. ಆದರೆ ಇದು ಅವಿವೇಕದ ಪ್ರಯತ್ನವೆಂದು ತೋರುತ್ತದೆ. ಭಾರತೀಯ ರಾಜ್ಯಧರ್ಮದಲ್ಲಿ, ಪಾಶ್ಚಾತ್ಯ ಪರಿಭಾಷೆಯಲ್ಲಿ ಹೇಳಬೇಕಾದರೆ, ಒಂದು ಬಲಿಷ್ಠ ಪ್ರಜಾಸತ್ತಾತ್ಮಕ ಅಂಶವೂ ಅಲ್ಲದೆ ಪಾರ್ಲಿಮೆಂಟರಿ ಸ್ವರೂಪವನ್ನು ಕೆಲಮಟ್ಟಿಗೆ ಹೋಲುವ ಸಂಸ್ಥೆಗಳೂ ಇದ್ದವು; ಆದರೆ ವಾಸ್ತವಿಕವಾಗಿ ಈ ಲಕ್ಷಣಗಳೆಲ್ಲ ಭಾರತದವೇ ಆಗಿದ್ದವಲ್ಲದೆ ಇಂದಿನ ಪ್ರಜಾಪ್ರಭುತ್ವವೇ ಅಥವಾ ಪಾರ್ಲಿಮೆಂಟುಗಳೇ ಆಗಲಿ ಆಗಿರಲಿಲ್ಲ. ಹೀಗೆ ಗಣಿಸಿದರೆ ರಾಷ್ಟ್ರದ ಸಾಮಾಜಿಕ ಸತ್ವ ಮತ್ತು ಸ್ವರೂಪಗಳ ಸಮಷ್ಟಿಗೆ ಹೊಂದಿಕೊಳ್ಳುವುದರಲ್ಲಿ ಭಾರತೀಯರು ತೋರಿದ ರಾಜಕೀಯ ದಕ್ಷತೆಗೆ ಅವು ಇನ್ನೂ ಶ್ಲಾಘ್ಯ ಸಾಕ್ಷಿಯಾದಾವು. ಹಾಗಲ್ಲದೆ ಪಾಶ್ಚಾತ್ಯ ಸಮಾಜದ ಮತ್ತು ಅದರ ಸಾಂಸ್ಕೃತಿಕ ಆವೃತ್ತಿಯ ಅವಶ್ಯಕತೆಗಳ ತೀರ ಭಿನ್ನವಾದ ಮಾನದಂಡದಿಂದ ಅಳೆದರೆ ಅಷ್ಟು ಸರಿಯಾಗಲಾರದು.

## ೨. ಭಾರತೀಯ ರಾಜ್ಯಪದ್ಧತಿಯ ಆರಂಭದಶೆ

ಆರ್ಯ ಜನಾಂಗಗಳ ಪ್ರಾಚೀನ ಇತಿಹಾಸಕ್ಕೆ ಸಂಬಂಧಿಸಿದ್ದೆಂದು ಸಾಮಾನ್ಯವಾಗಿ ತಿಳಿಯಲಾಗುವ ಮಾದರಿಯ ಒಂದು ಪ್ರಭೇದದಲ್ಲಿ ಭಾರತೀಯ ಪದ್ಧತಿಯು ಪ್ರಾರಂಭವಾಯಿತು. ಆದರೆ ಕೆಲವು ಲಕ್ಷಣಗಳು ಹೆಚ್ಚು ಸಾಧಾರಣಾಂಶಗಳುಳ್ಳವಾಗಿವೆ ಮತ್ತು ಮಾನವಕುಲದ ಸಾಮಾಜಿಕ ಬೆಳವಣಿಗೆಯ ಇನ್ನೂ ಹಿಂದಿನ ಅವಸ್ಥೆಗೆ ಸೇರಿದಂಥವುಗಳೆನಿಸುತ್ತವೆ. ಅದು ಒಂದು ವಂಶ ಅಥವಾ ಗೋತ್ರದ ಎಲ್ಲ ಸ್ವತಂತ್ರ ಜನರ ಸಮಾನತೆಯನ್ನು ಆಧರಿಸಿದ 'ಕುಲ'ವಾಗಿತ್ತು; ಇದು ಪ್ರಥಮದಲ್ಲಿ ಪ್ರಾದೇಶಿಕ ತಳಹದಿಯ ಮೇಲೆ ರೂಢಮೂಲವಾಗಿ ನಿಂತಿರಲಿಲ್ಲ; ವಲಸೆ ಹೋಗುವ ಪ್ರವೃತ್ತಿಯು ಇನ್ನೂ ರೂಢಿಯಲ್ಲಿತ್ತು ಅಥವಾ ಒತ್ತಾಯದ ಸನ್ನಿವೇಶದಲ್ಲಿ ಪದೇ ಪದೇ ತಲೆದೋರುತ್ತಿತ್ತು ಎನ್ನಬಹುದು ಮತ್ತು ಆ ಪ್ರದೇಶಕ್ಕೆ ಅದನ್ನು ಆಕ್ರಮಿಸಿದವರ ಹೆಸರೇ ಇರುತ್ತಿತ್ತು:– ಕುರುದೇಶ ಅಥವಾ ಬರಿದೆ ಕುರುಗಳು, ಮಾಳವದೇಶ ಅಥವಾ ಮಾಳವರು ಎಂಬಂತೆ, ನಿಶ್ಚಿತವಾದ ಗಡಿಗಳಲ್ಲಿ ಸ್ಥಿರವಾಗಿ ನೆಲೆಸುವುದು ರೂಢಿಗೆ ಬಂದನಂತರವೂ ವಂಶ ಅಥವಾ ಗೋತ್ರದ ಪದ್ಧತಿಯು ಮುಂಬರಿಯಿತು. ಆದರೆ

ಅದು ಸ್ಥಿರಗ್ರಾಮ ಸಮುದಾಯದ ಒಂದು ಮೌಲಿಕ ಅಂಶವಾಯಿತು. ಸಾಮುದಾಯಿಕ ವಿಚಾರ ವಿನಿಮಯಕ್ಕೆ, ಯಜ್ಞಕ್ಕೆ, ಪೂಜೆ ಪುರಸ್ಕಾರಗಳಿಗೆ ಅಥವಾ ಯುದ್ಧದ ಆಹ್ವಾನಕ್ಕೆಂದು ಸಭೆ ಸೇರುವ 'ವಿಶ'ರು ಬಹಳ ಕಾಲದವರೆಗೆ ಸಾಮಾನ್ಯ ಜನತೆಯ ಅಧಿಕಾರದ ಸಂಕೇತವೂ, ದೊರೆ ಉಚ್ಚಾಧಿಕಾರಿಯೂ ಪ್ರತಿನಿಧಿಯೂ ಆಗಿ ಉಳ್ಳ ಸಾಮಾನ್ಯ ವ್ಯಾವಹಾರಿಕ ಜೀವನದ ನಾಯಕಶಕ್ತಿಯೂ ಆಗಿದ್ದರು; ಆದರೆ ದೊರೆತನವು ಅನುವಂಶಿಕವೆನಿಸಿದಮೇಲೂ ಬಹುಕಾಲ ಔಪಚಾರಿಕ ಚುನಾವಣೆ ಅಥವಾ ಒಪ್ಪಿಗೆಗಾಗಿ ಜನಸಮ್ಮತಿಯನ್ನವಲಂಬಿಸಿತ್ತು. ಯಜ್ಞದ ಧಾರ್ಮಿಕ ಸಂಸ್ಥೆಯು ಅದೇ ಹೊತ್ತಿಗೆ ಉದಯಿಸಿ ಋತ್ವಿಜರ ಮತ್ತು ಋಷಿಗಳ ಒಂದು ವರ್ಗವನ್ನೇ ನಿರ್ಮಿಸಿತು. ಅವರು ಧರ್ಮ ಕರ್ಮ ನಿಪುಣರು ಅಥವಾ ಯಜ್ಞಯಾಗಾದಿಗಳ ಸಂಕೇತಗಳಲ್ಲಿಯ ರಹಸ್ಯ ಜ್ಞಾನವನ್ನರಿತವರು ಎನಿಸಿದ್ದರು. ಅವರೇ ಮಹಾ ಬ್ರಾಹ್ಮಣ ಸಂಸ್ಥೆಯ ಬೀಜವೆನಿಸಿದರು. ಇವರ ಸ್ಥಾನವು ಪ್ರಥಮದಲ್ಲಿ ಆನುವಂಶಿಕವಾಗಿರಲಿಲ್ಲ, ಅಲ್ಲದೆ ಇವರು ಇನ್ನಿತರ ಉದ್ಯೋಗಗಳನ್ನೂ ಮಾಡುತ್ತಿದ್ದರು. ಮತ್ತು ಇವರು ನಿತ್ಯ ಜೀವನದಲ್ಲಿ ಸಾಮಾನ್ಯ ಜನತೆಯಲ್ಲಿ ಒಂದಾಗಿದ್ದರು. ಈ ಸ್ವತಂತ್ರವೂ, ಸರಳವೂ, ಸ್ವಾಭಾವಿಕವೂ ಆದ ಸಮಾಜ ರಚನೆಯು ಮೊಟ್ಟಮೊದಲು ಇಡೀ ಆರ್ಯ ಭಾರತದಲ್ಲಿ ಸಾರ್ವತ್ರಿಕವಾಗಿತ್ತೆಂದು ತೋರುತ್ತದೆ.

## ೩. ಆನುವಂಶಿಕ ದೊರೆತನದ ಉದಯ

ಈ ಸಂಘಟನೆಯ ಸ್ವರೂಪದ ಅನಂತರದ ಬೆಳವಣಿಗೆಯು ಮಿಕ್ಕ ಜನಾಂಗಗಳ ವಿಕಾಸದ ರೀತಿಯನ್ನೇ ಅನುಸರಿಸಿದರೂ ತನ್ನದೇ ಆದ ಕೆಲ ಗುಣವಿಶೇಷಗಳನ್ನು ಹೊರಚೆಲ್ಲಿತು. ಆರ್ಯ ಕುಲದ ಅಸಾಧಾರಣ ಮನೋಭೂಮಿಕೆಗೆ ಅನುಗುಣವಾಗಿ ಈ ವಿಶೇಷ ಗುಣಗಳು ಭದ್ರವಾಗಿ ನೆಲೆನಿಂತು ಭಾರತೀಯ ನಾಗರಿಕತೆಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಅಂಶಗಳಿಗೆ ಒಂದು ಭಿನ್ನ ಸ್ವರೂಪವನ್ನೇ ಕೊಟ್ಟವು. ಆನುವಂಶಿಕ ತತ್ವವು ಅತಿ ಮೊದಲಿನ ಅವಸ್ಥೆಯಲ್ಲೇ ಉದಯಿಸಿ ಸತತವಾಗಿ ಸಮಾಜದ ಮೇಲೆ ತನ್ನ ಅಧಿಕಾರ ಹಿಡಿತಗಳನ್ನು ಬೆಳೆಸಿಕೊಂಡು ಎಲ್ಲೆಲ್ಲೂ ಅದರ ಚಟುವಟಿಕೆಗಳ ಇಡೀ ಸಂಘಟನೆಯ ತಳಹದಿಯೆನಿಸಿತು. ಆನುವಂಶಿಕ ಅರಸೊತ್ತಿಗೆಯೂ ದೃಢಪಟ್ಟಿತು; ಬಲಿಷ್ಠವಾದ ಕ್ಷಾತ್ರವರ್ಗವು ಉದಯಿಸಿತು; ಮಿಕ್ಕೆಲ್ಲರೂ ಒಕ್ಕಲಿಗರು, ವ್ಯಾಪಾರಸ್ಥರು ಮತ್ತು ಕಸುಬುದಾರರು ಎಂಬುದಾಗಿ ಪರಿಗಣಿಸಲ್ಪಟ್ಟರು; ಕಾಲಾನಂತರದಲ್ಲಿ ಆರ್ಯರ ವಿಜಯದ ಫಲವಾಗಿಯೋ ಹೆಚ್ಚು ಸಂಭವವಾಗಿ ಅಥವಾ ಸಾಮಾನ್ಯವಾಗಿ ಆರ್ಥಿಕ ಅವಶ್ಯಕತೆಗಳಿಂದಲೋ ಸೇವಕರ ಹಾಗೂ ಕೂಲಿಕಾರರ ಶೂದ್ರ ವರ್ಗವೊಂದು ಅವಕ್ಕೆ ಸೇರಿಸಲ್ಪಟ್ಟಿತು. ಪುರಾತನ ಕಾಲದಿಂದಲೂ ಭಾರತೀಯರಲ್ಲಿ ಸ್ವಾಭಾವಿಕವಾಗಿ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಪ್ರವೃತ್ತಿಗಳು ಪ್ರಧಾನವಾಗಿದ್ದುದರ ಫಲವಾಗಿ ಭಾರತೀಯ

ಸಮಾಜದ ಮೇಲಿನ ಹಂತದಲ್ಲಿ ಋತ್ವಿಜರ, ಪಂಡಿತರ, ಧರ್ಮಶಾಸ್ತ್ರಜ್ಞರ, ಶ್ರೋತ್ರಿಯರ ಒಂದು ಬ್ರಹ್ಮವರ್ಗವು ಬೆಳೆದು ನಿಂತಿತು. ಈ ರೀತಿಯ ಬೆಳವಣಿಗೆಯು ಮಿಕ್ಕೆಡೆಗಳಲ್ಲಿ ಕಾಣಬರುವುದಾದರೂ ಈ ನಾಡು ಅದಕ್ಕೆ ಅಸದೃಶ ಸಾತತ್ಯ, ನಿಶ್ಚಿತತೆ ಮತ್ತು ಶ್ರೇಷ್ಠತೆಗಳನ್ನು ಕಲ್ಪಿಸಿಕೊಟ್ಟಿತು. ಇಷ್ಟು ಜಟಿಲ ಮನೋಧರ್ಮವಿಲ್ಲದ ಬೇರೆಯ ದೇಶಗಳಲ್ಲಿ ಈ ಪ್ರಾಧಾನ್ಯವು ಮತೀಯ ಪ್ರಭುತ್ವಕ್ಕೆ ಎಡೆಗೊಡುತ್ತಿತ್ತು; ಆದರೆ ಭಾರತದಲ್ಲಿ ತಮ್ಮ ಅಧಿಕಾರವು ನಿತ್ಯವೂ ವೃದ್ಧಿಹೊಂದಿ ಕೊನೆಯಲ್ಲಿ ಗಣ್ಯವಾಗಿ ನಿಂತರೂ ಬ್ರಾಹ್ಮಣರ ರಾಜ್ಯಾಧಿಕಾರವನ್ನು ವಶಪಡಿಸಿಕೊಳ್ಳಲಿಲ್ಲ. ವಶಪಡಿಸಿಕೊಳ್ಳುವಂತೆಯೂ ಇರಲಿಲ್ಲ. ರಾಜನ ಮತ್ತು ಜನರ ಆಧ್ಯಾತ್ಮಿಕ ಗುರುಗಳಾಗಿಯೂ, ಧರ್ಮಾಧಿಕಾರಿಗಳಾಗಿಯೂ, ಪುರೋಹಿತರಾಗಿಯೂ ಅವರು ಬಹು ಪ್ರಭಾವವನ್ನು ಬೀರುತ್ತಿದ್ದರು. ಆದರೆ ವ್ಯವಹಾರದಲ್ಲಿ ನಿಜವಾದ ರಾಜ್ಯಶಕ್ತಿಯು ರಾಜನಲ್ಲಿಯೂ, ಕ್ಷತ್ರಿಯ ಮನೆತನದಲ್ಲೂ ಮತ್ತು ಮಹಾಜನಗಳಲ್ಲಿಯೂ ನೆಲೆಸಿದ್ದಿತು.

ಕೆಲವು ಕಾಲದವರೆಗೆ ಋಷಿಯ ಒಂದು ವಿಶಿಷ್ಟ ವ್ಯಕ್ತಿತ್ವವು ಎದ್ದು ಕಾಣುತ್ತಿತ್ತು. ಅವನು ಹೆಚ್ಚಿನ ಆಧ್ಯಾತ್ಮಿಕ ಅನುಭವ ಮತ್ತು ಜ್ಞಾನಗಳನ್ನು ಹೊಂದಿವನಾಗಿದ್ದನು; ಯಾವುದೇ ವರ್ಣದಲ್ಲಿ ಹುಟ್ಟಿದ್ದರೂ ಎಲ್ಲರ ಮೇಲೂ ತನ್ನ ತೇಜಸ್ಸಿನಿಂದ ಪ್ರಭಾವಿಯಾಗಿದ್ದನು. ಮತ್ತು ಎಲ್ಲ ವಿಷಯಗಳಲ್ಲೂ ರಾಜನು ಅವನ ಸಲಹೆಗಳನ್ನು ತೆಗೆದುಕೊಳ್ಳುತ್ತಿದ್ದನು. ಕೆಲವೆಡೆ ಆತ ರಾಜಗುರುವೂ ಆಗಿರುತ್ತಿದ್ದನು; ಅಲ್ಲದೆ ಇಂದಿನ ಸಾಮಾಜಿಕ ವಿಕಾಸದ ಶಿಥಿಲ ಅವಸ್ಥೆಯಲ್ಲಿ ಹೊಸ ಮೂಲ ಕಲ್ಪನೆಗಳನ್ನು ಕಲ್ಪಿಸುವುದರಲ್ಲಿಯೂ ಜನತೆಯ ಧಾರ್ಮಿಕ–ಸಾಮಾಜಿಕ ಭಾವನೆ ಮತ್ತು ರೂಢಿಗಳಲ್ಲಿ ನೇರವಾದ ಹಾಗೂ ಶೀಘ್ರ ಬದಲಾವಣೆಗಳನ್ನು ತರುವುದರಲ್ಲಿಯೂ ಅವನೊಬ್ಬನೇ ಮುಖ್ಯ ಪಾತ್ರವನ್ನು ವಹಿಸಬಲ್ಲವನಾಗಿದ್ದನು. ಪ್ರತಿ ವಿಷಯಕ್ಕೂ ಆಧ್ಯಾತ್ಮಿಕಾರ್ಥವನ್ನೂ ಶಾಸ್ತ್ರಾಧಾರವನ್ನೂ ನಿರೂಪಿಸುವುದು ಭಾರತೀಯ ಮನೋಧರ್ಮದ ಮುಖ್ಯ ಲಕ್ಷಣವಾಗಿದ್ದಿತು. ಪ್ರತಿವರ್ಣಕ್ಕೂ, ಪ್ರತಿ ಕರ್ಮಕ್ಕೂ ಹಕ್ಕು–ಬಾಧ್ಯತೆಗಳಿಗೂ ಒಂದು ಧ್ಯೇಯವನ್ನೂ, ಕಾರ್ಯನಿಯಮವನ್ನೂ, ಆದರ್ಶ ಮಾರ್ಗವನ್ನೂ ಮನೋಭಾವ–ವಿಶಿಷ್ಟಗುಣ–ಕಾರ್ಯಗತ ತತ್ವಗಳನ್ನೂ ಅರ್ಥಾತ್ ಆಧ್ಯಾತ್ಮಿಕ ಪ್ರಾಧಾನ್ಯವುಳ್ಳ ಒಂದು ಧರ್ಮವನ್ನೂ ಹೇಳುವುದೇ ಆ ಲಕ್ಷಣ. ರಾಷ್ಟ್ರೀಯ ಚಿತ್ತಭಿತ್ತಿಯ ಮೇಲೆ ಚಿರಸ್ಥಾಯಿಯಾಗಿ ಇದನ್ನು ಮುದ್ರಿಸುವುದು, ಅದನ್ನು ಬೆಳೆಸಿ ಅಜರಾಮರಗೊಳಿಸುವುದು, ಆದರ್ಶ ಧರ್ಮವನ್ನು ಕಂಡು ಅದರ ವ್ಯಾವಹಾರಿಕಾರ್ಥವನ್ನು ಹೇಳುವುದು, ಜನತೆಯ ಜೀವನವನ್ನು ಆಧ್ಯಾತ್ಮಿಕ ಹಾಗೂ ಧಾರ್ಮಿಕ ಭಾವನೆಗಳ ಮೇಲೆ ನಿಂತ ನಾಗರಿಕತೆಯ ರೂಪಸಮೃದ್ಧವಾದ ಆದರ್ಶಗಳಲ್ಲಿ ಮತ್ತು ಅರ್ಥವತ್ತಾದ ಆಕೃತಿಗಳಲ್ಲಿ ಎರಕಹೊಯ್ಯುವುದು ಋಷಿಯ ಕೆಲಸವಾಗಿದ್ದಿತು. ಅನಂತರದ ಕಾಲಾವಧಿಗಳಲ್ಲಿ ಆಯಾ ಕಾಲದ ಆಚಾರ ನಿಯಮಗಳ ಸ್ವರೂಪವಾಗಿದ್ದ ತಮ್ಮ ಧರ್ಮಸೂತ್ರಗಳನ್ನು ಬ್ರಾಹ್ಮಣ ಧರ್ಮಶಾಸ್ತ್ರಕಾರರು ಪ್ರಾಚೀನ ಋಷಿಗಳ ಕೃತಿಗಳೆಂದು ಹೇಳಲಾರಂಭಿಸಿದರು. ಅರ್ವಾಚೀನ ಕಾಲದಲ್ಲಿ ಭಾರತೀಯ ಸಾಮಾಜಿಕ ರಾಜಕೀಯ ನಿಕಾಯದ ಬೆಳವಣಿಗೆ

ಹೇಗೇ ಆದರೂ ಕಟ್ಟಕಡೆಗೆ ಎಲ್ಲವೂ ಪರಂಪರಾನಿಷ್ಠವೂ ಸಾಮಯಿಕವೂ ಆಗುವ ಪ್ರವೃತ್ತಿಯನ್ನು ತಳೆದು ಅನಿರ್ಬದ್ಧವೂ ಜೀವಂತವೂ ಆದ ವ್ಯವಹಾರದಲ್ಲಿ ಸತತವೂ ಕ್ರಮವಾಗಿ ಮುಂಬರಿಯುವ ಪ್ರವೃತ್ತಿಯನ್ನು ಕಳೆದುಕೊಂಡಾಗ ಕೂಡ–ಈ ಮೂಲಭೂತ ಲಕ್ಷಣವು ತನ್ನ ಪ್ರಭಾವವನ್ನು ಬೀರುತ್ತಲಿತ್ತು.

# ೪. ಆರ್ಯ ಯುಗದ ವಿವಿಧ ಪ್ರಭುತ್ವಗಳು

ಈ ಆರ್ಯಯುಗದ ಪದ್ಧತಿಯ ರಾಜಕೀಯ ವಿಕಾಸವು ಭಾರತದ ಬೇರೆ ಬೇರೆ ಭಾಗಗಳಲ್ಲಿ ಭಿನ್ನರೂಪದಲ್ಲಾಯಿತು. ಸಾಮಾನ್ಯ ಬೆಳವಣಿಗೆಯಲ್ಲಿ ಬಹುದೇಶಗಳಲ್ಲಾದಂತೆ ಶಾಸನಾಧಿಕಾರಕ್ಕೆ ರಾಜನೇ ಕೇಂದ್ರವಾಗುವತ್ತ ಪ್ರಾಧಾನ್ಯ ಹೆಚ್ಚಿತು; ಅವನೇ ರಾಜ್ಯನೇತೃವೂ ಶಾಸನ–ಪ್ರಶಾಸನಗಳ ಹೆಚ್ಚು ಜಟಿಲವಾದ ಪದ್ಧತಿಯ ಏಕೀಕರಣಶಕ್ತಿಯೂ ಆಗುತ್ತಬಂದನು. ಕ್ರಮೇಣ ಇದೇ ನೆಲೆನಿಂತು ಸಾರ್ವತ್ರಿಕ ಮಾದರಿಯೆನಿಸಿತು. ಆದರೆ ಬಹಳ ಕಾಲದವರೆಗೆ ತದ್ವಿರುದ್ಧ ಪ್ರವೃತ್ತಿಯು ಇದರೊಡನೆ ಹೋರಾಡಿ ಇದನ್ನು ತಡೆಹಿಡಿದುದರ ಫಲವಾಗಿ ಪೌರ ಅಥವಾ ಜಾನಪದ ಇಲ್ಲವೆ ಸಂಯುಕ್ತ, ಸಾಂಘಿಕ ಗಣರಾಜ್ಯಗಳು ಉದಯಿಸಿ ಬಲಿಷ್ಠವಾಗಿ ಚಿರಸ್ಥಾಯಿಯಾದ ಶಕ್ತಿಸಂಪನ್ನತೆಯಿಂದ ಶಾಸನ ಗೈದವು. ರಾಜನು ಗಣರಾಜ್ಯದ ಆನುವಂಶಿಕ ಅಥವಾ ನಿರ್ವಾಚಿತ ಕಾರ್ಯಪಾಲಿಕಾಮುಖ್ಯಸ್ಥ ಅಥವಾ ನಿಯತವಾದ ಅಲ್ಪ ಕಾಲದವರೆಗೆ ಆಡಳಿತ ನಡೆಸುವ ಅಧ್ಯಕ್ಷ ಎನಿಸಿದ್ದ; ಅದೂ ಇಲ್ಲದಲ್ಲಿ ಅವನ ಅಸ್ತಿತ್ವವೇ ರಾಜ್ಯಧರ್ಮದ ಕ್ಷೇತ್ರದಲ್ಲಿ ಇಲ್ಲವಾಯಿತು. ಅನೇಕ ಕಡೆಗಳಲ್ಲಿ ಈ ಸ್ವರೂಪ ಬರಲು ಸಭೆಗಳ ಶಕ್ತಿಯ ಸ್ವಾಭಾವಿಕ ವಿಕಾಸವೇ ಕಾರಣವಾಗಿರಬಹುದು; ಆದರೆ ಉಳಿದ ಕಡೆಗಳಲ್ಲಿ ಹೀಗಾಗಲು ಒಂದಲ್ಲ ಒಂದು ತರದ ಕ್ರಾಂತಿಯೆದ್ದಿರಬೇಕು–ಅದರಿಂದಲೇ ಅಂಥ ಕಡೆಗಳಲ್ಲಿ ರಾಜಪ್ರಭುತ್ವ ಮತ್ತು ಗಣಪ್ರಭುತ್ವಗಳು ಒಂದಾದ ಮೇಲೊಂದರಂತೆ ಬಂದು ಹೋಗಿ ಅದೃಷ್ಟಪರಿವರ್ತನಗಳಾದದ್ದು ಕಂಡುಬರುತ್ತದೆ. ಭಾರತೀಯ ಜನಗಳಲ್ಲಿಯ ಕೆಲವರಲ್ಲಿ ಗಣಪ್ರಭುತ್ವವು ಕೊನೆಯದಾಗಿ ತನ್ನ ಹಿಡಿತವನ್ನು ನೆಲೆಗೊಳಿಸಿ ಬಲಿಷ್ಠವೂ ಸುಸ್ಥಿರವೂ ಆದ ಸಂಘಟನೆಯನ್ನು ಮಾಡಬಲ್ಲೆನೆಂದೂ ಅನೇಕ ಶತಮಾನಗಳವರೆಗೆ ಬದುಕಬಲ್ಲೆನೆಂದೂ ತೋರಿಸಿಕೊಟ್ಟಿತು. ಕೆಲ ಪ್ರದೇಶಗಳಲ್ಲಿಯ ಗಣರಾಜ್ಯಗಳ ಶಾಸನವನ್ನು ಪ್ರಜಾಸತ್ತಾತ್ಮಕ ಸಭೆ ನಡೆಸುತ್ತಿದ್ದರೆ ಮತ್ತೆ ಕೆಲವೆಡೆ ಕೆಲ ವಿಶಿಷ್ಟರ ಸಿನೇಟು ನಡೆಸುತ್ತಿತ್ತು. ಈ ಭಾರತೀಯ ಗಣರಾಜ್ಯಗಳ ಸಂವಿಧಾನದ ವಿವರಗಳಾಗಲಿ ಆಂತರಿಕ ಇತಿಹಾಸದ ಒಂದೇ ಒಂದು ಅಂಶವಾಗಲಿ ನಮಗೆ ತಿಳಿಯದಂತಾಗಿರುವುದು ನಮ್ಮ ದುರ್ದೈವವೇ ಸರಿ. ಆದರೆ ತಮ್ಮ ವ್ಯಾವಹಾರಿಕ ಶಾಸನದ ಸುವ್ಯವಸ್ಥೆಯ ಹಾಗೂ ಸೈನಿಕ ಸಂಘಟನೆಯ ಪ್ರಬಲ ದಕ್ಷತೆಯ ಬಗ್ಗೆ ಅವು ಭಾರತದ ಆದ್ಯಂತವಾಗಿ ಕೀರ್ತಿ ಪಡೆದುದಕ್ಕೆ ಸ್ಫುಟವಾದ ಸಾಕ್ಷಿಗಳಿವೆ. ಗಣರಾಜ್ಯದ ಸಂಸ್ಥೆಗಳು ತಮ್ಮ ಶುದ್ಧತೆಯನ್ನೂ ಸಾಮರ್ಥ್ಯವನ್ನೂ ಉಳಿಸಿಕೊಂಡಿರುವವರೆಗೆ ಎಷ್ಟು ಚಿಕ್ಕ

ಗಣರಾಜ್ಯವಿದ್ದರೂ ಅದನ್ನು ಪ್ರಬಲವೂ ಮಹತ್ವಾಕಾಂಕ್ಷೆಯುಳ್ಳದ್ದೂ ಆದ ಮಾಗಧ ರಾಜಪ್ರಭುತ್ವವು ಬಲಪ್ರಯೋಗದಿಂದ ಸೋಲಿಸಲಾರದು ಎಂಬ ಕುತೂಹಲಜನಕವಾದ ಒಂದು ಬುದ್ಧಸೂಕ್ತಿಯಿದೆ. ಈ ಅಭಿಪ್ರಾಯವನ್ನು ರಾಜಕೀಯ ಬರೆಹಗಾರರು ದೃಢಪಡಿಸಿದ್ದಾರೆ. ಅವರ ಪ್ರಕಾರ ಗಣರಾಜ್ಯಗಳ ಮೈತ್ರಿಯು ರಾಜನಿಗಿರಬಲ್ಲ ಅತ್ಯಂತ ಸುಭದ್ರವೂ ಅಮೂಲ್ಯವೂ ಆದ ರಾಜಕೀಯ ಹಾಗೂ ಸೈನಿಕ ಬೆಂಬಲ; ಅವನ್ನು ರಾಜನು ಬಲಪ್ರಯೋಗದಿಂದ ಹಣಿಯಬಾರದು, ಹಾಗೆ ಮಾಡಹೋದರೆ ಜಯ ಸಂಶಯಾಸ್ಪದ; ಮ್ಯಾಸಿಡೋನಿನ ಫಿಲಿಪ್ಪನಂತೆ ಅವುಗಳ ಆಂತರಿಕ ಐಕ್ಯವನ್ನೂ ಸಂವಿಧಾನದ ಕಾರ್ಯದಕ್ಷತೆಯನ್ನೂ ಭಂಗಗೊಳಿಸುವ ಉದ್ದೇಶವುಳ್ಳ ಮೆಕೆವಿಲಿತಂತ್ರವನ್ನು ಬಳಸಿಯೇ ಹಣಿಯಬೇಕು ಎಂಬುದು ರಾಜನಿಗೆ ಅವರ ಉಪದೇಶ.

## ೫. ಗಣರಾಜ್ಯಗಳು

ಈ ಗಣರಾಜ್ಯಗಳು ಕ್ರಿ.ಶ.ಆರನೆಯ ಶತಮಾನದ ಹೊತ್ತಿಗೆ ಆಗಲೇ ಸುದೀರ್ಘಕಾಲ ಬಾಳಿ ಬದುಕಿ ಸುಪ್ರತಿಷ್ಠಿತವಾಗಿದ್ದವು, ಅಂದರೆ ಪ್ರಭಾವ ಶಾಲಿಗಳಾದರೂ ಅಲ್ಪಾಯುಗಳಾದ ಗ್ರೀಕ್ 'ಸಿಟಿ ಕಾಮನ್‌ವೆಲ್ತ್' ಅಥವಾ ನಗರರಾಜ್ಯಗಳಿಗೆ ಸಮಕಾಲೀನದವಾಗಿದ್ದವು. ಆದರೆ ಭಾರತದಲ್ಲಿ ಈ ರೂಪದ ರಾಜಕೀಯ ಸ್ವಾತಂತ್ರ್ಯವು ಗ್ರೀಕ್ ಗಣರಾಜ್ಯಸ್ವಾತಂತ್ರ್ಯಕ್ಕಿಂತ ಹೆಚ್ಚು ಕಾಲ ಬದುಕಿತು. ರಾಜಕೀಯ ನವನಿರ್ಮಾಣ ಪ್ರತಿಭೆಯಲ್ಲಿ ಕಡಿಮೆ ಫಲವತ್ತೆಯಿಲ್ಲದ ಪ್ರಾಚೀನ ಭಾರತೀಯ ಬಗೆಯು ಸುದೃಢ ಸಂಘಟನೆ ಹಾಗೂ ಸುಸ್ಥಿರ ಸಾಂವಿಧಾನಿಕ ವ್ಯವಸ್ಥೆಗಳನ್ನು ತರುವುದರಲ್ಲಿ ಪಾರದಬುದ್ಧಿಯ ಚಂಚಲ ಭಾವದ ಭೂಮಧ್ಯ ಸಮುದ್ರ ಪ್ರದೇಶದ ಜನತೆಯ ಬಗೆಗಿಂತ ಹೆಚ್ಚಿನದೆನ್ನಬೇಕು. ಈ ಗಣರಾಜ್ಯಗಳಲ್ಲಿ ಕೆಲವು ಗಣರಾಜ್ಯದಶೆಯ ರೋಮಿಗಿಂತ ಹೆಚ್ಚುಕಾಲಾವಧಿಯ ಹಾಗೂ ಸುದೃಢ ಸ್ಥಿತಿಯ ಪ್ರಭಾವಿಯಾದ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದವು. ಹೇಗೆಂದರೆ ಅವು ಚಂದ್ರಗುಪ್ತ ಮತ್ತು ಅಶೋಕರ ಬಲಿಷ್ಠ ಸಾಮ್ರಾಜ್ಯಗಳನ್ನು ಎದುರಿಸಿ ಕ್ರಿಸ್ತಶಕದ ಮೊದಲ ಶತಮಾನಗಳವರೆಗೂ ಉಳಿದುಕೊಂಡಿದ್ದವು. ಆದರೆ ಅವುಗಳಲ್ಲೊಂದೂ ರೋಮಿನ ಗಣರಾಜ್ಯದ ಅಕ್ರಾಮಕ ಭಾವನೆಯನ್ನಾಗಲಿ ದಿಗ್ವಿಜಯ ಹಾಗೂ ವಿಶಾಲ ಸಂಘಟನೆಯ ಶಕ್ತಿಯನ್ನಾಗಲಿ ಬೆಳೆಸಿಕೊಳ್ಳಲಿಲ್ಲ; ತಮ್ಮ ಸ್ವತಂತ್ರ ಆಂತರಿಕ ಜೀವನವನ್ನೂ ರಾಜಕೀಯ ಸ್ವಾಧೀನತೆಯನ್ನೂ ಉಳಿಸಿಕೊಂಬುದರಲ್ಲೇ ಅವು ತೃಪ್ತವಾಗಿದ್ದವು. ಅಲೆಕ್ಸಾಂಡರನ ದಾಳಿಯ ಬಳಿಕ ವಿಶೇಷತಃ ಭಾರತವು ಏಕೀಕರಣದ ಚಳವಳಿಯ ಅಗತ್ಯವನ್ನು ಅರಿಯಿತು; ಆದರೆ ಗಣರಾಜ್ಯಗಳು ಅನೈಕ್ಯಕ್ಕೆ ಕಾರಣಗಳಾಗಿದ್ದವು. ಅವೇನೋ ಸ್ವತಃ ಬಲಿಷ್ಠವೇ ಆಗಿದ್ದರೂ ಈ ಪರ್ಯಾಯದ್ವೀಪದ ಸಂಘಟನೆಗೆ ಏನೂ ಮಾಡಲಾರದಾದವು; ಈ ದ್ವೀಪ ಕಲ್ಪವು ಚಿಕ್ಕ ರಾಜ್ಯಗಳ ಯಾವ ವಿಧದ ಸಂಘಟನೆಗೂ ಮೀರುವ ವೈಶಾಲ್ಯವುಳ್ಳದ್ದಾಗಿದೆ; ಮತ್ತು ಪ್ರಾಚೀನ ಪ್ರಪಂಚದಲ್ಲಿ ಅಂಥ ಪ್ರಯತ್ನ ಎಲ್ಲಿಯೂ ಜಯಪ್ರದವಾಗಲಿಲ್ಲ; ಯಾವಾಗಲೂ

ಕೆಲ ಸಂಕುಚಿತ ಗಡಿಮಿತಿಗಳನ್ನು ಮೀರುವ ಪ್ರಯತ್ನದಲ್ಲೇ ಅಂಥ ಆರಂಭ ಭಗ್ನವಾಗುತ್ತಿತ್ತು; ಅಲ್ಲದೆ ಹೆಚ್ಚು ಕೇಂದ್ರೀಕೃತ ಸರಕಾರದ ರಚನೆಯತ್ತ ಸಾಗುವ ಚಳವಳಿಯ ವಿರುದ್ಧವಾಗಿ ಅದು ನಿಲ್ಲಲಾರದಾಯಿತು. ಇತರ ಕಡೆಗಳಂತೆಯೇ ಭಾರತದಲ್ಲಾದರೂ ಮಿಕ್ಕೆಲ್ಲ ರಾಜಕೀಯ ಸಂಘಟನೆಗಳನ್ನುರುಳಿಸಿ ಬೆಳೆದು ಕೊನೆಯದಾಗಿ ನಿಂತದ್ದು ರಾಜಪ್ರಭುತ್ವವೇ. ಗಣರಾಜ್ಯ ಸಂಘಟನೆಯು ಅದರ ಇತಿಹಾಸದಲ್ಲಿ ಅಳಿಸಿಹೋಗಿ ಕೇವಲ ನಾಣ್ಯಗಳ, ಮತ್ತು ಅಲ್ಲಿ ಇಲ್ಲಿ ಚೆಲ್ಲಿದ ದಾಖಲೆ, ಗ್ರೀಕ್ ವರದಿ ಹಾಗೂ ಭಾರತದಾದ್ಯಂತ ರಾಜಪ್ರಭುತ್ವವನ್ನು ಬೆಂಬಲಿಸಿ ನೆಲೆಗೊಳಿಸಲು ಸಹಾಯ ಮಾಡಿದ ಸಮಕಾಲಿನ ರಾಜಕೀಯ ಲೇಖಕರ ಮತ್ತು ಶಾಸ್ತ್ರಕಾರರ ಬರೆಹಗಳಿಂದ ಗೊತ್ತಾಗುತ್ತದೆ.

## ೬. ರಾಜಪ್ರಭುತ್ವದ ವಿಶಿಷ್ಟ ಲಕ್ಷಣಗಳು

ಆದರೆ ಭಾರತೀಯ ರಾಜಪ್ರಭುತ್ವಕ್ಕೆ ಒಂದು ವಿಧದ ಪವಿತ್ರ ಆಧಾರವೂ ಮಹಾಧಿಕಾರವೂ ಅನಂತರ ದೊರಕಿದರೂ ರಾಜನ ವ್ಯಕ್ತಿತ್ವಕ್ಕೆ ಧರ್ಮರಕ್ಷಕತ್ವದ ಹಾಗೂ ದಿವ್ಯಶಕ್ತಿಯ ಪ್ರಾತಿನಿಧ್ಯ ಸಿಕ್ಕಿದರೂ ಆ ಪ್ರಭುತ್ವವು ಮಹಮ್ಮದೀಯರ ದಾಳಿಯ ಪೂರ್ವದಲ್ಲಿ ರಾಜನ ವೈಯಕ್ತಿಕ ಸ್ವಯಂ ಪ್ರಭುತ್ವದ ಅಥವಾ ಸರ್ವಾಧಿಕಾರದ ಸ್ವರೂಪದ್ದಾಗಿರಲಿಲ್ಲ; ಪ್ರಾಚೀನ ಪಾರಸೀಕ ಅಥವಾ ಪಶ್ಚಿಮ ಮತ್ತು ಮಧ್ಯ ಏಷ್ಯಗಳ ಇಲ್ಲವೆ ಅನಂತರದ ಯುರೋಪಿಯನ್ ನಿರಂಕುಶ ಪ್ರಭುತ್ವಗಳನ್ನು ಹೋಲುತ್ತಿದ್ದಿಲ್ಲ; ಪಠಾನ ಹಾಗೂ ಮೊಗಲ ಸಾಮ್ರಾಜ್ಯಗಳ ಪದ್ಧತಿಯಿಂದಲೂ ಅದು ತೀರ ಬೇರೆಯ ಮಾದರಿಯಾಗಿತ್ತು. ಭಾರತೀಯ ದೊರೆಗೆ ಆಡಳಿತ–ನ್ಯಾಯದಾನಗಳಲ್ಲಿ ಅತಿ ಹೆಚ್ಚಿನ ಅಧಿಕಾರವಿತ್ತಲ್ಲದೆ, ರಾಜ್ಯದ ಎಲ್ಲ ಸೈನ್ಯಬಲದ ಒಡೆಯತನವುಳ್ಳ ಮಂತ್ರಿಮಂಡಲ ಸಹಿತನಾದ ಅವನೇ ಯುದ್ಧ–ಶಾಂತಿಗಳಿಗೆ ಹೊಣೆಗಾರನೂ ಸಮಷ್ಟಿ ಜೀವನದ ಸುವ್ಯವಸ್ಥೆ ಯೋಗಕ್ಷೇಮಗಳ ಸಾಮಾನ್ಯ ಮೇಲ್ವಿಚಾರಣೆ ಹಾಗೂ ನಿಯಂತ್ರಣಗಳ ಅಧಿಕಾರಿಯೂ ಆಗಿದ್ದನು. ಆದರೆ ಈ ಅಧಿಕಾರವು ವೈಯಕ್ತಿಕವಾಗಿರಲಿಲ್ಲ; ಅಲ್ಲದೆ ಅದರ ದುರುಪಯೋಗವನ್ನು ಅವನು ಮಾಡದಂತೆ ಪ್ರಜೆಗಳ ಸ್ವಾತಂತ್ರ್ಯವನ್ನು ಅವನು ಅಪಹರಿಸದಂತೆ ತಕ್ಕ ರಕ್ಷಣೆಗಳಿದ್ದವು; ಮತ್ತು ಸಾರ್ವಭೌಮಾಧಿಕಾರದ ಪ್ರಯೋಗದಲ್ಲೂ ಪ್ರಶಾಸನಿಕ ವಿಧಾನ ಹಾಗೂ ನಿಯಂತ್ರಣಗಳಲ್ಲೂ ಅವನ ಎರಡನೆಯ ಪಾಲುಗಾರರಂತಿದ್ದ ಸಾರ್ವಜನಿಕ ಪ್ರಾಧಿಕಾರ ನಿಕಾಯಗಳೂ ಹಿತಸಂಬಂಧಗಳೂ ತಮ್ಮ ಹಕ್ಕು ಹಾಗೂ ಅಧಿಕಾರಗಳಿಂದ ಅವನ ಅಧಿಕಾರವನ್ನು ಪರಿಮಿತಗೊಳಿಸಿದ್ದವು. ವಸ್ತುತಃ ಆತನು ಪರಿಮಿತ ಅಥವಾ ಸಾಂವಿಧಾನಿಕ ರಾಜನಾಗಿದ್ದನು. ಆದರೆ ಸಂವಿಧಾನವನ್ನು ಆಧರಿಸಿದ ಯಂತ್ರ ಮತ್ತು ಅದು ಹಾಕಿದ್ದ ಅಧಿಕಾರನಿರ್ಬಂಧ ಇವು ಯುರೋಪಿಯನ್ ಇತಿಹಾಸದಲ್ಲಿ ನಮಗೆ ಪರಿಚಿತವಾದಂಥವುಗಳಿಂದ ಭಿನ್ನವಾಗಿದ್ದವು; ಮಧ್ಯಯುಗದ ಯುರೋಪಿಯನ್ ದೊರೆಗಳಿಗಿಂತ ಹೆಚ್ಚಾಗಿ ಆತನ

ಶಾಸನಾಧಿಕಾರ ಮುಂಬರಿಯುವುದು ಜನತೆಯ ಇಚ್ಛೆ ಹಾಗೂ ಒಪ್ಪಿಗೆಯ ಮುಂಬರಿತವನ್ನೇ ಅವಲಂಬಿಸಿತ್ತು. **ಧರ್ಮ ರಾಜನಿಗಿಂತಲೂ ಹೆಚ್ಚಿನ ಸಾರ್ವಭೌಮ ಸ್ಥಾನದಲ್ಲಿತ್ತು.** ಜನರ ಜೀವನವನ್ನು ಸಂಘಟಿತವಾಗಿ ಪ್ರಶಾಸಿಸುತ್ತಿದ್ದ ಧಾರ್ಮಿಕ, ನೈತಿಕ, ಸಾಮಾಜಿಕ, ರಾಜಕೀಯ, ನೈಯಾಯಿಕ ಮತ್ತು ಸಾಂಪ್ರದಾಯಿಕ ಕಾಯಿದೆಯೇ ಆ ಧರ್ಮ. ಧರ್ಮದ ಈ ಅಶರೀರಪ್ರಭುತ್ವವು ಪವಿತ್ರವೂ, ತನ್ನ ಸತ್ವದಲ್ಲಿ ಮತ್ತು ಶರೀರಸರ್ವಸ್ವದಲ್ಲಿ ಸನಾತನವೂ, ಲಕ್ಷಣತಃ ಯಾವಾಗಲೂ ಏಕರೂಪದ್ದೂ ಆಗಿತ್ತು. ಸಮಾಜದ ವಿಕಾಸದಿಂದ ಅದರ ರೂಪದಲ್ಲಿ ಸಂಘಟಿತವಾಗಿಯೂ ಸ್ವಯಂಪ್ರೇರಿತವಾಗಿಯೂ ಉಂಟಾದ ನೂತನ ಬದಲಾವಣೆಗಳು ಆಗಾಗ ಅದರಲ್ಲಿ ಸೇರಿಸಲ್ಪಡುತ್ತಿದ್ದವು. ಭೌಗೋಲಿಕ, ಕೌಟುಂಬಿಕ ಮತ್ತು ಇನ್ನಿತರ ಸಂಪ್ರದಾಯಗಳು ಆಂತರಿಕವಾಗಿ ಮಾತ್ರ ಪರಿವರ್ತನೀಯವಾಗಿದ್ದು ಅದರ ಒಂದು ಗೌಣ ಅಂಗವಾಗಿದ್ದವು. ಈ ಸ್ವರೂಪದ ಧರ್ಮದಲ್ಲಿ ಲೌಕಿಕ ಅಧಿಕಾರವಾವುದಕ್ಕೂ ಮನಸ್ಸು ಬಂದಂತೆ ಕೈ ಹಾಕಲು ಹಕ್ಕಿರಲಿಲ್ಲ. ಬ್ರಾಹ್ಮಣರು ಧರ್ಮದ ಕ್ರೋಢೀಕರಣ ಮತ್ತು ವ್ಯಾಖ್ಯಾನಗಳಿಗಷ್ಟೇ ಹೊಣೆಯಾಗಿದ್ದರಲ್ಲದೆ ಅದರ ಜನಕರೂ ಆಗಿರಲಿಲ್ಲ, ಮತ್ತು ಮನ ಬಂದಂತೆ ಅದರಲ್ಲಿ ಬದಲಾವಣೆಗಳನ್ನು ಮಾಡುವುದಕ್ಕೂ ಅವರಿಗೆ ಅಧಿಕಾರವಿದ್ದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಅಧಿಕೃತ ವಿವರಣೆ ಕೊಡುವುದರ ಮೂಲಕ ಆ ಈ ತತ್ವದಲ್ಲಿ ಅಥವಾ ಧರ್ಮಾಂಶದಲ್ಲಿ ಬದಲಾವಣೆಗಳಾಗುವ ಪ್ರವೃತ್ತಿ ಕಂಡರೆ ಅದನ್ನು ವಿರೋಧಿಸಲು ಅಥವಾ ಅನುರೋಧಿಸಲು ಶಕ್ತರಾಗಿದ್ದರೆಂಬುದೇನೋ ಸ್ಪಷ್ಟವಿದೆ. ದೊರೆಯು ಧರ್ಮದ ರಕ್ಷಕನು, ಸೇವಕನು ಮತ್ತು ಅಮಲಿನಲ್ಲಿ ತರುವವನು ಮಾತ್ರ ಆಗಿದ್ದನು. ಅವನು ಜನರು ಧರ್ಮದಂತೆ ನಡೆದುಕೊಳ್ಳುವುದು, ಧರ್ಮದ್ರೋಹ, ಅಕ್ರಮ ಆಚರಣೆ ಮತ್ತು ಧರ್ಮ ಲೋಪಗಳಲ್ಲಿ ಬೀಳದಿರುವುದು ಇವನ್ನು ನೋಡಿಕೊಳ್ಳಬೇಕಾಗಿದ್ದಿತು. ಧರ್ಮಕ್ಕೆ ಬಾಗಿ ನಡೆಯುವುದರಲ್ಲಿ ಅವನೇ ಮೊದಲಿಗನು; ಅಲ್ಲದೆ ತನ್ನ ಖಾಸಗಿ ಜೀವನ ಮತ್ತು ಆಚಾರದ ಇತಿಮಿತಿಯ ಮೇಲೆ ಅರಸುತನದ ಕರ್ತವ್ಯ–ಅಧಿಕಾರ ವಿಷಯಗಳ ಮೇಲೆ ಧರ್ಮವು ಹಾಕಿದ ಕಠೋರ ನಿಯಮಗಳನ್ನು ಅವನು ಪಾಲಿಸಬೇಕಾಗಿದ್ದಿತು.

ಪ್ರಭುತ್ವಾಧಿಕಾರವು ಧರ್ಮದ ಕಕ್ಷೆಗೆ ಒಳಪಟ್ಟಿರುವುದು ಅವ್ಯಾವಹಾರಿಕ ಆದರ್ಶತತ್ವವಾಗಿರಲಿಲ್ಲ; ಏಕೆಂದರೆ ಸಾಮಾಜಿಕ ಧಾರ್ಮಿಕ ಕಾಯಿದೆಯು ಜನದ ಸಮಷ್ಟಿ ಜೀವನವನ್ನು ಸಕ್ರಿಯವಾಗಿ ರೂಪಿಸುತ್ತಿತ್ತು; ಆದ್ದರಿಂದ ಅದು ವಾಸ್ತವಿಕ ಸತ್ಯವೇ ಆಗಿತ್ತು; ಅಲ್ಲದೆ ರಾಜಕೀಯ ಕ್ಷೇತ್ರದಲ್ಲಿ ಅದು ವ್ಯಾವಹಾರಿಕ ಪರಿಣಾಮಗಳನ್ನು ಉಂಟುಮಾಡುತ್ತಿತ್ತು. ಇದರ ಅರ್ಥವೇನೆಂದರೆ, ರಾಜನಿಗೆ ನೇರವಾಗಿ ಕಾಯಿದೆ ಮಾಡುವ ಅಧಿಕಾರವಿರಲಿಲ್ಲ; ಅವನ ಅಧಿಕಾರವು ಜನಾಂಗದ ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ರಚನೆಗಳಿಗನುಗುಣವಾಗಿರುವ ಆಡಳಿತದ ಅನುಜ್ಞೆಗಳನ್ನು ಹೊರಡಿಸುವಷ್ಟಕ್ಕೇ ಪರಿಮಿತವಾಗಿತ್ತು–ಇಲ್ಲೂ ಕೂಡ ಕೆಲವು ಸಂಸ್ಥೆಗಳು

ಪ್ರಶಾಸನಾನುಜ್ಞೆಗಳನ್ನು, ಸ್ವತಂತ್ರವಾಗಿ ಹೊರಡಿಸಿ ಜಾರಿಗೆ ತರುವುದರಲ್ಲಿ ಪಾಲುಗಾರರಾಗಿದ್ದವು. ಇಷ್ಟಲ್ಲದೆ ರಾಜನು ತನ್ನ ಆಡಳಿತದ ಸಾಮಾನ್ಯ ರೂಪ–ರೇಷೆ, ಲಕ್ಷಣ ಮತ್ತು ಕಾರ್ಯರೂಪದ ಪರಿಣಾಮಗಳ ಬಗ್ಗೆ ಜನ ತಳೆದಿರುವ ಅಭಿಪ್ರಾಯವನ್ನು ಅಲ್ಲಗಳೆಯಲಾರದವನಾಗಿದ್ದನು.

## ೭. ಧಾರ್ಮಿಕ ಸ್ವಾತಂತ್ರ್ಯ ಮತ್ತು ಸಾಮಾಜಿಕ ಜೀವನದ ಸ್ವಾಯತ್ತತೆ

ಮಹಾಜನರ ಧಾರ್ಮಿಕ ಸ್ವಾತಂತ್ರ್ಯಕ್ಕೆ ಪ್ರತ್ಯಾಭೂತಿ ಇತ್ತು; ಮತ್ತು ಯಾವ ವ್ಯಾವಹಾರಿಕ ಅಧಿಕಾರದಿಂದಲೂ ಅದನ್ನು ಕುಂಠಿತಗೊಳಿಸುವಂತಿರಲಿಲ್ಲ. ಪ್ರತಿಯೊಂದು ಧಾರ್ಮಿಕ ಸಮುದಾಯವೂ, ಪ್ರತಿಯೊಂದು ಹೊಸ ಅಥವಾ ಹಳೆಕಾಲದಿಂದ ಬಂದ ಧರ್ಮವೂ ತನ್ನದೇ ಆದ ಜೀವನನೀತಿಯನ್ನೂ ಸಂಸ್ಥೆಗಳನ್ನೂ ರೂಪಿಸಿಕೊಳ್ಳಬಹುದಿತ್ತು; ಮತ್ತು ಆಯಾ ಕ್ಷೇತ್ರದಲ್ಲಿ ಪೂರ್ಣ ಸ್ವಾತಂತ್ರ್ಯವನ್ನನುಭವಿಸುತ್ತಿದ್ದ ತನ್ನದೇ ಆದ ಆಡಳಿತಸಂಸ್ಥೆಗಳನ್ನು ಇಟ್ಟುಕೊಂಡಿತ್ತು. ರಾಜ್ಯಕ್ಕೇ ಪ್ರತ್ಯೇಕವಾದ ಧರ್ಮವೆಂಬುದಿರಲಿಲ್ಲ. ಮತ್ತು ಅರಸನು ಪ್ರಜೆಗಳ ಮುಖ್ಯಸ್ಥನೂ ಆಗಿರಲಿಲ್ಲ. ಈ ಕ್ಷೇತ್ರದಲ್ಲಿ ಅಶೋಕನು ತನ್ನ ರಾಜ–ನಿಯಂತ್ರಣವನ್ನೂ, ರಾಜ–ಪ್ರಭಾವವನ್ನೂ ಬೆಳೆಸಲು ಪ್ರಯತ್ನಿಸಿದಂತೆ ತೋರುತ್ತದೆ. ಅದೇ ಮೇರೆಗೆ ಮಿಕ್ಕ ಕೆಲ ಬಲಿಷ್ಠ ಅರಸರು ಸ್ವಲ್ಪ ಮಟ್ಟಿಗೆ ಇಂತಹ ಪ್ರಯತ್ನಗಳನ್ನು ಮಾಡಿದುದುಂಟು. ಆದರೆ ಅಶೋಕನವೆಂದು ಹೇಳಲಾಗುವ ಈ ಮಾದರಿಯ ಶಿಲಾಶಾಸನಗಳು ಆದೇಶಗಳಾಗಿರದೆ ಉಪದೇಶಲಕ್ಷಣವನ್ನು ಹೊಂದಿದ್ದವು. ಧರ್ಮದ ನಂಬಿಕೆಯನ್ನಾಗಲಿ, ಧರ್ಮ ಸಂಸ್ಥೆಗಳನ್ನಾಗಲಿ ಬದಲಿಸಲು ಬಯಸುವ ಪ್ರಭುವು ಭಾರತೀಯ ತತ್ವವಾದ ಸಂಘ–ಸ್ವಾತಂತ್ರ್ಯ ಮತ್ತು ಸಂಬಂಧಿಸಿದವರ ಪೂರ್ವ ಸಮ್ಮತಿ ಮತ್ತು ಸುಪ್ರಸಿದ್ಧವಾದ ಅಧಿಕಾರಸಮಿತಿಗಳ ಅಭಿಪ್ರಾಯ ಇವನ್ನು ತೆಗೆದುಕೊಳ್ಳಬೇಕಾದಿದ್ದಿತ್ತು. ಅಥವಾ ಉಪಸ್ಥಿತ ಪ್ರಕರಣವನ್ನು ಪ್ರಸಿದ್ಧ ಬೌದ್ಧ ಸಭೆಗಳಲ್ಲಿದ್ದಂತೆ, ಸಲಹೆಸಮಿತಿಯ ಮುಂದೆ ಇಡಬೇಕಾಗಿದ್ದಿತ್ತು; ಇಲ್ಲವೆ ಭಿನ್ನ ಧರ್ಮೀಯ ಪಂಡಿತರಲ್ಲಿ ಚರ್ಚೆಯನ್ನೇರ್ಪಡಿಸಿ ಅವರ ತೀರ್ಮಾನದಂತೆ ನಡೆದುಕೊಳ್ಳಬೇಕಾಗಿದ್ದಿತ್ತು. ರಾಜನು ಆ ಈ ಪಂಥಕ್ಕೆ ಒಲಿಯಬಹುದು; ಅವನ ಆಚರಣೆಯ ಒಲವಿನಿಂದ ತಕ್ಕಮಟ್ಟಿನ ಪ್ರಚಾರದ ಪ್ರಯೋಜನವು ಆಯಾಪಂಥಕ್ಕೆ ಸ್ಪಷ್ಟವಾಗಿ ಸಿಗಬಹುದಾಗಿತ್ತು. ಆದರೆ ಅದೇ ಸಮಯದಲ್ಲಿ ತನ್ನ ಸಾರ್ವಜನಿಕ ಹುದ್ದೆಯಲ್ಲಿ ರಾಜನು ಜನರಿಂದ ಮನ್ನಿಸಲ್ಪಟ್ಟ ಧರ್ಮಗಳನ್ನು ಕೆಲಮಟ್ಟಿನ ನಿಷ್ಪಕ್ಷಪಾತದಿಂದ ನೋಡಿಕೊಳ್ಳಬೇಕಾಗಿದ್ದಿತ್ತು. ಬೌದ್ಧ ಹಾಗೂ ಬ್ರಾಹ್ಮಣ ಸಮ್ರಾಜರು ಪರಸ್ಪರ ವಿರುದ್ಧ ಧರ್ಮಗಳೆರಡಕ್ಕೂ ಪ್ರೋತ್ಸಾಹ ನೀಡಿದ್ದರ ಸೂತ್ರಾರ್ಥವನ್ನು ನಾವು ಇಲ್ಲಿ ಕಾಣುತ್ತೇವೆ. ಕೆಲವು ಸಂದರ್ಭಗಳಲ್ಲಿ

ಮುಖ್ಯವಾಗಿ ದಕ್ಷಿಣದಲ್ಲಿ ಧರ್ಮದ ಮೇಲಿನ ಚಿಕ್ಕ ದೊಡ್ಡ ದಬ್ಬಾಳಿಕೆಯ ಉದಾಹರಣೆಗಳು ಸಿಗಬಹುದು. ಆದರೆ ಈ ಧಾರ್ಮಿಕ ದಬ್ಬಾಳಿಕೆಗಳು ಧರ್ಮಭಂಗಗಳೇ ಆಗಿರುತ್ತಿದ್ದವು. ಮತ್ತು ಅವಕ್ಕೆ ತೀಕ್ಷ್ಣ ಧಾರ್ಮಿಕ ವಿಚಾರಕ್ರಾಂತಿಯ ಕಾಲದ ಭಾವೋದ್ರೇಕವೇ ಕಾರಣವಾಗಿತ್ತು; ಅವು ಕೇವಲ ಸ್ಥಾನಿಕವೂ ಅಲ್ಪಕಾಲಿಕವೂ ಆಗಿರುತ್ತಿದ್ದವು. ಭಾರತೀಯ ರಾಜ್ಯಪದ್ಧತಿಯಲ್ಲಿ ಸಾಮಾನ್ಯವಾಗಿ ಇಂಥ ಧಾರ್ಮಿಕ ದಬ್ಬಾಳಿಕೆ ಮತ್ತು ಅಸಹನೆಗೆ ಸ್ಥಾನವಿರಲಿಲ್ಲ. ಹಾಗೂ ಸ್ಥಿರೀಕೃತ ರಾಜ್ಯಧೋರಣವು ಯೋಚಿಸಲ್ಪಡುವಂತೆಯೂ ಇರಲಿಲ್ಲ. ಜನತೆಯ ಸಾಮಾಜಿಕ ಜೀವನವು ಮನಸ್ವಿ ಕಾರಭಾರಿಗಳ ಹಸ್ತಕ್ಷೇಪದಿಂದ ಮುಕ್ತವಾಗಿದ್ದಿತ್ತು. ಈ ಕ್ಷೇತ್ರದಲ್ಲಿ ರಾಜನು ಕಾಯಿದೆಯನ್ನು ಪಾಸುಮಾಡಿದ್ದು ವಿರಳ; ಹಾಗೆ ಮಾಡಿದ ಸಂದರ್ಭದಲ್ಲಿಯೂ ಸಂಬಂಧಪಟ್ಟರೊಡನೆ ವಿಚಾರವಿನಿಮಯ ಮಾಡಬೇಕಾಗಿದ್ದಿತ್ತು. ದೀರ್ಘಕಾಲದ ಪ್ರಾಬಲ್ಯದಿಂದ ವಿಸಂಘಟಿತವಾಗಿದ್ದ ಜಾತಿಪದ್ಧತಿಯನ್ನು ಪುನರ್‌ವ್ಯವಸ್ಥೆಗೊಳಿಸಲು ಮಾಡಿದ ಬಂಗಾಲದ ಸೇನ ರಾಜರ ಪ್ರಯತ್ನವು ಇದಕ್ಕೊಂದು ಉದಾಹರಣೆ. ಸಮಾಜದಲ್ಲಿಯ ಬದಲಾವಣೆಗಳು ಕೃತಕವಾಗಿ ಮೇಲಿಂದ ಹೇರಲ್ಪಡದೆ ಅದರೊಳಗಿಂದಲೇ ಬೆಳೆದುಬಂದವಾಗಿದ್ದವು. ಅಂಥ ಬೆಳವಣಿಗೆ ಮುಖ್ಯವಾಗಿ ಆಯಾ ಕುಟುಂಬ ಅಥವಾ ಸಮುದಾಯಗಳಿಗೆ ತಮ್ಮ ಆಚಾರವನ್ನು ವೃದ್ಧಿಪಡಿಸಿಕೊಳ್ಳಲು ಅಥವಾ ಬದಲಿಸಿಕೊಳ್ಳಲು ಕೊಟ್ಟ ಅವಕಾಶದಿಂದಲೇ ಆದದ್ದು.

## ೮. ರಾಜನ ಪ್ರಶಾಸನಾಧಿಕಾರದ ಇತಿ–ಮಿತಿಗಳು

ಆಡಳಿತದ ಕ್ಷೇತ್ರದಲ್ಲಿಯೂ ಅದೇ ಮೇರೆಗೆ ರಾಜಶಕ್ತಿಯೂ ಆಚರಣೆಯಲ್ಲಿದ್ದ ಧರ್ಮದಿಂದ ಬದ್ಧವಾಗಿತ್ತು. ರಾಜಾದಾಯದ ಅತಿ ಮುಖ್ಯ ಆಕರಗಳಲ್ಲಿ ರಾಜನು ನಿರ್ದಿಷ್ಟ ಶತಾಂಶವನ್ನು ಪರಮಾವಧಿ ಕರವೆಂದು ವಸೂಲು ಮಾಡಬಹುದಾಗಿತ್ತು. ಇನ್ನಿತರ ಕರಾಕರಣೆಯಲ್ಲಿ ಸಮಷ್ಟಿಯ ಬೇರೆ ಬೇರೆ ಪ್ರಾತಿನಿಧಿಕ ಅಂಗಗಳ ಅಭಿಪ್ರಾಯವನ್ನು ತೆಗೆದುಕೊಳ್ಳಲಾಗುತ್ತಿತ್ತು. ಒಟ್ಟಿನಲ್ಲಿ ಯಾವಾಗಲೂ ಅವನ ಆಳುವ ಅಧಿಕಾರವೇ ಜನತೆಯ ತೃಪ್ತಿ ಮತ್ತು ಸದಿಚ್ಛೆಗಳಿಗೆ ಒಳಪಟ್ಟಿತ್ತು. ಇದು ಧರ್ಮದ ಒಡೆಯರಾಗಿದ್ದ ಬ್ರಾಹ್ಮಣರ ಶುಷ್ಕ ಸದಾಶಯ ಮಾತ್ರ ಆಗಿರಲಿಲ್ಲ. ಸ್ವತಃ ರಾಜನೇ ಅತ್ಯುಚ್ಚ ನ್ಯಾಯಾಧಿಕಾರಿಯಾಗಿದ್ದನು; ಅವನೇ ವ್ಯಾವಹಾರಿಕ ಮತ್ತು ಅಪರಾಧಿಕ ಕಾಯಿದೆಯ ಜಾರಿಯಲ್ಲಿ ಅತ್ಯುಚ್ಚ ನಿಯಂತನಾಗಿದ್ದನು. ಆದರೆ ಇಲ್ಲಿ ಕೂಡ ಅವನ ಪಾತ್ರವು ಕೇವಲ ಕಾರ್ಯಪಾಲಕನದಾಗಿದ್ದಿತು: ತನ್ನ ನ್ಯಾಯಾಧಿಕಾರಿಗಳ ಅಥವಾ ಧರ್ಮಜ್ಞರಾದ ಬ್ರಾಹ್ಮಣರ ಮೂಲಕ ಇದ್ದ ಹಾಗೆಯೇ ಧರ್ಮವನ್ನು ಚಾಚೂ ತಪ್ಪದಂತೆ ಪ್ರಶಾಸಿಸಲು ಬದ್ಧನಾಗಿದ್ದನು. ವಿದೇಶನೀತಿ, ಸೈನಿಕ ಆಡಳಿತ, ಯುದ್ಧ, ಶಾಂತಿ ಮತ್ತು ಇತರ ಅನೇಕ ನಿರ್ದೇಶಕ ಕಾರ್ಯಗಳಲ್ಲಿ ಮಾತ್ರ ರಾಜನಿಗೆ

ಮಂತ್ರಿಮಂಡಲದಲ್ಲಿ ಪೂರ್ಣವೂ ಅನಿರ್ಬದ್ಧವೂ ಆದ ನಿಯಂತ್ರಣವಿತ್ತು. ಸಮಷ್ಟಿಯ ಯೋಗಕ್ಷೇಮ, ಸುವ್ಯವಸ್ಥೆ, ಸಾರ್ವಜನಿಕ ನೀತಿಮತ್ತೆ ಮತ್ತು ಇಂಥ ಸಾರ್ವಭೌಮಾಧಿಕಾರದಿಂದ ನಿಯಂತ್ರಿಸಬಹುದಾಗಿದ್ದ ಅಥವಾ ಅಧೀಕ್ಷಿಸಬಹುದಾಗಿದ್ದ ಇನ್ನಿತರ ಎಲ್ಲ ವಿಷಯಗಳನ್ನೂ ಪಡೆದು ಬೆಳೆಯಿಸುವ ಆಡಳಿತಾಂಶದ ದಕ್ಷ ನಿರ್ವಹಣೆಯಲ್ಲಿ ಅವನು ಸ್ವತಂತ್ರನಾಗಿದ್ದನು. ಅವನಿಗೆ ಕಾಯಿದೆಗೆ ಅನುಗುಣವಾಗಿ ದಂಡಿಸುವ, ಮತ್ತು ಪುರಸ್ಕರಿಸುವ ಹಕ್ಕಿತ್ತು; ಆ ಹಕ್ಕನ್ನು ಅವನು ಸಾರ್ವಜನಿಕ ಯೋಗಕ್ಷೇಮದ ಸಂವರ್ಧನೆ ಮತ್ತು ಸಾಮೂಹಿಕ ಕಲ್ಯಾಣಗಳನ್ನು ಗಮನಿಸಿ ನಡೆಸಬೇಕಾಗಿದ್ದಿತು.

ಆದ್ದರಿಂದ ಪ್ರಾಚೀನ ಭಾರತೀಯ ಪದ್ಧತಿಯಲ್ಲಿ ರಾಜನ ಸ್ವೇಚ್ಛಾಚಾರ, ಹಿಂಸೆ ಮತ್ತು ಶೋಷಣೆಗಳಿಗೆ ಸಾಮಾನ್ಯವಾಗಿ ಅವಕಾಶವಿರಲಿಲ್ಲ. ಇತರ ಕೆಲ ದೇಶಗಳ ಇತಿಹಾಸದಲ್ಲಿ ಸರ್ವಸಾಧಾರಣವಾಗಿ ಕಂಡುಬರುವ ಅಸಹ್ಯಕ್ರೌರ್ಯ ಮತ್ತು ದಬ್ಬಾಳಿಕೆಗಳಿಗಂತೂ ಎಳ್ಳಷ್ಟೂ ಅವಕಾಶವಿರಲಿಲ್ಲ. ಹೀಗಿದ್ದರೂ ಪ್ರಭುವು ಧರ್ಮವನ್ನು ಧಿಕ್ಕರಿಸಿದಾಗ ಅಥವಾ ತನ್ನ ಶಾಸನಾಧಿಕಾರವನ್ನು ದುರುಪಯೋಗಿಸಿದಾಗ ಅಂಥ ಸಂಗತಿಗಳು ನಡೆಯಬಹುದಾಗಿತ್ತು. ಅಂಥ ಸಂಗತಿಗಳು ನಡೆದದ್ದೂ ಉಂಟು, ಅಂಥವುಗಳಲ್ಲಿ ಬಹಳ ಕೆಟ್ಟದ್ದೆಂದು ಉಲ್ಲೇಖಿತವಾದ ದುಃಶಾಸನ ವಿದೇಶಿಯ ಮನೆತನಕ್ಕೆ ಸೇರಿದ ಶೋಷಕನದು; ಇತರ ಪ್ರಕರಣಗಳಲ್ಲಿ ರಾಜನ ಮನಸ್ವಿ ಕಾರಭಾರ ಹಿಂಸೆ ಅಥವಾ ಅನ್ಯಾಯಗಳು ಬಹಳಕಾಲ ನಡೆದಾಗ ಸಕಾಲದಲ್ಲಿ ಜನರು ಪರಿಣಾಮಕರ ಪ್ರತಿಭಟನೆ ಅಥವಾ ದಂಗೆಯನ್ನು ಮಾಡಿದ್ದುಂಟು. ಧರ್ಮ ಶಾಸ್ತ್ರಕಾರರು ಶೋಷಣೆಗೆ ತಕ್ಕ ಪ್ರತೀಕಾರವನ್ನು ಬರೆದಿಟ್ಟಿದ್ದರು. ರಾಜನು ದೇವಾಂಶಸಂಭೂತನೆಂದು ಹೇಳಿದ್ದರೂ ಅವನು ನಿಷ್ಠೆಯಿಂದ ಧರ್ಮಪರಿಪಾಲನೆ ಮಾಡುವುದನ್ನು ಬಿಟ್ಟ ಕ್ಷಣದಲ್ಲಿ ತನ್ನ ರಾಜತ್ವವನ್ನು ಕಳೆದುಕೊಳ್ಳುವನೆಂದೂ ಪ್ರಜೆಗಳು ಅವನಿಗೆ ವಿಧೇಯತೆ ತೋರಿಸಬೇಕಾಗಿಲ್ಲವೆಂದೂ ವಿಧಿಸಲಾಗಿತ್ತು. ಅನರ್ಹತೆ ಮತ್ತು ಜನೇಚ್ಛಾನುಗುಣವಾಗಿ ಆಳುವ ಕರ್ತವ್ಯದ ಭಂಗಗಳೇ ಅವನನ್ನು ಪದಚ್ಯುತಗೊಳಿಸಲು ಶಾಸ್ತ್ರತಃ ಮತ್ತು ವ್ಯವಹಾರತಃ ಸಾಕಷ್ಟು ಕಾರಣಗಳಾಗಿದ್ದವು. ಹುಚ್ಚು ನಾಯಿಯನ್ನು ಕೊಂದಂತೆ ಅನ್ಯಾಯಿಯೂ, ಶೋಷಕನೂ ಆದ ಅರಸನನ್ನು ಕೊಂದುಹಾಕಬೇಕೆಂದು ಮನುವು ವಿಧಿಸುತ್ತಾನೆ. ಅತ್ಯಯ ಪ್ರಸಂಗಗಳಲ್ಲಿ ದಂಗೆ ಏಳುವುದನ್ನೂ, ರಾಜ ಹತ್ಯೆಮಾಡುವುದನ್ನೂ ಒಂದು ಹಕ್ಕು ಅಥವಾ ಕರ್ತವ್ಯವೆಂದು ಇಂಥ ಅತ್ಯುಚ್ಚ ಆಧಾರವು ಸಮರ್ಥಿಸಿರುವುದು ಸರ್ವಾಧಿಕಾರ ಅಥವಾ ರಾಜನ ದೈವಿಕವಾದ ಅಮಿತಾಧಿಕಾರವು ಭಾರತೀಯ ರಾಜಕೀಯ ಪದ್ಧತಿಯ ಅಂಗವೇ ಆಗಿರಲಿಲ್ಲ ಎಂಬುದನ್ನು ತೋರಿಸಿಕೊಡಲು ಸಾಕು. ವಾಸ್ತವಿಕವಾಗಿ ನೋಡಿದರೆ ಜನ ರಾಜನ ಮೇಲೆ ಈ ಅಧಿಕಾರವನ್ನು ಉಪಯೋಗಿಸಿದ್ದಕ್ಕೆ ಸಾಹಿತ್ಯ ಮತ್ತು ಇತಿಹಾಸಗಳು ನಿದರ್ಶನ ಕೊಡಬಲ್ಲವು. ಮತ್ತೊಂದು ಹೆಚ್ಚು ಶಾಂತಿಯುತ ಮತ್ತು ಸರ್ವ ಸಾಮಾನ್ಯವಾಗಿ ಬಳಸಲಾಗುತ್ತಿದ್ದ ಉಪಾಯವೆಂದರೆ

ರಾಜಬಹಿಷ್ಕಾರ ಅಥವಾ ಸ್ವದೇಶತ್ಯಾಗದ ಬೆದರಿಕೆ ಹಾಕುವುದು ಅನೇಕ ಸಂದರ್ಭಗಳಲ್ಲಿ ಭ್ರಷ್ಟ ರಾಜನಿಗೆ ಬುದ್ಧಿ ಕಲಿಸಲು ಸಾಕಾಗುತ್ತಿತ್ತು ಹದಿನೇಳನೆಯ ಶತಮಾನದಷ್ಟು ಈಚೆಗೆ ದಕ್ಷಿಣದಲ್ಲಿ ಜನರಿಗೆ ಅಪ್ರಿಯನಾದ ರಾಜನ ವಿರುದ್ಧವಾಗಿ ಇಂಥ ಬಹಿಷ್ಕಾರದ ಬೆದರಿಕೆ ಹಾಕಿದ ಮತ್ತು ಜಾನಪದ ಸಭೆಯು ಈ ಸಮಯದಲ್ಲಿ ರಾಜನಿಗೆ ಸಹಾಯ ಮಾಡಿದರೆ ಅದು ರಾಷ್ಟ್ರದ್ರೋಹವೆಂದು ಸಾರಿದ ಅಂಶವು ಗಮನಾರ್ಹವಾಗಿದೆ. ಈ ಪ್ರಕಾರ ರಚಿತವಾದ ರಾಜತ್ವವು ವ್ಯವಹಾರತಃ ಅನತಿ ವರ್ತಿಯೂ, ದಕ್ಷವೂ, ಉಪಕಾರಿಯೂ, ತನ್ನ ಉದ್ದೇಶಗಳನ್ನು ಸಫಲಗೊಳಿಸುವಂಥದೂ ಆಗಿತ್ತಲ್ಲದೆ ಪ್ರಜೆಗಳ ಹೃದಯಕ್ಕೆ ಆಪ್ಯಾಯಮಾನವಾಗಿತ್ತು. ಇಷ್ಟಾದರೂ ಈ ರಾಜಪ್ರಭುತ್ವವೆಂಬುದು ಭಾರತದ ಸರ್ವಾನುಮತವೂ ಮುಖ್ಯವೂ ಆದ ಪ್ರಭುತ್ವಗಳಲ್ಲಿ ಒಂದು. ಆದರೆ ಹಿಂದೆ ಗಣರಾಜ್ಯಗಳಿದ್ದದ್ದು ನಮಗೆ ಕಂಡುಬರುವುದರಿಂದ ಈ ರಾಜಪ್ರಭುತ್ವವು ಭಾರತೀಯ ಸಾಮಾಜಿಕ ರಾಜಕೀಯ ಪದ್ಧತಿಯ ಅನಿವಾರ್ಯ ಅಂಗವಾಗಿರಲಿಲ್ಲ; ರಾಜವೈಭವವನ್ನಷ್ಟೇ ನೋಡಿ ಅದರ ಹಿಂದೆ ಏನಿದೆ ಎಂಬುದನ್ನು ನೋಡದೆ ಹೋದರೆ ಭಾರತೀಯ ಪದ್ಧತಿಯ ನಿಜವಾದ ತತ್ವದ ಬಗ್ಗೆ ನಮಗೆ ಏನೂ ತಿಳಿಯಲಾರದು. ಇಡಿ ರಚನೆಯ ಮುಖ್ಯ ಲಕ್ಷಣದ ಸೂಚನೆ ಸಿಕ್ಕುವುದು ಅಲ್ಲೇ.

# ಎರಡನೆಯ ಅಧ್ಯಾಯ

# ೧. ಆತ್ಮಾನ್ವೇಷಣೆಯ ಸ್ಥಾಯಿಭಾವ

ಭಾರತೀಯ ರಾಜ್ಯಧರ್ಮದ ನಿಜ ಸ್ವಭಾವವು ಅದನ್ನೊಂದು ಪ್ರತ್ಯೇಕ ಪದಾರ್ಥ, ಜನತೆಯ ಮನ–ಜೀವನಗಳ ಇತರ ಅಂಶದಿಂದ ಭಿನ್ನವಾದ ವಸ್ತು ಎಂದು ತಿಳಿದರೆ ಅರ್ಥವಾಗದು; ಅದನ್ನು ಸಮಾಜದ ಬಾಳಿನ ಒಂದು ಸಂಘಟಿತ ಸಾಕಲ್ಯಕ್ಕೆ ಸಂಬಂಧಿಸಿದ ಭಾಗವೆಂದು ತಿಳಿದರೆ ಮಾತ್ರ ಅರ್ಥವಾದೀತು.

ಒಂದು 'ಜನ' ಅಂದರೆ ಒಂದು ದೊಡ್ಡ ಮಾನವ ರಾಶಿ; ವಸ್ತುತಃ ಅದೊಂದು ಸಾಮೂಹಿಕ (ಸಾಮೂಹಿಕ ಎಂಬುದು ವಸ್ತುಸ್ಥಿತಿಯನ್ನು ಸರಿಯಾಗಿ ವ್ಯಂಜಿಸಲಾರದ ಒಂದು ಶುಷ್ಕ ಪದ) ಅಥವಾ ಸರ್ವ ಸಾಧಾರಣವಾದ ಇಲ್ಲವೆ ಸಾಮುದಾಯಿಕವಾದ ಆತ್ಮ, ಮನಸ್ಸು ಮತ್ತು ಶರೀರಗಳಿಂದ ಕೂಡಿದ ಸಂಘಟಿತ ಜೀವಿ.

ಸಮಾಜದ ಜೀವನವು ಮಾನವವ್ಯಕ್ತಿಯ ಭೌತಿಕ ಬಾಳಿನಂತೆ ಹುಟ್ಟು, ಬೆಳವಣಿಗೆ, ಯೌವನ, ಮುಪ್ಪು ಮತ್ತು ಅವನತಿಗಳನ್ನು ಚಕ್ರಗತಿಯಿಂದ ಹೊಂದುತ್ತದೆ. ಈ ಕೊನೆಯ ಅವಸ್ಥೆಯು ತಡೆಯಿಲ್ಲದೆ ದೂರಸಾಗಿ ಕ್ಷೀಣದಶೆಯನ್ನು ಮುಟ್ಟಿದರೆ ಅದು ಅವಸಾನ ಹೊಂದೀತು–ಅಂತೆಯೇ ಭಾರತ ಮತ್ತು ಚೀನಗಳನ್ನುಳಿದು ಮಿಕ್ಕೆಲ್ಲ ಪ್ರಾಚೀನ ಜನಾಂಗಗಳೂ ರಾಷ್ಟ್ರಗಳೂ ಮುಪ್ಪಡಸಿ ಮಾನವ ಸಾಯುವಂತೆ ನಶಿಸಿದವು. ಆದರೆ ಸಮಾಜಪುರುಷನಿಗೆ ತನ್ನ ಪುನರ್ನವೀಕರಣದ, ಪುನರುದಯದ ಮತ್ತು ಹೊಸ ಚಕ್ರಗತಿಯಲ್ಲಿ ಹೊರಡುವ ಶಕ್ತಿಯೂ ಇದೆ. ಯಾಕೆಂದರೆ ಪ್ರತಿ ಒಂದು ಜನಾಂಗದಲ್ಲೂ ಒಂದೊಂದು ಆತ್ಮ ಅಥವಾ ಪ್ರಾಣಸದೃಶ ಭಾವವು ಕಾರ್ಯಗತವಾಗಿರುತ್ತದೆ; ಆ ಭಾವ ಅದರ ಶರೀರಕ್ಕಿಂತ ಕಡಿಮೆ ಮರ್ತ್ಯವಾಗಿರುತ್ತದೆ; ಮತ್ತು ಈ ಭಾವವು ಸಾಕಷ್ಟು ಶಕ್ತವಾಗಿಯೂ ವ್ಯಾಪಕವಾಗಿಯೂ ಸತ್ವದಾಯಕವಾಗಿಯೂ ಇದ್ದರೆ ಅಲ್ಲದೆ ಸಾಕಷ್ಟು ಸಮರ್ಥ, ಸಚೇತನ ಮತ್ತು ನಿರಂತರ ವಿಕಾಸದೊಡನೆ ಸ್ತಿಮಿತತೆಯನ್ನು ಅಳವಡಿಸಿಕೊಳ್ಳುವಷ್ಟು ಮನಸ್ಸೂ ಪ್ರವೃತ್ತಿಯೂ ಪರಿವರ್ತನೀಯವಾಗಿ ಉಳ್ಳ ಇಲ್ಲವೆ ತನ್ನ ಬಾಳಿನಲ್ಲಿ ಆ ಆತ್ಮ ಅಥವಾ ಪ್ರಾಣಸದೃಶ ಭಾವವನ್ನು ಅರಗಿಸಿಕೊಳ್ಳಬಲ್ಲ ಜನತೆಯಾದರೂ ಇದ್ದರೆ ಕೊನೆಯದಾಗಿ ನಿರ್ವೀರ್ಯತೆಯನ್ನು ಹೊಂದುವ ಮೊದಲು ಅಂಥ ಅನೇಕ ಚಕ್ರನೇಮಿಕ್ರಮಗಳನ್ನು ಅದು ಮುಗಿಸೀತು. ಅಷ್ಟೇ ಅಲ್ಲದೆ ಅಂಥ ಸ್ಥಾಯಿಭಾವವು ಸಮಾಜ ಪುರುಷನ ಆತ್ಮಾಭಿವ್ಯಕ್ತಿಯ ತತ್ವ ಮಾತ್ರ; ಮತ್ತು ಪ್ರತಿಯೊಂದು ಸಾಮಷ್ಟಿಕ ಆತ್ಮವೂ ಕಾಲಭೂಮಿಗಳ ಪರಿಧಿಯಲ್ಲಿ ವ್ಯಕ್ತವಾಗಿ ಮಾನುಷ ಸಂಸ್ಕೃತಿಚಕ್ರಗಳ

ನೀಚೋಚ್ಚದಶೆಗಳಲ್ಲಿ ಹಾಯ್ದು ಹೋಗಿ ತನ್ನ ಪೂರ್ಣತೆಯನ್ನೇ ಮುಟ್ಟಲೇನೋ ಎಂಬಂತೆ ಅನ್ವೇಷಣೆಯಲ್ಲಿರುವ ಮಹತ್ತರ ನಿತ್ಯಾತ್ಮದ ಒಂದು ವಾಹಕ ಮತ್ತು ವ್ಯಂಜಕ ಎನ್ನಬಹುದು. ಆಗ ತನ್ನ ಭೌತಿಕ ಮತ್ತು ಬಾಹ್ಯ ಜೀವನದಲ್ಲಲ್ಲದೆ, ಬೆಳವಣಿಗೆಯ ಬದಲಾವಣೆಗಳನ್ನು ನಿಯಂತ್ರಿಸುವ ಹಾಗೂ ತನ್ನ ಮನಃಕವಾಟಕ್ಕೆ ಕೈಯಾಗಿರುವ ಉಕ್ತ ಸ್ಥಾಯಿಭಾವದ ಶಕ್ತಿಯಲ್ಲಷ್ಟೇ ಅಲ್ಲದೆ ಒಂದು ಜನತೆಯು ಹಿನ್ನೆಲೆಯಲ್ಲಿಯ ಆತ್ಮ ಅಥವಾ ಸತ್ವದಲ್ಲಿ ಜಾಗ್ರೃತವಾಗಿ ಬಾಳಿಯೂ ನಿರ್ವೀರ್ಯವಾಗದೆ, ಅವಸಾನ ಹೊಂದದೆ, ಲಯಿಸದೆ, ಮಿಕ್ಕವುಗಳೊಡನೆ ವಿಲೀನವಾಗದೆ ಹೊಸ ಜನಾಂಗಕ್ಕಾಗಲಿ, ಕುಲಕ್ಕಾಗಲಿ ಸ್ಥಳ ಬಿಟ್ಟುಕೊಡದೆ, ಸ್ವತಃ ತಾನೇ ಚಿಕ್ಕ ಚಿಕ್ಕ ಸಮಾಜಗಳನ್ನು ತನ್ನಲ್ಲಿ ಲಯಗೊಳಿಸಿಕೊಂಡು ತನ್ನ ನೈಸರ್ಗಿಕವಾದ ಬೆಳವಣಿಗೆಯ ಪರಮಾವಧಿಯನ್ನು ಮುಟ್ಟಿಯೂ ಅನೇಕ ಕಾಯಕಲ್ಪಗಳ ಮೂಲಕ ಸಾಯದೆ ಉಳಿದೀತು. ಅಥವಾ ಯಾವುದಾದರೂ ಒಂದು ಕಾಲದಲ್ಲಿ ತೀರಾ ನಿರ್ವೀರ್ಯ ದಶೆ ಇಲ್ಲವೆ ಲಯಗತಿಯಲ್ಲಿ ಅದು ನಿಂತಾಗಲೂ ತನ್ನ ಸತ್ವಬಲದಿಂದ ಪುನಃ ಬೆಳೆದೆದ್ದು ಮತ್ತೊಂದು ಮತ್ತೂ ಹೆಚ್ಚು ವೈಭವಪೂರ್ಣವಾದ ಸಂಸ್ಕೃತಿ ಚಕ್ರವನ್ನು ಆರಂಭಿಸೀತು. ಭಾರತದ ಇತಿಹಾಸವೆಂದರೆ ಅಂಥ ಜನತೆಯ ಜೀವನದ ಚರಿತ್ರೆ.

ಭಾರತೀಯ ಜನತೆಯ ಜೀವನ, ಸಂಸ್ಕೃತಿ ಹಾಗೂ ಸಾಮಾಜಿಕ ಧ್ಯೇಯಗಳನ್ನು ನಿಯಂತ್ರಿಸಿದ ಪ್ರಭಾವಿ ಕಲ್ಪನೆ ಎಂದರೆ ಆತ್ಮಾನ್ವೇಷಣೆ; ಮತ್ತು ಕ್ರಮವಾಗಿ ಅನ್ನಮಯ, ಪ್ರಾಣಮಯ ಹಾಗೂ ಮನೋಮಯ ಪ್ರಕೃತಿಯ ವಿಕಾಸಕ್ಕೊಳಪಟ್ಟು, ಒಂದು ಕವಚವನ್ನಾಗಿಯೂ ಆ ಶೋಧದ ಮತ್ತು ನೈಸರ್ಗಿಕ ಅಜ್ಞಾನದಿಂದ ಆಧ್ಯಾತ್ಮಿಕ ಬಾಳಿಗೇರುವುದರ ಅಂಗ ಮತ್ತು ಸಾಧನವನ್ನಾಗಿಯೂ ಜೀವನವನ್ನು ಬಳಸಿಕೊಳ್ಳುವುದೇ ಆಗಿದೆ. ರಾಜಕೀಯ ಮತ್ತು ಸಾಮಾಜಿಕ ರಚನೆಯ ಹಾಗೂ ಭೌತಿಕ ಜೀವನದ ವಿಷಮ ಪರಿಸ್ಥಿತಿಯಲ್ಲಿಯೂ ಭಾರತವು ಈ ಪ್ರಭಾವಿ ಕಲ್ಪನೆಯನ್ನು ಎಂದೂ ಪೂರ್ಣಮರೆಯಲಿಲ್ಲ. ಆದರೆ ಮನಸ್ಸಿನ, ಧರ್ಮದ, ವಿಚಾರದ, ಕಲೆಯ ಅಥವಾ ಸಾಹಿತ್ಯದ ಮೂಲಕ ಆಗುವ ಆತ್ಮಾಭಿವ್ಯಂಜನೆಗಿಂತ ಸಾಮಾಜಿಕ ಜೀವನವನ್ನು ಮನುಷ್ಯನ ನೈಜ ಆತ್ಮದ ಮತ್ತು ಅವನ ಅಂತರಾಳದಲ್ಲಿಯ ಕೆಲವು ಅತ್ಯುನ್ನತ ಆತ್ಮಸಿದ್ಧಿಗಳ ಅಭಿವ್ಯಂಜಕವನ್ನಾಗಿ ಮಾಡುವುದು ಬಹು ಕಷ್ಟ. ಇವುಗಳಲ್ಲಿ ಭಾರತವು ಅಸಾಧಾರಣ ಉನ್ನತಿ–ವಿಸ್ತಾರಗಳನ್ನು ಸಾಧಿಸಿದರೂ ಅದು ತನ್ನ ಹೊರಬಾಳಿನಲ್ಲಿ ಕೆಲ ಪಾಕ್ಷಿಕ ಸಿದ್ದಿಗಳನ್ನು ಮತ್ತು ಬಹಳ ಅಪೂರ್ಣ ತಾತ್ಕಾಲಿಕ ಫಲಗಳನ್ನು ಪಡೆಯುವುದಕ್ಕಿಂತ ಮುಂದೆ ಹೋಗಲು ಶಕ್ತವಾಗಲಿಲ್ಲ, ಬಾಹ್ಯ ಜೀವನದಲ್ಲಿ ಅದು ಸಾಧಿಸಿದ್ದೆಂದರೆ: ಒಂದು ಸಾರ್ವತ್ರಿಕ ಆತ್ಮಸಿದ್ದಿಯ ಸಂಕೇತಮಾಲೆ, ಆ ಮಹೋನ್ನತ ಆಶೆಯ ಪ್ರಸಾರ, ಸಮಷ್ಟಿಜೀವನಕ್ಕೆ ಕೊಟ್ಟ ಒಂದು ಬಗೆಯ ರೂಪ ಮತ್ತು ಆಧ್ಯಾತ್ಮಿಕ ಕಲ್ಪನೆಗಳಿಗನುಗುಣವಾದ ಸಂಸ್ಥೆಗಳ ನಿರ್ಮಾಣ. ರಾಜನೀತಿ, ಸಮಾಜ ನೀತಿ, ಅರ್ಥನೀತಿಗಳು ಮಾನವನ ಧ್ಯೇಯ ಮತ್ತು ನಡತೆಯ ಮೊದಲನೆಯ ಎರಡು

ಸ್ಥೂಲ ಭಾಗಗಳು; ಭಾರತೀಯ ಪದ್ಧತಿಯಲ್ಲಿ ಅವನ್ನು ಅರ್ಥ ಮತ್ತು ಕಾಮಗಳೆನ್ನಲಾಗುತ್ತದೆ. ಜೀವನದ ಈ ಹೊರಬದಿಯಲ್ಲೂ ಮತ್ತು ರಾಜಕೀಯ ಜೀವನದಲ್ಲೂ ಉಕ್ತ ಪುರುಷಾರ್ಥಗಳೆರಡಕ್ಕೂ ಹೆಚ್ಚು ಉನ್ನತವಾದ ಧರ್ಮವೆಂಬ ಪುರುಷಾರ್ಥವನ್ನು ಯಾವಾಗಲೂ ಪೂರ್ಣವಾಗಿ ತಂದದ್ದು ಇಲ್ಲ; ರಾಜಕೀಯ ವ್ಯವಹಾರವನ್ನು ನೀತಿಯಿಂದ ನಿಯಂತ್ರಿಸುವ ಪ್ರಯತ್ನವು ಸಾಮಾನ್ಯವಾಗಿ ಬರಿ ಸೋಗು. ಇನ್ನೂ ಅಪ್ರಬುದ್ಧವಾಗಿರುವ ಮಾನವನ ಗತೇತಿ ಹಾಸದಲ್ಲಿ ಎಲ್ಲೂ ಶ್ರೇಯಸ್ಸನ್ನು ಅಂತ್ಯಧ್ಯೇಯವನ್ನಾಗಿಟ್ಟುಕೊಂಡು ಸಾಮೂಹಿಕ ಬಾಹ್ಯ ಜೀವನವನ್ನು ಸುಸಂಬದ್ಧಗೊಳಿಸುವುದನ್ನು ಅಥವಾ ನಿಜವಾಗಿ ಏಕೀಕರಿಸುವುದನ್ನು ಯೋಚಿಸಿಯೂ ಇಲ್ಲ, ಪ್ರಯತ್ನಿಸಿಯೂ ಇಲ್ಲ, ಅದರಲ್ಲಿ ಜಯ ಹೊಂದಿದ್ದಂತೂ ಎಲ್ಲಿಯೂ ಇಲ್ಲವೇ ಇಲ್ಲ. ಅದರಂತೆ ಭಾರತದ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿಯೂ (ಮತ್ತು ಮಿಕ್ಕ ಕ್ಷೇತ್ರಗಳಿಗಿಂತ ಮುನ್ನವೇ ಆ ಪ್ರಯತ್ನವು ಮುರಿದು ಬಿದ್ದರೂ) ಅದರ ಜೀವನದ, ಪದ್ಧತಿಯ, ದಶಾಂತರದ ರಾಜಕೀಯ ನಿಯಮದಲ್ಲಿಯೂ ಹಿನ್ನೆಲೆಯಲ್ಲಿ ಅಧ್ಯಾತ್ಮ ಸಂಕೇತವನ್ನುಳ್ಳ (ಅಧ್ಯಾತ್ಮ ಜೀವನದ ಪೂರ್ಣ ಸಿದ್ಧಿ ಪಡೆಯುವುದನ್ನು ವ್ಯಕ್ತಿಯ ಪ್ರಯತ್ನಕ್ಕೆ ಮಹೋನ್ನತ ಗುರಿಯೆಂದು ಬಿಟ್ಟುಕೊಡಲಾಗಿತ್ತು) ಪ್ರಾಚೀನ ಪದ್ಧತಿಯು ಪ್ರಗತಿ ಹೊಂದದಷ್ಟು ದೂರ ಧರ್ಮದ ಆಳಿಕೆ ನಡೆಸಿದ್ದನ್ನು ನಾವು ಕಾಣುತ್ತೇವೆ. ನಿರಂತರ ಪ್ರಯತ್ನದಿಂದಲೂ ಸಹನೆಯಿಂದಲೂ ಇಷ್ಟರ ಮಟ್ಟಿನ ಸಾಧನೆಯನ್ನು ಅದು ಮಾಡಿತು; ಮತ್ತು ಅದು ತನ್ನ ಸಾಮಾಜಿಕ ರಾಜಕೀಯ ಸಂಘಟನೆಗೆ ಒಂದು ವಿಲಕ್ಷಣವಾದ ಸ್ವರೂಪವನ್ನು ಕೊಟ್ಟಿತು. ಸಂಪೂರ್ಣ ಗುರಿಯಿಂದ ಸ್ವೀಕರಿಸಿ ವಿಸ್ತೃತಗೊಳಿಸುತ್ತ, ಸಮಗ್ರ ಅನುಭವದಿಂದಲೂ, ಅದರ ಮೊದಲಿನ ಧ್ಯೆಯವೇ ಆದ ಜೀವನವನ್ನು ಮತ್ತು ಆಧ್ಯಾತ್ಮವನ್ನು ಸಮನ್ವಯಗೊಳಿಸುವ ಹೆಚ್ಚು ನಿಶ್ಚಯ ಜ್ಞಾನದಿಂದಲೂ ಇನ್ನೂ ನಮ್ಮ ಬಾಳಿನಲ್ಲಿ ಸಾಧಿಸಲಾಗದ ಆಧ್ಯಾತ್ಮಿಕ ಸುಪ್ತ ಶಕ್ತಿಗಳು ಸತ್ಯ ಸಿದ್ಧಿಯ ಮೇಲೆ ನಿರ್ಮಿತವಾದ ಮಾನವ್ಯ ಸಾಮೂಹಿಕ ಅಸ್ತಿತ್ವದ ಸ್ಥಾನ ಮತ್ತು ಕಾರ್ಯಗಳನ್ನು ಗೊತ್ತುಪಡಿಸುವುದು ಮತ್ತು ಜನರ ಜೀವನದಲ್ಲಿ ಆತ್ಮಶಕ್ತಿಯನ್ನು ತುಂಬುವುದರ ಮೂಲಕ ಮಾನವ ಕುಲದಲ್ಲಿಯ ಗುರುತರ ಆತ್ಮದ ಲೀಲೆಯೆಂದೂ ವಿಶ್ವಸತ್ವವೆಂದೂ ವಿರಾಟ್‌ಪುರುಷನ ಜಾಗೃತ ಸಾಮುದಾಯಿಕ ಶರೀರ ಮತ್ತು ಆತ್ಮವೆಂದೂ ತಿಳಿಸಿಕೊಡುವುದು ಬಹುಶಃ ಭವಿಷ್ಯದ್ಭಾರತಕ್ಕೆ ಸೇರಿದುದು.

## ೨. ಭಾರತದ ಸ್ವಭಾವ ಸಹಜವೂ ಬಲಿಷ್ಠವೂ ಆದ ಸ್ಥಿರವ್ಯವಸ್ಥೆ

ಪ್ರಾಚೀನ ಭಾರತದ ರಾಜ್ಯಧರ್ಮಕ್ಕೂ ಯುರೋಪಿಯನ್ನರದಕ್ಕೂ ವ್ಯತ್ಯಾಸವನ್ನು ಹುಟ್ಟಿಸುವ ವಿಷಯ ಒಂದಿರುವುದನ್ನು ಗಮನಿಸಬೇಕು; ಮತ್ತು ಮಾನಸಿಕ ವಿಷಯಗಳಲ್ಲಿ ಹಾಗೂ ಅಂತಃ ಸಂಸ್ಕೃತಿಯಲ್ಲಿ ಹೇಗೋ ಹಾಗೇ ಪಶ್ಚಿಮದ ಮಾನದಂಡವನ್ನು ಇಲ್ಲಿ

ಕೂಡ ಅನ್ವಯಿಸಲು ಬರದು, ಮಾನವ ಸಮಾಜವು ಬೆಳವಣಿಗೆಯಲ್ಲಿ ತನ್ನ ಸಂಪೂರ್ಣ ಸಾಧ್ಯತೆಗಳತ್ತ ಸಾಗುವ ಮೊದಲು ವಿಕಾಸದ ಮೂರು ಘಟ್ಟಗಳನ್ನು ಹಾಯ್ದು ಹೋಗಬೇಕು, ಸಾಮುದಾಯಿಕ ಅಸ್ತಿತ್ವದ ಸ್ವರೂಪ ಮತ್ತು ಕ್ರಿಯೆಗಳು ಎಂದರೆ ಅದರ ಬಾಳಿನ ಶಕ್ತಿ ಮತ್ತು ತತ್ವಗಳ ಲೀಲೆ, ಇದು ಪ್ರಥಮಾವಸ್ಥೆ, ಹೀಗಿರುವಾಗ ಅದರ ಎಲ್ಲ ಅಭಿವೃದ್ಧಿ, ಆಕೃತಿ, ರೂಢಿ, ಸಂಸ್ಥೆಗಳೂ, ಒಂದು ಸಹಜ ಸಂಘಟಿತ ಸಮಭಿವೃದ್ಧಿಯೂ, ಅದಕ್ಕೆ ಬೇಕಾದ ಚಾಲಕ ಹಾಗೂ ಘಟಕ ಶಕ್ತಿಯೂ ಹೆಚ್ಚಾಗಿ ಅದರ ಅಂತರ್ ಜೀವನದ ಅಧಶ್ಚೇತನೆಯಿಂದಲೇ ಬಂದಿತ್ತು. ಆ ಶಕ್ತಿಯು ನಿಶ್ಚಿತ ಉದ್ದೇಶವಿಲ್ಲದೆ ಭಾರತೀಯರ ಸಾಮುದಾಯಿಕ ಮನೋಧರ್ಮ, ಮನೋವೃತ್ತಿ ಮತ್ತು ಜೈವಿಕ ಹಾಗೂ ಭೌತಿಕ ಅವಶ್ಯಕತೆಗಳನ್ನು ವ್ಯಕ್ತಪಡಿಸುತ್ತಲೂ ಒಂದು ಅಂತಃ ಪ್ರೇರಣೆಯ ಹಾಗೂ ಸಮಷ್ಟಿಯ ಮನ–ಭಾವನೆಗಳ ಪ್ರಚೋದಕವಾದ ಆವರಣದ ಒತ್ತಾಯಕ್ಕೊಳಗಾಗಿ ತನ್ನ ಆ ಕಾರ್ಯವನ್ನು ಹಾಗೇ ಸಾಗಿಸಿಕೊಂಡು ಹೋಗುತ್ತಲೂ ಕೆಲವೊಮ್ಮೆ ಬದಲಾಯಿಸುತ್ತಲೂ ಇತ್ತು. ಈ ಅವಸ್ಥೆಯಲ್ಲಿ ಜನತೆ ವಿಚಾರಮಾರ್ಗದಲ್ಲಿ ಸಾಕಷ್ಟು ಚತುರವಾಗಿದ್ದಿಲ್ಲ; ಇನ್ನೂ ಅದು ವಿಚಾರಶೀಲ ಸಾಮೂಹಿಕ ಪುರುಷಕಾರಕ್ಕೆ ಸಿದ್ಧವಾಗಿರಲಿಲ್ಲ. ಅದು ವಿಚಾರಪರ ಇಚ್ಛಾಶಕ್ತಿಯಿಂದ ತನ್ನ ಇಡೀ ಸಮಷ್ಟಿ ಜೀವನವನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದ್ದಿಲ್ಲ, ಕೇವಲ ತನ್ನ ಪ್ರಾಣಮಯ ಪ್ರತಿಭೆಗೆ ಅಥವಾ ಅದರ ಪ್ರಾಥಮಿಕ ಮಾನಸರೂಪಕ್ಕೆ ಅನುಗುಣವಾಗಿ ಬದುಕುತ್ತಿತ್ತು.

ಅನೇಕ ಪ್ರಾಚೀನ ಮತ್ತು ಮಧ್ಯಯುಗೀನ ಸಮಷ್ಟಿಗಳಲ್ಲಿ ಹೇಗೋ ಹಾಗೇ ಭಾರತೀಯ ಸಮಾಜದ ಮತ್ತು ರಾಜ್ಯಧರ್ಮದ ಮೊದಲ ಚೌಕಟ್ಟು ಅಂಥದೇ ಅವಧಿಯಲ್ಲಿ ಬೆಳೆಯಿತು. ಆದರೆ ಬೆಳೆಯುತ್ತಿದ್ದ ಸಾಮಾಜಿಕ ಜಾಗೃತಿ ಉಂಟಾದ ಅನಂತರದ ಅವಧಿಯಲ್ಲಿ ಅವು ಪರಿತ್ಯಕ್ತವಾಗದೆ ಭಾರತೀಯ ಜನತೆಯ ಸಚೇತನ ಪ್ರತಿಭೆಗೆ, ಮೂಲಪ್ರವೃತ್ತಿಗಳಿಗೆ, ಮತ್ತು ಮನಸ್ಸಿಗೆ ಸಹಜವೂ ಬಲಿಷ್ಠವೂ ಸ್ತಿಮಿತವೂ ಆದ ಜೀವಂತ ವ್ಯವಸ್ಥೆಯಾಗುವಂತೆ ಇನ್ನಷ್ಟು ಸುಸ್ವರೂಪಗೊಳಿಸಲ್ಪಟ್ಟವು, ಸಂವರ್ಧಿಸಲ್ಪಟ್ಟವು ಮತ್ತು ಕ್ರೋಢೀಕರಿಸಲ್ಪಟ್ಟವು.

## ೩. ಯುರೋಪಿಯನ್ನರ ರಾಜಕೀಯ ಮತ್ತು ಸಾಮಾಜಿಕ ಜೀವನದ ವೈಲಕ್ಷಣ್ಯ

ಮೊದಲು ಅದರ ಹೆಚ್ಚು ಸುಸಂಸ್ಕೃತ ಹೃದಯಗಳಲ್ಲಿಯೂ ಅನಂತರ ಹೆಚ್ಚು ಸಾಮಾನ್ಯವಾಗಿ, ಕ್ರಮೇಣ ಸೂಕ್ಷ್ಮ ಸೂಕ್ಷ್ಮತರವಾಗಿ ಅದರ ಎಲ್ಲ ಭಾಗಗಳಲ್ಲಿಯೂ ಸಮಷ್ಟಿ ಮನಸ್ಸು ಹೆಚ್ಚು ಹೆಚ್ಚು ಬೌದ್ಧಿಕವಾಗಿ ಜಾಗೃತವಾಗುವುದು ಸಮಾಜವಿಕಾಸದ ಎರಡನೆಯ ಅವಸ್ಥೆ. ಪ್ರಬುದ್ಧ ಪ್ರಜ್ಞೆಯ ಬೆಳಕಿನಲ್ಲಿಯೂ ಕೊನೆಯದಾಗಿ ವಿಮರ್ಶಾತ್ಮಕವೂ ರಚನಾತ್ಮಕವೂ ಆದ ಕಾರ್ಯಕಾರಣ ವಿವೇಕದ ಶಕ್ತಿಯಿಂದಲೂ

ಅದು ತನ್ನ ಜೀವನದ ಸಾಮುದಾಯಿಕ ಕಲ್ಪನೆ, ಅವಶ್ಯಕತೆ ಮತ್ತು ಸಂಸ್ಥೆಗಳನ್ನು ಪರಾಮರ್ಶಿಸಲೂ ಅವುಗಳೊಡನೆ ವ್ಯವಹರಿಸಲೂ ಕಲಿಯುತ್ತದೆ. ಈ ಅವಸ್ಥೆಯು ಮಹಾಸಿದ್ಧಿಯ ಸಂಭವಗಳಿಂದ ತುಂಬಿದೆ; ಆದರೆ ಜೊತೆಗೆ ಸಹಜವಾದ ಗಂಭೀರ ಅಪಾಯಗಳಿಂದಲೂ ಕೂಡಿದೆ. ಅದರಿಂದ ಬರುವ ಮೊದಲ ಲಾಭಗಳೆಂದರೆ: ಸ್ಪಷ್ಟವೂ ಅರ್ಥಗ್ರಾಹಕವೂ ಶುದ್ಧವೂ ಆದ ಶಾಸ್ತ್ರಜ್ಞಾನ ಹಾಗೂ ಅದರ ಅತ್ಯುನ್ನತಾವಸ್ಥೆಯಲ್ಲಿ ಶೋಧಕವೂ, ರಚನಾತ್ಮಕವೂ, ವೈಜ್ಞಾನಿಕವೂ ಆದ ವಿವೇಚನಾಶಕ್ತಿಯ ಪೂರ್ಣ ಉಪಯೋಗ ಹಾಗೂ ತತ್ಪರಿಣಾಮ ತತ್ಪಾರಿತೋಷಿತ ರೂಪದಲ್ಲಿ ದೊರಕುವ ನಿಯತವೂ ಸುಭದ್ರವೂ ಆದ ಕಾರ್ಯ ಸಾಮರ್ಥ್ಯ. ಸಮಾಜವಿಕಾಸದ ಈ ಅವಸ್ಥೆಯ ಮತ್ತೂ ಹೆಚ್ಚಿನ ಪರಿಣಾಮವೆಂದರೆ ಮಾನವನನ್ನು ಅವನ ಪ್ರಾಣಮಯ ಅಸ್ತಿತ್ವದಿಂದ, ಅವನ ಪ್ರಥಮದ ಸಾಮಾಜಿಕ, ಆರ್ಥಿಕ ಮತ್ತು ರಾಜನೈತಿಕ ಆಶೆ–ಅವಶ್ಯಕತೆಗಳಿಂದ ಹೆಚ್ಚು ಹೆಚ್ಚು ಉದಾತ್ತತರ ಸಮಾಜಜೀವನವನ್ನು ನಡೆಸಲು ಸಾಧ್ಯವಾಗುವಂತೆ, ಆಶೆ ಆಕಾಂಕ್ಷೆಗಳು ಸಾಂಪ್ರದಾಯಿಕವಾಗಿ ರೂಪಿಸಿದ ಅಚ್ಚಿನಿಂದ ಅವನನ್ನು ಮೇಲಕ್ಕೆತ್ತಿ ತನ್ನ ಸಮಷ್ಟಿಜೀವನದಲ್ಲಿ ಧೀರ ಪ್ರಯೋಗವನ್ನು ಮಾಡುವ ಪ್ರೇರಣೆಯನ್ನು ಸ್ಫುರಣಗೊಳಿಸುವುದು. ಆದರೆ ಸ್ವಾಭಾವಿಕವಾದ ಅತ್ಯುನ್ನತ ಪರಿಣಾಮವೆಂದರೆ ನಿಯತವೂ, ಪರಿಪೂರ್ಣವೂ ಸುರಕ್ಷಿತವೂ ಆದ ದಕ್ಷತೆಯಿಂದ ವೈಜ್ಞಾನಿಕ ಮನೋವೃತ್ತಿಯನ್ನು ಜೀವನಕ್ಕೆ ಅನ್ವಯಿಸುವುದೇ ಆಗಿದೆ. ಮಹತ್ತರವೂ ಉದ್ದೇಶಪೂರ್ವಕವಾಗಿ ಎದುರಿಟ್ಟುಕೊಂಡುದೂ ಆದ ಸಾಮಾಜಿಕ ರಾಜಕೀಯ ಧ್ಯೇಯಗಳ ಆರಾಧನೆ ಹಾಗೂ ಆ ಪ್ರಯತ್ನದಲ್ಲಿ ಸಾಧಿಸಿದ ಪ್ರಗತಿಮಾನದಂಡ ಇವು–ಎಷ್ಟೇ ಸದೋಷವೂ ಪರಿಮಿತವೂ ಆಗಿದ್ದರೂ–ಯುರೋಪಿನ ರಾಜಕೀಯ ಮತ್ತು ಸಾಮಾಜಿಕ ಪ್ರಯತ್ನದ ಗಣ್ಯ ಪ್ರಯೋಜನಗಳು.

ಇನ್ನೊಂದು ದೃಷ್ಟಿಯಿಂದ ಅವಲೋಕಿಸಿದರೆ ತಾನು ಭೌತಿಕ ಜೀವನದ ಸರ್ವತಂತ್ರ ಸ್ವತಂತ್ರ ಪ್ರಶಾಸಕ ಎಂದು ತಿಳಿದುಕೊಂಡು ತರ್ಕ ಬುದ್ಧಿಯು ಅದರೊಡನೆ ವ್ಯವಹರಿಸುವ ನಟನೆ ಮಾಡುವುದೆಂದರೆ, ಸಮಾಜವನ್ನು ಸಚೇತನ ಪದಾರ್ಥದ ಬೆಳವಣಿಗೆ ಎಂಬ ಸತ್ಯವನ್ನುಳಿದು ಎತ್ತಲೋ ದೂರ ನೋಡಿ ಅದನ್ನು ಇಚ್ಛೆ ಬಂದಂತೆ ತಿದ್ದಬಹುದಾದ ಹಾಗೂ ಬುದ್ಧಿಯ ನಿರಂಕುಶ ಆಜ್ಞೆಯ ಅನುಸಾರ ಕಟ್ಟಿಗೆ–ಕಬ್ಬಿಣಗಳನ್ನು ಹೇಗೋ ಹಾಗೆ ರಚಿಸಬಹುದಾದ ಒಂದು ಯಂತ್ರವೆಂದು ನಡೆಸಿಕೊಳ್ಳುವುದೇ ಆಗಿದೆ. ನಾಗರಿಕ ನಡತೆಯನ್ನು ತೋರುವ, ದುಡಿಯುವ, ರಚನಾತ್ಮಕ ಕಾರ್ಯ ಮಾಡುವ ಯಾಂತ್ರಿಸುವ ಸಮರ್ಥ ವಿಚಾರಶಕ್ತಿಯು ಒಂದು ಜನತೆಯ ಚೈತನ್ಯಮಯ ಜೀವನದ ಸರಳ ತತ್ವಗಳ ಮೇಲಿನ ಹಿಡಿತವನ್ನು ಕಳೆದು ಕೊಳ್ಳುತ್ತದೆ; ಅದು ಅದನ್ನು ಅದರ ಬಾಳಿನ ಕಾಣಿಸದ ಬೇರುಗಳಿಂದ ಹರಿದೊಗೆಯುತ್ತದೆ. ಇದರ ಪರಿಣಾಮವೆಂದರೆ ಒಂದು ಪದ್ಧತಿ ಅಥವಾ ಸಂಸ್ಥೆಯ ವಿಧಾನದ ಹಾಗೂ ಪ್ರಶಾಸನದ ಮೇಲೆ ಅತಿಶಯವಾಗಿ ಅವಲಂಬಿಸುವುದು; ಅಲ್ಲದೆ ಸಚೇತನ ಜನತೆಯ ಸ್ಥಳದಲ್ಲಿ ಒಂದು ಯಾಂತ್ರಿಕ

ರಾಜ್ಯವನ್ನು ಬೆಳೆಸುವ ಮಾರಕ ಪ್ರವೃತ್ತಿ ಉಂಟಾಗುವುದು. ಸಮಷ್ಟಿಜೀವನದ ಈ ಒಂದು ಸಾಧನವು ಇಡಿ ಜೀವನಕ್ಕೆ ಆದೇಶವಾಗುವುದು. ಮತ್ತು ಅದರಿಂದ ಸಮರ್ಥವಾದರೂ ಯಾಂತ್ರಿಕವೂ ಕೃತಕವೂ ಆದ ಸಂಘಟನೆ ಉದಯಿಸುವುದು. ಆದರೆ ಈ ಬಾಹ್ಯ ವಿಕಾಸಕ್ಕೆ ತೆರುವ ದಂಡವೋ ಎಂಬಂತೆ ಒಂದು ಸ್ವತಂತ್ರವೂ ಒಂದು ಸಚೇತನವೂ ಆದ ಜನತೆಯ ನಿಕಾಯದಲ್ಲಿ ಸಂಘಟಿತವಾಗಿ ಸ್ವಯಂ ಪ್ರವರ್ಧಮಾನ ಸಮಾಜ ಪುರುಷನ ಬಾಳಿನ ಸತ್ಯವನ್ನು ಕಳೆದುಕೊಳ್ಳಬೇಕಾಗುತ್ತದೆ. ಯುರೋಪಿನ ದೌರ್ಬಲ್ಯವೆಂದರೆ ತನ್ನ ಯಾಂತ್ರಿಕ ಕ್ರಮದ ಜಡ ಭಾರದಡಿಯಲ್ಲಿ ಜೈವಿಕ ಮತ್ತು ಆಧ್ಯಾತ್ಮಿಕ ವಿಚಾರವನ್ನು ಔಂಕುವ ತಪ್ಪೇ ಆಗಿದೆ. ಈ ದೌರ್ಬಲ್ಯವೇ ಅದರ ಮಹಾಶಯವನ್ನು ವಿಕೃತಗೊಳಿಸಿ ಅದರ ಉನ್ನತತರ ಧ್ಯೇಯಗಳ ನಿಜವಾದ ಸಾಧನೆಗೆ ವಿಘ್ನವುಂಟುಮಾಡಿದೆ.

# ೪. ಬರಲಿರುವ ತೃತೀಯ ಪಂಥ

ವ್ಯಷ್ಟಿಗೆ ಹೇಗೋ ಹಾಗೆ ಸಮಷ್ಟಿಗಾದರೂ ತೃತೀಯಾವಸ್ಥೆಯನ್ನು ಮುಟ್ಟಿದಲ್ಲದೆ ಅದು ಮೊದಲು ಕಂಡ ಮತ್ತು ಆರಾಧಿಸಿದ ಧ್ಯೇಯಗಳ ಮೂಲ ಆಕಾರವನ್ನೂ ಸ್ವರೂಪವನ್ನೂ ಶೋಧಿಸಲಾರದು. ಅವುಗಳ ಸಾಫಲ್ಯದ ನಿಜ ಸಾಧನ ಸನ್ನಿವೇಶಗಳನ್ನು ಕಾಣಲಾರದು. ಆದರ್ಶ ಸಮಾಜವೆಂಬುದು ಅಲ್ಲಿಯ ತನಕ ತಿರುತಿರುಗಿ ತೇಲುತ್ತ, ಆಸೆಯನ್ನು ಮಸುಳಿಸುತ್ತ, ಹಿಡಿದುಕೊಳ್ಳಹೋಗುವ ಕೈಯಿಂದ ತಪ್ಪಿಸಿಕೊಳ್ಳುತ್ತ ಕಣ್ಣೆದುರು ಸುಳಿವ ಪ್ರಭಾಮಯ ಮೇಘಸ್ಥ ಛಾಯೆ ಮಾತ್ರ. ಸಮಾಜಪುರುಷನು ಹೆಚ್ಚು ಗಂಭೀರವಾಗಿ ಬಾಳಲಾರಂಭಿಸಿದಾಗ, ತನ್ನ ಸಾಮೂಹಿಕ ಜೀವನವನ್ನು ಮುಖ್ಯವಾಗಿ ಪ್ರಾಣಮಯ ಕೋಶದಿಂದ ಉದ್ಬುದ್ಧವಾದ ತನ್ನ ಅಗತ್ಯ, ಮೂಲ ಪ್ರವೃತ್ತಿ ಮತ್ತು ಸಂಸ್ಥೆಗಳಿಂದಲೂ ಅಲ್ಲ ಅಥವಾ ಗೌಣವಾಗಿ, ತನ್ನ ವಿಚಾರ ಶಕ್ತಿಯ ಕಲ್ಪನೆಗಳಿಂದಲೂ ಅಲ್ಲ ನಿರಂತರವೂ ಐಕ್ಯಶಕ್ತಿ, ಸಹಾನುಭೂತಿ, ಸ್ವತಃಸಿದ್ಧ ಸ್ವಾತಂತ್ರ್ಯಗಳಿಂದಲೂ ವ್ಯಷ್ಟಿ–ಸಮಷ್ಟಿ ಜೀವನದ ಸ್ವಾಧೀನತೆಯ ಪೂರ್ಣತೆಯ ಹಾಗೂ ಏಕತೆಯ ಸೂತ್ರವನ್ನೊಳಗೊಂಡ ಲಬ್ಧ ಗುರುತರ ಆತ್ಮ ಮತ್ತು ಸತ್ವಗಳ ಸೂಕ್ಷ್ಮವೂ ಸಚೇತನವೂ ಆದ ನೀತಿಯಿಂದಲೂ ನಿಯಂತ್ರಿಸಲು ಸಾಧ್ಯವಾದಾಗ ಅಂಥ ಕನಸು ನನಸಾಗುವುದು. ತನ್ನ ಪ್ರಯತ್ನವನ್ನು ಆರಂಭಿಸಲು ಕೂಡ ಆ ನೀತಿ ತಕ್ಕ ಸನ್ನಿವೇಶವನ್ನು ಇನ್ನೂ ಎಲ್ಲಿಯೂ ಕಂಡಿಲ್ಲ. ಆಧ್ಯಾತ್ಮಿಕ ಜೀವನದ ನೀತಿಯನ್ನು ಮುಟ್ಟಿ ಅದರಂತೆ ಬಾಳುವುದು ಕೆಲ ವ್ಯಕ್ತಿಗಳಿಗಷ್ಟೇ ಸೇರಿದ್ದು ಎಂಬುದು ನಿಂತ ಬಳಿಕ ಅಥವಾ ತನ್ನ ಹೆಚ್ಚು ಸಾಧಾರಣ ಆಶಯದ ರೂಪದಲ್ಲಿ ಭೂರಿ ಧರ್ಮದ ಮಟ್ಟಕ್ಕೆ ಅದು ಇಳಿಯುವುದು ನಿಂತಾಗ, ಅದನ್ನು ಮಾನವನು ತನ್ನ ಬಾಳಿನ ಅನಿವಾರ್ಯ ಅವಶ್ಯಕತೆ ಎಂದು

ತಿಳಿದು ಅನುಸರಿಸಿದಾಗ ಮಾತ್ರ ಅಂಥ ಸುದಿನ ಬಂದೀತು: ಅದರ ಸರಿಯಾದ ಹಾಗೂ ಸತ್ಯವಾದ ಸಾಧನೆಯು ಮಾನವ ಕುಲದ ವಿಕಾಸದ ಮುಂದಿನ ಹೆಜ್ಜೆಗೆ ಅವಶ್ಯಕ.

## ೫. ಜೀವನದ ಸ್ವಯಂಭೂತಿತತ್ವ

ಭಾರತದ ಪ್ರಾಚೀನ ಚಿಕ್ಕ ಸಮುದಾಯಗಳು ಮಿಕ್ಕವುಗಳಂತೆಯೇ ಓಜಸ್ವಿಯೂ ಸ್ವಯಂಭೂತವೂ ಆದ ಪ್ರಾಣಶಕ್ತಿಯ ಪ್ರಥಮಾವಸ್ಥೆಯಲ್ಲಿ ಬೆಳೆದವು; ಹಾಗೆ ಬೆಳೆಯುವಾಗ ತಮಗೆ ಸಹಜವಾಗಿಯೂ ಅನಿರ್ಬಂಧವಾಗಿಯೂ ತಮ್ಮವೇ ಆದ ಮಾನದಂಡ ಮತ್ತು ಗಡಿಮಿತಿಗಳನ್ನು ಕಂಡುಕೊಂಡು ತಮ್ಮ ಸಮಾಜಪುರುಷನ ಪ್ರಾಣಮಯ ಪ್ರತಿಭೆ ಮತ್ತು ಮನೋಧರ್ಮಗಳಿಂದ ಬಾಳ ಬಗೆ ಮತ್ತು ಸಾಮಾಜಿಕ–ರಾಜಕೀಯ ಸಂಸ್ಥೆಗಳನ್ನು ಎರಕಹೊಯ್ದವು. ಸಾಂಸ್ಕೃತಿಕ–ಸಾಮಾಜಿಕ ಐಕ್ಯವು ದೃಢತರವಾಗುತ್ತ ಹೋಗುವಂತೆ ಅವು ಪರಸ್ಪರ ಲೀನವಾದಾಗ ಮತ್ತು ಹೆಚ್ಚು ಹೆಚ್ಚು ದೊಡ್ಡ ದೊಡ್ಡ ರಾಜಕೀಯ ನಿಕಾಯಗಳನ್ನು ರೂಪಿಸಿಕೊಂಡಾಗ ಅವುಗಳಲ್ಲಿ ಒಂದು ಸರ್ವಸಾಧಾರಣವಾದ ಸತ್ವಸಿದ್ಧಿ, ಸಾರ್ವತ್ರಿಕ ಅಡಿಗಟ್ಟು, ಮತ್ತು ವಿವರಗಳಲ್ಲಿ ಹೆಚ್ಚು ಸ್ವಾತಂತ್ರ್ಯವನ್ನು ಕೊಡುವ ಸರ್ವಸಾಮಾನ್ಯ ರಚನೆ ಕಂಡು ಬಂದವು. ಅಲ್ಲಿ ಅಭೇದ್ಯ ಸಾರೂಪ್ಯವು ಸಾಧ್ಯವಿದ್ದಿಲ್ಲ: ಈ ಪರಿವರ್ತ ನೀಯತೆಯ ಮೇಲೆ ಸಾಮಾನ್ಯ ಐಕ್ಯ ಮುದ್ರೆಯನ್ನೊತ್ತಲು ಅವುಗಳ ಸರ್ವ ಸಾಧಾರಣ ಸತ್ವ ಮತ್ತು ಜೀವಶಕ್ತಿಗಳೇ ಸಾಕಾಗಿದ್ದವು. ದೊಡ್ಡ ದೊಡ್ಡ ರಾಜ್ಯ ಸಾಮ್ರಾಜ್ಯಗಳು ತಲೆಯತ್ತಿಕೊಂಡಾಗಲು ಕೂಡ ನೈಸರ್ಗಿಕ ಲಕ್ಷಣಗಳನ್ನು ತಳೆದು ಬೆಳೆದಿದ್ದ ಚಿಕ್ಕ ರಾಜ್ಯ, ಗಣರಾಜ್ಯ ಜನತೆಗಳನ್ನು ಹೊಸ ಸಾಮಾಜಿಕ–ರಾಜಕೀಯ ರಚನೆಯಲ್ಲಿ ಸೇರಿಸಿಕೊಳ್ಳಲಾಯಿತಲ್ಲದೆ ಅವನ್ನು ನಷ್ಟಗೊಳಿಸಲೂ ಇಲ್ಲ ದೂರೀಕರಿಸಲೂ ಇಲ್ಲ. ಜನದ ಸಹಜ ವಿಕಾಸದಲ್ಲಿ ಯಾವುದು ಉಳಿಯಲು ಅಸಮರ್ಥವಾಯಿತೋ ಅಥವಾ ಯಾವುದು ಅನವಶ್ಯಕವೆನಿಸಿತೋ ಅದು ತನ್ನಿಂದ ತಾನೇ ಅಡಿ ಬಿದ್ದು ನಿರುಪಯೋಗಿಯಾಗಿ ಲೋಪ ಹೊಂದಿತು. ಹೊಸ ಪರಿಸ್ಥಿತಿ ಹಾಗೂ ಆವರಣಗಳಿಗೆ ತಕ್ಕಂತೆ ಯಾವುದು ತನ್ನನ್ನು ಬದಲಾಯಿಸಿಕೊಂಡು ಬದುಕಿ ಉಳಿಯಲು ಶಕ್ತವಾಯಿತೋ ಅದನ್ನು ಉಳಿಸಿಕೊಳ್ಳಲಾಯಿತು; ಯಾವು ಯಾವುದು ಭಾರತೀಯ ಜನತೆಯ ಬಾಳಿನ ಮನಸ್ಸಿಗೆ ಹಾಗೂ ಜೀವಕ್ಕೆ ಹಾಗೂ ಮನೋಧರ್ಮಕ್ಕೆ ನಿಕಟವಾಗಿ ಹೊಂದಿಕೊಂಡಿತೋ ಅದು ಸರ್ವಸಾಧಾರಣವೆನಿಸಿ ಸಮಾಜ ಮತ್ತು ರಾಜ್ಯ ಧರ್ಮಗಳ ಸ್ಥಾಯಿಸ್ವರೂಪದಲ್ಲಿ ಸ್ಥಾನ ಪಡೆದುಕೊಂಡಿತು. ಪ್ರವರ್ಧಮಾನ ಸಂಸ್ಕೃತಿಯ ಯುಗವು ಬಾಳಿನ ಈ ಸ್ವಯಂ ಭೂತಿತತ್ವವನ್ನು ಮನ್ನಿಸಿತು.

ಸಮಾಜನೀತಿ, ಅರ್ಥನೀತಿ ಮತ್ತು ರಾಜನೀತಿಗಳ ಅಂದರೆ ಧರ್ಮದ ಮತ್ತು ಅರ್ಥಶಾಸ್ತ್ರಗಳ ವಿವೇಚಕರು ಕೇವಲ ಶುಷ್ಕ ಬೌದ್ಧಿಕ ಪ್ರಜ್ಞೆಯಲ್ಲಿ ಸಮಾಜ ಮತ್ತು ಸರಕಾರದ ಧ್ಯೇಯಗಳನ್ನೂ ಪದ್ಧತಿಗಳನ್ನೂ ರಚಿಸಹೊರಡಲಿಲ್ಲ. ಹಾಗಲ್ಲದೆ ಅವರು ಸಮಾಜ ಪುರುಷನು ಆಗಲೇ ಬೆಳೆಸಿದ ಸಂಸ್ಥೆಗಳನ್ನೂ ಸಾಮುದಾಯಿಕ ಜೀವನದ ಬಗೆಗಗಳನ್ನೂ ವ್ಯಾವಹಾರಿಕ ವಿವೇಕದಿಂದ ಅರಿತುಕೊಂಡು, ಮೂಲ ಅಂಗಗಳನ್ನು ನಾಶಗೊಳಿಸದೆ ಬೆಳೆಸಿ, ನೆಲೆನಿಲ್ಲಿಸಿ ಸಮರಸಗೊಳಿಸಿದರು. ಅಲ್ಲದೆ ಹಾಗೆ ಮಾಡುವಾಗ ಅವರು ಅಗತ್ಯವೆನಿಸಿದ ಒಂದು ಹೊಸ ಅಂಗ ಅಥವಾ ಕಲ್ಪನೆಯನ್ನು ಅದರ ತಲೆಕಟ್ಟಾಗಿ ಸಮಾವೇಶಗೊಳಿಸಿದರು. ಆದರೆ ಅಂತಹ ಸಮಾವೇಶತತ್ವವು ಸುಧಾರಿಸುವ ಮಟ್ಟಿನದಾಗಿತ್ತಲ್ಲದೆ ಕ್ರಾಂತಿಕಾರಕವೂ ಮೂಲೋಚ್ಛೇದಕವೂ ಆಗಿರಲಿಲ್ಲ. ಪ್ರಾಥಮಿಕ ಅವಸ್ಥೆಗಳಿಂದ ಪ್ರಬುದ್ಧ ದಶೆಯನ್ನು ರಾಜ್ಯಪ್ರಭುತ್ವದ ರಾಜ್ಯಧರ್ಮವು ಮುಟ್ಟಿದ್ದು ಹೀಗೆ; ರಾಜ ಅಥವಾ ಸಮ್ರಾಜನ ಉಚ್ಚಾಧಿಕಾರದ ಅಡಿಯಲ್ಲಿ ವರ್ತಮಾನ ಸಂಸ್ಥೆಗಳು ಕೂಡಿಕೊಳ್ಳುವ ಮಾರ್ಗದಲ್ಲಿ ಅದು ಹೊರಟಿತು. ರಾಜಪ್ರಭುತ್ವ ಅಥವಾ ಸಾಮ್ರಾಜ್ಯ ಪದ್ಧತಿಯನ್ನು ಹೇರಿದ್ದರಿಂದ ಅನೇಕ ಹಳೆಯ ಸಂಸ್ಥೆಗಳ ಲಕ್ಷಣ ಹಾಗೂ ಸ್ಥಾನಗಳು ಸುಧಾರಣೆ ಹೊಂದಿದವಲ್ಲದೆ ಶಕ್ಯವಿದ್ದಷ್ಟು ಮಟ್ಟಿಗೆ ಅವು ಅಳಿಯದೆ ಉಳಿದುಕೊಂಡವು. ಅದರ ಫಲವಾಗಿ ಭಾರತದಲ್ಲಿ ನಮಗೆ ಬೌದ್ಧಿಕ ಆದರ್ಶದ ಬೆನ್ನು ಹತ್ತಿದ ರಾಜಕೀಯ ಪ್ರಗತಿಯ ಅಂಶವಾಗಲಿ ಪ್ರಾಚೀನ ಮತ್ತು ಅರ್ವಾಚೀನ ಯುರೋಪಿನಲ್ಲಿ ಗಣ್ಯವಾಗಿ ಕಂಡುಬರುವ ಕ್ರಾಂತಿಕಾರಕ ಲಕ್ಷಣಗಳಾಗಲಿ ಕಂಡುಬರದಾಗಿವೆ. ಪ್ರಾಚೀನ ರಚನೆಗಳನ್ನು ಭಾರತೀಯ ಬಾಳು ಬಗೆಗಳ ಸಹಜಾಭಿವ್ಯಕ್ತಿ ಹಾಗೂ ಅದರ ಧರ್ಮದ ಸಮಂಜಸವಾದ ಬಾಹ್ಯಪ್ರಕಾಶ ಎಂದು ಹೆಚ್ಚು ಗೌರವವನ್ನು ತೋರುವುದು ಭಾರತೀಯ ಮನೋವೃತ್ತಿಯ ಬಲಿಷ್ಠಾಂಶವಾಗಿತ್ತು; ಉನ್ನತ ಬೌದ್ಧಿಕ ಸಂಸ್ಕೃತಿಯ ಸುವರ್ಣ ಯುಗವು ಈ ಸಂಗೋಪನ ಪ್ರವೃತ್ತಿಯನ್ನು ಇನ್ನೂ ಹೆಚ್ಚಾಗಿ ಸ್ಥಿರಪಡಿಸಿತಲ್ಲದೆ ಅದನ್ನು ಕಲಕಲು ಹೋಗಲಿಲ್ಲ. ಸ್ಥಿರ ವ್ಯವಸ್ಥಾಪನದ ತತ್ವವನ್ನೂ ಸಾಮಾಜಿಕ–ರಾಜಕೀಯ ಪೂರ್ವ ಸಂಪ್ರದಾಯವನ್ನೂ ಸುಪ್ರತಿಷ್ಠಿತ ಚೌಕಟ್ಟು ಮತ್ತು ರಚನೆಗಳನ್ನೂ ಸಂಗೋಪನ ಮಾಡುವ ಮಂದವಿಕಾಸದ ಬಗೆಯೊಂದೇ ರೂಢಿ ಹಾಗೂ ಸಂಸ್ಥೆಗಳಿಗೆ ಸಾಧ್ಯವೂ ಗ್ರಾಹ್ಯವೂ ಆದ ಪ್ರಗತಿಕ್ರಮವೆನಿಸಿತು; ಹಾಗೂ ರಚನಾಬಂಧಗಳಲ್ಲಿಯ ತತ್ವಗಳನ್ನು ಹಿಡಿದೇ ಪ್ರಗತಿ ಮುನ್ನಡೆಯುವಂತಾಯಿತು. ಇದಕ್ಕೆ ಬದಲಾಗಿ ಯುರೋಪಿನ ಸುಪ್ರಸಿದ್ಧ ಅಧಿಕಾರಿಸತ್ತೆಯ ಮತ್ತು ಉದ್ಯಮಪ್ರಧಾನ ರಾಜ್ಯದ ದೈತ್ಯನಂಥ ಕೃತಕ ಸಂಘಟನೆಯಲ್ಲಿ ಕೊನೆಗೊಂಡ ನಾಗರಿಕತೆಯ ರೋಗವೆನಿಸಿದ ಜನತೆಯ ಸಹಜ ಜೀವನಕ್ಕೆ ಬದಲಾಗಿ ಯಾಂತ್ರಿಕ ಪದ್ಧತಿಯನ್ನು ಹೇರುವ ಅಹಿತರಕರ ಆದೇಶವನ್ನು ಭಾರತೀಯ ರಾಜ್ಯಧರ್ಮವು ನಿಗಮನಿಸಲಿಲ್ಲ. ಅದರಿಂದ ಆದರ್ಶ ಚಿತ್ರಣದ ಬುದ್ಧಿಮತ್ತೆಯಿಂದಾಗುವ ಲಾಭವೂ ಇಲ್ಲದಾಯಿತು ಅದೇ ಮೇರೆಗೆ ಯಾಂತ್ರಿಸುವ ವಿವೇಚಕ ಬುದ್ಧಿಯ ನಷ್ಟವೂ ಇಲ್ಲದಾಯಿತು.

## ೬. ಸಮಷ್ಟಿ, ವ್ಯಷ್ಟಿ ಮತ್ತು ಪ್ರಕೃತಿಗಳು

ತಾನು ಪ್ರೌಢ ತರ್ಕಬುದ್ಧಿಯನ್ನು ಬೆಳೆಸಿಕೊಂಡಾಗಲು ಕೂಡ ಭಾರತವು ಯಾವಾಗಲೂ ತನ್ನ ಪ್ರತಿಭೆಯ ಗಂಭೀರತಮ ದೃಷ್ಟಿಯನ್ನು ಕಳೆದುಕೊಂಡಿರಲಿಲ್ಲ; ಮತ್ತು ಅದರ ರಾಜಕೀಯ–ಸಾಮಾಜಿಕ ಆಲೋಚನೆಯು ಆ ಕಾರಣದಿಂದಲೇ ಯಾವಾಗಲೂ ಮಧ್ಯಸ್ಥವಾಗಿ ಕ್ರಮಪಡಿಸಿ ನಿಯಂತ್ರಿಸುವ ವಿಚಾರಶಕ್ತಿಯ ಬೆಳಕನ್ನು, ಜೀವ–ಆತ್ಮಗಳ ಪ್ರತಿಭೆಗಳನ್ನು ಸಮರಸಗೊಳಿಸುವ ಪ್ರಯತ್ನವೇ ಆಗಿತ್ತು. ಅದು ಜೀವನದ ಸುಪ್ರತಿಷ್ಠಿತ ಹಾಗೂ ಪದೇ ಪದೇ ಸಂಭವಿಸುವ ವಾಸ್ತವಿಕ ಸಂಗತಿಗಳನ್ನೇ ಆಧರಿಸಿತ್ತು; ತನ್ನ ಧ್ಯೇಯವಾದಕ್ಕೆ ಬುದ್ಧಿಯನ್ನವಲಂಬಿಸದೆ ಆಧ್ಯಾತ್ಮಿಕವಾದ ಪ್ರಕಾಶ, ಸ್ಫೂರ್ತಿ ಮತ್ತು ಉನ್ನತ ಅನುಭೂತಿಗಳನ್ನೇ ಆಧರಿಸಿತು. ಅದು ವಿಚಾರ ಶಕ್ತಿಯನ್ನು ಯಾವಾಗಲೂ ನಿಜವೂ ಸಮಂಜಸವೂ ಆದ ರಚನಾಶಕ್ತಿಯುಳ್ಳ ಆತ್ಮ ಮತ್ತು ಪ್ರಾಣಗಳ ಪ್ರೇರಣೆಯನ್ನು ಬದಿಗಿರಿಸದೆ ಅವಕ್ಕೆ ಸಹಾಯಕವಾಗಿಯೂ ಅವುಗಳ ಗತಿಗೆ ಪೋಷಕವಾಗಿಯೂ, ಪರೀಕ್ಷಿಸಿ ದೃಢೀಕರಿಸುವ ವಿಮರ್ಶಾತ್ಮಕ ಶಕ್ತಿಯನ್ನಾಗಿಯೂ ಬಳಸಿಕೊಂಡಿದೆ. ಭಾರತದ ಆಧ್ಯಾತ್ಮಿಕ ಮನಸ್ಸು ಜೀವನವನ್ನು ಆತ್ಮದ ಅಭಿವ್ಯಕ್ತಿ ಎಂದು ಭಾವಿಸಿತ್ತು; ಸಮಷ್ಟಿಯು ಹಿರಣ್ಯಗರ್ಭನ ಶರೀರ; ಜನತೆಯು ಅವನ ಸಮಷ್ಟಿಗತವಾದ ಪ್ರಾಣಮಯ ಶರೀರ–ಸಾಮೂಹಿಕ ನಾರಾಯಣ; ಪ್ರತ್ಯೇಕವಾಗಿರುವ ಮತ್ತು ವ್ಯಕ್ತಿ ರೂಪದ ನಾರಾಯಣನೆಂದರೆ ವ್ಯಷ್ಟಿಗತ ಬ್ರಹ್ಮಶಕ್ತಿ. ಪ್ರಕೃತಿಗಳೆಂದರೆ ಸಾಮೂಹಿಕ ಆತ್ಮದ ಸಮುದಾಯ ರೂಪದ ನೈಸರ್ಗಿಕ ಶಕ್ತಿಗಳು. ರಾಜನು ದಿವ್ಯದ ಹಾಗೂ ಸಮಷ್ಟಿಯ ಇನ್ನಿತರ ವರ್ಗಗಳ ಪ್ರತಿನಿಧಿಯಾಗಿದ್ದನು. ಸರ್ವ ಸಮ್ಮತವಾದ ಸಮಯ, ಸಂಸ್ಥೆ, ಆಚಾರ, ಸಾಮಾಜಿಕ–ರಾಜಕೀಯ ನಿಕಾಯ, ಸಂವಿಧಾನ–ಇವು ಆದ್ದರಿಂದಲೇ ಸರ್ವಾಂಗತಃ ಪರಿಬಂಧಕ ಆಧಾರಗಳಾಗಿದ್ದವಷ್ಟೇ ಅಲ್ಲದೆ ಅವಕ್ಕೆ ಒಂದು ವಿಧದ ಪಾವಿತ್ರ್ಯವೂ ಇತ್ತು.

## ೭. ಸ್ವಧರ್ಮ ಸಿದ್ಧಾಂತ

ಪ್ರಾಚೀನ ಭಾರತೀಯ ಕಲ್ಪನೆಯಂತೆ ವಿಶ್ವದ ಹೇಗೋ ಹಾಗೇ ಮಾನವ್ಯ ಜೀವನದ ಸುವ್ಯವಸ್ಥೆ ಕೂಡ ಸ್ವಧರ್ಮದಂತೆ ಶ್ರದ್ಧೆಯಿಂದ ನಡೆದುಕೊಳ್ಳುವ ವ್ಯಕ್ತಿಯಲ್ಲಿ ರಕ್ಷಿಸಲ್ಪಡುವುದಾಗಿತ್ತು. ಸ್ವಧರ್ಮವೆಂಬುದು ಅವನ ಮತ್ತು ಅವನ ಜಾತಿಯ ನಿಜವಾದ ನೀತಿಮಾನವಾಗಿತ್ತು. ಅದೇ ಮೇರೆಗೆ ಸ್ವಧರ್ಮ ಪಾಲಿಸುವ ಸಂಘಟಿತ ಸಾಮೂಹಿಕ ಜೀವನಸ್ವರೂಪದ ಸಮಾಜಪುರುಷನಲ್ಲಿ ಹಾಗೆ ಪೂರ್ವೋಕ್ತ ಸುವ್ಯವಸ್ಥೆ ಸುರಕ್ಷಿತವಾಗಿತ್ತು. ಕುಟುಂಬ, ಕುಲ, ಜಾತಿ, ವರ್ಗ ಅಥವಾ ವರ್ಣ ಹಾಗೂ ಸಾಮಾಜಿಕ, ಧಾರ್ಮಿಕ, ಔದ್ಯಮಿಕ ಅಥವಾ ಇತರ ಸಮಷ್ಟಿ, ರಾಷ್ಟ್ರ, ಜನತೆ ಇವೆಲ್ಲವೂ ತಮ್ಮವೇ ಆದ ಧರ್ಮವನ್ನು ವಿಕಾಸಗೊಳಿಸಿಕೊಂಬ ಸಂಘಟಿತ ಸಾಮೂಹಿಕ ಅಸ್ತಿತ್ವಗಳು. ಆ

ಸ್ವಧರ್ಮವನ್ನು ಅನುಸರಿಸುವುದು ಅವುಗಳ ರಕ್ಷಣೆ, ಪಾಲನೆ ಮತ್ತು ಸಮರ್ಪಕ ನಿರ್ವಹಣೆಗಳಿಗೆ ಶರ್ತವಾಗಿತ್ತು. ಇದಲ್ಲದೆ ಸ್ಥಾನ, ಕರ್ತವ್ಯ, ಪರರೊಡನಿರುವ ವಿಶಿಷ್ಟ ಸಂಬಂಧ–ಇವುಗಳದೊಂದು ಧರ್ಮ, ಪರಿಸ್ಥಿತಿಧರ್ಮ, ಯುಗಧರ್ಮ, ಸಾರ್ವತ್ರಿಕವಾದ ಧಾರ್ಮಿಕ ಹಾಗೂ ನೈತಿಕಧರ್ಮ ಮತ್ತು ಇವೆಲ್ಲವೂ ಸ್ವಭಾವಕ್ಕನುಗುಣವಾಗಿರುವ ಸ್ವಧರ್ಮವನ್ನು ರೂಪಿಸುವುದು–ಕಾನೂನಿನ ಶರೀರವನ್ನು ನಿರ್ಮಿಸುತ್ತವೆ. ಪ್ರಾಚೀನ ಸಿದ್ಧಾಂತದ ಪ್ರಕಾರ ಸತ್ಯಯುಗವೆಂಬ ಪೌರಾಣಿಕ ಸುವರ್ಣಯುಗದಲ್ಲಿ ವ್ಯಷ್ಟಿ–ಸಮಷ್ಟಿ ಮಾನವನ ಸಂಪೂರ್ಣ ಸಮಂಜಸವೂ ಸಮರ್ಪಕವೂ ಆದ ಬಾಳುವೆ ಇದ್ದಿತ್ತು. ಆಗ ಯಾವ ರಾಜಕೀಯ ಸರಕಾರ ಅಥವಾ ರಾಜ್ಯಕೀಯ ಇಲ್ಲವೇ ಕೃತಕ ಸಾಮಾಜಿಕ ಅವಶ್ಯಕತೆ ಇದ್ದಿಲ್ಲ. ಏಕೆಂದರೆ ಎಲ್ಲರೂ ಆಗ ತಮ್ಮ ತಮ್ಮ ಪ್ರಬುಧ್ಧಾತ್ಮದ ಮತ್ತು ದಿವ್ಯ ಜೀವನದ ಸತ್ಯಕ್ಕೆ ಅನುಗುಣವಾಗಿ ಮತ್ತು ಆ ಕಾರಣದಿಂದಲೇ ತಮ್ಮ ಆಂತರಿಕ ದಿವ್ಯಧರ್ಮಕ್ಕೆ ಅನುಗುಣವಾಗಿ ಸ್ವಯಂಸ್ಫೂರ್ತಿಯಿಂದ ಸ್ವತಂತ್ರವಾಗಿ ಬಾಳುತ್ತಿದ್ದರು.

ಸ್ವಯಂನಿರ್ಣಯಾಧಿಕಾರವುಳ್ಳ ಸಮುದಾಯಗಳು ತಮ್ಮ ತಮ್ಮ ಅಸ್ತಿತ್ವಕ್ಕೆ ಸ್ವತಂತ್ರವೂ ಸಹಜವೂ ಆದ ನೀತಿಯಂತೆ ಬಾಳುವುದೇ ಆದರ್ಶವೆನಿಸಿತು. ಮಾನವ ಕುಲದ ವಾಸ್ತವಿಕ ಪರಿಸ್ಥಿತಿಯಲ್ಲಿ ವ್ಯಕ್ತಿ ಮತ್ತು ಸಮಾಜ ಧರ್ಮಗಳ ಭಂಗ ಹಾಗೂ ಮೂರ್ಖತೆಗಳಿಗೆ ಒಳಪಟ್ಟ ವಿಕೃತ ಸ್ವಭಾವ–ಅಜ್ಞಾನಗಳು ತುಂಬಿದ್ದು ಕಂಡುಬರುತ್ತದೆ. ಆದುದರಿಂದ ಸಮಾಜದ ನೈಸರ್ಗಿಕ ಜೀವನದ ಮೇಲೆ ಒಂದು ರಾಜ್ಯ, ಪ್ರಭುಶಕ್ತಿ, ರಾಜ ಅಥವಾ ಸುಭದ್ರ ಶಾಸಕನಿಕಾಯವನ್ನು ಹೇರಬೇಕಾಗುತ್ತದೆ. ಅಂಥ ರಾಜ್ಯಶಕ್ತಿಯು ಸಮಾಜಜೀವನದಲ್ಲಿ ಅನವಶ್ಯಕವಾಗಿ ಕೈಹಾಕಬಾರದು. ಬಹಳಮಟ್ಟಿಗೆ ತನ್ನ ನೈಸರ್ಗಿಕ ನೀತಿ, ರೂಢಿ ಮತ್ತು ಸ್ವತಃ ಸಿದ್ಧ ಬೆಳವಣಿಗೆಯಂತೆಯೇ ಕರ್ತವ್ಯ ಮಾಡಲು ಸಮಾಜವನ್ನು ಬಿಡಬೇಕು. ಆದರೆ ರಾಜಶಕ್ತಿಯು ಅದರ ಸರಿಯಾದ ನಡೆವಳಿಕೆಗೆ ನೆರವೀಯಬೇಕು, ಪ್ರಭಾವಿಯಾಗಿ ಧರ್ಮವು ಆಚರಣೆಯಲ್ಲಿರುವಂತೆ ನೋಡಿಕೊಳ್ಳಬೇಕು, ಧರ್ಮದ್ರೋಹಿಗಳ ಹುಟ್ಟಡಗಿಸಬೇಕು ಮತ್ತು ಸಾಧ್ಯವಿದ್ದಷ್ಟು ಮಟ್ಟಿಗೆ ಧರ್ಮವಿರುದ್ಧ ನಡವಳಿಕೆಗಳು ಆಗದಂತೆ ಮುಂಜಾಗ್ರತೆ ವಹಿಸಬೇಕು. ಅಧರ್ಮದ ಉತ್ಥಾನದ ಉಗ್ರದಶೆಯಲ್ಲಿ ವಿಧಾಯಕರ ಸಮಗ್ರ ಜೀವನವನ್ನು ಪ್ರಕಟವಾಗಿ ಪ್ರಕಾಶಿಸುವ ಬಾಹ್ಯ ಅಥವಾ ಲಿಖಿತ ವಿಧಿ, ನೀತಿ, ಶಾಸನಗಳ ಅವಶ್ಯಕತೆಯುಂಟಾಗುತ್ತದೆ; ಇದನ್ನು ನಿರ್ಣಯಿಸುವ ಕೆಲಸ (ಹೊರಗಿನ ಆಡಳಿತದ ವಿವರಗಳನ್ನು ಬಿಟ್ಟು) ರಾಜಕೀಯ ಪ್ರಭುವಿನದಾಗಿರಲಿಲ್ಲ, ಅವನು ಅದರ ಪ್ರಶಾಸಕನು ಮಾತ್ರ; ಆದರೆ ಆ ಕೆಲಸ ಸಾಮಾಜಿಕ ನೈತಿಕ ನವನಿರ್ಮಿತಿಕಾರನಾದ ಋಷಿಯದು ಅಥವಾ ಬ್ರಾಹ್ಮಣ ಅಭಿಲೇಖಕ ಮತ್ತು ವ್ಯಾಖ್ಯಾತನದು. ಲಿಖಿತ ಅಥವಾ ಅಲಿಖಿತ ವಿಧಿ ಅಥವಾ ಧರ್ಮವೆಂಬುದು ಒಂದು ರಾಜಕೀಯ ಮತ್ತು ವೈಧಾನಿಕ ಅಧಿಕಾರ ಸಮಿತಿಯಿಂದ

ಹೊಸದಾಗಿ ನಿರ್ಮಿಸಲ್ಪಡುವ ಅಥವಾ ಕೃತಕವಾಗಿ ರಚಿಸಲ್ಪಡುವ ವಸ್ತುವಾಗಿರಲಿಲ್ಲ; ಧರ್ಮವು ಭೂತವಸ್ತು ಮತ್ತು ಅದನ್ನು ಇದ್ದಂತೆಯೇ ಅಥವಾ ಸಾಮುದಾಯಿಕ ಜೀವನ ಮತ್ತು ಚೈತನ್ಯಗಳ ಪೂರ್ವಸ್ಥ ವಿಧಿ ಮತ್ತು ತತ್ವಗಳಿಂದ ಸ್ವಾಭಾವಿಕವಾಗಿ ಬೆಳೆದು ಬಂದಂತೆಯೇ ಅರ್ಥಯಿಸಿ ಹೇಳಬೇಕಾಗಿತ್ತು. ಈ ಪ್ರವರ್ಧಮಾನ ಕೃತಕತೆ ಮತ್ತು ಸಮಯಗಳಿಂದ ಬೆಳೆದು ನಿಲ್ಲುವ ಅತಿ ಕನಿಷ್ಠ ಸಾಮಾಜಿಕ ವ್ಯವಸ್ಥೆಯೆಂದರೆ ಅರಾಜಕತೆಯ, ಘರ್ಷಣದ, ಧರ್ಮಲೋಪದ ಕಾಲಾವಧಿ. ಇದೇ ಕಲಿಯುಗ. ಇದು ಉದ್ವರ್ತನ, ಹೋರಾಟ, ಪುನಃಸ್ವಾಸ್ಥ್ಯಲಾಭ ಮತ್ತು ಮಾನವ್ಯಾಸ್ತಿತ್ವದಲ್ಲಿಯ ಹೊಸ ಆತ್ಮಾಭಿವ್ಯಕ್ತಿಗಳ ಹಿಂದಿನ ಪಾಟಲ-ಕಪಿಲ ಸಂಧ್ಯೆ.

## ೮. ರಾಜನ ಮುಖ್ಯ ಕರ್ತವ್ಯ ಮತ್ತು ಸಮಷ್ಟಿಯ ಸ್ವಾತಂತ್ರ್ಯ

ರಾಜಕೀಯ ಪ್ರಭುವೆನಿಸಿದ ರಾಜ, ಅವನ ಮಂತ್ರಿಮಂಡಲ ಮತ್ತು ಇತರ ಶಾಸನನಿಕಾಯಗಳ ಸದಸ್ಯರ ಮುಖ್ಯ ಕರ್ತವ್ಯವೆಂದರೆ ಸಮಾಜ ಜೀವನದ ಸಮಂಜಸ ವಿಧಿಯ ಸಂರಕ್ಷಣೆ ಮತ್ತು ಸೇವೇಯೇ ಆಗಿತ್ತು: ಪ್ರಭುವು ಧರ್ಮಪ್ರಶಾಸಕನೂ ಧರ್ಮರಕ್ಷಕನೂ ಆಗಿದ್ದನು. ಮಾನವ ಜೀವಿಯ ಜೈವಿಕ, ಆರ್ಥಿಕ ಮತ್ತು ಇತರ ಅವಶ್ಯಕತೆಗಳನ್ನು ಮತ್ತು ಸುಖ ಸಂತೋಷಗಳಲ್ಲಿ ಅವನಿಗಿರುವ ಭೋಗಾಧಿಕಾರವನ್ನು ನ್ಯಾಯದಿಂದ ತೃಪ್ತಿಪಡಿಸುವುದು ಸಮಾಜದ ಕರ್ತವ್ಯಕ್ಕೆ ಸೇರಿದ್ದಾಗಿತ್ತು. ಆದರೆ ಹಾಗೆ ತೃಪ್ತಿ ಪಡೆಯುವುದು ನೈತಿಕ, ಸಾಮಾಜಿಕ, ಧಾರ್ಮಿಕ ತತ್ವಗಳಿಗೊಳಪಟ್ಟು ವಿಧ್ಯುಕ್ತವಾಗಿ ತಕ್ಕ ಪ್ರಮಾಣದಲ್ಲಿ ನಡೆಯಬೇಕು. ಸಾಮಾಜಿಕ ರಾಜಕೀಯ ನಿಕಾಯದ ಗುಂಪುಗಳ ಸದಸ್ಯರ ಧರ್ಮವು ಅವರವರ ಸ್ವಭಾವ, ಸ್ಥಾನ, ಇಡಿ ನಿಕಾಯದೊಡನೆ ಅವರಿಗಿರುವ ಸಂಬಂಧ ಇವುಗಳಿಂದ ನಿರ್ದಿಷ್ಟವಾಗಿತ್ತು. ಆ ಧರ್ಮವು ಸ್ವತಂತ್ರವಾಗಿಯೂ ನ್ಯಾಯವಾಗಿಯೂ ಆಚರಣೆಯಲ್ಲಿ ಉಳಿಯುವುದಕ್ಕೆ ಪ್ರತ್ಯಾಭೂತಿ ಇರಬೇಕು; ಅವರವರ ಅಧಿಕಾರಪರಿಮಿತಿಯೊಳಗೆ ಅವರವರ ಸ್ವಾಭಾವಿಕ ಸ್ವನಿಶ್ಚಿತ ಕರ್ತವ್ಯನಿರ್ವಹಣೆಗೆ ಅದನ್ನು ಬಿಟ್ಟುಬಿಡಬೇಕು. ಆದರೆ ಅದೇ ಕಾಲದಲ್ಲಿ ಅವರವರ ಧರ್ಮವು ಅತಿಕ್ರಾಂತವಾಗದಂತೆ ಅಥವಾ ಅದರ ನಿಜವಾದ ಪರಿಮಿತಿ ಮತ್ತು ನ್ಯಾಯವಾದ ಆಚರಣೆ ವಿಪರ್ಯಸ್ತವಾಗದಂತೆ ನಿಯಂತ್ರಣವಿಡಬೇಕಾಗುತ್ತದೆ. ದೇಶದ ಸರ್ವೋಚ್ಚ ಪ್ರಾಧಿಕಾರಿಯೂ ಮಂತ್ರಿಮಂಡಲಸ್ಥನೂ ಜನಸಭೆಯ ಬೆಂಬಲಪಡೆದವನೂ ಆದ ಪ್ರಭುವಿನ ಕರ್ತವ್ಯ ಅದೇ ಆಗಿತ್ತು. ಜಾತಿಯ, ಧಾರ್ಮಿಕ ಸಮುದಾಯದ, ಸಂಘದ, ಗ್ರಾಮದ, ಪಟ್ಟಣದ ಇಲ್ಲವೆ ಒಂದು ಪ್ರದೇಶ ಅಥವಾ ಪ್ರಾಂತದ ಸಂಘಟನೆಯ ಅನಿರ್ಬದ್ಧ ನಿಯಂತ್ರಣವನ್ನು ಆಕ್ರಮಿಸುವುದಾಗಲಿ, ಅದರಲ್ಲಿ ಕೈಹಾಕುವುದಾಗಲಿ, ಅವುಗಳ ಹಕ್ಕುಗಳನ್ನು ಕಿತ್ತುಹಾಕುವುದಾಗಲಿ ರಾಜ್ಯಶಕ್ತಿಯ ಕೆಲಸವಾಗಿರಲಿಲ್ಲ; ಏಕೆಂದರೆ ಸಾಮಾಜಿಕ ಧರ್ಮದ ಸಮಂಜಸ ಆಚರಣೆಗೆ ಅಗತ್ಯವಿದ್ದುದರಿಂದ ಆ ಹಕ್ಕುಗಳು

ನೈಸರ್ಗಿಕವೆನಿಸಿದ್ದವು. ಸುವ್ಯವಸ್ಥೆಗೊಳಿಸುವುದು, ಅತ್ಯುಚ್ಚ ಮಟ್ಟದಿಂದ ಎಲ್ಲವುಗಳ ಮೇಲೂ ಸರ್ವಸಾಧಾರಣ ನಿಯಂತ್ರಣವನ್ನಿಡುವುದು, ಹೊರಗಿನ ದಾಳಿಯಿಂದ ಅಥವಾ ಒಳಗಿನ ಒಡಕಿನಿಂದ ಸಮಷ್ಟಿಯ ಜೀವನವನ್ನು ಸಂರಕ್ಷಿಸುವುದು, ಅಪರಾಧ ಅವ್ಯವಸ್ಥೆಗಳನ್ನು ದಮನ ಮಾಡುವುದು, ವಿಶಾಲ ಕ್ಷೇತ್ರದಲ್ಲಿ ಆರ್ಥಿಕ ಮತ್ತು ಔದ್ಯಮಿಕ ಕ್ಷೇತ್ರಕ್ಕೆ ನೆರವಿತ್ತು ಅದನ್ನು ಅಭಿವೃದ್ಧಿಗೊಳಿಸುವುದಲ್ಲದೆ ಹಿಡಿತದಲ್ಲಿಟ್ಟುಕೊಳ್ಳುವುದು– ಈ ಉದ್ದೇಶಗಳಿಗಾಗಿ ಮಿಕ್ಕವರ ಕೈಗೆ ನಿಲುಕದ ಅಧಿಕಾರಗಳನ್ನು ಬಳಸುವುದು ರಾಜಶಕ್ತಿಯ ಕರ್ತವ್ಯವಾಗಿತ್ತು. ಈ ರೀತಿಯಿಂದ ಪರಿಣಾಮತಃ ಭಾರತೀಯ ರಾಜಧರ್ಮವೆಂಬುದು ಒಂದು ಬಹು ಜಟಿಲ ಸ್ವರೂಪದ ಸಾಮುದಾಯಿಕ ಸ್ವಾತಂತ್ರ್ಯ ಮತ್ತು ಸ್ವಯಂ ನಿರ್ಣಯಗಳುಳ್ಳ ವ್ಯವಸ್ಥೆ ಎನಿಸಿದೆ. ಸಮುದಾಯದ ಪ್ರತಿಯೊಂದು ಘಟಕಕ್ಕೂ ಅದರದೇ ಆದ ಅಥವಾ ತನತನಗೆ ಸಹಜವಾದ ಬಾಳು ಇತ್ತು; ಆ ಪ್ರತಿಯೊಂದೂ ತನತನಗೆ ಕ್ಲಪ್ತವಾದ ಆಚಾರ ವ್ಯವಹಾರವನ್ನು ನಡೆಸಿಕೊಂಡಿತ್ತು; ಆ ಒಂದೊಂದೂ ತನ್ನ ತನ್ನ ಕ್ಷೇತ್ರ ಮತ್ತು ಮರ್ಯಾದೆಗಳ ಸ್ವಾಭಾವಿಕ ರೇಖೆಯಿಂದ ಪ್ರತ್ಯೇಕಿಸಲ್ಪಟ್ಟಿತ್ತು; ಆದರೆ ಸುಗೃಹೀತವಾದ ಸಂಬಂಧಗಳಿಂದ ಸಮಷ್ಟಿಯೊಡನೆ ಹೊಂದಿಕೊಂಡಿತ್ತು. ಸಮಷ್ಟಿ ಜೀವನದಲ್ಲಿ ಪ್ರತಿ ಘಟಕವೂ ಅಧಿಕಾರ–ಕರ್ತವ್ಯಗಳಲ್ಲಿ ಸಹಭಾಗಿಯಾಗಿ ಸ್ವವಿಧಿ–ನಿಯಮಗಳನ್ನು ಪಾಲಿಸುತ್ತ, ಸ್ವಮರ್ಯಾದೆಯೊಳಗೇ ಪ್ರಶಾಸನ ಗೈಯುತ್ತ, ಪರಸ್ಪರ ಅಥವಾ ಸಾಧಾರಣ ಹಿತಾರ್ಥಕ್ಕೆ ಸಂಬಂಧಿಸಿದ ವಿಷಯದ ಚರ್ಚೆ ಮತ್ತು ನಿಯಂತ್ರಣಗಳಲ್ಲಿ ಮಿಕ್ಕವುಗಳೊಡನೆ ಸೇರಿ ಬಾಳುತ್ತಿತ್ತು. ಅದು ತನ್ನ ಪ್ರಾಮುಖ್ಯಕ್ಕೆ ತಕ್ಕಂತೆ ರಾಜ್ಯ ಅಥವಾ ಸಾಮ್ರಾಜ್ಯದ ಸಾಧಾರಣ ಸಭೆಗಳಲ್ಲಿ ಒಂದಲ್ಲ ಒಂದು ವಿಧದಿಂದ ಪ್ರತಿನಿಧಿಸಲ್ಪಡುತ್ತಿತ್ತು. ರಾಜ್ಯ, ಸಾರ್ವಭೌಮ ಅಥವಾ ಸರ್ವೋಚ್ಚ ರಾಜಕೀಯ ಅಧಿಕಾರವು ಈ ಘಟಕಗಳನ್ನು ಹೊಂದಿಸುವ ಸಾಧನವಾಗಿ ದಕ್ಷತೆಯನ್ನು ಕಾಯ್ದುಕೊಂಡು, ಸಾರ್ವತ್ರಿಕ ನಿಯಂತ್ರಣವನ್ನಿಟ್ಟುಕೊಂಡು, ಸರ್ವೋಚ್ಚವಾದರೂ ಎಂದೂ ಸರ್ವತಂತ್ರಸ್ವತಂತ್ರವಲ್ಲದ ಅಧಿಕಾರವನ್ನನುಭವಿಸುತ್ತಿತ್ತು. ಏಕೆಂದರೆ ಅದರ ಎಲ್ಲ ಹಕ್ಕು ಮತ್ತು ಶಕ್ತಿಗಳಲ್ಲೂ ಧರ್ಮ ಹಾಗೂ ಜನೇಚ್ಛೆಯಿಂದ ಪರಿಸೀಮಿತವಾಗಿತ್ತು. ಅದರ ಆಂತರಿಕ ಕರ್ತವ್ಯಗಳೆಲ್ಲದರಲ್ಲೂ ಅದು ಸಾಮಾಜಿಕ ರಾಜಕೀಯ–ನಿಕಾಯಗಳ ಸಾಮಾಜಿಕ ಘಟಕಗಳೊಡನೆ ಸಹಭಾಗಿಯಾಗಿತ್ತು. ಇದೇ ಭಾರತೀಯ ರಾಜ್ಯಧರ್ಮದ ಸಿದ್ಧಾಂತ ಮತ್ತು ವಾಸ್ತವಿಕ ಸಂವಿಧಾನ; ಇದರಲ್ಲಿ ಸಾಮುದಾಯಿಕ ಸ್ವಾತಂತ್ರ್ಯದ ಜಟಿಲ ವ್ಯವಸ್ಥೆ, ಸ್ವಯಂನಿರ್ಣಯಾಧಿಕಾರ, ಸರ್ವೋಚ್ಚ ಸಮನ್ವಯಾಧಿಕಾರ, ಸಮರ್ಥ ಬಲ–ಸ್ಥಾನ–ಮಾನ ಸಹಿತವಾದ ಒಂದು ಸಾರ್ವಭೌಮ ವ್ಯಕ್ತಿ ಮತ್ತು ನಿಕಾಯ ಇದ್ದವು. ಈ ಪ್ರಭುಶಕ್ತಿಯು ತನ್ನ ಯುಕ್ತ ಅಧಿಕಾರ ಮತ್ತು ಕರ್ತವ್ಯಗಳಿಂದ ಮರ್ಯಾದಿತವಾಗಿತ್ತು. ಅದು ಏಕಕಾಲದಲ್ಲಿ ನಿಯಂತ್ರಕವೂ ಆಗಿ ಮಿಕ್ಕ ನಿಯಂತ್ರಕ ನಿಕಾಯಗಳನ್ನು ಎಲ್ಲ ಶಾಖೆಗಳಲ್ಲೂ ತನ್ನ ಸಹಭಾಗಿಗಳನ್ನಾಗಿ ತೆಗೆದುಕೊಂಡು ಸಮಷ್ಟಿಯ ಜೀವನದ ನಿಯಂತ್ರಣ ಮತ್ತು ಆಡಳಿತಗಳಲ್ಲಿ ಭಾಗಿಯಾಗಿತ್ತು,

ಪ್ರಭುಸಹಿತವಾದ ಜನತೆ ಹಾಗೂ ಅದರ ಎಲ್ಲ ಅಂಗಸಮುದಾಯಗಳೂ ಧರ್ಮವನ್ನು ಪಾಲಿಸಬೇಕಾಗಿತ್ತು. ಮತ್ತು ಧರ್ಮದ ಅಂಕುಶಕ್ಕೆ ಅಧೀನವಾಗಿರಬೇಕಾಗಿತ್ತು. ಇಷ್ಟೇ ಅಲ್ಲದೆ ಸಮಷ್ಟಿ ಜೀವನದ ಆರ್ಥಿಕ ಮತ್ತು ರಾಜಕೀಯ ಅಂಶಗಳು ಧರ್ಮದ ಭಾಗ ಮಾತ್ರ; ಹಾಗೆ ಭಾಗವಾಗಿದ್ದರೂ ಅವು ಭಿನ್ನವಾಗಿರದೆ ಮಿಕ್ಕವುಗಳಾದ ಧಾರ್ಮಿಕ, ನೈತಿಕ ಹಾಗೂ ಸಾಮಾಜಿಕ ಜೀವನದ ಉಚ್ಚ ಸಾಂಸ್ಕೃತಿಕ ಗುರಿಯೊಡನೆ ಹಾಸುಹೊಕ್ಕಾಗಿ ಐಕ್ಯಹೊಂದಿದ್ದವು. ನೀತಿಯ ನಿಯಮವು ರಾಜಕೀಯ ಮತ್ತು ಆರ್ಥಿಕ ನಿಯಮಗಳನ್ನು ವ್ಯಾಪಿಸಿತ್ತು; ಸಮಾಜದ ಘಟಕಗಳಾದ ರಾಜನ, ಅವನ ಸಚಿವರ, ಮಂತ್ರಿಮಂಡಲದ, ಸಭೆಗಳ ಮತ್ತು ವ್ಯಕ್ತಿಯ ಪ್ರತಿಯೊಂದು ಕಾರ್ಯದ ಮೇಲೂ ಅದನ್ನು ಹೇರಲಾಗುತ್ತಿತ್ತು. ಮತದಾನದಲ್ಲೂ, ಮಂತ್ರಿಗಳ, ಸದಸ್ಯಸಚಿವರ ಮತ್ತು ಇತರ ಅಧಿಕಾರಿಗಳ ಅರ್ಹತೆಯಲ್ಲಿ ನೈತಿಕ ಹಾಗೂ ಸಾಂಸ್ಕೃತಿಕ ಗುಣಗಳನ್ನು ಗಣ್ಯವೆಂದು ತಿಳಿಯಲಾಗುತ್ತಿತ್ತು. ಆರ್ಯರ ಎಲ್ಲ ವ್ಯವಹಾರಗಳಲ್ಲೂ ಪ್ರತಿಯೊಬ್ಬ ಅಧಿಕಾರಿಯೂ ಉಚ್ಚ ಚರಿತ್ರವಂತನೂ, ಅನುಭವಿಕನೂ ಆಗಿರಬೇಕೆಂಬ ನಿರೀಕ್ಷೆಯಿತ್ತು. ಧಾರ್ಮಿಕ ಸತ್ವ ಮತ್ತು ಧರ್ಮಪ್ರಬೋಧಕ ಶಕ್ತಿಗಳು ರಾಜನ ಮತ್ತು ಜನದ ಇಡಿ ಬಾಳಿನ ಹಿನ್ನೆಲೆ ಮತ್ತು ನಾಯಕ ಸೂತ್ರವೆನಿಸಿದ್ದವು. ಸಮಾಜ–ಜೀವನ–ಪದ್ಧತಿಯ ವಿಭಾಗಗಳಲ್ಲಿ ವಿಶೇಷಜ್ಞತೆ ಅವಶ್ಯಕವೆನಿಸಿದರೂ ಸಮಾಜಜೀವನವೇ ಅಂತ್ಯವೆಂದು ತಿಳಿಯುತ್ತಿದ್ದಿಲ್ಲ. ಅದು ತನ್ನ ಅಂಗಾಂಗಿ ಭಾವಗಳೆರಡರಲ್ಲೂ ಮಾನವ ಮನ–ಆತ್ಮಗಳ ಶಿಕ್ಷಣಕ್ಕೂ ತನ್ನ ನೈಸರ್ಗಿಕಾವಸ್ಥೆಯ ಮೂಲಕ ಆಧ್ಯಾತ್ಮಿಕ ಅವಸ್ಥೆಗೆ ಬೆಳೆದು ಮುಟ್ಟುವುದಕ್ಕೂ ಬೇಕಾದ ಶಿಕ್ಷಣರಂಗ ಮತ್ತು ಹಿರಿಯ ಆಧಾರಭಿತ್ತಿಯೆನಿಸಿತ್ತು.

# ಮೂರನೆಯ ಅಧ್ಯಾಯ

## ೧. ಸಂಘಟಿತ ಸ್ವಯಂನಿರ್ಣಯದ ಸಮುದಾಯಜೀವನ

ಉಪಲಬ್ಧ ಆಧಾರಗಳ ಮೇಲಿಂದ ಹೇಳುವುದಾದರೆ, ಭಾರತೀಯ ನಾಗರಿಕತೆಯ ಸಾಮಾಜಿಕ–ರಾಜಕೀಯ ವಿಕಾಸವು ನಾಲ್ಕು ಐತಿಹಾಸಿಕ ಅವಸ್ಥೆಗಳ ಮೂಲಕ ಹಾಯ್ದುಬಂದಿದೆ ಎನ್ನಬೇಕಾಗುತ್ತದೆ. ಆ ನಾಲ್ಕು ಅವಸ್ಥೆಗಳಲ್ಲಿ ಆರ್ಯರ ಸಾದಾ ಜಾತಿ ಮೊದಲನೆಯದು. ಆನಂತರ ರಾಷ್ಟ್ರ ಜೀವನವು ರಾಜಕೀಯ ರಚನೆ ಹಾಗೂ ಸಮನ್ವಯಗಳ ಪ್ರಾಯೋಗಿಕ ರೂಪಗಳ ಸಾಕಷ್ಟು ವೈವಿಧ್ಯದ ಮೂಲಕ ಸಾಗುತ್ತಿದ್ದ ಸುದೀರ್ಘವಾದ ಮಾರ್ಪಾಡುಗಾಲ. ಜನರ ಸಮಷ್ಟಿಜೀವನದ ವಿಭಿನ್ನಾಂಗಗಳನ್ನು ಪ್ರದೇಶ ಮತ್ತು ಸಾಮ್ರಾಜ್ಯಗಳ ಘಟಕಗಳನ್ನಾಗಿ ಸಮಕ್ರಮಗೊಳಿಸುವ ರಾಜಪ್ರಭುತ್ವ ನಿಶ್ಚಿತವಾಗಿ ರೂಪಗೊಂಡದ್ದು ಮೂರನೆಯ ಅವಸ್ಥೆ. ಕೊನೆಯದಾಗಿ, ಆಂತರಿಕ ವೃದ್ಧಿವಿಘ್ನ ಮತ್ತು ಅಪ್ರಗತಿಪರ ತಾಟಸ್ಥ್ಯ ಹಾಗೂ ಪಾಶ್ಚಾತ್ಯ ಏಶಿಯ–ಯುರೋಪುಗಳ ಹೊಸ ಸಂಸ್ಕೃತಿ ಮತ್ತು ಪದ್ಧತಿಗಳ ಆರೋಪಣ ಇವುಗಳಿಗೊದಗಿದ ಅವನತಿಕಾಲ. ಮೊದಲ ಮೂರು ಕಾಲಾವಧಿಗಳ ಮುಖ್ಯ ಲಕ್ಷಣವೆಂದರೆ, ಸಾಕಷ್ಟು ಒಕ್ಕೂಟ, ಸ್ತಿಮಿತತೆಗಳು ಎಲ್ಲ ಘಟಕಗಳಲ್ಲೂ ಕಂಡು ಬರುವುದು ಮತ್ತು ಈ ಮೂಲಭೂತ ಸ್ತಿಮಿತತೆಯ ಇದ್ದದ್ದನ್ನೇ ಇಟ್ಟುಕೊಂಡಿರುವ ಪ್ರವೃತ್ತಿಯಿಂದ ಮಂದಗತಿಯಿಂದಾದರೂ ತನ್ನ ಭವಿಷ್ಯದ ರಚನೆಯಲ್ಲಿ, ಬಾಳಿನಲ್ಲಿ ಮತ್ತು ಅದನ್ನು ಪೂರ್ಣತೆಗೊಯ್ಯುವುದರಲ್ಲಿ ಖಾತ್ರಿಗೊಂಡು ಸರಿಯಾಗಿ, ಗಣ್ಯವಾಗಿ, ಬಲಿಷ್ಠವಾಗಿ ಜನಜೀವನ ವಿಕಾಸ ಹೊಂದುವುದೇ ಆಗಿತ್ತು; ಅವನತಿಯ ಈ ಕಾಲದಲ್ಲೂ ಆ ಒಕ್ಕೂಟದ ದೃಢಬಂಧ ಸರ್ವನಾಶವನ್ನು ಬಲವಾಗಿ ಎದುರಿಸುತ್ತಿದೆ. ನಾಗರಿಕತೆಯ ರಚನೆ ವಿದೇಶಿಯ ಪ್ರಭಾವವ ಒತ್ತಡದಿಂದ ತನ್ನ ಮೇಲ್ಮಟ್ಟದಲ್ಲಿ ಛಿನ್ನ ಭಿನ್ನವಾಗುತ್ತದೆ. ಆದರೆ ಅದು ಬಹುಕಾಲ ತನ್ನ ಅಡಿಗಟ್ಟನ್ನು ಉಳಿಸಿಕೊಂಡಿರುತ್ತದೆ, ಪರ ಪದ್ಧತಿಗಳ ದಾಳಿಯಿಂದ ತನಗೆ ಸಾಧ್ಯವಾದಷ್ಟನ್ನು ರಕ್ಷಿಸಿಕೊಳ್ಳುತ್ತದೆ, ತನ್ನ ವಿಶಿಷ್ಟ ಪದ್ಧತಿಯ ಬಹ್ವಂಶವನ್ನು ಕಾಯ್ದುಕೊಳ್ಳುತ್ತದೆ; ಮತ್ತು ಕೊನೆಯಲ್ಲಿ ಅದರ ಆತ್ಮ–ಶರೀರಗಳನ್ನು ಪುನರುಜ್ಜೀವಿಸಿಕೊಂಬ ಶಕ್ತಿಯನ್ನೂ ತಳೆದಿರುತ್ತದೆ. ಇಂದಿನ ಈ ಅಪ್ರಗತಿಪರ ಸಾಮಾಜಿಕ ತಾಟಸ್ಥ್ಯದಲ್ಲೂ ದೌರ್ಬಲ್ಯದಲ್ಲೂ ವಿಪರೀತ ದೃಷ್ಟಿಯಲ್ಲೂ ವಿಘಟನೆಯಲ್ಲೂ–ಸದ್ಯದ ವಿಲಕ್ಷಣ ಪ್ರವೃತ್ತಿಗಳೂ ಅಭಾಸಗಳೂ ಇರುವಾಗಲೇ–ಒಮ್ಮೆ ಈ ನಾಗರಿಕತೆ ಸ್ವವ್ಯವಹಾರವನ್ನು ಸ್ವತಂತ್ರವಾಗಿ ಸಾಗಿಸಲು ಶಕ್ತವಾಯಿತೆಂದರೆ, ಸ್ವೇಷ್ಟಾನುಸಾರವಾಗಿಯೂ ಸ್ವರೀತಿಯಂತೆಯೂ ನಡೆಸಿಕೊಂಡು

ಹೋಗಲು ಸಮರ್ಥವಾಯಿತೆಂದರೆ ಅದೆಂದೂ ಪಾಶ್ಚಾತ್ಯ ವಿಕಾಸ ಮಾರ್ಗದಂತೆ ಹೋಗದು. ಅದು ತನ್ನ ಆತ್ಮಶಕ್ತಿಯಿಂದಲೇ ಒಂದು ಹೊಸ ಸೃಷ್ಟಿಯನ್ನು ನಿರ್ಮಿಸೀತು ಮತ್ತು ಆ ಹೊಸ ಸೃಷ್ಟಿ ಭಾರತಕುಲದ ಮುಂಬರಿದ ವಿಚಾರಧಾರೆಯಲ್ಲಿ ಆಗಲೇ ಅಸ್ಪಷ್ಟವಾಗಿ ಉದಿಸಿದ ಅವಶ್ಯಕತೆಯ ಕರೆಗನುಗುಣವಾಗಿ ಮೂರನೆಯ ಅವಸ್ಥೆಯ ಸಮಷ್ಟಿಜೀವನದತ್ತಲೂ ಮಾನವಸಮಾಜದ ಆಧ್ಯಾತ್ಮಿಕ ತಳಹದಿಯತ್ತಲೂ ಇನ್ನೂ ಹರಿಯಬಹುದಾಗಿದೆ. ಆದರೆ ಅದರ ರಚನೆಗಳ ಸುದೀರ್ಘ ಸ್ತಿಮಿತತೆಯೂ ಅವು ಕಾಯ್ದುಕೊಂಡ ಬಾಳ ಬಗೆಯ ದೊಡ್ಡಸ್ತಿಕೆಯೂ ಎಂದಿಗೂ ಅಶಕ್ತತೆಯ ಕುರುಹೆನಿಸವು; ಅವು ಭಾರತದ ಸಾಂಸ್ಕೃತಿಕ ವಿಚಾರದಲ್ಲಿಯ ಗಣ್ಯವಾದ ರಾಜಕೀಯ ಮೂಲಪ್ರವೃತ್ತಿ ಹಾಗೂ ಸಾಮರ್ಥ್ಯ ಎಂದೇ ತಿಳಿಯಬೇಕು.

ಭಾರತೀಯ ರಾಜ್ಯಜೀವನದ ಎಲ್ಲ ಬಗೆಯ ರಚನೆ, ವಿಸ್ತರಣೆ ಮತ್ತು ಪುನಾರಚನೆಗಳ ಬುಡದಲ್ಲೂ ಇದ್ದ ಒಂದೇ ಒಂದು ದೃಢತತ್ವವೆಂದರೆ ಸಚೇತನ ಮತ್ತು ಸ್ವಯಂನಿರ್ಣಾಯಕ ಸಮಷ್ಟಿ ಜೀವನತತ್ವ. ಹಾಗೆ ಸ್ವಯಂ ನಿರ್ಣಯ ತೆಗೆದುಕೊಂಬುದು ಸಾಮಾನ್ಯ ಜನತೆಯಲ್ಲಿ ಮಾತ್ರವಲ್ಲ, ಅದೂ ಇಂದಿನಂತೆ ಮತಯಂತ್ರದ ಮೂಲಕವಲ್ಲ, ಮೇಲ್ಮೈಯಲ್ಲಷ್ಟೇ ನಿಂತ ಪ್ರಾತಿನಿಧಿಕ ಸಮಿತಿ ಮೂಲಕವಲ್ಲ–ಈ ಪ್ರಾತಿನಿಧಿಕ ಸಮಿತಿಯಾದರೋ ರಾಷ್ಟ್ರದ ರಾಜಕೀಯ ಬುದ್ಧಿಯ ಏಕಮಾತ್ರಭಾಗದ ಪ್ರತಿನಿಧಿ!–ಇಷ್ಟೇ ಅಲ್ಲದೆ ಆಧುನಿಕ ಪದ್ಧತಿ ವ್ಯವಸ್ಥೆಗೊಳಿಸಲು ಶಕ್ತವಾದದ್ದು! ಆ ಸ್ವಯಂ ನಿರ್ಣಯವು ದೇಶದ ಎಲ್ಲ ಜೀವನ–ನಾಡಿಗಳಲ್ಲೂ ಅದರ ಬಾಳಿನ ಪ್ರತಿಯೊಂದು ಪ್ರತ್ಯೇಕ ಅಂಗದಲ್ಲೂ ಮೂಡಿಬರುವಂಥದು. ಒಂದು ಸ್ವತಂತ್ರ ಸಮನ್ವಯಶೀಲ ವ್ಯವಸ್ಥೆಯು ಅದರ ಲಕ್ಷಣವಾಗಿತ್ತು. ಅದು ಲಕ್ಷ್ಯವನ್ನಾಗಿ ತೆಗೆದುಕೊಂಡ ಸ್ವಾತಂತ್ರ್ಯ ಸ್ಥಿತಿಯಾದರೂ ಅಷ್ಟು ವೈಯಕ್ತಿಕವಾಗಿರದೆ ಸಮಷ್ಟಿಹಿತದ ದೃಷ್ಟಿಯುಳ್ಳದ್ದಾಗಿತ್ತು. ಮೊಟ್ಟಮೊದಲು ಸಮಸ್ಯೆ ಸರಳವಾಗಿತ್ತು; ಗ್ರಾಮ ಮತ್ತು ವಂಶ, ಕುಲ ಅಥವಾ ಚಿಕ್ಕ ಪ್ರಾದೇಶಿಕ ಜನತೆ ಎಂಬೆರಡೇ ಸಮಷ್ಟಿ ಘಟಕಗಳ ಪ್ರಶ್ನೆಯಿತ್ತು. ಸ್ವಾಯತ್ತವಾದ ಗ್ರಾಮಸಮಷ್ಟಿಯ ತಳಹದಿಯ ಪದ್ಧತಿಯ ಮೇಲೆ ಮೊದಲನೆಯವರ ಸಚೇತನವಾದ ಸ್ವತಂತ್ರ ಬಾಳುವೆ ಸ್ಥಾಪಿತವಾಗಿತ್ತು; ಅದು ಅಷ್ಟು ಪೂರ್ಣವಾಗಿಯೂ ದೃಢವಾಗಿಯೂ ರಚಿತವಾಗಿದ್ದುದರಿಂದಲೇ ಕಾಲಧರ್ಮಾನುಗುಣವಾದ ಬಳಕೆ ಕಳಪೆಗಳೆಲ್ಲವನ್ನೂ ಎದುರಿಸಿ ಇಂದಿನವರೆಗೂ ಉಳಿದುಕೊಂಡು ಬಂತು ಮತ್ತು ಇದೇ ಇತ್ತೀಚೆಗೆ ನಿರ್ದಯವೂ ನಿರ್ಜೀವವೂ ಆದ ಬ್ರಿಟಿಷ್ ಸಾಹೇಬೀಪದ್ಧತಿಯ ಆಡಳಿತ ಯಂತ್ರದಡಿಯಲ್ಲಿ ಸಿಕ್ಕಿ ನಾಶವಾಯ್ತು. ಹಳ್ಳಿಯ ಇಡಿ ಜನತೆ ಕೃಷಿಯನ್ನವಲಂಬಿಸಿತ್ತು; ಒಟ್ಟಿನಲ್ಲಿ ಅದು ಒಂದೇ ಒಂದಾದ ಧಾರ್ಮಿಕ, ಸಾಮಾಜಿಕ ಸೈನಿಕ ಮತ್ತು ರಾಜಕೀಯ ಘಟಕವೆನಿಸಿ, ತನ್ನ ಸಮಿತಿಯ ಮೂಲಕ ರಾಜನ ನೇತೃತ್ವದಲ್ಲಿ ತನ್ನನ್ನು ತಾನೇ ಆಳಿಕೊಂಡಿತ್ತು; ಆಗ ಸ್ಪಷ್ಟವಾದ ಕರ್ತವ್ಯ ವಿಭಜನೆ ಅಥವಾ ಶ್ರಮವಿಭಜನೆ ಆಗಿದ್ದಿಲ್ಲ.

# ೨. ಕೃಷ್ಟಿಗಳು, ಮಂಡಲಗಳು ಹಾಗೂ ಸಾಮ್ರಾಜ್ಯಗಳು

ಮೇಲೆ ಹೇಳಿದ ಪದ್ಧತಿಯು ಸರಳತಮವಾದ ಕೃಷಿಗೋರಕ್ಷಣ ಜೀವನದ ರೂಪಕ್ಕಷ್ಟೇ ತಕ್ಕದ್ದಾಗಿತ್ತಲ್ಲದೆ ಎಲ್ಲರಿಗೂ ಸರಿಯನಿಸುವಂತಿದ್ದಿಲ್ಲ; ಪರಿಮಿತವಾದ ಚಿಕ್ಕ ಪ್ರಾದೇಶಿಕ ಜನತೆಗಲ್ಲದೆ ಅನ್ಯರಿಗದು ಸಾಕಷ್ಟು ವ್ಯಾಪಕವಾಗಿರಲಿಲ್ಲ. ಆದುದರಿಂದ ಹೆಚ್ಚು ಜಟಿಲವಾದ ಸಮಷ್ಟಿ ಜೀವನ ಪದ್ಧತಿಯ, ಮೂಲಭೂತ ಭಾರತೀಯ ತತ್ವದ ಮಾರ್ಪಟ್ಟ ಹಾಗೂ ಅಧಿಕ ಸೂಕ್ಷ್ಮಪ್ರಕಾರ ಸಮನ್ವಿತವಾದ ಪ್ರಯೋಗದ ವಿಕಾಸ ಅವಶ್ಯಕವೆನಿಸಿತು. ಮೊಟ್ಟಮೊದಲು ಆರ್ಯಸಮಷ್ಟಿಯ ಎಲ್ಲ ಸದಸ್ಯರಿಗೂ ಸಾಧಾರಣವೆನಿಸಿದ ಕೃಷಿಗೋರಕ್ಷಾ ಜೀವನ (ಕೃಷ್ಟಯಃ) ಸದಾ ಬಹುವ್ಯಾಪಕವಾಗಿ ಉಳಿಯಿತು; ಆದರೆ ಅದರ ಮೇಲೆ ವ್ಯಾಪಾರ, ಉದ್ಯಮ, ಕಲೆ, ಕಸಬುಗಳೂ ಅವಕ್ಕಿಂತ ಕಡಿಮೆ ವ್ಯಾಪ್ತಿಯಲ್ಲಿ ವಿಶೇಷಜ್ಞತೆವೆತ್ತ ಸೈನಿಕ, ರಾಜಕೀಯ, ಧಾರ್ಮಿಕ ಮತ್ತು ಪಾಂಡಿತ್ಯ ಸಾಧ್ಯ ಉದ್ಯೋಗಗಳೂ ಕರ್ತವ್ಯಗಳೂ ಹೆಚ್ಚು ಹೆಚ್ಚಾಗಿ ಬೆಳೆಯುತ್ತಬಂದವು. ಗ್ರಾಮಸಮಷ್ಟಿಯು ಉದ್ದಕ್ಕೂ ಸ್ತಿಮಿತ ಘಟಕವಾಗಿ ಉಳಿಯಿತು, ಸಮಾಜ ಶರೀರದ ದೃಢಬೀಜ ಅಥವಾ ಅಭೇದ್ಯ ಅಣುವಾಗಿನಿಂತಿತ್ತು. ಆದರೆ ಆ ಬಳಿಕ ನೂರು–ಸಾವಿರ–ಲಕ್ಷಗಟ್ಟಲೆ ಗ್ರಾಮಗಳ ಜೀವನ ತನ್ನ ತನ್ನ ಪ್ರಭುವಿನ ಆಡಳಿತದಡಿಯಲ್ಲಿ ತನ್ನದೇ ಆದ ಆಡಳಿತ ವ್ಯವಸ್ಥೆಯ ಅವಶ್ಯಕತೆಯೊಡನೆ ರೂಪುಗೊಂಡಿತು. ಈ ಘಟಕಗಳು, ದಿಗ್ವಿಜಯ–ಪರರಾಜ್ಯ ಸಹಸರಕಾರಗಳ ಮೂಲಕ ಒಂದುಕುಲ–ಒಂದು ಗೋತ್ರ ಸಂತತಿಯ ದೊಡ್ಡ ಜನತೆಯಾಗಿ ಬೆಳೆದುಬಂದ ಹಾಗೆ, ಒಂದುರಾಜ್ಯದ ಅಥವಾ ಸಂಯುಕ್ತ ಗಣರಾಷ್ಟ್ರದ ಅಂಗಗಳಾದವು; ಇವು ಪುನಃ ಇನ್ನೂ ಹೆಚ್ಚು ದೊಡ್ಡ ರಾಜ್ಯಗಳ ಮಂಡಲಗಳೆನಿಸಿದವು ಮತ್ತು ಕೊನೆಯಲ್ಲಿ ಒಂದು ಅಥವಾ ಹಲವು ಸಾಮ್ರಾಜ್ಯಗಳ ಭಾಗಗಳಾದವು. ಸಾಮಾಜಿಕ–ರಾಜಕೀಯ ರಚನೆಯಲ್ಲಿಯ ಭಾರತೀಯ ಪ್ರತಿಭೆ ಒರೆಗೆ ಹತ್ತುವುದು ಈ ವರ್ಧಮಾನ ಸಮಭಿವೃದ್ಧಿ ಮತ್ತು ಸಾನ್ನಿವೇಶಿಕ ನವವಿಧಾನಗಳಿಗನುಗುಣವಾಗಿ ಮಾಡಿದ ತನ್ನ ಸಾಮಷ್ಟಿಕ ಸ್ವಯಂನಿರ್ಣಯ ನಿಷ್ಠ ಸ್ವಾತಂತ್ರ್ಯ ಹಾಗೂ ಸುವ್ಯವಸ್ಥೆಯ ತತ್ವದ ಜಯಪ್ರದ ಪ್ರಯೋಗದಲ್ಲಿ.

# ೩. ಚಾತುವರ್ಣ್ಯದ ವಿಕಾಸ

ಆ ಅವಶ್ಯಕತೆಯನ್ನು ಪೂರೈಸಲೆಂದು ಚಾತುರ್ವರ್ಣ್ಯದ ಸ್ತಿಮಿತ ಸಾಮಾಜಿಕ–ಧಾರ್ಮಿಕ ಪದ್ಧತಿಯನ್ನು ಭಾರತೀಯ ಬಗೆ ನಿರ್ಮಿಸಿತು. ಹೊರ ಹೊರಗೆ ನೋಡಿದರೆ ಒಂದು ಅರ್ಚಕವರ್ಗ, ಒಂದು ಸೈನಿಕ ಹಾಗೂ ರಾಜಕೀಯ ಶ್ರೀಮಂತ ವರ್ಗ, ಕಸಬುದಾರ–ಸ್ವತಂತ್ರ ಕೃಷಿಕ ಮತ್ತು ವ್ಯಾಪಾರಿಗಳದೊಂದುಗುಂಪು, ಅನಂತರ ದಾಸ–ಶ್ರಮಜೀವಿಗಳ ಕೆಳವರ್ಗ–ಇವುಗಳಿಂದ ಕೂಡಿದ ಪದ್ಧತಿ ಸಾಮಾನ್ಯವಾಗಿ ಮಾನವಸಮಾಜದಲ್ಲಿ ಒಂದಲ್ಲ ಒಂದು ಕಾಲದಲ್ಲಿ ಅನೇಕ ಜನಾಂಗಗಳಲ್ಲಿ ಇದ್ದ

ಕಟ್ಟಿನ ಒಂದು ಉಗ್ರತರ ರೂಪವೆಂದು ತೋರಬಹುದು. ಆ ಹೋಲಿಕೆ ಕೇವಲ ಹೊರಗಷ್ಟೇ; ಭಾರತದ ಚಾತುರ್ವರ್ಣ್ಯದ ಅಂತಸ್ತತ್ವವೇ ಬೇರೆ ಬಗೆಯದು, ಅರ್ವಾಚೀನ ವೈದಿಕ ಮತ್ತು ಇತಿಹಾಸ ಪುರಾಣಗಳ ಕಾಲದಲ್ಲಿ ಚತುರ್ವರ್ಣಪದ್ಧತಿಯು ಏಕಕಾಲದಲ್ಲಿ ಧಾರ್ಮಿಕ–ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಬಗೆಗಳ ಒಂದು ಹಾಸುಹೊಕ್ಕಾದ ಚೌಕಟ್ಟಾಗಿತ್ತು. ಆ ಚೌಕಟ್ಟಿನಲ್ಲಿ ಪ್ರತಿಯೊಂದು ವರ್ಗಕ್ಕೂ ತನ್ನ ನೈಸರ್ಗಿಕ ಭಾಗಧೇಯವಿತ್ತು ಹಾಗೂ ಯಾವ ಒಂದು ಮೂಲಭೂತ ಚಟುವಟಿಕೆಯಲ್ಲೂ ಯಾವ ಒಂದರ ಭಾಗ ಅಥವಾ ಸ್ಥಾನವೂ ಪರವ್ಯಾವರ್ತಕವಾಗಿದ್ದಿಲ್ಲ. ಈ ಲಕ್ಷಣವು ಪ್ರಾಚೀನ ಪದ್ಧತಿಯನ್ನರಿತುಕೊಂಬುದಕ್ಕೆ ಅತ್ಯವಶ್ಯಕ; ಆದರೆ ಅಧಃಪತನಕಾಲದ ಪರಿಸ್ಥಿತಿ ಪರಿಣಾಮಗಳ ಅಪಾರ್ಥ ಅಥವಾ ಅತಿಶಯಾರ್ಥಗಳ ದೆಸೆಯಿಂದ ತಾಳಿದ ಅಪಕಲ್ಪನೆಗಳಿಗಿದು ತುತ್ತಾಗಿ ಮಲಿನವಾಯ್ತು, ಉದಾಹರಣಾರ್ಥ, ಪವಿತ್ರಾಧ್ಯಯನ ಮತ್ತು ಅತ್ಯುಚ್ಚ ಆಧ್ಯಾತ್ಮಿಕ ಜ್ಞಾನ–ಜ್ಞಾನಾರ್ಜನಾವಕಾಶಗಳು ಕೇವಲ ಬ್ರಾಹ್ಮಣರ ಸ್ವತ್ತಾಗಿದ್ದಿಲ್ಲ. ಮೊಟ್ಟಮೊದಲು ಬ್ರಾಹ್ಮಣ ಕ್ಷತ್ರಿಯರಲ್ಲಿ ಆಧ್ಯಾತ್ಮಿಕ ನೇತೃತ್ವಕ್ಕಾಗಿ ಸ್ಪರ್ಧೆಯಿತ್ತು; ಬಹಳಕಾಲ ಕ್ಷತ್ರಿಯರು ಪಂಡಿತರ ಮತ್ತು ಪುರೋಹಿತರ ಬಾಯ ಬ್ರಹ್ಮದ ವಿರುದ್ಧನಿಂತು ಸ್ವತ್ವವನ್ನು ಕಾಪಾಡಿಕೊಂಡರು. ಆದರೆ ಕೊನೆಯಲ್ಲಿ ಧರ್ಮಶಾಸ್ತ್ರಕಾರರು, ಉಪಾಧ್ಯಾಯರು, ಅರ್ಚಕರು ಅಲ್ಲದೆ ತತ್ವಜ್ಞಾನ, ಪಾಂಡಿತ್ಯ, ಪವಿತ್ರಗ್ರಂಥಗಳ ಅಧ್ಯಯನಗಳಿಗೆ ಇಡಿ ಬಾಳನ್ನು ಮೀಸಲಿಡಬಲ್ಲವರು ಎಂದೆನಿಸಿದ ಬ್ರಾಹ್ಮಣರು ಸುಸ್ಥಿರವೂ ಸುಪ್ರಭಾವಿಯೂ ಆದ ಗಣ್ಯತೆಯನ್ನು ಪಡೆದರು. ಅರ್ಚಕ–ಪಂಡಿತವರ್ಗ ಧಾರ್ಮಿಕ ಆಧಾರವಾದರು, ಪವಿತ್ರ ಗ್ರಂಥ ಹಾಗೂ ಪರಂಪರೆಯ ಪಾಲಕರಾದರು, ಧರ್ಮ–ಶಾಸ್ತ್ರಗಳ ಅರ್ಥಗಾರರಾದರು, ಸರ್ವಜ್ಞಾನಶಾಖೆಗಳ ಅಭಿಜ್ಞಾತ ಅಧ್ಯಾಪಕರಾದರು ಮಿಕ್ಕ ವರ್ಗದವರ ಸಾಮಾನ್ಯ ಉಪದೇಶಕರೂ ಗುರುಗಳೂ ಹೆಚ್ಚಾಗಿ ಅವರೇ ಆದರು. ತತ್ವಜ್ಞಾನಿಗಳೆಲ್ಲರೂ ಬ್ರಾಹ್ಮಣರೇ ಎಂದು ಹೇಳಬರದಿದ್ದರೂ ಬಹು ಸಂಖ್ಯ ಚಿಂತಕರೂ ಸಾಹಿತಿಗಳೂ ವಿದ್ವಾಂಸರೂ ಅವರೇ ಆಗಿದ್ದರೆನ್ನಬಹುದು. ಬ್ರಹ್ಮ–ಕ್ಷತ್ರ–ವೈಶ್ಯ ಎಂಬ ದ್ವಿಜತ್ರಯಕ್ಕೂ ಅಧಿಕಾರವಿದ್ದರೂ ವೇದೋಪನಿಷತ್ತುಗಳ ಅಧ್ಯಯನ ಅವರ ಪಾಲಿಗೆ ಸೇರಿತು. ಶೂದ್ರರಿಗೆ ತಾತ್ವಿಕವಾಗಿ ಆ ಹಕ್ಕಿದ್ದಿಲ್ಲ. ಇದ್ದ ಸಂಗತಿಯೇನೆಂದರೆ, ಅತ್ಯರ್ವಾಚೀನ ಕಾಲದಲ್ಲಿ ಕೂಡ ಪ್ರಾಚೀನ ಸ್ವಾತಂತ್ರ್ಯದ ಮುಖ್ಯಾಂಗವನ್ನು ಧಾರ್ಮಿಕ ಚಳವಳಿಗಳು ಸಾಲು ಸಾಲಾಗಿ ಎದ್ದು ಎತ್ತಿಹಿಡಿದವು; ಅತ್ಯುಚ್ಚ ಆಧ್ಯಾತ್ಮಿಕ ಜ್ಞಾನವನ್ನೂ ಆ ಜ್ಞಾನಲಾಭದ ಅವಕಾಶವನ್ನೂ ಎಲ್ಲರ ಮನೆಬಾಗಿಲಿಗೂ ತಂದವು ಮತ್ತು ಆದಿಯಲ್ಲಿ ಹೇಗೋ ಹಾಗೆ ಎಲ್ಲ ವರ್ಗಗಳಲ್ಲೂ, ವೇದ–ವೇದಾಂತಗಳ ಋಷಿಗಳು ಹುಟ್ಟಿದರು; ಕೊನೆವರೆಗೂ ಯೋಗಿ, ಸಂತ, ಅಧ್ಯಾತ್ಮಚಿಂತಕ, ನವಮಾರ್ಗನಿರ್ಮಾತೃಗಳೂ ಧಾರ್ಮಿಕ ಕವಿ–ಗಾಯಕರೂ ಪಾರಂಪರಿಕ ಆಧಾರಗ್ರಂಥ ಹಾಗೂ ವಿದ್ಯೆಗಳಿಂದ ಭಿನ್ನವಾದ ಚೈತನ್ಯಮಯ ಆಧ್ಯಾತ್ಮಿಕತೆ ಮತ್ತು ಜ್ಞಾನಗಳ ಮೂಲಪುರುಷರೂ ಅತಿ ನೀಚವಾದ ಶೂದ್ರವರ್ಗ, ನಿಂದಿತ–ಶೋಷಿತ ಬಹಿಷ್ಕೃತ ವರ್ಗಗಳನ್ನೊಳಗೊಂಡ ಸಮಷ್ಟಿಯ ಎಲ್ಲ ಉಚ್ಚ ನೀಚ ಮಟ್ಟಗಳಿಂದಲೂ ಬಂದವರು.

# ೪. ವರ್ಣತಾರತಮ್ಯದ ಬೆಳವಣಿಗೆ:

ಆ ಚತುರ್ವರ್ಣಗಳು ಅವಿಲಂಘ್ಯ ಸಾಮಾಜಿಕ ತರತಮ ಪ್ರಸ್ತರಗಳಾದವು. ಆದರೆ ಬಹಿಷ್ಕೃತರನ್ನುಳಿದರೆ ಮಿಕ್ಕ ವರ್ಗಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ ಆಧ್ಯಾತ್ಮಿಕ ಜೀವನ ಮತ್ತು ಪ್ರಯೋಜನ, ಒಂದು ವಿಧದ ಸಾಮಾಜಿಕ ಘನತೆ, ಶಿಕ್ಷಣ, ಸಾಮಾಜಿಕ–ನೈತಿಕ ಗೌರವತತ್ವ ಹಾಗೂ ಸಮಷ್ಟಿಯ ಅಂಗವಾಗಿ ಒಂದು ಸ್ಥಾನ, ಹಕ್ಕು, ಬಾಧ್ಯತೆಗಳಿದ್ದವು. ಆ ಪದ್ಧತಿಯ ಪರಿಣಾಮವಾಗಿ ಒಂದು ಸ್ಥಿರವಾದ ಶ್ರಮವಿಭಜನೆ ಮತ್ತು ಸುವ್ಯವಸ್ಥಿತ ಆರ್ಥಿಕ ಯೋಗ್ಯತೆಗಳು ಉಂಟಾದವು; ಮೊದಲು ಇದರಲ್ಲಿ ಆನುವಂಶಿಕ ತತ್ವ ಗಣ್ಯವಾಗಿತ್ತು. ಇದರಲ್ಲೂ ಆಚಾರಕ್ಕಿಂತ ಬರಿ ವಿಚಾರವಷ್ಟೇ ಅಲಂಘ್ಯವಾಗಿತ್ತೆನ್ನಿ. ಆದರೆ ತನ್ನ ವರ್ಗದಲ್ಲೇ ಸ್ವಪ್ರಭಾವ ಇಲ್ಲವೆ ಯೋಗ್ಯತೆಗಳನ್ನು ಬಳಸಿಕೊಂಡು ಧನಾರ್ಜನೆ ಮಾಡಿಕೊಳ್ಳಲೂ ಸಮಾಜ, ಆಡಳಿತಚಕ್ರ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಗಣ್ಯನೆನಿಸಿಕೊಳ್ಳಲೂ ಯಾವನಿಗೂ ಅವಕಾಶವಿರದಿರಲಿಲ್ಲ. ಏಕೆಂದರೆ ಕೊನೆಯದಾಗಿ, ಸಾಮಾಜಿಕ ತರತಮಶ್ರೇಣಿಯು ಅದೇ ಕಾಲದಲ್ಲಿ ರಾಜಕೀಯ ಉಚ್ಚನೀಚ ಸೋಪಾನಪಂಕ್ತಿಯಾಗಿರಲಿಲ್ಲ. ಸರ್ವಸಾಧಾರಣವಾದ ನಾಗರಿಕ ಹಕ್ಕುಬಾಧ್ಯತೆ, ಸಭೆ, ಸಮಿತಿ, ಆಡಳಿತಘಟಕಗಳಲ್ಲಿ ನಾಲ್ಕೂ ವರ್ಗದವರಿಗೆ ತಮ್ಮ ತಮ್ಮ ಸ್ಥಾನ ಮತ್ತು ಪ್ರಭಾವಾಂಶವಿತ್ತು. ಕಾಯಿದೆ ಮತ್ತು ತತ್ವಗಳಲ್ಲಾದರೂ ಪ್ರಾಚೀನಭಾರತದಲ್ಲಿ ಮಿಕ್ಕ ಹಳೆಯ ಜನಾಂಗಗಳ ಭಾವನೆಗಳಿಗೆ ವಿರುದ್ಧವಾಗಿ ಆಚರಣೆಯಲ್ಲಿ ಕೆಲವೇ ಅಪವಾದಗಳನ್ನುಳಿದರೆ ಅವರ ಸಮಾನಸ್ಥಾನವು ಸಾಮಾಜಿಕ ಪುರುಷಾಧೀನತೆಯಿಂದಲೂ ಗಾರ್ಹಸ್ಥಕರ್ಮಮಗ್ನತೆಯಿಂದಲೂ ಲುಪ್ತವಾದರೂ– ಸ್ತ್ರೀಯರಿಗೆ ನಾಗರಿಕ ಹಕ್ಕುಗಳನ್ನು ಸಮಾನವಾಗಿ ಕೊಡದೆ ಇದ್ದಿಲ್ಲ. ಉಪಲಬ್ಧ ಇತಿಹಾಸಕಥೆಗಳಲ್ಲಿ ರಾಣಿಯರಾಗಿಯೂ ಆಡಳಿತಗಾರ್ತಿಯರಾಗಿಯೂ ಯೋಧೆಯರಾಗಿಯೂ ಬಾಳಿದ ಸ್ತ್ರೀಯರು ಬೇಕಾದಷ್ಟು ಸಿಕ್ಕುವರಷ್ಟೇ ಅಲ್ಲ, ನಾಗರಿಕ ಸಮಿತಿಗಳಲ್ಲಿ ನಿರ್ವಾಚಿತ ಪ್ರತಿನಿಧಿಗಳಾದವರೂ ಲಭ್ಯರು.

ಸರ್ವಸಾಧಾರಣ ಜೀವನದಲ್ಲಿ ಎಲ್ಲ ವರ್ಗಗಳೂ ನಿಕಟವಾಗಿ ಭಾಗವಹಿಸುವ ತಳಹದಿಯ ಮೇಲೆಯೇ ಇಡಿ ಭಾರತೀಯ ಪದ್ಧತಿ ರಚಿತವಾದದ್ದು. ಪ್ರತಿಯೊಂದು ವರ್ಗವೂ ಸ್ವಕ್ಷೇತ್ರದಲ್ಲಿ ಪ್ರಾಧಾನ್ಯಪಡೆದಿತ್ತು– ಬ್ರಾಹ್ಮಣನಿಗೆ ಧರ್ಮದಲ್ಲಿ ಪ್ರಾಧಾನ್ಯವಿದ್ದರೆ, ಪಾಂಡಿತ್ಯ ಸಾಹಿತ್ಯಗಳಲ್ಲಿ ಗಣ್ಯತೆಯಿದ್ದರೆ; ಕ್ಷತ್ರಿಯನಿಗೆ ಯುದ್ಧ, ರಾಜ್ಯಭಾರ, ಅಂತಾರಾಜ್ಯಕೀಯ ರಾಜಕಾರ್ಯಗಳಲ್ಲಿ ಪ್ರಾಮುಖ್ಯವಿತ್ತು; ಅರ್ಥಾರ್ಜನ ಹಾಗೂ ಉತ್ಪಾದಕ ಆರ್ಥಿಕ ಕರ್ತವ್ಯಗಳಲ್ಲಿ ವೈಶ್ಯ ಅಗ್ರೇಸರನಾಗಿದ್ದನು. ಆದರೆ ಯಾರಿಗೂ– ಶೂದ್ರನಿಗೆ ಸಹ–ನಾಗರಿಕ ಜೀವನದಲ್ಲಿ ಭಾಗವಹಿಸುವ, ರಾಜಕೀಯ ಆಡಳಿತ ನ್ಯಾಯದಾನಗಳಲ್ಲಿ ಪರಿಣಾಮಕರವಾದ ಸ್ಥಾನಪಡೆದು ಅಭಿಪ್ರಾಯ ಪ್ರಕಟಿಸುವ ಅಧಿಕಾರವಿಲ್ಲದೆ ಇದ್ದಿಲ್ಲ. ಇದರ ಪರಿಣಾಮವಾಗಿ ಬೇರೆಯ ದೇಶಗಳಲ್ಲಿದ್ದಂತೆ ಭಾರತದಲ್ಲಿ ಪ್ರಾಚೀನ ಭಾರತೀಯ ರಾಜಕೀಯ–ಸಾಮಾಜಿಕ ವ್ಯವಸ್ಥೆ ವರ್ಗಸತ್ತೆಯನ್ನು

ಬೆಳೆಸಲಿಲ್ಲ. ಇದ್ದಲ್ಲೂ ಬಹಳಕಾಲ ಉಳಿಸಿಕೊಳ್ಳಲಿಲ್ಲ. ತಿಬೇಟಿನಲ್ಲಿಯ ಪುರೋಹಿತ ಪ್ರಭುತ್ವ, ಫ್ರಾನ್ಸ್–ಇಂಗ್ಲಂಡ ಮತ್ತು ಇತರ ಯೌರೋಪ್ಯ ದೇಶಗಳಲ್ಲಿ ಅನೇಕ ಶತಕಗಳ ಕಾಲ ಇದ್ದ ಜಮೀನುದಾರಿ ಮತ್ತು ಸೈನಿಕ ಶ್ರೀಮತ್ಪ್ರಭುತ್ವ, ಕಾರ್ತೇಜು–ವೆನೀಸುಗಳಲ್ಲಿದ್ದಂಥ ವೈಶ್ಯ ಸ್ವಯಂಪ್ರಭುತ್ವಗಳು ಭಾರತೀಯ ಭಾವಕ್ಕೆ ವ್ಯತಿರಿಕ್ತವಾದಂಥವು. ಕುಲವಂಶಗಳು ರಾಷ್ಟ್ರರಾಜ್ಯಗಳಿಗಾಗಿ ಬೆಳೆಯುತ್ತಿರುವಾಗ ಹಾಗೂ ಅವು ಮಂಡಲ ನೇತೃತ್ವಕ್ಕಾಗಿಯೂ ಅಧಿರಾಜ್ಯ, ಪದಕ್ಕಾಗಿಯೂ ಹೋರಾಡುತ್ತಿದ್ದಾಗ–ಅಲ್ಲದೆ ಎಲ್ಲೆಲ್ಲೂ ಯುದ್ಧ, ಕಲಹ, ರಾಜ್ಯವಿಸ್ತರಣ ನಡೆಯುತ್ತಿದ್ದಾಗ ಗಣ್ಯಕ್ಷತ್ರಿಯ ಮನೆತನಗಳ ರಾಜಕೀಯ ಪ್ರಾಧಾನ್ಯವಿದ್ದುದಕ್ಕೆ ಮಹಾಭಾರತದಲ್ಲೂ ಅದಕ್ಕಿಂತ ಹೆಚ್ಚಿನ ಒರಟುರೂಪದಲ್ಲಿ ಕುಲ ರಾಷ್ಟ್ರಪದ್ಧತಿಗೆ ತಿರುಗುತ್ತಿದ್ದ ಮಧ್ಯಯುಗೀನ ರಾಜಪುತ್ರಸ್ಥಾನದಲ್ಲೂ ನಿದರ್ಶನಗಳು ಸಿಗುತ್ತವೆ: ಆದರೆ ಪ್ರಾಚೀನ ಭಾರತದಲ್ಲಿ ಇದು ಕ್ಷಣಿಕ ಆಗಂತುಕವಾಗಿತ್ತಲ್ಲದೆ, ಅಂಥ ಪ್ರಾಧಾನ್ಯವಿದ್ದುದಾದರೂ ಇತರ ವರ್ಣದವರ ರಾಜಕೀಯ ಮತ್ತು ನಾಗರಿಕ ಪ್ರಭಾವವನ್ನು ಹೊರಪಡಿಸಲೂ ಅಲ್ಲ; ಮತ್ತು ಸಮಷ್ಟಿಯ ವಿವಿಧ ಘಟಕಗಳ ಸ್ವತಂತ್ರ ಜೀವನದಲ್ಲಿ ಅದು ಕೈಹಾಕಲೂ ಇಲ್ಲ, ಶೋಷಕಹಸ್ತವನ್ನು ಚಾಚಲೂ ಇಲ್ಲ. ನಡುಗಾಲಗಳ ಪ್ರಜಾಪ್ರಭುತ್ವ ಪದ್ಧತಿಯ ಗಣರಾಜ್ಯಗಳು ಬಹುಶಃ ಸಭೆಗಳಲ್ಲಿ ಇಡಿ ಜನತೆ ಸಕ್ರಿಯವಾಗಿ ಭಾಗವಹಿಸಬೇಕೆಂಬ ತತ್ವವನ್ನುಪೂರ್ಣವಾಗಿ ಉಳಿಸಿಕೊಳ್ಳಲು ಹೆಣಗಿದ ರಾಜಕೀಯ–ಸಾಮಾಜಿಕ ಸಂಸ್ಥೆಗಳೆನ್ನಬೇಕು. ಅವೆಂದೂ ಗ್ರೀಕ್ ಮಾದರಿಯವಾಗಿರಲಿಲ್ಲ. ಸ್ವಯಂಪ್ರಭುತ್ವದ ಗಣರಾಜ್ಯಗಳೆಂದರೆ ಕುಲಪ್ರಭುತ್ವಗಳು ಅಥವಾ ಸಮಾಜದ ಘನವಂತರಿಂದ ತುಂಬಿದ ಪರಿಮಿತ ಶಾಸನಸಭೆಗಳು ಇದು ಅನಂತರ ಆಮೇಲಿನ ರಾಜಕೀಯ ಸಮಿತಿ ಇಲ್ಲವೆ ನಾಗರಿಕ ಸಭೆಗಳಂಥ ಚತುರ್ವರ್ಣ ಪ್ರಾತಿನಿಧಿಕವಾದ ಸಮಿತಿ, ಸಭೆ ಎನಿಸಿತು. ಹೇಗಿದ್ದರೂ ಕೊನೆಯಲ್ಲಿ ವಿಕಾಸ ಪಡೆದದ್ದು ಸಂಮಿಶ್ರ ಸಾಮಾಜಿಕ–ರಾಜಕೀಯ ಪದ್ಧತಿ. ಅದರಲ್ಲಿ ಯಾವ ಒಂದು ವರ್ಣಕ್ಕೂ ಅತಿ ಪ್ರಾಧಾನ್ಯವಿರಲಿಲ್ಲ. ಹೀಗಿದ್ದುದರಿಂದಲೇ ಗ್ರೀಸ್‌ರೋಮ್‌ಗಳ ವ್ಯಥಾಬಹುಲ ಇತಿಹಾಸದಲ್ಲಿ ಕಂಡುಬರುವಂತೆ ಧನಿಕ–ದರಿದ್ರರ ಹೋರಾಟ, ಸ್ವಯಂಪ್ರಭುತ್ವ ಪ್ರಜಾಪ್ರಭುತ್ವಗಳ ಕಲ್ಪನೆ–ಅದು ಸರ್ವತಂತ್ರ ಸ್ವತಂತ್ರ ರಾಜಪ್ರಭುತ್ವವಾಗಿ ಬೆಳೆದುನಿಂತದ್ದು; ಅಥವಾ ಮೊದಲು ಶ್ರೀಮಂತರ ಆಳಿಕೆ, ಅದನ್ನುರುಳಿಸಿಬಂದ ಧನಿಕ ಹಾಗೂ ವೃತ್ತಿಗ ವರ್ಗದ ಮೇಲ್ಮೆ, ಸಾಮಾನ್ಯರ ಹೆಸರಿನಲ್ಲಿ ಸಮಾಜದಲ್ಲಿ ಉದ್ಯಮಿಕರಣಕ್ಕೀಡು ಮಾಡುವುದು, ದಬ್ಬಾಳಿಕೆ ನಡೆಸುವುದು, ಶೋಷಿಸುವುದು ಮುಂತಾದ ಚಟುವಟಿಕೆಯ ಮಧ್ಯವರ್ಗೀಯ ಅಂಗಡಿಗಾರರ ಪ್ರಭುತ್ವ ಮತ್ತು ಕೊನೆಯದಾಗಿ ಅರ್ವಾಚೀನ ಯುರೋಪಿನಲ್ಲಿ ಕಂಡುಬರುವ ಶ್ರಮಜೀವಿಗಳ ಆಳಿಕೆಯತ್ತತಿರುಗುವ ಶಾಸನ ನೀತಿ ಎಂಬಂತೆ ವರ್ಗಕಲಹದಿಂದ ಉತ್ತರೋತ್ತರ ಶಾಸನರೂಪಗಳು ಪರಿಣಮಿಸಿದ್ದು ಭಾರತದ ಇತಿಹಾಸದಲ್ಲಿ ಕಾಣದಾಗಿದೆ. ಭಾರತೀಯ ಬಗೆ ಮತ್ತು ಭಾವ ಪಾಶ್ಚಾತ್ಯರಷ್ಟು ಕೇವಲ ಬೌದ್ಧಿಕ ಹಾಗೂ ಜೈವಿಕ (ಪ್ರಾಣಪ್ರಧಾನ)ವಲ್ಲ; ಅದು ಪ್ರಾತಿಭ, ಸಮರಸಾತ್ಮಕ

ಮತ್ತು ಸಮ್ಯಕ್ ಶಿಥಿಲ. ಸಮಾಜ ಮತ್ತು ರಾಜಕೀಯದ ಯಾವ ಒಂದು ಆದರ್ಶ ಪದ್ಧತಿಯನ್ನೂ ಅದು ಸಂಸ್ಥಾಪಿಸದಿದ್ದರೂ ಅದು ಒಂದು ಬುದ್ಧಿವಂತಿಕೆಯ ಹಾಗೂ ಸ್ತಿಮಿತತೆಯ ಸಾಮರಸ್ಯ ಪದ್ಧತಿಯನ್ನು ಸ್ಥಾಪಿಸಿತು. ಆ ಪದ್ಧತಿ ಅಪಾಯಕರವಾದ ಅಸ್ಥಿರ ಸಮತೋಲವುಳ್ಳದ್ದೂ ಅಲ್ಲ; ಎಲ್ಲ ನೈಸರ್ಗಿಕ ಶಕ್ತಿ ಮತ್ತು ವರ್ಗಗಳಲ್ಲಿಯ ರಾಜಿ–ವ್ಯವಸ್ಥೆಯುಳ್ಳದ್ದೂ ಅಲ್ಲ; ಅದೊಂದು ಸಂಘಟಿತವೂ ಪ್ರಾಣಸ್ಥಾನೀಯವೂ ಆದ ಸಮಕ್ರಮ, ಸಹಜೀವನ ಪದ್ಧತಿ; ಸಮಷ್ಟಿಯ ಸರ್ವಾಂಗಗಳ ಸ್ವತಂತ್ರ ಚಟುವಟಿಕೆಯನ್ನದು ಗೌರವಿಸುತ್ತಿತ್ತು. ಎಲ್ಲ ಮಾನುಷ ಪದ್ಧತಿಗಳಿಗೆ ಒದಗುವ ಅಧಃಪಾತವನ್ನು ತಡೆಗಟ್ಟುವಂತಲ್ಲದಿದ್ದರೂ ಆಂಗಿಕ ಗಲಭೆ ನಿಯಮೋಲ್ಲಂಘನಗಳನ್ನಾದರೂ ತಡೆಗಟ್ಟುವಂಥ ಶಕ್ತಿ ಅದಕ್ಕಿತ್ತು.

## ೫. ಶಾಸನಾಧಿಕಾರಗಳ ತ್ರಿಕೂಟ

ರಾಜಕೀಯ ರಚನೆಯ ಶಿಖರದಲ್ಲಿ ಸಮಂತ್ರಿಕರಾಜ, ಆಸ್ಥಾನ ಸಭೆ ಮತ್ತು ರಾಜ್ಯದ ಸಾಮಾನ್ಯ ಸಭೆಗಳೆಂಬ ಮೂರು ಶಾಸಕ ವೃತ್ತಗಳಿದ್ದವು. ಮಂತ್ರಿಮಂಡಲದ ಸದಸ್ಯರನ್ನೂ ಮಂತ್ರಿಗಳನ್ನೂ ಎಲ್ಲ ವರ್ಗಗಳಿಂದಲೂ ಆಯಲಾಗುತ್ತಿತ್ತು; ಅದರಲ್ಲಿ ನಿಶ್ಚಿತಸಂಖ್ಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಪ್ರತಿನಿಧಿಗಳಿರುತ್ತಿದ್ದರು. ಸಂಖ್ಯೆಯಲ್ಲಿ ವೈಶ್ಯರೇ ಗಣ್ಯರಾಗಿದ್ದರು; ಆದರಿದು ಜನತೆಯಲ್ಲಿಯ ಅವರ ಸಂಖ್ಯಾಬಾಹುಲ್ಯಕ್ಕೆ ಅನುಗುಣವಾಗಿತ್ತು. ಏಕೆಂದರೆ ಪ್ರಾಚೀನ ಆರ್ಯ ಸಮಾಜದಲ್ಲಿ ವೈಶ್ಯವರ್ಣಕ್ಕೆ ದೊಡ್ಡ ಪುಟ್ಟ ವ್ಯಾಪಾರಿಗಳಲ್ಲದೆ ಕಸಬುದಾರರೂ ಶಿಲ್ಪಿಗಳೂ ಕೃಷಿಕರೂ ಸೇರಿದ್ದರಿಂದ ಅದೇ 'ವಿಶಃ' ಎಂಬ ಹೆಸರಿಂದ ಸರ್ವಸಾಮಾನ್ಯರಲ್ಲಿ ಮುಕ್ಕಾಲುಮೂರುವೀಸ ಅಂಶವಾಗಿತ್ತು. ಬ್ರಹ್ಮ, ಕ್ಷತ್ರ, ಶೂದ್ರರಲ್ಲಿ–ಮೊದಲನೆಯ ಎರಡು ವರ್ಗಗಳ ಸ್ಥಾನ ಪ್ರಭಾವಗಳು ಎಷ್ಟೇ ಗಣ್ಯವಾಗಿದ್ದರೂ ಅವರ ವರ್ಗಗಳು ಅನಂತರ ಹುಟ್ಟಿ ಬೆಳೆದವುಗಳಾದ್ದರಿಂದ ಸಂಖ್ಯಾಬಲದಲ್ಲಿ ಹೋಲಿಸಿ ನೋಡಿದರೆ ಬಹಳ ಕಡಿಮೆಯವರಾದ್ದರು. ಬೌದ್ಧ ಆಂದೋಲನ ಗಲಿಬಿಲಿಮಾಡಿ ಬ್ರಹ್ಮ ವರ್ಗವು ಸಮಾಜದ ಪುನಾರಚನೆಗೈದ ಸಾಂಸ್ಕೃತಿಕ ಅವನತಿಕಾಲದಲ್ಲಷ್ಟೇ ಬಹುಸಂಖ್ಯ ಕೃಷಿಕರೂ ಶಿಲ್ಪಿಗಳೂ ಚಿಕ್ಕವ್ಯಾಪಾರಿಗಳೂ ಭಾರತದ ಬಹುಭಾಗದಲ್ಲಿ ಶೂದ್ರತ್ವಕ್ಕಿಳಿದು ಸಮಾಜಶಿಖರದಲ್ಲಿ ಅಲ್ಪಸಂಖ್ಯ ಬ್ರಾಹ್ಮಣರೂ ಮಧ್ಯದಲ್ಲಿ ಅಲ್ಪ ಸ್ವಲ್ಪ ಜನ ಕ್ಷತ್ರ ವೈಶ್ಯರೂ ಉಳಿಯುವಂತಾದುದು. ಹೀಗೆ ಇಡಿ ಸಮಷ್ಟಿಯನ್ನು ಪ್ರತಿನಿಧಿಸುವ ಮಂತ್ರಿಮಂಡಲವು ಅತ್ಯುಚ್ಚ ಕಾರ್ಯಪಾಲಿಕೆಯೂ ಶಾಸೀನಿಕಾಯವೂ (ಆಡಳಿತಸಂಸ್ಥೆ) ಆಗಿತ್ತಲ್ಲದೆ; ಸರಕಾರ, ಕೋಶ, ಧೋರಣಗಳಿಗೆ ಸಂಬಂಧಿಸಿದ ಮುಖ್ಯ ಆಡಳಿತಕಾರ್ಯದಲ್ಲಿ ಹಾಗೂ ಆಜ್ಞೆಗಳನ್ನು ಹೊರಡಿಸುವುದರಲ್ಲಿ, ಸಮಷ್ಟಿಹಿತ (ಸಂಬಂಧ)ದ ಸರ್ವವಿಷಯಗಳಲ್ಲಿ ಪ್ರಭುವು ಅದರ ಒಪ್ಪಿಗೆಯನ್ನು ಪಡೆಯಬೇಕು ಮತ್ತು

ಅವುಗಳಲ್ಲದು ಭಾಗವಹಿಸಿರಬೇಕು. ಶಾಸನಮಂಡಲಿಗಳ ನೆರವಿಂದ ರಾಜನೂ ಮಂತ್ರಿಗಳೂ ಮಂತ್ರಿಮಂಡಲವೂ ರಾಜ್ಯಭಾರದ ವಿವಿಧ ಶಾಖೆಗಳ ಮೇಲ್ವಿಚಾರಣೆ ಮಾಡುತ್ತಿದ್ದರು ಹಾಗೂ ನಿಯಂತ್ರಿಸುತ್ತಿದ್ದರು. ನಿಃಸಂದೇಹವಾಗಿ ರಾಜನ ಶಕ್ತಿಯು ಕಾಲ ಹೋದ ಹಾಗೆ ಬೆಳೆಯುವ ಪ್ರವೃತ್ತಿಯನ್ನು ತೋರಿತು ಮತ್ತು ಎಷ್ಟೋ ವೇಳೆ ಆತ ಸ್ವೇಚ್ಛೆ ಸ್ವಪ್ರಯತ್ನಗಳಿಂದ ನಡೆದುಕೊಂಬ ಪ್ರಲೋಭನಕ್ಕೊಳಗಾದುದುಂಟು; ಹೀಗಿದ್ದರೂ ರಾಜ್ಯ–ಧರ್ಮವು ಸಚೇತನವಾಗಿದ್ದವರೆಗೆ ಮಂತ್ರಿಗಳ ಮತ್ತು ಪರಿಷತ್ತಿನ (ಮಂತ್ರಿಮಂಡಲದ) ಅಭಿಪ್ರಾಯ–ಇಚ್ಛೆಗಳನ್ನು ರಾಜನು ನಿರ್ಭಯವಾಗಿ ಅಲಕ್ಷಿಸಲೂ ಪ್ರತಿಭಟಿಸಲೂ ಆಗದವನಾಗಿದ್ದನು. ಅಶೋಕನಂತಹ ಅತಿಶಕ್ತನೂ ನಿಶ್ಚಯನಿಷ್ಠನೂ ಆದ ಸಮ್ರಾಜ ಕೂಡ ತನ್ನ ಮಂತ್ರಿಪರಿಷತ್ತನ್ನು ಎದುರಿಸಬೇಕಾಗಿ ಬಂದಾಗ ಕೊನೆಯಲ್ಲಿ ಸೋತು ವಸ್ತುತಃ ಸ್ಥಾನತ್ಯಾಗ ಮಾಡಬೇಕಾಗಿ ಬಂತು. ಪರಿಷತ್ತಿನ ಮಂತ್ರಿಗಳು ಅವಿಧೇಯ ಅಥವಾ ಅಸಮರ್ಥ ಅರಸನನ್ನು ಕಿತ್ತೊಗೆದು ಅವನ ಕುಟುಂಬದ ಇನ್ನೊಬ್ಬನನ್ನಾಗಲಿ ಹೊಸ ಕುಟುಂಬದವನನ್ನಾಗಲಿ ಗದ್ದಿಗೆಗೇರಿಸಬಲ್ಲವರಾಗಿದ್ದರು, ಗದ್ದಿಗೆಗೇರಿಸಿಯೂ ಇದ್ದರು. ಮೌರ್ಯರಿಂದ ಸುಂಗರಿಗೆ ರಾಜ್ಯಾಧಿಕಾರ ಬಂದುದೂ ಕಣ್ವವಂಶೀಯರು ಆಳಲಾರಂಭಿಸಿದ್ದೂ ಹೀಗೇ; ಇಂಥ ಐತಿಹಾಸಿಕ ಬದಲಾವಣೆಗಳೂ ವಂಶಕ್ರಾಂತಿಗಳೂ ಆದುದು ಈ ಪ್ರಕಾರವೇ. ಸಂವಿಧಾನದ ತತ್ವದಂತೆಯೂ ಸಾಮಾನ್ಯ ರೂಢಿಯ ಪ್ರಕಾರವೂ ರಾಜನ ಎಲ್ಲ ಕಾರ್ಯಗಳೂ ವಸ್ತುತಃ ಸಮಂತ್ರಿಕರಾಜನವು, ಮಂತ್ರಿಗಳ ನೆರವಿಂದಾದಂಥವು. ಆತನ ವೈಯಕ್ತಿಕ ಕಾರ್ಯಗಳೆಲ್ಲವೂ ಅವರ ಒಪ್ಪಿಗೆಯಿರುವವರೆಗೆ ಮತ್ತು ಧರ್ಮೋಕ್ತ ಕರ್ತವ್ಯಗಳ ನ್ಯಾಯವೂ ಅನಪೇತವೂ ಆದ ಆಚರಣೆ ಎನಿಸಿರುವವರೆಗೆ ಮಾತ್ರ ಕ್ರಮಬದ್ಧವಾದವುಗಳಾಗುತ್ತವೆ. ಮಂತ್ರಿಪರಿಷತ್ತೆಂಬುದು ಸಾರಸರ್ವಸ್ವರೂಪ ಶಕ್ತಿನಿಕಾಯ ಅಥವಾ ಕಾರ್ಯಕೇಂದ್ರ. ವ್ಯವಸ್ಥಾಪನೀಯ ಪರಿಣಾಮದೊಳಗೆ ಕಾರ್ಯಭಾರವನ್ನು ವಹಿಸಿಕೊಂಡು, ತನ್ನ ಪ್ರಾತಿನಿಧ್ಯದಲ್ಲಿಯೂ ಕೇಂದ್ರೀಕರಣದಲ್ಲಿಯೂ ಸಂವಿಧಾನತಃ ನಾಲ್ಕು ವರ್ಣಗಳನ್ನೊಳಗೊಂಡ ಅದು ಸಮಾಜದ ಮುಖ್ಯ ಮೂಲಾಂಗ ಸಹಿತವಾಗಿ ನಿಂತಿದ್ದರಿಂದ ರಾಜನಾದರೂ ಈ ಶಕ್ತಿಯ ಸಕ್ರಿಯ ಶಿರಸ್ಸಾಗಿದ್ದನಲ್ಲದೆ ನಿರಂಕುಶ ಪ್ರಭುತ್ವದಲ್ಲಿರುವಂತೆ ತಾನೇ ಸರಕಾರ, ತಾನೇ ರಾಜ್ಯದೊಡೆಯ ಅಥವಾ ಮಾಲಕ ಇಲ್ಲವೆ ವಿಧೇಯ ಪ್ರಜೆಗಳಿಂದ ತುಂಬಿದ ರಾಷ್ಟ್ರದ ಹೊಣೆಯರಿಯದ ಖಾಸಗಿ ಶಾಸಕ ಎಂದು ಭಾವಿಸುತ್ತಿದ್ದಿಲ್ಲ. ಜನರ ವಿಧೇಯತೆ ಧರ್ಮವೆಂಬ ಕಾಯಿದೆಯಲ್ಲಿಯೂ ಧರ್ಮಾಚರಣೆ, ಧರ್ಮಸಂರಕ್ಷಣೆಗಳಿಗಾಗಿ ಸಮಂತ್ರಿಕರಾಜ ಹೊರಡಿಸುವ ಆಜ್ಞೆಗಳಲ್ಲೂ ನಿಷ್ಠವಾಗಿತ್ತು.

# ೬. ಪೌರ ಮತ್ತು ಜಾನಪದ ಸಭೆಗಳು

ತಾನೊಬ್ಬನೇ ಶಾಸಕನಿಕಾಯವೆಂದಾಗಿದ್ದರೆ ಮಂತ್ರಿಪರಿಷತ್ತಿನಂತಹ ಆ ಚಿಕ್ಕ ನಿಕಾಯವು ರಾಜ ಮತ್ತು ಅವನ ಸಚಿವರ ಪ್ರತಿ ಪದದ ಹಾಗೂ ನೇರವಾದ ಪ್ರಭಾವಕ್ಕೊಳಪಟ್ಟಿರುವುದರಿಂದ ನಿರಂಕುಶ ಪ್ರಭುತ್ವದ ಒಂದು ಸಾಧನವಾಗಿ ಮಾರ್ಪಟ್ಟು ಅಧಃಪತಿತವಾಗುತ್ತಿತ್ತು. ಆದರೆ ಅಲ್ಲಿ ಮತ್ತೆರಡು ಸಮರ್ಥ ನಿಕಾಯಗಳಿದ್ದವು; ಅವು ಸಮಾಜವನ್ನು ವಿಸ್ತೃತ ಪ್ರಮಾಣದಲ್ಲಿ ಪ್ರತಿನಿಧಿಸುತ್ತಿದ್ದವಲ್ಲದೆ ಅದರ ಬಗೆ, ಬಾಳು, ಬಯಕೆಗಳ ಹೆಚ್ಚು ನಿಕಟವಾದ ಅಭಿವ್ಯಕ್ತಿಗಳಾಗಿದ್ದವು; ಇದರಮೇಲೆ ಅವು ನೇರವಾದ ರಾಜಪ್ರಭಾವದಿಂದ ಸ್ವತಂತ್ರವಾಗಿದ್ದವು, ಪ್ರಶಾಸನ ಮತ್ತು ಪ್ರಶಾಸನೀಯ ವಿಧಾನಗಳ ವಿಸ್ತೃತವೂ ಸತತವೂ ಆದ ಶಕ್ತಿಗಳನ್ನು ಬಳಸುತ್ತಿದ್ದವು ಮತ್ತು ರಾಜನ ಶಕ್ತಿ ವಿಸ್ತರಣಕ್ಕೆ ತಡೆಯಾಗಿ ಯಾವಾಗಲೂ ವರ್ತಿಸಬಲ್ಲವಾಗಿದ್ದವು. ಅವಕ್ಕೆ ಅಸಮಾಧಾನವುಂಟಾದಾಗ ಅವು ಅಪ್ರಿಯ ಅಥವಾ ಶೋಷಕ ರಾಜನನ್ನು ಕಿತ್ತೊಗೆಯಬಲ್ಲವಾಗಿದ್ದವು ಇಲ್ಲವೆ ಜನೇಚ್ಛೆಗೆ ಅವನು ಶರಣಾಗುವವರೆಗೆ ಅವನಿಗೆ ಆಡಳಿತ ನಡೆಸಲು ಅಸಾಧ್ಯವಾಗುವಂತೆ ಮಾಡಬಲ್ಲವಾಗಿದ್ದವು. ಇವೇ ಆ ಆಸ್ಥಾನಿಕ ಮತ್ತು ಸಾಮಾನ್ಯ ಸಭೆಗಳು, ಇವು ತಮ್ಮ ವಿಶಿಷ್ಟ ಶಕ್ತಿಯ ಪ್ರಯೋಗಕ್ಕಾಗಿ ಬೇರೆ ಬೇರೆಯಾಗಿಯೂ ಇಡಿ ಜನತೆಗೆ ಸಂಬಂಧಿಸಿದ ವಿಷಯಗಳಲ್ಲಿ ಒಟ್ಟಾಗಿಯೂ ಕೂಡುತ್ತಿದ್ದವು. ಆಸ್ಥಾನಸಭೆ ಅಥವಾ ಪೌರಸಭೆ ಎಂಬುದು ನಗರಸ್ಥ ನಾಗರಿಕಸಭೆ. ರಾಜ್ಯದ ಅಥವಾ ಸಾಮ್ರಾಜ್ಯದ ರಾಜಧಾನಿಯಲ್ಲಿ ಅದು ಕೂಡುತ್ತಿತ್ತು. ಮತ್ತು ಆ ಸಾಮ್ರಾಜ್ಯ ಪದ್ಧತಿಯೊಳಗೆ ಅಂಥವೇ ಆದ ಕೆಳ ಮಟ್ಟದ ಸಭೆಗಳು ಪ್ರಾಂತಗಳ ಮುಖ್ಯಪಟ್ಟಣಗಳಲ್ಲಿ ಕೂಡುತ್ತಿದ್ದವೆಂದು ತೋರುತ್ತದೆ. ಅವು ಸ್ವತಃ ಸ್ವತಂತ್ರ ರಾಜ್ಯಗಳ ರಾಜಧಾನಿಗಳಾಗಿದ್ದಾಗ ಆ ಪ್ರಾಂತಗಳ ಆಡಳಿತ ನಡೆಸುತ್ತಿದ್ದ ಸಭೆಗಳ ಅಳಿದುಳಿದ ನಿಕಾಯಗಳು. ನಗರದ ಸಂಘಗಳು, ವಿವಿಧ ಜಾತೀಯ ನಿಕಾಯಗಳು ಅವುಗಳಲ್ಲಿ ಪ್ರಾತಿನಿಧ್ಯಪಡೆದಿದ್ದವು. ಜಾತೀಯ ಪ್ರತಿನಿಧಿಗಳು ಸಮಾಜದ ಎಲ್ಲ ವರ್ಗಗಳಿಂದಲೂ ಆಯ್ದವರು ಅಥವಾ ಕೊನೆಯಪಕ್ಷ ಮೊದಲಿನ ಮೂರು ವರ್ಗಗಳಿಂದ ಬಂದವರು. ಆ ಸಂಘ ಮತ್ತು ಜಾತಿನಿಕಾಯಗಳಾದರೋ ಗ್ರಾಮ–ನಗರಗಳ ಸಮಷ್ಟಿಯ ಸಂಘಟಿತ, ಸ್ವಪ್ರಭುತ್ವ ಸಂಪನ್ನ ಅಂಗಗಳು. ಪೌರಸಭೆ ಕೃತಕವಾದುದಾಗಿರಲಿಲ್ಲ. ರಾಜಧಾನಿ ಅಥವಾ ಮುಖ್ಯ ನಗರದ ಗಡಿಯೊಳಗಿದ್ದ ಇಡಿ ಜನತಾವಯವಿಯ ಒಟ್ಟಿನ (ಸಾಕಲ್ಯದ) ಸಂಘಟಿತ ಪ್ರಾತಿನಿಧ್ಯವುಳ್ಳದ್ದಾಗಿತ್ತು. ಅದು ನಗರದ ಇಡಿ ಜೀವನವನ್ನು ಪ್ರಶಾಸಿಸುತ್ತಿತ್ತು. ಅದರ ಪ್ರಶಾಸನ ನೇರ ಅಥವಾ ಅದರ ಅಧೀನದಲ್ಲಿರುವ ಕೆಳ ಸಭೆಗಳ ಅಥವಾ ಪ್ರಶಾಸನಮಂಡಲಿಗಳ ಇಲ್ಲವೆ ಐದು ಹತ್ತು ಅಥವಾ ಹೆಚ್ಚು ಜನಗಳ ಸಮಿತಿಗಳ ಮೂಲಕ ಸಾಗುತ್ತಿತ್ತು. ಅದು ನಿಯಮಾವಳಿಯನ್ನೂ ಆಜ್ಞೆಗಳನ್ನೂ ಜನಸಂಘಗಳಿಗೆ ವಿಧಿಸುತ್ತಿತ್ತಲ್ಲದೆ ನೇರವಾದ ಆಡಳಿತದ ಮೂಲಕ ನಾಗರಿಕ ಸಮಷ್ಟಿಯ ವಾಣಿಜ್ಯಕ, ಔದ್ಯಮಿಕ ಆರ್ಥಿಕ ಮತ್ತು ನಗರಸಭಾಸಂಬಂಧಿ ವ್ಯವಹಾರಗಳನ್ನು ನಿಯಂತ್ರಿಸುತಿತ್ತು

ಹಾಗೂ ಅವುಗಳ ಮೇಲ್ವಿಚಾರಣೆ ನಡೆಸುತ್ತಿತ್ತು; ಆದರೆ ಅದರ ಶಕ್ತಿ ವ್ಯಾಪ್ತಿ ಇಷ್ಟಕ್ಕೇ ಮುಗಿಯಲಿಲ್ಲ; ರಾಜ್ಯದ ವಿಶಾಲ ವ್ಯವಹಾರಗಳಲ್ಲಿ ಅದನ್ನು ಕೇಳಬೇಕಾಗುತ್ತಿತ್ತು ಮತ್ತು ಅದು ತನ್ನ ನಿರ್ಣಯಾನುಸಾರ ಕಾರ್ಯ ನಡೆಸಬಲ್ಲುದಾಗಿತ್ತು; ಅದು ನಿರ್ಣಯ ತೆಗೆದುಕೊಳ್ಳುವುದು ಕೆಲವೇಳೆ ಸ್ವತಂತ್ರವಾಗಿ ಮತ್ತೆ ಕೆಲವೆಡೆ ಸಾಮಾನ್ಯ ಸಭೆಯೊಟ್ಟಿಗೆ. ರಾಜಧಾನಿಯಲ್ಲಿ ಅದು ಯಾವಾಗಲೂ ಇದ್ದು ಕೆಲಸಮಾಡುತ್ತಿದ್ದುದರಿಂದ ರಾಜನೂ ಅವನ ಅಮಾತ್ಯರೂ ಸಚಿವಪರಿಷತ್ತೂ ಅದನ್ನೊಂದು ಗಣ್ಯಬಲವೆಂದು ಗಣಿಸಬೇಕಾಗಿತ್ತು. ರಾಜನ ಮಂತ್ರಿಗಳೊಡನೆ ವಿರೋಧವುಂಟಾದಾಗ–ದೂರದ ಪ್ರಾಂತೀಯ ನಾಗರಿಕ ಲೋಕಸಭೆ ಕೂಡ ಅವುಗಳ ಸ್ಥಾನ ಮಾನ, ಹಕ್ಕು ಹಿಡುವಳಿಗಳಿಗೆ ಧಕ್ಕೆ ಬಂದರೆ ಅಥವಾ ರಾಜಪ್ರಶಾಸಕರ ಬಗ್ಗೆ ಅಸಮಾಧಾನ ಉಂಟಾದರೆ ತನ್ನ ಅಸಂತೋಷವನ್ನು ಪರಿಣಾಮಕರವಾಗಿ ವ್ಯಕ್ತ ಮಾಡಬಲ್ಲುದಾಗಿತ್ತು. ಸಂಬಂಧಿಸಿದ ಅಧಿಕಾರಿಯನ್ನು ಹಿಂಕರೆಸಿಕೊಳ್ಳಲು ಒತ್ತಾಯಿಸಬಲ್ಲುದಾಗಿತ್ತು.

ಸಾಮಾನ್ಯ ಅಥವಾ ಜಾನಪದ ಸಭೆ ಮುಖ್ಯ ನಗರೇತರ ಪ್ರದೇಶದ ಎಲ್ಲ ಮಾನ–ಸಂಕಲ್ಪಗಳ ಪ್ರತಿನಿಧಿಯಾಗಿತ್ತು; ಏಕೆಂದರೆ ಅದರಲ್ಲಿ ಉಪನೇತೃಗಳೂ ಆಯ್ದ ಮುಖಂಡರೂ ಅಥವಾ ಹಳ್ಳಿ ಪಟ್ಟಣಗಳ ಗಣ್ಯ ಜನರೂ ಇರುತ್ತಿದ್ದರು. ಅದರ ಪ್ರತಿನಿಧಿಗಳು ಮುಖ್ಯವಾಗಿ ಪ್ರತಿನಿಹಿತ ಸಮಷ್ಟಿಯೊಳಗಿನ ಧನಿಕರಾದುದರಿಂದ ಅದರಲ್ಲಿ ಒಂದು ಬಗೆಯ ಹಣವಂತಿಕೆಯ ಹಬ್ಬು ಎದ್ದು ಕಾಣಿಸುತ್ತಿತ್ತು. ಆದುದರಿಂದ ಅದು ಸಾಮಾನ್ಯರ ಸಭೆಯಾಧರೂ ಪ್ರಜಾಪ್ರಭುತ್ವದ ಮಾದರಿಯದಾಗಿತ್ತೆನ್ನಲು ಬರುವುದಿಲ್ಲ ಅದನ್ನ ಇತರ ಯಾವದಕ್ಕೂ ಹೋಲಿಸಲು ಬರದಿದ್ದರೂ ಇತ್ತೀಚಿನ ಆಧುನಿಕ ಸಂಸತ್ತುಗಳಂತೆ ಅದರಲ್ಲಿ ಶೂದ್ರ, ಕ್ಷತ್ರಿಯ, ವೈಶ್ಯ ಪ್ರತಿನಿಧಿಗಳಿದ್ದರು; ಅದರಿಂದ ಅದು ಜನತೆಯ ಬಾಳು ಬಗೆಗಳ ಸಾಕಷ್ಟು ಮಟ್ಟಿನ ಪಡಿಯಚ್ಚಾಗಿತ್ತೆನ್ನಬಹುದು. ಅದು ಅತ್ಯುಚ್ಚ ಸಂಸತ್ತು ಅಥವಾ ಪಾರ್ಲಿಮೆಂಟಾಗಿದ್ದಿಲ್ಲ. ಏಕೆಂದರೆ ಅದಕ್ಕೆ ಸಾಮಾನ್ಯವಾಗಿ ರಾಜ ಮತ್ತು ಪರಿಷತ್ತು, ಪೌರ ಸಭೆಗಳಂತೆಯೇ ಕಾಯದೆ ಮಾಡುವ ಶಕ್ತಿಯಿದ್ದಿಲ್ಲ; ಕೇವಲ ವಿನಿಮಯಗಳ ರಚನೆ, ಆಜ್ಞಾದಾನಗಳಷ್ಟೇ ಅದಕ್ಕೆ ಶಕ್ಯವಾಗಿತ್ತು. ರಾಷ್ಟ್ರಜೀವನದ ವಿವಿಧ ಚಟುವಟಿಕೆಗಳ ಸಹಕ್ರಮದಲ್ಲಿ ಸಮವ್ಯವಸ್ಥೆಯಲ್ಲಿ ಜನೇಚ್ಛೆಯ ನೇರವಾದ ಸಾಧನವಾಗಿ ಕೆಲಸಮಾಡುವುದು ಅದಕ್ಕೆ ಸೇರಿದ್ದು; ಅವು ನೇರವಾಗಿ ನಡೆಯುವಂತೆ ನೋಡಿಕೊಳ್ಳುವುದು; ವಾಣಿಜ್ಯ, ಉದ್ಯಮ, ಕೃಷಿ, ರಾಷ್ಟ್ರದ ಸಾಮಾಜಿಕ ಮತ್ತು ರಾಜಕೀಯಜೀವನಗಳ ಸಾಧಾರಣ ವ್ಯವಸ್ಥೆ ಹಾಗೂ ಯೋಗಕ್ಷೇಮಗಳನ್ನು ಕಾಯ್ದುಕೊಂಬುದು; ಅದಕ್ಕಾಗಿ ವಿನಿಮಯ ಆಜ್ಞಪ್ತಿಗಳನ್ನು ಹೊರಡಿಸುವುದು, ಮತ್ತು ರಾಜನ ಹಾಗೂ ಅವನ ಪರಿಷತ್ತಿನ ಕಡೆಯಿಂದ ವಿಶೇಷಾಧಿಕಾರಗಳನ್ನೂ ಸೌಕರ್ಯಗಳನ್ನೂ ಪಡೆದುಕೊಡುವುದು; ಸಾರ್ವಭೌಮನ ಕಾರ್ಯಗಳಿಗೆ ಜನತೆಯ ಸಮ್ಮತಿಯನ್ನು ಕೊಡುವುದು ಅಥವಾ ಬಿಡುವುದು, ಅವಶ್ಯವಿದ್ದರೆ ಆತನನ್ನು ನೇರವಾಗಿ ಎದುರಿಸುವುದು, ಅವನ ದುಃಶಾಸನವನ್ನು ತಡೆಯುವುದು ಇಲ್ಲವೆ ಜನಪ್ರತಿನಿಧಿಗಳಿಗವಶ್ಯವಾದ

ಸಾಧನಗಳಿಂದ ಅದನ್ನು ಕೊನೆಗೊಳಿಸುವುದು ಇವೇ ಮುಂತಾದವು ಆ ಜನಸಭೆಯ ಕರ್ತವ್ಯಗಳಾಗಿದ್ದವು. ಉತ್ತರಾಧಿಕಾರದ ವಿಷಯದಲ್ಲಿ ಪೌರ ಜಾನಪದ ಸಭೆಗಳೆರಡರ ಸಂಯುಕ್ತ ಸತ್ರದ ಸಲಹೆಯನ್ನು ತೆಗೆದುಕೊಳ್ಳಲಾಗುತ್ತಿತ್ತು; ಅದು ಪ್ರಭುವನ್ನು ಅಥವಾ ಸಾರ್ವಭೌಮನನ್ನು ಗದ್ದುಗೆಯಿಂದ ಕೆಳಗಿಳಿಸಬಲ್ಲುದಾಗಿತ್ತು, ಅವನ ಮರಣಾನಂತರ ಉತ್ತರಾಧಿಕಾರವನ್ನು ಬದಲಾಯಿಸಬಲ್ಲುದಾಗಿತ್ತು. ಶಾಸನ ಕುಟುಂಬವನ್ನೇ ಬಿಟ್ಟು ಸಿಂಹಾಸನವನ್ನು ಅನ್ಯನಿಗೆ ಸ್ಥಾನಾಂತರಿಸಬಲ್ಲುದಾಗಿತ್ತು; ರಾಜಕೀಯ ಅಂಶವಿರುವ ಯಾವುದಾದರೊಂದು ವಿವಾದ ಬಂದಲ್ಲಿ ದ್ರೋಹ ಬಗೆದ ವ್ಯಾಜ್ಯದ ಅಥವಾ ತಪ್ಪಾಗಿ ನ್ಯಾಯದಾನ ಮಾಡಿದ ಸಂಬಂಧದಲ್ಲಿ ಅದು ಅತ್ಯುಚ್ಚ ನ್ಯಾಯಾಲಯವಾಗಿ ಕೆಲಸ ಮಾಡುತ್ತಿತ್ತು. ವಿಶೇಷಕರ, ಯುದ್ಧ, ಯಜ್ಞ, ದೊಡ್ಡ ನೀರಾವರಿ ಕೆಲಸ ಮುಂತಾದ ಹಾಗೂ ದೇಶಕ್ಕೆ ಸಂಬಂಧಿಸಿದ ಇತರ ಎಲ್ಲ ಗಣ್ಯ ಪ್ರಶ್ನೆಗಳ ವಿಷಯವಾಗಿ ತೆಗೆದುಕೊಂಡ ರಾಜಸಂಕಲ್ಪಗಳು (ರಾಜನಿರ್ಣಯಗಳು) ಈ ಸಭೆಗಳಿಗೆ ಬಂದು ಇವುಗಳ ಒಪ್ಪಿಗೆಯನ್ನು ಪಡೆಯಬೇಕಾಗಿತ್ತು. ಈ ಎರಡು ಸಭೆಗಳ ಉಪವೇಶನ ಪದೇ ಪದೇ ಜರುಗುತ್ತಿತ್ತೆಂದು ತೋರುತ್ತದೆ; ಅವುಗಳಿಂದ ನಿತ್ಯವೂ ಏನಾದರೊಂದು ವಿಷಯುವು ಪ್ರಭುವಿನ ಮುಂದೆ ಬರುತ್ತಿತ್ತು; ಅವುಗಳ ಕಾರ್ಯ ರಾಜನಿಂದ ನಿಬದ್ಧಗೊಳಿಸಲ್ಪಡುತ್ತಿತ್ತು ಮತ್ತು ಅದು ಹಾಗೇ ಕಾಯದೆಯಾಗಿ ಪರಿಣಮಿಸುತ್ತಿತ್ತು. ಅವುಗಳ ಹಕ್ಕು ಹಾಗೂ ಚಟುವಟಿಕೆಗಳ ಅಮೂಲಾಗ್ರ ಅವಲೋಕನದಿಂದ ಪ್ರಭುತ್ವದಲ್ಲಿ ಅವು ಪಾಲುಗಾರರು, ಅದರ ಶಕ್ತಿಗಳು ಅವುಗಳಲ್ಲಿ ಆಜನ್ಮ ಇದ್ದಂಥವು, ಸಾಮಾನ್ಯವಾಗಿ ಅವುಗಳ ಕೈಯಲ್ಲಿರದೆ ಅಪೂರ್ವ ಸಂದರ್ಭಗಳಲ್ಲಷ್ಟೇ ಪ್ರಯೋಗಿಸುವ ಶಕ್ತಿಗಳು ಕೂಡ ಅವುಗಳಿಗಿದ್ದವು ಎಂದು ತಿಳಿದು ಬರುತ್ತದೆ. ಸಮಷ್ಟಿಧರ್ಮಪರಿವರ್ತನದ ಪ್ರಯತ್ನದಲ್ಲಿ ಅಶೋಕನು ತನ್ನ ರಾಜಾಜ್ಞೆಗಳನ್ನಷ್ಟೇ ಅವಲಂಬಿಸದೆ ಸಭೆಯಲ್ಲಿ ಚರ್ಚಿಸಿಯೂ ಇದ್ದನು ಎಂಬುದು ಮಹತ್ವದ ಸಂಗತಿ. ಆದುದರಿಂದ ಪ್ರಾಚೀನರ ಸಭಾವರ್ಣನೆ ಸಾರ್ಥಕವಾದದ್ದೆನ್ನಬಹುದು. ಅವರ ಪ್ರಕಾರ ಈ ಎರಡೂ ಸಭೆಗಳು ರಾಜ್ಯದ ಚಟುವಟಿಕೆಗಳ ನಿರ್ವಾಹಕಗಳು ಮತ್ತು ಅವಶ್ಯಬಿದ್ದಾಗ ರಾಜಸರಕಾರವನ್ನು ವಿರೋಧಿಸುವ ಸಾಧನಗಳು ಎನಿಸಿದ್ದವು.

## ೭. ಕುಲಧರ್ಮ ಹಾಗೂ ಕುಲಸಂಘಗಳು

ಮಹಮದೀಯರ ಆಕ್ರಾಮಕ ದಾಳಿಯ ಮೊದಲೋ ಅಥವಾ ವಿದೇಶೀಯ ವಿಜಯದ ಫಲವಾಗಿಯೋ ಯಾವುದರಿಂದ ಈ ಮಹಾಸಂಸ್ಥೆಗಳು ನಿರ್ನಾಮವಾದವು ಎಂಬುದು ಗೊತ್ತಾಗುವುದಿಲ್ಲ. ಈ ಪದ್ಧತಿಯೊಮ್ಮೆ ಮುರಿದುಬಿದ್ದರೆ ಮೇಲ್ತುದಿಯಲ್ಲಿಯ ರಾಜಪ್ರಭುತ್ವ ತನ್ನ ಪ್ರತ್ಯೇಕತೆಯಿಂದಲೂ ರಾಷ್ಟ್ರದ ವಿಶಾಲ ವ್ಯವಹಾರಗಳ ಮೇಲಿನ ತನ್ನ ಏಕಾಂತಿಕ ನಿಯಂತ್ರಣ ಶಕ್ತಿಯಿಂದಲೂ ಹೆಚ್ಚು ಸ್ವೇಚ್ಛಾವೃತ್ತಿಯದಾಗುವುದು;

ಅದಕ್ಕೂ ಮಿಕ್ಕ ಸಾಮಾಜಿಕ ರಾಜಕೀಯ ನಿಕಾಯಗಳಿಗೂ ನಡುವೆ ಸಭಾದ್ವಯನಾಶದಿಂದ ದೊಡ್ಡ ಅಂತರವುಂಟಾಗುವುದು. ಈ ನಿಕಾಯಗಳಾದರೋ ತಮ್ಮ ತಮ್ಮ ಆಂತರಿಕ ವ್ಯವಹಾರದಲ್ಲಿ ಮಗ್ನವಾದಂಥವು. ಗ್ರಾಮಸಮುದಾಯಗಳು ಕೊನೆಯ ತನಕ ಇಂಥವೇ ಆಗಿದ್ದವು. ಆದರೆ ಉಚ್ಚ ಸರಕಾರಿ ವಿಷಯಗಳಲ್ಲಿ ಅವೇನೂ ಸಚೇತನ ಸಂಬಂಧವುಳ್ಳವಾಗಿದ್ದಿಲ್ಲ. ಸಮವಾಯ, ಸಹಕಾರ, ಸಹಕ್ರಮಗಳ ಮೇಲೇ ನಿಂತ ವಿಧ ವಿಧವಾದ ಪ್ರಕಾರಪೂರ್ಣ ಸಾಮುದಾಯಿಕ ಸ್ವಾತಂತ್ರ್ಯ ಪದ್ಧತಿಯಲ್ಲಿ ಹೀಗೆ ಅಂತರ ಉಂಟಾಗುವುದೊಂದು ಮಹಾ ದೌರ್ಬಲ್ಯ. ಅದು ಹೇಗಿದ್ದರೂ ಮಧ್ಯ ಏಶಿಯದವರ ದಾಳಿಯಾದ ಅನಂತರ ಅವರು ತಂದ ನಿರಂಕುಶ ವೈಯುಕ್ತಿಕ ಆಡಳಿತದ ಪರಂಪರೆಗೆ ಪೂರ್ವೋಕ್ತ ನಿರ್ಬಂಧಗಳು ಅಪರಿಚಿತವಾಗಿದ್ದುದರಿಂದ ಉತ್ತರ ಹಿಂದುಸ್ಥಾನದ ಆದ್ಯಂತವೂ ಉಕ್ತ ಸಭಾದ್ವಯ, ಅದರ ಅವಶೇಷ ಎಲ್ಲವೂ ಧ್ವಂಸಹೊಂದಿದವು. ಆ ನಂತರವೂ ಬಹುಕಾಲದವರೆಗೆ ದಕ್ಷಿಣ ಹಿಂದುಸ್ಥಾನದಲ್ಲಿ ಭಾರತೀಯ ರಾಜ್ಯಪದ್ಧತಿ ಉಳಿದುಕೊಂಡಿತ್ತು. ಆದರೆ ಅಲ್ಲಿ ಮುನ್ನಡೆದ ಸಾರ್ವಜನಿಕ ಸಭೆಗಳು ಹಳೆಯ ಮಾದರಿಯವಾಗಿರದೆ ಇತರ ಸಾಮುದಾಯಿಕ ಸಂಘ, ಸಂಸ್ಥೆ, ಸಭೆಗಳ ಸಮವಾಯ ಸ್ವರೂಪದವೂ ಅತ್ಯುಚ್ಚ ನಿಯಂತ್ರಣ ಸಾಧನಗಳೂ ಆಗಿದ್ದವು. ಈ ಅವಸಭೆಗಳು ಮೂಲತಃ ರಾಜಕೀಯವಾಗಿದ್ದ ನಿಕಾಯಗಳನ್ನೊಳಗೊಂಡಿದ್ದವು; ಅವು ಒಮ್ಮೆ ಕುಲ ರಾಷ್ಟ್ರದ ಮತ್ತು ಗಣರಾಷ್ಟ್ರದ ಅತ್ಯುಚ್ಚ ಸರಕಾರ–ಸಂಸ್ಥೆಗಳಾಗಿದ್ದವು. ಹೊಸ ಬಗೆಯಲ್ಲಿ ಅವೇನೋ ಉಳಿದಿದ್ದವು, ಆದರೆ ತಮ್ಮ ಉಚ್ಚಾಧಿಕಾರ ಶಕ್ತಿಯನ್ನು ಅವು ಕಳೆದುಕೊಂಡು ತಮ್ಮ ಅಂಗಸಮುದಾಯಗಳ ವ್ಯವಹಾರಗಳನ್ನು ಅಧೀನ ಸ್ಥಾನದಲಿದ್ದು ಪರಿಮಿತ ಪ್ರಾಧಿಕಾರದಿಂದ ನಿರ್ವಹಿಸುತ್ತಿದ್ದವು. ಕುಲ ಕುಟುಂಬದ ಪರಂಪರೆ ಇನ್ನೂ ಸಾಗಿತ್ತು; ಆದರೆ ಅದರ ರಾಜಕೀಯ ಲಕ್ಷಣ ಆಗಲೇ ಅಳಿದುಹೋಗಿತ್ತು. ಅದಕ್ಕಿದ್ದುದು ಸಾಮಾಜಿಕ ಧಾರ್ಮಿಕ ಸ್ವರೂಪ ಮಾತ್ರ. ಅದು ಉಳಿದದ್ದಾದರೂ ಕ್ಷತ್ರಿಯರಲ್ಲಿ; ಅದು ತನ್ನ ಕುಲಧರ್ಮವನ್ನೂ ಸಾಮಾಜಿಕ–ಧಾರ್ಮಿಕ ಕಾಯದೆಯನ್ನೂ ಕಾಯ್ದುಕೊಂಡು ಕುಲಸಂಘವೆಂಬ ಸಮಷ್ಟಿ ಸಭೆಯನ್ನು ನಡೆಸಿಕೊಂಡಿತ್ತು. ಅತಿ ಇತ್ತೀಚೆಗೆ ದಕ್ಷಿಣ ಭಾರತದಲ್ಲಿ ನಾವು ಕಾಣುವ ಹಳೆಯ ಜಾನಪದ ಸಭೆಯ ಬದಲಾಗಿ ಇದ್ದ ಸಾರ್ವಜನಿಕ ಸಭೆಗಳು ಪ್ರತ್ಯೇಕವಾಗಿಯೂ ಒಟ್ಟಾಗಿಯೂ ಕೆಲಸಮಾಡುತ್ತಿದ್ದವಲ್ಲದೆ ಅವು ಮೇಲೆ ಹೇಳಿದ ಸಮವೇತ ಸಭೆಗಳ ಪ್ರಕಾರಗಳೇ ಆಗಿದ್ದವು. ರಾಜಪುತ್ರ ಸ್ಥಾನದಲ್ಲಿ ಕೂಡ ಕುಲವು ತನ್ನ ರಾಜಕೀಯ ಲಕ್ಷಣವನ್ನೂ ಕಾರ್ಯಶಕ್ತಿಯನ್ನೂ ಪುನಃ ಪಡೆಯಿತು; ಆದರೆ ಹಾಗೆ ಅದು ಪಡೆದದ್ದು ಮತ್ತೊಂದು ರೂಪದಲ್ಲಿ ಪ್ರಾಚೀನ ಸಂಸ್ಥೆಗಳಿಲ್ಲದೆ ಮತ್ತು ಹಸನಾದ ಸಾಂಸ್ಕೃತಿಕ ಹದವಿಲ್ಲದೆ; ಆದರೂ ಅದು ಧೈರ್ಯ, ದಾಕ್ಷಿಣ್ಯ, ಔದಾರ್ಯ, ಗೌರವ ಮುಂತಾದ ಗುಣಗಳುಳ್ಳ ಕ್ಷಾತ್ರಧರ್ಮವನ್ನು ಹೆಚ್ಚು ಅಂಶದಲ್ಲಿ ಉಳಿಸಿಕೊಂಡಿತ್ತು.

# ೮. ಜಾತಿಪದ್ಧತಿಯ ಬೆಳವಣಿಗೆ

ಭಾರತೀಯ ಸಮಷ್ಟಿ ಜೀವನಪದ್ಧತಿಯ ಬಲವತ್ತರವಾದ ಹಾಗೂ ಚಿರಸ್ಥಾಯಿಯಾದ ಮೂಲಾಂಗವೆಂದರೆ ಜಾತಿ. ಚಾತುವರ್ಣ್ಯದ ಚೌಕಟ್ಟಿನಲ್ಲಿ ಬೆಳೆದು, ಕೊನೆಯಲ್ಲಿ ಅದಕ್ಕೇ ಆದೇಶವಾಗಿ ಕುಳಿತು, ಅಸಾಧಾರಣ ಚೈತನ್ಯ ಶಕ್ತಿಯನ್ನೂ ಸ್ಥಾಯಿತ್ವವನ್ನೂ ಅತಿಗಣ್ಯತೆಯನ್ನೂ ಪಡೆದ ಇತಿಹಾಸ ಪ್ರಸಿದ್ಧವಾದ, ಈಗಲೂ ಕಚ್ಚಿ ಹಿಡಿದುಕೊಂಡಿರುವ, ಭಂಗಮುಖವಾದ ಸಂಸ್ಥೆ ಇದು. ಮೂಲತಃ ಜಾತಿಗಳು ಚಾತುರ್ವರ್ಣ್ಯದ ಒಳವಿಭಾಗದಿಂದಲೆ ವಿವಿಧ ಶಕ್ತಿಗಳ ಒತ್ತಡದ ಫಲವಾಗಿ ಆಯಾ ವರ್ಣದಲ್ಲೇ ಹುಟ್ಟಿದವು. ಬ್ರಾಹ್ಮಣ ಜಾತಿಗಳ ಉಪವಿಭಾಗಗಳಾದದ್ದು ಮುಖ್ಯವಾಗಿ ಧಾರ್ಮಿಕ, ಸಾಮಾಜಿಕ ಧಾರ್ಮಿಕ ಮತ್ತು ವ್ರತ ಸಮಾರಂಭಸಂಬಂಧಿ ಕಾರಣಗಳಿಂದ; ಆದರೆ ಜೊತೆಗೆ ಪ್ರಾದೇಶಿಕ ಹಾಗೂ ಸ್ಥಳೀಯ ವಿಭಾಗಗಳೂ ಕೂಡಿದ್ದವು; ಕುಲಗಳಾಗಿ ವಿಂಗಡಿಸಲ್ಪಟ್ಟಿದ್ದರೂ ಹೆಚ್ಚಾಗಿ ಕ್ಷತ್ರಿಯರು ಒಂದು ಸಂಯುಕ್ತ ವರ್ಗವಾಗಿಯೇ ಉಳಿದಿದ್ದರು. ತದ್ವಿರುದ್ಧವಾಗಿ ವೈಶ್ಯ ಶೂದ್ರ ವರ್ಗಗಳು ಅನುವಂಶಿಕ ತತ್ವದ ಅನುಸಾರವಾಗಿ ನಡೆದು ಬಂದ ಆರ್ಥಿಕ ಕರ್ತವ್ಯ ಕರ್ಮಗಳ ಉಪವಿಭಜನೆಯ ಅವಶ್ಯಕತೆಗೊಳಗಾಗಿ ಅಸಂಖ್ಯ ಜಾತಿಗಳಾಗಿ ಒಡೆದುಹೋದವು. ಆನುವಂಶಿಕ ತತ್ವದ ಹೆಚ್ಚುತ್ತ ಬಂದ ಉಗ್ರ ಪ್ರಯೋಗವನ್ನುಳಿದು ಬೇರೆ ದೇಶಗಳಲ್ಲಿದ್ದಂತಹ ಸಂಘಪದ್ಧತಿಯಿಂದ ಈ ಸ್ಥಿರವಾದ ಕರ್ತವ್ಯವಿಭಾಗವನ್ನು ಸಾಧಿಸಿಕೊಳ್ಳಬಹುದಾಗಿತ್ತು; ಅಂಥ ಕಾರ್ಯಪಟುವೂ ಉತ್ಸಾಹ ಪೂರ್ಣವೂ ಆದ ಸಂಘಗಳು ಭಾರತೀಯ ಪಟ್ಟಣಗಳಲ್ಲಿ ಇದ್ದವು. ಆದರೆ ಸಂಘ ಪದ್ಧತಿ ಆಮೇಲೆ ಬಳಕೆಯಿಂದ ದೂರವಾಯ್ತು; ಅದಕ್ಕೂ ಹೆಚ್ಚು ಸಾಧಾರಣವಾದ ಜಾತಿಸಂಸ್ಥೆ ಎಲ್ಲೆಲ್ಲೂ ಆರ್ಥಿಕ ಕರ್ತವ್ಯಗಳ ಅಡಿಗಲ್ಲಾಯ್ತು. ಹಳ್ಳಿ ಪಟ್ಟಣಗಳಲ್ಲಿದ್ದ ಜಾತಿ ಪ್ರತ್ಯೇಕ ಸಾಮುದಾಯಿಕ ಘಟಕವೆನಿಸಿ, ಏಕಕಾಲದಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮುಖಗಳಿಂದ ಕೂಡಿ, ತನ್ನ ಧಾರ್ಮಿಕ, ಸಾಮಾಜಿಕ ಹಾಗೂ ಇತರ ಪ್ರಶ್ನೆಗಳನ್ನೂ ಜಾತೀಯ ವ್ಯವಹಾರವನ್ನೂ ಬಗೆಹರಿಸಿಕೊಂಡು ಹೊರಗಿನ ಹಸ್ತಕ್ಷೇಪವಿಲ್ಲದೆ ಸ್ವತಂತ್ರವಾಗಿ ತನ್ನ ಸದಸ್ಯರ ಮೇಲೆ ಅಧಿಕಾರ ನಡೆಸುತ್ತಿತ್ತು. ಧರ್ಮದ ಮೂಲಭೂತ ಪ್ರಶ್ನೆಗಳಲ್ಲಿ ಮಾತ್ರ ಶಾಸ್ತ್ರನಿಧಿಗಳಾದ ಬ್ರಾಹ್ಮಣರನ್ನು ಅಧಿಕೃತ ವ್ಯಾಖ್ಯೆ ಅಥವಾ ನಿರ್ವಚನಕ್ಕಾಗಿ ಇಲ್ಲವೆ ನಿರ್ಣಯ ಕೊಡಲು ಕೇಳಿಕೊಳ್ಳಲಾಗುತ್ತಿತ್ತು. ಕುಲದಲ್ಲಿದ್ದಂತೆಯೇ ಜಾತಿಯಲ್ಲೂ ಆಯಾ ಜಾತಿಯ ಜಾತಿವಿಧಿ ಹಾಗೂ ಜೀವನ ವರ್ತನೆಗಳ ನಿಯಮಗಳನ್ನೊಳಗೊಂಡ ಜಾತಿಧರ್ಮವೂ ಜಾತಿಸಂಘವೆಂಬ ಜಾತೀಯ ಸಾಮುದಾಯಿಕ ಸಭೆಯೂ ಇರುತ್ತಿದ್ದವು. ತನ್ನ ಸರ್ವ ಸಂಸ್ಥೆಗಳಲ್ಲೂ ಭಾರತೀಯ ರಾಜ್ಯಪದ್ಧತಿಯು ಸಮಷ್ಟಿಯ ತತ್ವವನ್ನಲ್ಲದೆ ವ್ಯಷ್ಟಿನಿಷ್ಠೆಯನ್ನು ಅವಲಂಬಿಸದುದರಿಂದ ಜಾತಿಕೂಡ ರಾಜ್ಯದ ರಾಜಕೀಯ ಹಾಗೂ ಪ್ರಶಾಸನೀಯ ಕೃತ್ಯಗಳಲ್ಲಿ ಗಣಿತವಾಯ್ತು. ಅದೇ ಮೇರೆಗೆ ಸಂಘಗಳು ಸಹ

ಸ್ವಯಂಕಾರವುಳ್ಳ ವ್ಯಾಪಾರದ ಮತ್ತು ಔದ್ಯಮಿಕ ಸಾಮುದಾಯಿಕ ಘಟಕಗಳಾಗಿದ್ದವು. ತಮ್ಮ ವ್ಯವಹಾರಗಳ ಚರ್ಚೆಗಾಗಿಯೂ ಪ್ರಶಾಸನಕ್ಕಾಗಿಯೂ ಅವು ಸಭೆ ಸೇರುತ್ತಿದ್ದವಲ್ಲದೆ ಒಂದುಕಾಲದಲ್ಲಿ ಶಾಸಕ ಪೌರ ನಿಕಾಯಗಳೆನಿಸಿದ್ದ ಸಂಯುಕ್ತ ರೂಪದಲ್ಲೂ ಅವೆಲ್ಲ ಒಟ್ಟಾಗಿ ಕೂಡುವುದಿತ್ತು. ಈ ಸಂಘ ಸರಕಾರಗಳು ಅವುಗಳನ್ನು ಹಾಗೆ ಕರೆಯಬಹುದಾದರೆ ನಗರಸಭೆಗಳಿಗಿಂತ ಹೆಚ್ಚಿನವಾಗಿದ್ದವು. ಎಲ್ಲ ವರ್ಗಗಳ, ವರ್ಣವ್ಯವಸ್ಥೆಗಳ ಜಾತಿ ಸಭೆಗಳ ಹಾಗೂ ಸಂಘಗಳ ಆಂಗಿಕ ಏಕತೆಯನ್ನು ಪ್ರತಿನಿಧಿಸುವ ನಗರಸ್ಥ ನಿಕಾಯದಲ್ಲಿ ಅನಂತರ ಅವು ಲೀನವಾಗಿಹೋದವು. ರಾಜ್ಯದ ಸಾಧಾರಣ ಸಭೆಯಲ್ಲಿ ಜಾತಿಗಳ ಪ್ರಾತಿನಿಧ್ಯ ನೇರವಾಗಿ ಇದ್ದಿಲ್ಲ; ಆದರೆ ಸ್ಥಾನಿಕ ವ್ಯವಹಾರಗಳ ಆಡಳಿತದಲ್ಲಿ ಅವಕ್ಕೆ ಸ್ವಸ್ಥಾನ ಲಭ್ಯವಾಗಿತ್ತು.

## ೯. ಗ್ರಾಮ ಮತ್ತು ನಗರಗಳ ಸಮಷ್ಟಿಗಳು

ಇಡಿ ಪದ್ಧತಿಯ ಪ್ರತ್ಯಕ್ಷಸ್ತಿಮಿತ ತಳಪಾಯವೆಂದರೆ ಗ್ರಾಮ ಸಮಷ್ಟಿ ಮತ್ತು ಪಟ್ಟಣ ಸಮುದಾಯ; ಆದರೆ ಇವು ಪ್ರಾದೇಶಿಕ ಘಟಕಗಳೂ ಆಗಿರಲಿಲ್ಲ; ನಿರ್ವಾಚನೀಯ, ಪ್ರಶಾಸನೀಯ ಇಲ್ಲವೆ ಇತರ ಉಪಯುಕ್ತ ಸಾಮಾಜಿಕ ಹಾಗೂ ರಾಜಕೀಯ ಉದ್ದೇಶಗಳಿಗೆ ಅನುಕೂಲವಾದ ಯಂತ್ರಬಂಧವೂ ಆಗಿದ್ದಿಲ್ಲ; ಹಾಗಲ್ಲದೆ ಇವು ಯಾವಾಗಲೂ ನಿಜವಾದ ಸಾಮುದಾಯಿಕ ಏಕತೆಗಳೆನಿಸಿ, ಸ್ವಶಕ್ತಿಯಿಂದ ಸ್ವಕೃತ್ಯಗಳನ್ನು ನಿರ್ವಹಿಸುವ ಸಂಘಟಿತ ಜೀವನವನ್ನು ನಡೆಸಿಕೊಂಡು, ಕೇವಲ ರಾಜ್ಯದ ರಾಜಯಂತ್ರದ ಪರಾಧೀನ ಭಾಗವಾಗದೆ ಬಾಳಿಕೊಂಡಿದ್ದವು. ಗ್ರಾಮಸಮಷ್ಟಿಯನ್ನು ಚಿಕ್ಕ ಗ್ರಾಮ ಗಣರಾಜ್ಯವೆಂದು ಕರೆಯಲಾಗುತ್ತಿತ್ತು. ಆ ವರ್ಣನೆ ಸ್ವಲ್ಪವೂ ಅತಿಶಯೋಕ್ತಿಯುಳ್ಳದ್ದಲ್ಲ; ಏಕೆಂದರೆ ಪ್ರತಿಯೊಂದು ಗ್ರಾಮವೂ ತನ್ನ ಇತಿಮಿತಿಯಲ್ಲೇ ಒಂದು ಸ್ವಾಯತ್ತ ಸ್ವಯಂಪೂರ್ಣ ಘಟಕವಾಗಿತ್ತು; ಅದನ್ನು ಅದರ ಆಯ್ದ ಪಂಚಾಯತರೂ ಆಯ್ದ ಅಥವಾ ಅನುವಂಶಿಕ ಅಧಿಕಾರಿಗಳೂ ನಡೆಸಿಕೊಂಡು ಹೋಗುತ್ತಿದ್ದರು. ಅವರೇ ಅದರ ಬೇಡಿಕೆಗಳನ್ನು ಪೂರೈಸುತ್ತಿದ್ದರು; ಅಲ್ಲಿಯ ಶಿಕ್ಷಣ, ಪೋಲೀಸು ವ್ಯವಸ್ಥೆ, ನ್ಯಾಯದ ತೀರ್ಪು, ಅದರ ಎಲ್ಲ ಆರ್ಥಿಕ ಅವಶ್ಯಕತೆ ಮತ್ತು ಕೃತ್ಯಗಳು ಮುಂತಾಗಿ ಸ್ಥಳೀಯ ಜೀವನದ ಎಲ್ಲ ಅಂಗಗಳನ್ನೂ ಸ್ವತಂತ್ರ ಸ್ವಶಾಸಕ ಘಟಕವಾಗಿ ನೋಡಿಕೊಳ್ಳುತ್ತಿದ್ದರು. ಪರಸ್ಪರ ವ್ಯವಹಾರವನ್ನು ಕೂಡ ಹಳ್ಳಿಗರು ಬಗೆಬಗೆಯ ಕೂಟಗಳ ಮೂಲಕ ನಡೆಸುತ್ತಿದ್ದರು; ಮತ್ತು ಹಲವು ಹಳ್ಳಿಗಳ ಗುಂಪಿಗೆ ಚುನಾಯಿಸಲ್ಪಟ್ಟ ಇಲ್ಲವೆ ಆನುವಂಶಿಕ ಶಿರೋಮಣಿಯೊಬ್ಬನಿರುತ್ತಿದ್ದ; ಆದುದರಿಂದ ಅಷ್ಟು ಸುಸಂಘಟಿತವಾಗಿ ಅಲ್ಲವಾದರೂ ಅವು ಒಂದು ನೈಸರ್ಗಿಕ ನಿಕಾಯವಾಗಿ ಬಾಳುತ್ತಿದ್ದವು. ಆದರೆ ಭಾರತದ ಪಟ್ಟಣಗಳು ಸಹ ಅಷ್ಟು

ಗಣ್ಯರೀತಿಯಿಂದಲ್ಲದಿದ್ದರೂ ಸ್ವಾಯತ್ತ ಸ್ವಶಾಸಕ ನಿಕಾಯಗಳಾಗಿದ್ದವು. ಅವುಗಳ ಆಳಿಕೆಗೆ ಅವುಗಳವೇ ಆದ ಸಭೆ ಸಮಿತಿಗಳೂ ನಿರ್ವಾಚನ ಪದ್ಧತಿ ಮತ್ತು ಮತದ ಬಳಕೆಯೂ ಇದ್ದವು. ತಮ್ಮ ಜನ್ಮಸಿದ್ಧ ಹಕ್ಕಿನ ಪ್ರಕಾರ ಅವು ತಮ್ಮ ವ್ಯವಹಾರಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದವು. ಹಳ್ಳಿಗಳಂತೆಯೇ ರಾಜ್ಯದ ಜಾನಪದ ಸಭೆಗೆ ಅವು ತಮ್ಮ ಪ್ರತಿನಿಧಿಗಳನ್ನು ಕಳಿಸಿಕೊಡುತ್ತಿದ್ದವು. ಈ ಪಟ್ಟಣ ಸರಕಾರಗಳ ಆಡಳಿತದಲ್ಲಿ ಪೋಲೀಸು, ನ್ಯಾಯ ವ್ಯವಹಾರ, ಸಾರ್ವಜನಿಕ ಉಪಯೋಗ, ಪವಿತ್ರ ಹಾಗೂ ಸಾರ್ವಜನಿಕ ಸ್ಥಲಗಳ ಸಂರಕ್ಷಣೆ, ನಿಬಂಧನ, ಪಟ್ಟಣಸ್ಥರ ಕರಗಳ ಮಾಹರಣ ಮತ್ತು ವ್ಯಾಪಾರಸಂಬಂಧಿಯಾದ ಎಲ್ಲ ವಿಷಯ, ಉದ್ಯಮ, ವಾಣಿಜ್ಯ ಮುಂತಾದ ಭೌತಿಕ ಮತ್ತು ತದಿತರ ಜನಹಿತ ಕಾರ್ಯಗಳೆಲ್ಲವೂ ಸೇರಿದ್ದವು. ಗ್ರಾಮಸಮಷ್ಟಿಯನ್ನೊಂದು ಚಿಕ್ಕ ಗಣರಾಜ್ಯವೆನ್ನಬಹುದಾದರೆ ಪಟ್ಟಣದ ರಚನೆಯನ್ನೂ ಅದೇ ಮೇರೆಗೆ ಅದಕ್ಕಿಂತ ದೊಡ್ಡದಾದ ನಾಗರ ಗಣರಾಜ್ಯವೆನ್ನಬಹುದು. ನೈಗಮ ಅಥವಾ ಸಂಘ ಸರಕಾರಗಳಿಗೂ ಪೌರ ಅಥವಾ ಆಸ್ಥಾನ ಸಭೆಗಳಿಗೂ ತಮ್ಮವೇ ಆದ ನಾಣ್ಯಗಳನ್ನು ಮುದ್ರಿಸುವ ಹಕ್ಕಿತ್ತೆಂಬುದು ಬಹಳ ಮಹತ್ವದ್ದು. ಅಂಥ ಶಕ್ತಿಪ್ರಯೋಗಕ್ಕೆ ಇತರ ಕಡೆಗಳಲ್ಲಿ ರಾಜರು ಹಾಗೂ ಗಣರಾಜ್ಯ ನೇತೃಗಳಷ್ಟೇ ಅರ್ಹರೆನಿಸುತ್ತಿದ್ದರು.

## ೧೦. ಅವಿಭಕ್ತ ಕುಟುಂಬ ಪದ್ಧತಿ

ಇನ್ನೊಂದು ಬಗೆಯ ಸಮಷ್ಟಿಯಿತ್ತು. ಅದಕ್ಕೆ ರಾಜಕೀಯ ಅಸ್ತಿತ್ವವಿದ್ದಿಲ್ಲ. ಆದರೆ ಅದು ವಿಶಿಷ್ಟ ಸ್ವಶಾಸಕನಿಕಾಯವಾಗಿತ್ತು. ಅದು ಭಾರತೀಯ ಜೀವನದಲ್ಲಿಯ ಎಲ್ಲೆಡೆಗೂ ತನ್ನನ್ನು ಹರಡಿಕೊಂಡು ಎಲ್ಲ ರೂಪಗಳಲ್ಲಿಯೂ ಒಂದು ಬಗೆಯ ನಿಕಟ ಸಾಮುದಾಯಿಕ ಸ್ವರೂಪ ತಾಳುವ ಬಲವಾದ ಪ್ರವೃತ್ತಿಗೊಂದು ನಿದರ್ಶನವಾಗಿತ್ತು. ಅದರ ಒಂದು ಉದಾಹರಣೆಯೆಂದರೆ ಕುಟುಂಬ; ಈ ಕುಟುಂಬ ಭಾರತದ ಎಲ್ಲೆಡೆಯಲ್ಲೂ ಇತ್ತು ಮತ್ತು ಆಧುನಿಕ ಸನ್ನಿವೇಶದ ಒತ್ತಡದಿಂದ ಅದೀಗ ಒಡೆದುಹೋಗಲಾರಂಭಿಸಿದೆ. ಕುಟುಂಬದ ಎರಡು ಮೂಲಭೂತ ತತ್ವಗಳೆಂದರೆ: ಸಗೋತ್ರಜರೂ ಅವರ ಕುಟುಂಬಗಳೂ ಸಾಮುದಾಯಿಕವಾಗಿ ಆಸ್ತಿಯನ್ನಿಟ್ಟುಕೊಂಬುದು ಮತ್ತು ಸಾಧ್ಯವಿದ್ದಷ್ಟು ಮಟ್ಟಿಗೆ ಕುಟುಂಬದ ಮುಖ್ಯಸ್ಥನ ಆಡಳಿತದಲ್ಲಿ ಅವಿಭಕ್ತ ಸಾಮೂಹಿಕ ಜೀವನವನ್ನು ಸಾಗಿಸುವುದು; ಎರಡನೆಯ ತತ್ವವೆಂದರೆ, ಬೇರೆ ಹೋಗುವ ಸಂದರ್ಭದಲ್ಲಿ ಆಸ್ತಿಯನ್ನು ಪ್ರತಿಯೊಬ್ಬ ಗಂಡೂ ಪಡೆಯುವ ಹಕ್ಕುಳ್ಳವನಾಗಿರುವುದು. ವ್ಯಕ್ತಿಯ ಸತತ ಮುಂಬರಿಯುವ ಪ್ರತ್ಯೇಕ ಹಕ್ಕಿಂದೊಡಗೂಡಿದ ಈ ಸಾಮುದಾಯಿಕ ಐಕ್ಯವೆಂಬುದು ಭಾರತೀಯ ಬಾಳು ಬಗೆಗಳ ಸಾಮರಸ್ಯೋನ್ಮುಖತೆಯ ಉದಾಹರಣೆ. ಅದು ಮೂಲಭೂತ ಪ್ರವೃತ್ತಿಗಳನ್ನು ಮಾನ್ಯಮಾಡುವುದು ಮತ್ತು ಅವನ್ನು

ಸಮರಸಗೊಳಿಸುವ ಪ್ರಯತ್ನವೆಸಗುವುದು–ಅವು ತಮ್ಮ ವ್ಯವಹಾರಮಾನದಲ್ಲಿ ಎಷ್ಟೇ ವಿರುದ್ಧವಾಗಿ ತೋರಿದರೂ ಆ ಯತ್ನವನ್ನು ಬಿಡದಿರುವುದು ಅದರ ಲಕ್ಷಣ. ಇದೇ ಸಮರಸಪ್ರವೃತ್ತಿಯು ಭಾರತದ ಸಾಮಾಜಿಕ ರಾಜಕೀಯ ಪದ್ದತಿಯ ಎಲ್ಲ ಅಂಗಗಳಲ್ಲೂ ಕಂಡುಬರುವುದಲ್ಲದೆ, ಇದು ಅನೇಕ ಬಗೆಗಳಿಂದ ದೇವಸತ್ತೆ, ರಾಜಸತ್ತೆ, ಧನಿಕಸತ್ತೆ, ಶ್ರೀಮಂತರ ಸತ್ತೆ ಮತ್ತು ಪ್ರಜಾಸತ್ತೆಗಳ ಪ್ರವೃತ್ತಿಗಳನ್ನು ಒಟ್ಟಿಗೆ ಸಮರಸಗೊಳಿಸಲುಜ್ಜುಗಿಸಿ, ಆ ಯಾವ ಒಂದರ ಲಕ್ಷಣವನ್ನೂ ಪ್ರಧಾನವಾಗಿ ತಳೆಯದೆ, ಎಲ್ಲವಕ್ಕೂ ಸ್ಥಳ ಕೊಡುವ ಬಗೆಯನ್ನಳವಡಿಸಿಕೊಳ್ಳದೆ, ನಿರೋಧ ಸಮತೋಲಗಳ ಬಗೆಯಿಂದಾಗಲಿ ಬೌದ್ಧಿಕ ರಚನಾವಿಧಾನದಿಂದಾಗಲಿ ಎಲ್ಲವನ್ನೂ ಒಟ್ಟುಗೂಡಿಸಹೋಗದೆ ನಾನಾಪ್ರಕಾರ ಸಮನ್ವಿತವಾದ ಸಾಮಾಜಿಕ ಬಗೆ ಮತ್ತು ಭಾವಗಳ ಮೂಲ ಪ್ರವೃತ್ತಿಗಳ ನೈಸರ್ಗಿಕ ಜಟಿಲರೂಪವನ್ನು ತಾಳಿತು.

## ೧೧. ಪ್ರತ್ಯೇಕ ಧಾರ್ಮಿಕ ಸಮುದಾಯದ ಹುಟ್ಟು:

ಮತ್ತೊಂದು ಬದಿಗೆ ಭಾರತೀಯ ಜೈವಿಕ ಚೇತನೆಯ ತುತ್ತತುದಿಯಾದ ತಪೋಮಯ, ಶುದ್ಧ ಆಧ್ಯಾತ್ಮಿಕ ರೂಪ ಸಾಗಿತ್ತು. ಈ ಧಾರ್ಮಿಕ ಸಮಷ್ಟಿಯೂ ಸಾಮುದಾಯಿಕ ಸ್ವರೂಪದ್ದಾಗಿತ್ತು. ಆದಿಯ ವೈದಿಕ ಸಮಷ್ಟಿಯಲ್ಲಿ ಚರ್ಚೆಗಾಗಲಿ, ಧಾರ್ಮಿಕ ಸಮುದಾಯಕ್ಕಾಗಲಿ ಎಡೆಯಿರಲಿಲ್ಲ. ಏಕೆಂದರೆ ಅದರ ಪದ್ಧತಿಯಲ್ಲಿ ಜನನಿಕಾಯವು ಒಂದೇ ಒಂದಾದ ಸಾಮಾಜಿಕ–ಧಾರ್ಮಿಕ ಒಟ್ಟಾಗಿತ್ತಲ್ಲದೆ, ಅಲ್ಲಿ ಧಾರ್ಮಿಕ ಲೌಕಿಕ, ಸಾಮಾನ್ಯ ಮನುಷ್ಯ–ದೇವಕುಲಿಕ ಎಂಬಂತಹ ಭೇದವಿರಲಿಲ್ಲ. ಅನಂತರ ಯಾವ ವಿಧವಾಗಿ ಬೆಳೆದರೂ ಹಿಂದುಧರ್ಮವು ಇಡಿಯಲ್ಲಿ ಅಥವಾ ಅಡಿಯಲ್ಲಿ ಈ ತತ್ವವನ್ನು ಹಿಡಿದೇ ನಡೆದುಬಂದಿದೆ. ತದ್ವಿರುದ್ಧವಾಗಿ ಹೊತ್ತಿಗೆ ಸರಿಯಾಗಿ ಬಂದ ಇಹ–ಪರ ಜೀವನಗಳನ್ನು ಪ್ರತ್ಯೇಕಿಸುವ ವರ್ಧಮಾನ ತಾಪಸ ಪ್ರವೃತ್ತಿ ಪ್ರತ್ಯೇಕವಾದ ಧಾರ್ಮಿಕ ಸಮಷ್ಟಿಯನ್ನು ನಿರ್ಮಿಸಲು ಪ್ರವರ್ತಿಸಿದ್ದಕ್ಕೆ ಬೌದ್ಧ ಜೈನ ಮತಗಳೂ ಆಚಾರಗಳೂ ಉದಿಸಿದ್ದು ನಿದರ್ಶನವಾಗಿದೆ. ಬೌದ್ಧ ಮತಸಂಪ್ರಾಯವು ಸಂಘಟಿತ ಧಾರ್ಮಿಕ ಸಮಷ್ಟಿಯ ಪೂರ್ಣರೂಪದ ಮೊದಲ ಬೆಳವಣಿಗೆ, ಇಲ್ಲಿ ಬುದ್ಧನು ಸರಳವಾಗಿ ಭಾರತೀಯ ಸಮಾಜ ಹಾಗೂ ರಾಜ್ಯಪದ್ಧತಿಗಳ ಜ್ಞಾತ ತತ್ವಗಳನ್ನು ತಾಪಸ ಜೀವನಕ್ಕೆ ಅನ್ವಯಿಸಿದನು. ಆತ ಸೃಜಿಸಿದ ವರ್ಗವ್ಯವಸ್ಥೆ ಧರ್ಮಸಂಘವಾಗುವ ಗುರಿಯುಳ್ಳದ್ದಾಗಿತ್ತು ಮತ್ತು ಪ್ರತಿಯೊಂದು ಮಠವೂ ತನ್ನ ಜೀವನದ ಎಲ್ಲ ನಿಯಮ, ಲಕ್ಷಣ, ರಚನೆಗಳಲ್ಲೂ ಬೌದ್ಧರು ತಿಳಿದುಕೊಂಡ ಧರ್ಮವನ್ನು ಕಾಯ್ದುಕೊಳ್ಳುವುದರ ಮೇಲೆ ನಿಂತ ಹಾಗೂ ಅದರ ವ್ಯಕ್ತ ರೂಪವಾದ ಸಂಯುಕ್ತ ಸಾಮಷ್ಟಿಕ ನಿಕಾಯವಾಗುವ ಉದ್ದೇಶವುಳ್ಳದ್ದಾಗಿತ್ತು. ಸಮಸ್ತ ಹಿಂದುಸಮಾಜದ ತತ್ವ ಹಾಗೂ ಸಿದ್ಧಾಂತ ಇದೇ; ಆದರೆ ಆ ತತ್ವ–ಸಿದ್ಧಾಂತಗಳಿಗೆ ಆಧ್ಯಾತ್ಮಿಕ ಜೀವನಕ್ಕೆ ಮತ್ತು ಶುದ್ಧ ಧಾರ್ಮಿಕ

ನಿಕಾಯಕ್ಕೆ ಮಾತ್ರ ಸಾಧ್ಯವಾದ ಹೆಚ್ಚಿನ ತೀವ್ರತೆಯನ್ನು ಕೊಡಲಾಗಿತ್ತು. ಅದು ತನ್ನ ವ್ಯವಹಾರಗಳನ್ನು ಕೂಡ ಭಾರತೀಯ ಸಾಮಾಜಿಕ ರಾಜಕೀಯ ಸಾಮುದಾಯಿಕ ಏಕತೆಗಳಂತೆಯೇ ಸಾಗಿಸಿಕೊಂಡು ಹೋಗುತ್ತಿತ್ತು. ಅದರ ಸಭೆಯೊಂದು ಧರ್ಮ ಹಾಗೂ ಅದರ ಪ್ರಯೋಗದ ಚರ್ಚಾಸ್ಪದ ಪ್ರಶ್ನೆಗಳನ್ನು ಚರ್ಚಿಸಿ ಗಣರಾಜ್ಯದ ಸಭಾಭವನದಲ್ಲಿಯಂತೆ ಮತಗಣನೆಯ ಮೇಲೆ ಸಾಗುತ್ತಿತ್ತು; ಆದರೂ ಅತಿ ಶುದ್ಧ ಲೋಕತಂತ್ರಾತ್ಮಕ ಕ್ರಮದಲ್ಲಿಯ ದೋಷಗಳನ್ನು ದೂರವಿಡುವ ದೃಷ್ಟಿಯಿಂದ ಅದು ಒಂದು ಪರಿಮಾಪಕ ನಿಯಂತ್ರಣಕ್ಕೊಳಗಾಗಿತ್ತು. ಹೀಗೆ ಒಮ್ಮೆ ಸುಧೃಢವಾಗಿ ಪ್ರತಿಷ್ಠಿತವಾದ ಮತಪದ್ಧತಿಯನ್ನು ಅದರ ವಿಸ್ತೃತ ಸಂಘಟನೆಯಷ್ಟನ್ನು ಬಿಟ್ಟು ಸನಾತನ ಧರ್ಮ ತೆಗೆದುಕೊಂಡುಬಿಟ್ಟಿತು. ಈ ಧಾರ್ಮಿಕ ಸಮಷ್ಟಿಗಳು ತಾವಿದ್ದಲ್ಲೆಲ್ಲ ಶಾಂಕರ ವ್ಯವಸ್ಥೆಯಂತೆ ಹಳೆಯ ಬ್ರಾಹ್ಮಣ ಪದ್ಧತಿಗಳ ವಿರುದ್ಧವಾಗಿ ಸಮಷ್ಟಿಯ ಸಾಮಾನ್ಯ ನಿಕಾಯಕ್ಕೆ ಒಂದು ಬಗೆಯ ಮಠೀಯ ಮುಖಂಡ ಎನಿಸಲು ಹೆಣಗಿದವು; ಆದರಿವು ಯಾವ ರಾಜಕೀಯ ಸ್ಥಾನವನ್ನೂ ಆಕ್ರಮಿಸಲಿಲ್ಲ. ಆದುದರಿಂದ ಭಾರತದ ರಾಜಕೀಯ ಇತಿಹಾಸದಲ್ಲಿ ಚರ್ಚೆ ಮತ್ತು ಸರಕಾರಗಳಲ್ಲಿಯ ಹೋರಾಟವೆಂಬುದು ಇಲ್ಲವೇ ಇಲ್ಲ.

# ೧೨. ಸ್ವಯಂ ನಿರ್ಣಯ ಮತ್ತು ಸ್ವಯಂಶಾಸನಗಳ ಮೂಲತತ್ವ

ಆದುದರಿಂದ ದೊಡ್ಡ ರಾಜ್ಯ ಸಾಮ್ರಾಜ್ಯಗಳ ಕಾಲದಲ್ಲೂ ಪ್ರಾಚೀನ ಭಾರತೀಯ ಸಮಗ್ರ ಜೀವನ ತನ್ನ ಪ್ರಾಥಮಿಕ ತತ್ವವನ್ನು ಸಾರಭೂತ ಆಚಾರವನ್ನೂ ಉಳಿಸಿಕೊಂಡಿತ್ತಲ್ಲದೆ ಅದರ ಸಾಮಾಜಿಕ ರಾಜ್ಯಪದ್ಧತಿಯು ಮೂಲತಃ ಸ್ವಯಂನಿರ್ಣಯಾಧಿಕಾರವುಳ್ಳ ಸ್ವಶಾಸಕವಾದ ನಾನಾಪ್ರಕಾರ ಪರಿಪುಷ್ಟ ಪದ್ಧತಿಯಾಗಿಯೇ ಉಳಿದಿತ್ತು. ಉಳಿದ ಕಡೆಯಂತೆಯೇ ಇಲ್ಲಾದರೂ ಅರ್ಧ ಹೆಚ್ಚು ನಿಯಮಬದ್ಧವೂ ವೈಜ್ಞಾನಿಕವಾಗಿ (ಶಿಥಿಲತರ ನೈಸರ್ಗಿಕ ಜೀವನ–ಸಮವಾಯುವುಳ್ಳ ಕೆಲ ಸಣ್ಣ ಪ್ರದೇಶಗಳನ್ನುಳಿದು) ಮತ್ತಷ್ಟು ಸಮರ್ಪಕ ಸಮವಾಯವನ್ನೊಡರಿಸಬೇಕೆಂಬ ವ್ಯಾವಹಾರಿಕ ವಿಚಾರದ ಅವಶ್ಯಕತೆಯಿಂದ ಮತ್ತರ್ಧ ಹೆಚ್ಚು ಒತ್ತಾಸೆಯಿಂದ ಏಕಮಾತ್ರ ಕೇಂದ್ರಾಧಿಕಾರದ ಅಂಕೆಯಲ್ಲಿ ವ್ಯವಸ್ಥಿತ ಸೈನಿಕ ಆಕ್ರಮಣ, ಸಂರಕ್ಷಣ ಹಾಗೂ ಅಂತಾರಾಷ್ಟ್ರೀಯ ಕಾರ್ಯಗಳು ಸಾಗಬೇಕೆಂಬ ಅಗತ್ಯದ ಮೂಲಕ ಈ ಪದ್ಧತಿಯ ಮೇಲ್ವಿಚಾರಣೆಗೆ ಸುಸಂಘಟಿತ ಸರಕಾರಿ ಪ್ರಾಧಿಕಾರ ವಿಕಾಸವಾಗುವುದು ಅವಶ್ಯವೆನಿಸಿತು. ಮೊದಲಿನ ಬೇಡಿಕೆಯನ್ನು ಪೂರೈಸಲು ಸ್ವತಂತ್ರ ಗಣರಾಜ್ಯ ಸರಕಾರದ ವಿಸ್ತರಣ ಸಾಕಾಗಿತ್ತು; ಏಕೆಂದರೆ, ಅದಕ್ಕೆ ಸುಪ್ತಶಕ್ತಿಯೂ ಅವಶ್ಯಕ ಸಂಸ್ಥೆಗಳೂ ಇದ್ದವು– ಆದರೆ ಹೆಚ್ಚು ಸಂಕ್ಷಿಪ್ತವೂ ಸುಲಭವಾಗಿ ಸ್ಪೃಶ್ಯವೂ ಆದ ಕೇಂದ್ರೀಕರಣವುಳ್ಳ ರಾಜಪ್ರಭುತ್ವದ

ಕ್ರಮವು ಸದ್ಯೋಲಭ್ಯವೂ ಸುವ್ಯವಸ್ಥಾಪನೀಯವೂ ಆದ ಉಪಾಯವನ್ನೂ ಹೆಚ್ಚು ಸುಗ್ರಹವೂ ಆಪಾತತಃ ಹೆಚ್ಚು ಸಮರ್ಥವೂ ಆದ ರಾಜ್ಯಯಂತ್ರವನ್ನೂ ಒದಗಿಸಿಕೊಟ್ಟಿತು. ಮೊದಲಿಂದಲೂ ಆಗ ದೇಶಕ್ಕಿಂತ ಹೆಚ್ಚಾಗಿ ಖಂಡದಂತಿದ್ದ ಭಾರತದ ಸರ್ವೋಚ್ಚ ಜಟಿಲವಾದ, ಎಂದಿನಿಂದಲೂ ಇದ್ದ ರಾಜಕೀಯ ಏಕೀಕರಣವನ್ನೊಳಗೊಂಡ ಬಾಹ್ಯಸಿದ್ಧಿಗೆ ಆಕ್ರಮಣಕ್ಕಿಂತ ಹೆಚ್ಚಾಗಿ ಸಂರಕ್ಷಣೆಗೆ ಬೇಕಾದ ಸಾಮರ್ಥ್ಯ ಬೆಳೆಸಿಕೊಳ್ಳಲನುಗುಣವಾದ ಗಣರಾಜ್ಯ ಪದ್ಧತಿಯು, ಎಷ್ಟೇ ದಕ್ಷ ಸೈನಿಕ ಸಂಘಟನೆ ಇದ್ದರೂ, ಸಾಲದಾಯ್ತು. ಆದುದರಿಂದ ಉಳಿದೆಡೆಯಲ್ಲಿ ಹೇಗೋ ಹಾಗೇ ಭಾರತದಲ್ಲೂ ರಾಜಪ್ರಭುತ್ವದ ಸಮರ್ಥ ರೂಪವು ಮಿಕ್ಕೆಲ್ಲವನ್ನೂ ಕಬಳಿಸಿ ಕೊನೆಯದಾಗಿ ಉಳಿಯಿತು. ಅದೇ ವೇಳೆಗೆ ತನ್ನ ಮೂಲಭೂತ ಸಂಸ್ಥೆಗಳಿಗೂ ಆದರ್ಶಗಳಿಗೂ ನಿಷ್ಠವಾಗಿದ್ದ ಭಾರತಮನ ಜನಭಾವಾನುಗುಣವಾದ ಸಾಮುದಾಯಿಕ ಸ್ವಶಾಸನದ ತಳಹದಿಯನ್ನು ಉಳಿಸಿಕೊಂಡು, ರಾಜಪ್ರಭುತ್ವದ ಸರಕಾರವನ್ನು ನಿರಂಕುಶ ಪ್ರಭುತ್ವವಾಗಿ ಬೆಳೆಯಲು ಅಥವಾ ತನ್ನ ಯುಕ್ತ ಕೃತ್ಯಗಳನ್ನು ಮೀರಿ ಹೋಗಲು ಬಿಡದೆ, ಸಮಾಜ ಜೀವನವನ್ನದು ಜಡಯಂತ್ರವನ್ನಾಗಿ ಮಾಡುವುದರ ವಿರುದ್ಧವಾಗಿ ತಾನು ಜಯಪ್ರದವಾಗಿ ನಿಂತಿತು. ಸುದೀರ್ಘವಾದ ಅವನತಿಕಾಲದಲ್ಲಷ್ಟೇ ನಾವು ರಾಜಸರಕಾರಕ್ಕೂ ಸ್ವಯಂನಿರ್ಣಯಾಧಿಕಾರವುಳ್ಳ ಸಾಮುದಾಯಿಕ ಜನಜೀವನಕ್ಕೂ ನಡುವೆ ಇರುವ ಸ್ವತಂತ್ರ ಸಂಸ್ಥೆಗಳು ಅದೃಶ್ಯವಾಗಲು ಪ್ರವರ್ತಿಸುವ ಇಲ್ಲವೆ ತಮ್ಮ ಹಳೆಯ ಶಕ್ತ್ಯುತ್ಸಾಹಗಳನ್ನು ಬಹಳಮಟ್ಟಿಗೆ ಕಳೆದುಕೊಂಬ ದೃಶ್ಯವನ್ನೂ ವೈಯಕ್ತಿಕ ಆಳಿಕೆಯ, ನೌಕರಶಾಹಿಯ ಮತ್ತು ಎದ್ದುಕಾಣುವ ಕೇಂದ್ರೀಕೃತ ಪ್ರಾಧಿಕಾರದ ದುಷ್ಪರಿಣಾಮಗಳನ್ನೂ ಕೆಲಮಟ್ಟಿಗೆ ಕಾಣುತ್ತೇವೆ. ಭಾರತೀಯ ರಾಜ್ಯ ಪದ್ಧತಿಯ ಪ್ರಾಚೀನ ಪರಂಪರೆಗಳು ಎಲ್ಲಿಯವರೆಗೆ ಉಳಿದಿದ್ದವೋ, ಎಷ್ಟರ ಮಟ್ಟಿಗೆ ಅವು ಮುಖ್ಯವೂ ಪರಿಣಾಮಕರವೂ ಆಗಿ ಉಳಿದವೋ ಅಲ್ಲಿಯವರೆಗೆ ಮತ್ತು ಅಷ್ಟುಮಟ್ಟಿಗೆ ಈ ದುಷ್ಪರಿಣಾಮಗಳು ಆಕಸ್ಮಿಕವೂ ವಿರಲವೂ ಆಗಿದ್ದವು. ಇಲ್ಲವೆ ಅಳತೆಮೀರಿ ಹೋಗಿದ್ದಿಲ್ಲ. ಪರದೇಶೀಯ ಆಕ್ರಮಣ ಮತ್ತು ವಿಜಯ, ಹಾಗೂ ಭಾರತೀಯ ಪ್ರಾಚೀನ ಸಂಸ್ಕೃತಿಯ ಮಂದಗತಿಯಿಂದಾದ ಅವನತಿ ಮತ್ತು ಆತ್ಯಂತಿಕ ಕ್ಷಯ ಇವುಗಳ ಸಂಯೋಗವೇ ಪ್ರಾಚೀನ ಕಟ್ಟಡದ ಗಣ್ಯ ಭಾಗಗಳು ಬಿದ್ದು ಉರುಳುವುದಕ್ಕೂ ಜನತೆಯ ಸಾಮಾಜಿಕ ರಾಜಕೀಯ ಜೀವನದ ಅಧಃಪಾತ, ವಿಘಟನಗಳು (ಪುನರುಜ್ಜೀವನಕ್ಕೆ ಅಥವಾ ಹೊಸ ಸೃಷ್ಟಿಗೆ ಸಾಕಷ್ಟು ಸಾಧನ ಸಾಮಗ್ರಿಗಳಿಲ್ಲದಂತೆ) ಸಂಭವಿಸಿದ್ದಕ್ಕೂ ಕಾರಣ.

## ೧೩. ನ್ಯಾಯಾಲಯಗಳು

ವಿಕಾಸದ ಉಚ್ಚ್ರಾಯದಶೆಯಲ್ಲಿ ಮತ್ತು ಭಾರತೀಯ ನಾಗರಿಕತೆಯ ಮಹಾಸುದಿನಗಳಲ್ಲಿ ಅತಿ ದಕ್ಷವೂ ಸಾಮುಷ್ಟಿಕ ಸ್ವಶಾಸನವನ್ನು ಸ್ತಿಮಿತತೆ

ಸುವ್ಯವಸ್ಥೆಗಳೊಂದಿಗೆ ಅತಿ ಸಂಪೂರ್ಣವಾಗಿ ಜೋಡಿಸಿದ್ದೂ ಆದ ಪ್ರಶಂಸನೀಯ ರಾಜಕೀಯ ಪದ್ಧತಿಯಿದ್ದುದನ್ನು ನಾವು ಕಾಣುತ್ತೇವೆ. ಸರಕಾರವು ತನ್ನ ಪ್ರಶಾಸನೀಯ, ನ್ಯಾಯಿಕ, ವಿತ್ತೀಯ ಮತ್ತು ಸಂರಕ್ಷಕ ಕಾರ್ಯಗಳನ್ನು ಜನತೆಯ ಮತ್ತು ಒಂದೇ ಶಾಖೆಯಲ್ಲಿಯ ಅದರ ಅಂಗ ನಿಕಾಯಗಳ ಹಕ್ಕು ಹಾಗೂ ಸ್ವತಂತ್ರ ಚಟುವಟಿಕೆಗಳನ್ನು ನಾಶಮಾಡದೆ ಅಥವಾ ಅವುಗಳ ಮೇಲೆ ದಬ್ಬಾಳಿಕೆ ನಡೆಸದೆ ಸಾಗಿಸಿಕೊಂಡು ಹೋಗುತ್ತಿತ್ತು. ರಾಜಧಾನಿಯಲ್ಲಿ ಮತ್ತು ಗ್ರಾಮಾಂತರಗಳಲ್ಲಿ ಇದ್ದ ರಾಜನ ನ್ಯಾಯಾಲಯಗಳು ಸರ್ವೋಚ್ಚ ನ್ಯಾಯಿಕ ಪ್ರಾಧಿಕಾರವುಳ್ಳವಾಗಿದ್ದು ಇಡಿ ರಾಜ್ಯದ ನ್ಯಾಯಪ್ರಶಾಸನವನ್ನು ಸಮವೇತಗೊಳಿಸುವಲ್ಲಿ ಹಳ್ಳಿ ಪಟ್ಟಣಗಳ ಪ್ರಾದೇಶಿಕ ಸಮಷ್ಟಿಗಳು ತಮ್ಮ ಕೋರ್ಟುಗಳಿಗಿತ್ತಿದ್ದ ನ್ಯಾಯಶಕ್ತಿಗಳಲ್ಲಿ ಅನ್ಯಾಯವಾಗಿ ಕೈಹಾಕುತ್ತಿದ್ದಿಲ್ಲ. ರಾಜಪದ್ಧತಿ ಕೂಡ ಸಂಘ, ಜಾತಿ, ಕುಟುಂಬಗಳ ಕೋರ್ಟುಗಳೊಡನೆ ಸಂಬಂಧವಿಟ್ಟುಕೊಂಡು ಸಾಕಷ್ಟು ನ್ಯಾಯವಿತರಣ ಸಾಧನವಾಗಿತ್ತಲ್ಲದೆ, ಹೆಚ್ಚು ಗಂಭೀರವಾದ ದಂಡನೀಯ ಅಪರಾಧಗಳ ತೀರ್ಮಾನಷ್ಟನ್ನೇ ತನ್ನ ವಿಶಿಷ್ಟ ನಿಯಂತ್ರಣದಲ್ಲಿಟ್ಟುಕೊಂಡಿತ್ತು. ಹಳ್ಳಿ ಪಟ್ಟಣಗಳ ಪ್ರಾದೇಶಿಕ ಘಟಕಗಳ ಪ್ರಶಾಸನೀಯ ಮತ್ತು ವಿತ್ತೀಯ ಶಕ್ತಿಗಳಿಗೆ ಅದೇ ಮೇರೆಗೆ ಮನ್ನಣೆ ಕೊಡಲಾಗಿತ್ತು. ಗ್ರಾಮ ಪಟ್ಟಣಗಳಲ್ಲಿಯ ರಾಜ ನಿಯುಕ್ತ ರಾಜ್ಯಪಾಲರೂ ಅಧಿಕಾರಿಗಳೂ ಜನತೆ ಹಾಗೂ ಅದರ ಸಭೆಗಳು ನೇಮಿಸಿದ ನಾಗರಿಕ ರಾಜ್ಯಪಾಲ, ನೌಕರ ಮತ್ತು ಸಮಷ್ಟಿ ಮುಖ್ಯಸ್ಥರೊಡನೆಯೇ ಇರುತ್ತಿದ್ದರು. ರಾಷ್ಟ್ರದ ಧಾರ್ಮಿಕ ಸ್ವಾತಂತ್ರ್ಯ, ಸುಪ್ರತಿಷ್ಠಿತ ಆರ್ಥಿಕ ಮತ್ತು ಸಾಮಾಜಿಕ ಜೀವನಗಳಲ್ಲಿ ಸರಕಾರ ಹಸ್ತಕ್ಷೇಪ ಮಾಡುತ್ತಿದ್ದಿಲ್ಲ; ಸಾಮಾಜಿಕ ವ್ಯವಸ್ಥೆಯ (ಚಾತುರ್ವರ್ಣ್ಯದ) ಸಂರಕ್ಷಣೆ ಹಾಗೂ ರಾಷ್ಟ್ರದ ಎಲ್ಲ ಚಟುವಟಿಕೆಗಳೂ ಸರಿಯಾಗಿ ನಡೆಯಲು ಬೇಕಾದ ಅವಶ್ಯಕ ಮೇಲ್ವಿಚಾರಣೆ, ಬೆಂಬಲ, ಸಮವಾಯ ಮತ್ತು ಅನುಕೂಲಗಳನ್ನು ಒದಗಿಸುವಷ್ಟಕ್ಕೇ ತನ್ನ ಕರ್ತವ್ಯವನ್ನದು ಪರಿಮಿತಗೊಳಿಸಿಕೊಂಡಿತ್ತು. ಅದು ಯಾವಾಗಲೂ ತಿಳಿದುಕೊಂಡು ತನಗಿದ್ದ ಸದವಕಾಶಗಳನ್ನು ವೈಭವಪೂರ್ಣವಾಗಿ ಉಪಯೋಗಿಸಿಕೊಂಡು ಭಾರತದ ಸಾಮುದಾಯಿಕ ಮನ ಆಗಲೇ ನಿರ್ಮಿಸಿದ್ದ ವಾಸ್ತುಶಿಲ್ಪ, ಕಲೆ, ಸಂಸ್ಕೃತಿ, ಪಾಂಡಿತ್ಯ, ಸಾಹಿತ್ಯಗಳಿಗೆ ಒಳ್ಳೆಯ ಉದಾರ ಪ್ರೋತ್ಸಾಹವೀಯುವ ಸದಾಕರವಾಯಿತು. ರಾಜನ ವ್ಯಕ್ತಿತ್ವದಲ್ಲಿ ಗಂಭೀರ ಮತ್ತು ಸಮರ್ಥ ಮುಖ್ಯಸ್ಥಚಿಹ್ನವೂ ಅವನ ಪ್ರಶಾಸನ ಪದ್ದತಿಯಲ್ಲಿ (ಸ್ವೇಚ್ಛಾವರ್ತನೆಯ ನಿರಂಕುಶ ಪ್ರಭುತ್ವವಾಗಲಿ, ನೌಕರ ಶಾಹಿಯಾಗಲಿ, ಜೀವನವನ್ನು ದಮಿಸುವ ಅಥವಾ ಬದಲಿಸುವ ಯಾಂತ್ರಿಕ ಜಡದರ್ಪವಾಗಲಿ ಇಲ್ಲದೆ) ಉನ್ನತವೂ ಸ್ತಿಮಿತವೂ ಆದ ನಾಗರಿಕತೆಯ ಮತ್ತು ಸ್ವತಂತ್ರವೂ ಸಚೇತನವೂ ಆದ ಜನತೆಯ ನಿರ್ಮಾಣದ ಸರ್ವೋಚ್ಚ ಸಾಧನವತ್ತೆಯೂ ಕಂಡುಬರುತ್ತಿದ್ದವು.

# ನಾಲ್ಕನೆಯ ಅಧ್ಯಾಯ
# ರಾಷ್ಟ್ರೀಯ ಹಾಗೂ ರಾಜಕೀಯ ಐಕ್ಯದ ಅಭಾವ

ವಿಷಯಗಳ ಸರಿಯಾದ ತಿಳಿವಳಿಕೆ ಮತ್ತು ಪ್ರಾಚೀನ ಭಾರತೀಯ ಸಾಮಾಜಿಕ ರಾಜಕೀಯ ಪದ್ಧತಿಯ ಲಕ್ಷಣ ಹಾಗೂ ತತ್ವಗಳ ಸರಿಯಾದ ಅರ್ಥ ಆದರೆ ಅತಿಭೌತತತ್ವಜ್ಞಾನ, ಧರ್ಮ, ಕಲೆ ಹಾಗೂ ಸಾಹಿತ್ಯಗಳಲ್ಲಿ ಗಣ್ಯತೆವೆತ್ತರೂ ಭಾರತೀಯ ಬುದ್ಧಿಯು ಜೀವನದ ಸಂಘಟನೆಯಲ್ಲಿ ಆಯುಕ್ತ, ವ್ಯಾವಹಾರಿಕ ಚಾತುರ್ಯದ ಕಾರ್ಯಗಳಲ್ಲಿ ಕೀಳು ಮತ್ತು ವಿಶೇಷತಃ ರಾಜಕೀಯ ಪ್ರಯೋಗ ವಿಜ್ಞಾನದಲ್ಲಿ ಬಂಜೆ, ಅದರ ಅಭಿಲೇಖವು ಯೋಗ್ಯ ರಾಜಕೀಯ ರಚನಾವಿಧಾನ–ವಿಚಾರ–ಕಾರ್ಯ ಇಲ್ಲದ್ದು ಎಂಬ ಪಾಶ್ಚಾತ್ಯ ವಿಮರ್ಶಕರ ವಾದಕ್ಕೆ ಉತ್ತರದೊರಕುತ್ತದೆ. ತದ್ವಿರುದ್ಧವಾಗಿ, ಭಾರತೀಯ ನಾಗರಿಕತೆಯು ಒಂದು ಪ್ರಶಂಸನೀಯ ರಾಜಕೀಯ ಪದ್ಧತಿಯನ್ನು ವಿಕಾಸಗೊಳಿಸಿತು; ತನ್ನ ನಾಗರಿಕ ವ್ಯವಹಾರ ರಚನೆಯ ಪ್ರಯತ್ನದಲ್ಲಿ ಮಾನವ ಮನ ಆಂತ ರಾಜಸತ್ತೆಯ, ಪ್ರಜಾಸತ್ತೆಯ ಮತ್ತು ಇತರ ತತ್ವಗಳನ್ನೂ ಪ್ರವೃತ್ತಿಗಳನ್ನೂ ಬಹಳ ಬುದ್ಧಿವಂತಿಕೆಯಿಂದ ಸುದೃಢವಾಗಿಯೂ ಚಿರಸ್ಥಾಯಿಯಾಗಿಯೂ ರೂಢಿಸಿತ್ತು; ಮತ್ತು ಆಧುನಿಕ ಯೌರೋಪ್ಯ ಸರಕಾರದ ದೋಷವೆನಿಸಿರುವ ಅತಿ ಯಾಂತ್ರೀಕರಣದಿಂದ ತಪ್ಪಿಸಿಕೊಂಡಿತ್ತು. ಪಾಶ್ಚಾತ್ಯರ ವಿಕಾಸವಾದದ ದೃಷ್ಟಿಯಿಂದ ಮತ್ತು ಅವರ ಪ್ರಗತಿಕಲ್ಪನೆಯ ನಿಲುಮೆಯಿಂದ ಎತ್ತಬಹುದಾದ ಆಕ್ಷೇಪಗಳನ್ನು ಅನಂತರದಲ್ಲಿ ವಿವೇಚಿಸಲಾಗುತ್ತದೆ.

ಆದರೆ ರಾಜನೀತಿಯ ಇನ್ನೊಂದು ಮುಖದಲ್ಲಿ ಭಾರತದ ರಾಜಕೀಯ ಮನ ಸಂಪೂರ್ಣ ಅಪಜಯ ಹೊಂದಿದ ದಾಖಲೆಯನ್ನು ತೋರಿಸಿದೆ ಎನ್ನಬಹುದು. ಅದು ಸಂವರ್ಧಿಸಿದ ಸಂಘಟನೆಯ ಸ್ತಿಮಿತತೆಗೂ ಪರಿಣಾಮಕರ ಆಡಳಿತಕ್ಕೂ ಪ್ರಾಚೀನ ಪರಿಸ್ಥಿತಿಯಲ್ಲಿ ಜನತೆಯ ಸಾಮಷ್ಟಿಕ ವ್ಯವಸ್ಥೆ, ಸ್ವಾತಂತ್ರ್ಯ ಹಾಗೂ ಸುಸ್ಥಿತಿಗಳನ್ನು ಸಾಧಿಸಿಕೊಂಬುದಕ್ಕೂ ಪ್ರಶಸ್ತವಾಗಿರಬಹುದಾದರೂ ಅದರ ಜನಾಂಗಗಳಲ್ಲಿ ಪ್ರತಿಯೊಂದೂ ಪ್ರತ್ಯೇಕವಾಗಿಯೂ ಚೆನ್ನಾಗಿಯೂ ಆಳಲ್ಪಡುತ್ತಿದ್ದರೂ ಸಮೃದ್ಧವಾಗಿದ್ದರೂ ಇಡಿ ದೇಶದಲ್ಲಿ ಉಚ್ಚ ಮಟ್ಟದ ಸಂಸ್ಕೃತಿ ನಾಗರಿಕತೆಗಳ ಕೃತ್ಯನಿರ್ವಾಹಕ್ಕೆ ಸುರಕ್ಷಿತ ಆವರಣ ನಿರ್ಮಿತವಾಗಿದ್ದರೂ ಭಾರತದ ರಾಷ್ಟ್ರೀಯ ಮತ್ತು ರಾಜಕೀಯ ಏಕೀಕರಣವನ್ನು ಒಡರಿಸುವುದರಲ್ಲೂ ಕೊನೆಯಲ್ಲಿ ವಿದೇಶೀಯ ದಾಳಿಯ ವಿರುದ್ಧ ಅದನ್ನು ಸಾಧಿಸುವುದರಲ್ಲೂ ಸೋತು, ತನ್ನ ಸಂಸ್ಥೆಗಳ ನಾಶಕ್ಕೂ ದೇಶದ ಸುದೀರ್ಘ ಕಾಲದ ದಾಸ್ಯಕ್ಕೂ ಕಾರಣವಾಯಿತು. ಒಂದು ಸಮಾಜದ ರಾಜಕೀಯ ಪದ್ದತಿಯನ್ನು

ಮೊಟ್ಟಮೊದಲು ಅದು ಒದಗಿಸಿದ ಸ್ತಿಮಿತತೆ, ಸಮಭಿವೃದ್ಧಿ, ಜನತೆಗದು ಕೊಟ್ಟ ಆಂತರಿಕ ಸ್ವಾತಂತ್ರ್ಯ ಮತ್ತು ಸುವ್ಯವಸ್ಥೆಗಳ ಮೇಲಿಂದಲ್ಲದೆ ಇತರ ಸರಕಾರಗಳ ವಿರುದ್ಧ ಸ್ಥಾಪಿಸಿದ ಸುರಕ್ಷಿತತೆ, ಹೊರಗಿನ ಸ್ಪರ್ಧಾಳುಗಳ ಹಾಗೂ ಶತ್ರುಗಳ ವಿರುದ್ಧ ಅದು ಕಟ್ಟಿದ ಒಕ್ಕಟ್ಟು, ಸಂರಕ್ಷಣ ಹಾಗೂ ಆಕ್ರಮಣಶಕ್ತಿ ಇವುಗಳ ಮೇಲಿಂದಲೂ ಅದನ್ನಳೆಯಬೇಕಾಗುತ್ತದೆ. ಅದು ಹೀಗಿರುವುದು ಎಲ್ಲ ದೃಷ್ಟಿಯಿಂದಲೂ ಮಾನವ್ಯಕ್ಕೆ ಹೆಮ್ಮೆಯುಂಟುಮಾಡುವಂಥದೆನ್ನಲು ಬರದು; ಈ ಬಗೆಯ ರಾಜಕೀಯ ಶಕ್ತಿಯಲ್ಲಿ ಕೀಳಾದ ರಾಷ್ಟ್ರ ಅಥವಾ ಜನತೆ ಪ್ರಾಚೀನ ಗ್ರೀಕರಂತೆಯೂ ಮಧ್ಯಯುಗೀನ ಇಟಾಲಿಯನ್ನರಂತೆಯೂ ತನ್ನನ್ನು ಗೆದ್ದವರಿಗಿಂತ ಆಧ್ಯಾತ್ಮಿಕವಾಗಿಯೂ ಸಾಂಸ್ಕೃತಿಕವಾಗಿಯೂ ಅತ್ಯಂತ ಮೇಲ್ತರಗತಿಯದಾಗಿರಬಲ್ಲುದಲ್ಲದೆ, ಜಯವಡೆದ ಸೈನಿಕ ಸರಕಾರಗಳು, ಅಕ್ರಾಮಕ ಸಮಷ್ಟಿಗಳು ಮತ್ತು ಲೂಟಿಗಾರ ಚಕ್ರಾಧಿಪತ್ಯಗಳಿಗಿಂತ ನಿಜವಾದ ಮಾನವಪ್ರಗತಿಗೆ ಹೆಚ್ಚು ಕೊಡುಗೆಗಳನ್ನು ನೀಡಿರಬಹುದಾಗಿರುತ್ತದೆ. ಆದರೆ ಮಾನವ ಜೀವನವಿನ್ನೂ ಗಣ್ಯವಾಗಿ ಜೈವಿಕವಾಗಿದೆ; (ಪ್ರಾಣಶಕ್ತಿಪ್ರೇರಿತವಾಗಿದೆ, ಪ್ರಾಣಮಯಕೋಶಪ್ರಧಾನವಾಗಿದೆ;) ವಿಸ್ತರಣ, ಧಾರಣ, ಆಕ್ರಮಣ, ಪರಸ್ಪರ ಸ್ವಾಹಾಕಾರಕ್ಕಾಗಿ ಮಾಡುವ ಹೋರಾಟ, ಸ್ವಪ್ರತಿಷ್ಠೆಯ ಜೀವನ ಎಂಬ ಜೀವನದ ಪ್ರಾಥಮಿಕ ನಿಯಮದ ಪ್ರವೃತ್ತಿಗಳಿಂದ ಪ್ರೇರಿತವಾಗಿ ಹರಿಯುತ್ತಿದೆ. ಆದುದರಿಂದ ಆಕ್ರಮಣ ಸಂರಕ್ಷಣಗಳಲ್ಲಿ ಅಶಕ್ತಿಯ, ಸ್ವರಕ್ಷಣೆಗೆ ಅಗತ್ಯವಾದ ಕೇಂದ್ರೀಕೃತವೂ ದಕ್ಷವೂ ಆದ ಐಕ್ಯವನ್ನು ಸಂಘಟಿಸುವುದರಲ್ಲಿ ಅಸಮರ್ಥತೆಯ ಸಾಕ್ಷಿಗಳನ್ನು ಸತತ ಕೊಡುವ ಸಾಮೂಹಿಕ ಮನ ಮತ್ತು ಚೇತನೆ ಸ್ಪಷ್ಟವಾಗಿ ರಾಜಕೀಯ ಕ್ಷೇತ್ರದಲ್ಲಿ ಹಿಮ್ಮೆಟ್ಟುವ ಎರಡನೆಯ ವರ್ಗಕ್ಕೆ ಸೇರಿದ್ದೇ ಸರಿ. ಭಾರತವೆಂದೂ ರಾಷ್ಟ್ರೀಯವಾಗಿಯೂ ರಾಜಕೀಯವಾಗಿಯೂ ಒಂದಾಗಿದ್ದಿಲ್ಲ. ಅದು ಸುಮಾರು ಒಂದು ಸಾವಿರ ವರ್ಷ ಅನಾಗರಿಕ ಜನರ ದಾಳಿಗೀಡಾಗಿದ್ದರೆ ಮತ್ತೊಂದು ಸಾವಿರ ವರ್ಷ ಮೇಲಿಂದ ಮೇಲೆ ಬಂದ ವಿದೇಶೀಯ ಒಡೆಯರಿಗೆ ಆಳಾಗಿತ್ತು. ಆದುದರಿಂದ ರಾಜಕೀಯ ಅಸಾಮರ್ಥ್ಯ ಭಾರತದಲ್ಲಿತ್ತೆಂದು ತೀರ್ಪುಕೊಡುವುದು ಸಹಜವೇ ಆಗಿದೆ; ಭಾರತೀಯರು ರಾಜ ನೀತಿಯಲ್ಲಿ ಹಿಂದುಳಿದಿದ್ದರೆಂಬುದು ನ್ಯಾಯವೇ ಆಗಿದೆ.

ಇಲ್ಲಿ ಪುನಃ ಮೊಟ್ಟಮೊದಲಿನ ಅವಶ್ಯಕತೆ ಎಂದರೆ ಅತಿಶಯೋಕ್ತಿಗಳಿಂದ ದೂರ ಉಳಿಯುವುದು, ನಿಜಸ್ಥಿತಿಯನ್ನು ಸರಿಯಾಗಿ ತಿಳಿದುಕೊಂಬುದು, ಅದರ ಅರ್ಥವನ್ನು ಸರಿಯಾಗಿ ಮಾಡಿಕೊಂಬುದು ಮತ್ತು ಭಾರತದ ಸುದೀರ್ಘ ಇತಿಹಾಸದಲ್ಲಿ ಸರಿಯಾದ ತರುಣೋಪಾಯ ಸಿಗದೆ ಇರುವ ಸಮಸ್ಯೆಯಲ್ಲಿಯ ಪ್ರವೃತ್ತಿಗಳನ್ನೂ ತತ್ವಗಳನ್ನೂ ಅರಿತುಕೊಂಬುದು ಪ್ರಥಮ ಅವಶ್ಯಕತೆ, ಮೊದಲನೆಯದಾಗಿ ಒಂದು ಜನದ ಹಾಗೂ ನಾಗರಿಕತೆಯ ಮಹತ್ವವನ್ನು ಅದರ ಸೈನಿಕ ಆಕ್ರಾಮತೆ, ವಿದೇಶ ವಿಜಯ ಪ್ರಮಾಣ, ಮಿಕ್ಕ ರಾಷ್ಟ್ರಗಳ ವಿರುದ್ಧ ಮಾಡಿದ ಯುದ್ಧಗಳಲ್ಲಿ ಅದರ ಗೆಲುವು, ಅದರ ಸಂಘಟಿತವಾದ ಸಂಗ್ರಾಹಕ ಹಾಗೂ ಅಪಹಾರಕ ಮೂಲ ಪ್ರವೃತ್ತಿಗಳು,

ಪರರಾಜ್ಯ ಸ್ವಾಧೀನೀಕರಣ ಮತ್ತು ಶೋಷಣಗಳತ್ತ ಅದರ ಅಪ್ರತಿಹತ ಮುನ್ನಡೆ ಇವು ಕೀಳೆನಿಸುವುದೆಂಬುದನ್ನು ಒಪ್ಪಿಕೊಳ್ಳಲೇಬೇಕು. ಯಾವ ಕಾಲದಲ್ಲೂ ತನ್ನ ಗಡಿಮೀರಿ ಆಕ್ರಾಮಕ, ಸೈನಿಕ ಹಾಗೂ ರಾಜಕೀಯ ವಿಸ್ತರಣಕ್ಕೆ ಭಾರತ ಹೊರಟದ್ದು ಕಂಡುಬರುವುದಿಲ್ಲ; ಭಾರತೀಯ ಮಹಾಸಿದ್ಧಿಗಳನ್ನು ಹೇಳುವ ಕತೆಗಳಲ್ಲೆಲ್ಲೂ ಜಗತ್ತನ್ನಾಳುವ ಮಹಾಕಾವ್ಯ, ದೂರದೇಶಗಳ ಮೇಲೆ ದಂಡೆತ್ತಿ ಹೋದ ಮಹಾಕಥೆ ಅಥವಾ ವಿಕಸ್ವರ ಔಪನಿವೇಶಿಕ ಚಕ್ರಾಧಿಪತ್ಯವನ್ನು ಕಟ್ಟಿದ ಮಹಾಖ್ಯಾನ ಬರೆಯಲ್ಪಟ್ಟದ್ದು ಕಾಣಿಸುವುದಿಲ್ಲ. ಭಾರತ ನಡೆಸಿದ ವಿಸ್ತರಣ, ವಿಜಯ, ದಂಡಯಾತ್ರೆಗಳ ಒಂದೇ ಒಂದು ಮಹಾಪ್ರಯತ್ನವೆಂದರೆ ತನ್ನ ಸಂಸ್ಕೃತಿಯ ವಿಸ್ತರಣ ಬೌದ್ಧಕಲ್ಪನೆಯಿಂದ ಪೌರಸ್ತ್ಯ ಪ್ರಪಂಚವನ್ನು ದಾಳಿಮಾಡಿ ಗೆದ್ದು ತನ್ನ ಆಧ್ಯಾತ್ಮಿಕತೆ, ಕಲೆ ಮತ್ತು ವಿಚಾರ ಬಲಗಳನ್ನು ಅಲ್ಲಿನುಗ್ಗಿಸಿದ್ದೇ ಆಗಿದೆ. ಈ ದಂಡಯಾತ್ರೆಯಾದರೋ ಶಾಂತಿಯಾತ್ರೆಯಾಗಿತ್ತಲ್ಲದೆ, ಯುದ್ಧಯಾತ್ರೆಯಾಗಿದ್ದಿಲ್ಲ; ಏಕೆಂದರೆ, ಆಧುನಿಕ ಸಾಮ್ರಾಜ್ಯ ಸತ್ತೆ ಹೆಮ್ಮೆ ಇಲ್ಲವೆ ನೆವಮಾಡಿಕೊಂಬಂತೆ ಬಲಪ್ರಯೋಗ ಮತ್ತು ಭೌತಿಕ ವಿಜಯಗಳಿಂದ ಒಂದು ಆಧ್ಯಾತ್ಮಿಕ ನಾಗರಿಕತೆಯನ್ನು ಹರಡುವುದು ಭಾರತದ ಬಗೆಯ ಹಾಗೂ ಭಾವದ ಪ್ರಾಚೀನ ಎರಕಕ್ಕೂ ಧರ್ಮಬುದ್ಧಿಗೂ ಅಹಿತಕರವಾಗಿತ್ತು. ಸುತ್ತುಮುತ್ತಲಿನ ನಡುಗಡ್ಡೆಗಳಿಗೆ ಭಾರತೀಯ ರಕ್ತವನ್ನೂ ಸಂಸ್ಕೃತಿಯನ್ನೂ ಮೇಲಿಂದ ಮೇಲೆ ಸಾಲುಸಾಲಾಗಿ ಸಾಗಿದ ಔಪನಿವೇಶಿಕ ದಂಡಯಾತ್ರೆಗಳು ಒಯ್ದವೆಂಬುದೇನೋ ನಿಜ; ಆದರೆ ಪೂರ್ವ ಪಶ್ಚಿಮ ಕರಾವಳಿಗಳಿಂದ ಹೊರಟ ಹಡಗುಗಳು ಭಾರತೀಯ ಸಾಮ್ರಾಜ್ಯಕ್ಕೆ ಆ ಹೊರನಾಡುಗಳನ್ನು ಸೇರಿಸಲು ನಿಯುಕ್ತರಾದ ದಾಳಿಗಾರರ ಹಡಗುಗಳಾಗಿರದೆ ಇನ್ನೂ ಸುಸಂಸ್ಕೃತರಾಗದಿದ್ದ ಜನಗಳಿಗಾಗಿ ಭಾರತೀಯ ಧರ್ಮ, ವಾಸ್ತುಶಿಲ್ಪ, ಕಲೆ, ಪದ್ಯ, ವಿಚಾರ, ಜೀವನ, ರೀತಿನೀತಿಗಳನ್ನು ಒಯ್ಯುತ್ತಿದ್ದ ದೇಶಭ್ರಷ್ಟರ ಅಥವಾ ಸಾಹಸಿಕರ ಹಡಗುಗಳಾಗಿದ್ದವು. ಸಾಮ್ರಾಜ್ಯದ ಮತ್ತು ಅದಕ್ಕೂ ಹೆಚ್ಚಾಗಿ ಜಾಗತಿಕ ಚಕ್ರಾಧಿಪತ್ಯದ ಕಲ್ಪನೆ ಭಾರತ ಮನಕ್ಕೆ ಹೊಳೆಯದೆ ಇರಲಿಲ್ಲ; ಆದರೆ ಅದರ ಜಗತ್ತೆಂದರೆ ಭಾರತೀಯ ಜಗತ್ತು ಮತ್ತು ಅದರ ಗುರಿಯೆಂದರೆ ಭಾರತೀಯರ ಸಾಮ್ರಾಜ್ಯಕ ಐಕ್ಯವನ್ನು ಸ್ಥಾಪಿಸುವುದೇ ಆಗಿತ್ತು.

ಈ ಕಲ್ಪನೆ, ಈ ಅವಶ್ಯಕತೆಯ ಪ್ರಜ್ಞೆ, ಅದರ ಸಿದ್ಧಿಗಾಗಿ ಸತತವೂ ಇದ್ದ ಪ್ರೇರಣೆ ಭಾರತೇತಿಹಾಸದ ಉದ್ದಕ್ಕೂ ಕಂಡುಬರುತ್ತದೆ; ಪ್ರಾಚೀನ ವೈದಿಕ ಯುಗದಿಂದ ರಾಮಾಯಣ–ಮಹಾಭಾರತಗಳಲ್ಲಿ ಕಾಣುವ ವೀರಪರಂಪರೆಯ ಯುಗದ ಮೂಲಕ ಅಂಥ ಅಂತಃಪ್ರೇರಣೆ ಸಾಮ್ರಾಜ್ಯಕ ಮೌರ್ಯ–ಗುಪ್ತರ ಪ್ರಯತ್ನದಿಂದ ಹಿಡಿದು ಮೊಗಲ ಏಕೀಕರಣದವರೆಗೂ ಪೇಶ್ವೆಗಳ ಕೊನೆಯ ಮಹತ್ವಾಕಾಂಕ್ಷೆಯನಕವೂ ಕೊನೆಯ ಅಪಜಯ ಒದಗಿ, ವಿದೇಶೀಯ ನೊಗದಡಿಯಲ್ಲಿ ಪರಸ್ಪರ ಹೋರುತ್ತಿದ್ದ ಎಲ್ಲಬಲಗಳೂ ಸಮತಟ್ಟಾಗಿ, ಸ್ವತಂತ್ರಜನರ ಸ್ವತಂತ್ರ ಐಕ್ಯದ ಬದಲು ಸಮರೂಪದ ಸಾರ್ವತ್ರಿಕ ದಾಸ್ಯ ಹಿಡಿಯುವವರೆಗೂ ಅಂತರ್ವಾಹಿನಿಯಾಗಿ ಸಾಗುತ್ತಲೇ ಇತ್ತು. ಆ ಸುದೀರ್ಘ

ಪ್ರಯತ್ನದ ಮಂದಗತಿ, ತೊಂದರೆ, ವಿಧಾನದ ಏರಿಳಿತಗಳು ಮತ್ತು ಉರುಳುವಿಕೆ ಇವು ನಾಗರಿಕತೆಯಲ್ಲಿಯ ಮೂಲಭೂತ ದೌರ್ಬಲ್ಯದಿಂದ ಹುಟ್ಟಿದವೋ ಅಥವಾ ಜನರ ರಾಜಕೀಯ ಜಾಗ್ರತಿ ಹಾಗೂ ಶಕ್ತಿಯಲ್ಲಿಯ ನ್ಯೂನತೆಯಿಂದಾದವೋ ಅಥವಾ ಇತರ ಕಾರಣಗಳಿಂದ ಸಂಭವಿಸಿದವೋ ಎಂಬುದು ನಮ್ಮೆದುರಿರುವ ಪ್ರಶ್ನೆ. ಭಾರತೀಯರ ಐಕ್ಯ ಸಾಧಿಸಲಾಗದ ದೌರ್ಬಲ್ಯದ ಬಗ್ಗೆ, ಸರ್ವಸಾಧಾರಣ ದೇಶಪ್ರೇಮದ ಅಭಾವದ ಬಗ್ಗೆ, ಅದು ಈಗ ತಾನೇ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಹುಟ್ಟಿದ ಬಗ್ಗೆ, ಮತ್ತು ಧರ್ಮ ಹಾಗೂ ಜಾತಿಗಳು ಹೇರಿದ್ದ ವಿಭಜನೆಯ ಬಗ್ಗೆ ಬಹಳವಾಗಿ ಹೇಳಲಾಗಿದೆ, ಬರೆಯಲಾಗಿದೆ. ಈ ಶಾಪೋಕ್ತಿಗಳೆಲ್ಲವನ್ನೂ ಅವುಗಳ ಸಂಪೂರ್ಣ ವ್ಯಾಪಕತೆಯಲ್ಲಿ ಒಪ್ಪಿಕೊಂಡರೂ ಅವೆಲ್ಲವೂ ಪೂರ್ಣಸತ್ಯಗಳಲ್ಲ, ಇಲ್ಲವೆ ಸಮರ್ಪಕವಾಗಿ ವಿವೃತವಾಗಿಲ್ಲ ಅಥವಾ ವಿಷಯಕ್ಕೆ ಮುಖ್ಯವಾಗಿ ಅನ್ವಯಿಸುವುದಿಲ್ಲ ಅವೆಲ್ಲ ಕೇವಲ ಬಾಹ್ಯಚಿಹ್ನೆಗಳಷ್ಟೇ; ಆಳವಾದ ಕಾರಣಗಳನ್ನು ನಾವಿನ್ನು ಹುಡುಕಬೇಕಾಗಿದೆ.

## ೨. ಯುರೋಪಿಯನ್ನರ ಐಕ್ಯಕಲ್ಪನೆಯ ಕಾಲ್ಪನಿಕತೆ

ಭಾರತದ ರಾಜಕೀಯ ಅನೈಕ್ಯಕ್ಕೆ ಸಾಮಾನ್ಯವಾಗಿ ಒಂದು ಉತ್ತರವನ್ನು ಕೊಡುತ್ತಾರೆ. ಅದೆಂದರೆ, ಭಾರತ ವಸ್ತುತಃ ಯುರೋಪಿನಷ್ಟೇ ವಿಸ್ತೃತವಾದ ಒಂದು ಖಂಡ; ಅದರಲ್ಲಿ ಅನೇಕ ಜನಾಂಗಗಳಿವೆ ಮತ್ತು ಐಕ್ಯದ ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ಯುರೋಪಿನಲ್ಲಿದ್ದಷ್ಟೇ ಹೆಚ್ಚು ಅಥವಾ ತಕ್ಕ ಮಟ್ಟಿನ ತೊಂದರೆಗಳಿವೆ. ಹೀಗಿರುವಾಗ ಯುರೋಪಿನ ಐಕ್ಯಕಲ್ಪನೆ ಆದರ್ಶಮಟ್ಟದಲ್ಲಿ ಇನ್ನೂ ಅಪರಿಣಾಮಕ ಭೂತಚ್ಛಾಯೆಯಾಗಿರುವುದು, ವ್ಯವಹಾರದಲ್ಲಿ ಇಂದಿಗೂ ಅಸಾಧ್ಯವಾಗಿರುವುದು ಪಾಶ್ಚಾತ್ಯ ನಾಗರಿಕತೆಯ ಅಪರಿಪೂರ್ಣತೆಗಾಗಲಿ ಯೌರೋಪ್ಯರ ರಾಜಕೀಯ ಅಪಾಟವಕ್ಕಾಗಲಿ ಪ್ರಮಾಣವಲ್ಲವೆಂದಾಗ ಭಾರತ ಜನಾಂಗಗಳ ಇತಿಹಾಸವನ್ನು ಮುದ್ರಿಸಿದ ಅದಕ್ಕೂ ಹೆಚ್ಚು ಸ್ಪಷ್ಟವಾದ ಐಕ್ಯ ಅಥವಾ ಕೊನೆಯ ಪಕ್ಷ ಏಕೀಕರಣದ ಆದರ್ಶಕ್ಕೆ ಅದರ ಸಿದ್ಧಿಗಾಗಿ ಎಡೆಬಿಡದೆ ಮಾಡಿದ ಪ್ರಯತ್ನಕ್ಕೆ ಮತ್ತು ಇನ್ನೇನು ಜಯ ಅತಿ ಸಮೀಪದಲ್ಲಿದೆ ಎನ್ನುವ ಸ್ಥಿತಿ ಪದೇ ಪದೇ ಉಂಟಾದುದಕ್ಕೆ ತದ್ಭಿನ್ನ ಮೂಲ್ಯಪದ್ಧತಿಯನ್ನು, ಮಾನದಂಡವನ್ನು ಅನ್ವಯಿಸುವುದು ನ್ಯಾಯವಲ್ಲ. ಈ ವಾದದಲ್ಲಿ ಕೆಲಮಟ್ಟಿಗೆ ಬಲವಿದೆ; ಆದರೆ ಅದು ಸ್ವರೂಪತಃ ಸಾಕಷ್ಟು ಸಮರ್ಪಕವಾಗಿಲ್ಲ ಏಕೆಂದರೆ, ಕೊಟ್ಟ ಉದಾಹರಣೆ ಅಸಂಪೂರ್ಣ ಹಾಗೂ ಪರಿಸ್ಥಿತಿ ಅದೇ ತರಹದ್ದಲ್ಲ. ಯೌರೋಪ್ಯ ಜನಾಂಗಗಳು ತಮ್ಮ ಸಾಮೂಹಿಕ ವ್ಯಕ್ತಿತ್ವದಲ್ಲಿ ಪರಸ್ಪರ ಅತಿ ಹರಿತವಾದ ಭೇದವುಳ್ಳಂಥವು; ಮತ್ತು ಕ್ರೈಸ್ತ ಧರ್ಮದಲ್ಲಿ ಅವುಗಳ ಆಧ್ಯಾತ್ಮಿಕ ಐಕ್ಯ ಅಥವಾ ಸರ್ವಸಾಧಾರಣವಾದ ಯೌರೋಪ್ಯ ನಾಗರಿಕತೆಯಲ್ಲಿ ಅವುಗಳ ಸಾಂಸ್ಕೃತಿಕ ಏಕತ್ವವು

ಭಾರತದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯದಷ್ಟು ನಿಜವೂ ಪೂರ್ಣವೂ ಆಗಿರಲಿಲ್ಲ; ಅದು ಅವುಗಳ ಬಾಳಿನ ಕೇಂದ್ರವೂ ಎನಿಸಿರಲಿಲ್ಲ, ಅದರ ತಳಹದಿ ಅಥವಾ ಆಧಾರವೂ ಆಗಿರಲಿಲ್ಲ; ಅದರ ಹೊರ ಆವರಣ ಇಲ್ಲವೆ ಮೇಲ್ಪೊರೆಯಷ್ಟೇ ಆಗಿತ್ತು. ಅವುಗಳ ಅಸ್ತಿತ್ವದ ಅಡಿ ರಾಜಕೀಯ ಮತ್ತು ಆರ್ಥಿಕ ಜೀವನದಲ್ಲಿತ್ತು. ಆ ಜೀವನ ಪ್ರತಿ ದೇಶದಲ್ಲೂ ಬೇರೆ ಬೇರೆಯಾಗಿತ್ತಲ್ಲದೆ, ಯುರೋಪನ್ನು ವಿಭಕ್ತವನ್ನಾಗಿಯೂ ಪದೇ ಪದೇ ಯುದ್ಧಮಾಡುವ ರಾಷ್ಟ್ರಗಳನ್ನಾಗಿಯೂ ಮಾಡಿದ್ದು ಈ ರಾಜಕೀಯ ಜಾಗೃತಿಯ ಸಾಮರ್ಥ್ಯವೇ. ಈಗಷ್ಟೇ ರಾಜಕೀಯ ಚಟುವಟಿಕೆಗಳ ಸಮಷ್ಟಿಯಿಂದ, ಇಡಿ ಯುರೋಪಿನ ಸಾರ್ವತ್ರಿಕ ಆರ್ಥಿಕ ಪರಾವಲಂಬನದಿಂದ ಕಟ್ಟಕಡೆಗೆ ಉದಯೋನ್ಮುಖವೂ ಅಪರಿಣಾಮಕರವೂ ಆದ ರಾಷ್ಟ್ರಸಂಘ ಹುಟ್ಟಿಕೊಂಡು ಯೌರೋಪ್ಯ ಜನಾಂಗಗಳ ಸಾಧಾರಣ ಹಿತಗಳ ಸಾಧನೆಗಾಗಿ ದೀರ್ಘಕಾಲಿಕ ಪ್ರತ್ಯೇಕತೆಯಿಂದ ಹುಟ್ಟಿದ ಬುದ್ಧಿಯನ್ನು ವ್ಯರ್ಥವಾಗಿ ಅನ್ವಯಿಸುತ್ತಿದೆ. ಆದರೆ ಭಾರತದಲ್ಲಿ ಬಹಳ ಪೂರ್ವಕಾಲದಲ್ಲೇ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವನ್ನು ಪೂರ್ಣಗೊಳಿಸಿ ಹಿಮಾಲಯದ ಮತ್ತು ಎರಡು ಮಹಾಸಾಗರಗಳ ನಡುವಣ ಎಲ್ಲ ಮಾನವ್ಯ ಮಹಾಸೃಷ್ಟಿಯ ಬಾಳಿನ ಅಂತಃಸತ್ವವನ್ನಾಗಿ ಮಾಡಲಾಗಿತ್ತು. ಭಾರತದ ಪ್ರಾಚೀನ ಜನಗಳು ಎಂದೂ ಅಷ್ಟು ಭಿನ್ನ ರಾಷ್ಟ್ರಗಳೆನಿಸಿರಲಿಲ್ಲ, ಅಷ್ಟು ತೀವ್ರವಾಗಿ ರಾಜಕೀಯ ಹಾಗೂ ಆರ್ಥಿಕ ಜೀವನದಲ್ಲಿ ಪ್ರತ್ಯೇಕರಾಗಿದಿಲ್ಲ. ಅವರು ಒಂದು ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಮಹಾರಾಷ್ಟ್ರದ ಉಪಜನಗಳಾಗಿ, ತಮ್ಮ ಬಲವಾದ ಭೇದಮತಿಯಿಂದಲೂ ಭೌತಿಕವಾಗಿ ಸಾಗರಪರ್ವತಗಳಿಂದಲೂ ಬೇರೆಯ ದೇಶದವರಿಂದ ಭಿನ್ನರಾಗಿ, ತಮ್ಮದೇ ಆದ ವಿಲಕ್ಷಣವೂ ಸಾಧಾರಣವೂ ಆದ ಧರ್ಮ–ಸಂಸ್ಕೃತಿಗಳನ್ನು ಬೆಳೆಸಿಕೊಂಡಿದ್ದರು. ಹೀಗಿರುವುದರಿಂದ ದೇಶ ವಿಸ್ತಾರ ಎಷ್ಟೇ ಇದ್ದರೂ ವ್ಯಾವಹಾರಿಕ ತೊಂದರೆಗಳೆಷ್ಟೇ ಇದ್ದರೂ ಯುರೋಪಿನ ಐಕ್ಯ ಸಾಧನೆಗಿಂತ ಹೆಚ್ಚು ಸುಲಭವಾಗಿ ರಾಜಕೀಯ ಐಕ್ಯವನ್ನು ಸಾಧಿಸಿಕೊಳ್ಳಬಹುದಾಗಿತ್ತು. ಈ ಕಾರ್ಯದಲ್ಲಾದ ಅಪಜಯದ ಕಾರಣವನ್ನು ಹುಡುಕಲು ಬಹಳ ಆಳ ಮುಳುಗಬೇಕು ಅದು ಆ ಸಮಸ್ಯೆಯ ಅವಲೋಕನದ ರೀತಿಗೂ ಅದರ ಪ್ರಯತ್ನಕ್ಕೆ ವ್ಯಾವಹಾರಿಕವಾಗಿ ಕೊಟ್ಟ ರೂಪಕ್ಕೂ ಪರಸ್ಪರ ಇರುವ ವಿರೋಧದಲ್ಲೇ ಇದೆ; ಆ ಪ್ರಯತ್ನ ಪಡೆದ ವಾಸ್ತವಿಕ ಸ್ವರೂಪದಲ್ಲಿ ಜನರ ವಿಲಕ್ಷಣ ಮನೋಧರ್ಮದ ವ್ಯಾಹತಿಯಿರುವುದು ಕಂಡುಬರುತ್ತದೆ.

## ೩. ಭಾರತ ಭಾರತವೇ ಆಗಿ ಉಳಿದಿರುವುದರ ಗುಟ್ಟು

ಭಾರತೀಯ ಮನದ ಇಡಿ ಬುಡವೇ ಆಧ್ಯಾತ್ಮಿಕ ಹಾಗೂ ಅಂತರ್ಮುಖ. ಆತ್ಮಾಂತರಾತ್ಮಗಳ ಅಂಶಗಳನ್ನು ಮೊಟ್ಟಮೊದಲು ಹುಡುಕುವುದೂ ಉಳಿದೆಲ್ಲವನ್ನೂ ಗೌಣವೆಂದು ಗಣಿಸುವುದೂ ಅದರ ಸಹಜಪ್ರವೃತ್ತಿ. ಆತ್ಮೇತರ ಪದಾರ್ಥಗಳು

ಪರಾವಲಂಬಿಗಳು, ಉಚ್ಚಜ್ಞಾನದ ದೃಷ್ಟಿಯಲ್ಲಿ ಹಿಡಿದು ಅಳೆದು ನೋಡಲ್ಪಡತಕ್ಕವು; ಅವು ಕೇವಲ ಸಾಧನರೂಪದವು, ಪ್ರಾಥಮಿಕ ಅವಶ್ಯಕತೆಗಳು, ಮೊದಲು ತೊದಲುವ ಕ್ಷೇತ್ರಗಳು ಅಥವಾ ಊರುಗೋಲುಗಳು ಗಂಭೀರತರವಾದ ಆಧ್ಯಾತ್ಮಿಕ ಗುರಿಗೆ ಜೋತುಬಿದ್ದಂಥವುಗಳು. ತನ್ನಲ್ಲಿಯ ಸತ್ವದಿಂದ ಯಾವುದನ್ನು ನಿರ್ಮಿಸುವಾಗಲೂ ಮೊದಲು ಭಾರತ ತನ್ನ ಒಳವಗೆಯಲ್ಲಿ ಅದನ್ನು ಸೃಜಿಸಿಕೊಂಡು ಬಳಿಕ ಅದರ ಇತರ ಅಂಗಗಳ ಸೃಷ್ಟಿಗೆ ಕೈಹಾಕುವ ಪ್ರವೃತ್ತಿಯುಳ್ಳದ್ದಾಗಿದೆ. ಈ ಮನೋಧರ್ಮ, ಒಳಗಿಂದ ಹೊರಮುಖವಾಗಿ ನಿರ್ಮಿಸಲುಜ್ಜುಗಿಸುವ ತತ್ಸಹಜವಾದ ಈ ಪ್ರವೃತ್ತಿ ಭಾರತಕ್ಕೆ ಸ್ವಾಭಾವಿಕವೆಂದೊಪ್ಪಿದ ಬಳಿಕ ಅದು ಮೊಟ್ಟಮೊದಲು ಸಾಧಿಸಿದ ಒಕ್ಕಟ್ಟು ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕವೇ ಆಗಿರುವುದು ಸಹಜ. ಅದೆಂದೂ ರೋಂ ಅಥವಾ ಪ್ರಾಚೀನ ಪರ್ಷಿಯದಲ್ಲಿಯಂತೆ ಒಂದು ಚೈತ್ರರಾಜ್ಯದಿಂದಾಗಲಿ, ಸೈನಿಕ ಹಾಗೂ ಸಂಘಟಕ ಜನರ ಪ್ರತಿಭೆಯಿಂದಾಗಲಿ ಹೊರಗಿಂದ ಹೇರಿದ, ಕೇಂದ್ರೀಕರಿಸಿದ ಅಥವಾ ನಿರ್ಮಿಸಿದ ಶಾಸನ ಬಲದಿಂದಲಾಗಲಿ ಸಾಧಿಸಬಲ್ಲ ರಾಜಕೀಯ ಐಕ್ಯವಾಗಲಾರದು. ಇದೊಂದು ತಪ್ಪೆಂದಾಗಲಿ, ಭಾರತೀಯ ಬಗೆಯ ಅವ್ಯವಹಾರ್ಯ ಮುಖಕ್ಕಿದೊಂದು ಸಾಕ್ಷಿಯೆಂದಾಗಲಿ ಒಂದೇ ಒಂದು ರಾಜಕೀಯ ನಿಕಾಯವನ್ನು ಮೊದಲು ನಿರ್ಮಿಸಿಕೊಂಡಿದ್ದರೆ ಅನಂತರ ಅದನ್ನಾಧರಿಸಿ ಆಧ್ಯಾತ್ಮಿಕ ಐಕ್ಯವು ಸುದೃಢವಾಗಿ ಭಾರತೀಯ ರಾಷ್ಟ್ರೀಯ ಸಾಮ್ರಾಜ್ಯದಲ್ಲಿ ಬೆಳೆದು ನಿಲ್ಲುತ್ತಿತ್ತೆಂದಾಗಲಿ ಹೇಳಿದರೆ, ನ್ಯಾಯುವಾಗಲಾರದು. ಮೊದಲು ಎದುರಾದ ಸಮಸ್ಯೆಯೆಂದರೆ ವಿಶಾಲ ದೇಶವೊಂದರಲ್ಲಿ ನೂರಾರು ರಾಜ್ಯಗಳು, ಕುಲಗಳು, ಜನಾಂಗಗಳು, ಕುಲಪುಂಜಗಳು, ಗೋತ್ರಜರು ನೆಲೆಸಿದ್ದು, ಈ ಅಂಶದಲ್ಲಿ ಪ್ರಾಚೀನ ಭಾರತ ಮತ್ತೊಂದು ಗ್ರೀಸ್ ಎನ್ನಬಹುದು; ಆದರೆ ಇಂದಿನ ಯುರೋಪಿನಷ್ಟು ವಿಸ್ತೃತವಾದ ಗ್ರೀಸ್ ಆಗಿತ್ತದು. ಮೂಲಭೂತ ಏಕಭಾವವನ್ನು ಹುಟ್ಟಿಸಲು ಗ್ರೀಸಿನಲ್ಲಿಯಂತೆ ಇಲ್ಲಿಯೂ ಸಾಂಸ್ಕೃತಿಕ ಹೆಲೆನೀಯ ಐಕ್ಯವನ್ನು ಸಾಧಿಸಿಕೊಂಬುದು ಅವಶ್ಯಕ. ಅದರಲ್ಲೂ ಅತಿ ಪ್ರಮುಖವಾಗಿ ಈ ಎಲ್ಲ ಜನಗಳ ಉದ್ದೇಶಪೂರ್ವಕವಾದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವು ಮೊದಲು ಬೇಕಾದದ್ದು. ಇದು ಸ್ಥಾಯಿಯಾದ ಯಾವ ಐಕ್ಯಕ್ಕಾದರೂ ಬೇಕೇ ಬೇಕಾದ ಅಪರಿಹಾರ್ಯ ಶರ್ತ. ಈ ವಿಷಯದಲ್ಲಿ ಭಾರತೀಯ ಬಗೆಯ ಮತ್ತು ಅದರ ಋಷಿಗಳ ಮೂಲಭಾವ ಸಮರ್ಪಕವಾದುದಾಗಿತ್ತು. ಸೈನಿಕ ಹಾಗೂ ರಾಜಕೀಯ ಸಾಧನಗಳಿಂದ ಪ್ರಾಚೀನ ಭಾರತದ ಜನಾಂಗಗಳಲ್ಲಿ ರೋಮಿನಲ್ಲಿ ಸಾಧಿಸಿದಂತೆ ಬಾಹ್ಯ ಸಾಮ್ರಾಜ್ಯಕ ಐಕ್ಯವನ್ನು ಸಂಸ್ಥಾಪಿಸಬಹುದಾಗಿತ್ತೆಂದು ಒಮ್ಮೆ ನಾವು ಭಾವಿಸಿದರೂ ರೋಮಿನ ಐಕ್ಯ ಚಿರಂಜೀವಿಯಾಗಲಿಲ್ಲ, ರೋಮನ್ನರ ವಿಜಯ ಸಂಘಟನೆಗಳಿಂದ ಸ್ಥಾಪಿಸಲ್ಪಟ್ಟ ಪ್ರಾಚೀನ ಇಟೆಲಿಯ ಐಕ್ಯ ಬಹುಕಾಲ ಬದುಕಲಿಲ್ಲ ಮತ್ತು ಅದೇ ಪ್ರಕಾರ ವಿಶಾಲ ಭಾರತದಲ್ಲಿ ಪೂರ್ವಸಿದ್ಧವಾದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವಿಲ್ಲದೆ ಪ್ರಯತ್ನಿಸಿದ್ದರೆ ಹಾಗೆ ಸಾಧಿಸಿದ ರಾಜಕೀಯ ಐಕ್ಯ ತಾಳುತ್ತಿದ್ದಿಲ್ಲವೆಂಬುದನ್ನೂ

ನಾವು ಮರೆಯತಕ್ಕದ್ದಲ್ಲ. ಹಾಗಲ್ಲದೆ, ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವನ್ನು ಅತಿ ಮುಖ್ಯವೆಂದೂ ರಾಜಕೀಯ ಹಾಗೂ ಬಾಹ್ಯ ಐಕ್ಯ ಬಹಳ ಕ್ಷುಲ್ಲಕವೆಂದೂ ತಿಳಿದಿದ್ದರೆ ಒಳಿತಾಗುತ್ತಿತ್ತೆಂಬುದೂ ಸರಿಯಲ್ಲ; ಏಕೆಂದರೆ, ಅಂಥ ಪರಿಸ್ಥಿತಿಯಲ್ಲಿ ಅದರ ಪರಿಣಾಮ ಪೂರ ವಿನಾಶಕವೂ ಲಾಭರಹಿತವೂ ಆಗುತ್ತಿತ್ತು. ಈ ಅನುಚ್ಛೇದ್ಯ ಅಧ್ಯಾತ್ಮ ಮುದ್ರಾಂಕದ ಮೂಲಭೂತ ವೈಲಕ್ಷಣ್ಯದ ದೆಸೆಯಿಂದಲೇ, ಈ ನಾನಾ ಪ್ರಕಾರಗಳ ಅಂತರ್ಗತ ಏಕತೆಯ ದೆಸೆಯಿಂದಲೇ ಇನ್ನೂ ಒಂದೇ ಒಂದಾದ ಸಂಘಟಿತ ರಾಜಕೀಯ ರಾಷ್ಟ್ರವೆನಿಸದೆ ಹೋದರೂ ಭಾರತ ಬದುಕಿ ಉಳಿದಿದೆ ಮತ್ತು ಭಾರತ ಭಾರತವಾಗಿಯೇ ಇದೆ.

## ೪. ಪಾಶ್ಚಾತ್ಯ ಬಗೆ ಅರಿಯಲೊಪ್ಪದ ಸತ್ಯ

ಎಷ್ಟೇ ಹೇಳಿದರೂ ಚಿರಂಜೀವಿಯಾಗಿ ಉಳಿಯುವ ಐಕ್ಯವೆಂದರೆ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವೊಂದೇ. ಅದನ್ನು ಉಳಿಸಿಕೊಳ್ಳುವುದು ಸತತ ಪ್ರಯತ್ನ ಮುಖವಾದ ಬಗೆ ಮತ್ತು ಆತ್ಮಗಳಿಂದ ಸಾಧ್ಯವಾದಷ್ಟು ಚಿರಂಜೀವಿಯಾದ ಶರೀರ ಮತ್ತು ಬಾಹ್ಯ ಸಂಘಟನಗಳಿಂದ ಸಾಧ್ಯವಾಗದು. ಒಂದು ಜನದ ಆತ್ಮಬದುಕಿ ಉಳಿಯುವುದು ಅಂಥ ಚೇತನೆ–ಚೇತಸ್ಸುಗಳಿಂದಲೇ. ಪಾಶ್ಚಾತ್ಯರ ಭಾವನಿಷ್ಠ ಮನ ಈ ಸತ್ಯವನ್ನು ಅರಿಯಲು ಅಥವಾ ಒಪ್ಪಲು ಸಿದ್ಧವಾಗಲಾರದು; ಆದರೂ ಅದರ ಪ್ರಮಾಣಗಳು ಮಾತ್ರ ಯುಗಯುಗಗಳ ಇಡಿ ಕತೆಯ ಉದ್ದಕ್ಕೂ ಬರೆಯಲ್ಪಟ್ಟಿವೆ. ಹಳೆಯ ರಾಷ್ಟ್ರಗಳೂ ಭಾರತ ಸಮಕಾಲೀನ ರಾಷ್ಟ್ರಗಳೂ ಕಿರಿಯ ರಾಷ್ಟ್ರಗಳೂ ಸತ್ತುಹೋಗಿ ಅವುಗಳ ಸ್ಮಾರಕಗಳು ಮಾತ್ರ ಈಗ ಉಳಿದಿವೆ. ಗ್ರೀಸ್ ಈಜಿಪ್ಟುಗಳು ಭೂಪಠ ಹಾಗೂ ಹೆಸರಿನಲ್ಲಿ ಮಾತ್ರ ಉಳಿದಿವೆ. ಕೈರೋ ಅಥವಾ ಅಥೆನ್ಸಿನಲ್ಲಿ ನಾವು ಈಗ ಕಾಣುವ ಮೆಂಫಿಸ್ಸನ್ನು ಕಟ್ಟಿದ್ದು ಹೆಲಾಸಿನ ಆತ್ಮವಾಗಲಿ ಗಭೀರತರವಾದ ರಾಷ್ಟ್ರಾತ್ಮವಾಗಲಿ ಅಲ್ಲ. ಮೆಡಿಟರೇನಿಯನ್ ಜನಾಂಗಗಳ ಮೇಲೆ ರೋಂ ರಾಜಕೀಯ ಹಾಗೂ ಕೇವಲ ಬಾಹ್ಯವೆನಿಸಿದ ಸಾಂಸ್ಕೃತಿಕ ಐಕವನ್ನು ಹೇರಿತು. ಆದರೆ ಅವುಗಳ ಸಚೇತನ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವನ್ನದು ನಿರ್ಮಿಸಲಾರದಾಯಿತು; ಆದುದರಿಂದಲೇ ಪೂರ್ವವು ಪಶ್ಚಿಮದ ತಳಿಕೆಯನ್ನು ಹರಿದುಕೊಂಡಿತು. ಆಫ್ರಿಕವು ರೋಮಿನ ಆಳಿಕೆಯ ಕುರುಹನ್ನು ಉಳಿಸಿಕೊಳ್ಳದಾಯಿತು; ಈಗಲೂ ಲ್ಯಾಟಿನ್ ಎಂದು ಕರೆಯಲ್ಪಡುವ ಪಾಶ್ಚಾತ್ಯ ರಾಷ್ಟ್ರಗಳು ಕೂಡ ಅನಾಗರಿಕ ದಾಳಿಗಾರರನ್ನು ಎದುರಿಸಲಾರದಾಗಿ, ಆಧುನಿಕ ಇಟಲಿ, ಸ್ಪೇನ್ ಮತ್ತು ಫ್ರಾನ್ಸ್ ಆಗಲು ವಿದೇಶೀಯ ಚೈತನ್ಯವನ್ನು ಬಳಸಿಕೊಂಡು ಹೊಸದಾಗಿ ಹುಟ್ಟಬೇಕಾಯಿತು. ಆದರೆ ಭಾರತವು ಇನ್ನೂ ಬದುಕುತ್ತಿದೆ; ತನ್ನ ಆಂತರಿಕ ಮನ, ಆತ್ಮ, ಚೈತನ್ಯಗಳ ಮುಂದೋಟವನ್ನುಳಿಸಿಕೊಂಡೇ ಪ್ರಾಚೀನ ಭಾರತದೊಡನೆ ತಲೆಯೆತ್ತಿನಿಂತಿದೆ. ಗ್ರೀಕ್, ಪಾರ್ಥಿಯನ್ ಮತ್ತು ಹೂಣ ದಾಳಿ ಹಾಗೂ ವಿದೇಶೀಯ ಆಳಿಕೆ, ಇಸ್ಲಾಮಿನ

ಬಲಿಷ್ಠ ಸತ್ವ, ಬ್ರಿಟಿಷ್ ಆಕ್ರಮಣದ ಹಾಗೂ ಬ್ರಿಟಿಷ್ ಪದ್ಧತಿಯ ತಲೆಹೊಡೆದು ಅಳಿಯುವ ಭಾರದಡೆ, ಅಲ್ಲದೆ ಇತರ ಪಾಶ್ಚಾತ್ಯ ಶಕ್ತಿಗಳ ಬೃಹತ್ ಪ್ರಮಾಣದ ಒತ್ತಡ ಈ ಯಾವುದೂ ವೈದಿಕ ಋಷಿಗಳು ಭಾರತಕ್ಕೆ ತಯಾರಿಸಿ ಕೊಟ್ಟ ಶರೀರದಿಂದ ಅದರ ಹಳೆಯ ಆತ್ಮವನ್ನು ಹೊರಡಿಸಲು ಅಥವಾ ಅದುಮಲು ಸಮರ್ಥವಾಗಲಿಲ್ಲ; ಪ್ರತಿಯೊಂದು ಹೆಜ್ಜೆಯಲ್ಲೂ ಪ್ರತಿಯೊಂದು ದುಃಖ, ಆಘಾತ ಹಾಗೂ ಆಕ್ರಮಣದಲ್ಲೂ ಸಕ್ರಿಯ ಅಥವಾ ನಿಷ್ಕ್ರಿಯ ಪ್ರತೀಕಾರದಿಂದ ಎದುರಿಸಿ ಬದುಕಿ ಉಳಿಯಲು ಅದಕ್ಕೆ ಸಾಧ್ಯವಾಯಿತು. ಈ ಕಾರ್ಯವನ್ನದು ಈ ಆಧ್ಯಾತ್ಮಿಕ ಘನತೆಯ ಮಹಾದಿನಗಳಲ್ಲಿ, ಆ ಜರಣ ಹಾಗೂ ಪ್ರತಿಕ್ರಿಯೆಗಳ ಸುದಿನಗಳಲ್ಲಿ ಅಜೀರ್ಣ್ಯಾಂಶಗಳೆಲ್ಲವನ್ನೂ ದೂರ ಒತ್ತಿ, ದೂರೀಕರಿಸಲಾರದ ಎಲ್ಲ ಅಂಶಗಳನ್ನೂ ಜೀರ್ಣಮಾಡಿಕೊಂಡು ಸಾಧಿಸಿತು. ಆಮೇಲೆ ಅಳಿಗಾಲ ಪ್ರಾಪ್ತವಾದಾಗಲೂ ಅದೇ ಬಲದಿಂದ, ಹಿಮ್ಮೆಟ್ಟಿದರೂ ವಧ್ಯವಾಗದೆ, ದಕ್ಷಿಣದಲ್ಲಿ ಹಿಂಗಾಲಿಟ್ಟು ಕೆಲಕಾಲ ತನ್ನ ಪ್ರಾಕ್ತನ ರಾಜಕೀಯ ಪದ್ಧತಿಯನ್ನುಳಿಸಿಕೊಂಡು, ತನ್ನ ಹಳೆಯ ಆತ್ಮವನ್ನೂ ಕಲ್ಪನೆಯನ್ನೂ ಸಂರಕ್ಷಿಸಿಕೊಳ್ಳಲು ಇಸ್ಲಾಂ, ರಜಪೂತ ಹಾಗೂ ಮರಾಠ ಒತ್ತಡದೆದುರು ಬಿದ್ದು, ಸಕ್ರಿಯವಾಗಿ ಎದುರಿಸಿಲಾರದಲ್ಲೆಲ್ಲ ನಿಷ್ಕ್ರಿಯವಾಗಿ ಎಡೆಬಿಡದೆ ಪ್ರತೀಕಾರವೆಸಗುತ್ತ, ತನ್ನ ಸಮಸ್ಯೆಯನ್ನುತ್ತರಿಸಲಾರದ ಅಥವಾ ತನ್ನೊಡನೆ ಒಪ್ಪಂದಕ್ಕೆ ಬರಲಾರದ ಪ್ರತಿಯೊಂದು ಸಾಮ್ರಾಜ್ಯವನ್ನೂ ವಿನಾಶಕ್ಕೆ ಶಪಿಸಿ ಒಗೆದು, ತನ್ನ ಪುನರುತ್ಥಾನದ ದಿನವನ್ನು ನಿರೀಕ್ಷಿಸುತ್ತ ಬದುಕಿ ಉಳಿಯಲು ಶಕ್ತವಾಯಿತು. ಈಗಲೂ ನಮ್ಮ ಕಣ್ಣೆದುರೇ ಅಂಥ ಶಕ್ತಿ ಕಾರ್ಯಾಸಕ್ತವಾಗಿರುವುದನ್ನು ನಾವು ಕಾಣುತ್ತಿದ್ದೇವೆ. ಈ ಅದ್ಭುತವನ್ನು ಸಾಧಿಸಿದ ನಾಗರಿಕತೆಯ ಅತ್ಯಗಾಧ ಚೈತನ್ಯದ ಬಗೆಗಾಗಲಿ; ಅದರ ಬುನಾದಿಯನ್ನು ಅಬಾಹ್ಯವಾದ ಆತ್ಮ–ಅಂತರ್ ಮನಗಳ ಮೇಲೆ ಕಟ್ಟಿ, ಅದರ ಅಸ್ತಿತ್ವದ ಬೇರುಬೊಡ್ಡೆಯನ್ನಾಗಿ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಏಕತೆಯನ್ನು ತೆಗೆದುಕೊಂಡ ಪ್ರಾಚೀನ ಮಹನೀಯರ ಬುದ್ಧಿವಂತಿಕೆಯ ಬಗೆಗಾಗಲಿ ಏನುಹೇಳಲಾದೀತು! ಆ ಮಹನೀಯರು ತೆಗೆದುಕೊಂಡದ್ದು ಅಂಥ ಏಕತೆಯ ಬರಿ ದುರ್ಬಲ ಪುಷ್ಪವನ್ನಲ್ಲ, ವಿನಾಶಿಯಾದ ಮೇಲ್ಗಟ್ಟಡವನ್ನಲ್ಲ ಅದರ ಅಮರ ಅಡಿಗಟ್ಟನ್ನು!

## ೫. ಕೇಂದ್ರೀಕರಣ ಹಾಗೂ ಸಾರೂಪ್ಯಗಳ ಗೌಣತ್ವ

ಆದರೆ ಆಧ್ಯಾತ್ಮಿಕ ಐಕ್ಯವೆಂಬುದು ಬಹುವಿಸ್ತೃತವೂ ಶಿಥಿಲವೂ ಆದ ವಸ್ತು ಮತ್ತು ರಾಜಕೀಯ ಹಾಗೂ ಬಾಹ್ಯ ಐಕ್ಯದಂತೆ ಕೇಂದ್ರೀಕರಣ ಹಾಗೂ ಸಾರೂಪ್ಯ ತರಲು ಒತ್ತಾಯಿಸುವಂಥದಲ್ಲ; ತದ್ವಿರುದ್ಧವಾಗಿ ಅದು ಪದ್ಧತಿಯಲ್ಲಿ ಅತ್ತಿತ್ತ ಹರಡಿರುತ್ತದೆ ಮತ್ತು ಬಹುಸುಲಭವಾಗಿ ಅಸಂಖ್ಯ ಪ್ರಕಾರಗಳಿಗೂ ಸ್ವತಂತ್ರ ಜೀವನಕ್ಕೂ ಅವಕಾಶಕೊಡುತ್ತದೆ. ಪ್ರಾಚೀನ ಭಾರತದ ಏಕೀಕರಣದ ಹಾದಿಯಲ್ಲಿದ್ದ ತೊಂದರೆಯ ಗುಟ್ಟನ್ನಿಲ್ಲಿ ನಾವು ಭೇದಿಸುವೆವು. ಭಾರತೈಕ್ಯವನ್ನು ಸಾಮಾನ್ಯ ಸಾಧನವಾದ ಕೇಂದ್ರೀಕೃತ,

ಸರೂಪ, ಸಾಮ್ರಾಜ್ಯಕ ಸರಕಾರವು ಸ್ವತಂತ್ರ ಭಿನ್ನಮಾರ್ಗಗಮನ, ಸ್ಥಳೀಯ ಸ್ವಾಯತ್ತ ಶಾಸನ, ಪ್ರತಿಷ್ಠಿತ ಸಾಮಷ್ಟಿಕ ಸ್ವಾಧಿಕಾರಗಳನ್ನು ದಮನಮಾಡಿ ಸಾಧಿಸಲಾರದು; ಮತ್ತು ಈ ದಿಶೆಯಲ್ಲಿ ಪ್ರಯತ್ನಮಾಡಿದ ಪ್ರತಿಯೊಂದು ಸಲವೂ ಎಷ್ಟೇ ದೀರ್ಘಕಾಲಿಕ ಆಭಾಸಿಕ ಜಯದೊರೆತರೂ ಕೊನೆಯಲ್ಲಿ ಅಪಜಯವೇ ಉಂಟಾಯಿತು. ಇಷ್ಟಲ್ಲದೆ, ಭಾರತದ ಭವಿಷ್ಯವಿಧಾತರು ವಿವೇಕದಿಂದ ಅಂಥ ಪ್ರಯತ್ನ ಸೋಲುವಂತೆ ಮಾಡಿದರೆನ್ನಬೇಕು– ಏಕೆಂದರೆ ಭಾರತದ ಅಂತರಾತ್ಮ ಸಾಯದಿರಲಿ, ಅದು ತನ್ನ ಜೀವನದ ಆಳವಾದ ಆಕಾರಗಳನ್ನು ತಾತ್ಕಾಲಿಕ ಸುರಕ್ಷಿತತೆಯ ಯಂತ್ರಕ್ಕಾಗಿ ಮಾರಿಕೊಳ್ಳದಿರಲಿ ಎಂದು. ಭಾರತದ ಪುರಾತನ ಚೇತಸ್ಸಿಗೆ ಅವಶ್ಯಕ ಪ್ರತಿಭೆಯಿತ್ತು. ಅದರ ಸಾಮ್ರಾಜ್ಯಕಲ್ಪನೆಯೆಂದರೆ ಅಸ್ತಿತ್ವದಲ್ಲಿದ್ದ ಎಲ್ಲ ಬಗೆಯ ಪ್ರಾದೇಶಿಕ ಹಾಗೂ ಸಾಮುದಾಯಿಕ ಸ್ವಾತಂತ್ರ್ಯವನ್ನು ಮಾನಿಸುವ, ಬದುಕಿದ್ದ ಯಾವ ಸ್ವಾಯತ್ತ ಆಳಿಕೆಯನ್ನೂ ಅನವಶ್ಯಕವಾಗಿ ದಮನಮಾಡದ, ಯಾಂತ್ರಿಕ ಒಂದುತನವನ್ನುಳಿದು ತನ್ನ ಬಾಳಿನ ಸಾಮರಸ್ಯವನ್ನು ಸಾಧಿಸುವ ಶಾಸನ. ಆ ಬಳಿಕ ಸಮಸ್ಯಾಪರಿಹಾರವನ್ನು ಸುರಕ್ಷಿತವಾಗಿ ಸಾಧಿಸಲು ಮತ್ತು ಹಾಗೆ ಸಾಧಿಸಲ್ಪಟ್ಟು ಅದು ತನ್ನ ನಿಜವಾದ ಮಾರ್ಗರೂಪ ತಳಹದಿಗಳನ್ನು ಪಡೆಯುಲು ಬೇಕಾದ ಸನ್ನಿವೇಶವೇ ಹೊರಟುಹೋಗಿಬಿಟ್ಟಿತ್ತು; ಅದರ ಬದಲು ಅಲ್ಲಿ ಏಕಪ್ರಶಾಸಕ ಚಕ್ರಾಧಿಪತ್ಯವನ್ನು ಸ್ಥಾಪಿಸುವ ಪ್ರಯತ್ನ ನಡೆಯಿತು. ತತ್ಕಾಲದ ಬಾಹ್ಯ ಅವಶ್ಯಕತೆಯಿಂದ ಎಸಗಿದ ಆ ಪ್ರಯತ್ನ, ಎಷ್ಟೇ ಮಹತ್ವ ಹಾಗೂ ವೈಭವದಿಂದ ನಡೆದರೂ, ನಿಷ್ಫಲವಾಯಿತು. ಅದು ಸೋಲಲು ಕೂಡಲೇ ಭಾರತೀಯ ಚೇತನೆಯ ನಿಜವಾದ ಭಾವಕ್ಕೆ ಅನುಗುಣವಾದ ಪ್ರವೃತ್ತಿ ದೇಶದಲ್ಲೆದ್ದದ್ದೇ ಕಾರಣ. ಸಾಮುದಾಯಿಕ ಸ್ವಾಯತ್ತ ಆಳಿಕೆಗಳ ಸಾಮರಸ್ಯವೇ ಭಾರತೀಯ ರಾಜಕೀಯ ಸಾಮಾಜಿಕ ಪದ್ಧತಿಯ. ಅಡಿಯಿರುವ ತತ್ವವೆಂಬುದನ್ನು ಆಗಲೇ ನಾವು ಅರಿತಿದ್ದೇವೆ; ಗ್ರಾಮಸ್ವಾಯತ್ತತೆ, ಪಟ್ಟಣ ರಾಜಧಾನಿ ನಗರ ಜಾತಿ ಸಂಘ ಕುಟುಂಬ ಕುಲ ಧಾರ್ಮಿಕ ಬಣ, ಪ್ರಾದೇಶಿಕ ಘಟಕಗಳ ಸ್ವಾಯತ್ತತೆ ಇವುಗಳ ಸಾಮರಸ್ಯವೇ ಅದರ ಒಳಸೂತ್ರ. ಈ ಸ್ವಾಯತ್ತತೆಗಳನ್ನು ಒಂದು ಅನಿರ್ಬದ್ಧ, ಸಚೇತನ, ಸಾವಯವ ಪದ್ಧತಿಯಲ್ಲಿ ಸಮರಸಗೊಳಿಸುವ ಮತ್ತು ಒಟ್ಟಿಗೆ ಕೂಡಿಸಿ ಇಡುವ ಸಾಧನವೆಂದರೆ ಸರಕಾರ, ರಾಜ್ಯ ಅಥವಾ ಸಂಯುಕ್ತ ಗಣರಾಜ್ಯವಾಗಿತ್ತು. ಈ ಸರಕಾರ ಜನ ರಾಷ್ಟ್ರಗಳನ್ನು ಅವುಗಳ ಸ್ವಾಯತ್ತತೆಯನ್ನು ಮಾನಿಸಿಯೇ ಹೆಚ್ಚು ವಿಸ್ತೃತ ಅನಿರ್ಬದ್ಧ. ಚೈತನ್ಯ ಪೂರ್ಣ ಅವಯವಿಯನ್ನಾಗಿ ಏಕೀಕರಿಸುವುದೇ ಸಾಮ್ರಾಜ್ಯಕ ಸಮಸ್ಯೆಯಾಗಿತ್ತು. ತನ್ನ ಸದಸ್ಯರಲ್ಲಿ ಐಕ್ಯ–ಶಾಂತಿಗಳನ್ನುಳಿಸಿಕೊಂಡು, ಹೊರಗಿನ ದಾಳಿಯಿಂದ ಸುರಕ್ಷಿತವಾಗಿ ಇಡುವ ಮತ್ತು ತನ್ನ ಅಂಗಭೂತ ಸಾಮುದಾಯಿಕ ಹಾಗೂ ಪ್ರಾದೇಶಿಕ ಘಟಕಗಳೆಲ್ಲವುಗಳ ಬಲಾತ್ಕಾರರಹಿತವಾದ ಚಟುವಟಿಕೆಯ ಜೀವನದಲ್ಲಿಯ ಏಕತಾನ ಅನೇಕತಾನಗಳಲ್ಲಿ ಸಾಗುವ ಅನಾಹುತ ವ್ಯವಹಾರ ಮತ್ತು ವಿಕಾಸಗಳನ್ನು ಸಮಷ್ಟೀಕರಿಸುವ ಒಂದು

ಪದ್ಧತಿಯನ್ನು ಪ್ರಸ್ಥಾಪಿಸಬೇಕಾಗಿತ್ತು. ಆ ಪದ್ಧತಿ ಭಾರತೀಯ ಸಂಸ್ಕೃತಿ ನಾಗರಿಕತೆಗಳ ಶರೀರ–ಆತ್ಮಗಳ ಅಪ್ರತಿಹತವೂ ಸಕ್ರಿಯುವೂ ಆದ ಬದುಕಿಗೆ ಅವಕಾಶ ಕಲ್ಪಿಸಿಕೊಡುವಂಥದಲ್ಲದೆ, ಧರ್ಮದ ಅಖಿಲ ವಿಭವಯುಕ್ತ ಕರ್ತವ್ಯ ನಿರ್ವಹಣವನ್ನು ಸಾಧಿಸುವಂಥದೂ ಆಗಿರಬೇಕಾಗಿತ್ತು.

ಭಾರತದ ಪುರಾಣಮನ ಉಕ್ತ ಸಮಸ್ಯೆಯನ್ನು ಈ ಅರ್ಥದಲ್ಲಿ ಅರಿತುಕೊಂಡಿತ್ತು. ಆ ಮೇಲಿನ ಪ್ರಶಾಸಕ ಚಕ್ರಾಧಿಪತ್ಯ ಕೇವಲ ಪಾಕ್ಷಿಕವಾಗಿ ಅದನ್ನೊಪ್ಪಿಕೊಂಡಿತ್ತು. ಆದರೆ ಕೇಂದ್ರೀಕರಣ ಪ್ರವೃತ್ತಿ ಯಾವಾಗಲೂ ಇರುವಂತೆ ಅದರ ಪ್ರವೃತ್ತಿಯಾದರೂ ನಿಧಾನವಾಗಿ, ತಿಳಿಯದಂತೆಯೋ ಎಂಬಂತೆ, ಪಟುತರವಾಗಿ ಅಲ್ಲದಿದ್ದರೂ ತನ್ನ ಅಧೀನದಲ್ಲಿದ್ದ ಸ್ವಾಯತ್ತತೆಗಳ ಬಲವನ್ನು ಕಡಿಮೆ ಮಾಡುವುದೇ ಆಗಿತ್ತು. ಇದರ ಪರಿಣಾಮವಾಗಿ ಕೇಂದ್ರ ಪ್ರಾಧಿಕಾರ ದುರ್ಬಲವಾಗಿದ್ದಾಗಲೆಲ್ಲ ಭಾರತೀಯ ಬಾಳಿಗೆ ಮುಖ್ಯವಾಗಿ ಬೇಕಾದ ಪ್ರಾದೇಶಿಕ ಸ್ವಾಯತ್ತತೆಯ ಅಸ್ಖಲಿತ ತತ್ವ ಪುನಃ ಉದಯವಾಗಿ ಪ್ರಸ್ಥಾಪಿಸಿದ ಕೃತಕ ಐಕ್ಯಕ್ಕೆ ಭಂಗವುಂಟುಮಾಡಿತಲ್ಲದೆ, ನಿರೀಕ್ಷೆಯಂತೆ ಅಖಿಲ ಜೀವನದ ಸ್ವತಂತ್ರತರ ಆದರೂ ಏಕೀಕೃತ ನಡೆಗೆ ಮತ್ತು ಸಾಮರಸಿಕ ತೀವ್ರತಾಸಿದ್ಧಿಗೆ ಅನುಕೂಲವಾಗಲಿಲ್ಲ. ಇದರ ಮೇಲೆ ಸಾಮ್ರಾಜ್ಯಕ ರಾಜ್ಯಪ್ರಭುತ್ವವು ಸ್ವತಂತ್ರ ಸಭೆಗಳ ಬಲವನ್ನು ಕುಂದಿಸುವ ಪ್ರವೃತ್ತಿಯನ್ನು ತಾಳಿದ್ದರಿಂದ ಸಮಷ್ಟಿ ಘಟಕಗಳು ಏಕೀಕೃತ ಶಕ್ತಿಯ ಅಂಗಗಳಾಗಿ ಉಳಿಯುವುದನ್ನು ಬಿಟ್ಟು ಪ್ರತ್ಯೇಕವಾಗಿ ವಿಭಾಜಕಕಾರಕಗಳಾದವು. ಗ್ರಾಮಸಮಷ್ಟಿ ತನ್ನ ಬಲದಲ್ಲಿ ಸ್ವಲ್ಪ ಉಳಿಸಿಕೊಂಡಿತು; ಆದರೆ ಸರ್ವೋಚ್ಚ ಪ್ರಾಧಿಕಾರದೊಡನೆ ಸಚೇತನ ಸಂಬಂಧ ಕಡಿದುಕೊಂಡು, ವಿಶಾಲತರ ರಾಷ್ಟ್ರೀಯ ಭಾವನೆಯನ್ನು ಕಳೆದುಕೊಂಡು, ತನ್ನ ಸ್ವಯಂ ಪೂರ್ಣ ಸಂಕುಚಿತ ಬಾಳನ್ನು ಮಾನಿಸುವ ಯಾವ ವಿದೇಶೀಯ ಅಥವಾ ಸ್ವದೇಶೀಯ ಶಾಸನವನ್ನಾದರೂ ಸ್ವೀಕರಿಸಲು ಸಿದ್ಧವಾಯಿತು, ಧಾರ್ಮಿಕ ಸಮುದಾಯಗಳೂ ಅದೇ ಭಾವನೆಯನ್ನು ತಾಳಿದವು. ನಿಜವಾದ ಅವಶ್ಯಕತೆಯಿಲ್ಲದೆ ಜಾತಿಗಳು ಗುಣಿತ ಸಂಖ್ಯೆಯಲ್ಲಿ ಹೆಚ್ಚಿ ದೇಶದ ಆಧ್ಯಾತ್ಮಿಕ ಇಲ್ಲವೆ ಆರ್ಥಿಕ ಅವಶ್ಯಕತೆಗೆ ಏನೂ ಸಂಬಂಧಿಸದಂತೆ ಬೆಳೆದು, ಬರಿ ಪವಿತ್ರ ಸಾಮಯಿಕ ವಿಭಾಗಗಳಾದವಲ್ಲದೆ, ಮೂಲತಃ ತಾವಿದ್ದಂತೆ ಜೀವನ ಸಾಮರಸ್ಯದ ಸಮಗತಿಯ ವ್ಯವಹಾರದ ಕಾರಕಗಳಾಗುವುದನ್ನುಳಿದು ಪ್ರತ್ಯೇಕಿಕರಣದ ಒಂದು ಶಕ್ತಿಯಾಗಿ ಪರಿಣಮಿಸಿದವು. ಪ್ರಾಚೀನ ಭಾರತದಲ್ಲಿ ಜಾತಿ ವಿಭಾಗಗಳು ಜನತೆಯ ಸಂಯುಕ್ತ ಜೀವನಕ್ಕೆ ಅಡ್ಡಿಗಳಾಗಿದ್ದವೆಂಬುದೂ ಆಮೇಲೆ ಕೂಡ ರಾಜಕೀಯ ಕಲಹ ಹಾಗೂ ಒಡಕುಗಳನ್ನು ಪ್ರೇರಿಸುವ ಪಟುತರ ಶಕ್ತಿಯಾದವೆಂಬುದೂ ಸುಳ್ಳು ಅವು ಹಾಗೇನಾದರೂ ಆಗಿದ್ದರೆ ಅದು ಕಟ್ಟಕಡೆಗೆ, ಕೊನೆಯ ಅವನತಿಯಲ್ಲಿ, ಮರಾಠ ಸಂಯುಕ್ತರಾಜ್ಯದ ಅನಂತರದ ಇತಿಹಾಸದಲ್ಲಿ ಅಷ್ಟೆ; ಆದರೆ ಅವು ಸಾಮಾಜಿಕ ವಿಭಜನೆಯ ಹಾಗೂ ಸ್ವತಂತ್ರವೂ ಸಕ್ರಿಯವಾಗಿ ಸಂಯುಕ್ತವೂ ಆದ ಬಾಳಿನ ಪುನಃ ಸಂವಿಧಾನಕ್ಕೆ ವಿಘ್ನವಾದ ನಾರುವ ವರ್ಗೀಕರಣದ ನಿಷ್ಕ್ರಿಯ ಬಲವಾದವೆಂಬುದೇನೋ ನಿಜ.

# ೬. ಪಠಾನ ಮತ್ತು ಮೊಗಲರ ಕಾಲದ ನಿರಂಕುಶ ಸಾಮ್ರಾಜ್ಯಗಳು

ಮಹಮದೀಯರ ದಾಳಿಗೆ ಪೂರ್ವದಲ್ಲಿ ಭಾರತೀಯ ಪದ್ಧತಿಗೆ ಮುತ್ತಿಗೆ ಹಾಕಿದ ದುಷ್ಪರಿಣಾಮಗಳೆಲ್ಲವೂ ಸಶಕ್ತವಾಗಿ ಪ್ರಕಟವಾಗಲಿಲ್ಲ; ಆದರೆ ಅವೆಲ್ಲವೂ ಆಗಲೇ ತಮ್ಮ ಆರಂಭದಶೆಯಲ್ಲಿದ್ದಿರಬೇಕು ಮತ್ತು ಪಠಾನ ಹಾಗೂ ಮೊಗಲ ಸಾಮ್ರಾಜ್ಯಗಳು ನಿರ್ಮಿಸಿದ ಆವರಣದಲ್ಲಿ ಅವು ಮತ್ತಷ್ಟು ಬೇಗ ಹೆಚ್ಚಿ ಪ್ರಕಟವಾಗತೊಡಗಿದವು. ಎಷ್ಟೇ ರಾರಾಜಿಸುವವೂ ಬಲಿಷ್ಠ ವಾದವೂ ಆಗಿದ್ದರೂ ಈ ಅನಂತರದ ಸಾಮ್ರಾಜ್ಯಕ ಪದ್ಧತಿಗಳು ತಮ್ಮ ಹಿಂದಿನವುಗಳಿಗಿಂತ ಹೆಚ್ಚಾಗಿ (ತಮ್ಮ ಸ್ವೇಚ್ಛಾಧಿಕಾರದ ಫಲವಾಗಿ) ಕೇಂದ್ರೀಕರಣದ ದುಷ್ಪರಿಣಾಮಗಳಿಂದ ನರಳಿದವು; ಮತ್ತು ಭಾರತೀಯ ಪ್ರಾದೇಶಿಕ ಜೀವನದ ಕೃತಕ ಏಕೀಕೃತ ರಾಜ್ಯಭಾರದ ವಿರುದ್ಧ ನಿಲ್ಲುವ ಅದೇ ಪ್ರವೃತ್ತಿಯ ದೆಸೆಯಿಂದ ಅವು ಪದೇ ಪದೇ ಮುರಿದುಬೀಳುತ್ತಿದ್ದವು. ಅವಕ್ಕೆ ಪ್ರವೃತ್ತಿಯ ದೆಸೆಯಿಂದ ಅವು ಪದೇ ಪದೇ ಮುರಿದುಬೀಳುತ್ತಿದ್ದವು. ಅವಕ್ಕೆ ನಿಜವಾದ ಬದುಕೂ ಜನಜೀವನದಲ್ಲಿ ಅನಿರ್ಬದ್ಧ ಸಂಬಂಧವೂ ಇಲ್ಲದಿದ್ದದರಿಂದ ವಿದೇಶೀಯ ದಾಳಿಗಾರನ ವಿರುದ್ಧವಾಗಿ ತಮ್ಮನ್ನು ಪರಿಣಾಮಕರವಾಗಿ ಸಂರಕ್ಷಿಸುವ ಸರ್ವಸಾಧಾರಣ ದೇಶಪ್ರೇಮವನ್ನು ಹುಟ್ಟಿಸಲು ಅಸಮರ್ಥವಾದವು. ಕೊನೆಯಲ್ಲಿ ಯಾಂತ್ರಿಕವಾದ ಪಾಶ್ಚಾತ್ಯ ಆಳಿಕೆ ಬಂದು ಬದುಕಿ ಉಳಿದಿದ್ದ ಎಲ್ಲ ಸಾಮುದಾಯಿಕ ಅಥವಾ ಪ್ರಾದೇಶಿಕ ಸ್ವಾಯತ್ತತೆಗಳನ್ನೂ ಮೆಟ್ಟಿ ತುಳಿದು ಯಂತ್ರಸಹಜ ಮೃತ ಐಕ್ಯವನ್ನು ಆದೇಶವಾಗಿ ಇಟ್ಟಿತು. ಆದರೆ ತದ್ವಿರುದ್ಧ ಪ್ರತೀಕಾರದಲ್ಲಿ ಅದೇ ಹಳೆಯ ಪ್ರವೃತ್ತಿಗಳು ಪುನರುಜ್ಜೀವಿಸುವುದನ್ನು ನಾವು ಕಾಣುತ್ತೇವೆ; ಭಾರತೀಯ ಜನಾಂಗಗಳ ಪ್ರಾದೇಶಿಕ ಜೀವನದ ಪುನಃ ಸಂವಿಧಾನದತ್ತಣ ಒಲವು, ಕುಲ–ಭಾಷೆಗಳ ನಿಜವಾದ ಉಪಭೇದಗಳ ಮೇಲೆ ನಿಂತ ಪ್ರಾಂತೀಯ ಸ್ವಾಯತ್ತತೆಯ ಬೇಡಿಕೆ, ರಾಷ್ಟ್ರೀಯ ನಿಕಾಯದ ನೈಸರ್ಗಿಕ ಬಾಳಿಗೆ ಅಗತ್ಯವಾದ ಸಚೇತನ ಘಟಕವೆನಿಸಿದ ವಿನಷ್ಟ ಗ್ರಾಮಸಮಷ್ಟಿಯ ಆದರ್ಶ ಮತ್ತೆ ಬೇಕೆಂಬ ಭಾರತೀಯ ಮನ–ಅಲ್ಲದೆ, ಇನ್ನೂ ಪುನರುದಯಿಸದ ಆದರೂ ಮುಂಬರಿದ ಮನಗಳ ಮೇಲೆ ಮೂಡುತ್ತಿರುವ ಭಾರತೀಯ ಬಾಳಿಗೆ ಯುಕ್ತವಾದ ಸಾಮಷ್ಟಿಕ ತಳಹದಿಯ ಸತ್ಯತರನಾದ ಕಲ್ಪನೆ ಮತ್ತು ಆಧ್ಯಾತ್ಮಿಕ ನೆಲಗಟ್ಟಿನ ಮೇಲೆ ಭಾರತೀಯ ಸಮಾಜ ಹಾಗೂ ರಾಜಕೀಯಗಳನ್ನು ಹೊಸದಾಗಿಸಿ ಪುನಾರಚಿಸುವ ಆಲೋಚನೆಗಳು ಪುನಃ ಉದಯಿಸುತ್ತಿವೆ.

ಭಾರತೀಯ ಐಕ್ಯಸಾಧನೆ ಅಪಜಯಕ್ಕೀಡಾದುದರಿಂದ ಪರರಾಜರ ದಾಳಿ ಮತ್ತು ವಿದೇಶೀಯರಿಗೆ ಕೊನೆಯದಾಗಿ ಅಡಿಯಾಳಾಗುವುದು ಪ್ರಾಪ್ತವಾಯಿತು. ಅಂಥ ಅಪಜಯವುಂಟಾಗಲು ಐಕ್ಯ ಸಾಧನಾಕಾರ್ಯದ ವ್ಯಾಪ್ತಿ ಮತ್ತು ವೈಲಕ್ಷಣಗಳೇ ಕಾರಣ. ಸುಲಭೋಪಾಯವಾದ ಕೇಂದ್ರೀಕೃತ ಸಾಮ್ರಾಜ್ಯ ನಿಜವಾಗಿ ಭಾರತದಲ್ಲಿ

ಜಯಹೊಂದಲಾರದೆ ಹೋಯಿತು. ಆದರೆ ಅದೊಂದೇ ಸಾಧ್ಯವಾದ ಉಪಾಯವೆಂದು ತೋರಿದ್ದರಿಂದ ಅದನ್ನು ಸ್ಥಾಪಿಸಲು ಪುನಃ ಪುನಃ ಪ್ರಯತ್ನಿಸಿ ಅರ್ಧಮರ್ಧ ಕೃತಕೃತ್ಯವಾಗಿ, ಹಾಗೆ ಕೃತಕೃತ್ಯವಾದ್ದರಿಂದ ತತ್ಕಾಲದಲ್ಲಿಯೂ ಹಾಗೇ ಬಹಳ ಕಾಲದವರೆಗೂ ಅದೇ ನ್ಯಾಯವೆಂದು ತೋರಿದರೂ ಕೊನೆಯಲ್ಲಿ ಅದಕ್ಕೆ ಅಪಜಯ ಒದಗಿಯೇ ತೀರುತ್ತಿತ್ತು. ಭಾರತದ ಪುರಾಣಮನ ಸಮಸ್ಯೆಯ ಮುಖ್ಯ ಲಕ್ಷಣವನ್ನು ಇದಕ್ಕೂ ಚೆನ್ನಾಗಿ ಅರಿತುಕೊಂಡಿತ್ತೆಂದು ಆಗಲೇ ಹೇಳಲಾಗಿದೆ. ವೈದಿಕ ಋಷಿಗಳೂ ಅವರ ಬಳಿಕ ಬಂದ ಋಷಿಗಳೂ ಭಾರತೀಯ ಜೀವನಕ್ಕೊಂದು ಆಧ್ಯಾತ್ಮಿಕ ತಳಪಾಯವನ್ನು ನಿರ್ಮಿಸಿ ಈ ಪರ್ಯಾಯ ದ್ವೀಪದ (ದ್ವೀಪಕಲ್ಪದ) ಕುಲಗಳ ಹಾಗೂ ಜನಾಂಗಗಳ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಐಕ್ಯವನ್ನು ಸ್ಥಾಪಿಸುವುದು ತಮ್ಮ ಮುಖ್ಯ ಕರ್ತವ್ಯವೆಂದು ಬಗೆದಿದ್ದರು. ಆದರವರು ರಾಜಕೀಯ ಏಕೀಕರಣದ ಅವಶ್ಯಕತೆಯನ್ನು ಅರಿಯದವರಾಗಿರಲಿಲ್ಲ. ವೈರಾಜ್ಯ, ಸಾಮ್ರಾಜ್ಯ ಮುಂತಾದ ಭಿನ್ನ ಭಿನ್ನ ಪ್ರಮಾಣದ ಅಧಿರಾಜ್ಯ, ಸಂಯುಕ್ತ ರಾಜ್ಯಗಳ ಬಾವುಟದಡಿಯಲ್ಲಿ ಸುಸ್ಥಾಪಿತವಾಗಬಯಸುವ ಆರ್ಯ ಜನಾಂಗಗಳ ಕುಲ–ಜೀವನದ ಸತತ ಪ್ರವೃತ್ತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ, ಈ ಮಾರ್ಗವನ್ನು ಅದರ ಕೊನೆವರೆಗೆ ಅನುಸರಿಸುವುದೇ ಸರಿಯಾದ ಮಾರ್ಗವೆಂದು ತಿಳಿದು, ಆ ಪ್ರಕಾರ ಆ ಸಮುದ್ರದಿಂದ ಈ ಸಮುದ್ರದವರೆಗಿನ ಭಾರತೀಯ ರಾಜ್ಯಗಳ ಹಾಗೂ ಜನಾಂಗಗಳ ಸ್ವಾಯತ್ತತೆಯನ್ನು ನಾಶವಾಗಗೊಡದಂತೆ ಒಂದುಗೂಡಿಸುವ ಸಾಮ್ರಾಜ್ಯಕ ಶಾಸನದ ಚಕ್ರವರ್ತಿಯ ಆದರ್ಶವನ್ನು ಆ ಋಷಿಗಳು ವಿಕಾಸಗೊಳಿಸಿದರು. ಭಾರತೀಯ ಜೀವನದಲ್ಲಿಯ ಇತರ ಆದರ್ಶಗಳನ್ನು ಹೇಗೋ ಹಾಗೆ ಇದಕ್ಕೂ ಅವರು ಆಧ್ಯಾತ್ಮಿಕ ಹಾಗೂ ಧಾರ್ಮಿಕ ಮಂಜೂರಿಯನ್ನು ಕೊಟ್ಟರು; ಅಶ್ವಮೇಧ–ರಾಜಸೂಯ ಯಾಗಗಳು ಅದರ ಬಾಹ್ಯ ಪ್ರತೀಕಗಳೆನಿಸಿದವು. ಅವನ್ನು ಮಾಡುವುದು ಸಮರ್ಥ ಅರಸನ ಧರ್ಮ; ರಾಜೋಚಿತ ಧಾರ್ಮಿಕ ಕರ್ತವ್ಯವೆಂದರೆ ಆ ಆದರ್ಶವನ್ನು ಪಾಲಿಸಲು ಯತ್ನಿಸುವುದೇ ಆಗಿದೆ ಎಂದು ಅವರು ವಿಧಿಸಿದರು. ಆ ಧರ್ಮದ ಪ್ರಕಾರ ಆತನ ಆಳಿಕೆಗೊಳಗಾದ ಜನಾಂಗಗಳ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗಲಿ, ಅವರ ಅರಸುಮನೆತನಗಳನ್ನು ಸಿಂಹಾಸನ ಚ್ಯುತಗೊಳಿಸುವುದು ಇಲ್ಲವೆ ಅವುಗಳ ಆಳರಸರ ಬದಲು ತನ್ನ ಅಧಿಕಾರಿಗಳನ್ನೂ ರಾಜ್ಯಪಾಲರನ್ನೂ ಗದ್ದುಗೆಗೇರಿಸುವುದಾಗಲಿ ಸಾಧ್ಯವಿದ್ದಿಲ್ಲ. ಆಂತರಿಕ ಶಾಂತಿಯನ್ನು ಉಳಿಸಿಕೊಳ್ಳಬಲ್ಲ ಮತ್ತು ದೇಶದ ಎಲ್ಲ ಬಲಗಳನ್ನು ಬೇಕಾದಾಗ ಒಟ್ಟುಗೂಡಿಸಬಲ್ಲ ಸೈನಿಕ ಶಕ್ತಿಯನ್ನುಳ್ಳ ಅಧಿರಾಜ್ಯಕ ಶಕ್ತಿಯನ್ನು ಸ್ಥಾಪಿಸುವುದೇ ಅವನ ಕರ್ತವ್ಯವಾಗಿತ್ತು. ಈ ಪ್ರಾಥಮಿಕ ಕರ್ತವ್ಯದ ಜೊತೆಗೆ ಬಲವಾದ ಹಸ್ತಗ್ರಾಹದಲ್ಲಿ ಭಾರತೀಯ ಧರ್ಮದ ಪಾಲನೆ ಹಾಗೂ ಧಾರಣೆಯ ಆದರ್ಶ– ಅಂದರೆ ಭಾರತದ ಆಧ್ಯಾತ್ಮಿಕ, ಧಾರ್ಮಿಕ, ನೈತಿಕ ಮತ್ತು ಸಾಮಾಜಿಕ ಸಂಸ್ಕೃತಿಯ ಸರಿಯಾದ ಪ್ರವರ್ತನೆ ಸಾಗುವಂತೆ ನೋಡಿಕೊಂಬುದನ್ನು ಸೇರಿಸಲಾಯಿತು.

# ೭. ಇತಿಹಾಸ ಪುರಾಣಗಳಲ್ಲಿಯ ಧರ್ಮರಾಜ್ಯ

ಈ ಆದರ್ಶ ಪೂರ್ಣವಾಗಿ ಅರಳಿದ್ದನ್ನು ಮಹಾರ್ಘ ಇತಿಹಾಸ ಪುರಾಣಗಳಲ್ಲಿ ಕಾಣಬಹುದು. ಮಹಾಭಾರತವು ಧರ್ಮರಾಜ್ಯ ಸ್ಥಾಪನೆಯ ಅಖ್ಯಾನಿಕ ಅಥವಾ ಐತಿಹಾಸಿಕ ಪ್ರಾಮುಖ್ಯವುಳ್ಳ ಪ್ರಯತ್ನದ ಅಭಿಲೇಖ. ಸಿಡಿವಗೆಯ ಶಿಶುಪಾಲ ಕೂಡ ಯುಧಿಷ್ಠರನು ಧರ್ಮಕಾರ್ಯ ಮಾಡುತ್ತಿದ್ದನೆಂಬ ಕಾರಣದಿಂದ ರಾಜಸೂಯ ಯಾಗದಲ್ಲಿ ತಲೆವಾಗಿ ಉಪಸ್ಥಿತನಾಗಿದ್ದನೆಂದು ಹೇಳಿ ಈ ಆದರ್ಶ ಅಷ್ಟು ಅನಿವಾರ್ಯ ಹಾಗೂ ಸರ್ವಸಂಮತ ಎಂದು ಅದರಲ್ಲಿ ಚಿತ್ರಿಸಲಾಗಿದೆ. ಅಂಥ ಧರ್ಮರಾಜ್ಯದ ಸುಸ್ಥಿತ, ಸಾರ್ವತ್ರಿಕ ಸಾಮ್ರಾಜ್ಯದ ಆದರ್ಶ ಚಿತ್ರ ರಾಮಾಯಣದಲ್ಲಿದೆ. ಇದರಲ್ಲಾದರೂ ನಿರಂಕುಶ ಶೋಷಕ ಪ್ರಭುತ್ವವನ್ನು ಉಲ್ಲೇಖಿಸಿಲ್ಲ; ನಗರ, ಪ್ರಾಂತ ಮತ್ತು ಇತರ ಎಲ್ಲ ವರ್ಗಗಳ ಬೆಂಬಲವನ್ನು ಪಡೆದ ಸಾರ್ವತ್ರಿಕ ರಾಜಪ್ರಭುತ್ವವನ್ನೇ ಆದರ್ಶವೆಂದು ಹೇಳಲಾಗಿದೆ. ಈ ಬಗೆಯ ಪ್ರಭುತ್ವವು ಭಾರತೀಯ ಪದ್ಧತಿಯ ಸಾಮುದಾಯಿಕ ಸ್ವಾಯತ್ತತೆಗಳನ್ನು ಸಂಯೋಜಿಸಿ, ಧರ್ಮೋಕ್ತ ಸಂವಿಧಾನ ಹಾಗೂ ಕಾಯಿದೆಗಳನ್ನು ಎತ್ತಿಹಿಡಿಯುವ ರಾಜಪ್ರಭುತ್ವದ ವಿಸ್ತರಣವಾಗಿದೆ. ಇಲ್ಲಿ ಹೇಳಿದ ದಿಗ್ವಿಜಯದ ಆದರ್ಶವಾದರೂ ಸಂಘಟಿತ ಸ್ವಾತಂತ್ರ್ಯವನ್ನೂ ರಾಜಕೀಯ ಹಾಗೂ ಸಾಮಾಜಿಕ ಸಂಸ್ಥೆಗಳನ್ನೂ ನಾಶಗೊಳಿಸಿ, ಪರಾಜಿತ ಜನಾಂಗಗಳ ಆರ್ಥಿಕ ಸಂಪತ್ತನ್ನು ಶೋಷಿಸುವ ವಿಘಾತಕ ಹಾಗೂ ಲೂಟಿಗಾರ ದಾಳಿಯದಲ್ಲ; ಅದೊಂದು ಯಾಜ್ಞಿಕ ಪ್ರಗಮನ. ಅದರಲ್ಲಿ ಸೈನಿಕ ಶಕ್ತಿಯ ಪರೀಕ್ಷೆಯಿರುತ್ತಿತ್ತು. ಅದರ ಪರಿಣಾಮವನ್ನು ಸುಲಭವಾಗಿ ಎಲ್ಲರೂ ಒಪ್ಪಿಕೊಂಡು ಬಿಡುತ್ತಿದ್ದರು. ಏಕೆಂದರೆ, ಅಪಜಯ ಅದರಲ್ಲಿ ಅವಮಾನ ದುಃಖಗಳನ್ನಾಗಲಿ ದಾಸ್ಯವನ್ನಾಗಲಿ ಒಡರಿಸುತ್ತಿದ್ದಿಲ್ಲ. ಧರ್ಮ ಮತ್ತು ರಾಷ್ಟ್ರಗಳ ಪ್ರತ್ಯಕ್ಷ ಐಕ್ಯಸ್ಥಾಪನೆಯಲ್ಲಷ್ಟೇ ಸಂಬಂಧವಿಟ್ಟುಕೊಂಡ ಅಧಿರಾಜ್ಯಕ ಶಕ್ತಿಯೊಂದಿಗೆ ಬಲವರ್ಧಕ ಅಂಟುನಂಟನ್ನಷ್ಟೇ ಉಂಟುಮಾಡುತ್ತಿತ್ತು. ಹಳೆಯ ಋಷಿಗಳ ಆದರ್ಶ ಉದ್ದೇಶಗಳು ಹೀಗೆ ಸ್ಪಷ್ಟವಾಗಿವೆ. ವಿಭಕ್ತವಾಗಿ ಹೋರಾಡುತ್ತಿದ್ದ ಜನಾಂಗಗಳ ಐಕ್ಯದ ಅವಶ್ಯಕತೆಯನ್ನೂ ಸೈನಿಕ ಹಾಗೂ ರಾಜಕೀಯ ಪ್ರಯೋಜನವನ್ನೂ ಅವರು ಕಂಡಿದ್ದರೆಂಬುದು ಸ್ಫುಟವಾಗಿದೆ; ಆದರೆ ಪ್ರಾದೇಶಿಕ ಜನಾಂಗಗಳ ಸ್ವತಂತ್ರ ಜೀವನವನ್ನು ಹಾಳು ಮಾಡಿಯಾಗಲಿ ಸಾಮುದಾಯಿಕ ಅಧಿಕಾರಗಳನ್ನು ನಷ್ಟಗೊಳಿಸಿಯಾಗಲಿ ಮತ್ತು ಆ ಕಾರಣಕ್ಕಾಗಿ ನಿರ್ಮಿಸಿದ ಕೇಂದ್ರೀಕೃತ ರಾಜಪ್ರಭುತ್ವ ಇಲ್ಲವೆ ಬಿಗಿಯಾದ ಏಕಛತ್ರಾಧಿಪತ್ಯದ ಸರಕಾರದಿಂದಾಗಲಿ ಅವನ್ನು ಸಾಧಿಸಕೂಡದೆಂಬುದನ್ನು ಅವರು ಅರಿತಿದ್ದರು. ಜನತೆಯ ಮನದ ಮೇಲೆ ಅಚ್ಚೊತ್ತಲೆಳಸಿದ ಅವರ ಆ ಕಲ್ಪನೆ ಪಾಶ್ಚಾತ್ಯ ನಿದರ್ಶನವಾದ ಅಧಿರಾಜ್ಯಕ ಅಥವಾ ಸಾಮ್ರಾಜ್ಯಕ ಅಧಿಪತಿಯ ಅಂಕೆಗೊಳಗಾದ ಸಂಯುಕ್ತ ರಾಜ್ಯಕ್ಕೆ ಹತ್ತಿರವಾಗಬಹುದು.

# ೮. ವಾಯುವ್ಯದ ದುರ್ಬಲ ಸ್ಥಾನಗಳು

ಯುಧಿಷ್ಠಿರನ ಧರ್ಮರಾಜ್ಯಕ್ಕೆ ಹಿಂದೆ ಅಂಥ ಎಷ್ಟೋ ಸಾಮ್ರಾಜ್ಯಗಳಿದ್ದವೆಂದು ಇತಿಹಾಸ ಪುರಾಣ ಪರಂಪರೆ ಉಲ್ಲೇಖಿಸಿದರೂ ಎಂದಾದರೂ ಈ ಆದರ್ಶವನ್ನು ಜಯಪ್ರದವಾಗಿ ಕಾರ್ಯರೂಪಕ್ಕೆ ತಂದುದಕ್ಕೆ ಐತಿಹಾಸಿಕ ಸಾಕ್ಷಿಯಿಲ್ಲ. ಬುದ್ಧನ ಕಾಲದಲ್ಲೂ ಅನಂತರ ಚಂದ್ರಗುಪ್ತ ಚಾಣಕ್ಯರು ಮೊಟ್ಟಮೊದಲಿನ ಇತಿಹಾಸಪ್ರಸಿದ್ಧ ಭಾರತೀಯ ಸಾಮ್ರಾಜ್ಯವನ್ನು ಕಟ್ಟುತ್ತಿದ್ದಾಗಲೂ ದೇಶದ ತುಂಬ ಸ್ವತಂತ್ರ ರಾಜ್ಯಗಳೂ ಗಣರಾಜ್ಯಗಳೂ ಇದ್ದವಲ್ಲದೆ, ಅಲೆಕ್ಸಾಂಡರನ ದಾಳಿಯನ್ನೆದುರಿಸಲು ಏಕೀಕೃತ ಸಾಮ್ರಾಜ್ಯವಾವುದೂ ಇರಲಿಲ್ಲ. ಅದಕ್ಕೂ ಮೊದಲು ಯಾವುದಾದರೂ ಅಧಿರಾಜ್ಯವಿದ್ದಿದ್ದರೂ ಬಹಳ ಕಾಲ ಬಾಳುವ ಪದ್ಧತಿಯನ್ನಾಗಲಿ ಅಥವಾ ಸಾಧನವನ್ನಾಗಲಿ ಕಂಡುಹಿಡಿಯಲು ಶಕ್ತವಾಗಿರಲಿಲ್ಲ ಎಂಬುದು ಸುಸ್ಪಷ್ಟ. ಕಾಲಾವಕಾಶ ದೊರೆತಿದ್ದರೆ ಇದು ವಿಕಾಸಹೊಂದುತ್ತಿತ್ತು; ಆದರೆ ಈ ನಡುವೆ ಗಂಭೀರವಾದೊಂದು ಪರಿವರ್ತನ ನಡೆದುದರಿಂದ ಅದಕ್ಕಾಗಿ ಒಂದು ಸದ್ಯಃ ಕಾಲಿಕ ಪರಿಹಾರವನ್ನು ಹುಡುಕಬೇಕಾಯಿತು. ಇಂದಿನವರೆಗೂ ವಾಯವ್ಯದ ದ್ವಾರಗಳ ಮೂಲಕವಾದ ದುರ್ಬಲಸ್ಥಾನವತ್ತೆಯೇ ಭಾರತ ದ್ವೀಪಕಲ್ಪದ ಇತಿಹಾಸಪ್ರಸಿದ್ಧ ಅಶಕ್ತಿ ಎನಿಸಿದೆ. ಹಳೆಯ ಭಾರತವು ಸಿಂಧುನದಿಯಿಂದ ಅತಿದೂರವಾದಿ ಉತ್ತರಕ್ಕೆ ಹರಡಿಕೊಂಡಿರುವವರೆಗೆ ಈ ಅಶಕ್ತಿ ಇರಲಿಲ್ಲ; ಬಲಿಷ್ಠವಾದ ಗಾಂಧಾರ ವಾಹ್ಲೀಕ ರಾಜ್ಯಗಳು ವಿದೇಶೀಯ ದಾಳಿಯ ವಿರುದ್ಧವಾಗಿ ನಿಂತ ಸುದೃಢ ದುರ್ಗವಾಗಿದ್ದವು. ಅಷ್ಟರಲ್ಲಿ ಸಂಘಟಿತ ಪಾರಸೀಕ ಸಾಮ್ರಾಜ್ಯದೆದುರು ನಿಲ್ಲಲಾರದೆ ಅವು ಅಳಿಸಿಹೋಗಿದ್ದವು. ಅಂದಿನಿಂದ ಮುಂದೆ ಸಿಂಧೂತ್ತರ ದೇಶಗಳು ಭಾರತದ ಭಾಗವಾಗುವುದನ್ನುಳಿದವಷ್ಟೇ ಅಲ್ಲದೆ, ಅದರ ಸಂರಕ್ಷಕಗಳಾಗುವುದನ್ನೂ ಬಿಟ್ಟು ಅದರ ಬದಲು ಉತ್ತರೋತ್ತರ ದಾಳಿಗಾರರಲ್ಲಿ ಪ್ರತಿಯೊಬ್ಬನಿಗೂ ಸುರಕ್ಷಿತ ಠಾಣ್ಯಗಳಾದವು. ಅಲೆಕ್ಸಾಂಡರನ ಅಂತಃ ಪ್ರವೇಶವು ಭಾರತೀಯ ರಾಜಕೀಯ ಬುದ್ಧಿಗೆ ಆ ಅಪಾಯದ ಪರಿಣಾಮವನ್ನು ಮನವರಿಕೆ ಮಾಡಿಕೊಟ್ಟಿತು ಮತ್ತು ಆ ಕಾಲದಿಂದ ಕವಿಗಳೂ ಲೇಖಕರೂ ರಾಜಕೀಯ ಚಿಂತಕರೂ ಸತತವಾಗಿ ಸಾಮ್ರಾಜ್ಯಕ ಆದರ್ಶವನ್ನು ಅಥವಾ ಅದನ್ನು ಪಡೆಯುವ ಸಾಧನವನ್ನು ವಿವೇಚಿಸುತ್ತ ನಡೆದುದು ಕಂಡುಬರುತ್ತದೆ. ಅದರ ಸದ್ಯಃ ಕಾಲದ ವಾಸ್ತವಿಕ ಪರಿಣಾಮವೆಂದರೆ: ಚಾಣಕ್ಯನ ರಾಜತಂತ್ರಜ್ಞತೆಯಿಂದ ಬಹುಬೇಗ ಸ್ಥಾಪಿಸಲ್ಪಟ್ಟ ಸಾಮ್ರಾಜ್ಯ ಉದಯಿಸಿದ್ದು; ಪದೇ ಪದೇ ಅದನ್ನು ಉಳಿಸಿಕೊಂಡದ್ದು ಅಥವಾ ಅದು ಎಂಟೊಂಬತ್ತು ಶತಮಾನಗಳವರೆಗೆ ಪುನರುಜ್ಜೀವಿಸಲ್ಪಟ್ಟದ್ದು ನಡುನಡುವೆ ಅಶಕ್ತತೆಯ ಅವಧಿಗಳು ಒದಗಿದರೂ ಒಡೆದುಹೋಗುವ ಸಂದರ್ಭಗಳು ಪ್ರಾಪ್ತವಾದರೂ ಒಂದಾದ ಮೇಲೊಂದರಂತೆ ಮೌರ್ಯ, ಸುಂಗ, ಕಣ್ವ, ಆಂಧ್ರ ಮತ್ತು ಗುಪ್ತ ಮನೆತನಗಳು

ಅದನ್ನು ಎತ್ತಿಹಿಡಿದದ್ದು, ಈ ಸಾಮ್ರಾಜ್ಯದ ಚರಿತ್ರೆ, ಇದರ ಗಣನೀಯ ಸಂಘಟನೆ, ಆಡಳಿತ, ಲೋಕೋಪಯೋಗದ ಕಾರ್ಯ, ಐಶ್ವರ್ಯ, ರಮ್ಯಸಂಸ್ಕೃತಿ ಮತ್ತು ಓಜಸ್ಸು, ತೇಜಸ್ಸು ಹಾಗೂ ಚೆನ್ನಾದ ಕೃತಕೃತ್ಯತೆಗಳ ಚರಿತ್ರೆ ಇದರ ಆಶ್ರಯದಲ್ಲಿ ಬೆಳೆದ ಈ ಪರ್ಯಾಯ ದ್ವೀಪದ ಬಾಳಿನ ಅಲ್ಲಿ ಇಲ್ಲಿ ಹರಿದು ಹಂಚಿ ಹೋದ ಅಸಮಗ್ರ ಅಭಿಲೇಖನಗಳಿಂದಷ್ಟೇ ಲಭ್ಯವಾಗಿದೆ; ಆದರೂ ಇದು ಭೂವಲಯದ ಮಹಾ ಜನತೆಗಳ ಪ್ರತಿಭೆ ಕಟ್ಟಿ ನೆಲೆನಿಲ್ಲಿಸಿದ ಶ್ರೇಷ್ಠ ಸಾಮ್ರಾಜ್ಯಗಳ ಸಾಲಿಗೆ ಸೇರತಕ್ಕದ್ದಾಗಿದೆ. ಈ ದೃಷ್ಟಿಯಿಂದ ನೋಡಿದರೆ, ಸಾಮ್ರಾಜ್ಯ ನಿರ್ಮಾಣದಲ್ಲಿಯ ತನ್ನ ಪ್ರಾಚೀನ ಸಿದ್ಧಿಯ ಬಗ್ಗೆ ಹೆಮ್ಮೆಪಡಲೂ ಅದರ ಹಳೆಯ ನಾಗರಿಕತೆಗೆ ಬಲಿಷ್ಠ ವ್ಯವಹಾರ ಪ್ರತಿಭೆ ಅಥವಾ ಉನ್ನತ ರಾಜಕೀಯ ಗುಣವಿದ್ದಿಲ್ಲೆಂಬ ಗಡಿಬಿಡಿಯ ತೀರ್ಮಾನಕ್ಕೆ ಬಗ್ಗದಿರಲೂ ಬೇಕಾದಷ್ಟು ಕಾರಣಗಳಿವೆ.

## ೯. ಅಲೆಕ್ಸಾಂಡರನ ದಾಳಿಯ ಅನಂತರದ ಆಧ್ಯಾತ್ಮಿಕ ವಿಸಂಧಿ

ಅದೇ ವೇಳೆಗೆ ಪರಿಸ್ಥಿತಿಯ ಒತ್ತಾಯದ ಅವಶ್ಯಕತೆಯನ್ನು ಪೂರೈಸಲೆಂದು ಮಾಡಿದ ಅದರ ಮೊದಲ ರಚನೆಯ ಅನಿವಾರ್ಯವಾದ ತ್ವರೆ, ಹಿಂಸೆ ಮತ್ತು ಕೃತಕತೆಗಳಿಂದ ಈ ಸಾಮ್ರಾಜ್ಯವು ಕಷ್ಟನಷ್ಟಗಳಿಗೀಡಾಯಿತು. ಏಕೆಂದರೆ, ತನ್ನ ಗಭೀರತಮ ಆದರ್ಶದ ಸತ್ಯದ ಹಳೆಯ, ಘನ ಭಾರತೀಯ ಬಗೆಯಿಂದ ಇಚ್ಛಾಪೂರ್ವಕವಾಗಿ, ಸ್ವಾಭಾವಿಕವಾಗಿ ಹಾಗೂ ಸ್ತಿಮಿತಗತಿವಡೆದು ವಿಕಾಸಹೊಂದಲು ಅದಕ್ಕೆ ಉಕ್ತ ಅಂಶಗಳು ಅವಕಾಶಕೊಡಲಿಲ್ಲ. ಕೇಂದ್ರೀಕೃತ ಸಾಮ್ರಾಜ್ಯಕ ರಾಜಪ್ರಭುತ್ವವನ್ನು ಸ್ಥಾಪಿಸಲು ಮಾಡಿದ ಪ್ರಯತ್ನವು ಸ್ವತಂತ್ರ ಸಂಯೋಗ ಅಥವಾ ಸಾಮರಸ್ಯವನ್ನು ತಾರದೆ ಪ್ರಾದೇಶಿಕ ಸ್ವಾಯತ್ತತೆಗಳ ವಿಘಟನೆಯನ್ನು ತಂದಿತು. ಭಾರತೀಯ ತತ್ವದಂತೆ ಅವುಗಳ ಸಂಸ್ಥೆ ಮತ್ತು ರೂಢಿ ಸಂಪ್ರದಾಯಗಳಿಗೆ ಮಾನ್ಯತೆ ದೊರೆತರೂ ಮೊಟ್ಟಮೊದಲು ಅನೇಕ ಸಂದರ್ಭಗಳಲ್ಲಿ ಅವುಗಳ ರಾಜಕೀಯ ಸಂಸ್ಥೆಗಳನ್ನು ಸಹ ಪೂರ್ಣವಾಗಿ ನಿರ್ನಾಮಗೊಳಿಸದೆ ಸಾಮ್ರಾಜ್ಯಕ ಪದ್ಧತಿಯೊಳಗೆ ಅಳವಡಿಸಿದರೂ ಇವಾವುವೂ ಸಾಮ್ರಾಜ್ಯಕ ಕೇಂದ್ರೀಕರಣದ ನೆರಳಿನಡಿಯಲ್ಲಿ ನಿಜವಾಗಿ ವೃದ್ಧಿಹೊಂದಲಾರದಾದವು. ಪ್ರಾಚೀನ ಭಾರತೀಯ ಪ್ರಪಂಚದ ಸ್ವತಂತ್ರ ಜನಾಂಗಗಳು ಅದೃಶ್ಯವಾಗಲಾರಂಭಿಸಿದವು; ಅವುಗಳ ಭಿನ್ನಭಿನ್ನ ಸಾಮಗ್ರಿಗಳು ಅನಂತರ ಈಗಿನ ಭಾರತೀಯ ಗೋತ್ರಜರ ನಿರ್ಮಾಣಕ್ಕೆ ಪ್ರಯೋಜಕವಾದವು. ಮಹಾಜನ ಸಭೆಗಳು ಅನಂತರ ಬಹುಕಾಲ ಶಕ್ತವಾಗಿ ಉಳಿದುಕೊಂಡುಬಂದರೂ ಅವುಗಳ ಕರ್ತವ್ಯ ಕೊನೆಯಲ್ಲಿ ಹೆಚ್ಚು ಯಾಂತ್ರಿಕವಾಗಲು ಅಲ್ಲದೆ ಅವುಗಳ ಚೈತನ್ಯ ಕ್ಷಯಿಸಲೂ ಅಳಿಯಲೂ ಪ್ರವೃತ್ತವಾದವು.

ನಗರದ ಗಣರಾಜ್ಯಗಳು ಕೂಡ ಹೆಚ್ಚು ಹೆಚ್ಚಾಗಿ ಸಂಘಟಿತ ರಾಜ್ಯದ ಅಥವಾ ಸಾಮ್ರಾಜ್ಯದ ನಗರಪಾಲಿಕೆಗಳಾಗಲು ಆರಂಭಿಸಿದವು. ಸಾಮ್ರಾಜ್ಯಕ ಕೇಂದ್ರೀಕರಣ ಸೃಜಿಸಿದ ಮಾನಸ ಅಭ್ಯಾಸಗಳೂ ಹಿಂದಿನ ಹೆಚ್ಚು ಗಾಂಭೀರ್ಯವತ್ತಾದ ಸ್ವತಂತ್ರ ಜನಸಂಸ್ಥೆಗಳ ಶಕ್ತಿನಾಶ ಅಥವಾ ಆದರ್ಶನವೂ ಒಂದು ಬಗೆಯ ಆಧ್ಯಾತ್ಮಿಕ ವಿಸಂಧಿಯನ್ನು ಉಂಟುಮಾಡಿದವು. ಆ ವಿಸಂಧಿಯ ಒಕ್ಕಡೆ ತಮ್ಮ ಧರ್ಮ, ಜೀವನ ಮತ್ತು ರೂಢಿ ಸಂಪ್ರದಾಯಗಳಲ್ಲಿ ಬಹಳವಾಗಿ ಕೈಹಾಕದೆ ತಮಗೆ ಸುರಕ್ಷಿತತೆಯನ್ನಿತ್ತ ಯಾವ ಸರಕಾರವಾದರೂ ಸರಿಯೆಂಬ ಪ್ರಶಾಸಿತ ತೃಪ್ತಿಯಿದ್ದರೆ, ಮತ್ತೊಂದೆಡೆ, ಹಿಂದಿನ ನಿಜವಾದ ಭಾರತೀಯ ರಾಜಕೀಯ ಚೇತಸ್ಸು ಪ್ರಣಿಧಾನಿಸಿದ ಸ್ವತಂತ್ರ ಸಚೇತನ ಜನತೆಯ ಸಚೇತನ ಪ್ರಭುವಾಗದ, ಆದರೆ ನಿಃಸಂಶಯವಾಗಿ ಉಪಕಾರಿಯೂ ರಮ್ಯವೂ ಆದ, ಸಾಮ್ರಾಜ್ಯಕ ಪ್ರಶಾಸನವಿತ್ತು. ಈ ಫಲಗಳು ಕ್ಷೀಣಕಾಲದಲ್ಲಷ್ಟೇ ಎದ್ದುಕಂಡವು ಹಾಗೂ ಅತ್ಯಂತಿಕವೆನಿಸಿದವು; ಆದರೆ ಅವು ಮೊದಲೇ ಬೀಜರೂಪದಲ್ಲಿದ್ದವು ಮತ್ತು ಏಕೀಕರಣದ ಆ ಒಂದು ಬಗೆಯ ಯಾಂತ್ರಿಕ ಕ್ರಮದ ದೆಸೆಯಿಂದ ಅವುಗಳ ಉಪಸ್ಥಿತಿ ಅನಿವಾರ್ಯವೇ ಆಯಿತೆಂದು ಹೇಳಬೇಕು. ಬಲವತ್ತರವೂ ಸಂಗತತರವೂ ಆದ ಸೈನಿಕ ಕಾರ್ಯಾಚರಣೆ ಮತ್ತು ಹೆಚ್ಚು ಕ್ರಮಬದ್ಧವೂ ಏಕರೂಪವೂ ಆದ ಆಡಳಿತಗಳು ಅದರಿಂದಾದ ಲಾಭಗಳು; ಆದರೆ ಇವು ಕೊನೆಯಲ್ಲಿ ಜನರ ಮನ–ಭಾವಗಳ ನಿಜವಾದ ಅಭಿವ್ಯಕ್ತಿಯೆನಿಸಿದ ಸ್ವತಂತ್ರ ಸಂಘಟಿತ ವೈವಿಧ್ಯಪೂರ್ಣ ಜೀವನದ ಭಂಗವನ್ನು ತುಂಬಿಕೊಡಲಾರದಾದವು.

# ೧೦. ಅಧರ್ಮದ ಅಭ್ಯುತ್ಥಾನ

ಆ ಸಮಯದಲ್ಲಿ ಧರ್ಮದ ಉಚ್ಚ ಆದರ್ಶದಿಂದ ಒಂದು ಅಧಃಪಾತ ಸಂಭವಿಸಿದ್ದು ಅತ್ಯಂತ ದುಷ್ಪಸಮ ದುರ್ವಿಪಾಕವೆನ್ನಬೇಕು. ಆದಿಪತ್ಯಕ್ಕಾಗಿ ರಾಜ್ಯರಾಜ್ಯಗಳೊಡನೆ ಉಂಟಾಗುತ್ತಿದ್ದ ಹೋರಾಟದಲ್ಲಿ ಹಿಂದಿನ ಉದಾತ್ತತರ ನೈತಿಕ ಆದರ್ಶಗಳ ಬದಲು ಅಸುರ ರಾಜತಂತ್ರ ತಲೆದೋರಿತು; ಅಕ್ರಾಮಕ ಮಹತ್ವಾಕಾಂಕ್ಷೆಗೆ ಸಾಕಷ್ಟು ಆಧ್ಯಾತ್ಮಿಕ ಅಥವಾ ನೈತಿಕ ಹಿಡಿತವಿಲ್ಲವಾಯಿತು; ಮೌರ್ಯಕಾಲೀನ ಉಗ್ರದಂಡ ಸಂಬಂಧಿ ವಿಧಾನದಲ್ಲೂ ಅಶೋಕನ ರಕ್ತಮಯ ಓಡಿಸ್ಸ ವಿಜಯದಲ್ಲೂ ಆಗಲೇ ಕಂಡಂತೆ ರಾಜನೀತಿಯ ಹಾಗೂ ಸರಕಾರದ ನೀತಿಧರ್ಮದಲ್ಲಿ ರಾಷ್ಟ್ರಮನ ಭ್ರಷ್ಟತೆಗಿಳಿದಿತ್ತು. ಧಾರ್ಮಿಕ ಭಾವನೆಯಿಂದಲೂ ಉಚ್ಚ ವಿವೇಕ ವಿಜ್ಞಾನದಿಂದಲೂ ತಡೆಹಿಡಿಯಲ್ಪಟ್ಟ ಅಧೋಗಮನವು ಅನಂತರ ಸುಮಾರು ಒಂದುಸಾವಿರ ವರ್ಷಗಳವರೆಗೆ ವಿಕೋಪವನ್ನು ಮುಟ್ಟಲಿಲ್ಲ; ಹಾಗೆ ವಿಕೋಪಹೊಂದಿದ್ದನ್ನು ಅಧೋಗತಿಯ ನೀಚತಮ ಅವಸ್ಥೆಯಲ್ಲಿ ನಾವು ಕಾಣಬಹುದು. ಆಗ ಅನಿರುದ್ಧವಾದ ಪರಸ್ಪರ ಆಕ್ರಮಣ,

ಕಡಿವಾಣ ಕಾಣದ ಹಮ್ಮು ಅರಸರಲ್ಲೂ ನೇತೃಗಳಲ್ಲೂ ತಾಂಡವಿಸಿತು; ರಾಜಕೀಯ ತತ್ವನಿಷ್ಠೆ ಎಳ್ಳಷ್ಟೂ ಇಲ್ಲವಾಯಿತು; ದೇಶವು ಫಲಪ್ರದ ಏಕೀಕರಣಕ್ಕೆ ತೀರ ಅಶಕ್ತವಾಯಿತು; ಅಲ್ಲಿ ಸರ್ವಸಾಧಾರಣ ದೇಶ ಪ್ರೇಮ ಒಡಮೂಡಲಿಲ್ಲ; ಸಾಮಾನ್ಯ ಜನತೆಯ 'ರಾಯರಿಗೆ ರಾಜ್ಯವಾದರೆ ರಾಗಿ ಬೀಸುವುದು ತಪ್ಪುವುದೇ!' ಎಂಬ ಶಾಸಕ ಪರಿವರ್ತನ ಪರವಾದ ಔದಾಸೀನ್ಯ ಇವು ಸಮುದ್ರದಾಚೆಯಿಂದ ಬಂದ ಬೆರಳೆಣಿಕೆಯಷ್ಟು ವ್ಯಾಪಾರಿಗಳಿಗೆ ಈ ಪರ್ಯಾಯದ್ವೀಪವನ್ನು ವಶಪಡಿಸಿದವು. ಆದರೆ ದುಷ್ಟತಮ ಪರಿಣಾಮಗಳ ಆಗಮನ ಎಷ್ಟು ವಿಲಂಬಿತವಾದರೂ ಸಾಮ್ರಾಜ್ಯದ ರಾಜಕೀಯ ಉನ್ನತಿಯಿಂದಲೂ ರಮ್ಯವಾದ ಬೌದ್ಧಿಕ ಹಾಗೂ ಕಲಾತ್ಮಕ ಸಂಸ್ಕೃತಿಯಿಂದಲೂ ಪದೇ ಪದೇ ನಡೆದ ಆಧ್ಯಾತ್ಮಿಕ ಪುನರುಜ್ಜೀವನದಿಂದಲೂ ಅದು ಎಷ್ಟೇ ಪ್ರತಿರುದ್ಧವಾದರೂ ಸುಸ್ಥಿತಿ ಪುನರಾಗಮನ ಎಷ್ಟೋ ಸಲ ಸಂಭವಿಸಿದರೂ ಅನಂತರದ ಗುಪ್ತರ ಕಾಲದಲ್ಲಿಯೇ ಭಾರತವು ತನ್ನ ಜನಾಂಗಗಳ ರಾಜಕೀಯ ಜೀವನದಲ್ಲಿ ತನ್ನ ನಿಜಮನ ಮತ್ತು ಅಂತರ ಸಮಭಾವನೆಯ ಸ್ವಾಭಾವಿಕವೂ ಪರಿಪೂರ್ಣವೂ ಆಗಿ ವಿಕಾಸವಾಗುವ ಸಂಭವವನ್ನು ಕಳೆದುಕೊಂಡಿತ್ತು.

ಈ ಮಧ್ಯೆ ಸಾಮ್ರಾಜ್ಯವು ಸಂಪೂರ್ಣವಾಗಿ ಅಲ್ಲದಿದ್ದರೂ ಸಾಕಷ್ಟು ಮಟ್ಟಿಗೆ ತನ್ನ ಸ್ಥಾಪನೆಯ ಉದ್ದೇಶವನ್ನು ಸಫಲಗೊಳಿಸಿತ್ತು; ಹಳೆಯ ಸ್ತಿಮಿತ ಸಂಸ್ಕೃತಿಗಳೆಲ್ಲವನ್ನೂ ಉರುಳಿಸುವ ಹೆದರಿಕೆ ಹಾಕಿದ ಮತ್ತು ಕೊನೆಯಲ್ಲಿ ಅತ್ಯುನ್ನತವಾಗಿ ಪ್ರವೃದ್ಧವಾದ ಗ್ರೀಕ್-ರೋಮಕ ನಾಗರಿಕತೆಗೂ ಪ್ರಬಲವಾದ ರೋಂ ಚಕ್ರಾಧಿಪತ್ಯಕ್ಕೂ ಅಜಯ್ಯ ಶತ್ರುವೆನಿಸಿದ ಅನಾಗರಿಕ ಆಂದೋಲನದ ಅಪಾರಪೂರದ ಆಕ್ರಮಣದಿಂದ ಭಾರತದ ನೆಲವನ್ನೂ ನಾಗರಿಕತೆಯನ್ನೂ ಸಂರಕ್ಷಿಸುವ ಕಾರ್ಯವನ್ನು ಅದು ಜಯಪ್ರದವಾಗಿ ನೆರವೇರಿಸಿತು. ಆ ಅನಾಗರಿಕ ಕ್ಷೋಭೆ ಟ್ಯೂಟನ, ಸ್ಲಾವ, ಹೂಣ ಹಾಗೂ ಸಿಥಿಯನ್ನರನ್ನು ರಾಶಿರಾಶಿಯಾಗಿ ಪಡುವಲು, ಮೂಡಲು ಮತ್ತು ತೆಂಕಲುಗಳಿಗಟ್ಟಿತು; ಅನೇಕ ಶತಮಾನಗಳ ತನಕ ಭಾರತದ್ವಾರಕ್ಕೆ ಬಡಿಯುತ್ತಲಿತ್ತು, ಕೆಲ ಅಂತಃ ಪ್ರವೇಶಗಳನ್ನು ಮಾಡಿತು; ಆದರೆ ಅದು ಮುಳುಗಿನಡೆದಾಗ ಭಾರತೀಯ ನಾಗರಿಕತೆಯನ್ನು ಮೊದಲಿದ್ದಂತೆಯೇ ಸುದೃಢವೂ ಉನ್ನತವೂ ಸುರಕ್ಷಿತವೂ ಆಗಿ ಉಳಿಯುವಂತೆ ಬಿಟ್ಟಿತ್ತು. ಸಾಮ್ರಾಜ್ಯ ದುರ್ಬಲವಾದಾಗಲೆಲ್ಲ ಕ್ಷೋಭೆಯ ಉದ್ರೇಕ ಉಂಟಾಗುತ್ತಿತ್ತು; ಇಂಥ ಉದ್ರೇಕವಾಗುತ್ತಿದ್ದುದು ಯಾವಾಗಲಾದರೂ ಕೆಲ ಅವಧಿ ದೇಶ ಸುರಕ್ಷಿತತೆಯಲ್ಲಿದ್ದಾಗ ಯಾವ ಅಗತ್ಯದಿಂದ ನಿರ್ಮಿತವಾಯಿತೋ ಆ ಅಗತ್ಯ ಕೆಲಕಾಲ ಆಗಾಗ ಇಲ್ಲವಾದಾಗ ಸಾಮ್ರಾಜ್ಯ ದುರ್ಬಲಗೊಳಿಸಲ್ಪಡುತ್ತಿತ್ತು. ಏಕೆಂದರೆ ಆಗ ಅದರ ಐಕ್ಯವನ್ನು ಭಂಗಗೊಳಿಸುವ ಇಲ್ಲವೆ ಉತ್ತರದಲ್ಲೆಲ್ಲ ಹಬ್ಬಿದ ಅದರ ಮಹಾವಿಸ್ತಾರವನ್ನು ಖಂಡಿಸುವ ಪ್ರತ್ಯೇಕೀಕರಣದ ಚಳವಳಿಗಳಲ್ಲಿ ಪ್ರಾದೇಶಿಕಭಾವನೆ ಪುನಃಪುನಃ ಉದಯವಾಗುತ್ತಿತ್ತು. ಹೊಸದೊಂದು ಅಪಾಯಬಂತೆಂದಕೂಡಲೇ

ಆ ಸಾಮ್ರಾಜ್ಯದ ಶಕ್ತಿ ಹೊಸ ಅರಸೊತ್ತಿಗೆಯಲ್ಲಿ ಪುನಃ ಪ್ರರೂಢವಾಗುತ್ತಿತ್ತು. ಇಂಥ ಅಪಾಯ ಪದೇ ಪದೇ ಪುನರ್ಭವಿಸುತ್ತಿತ್ತು; ಆದರೆ ಕೆಲಮಟ್ಟಿನ ದೀರ್ಘಕಾಲದವರೆಗೆ ಅಂಥ ಅವಗಡ ಸಂಭವಿಸದೆ ಹೋಗಲು ಅಂಥ ಪ್ರಸಂಗಕ್ಕಾಗಿಯೇ ನಿರ್ಮಿತವಾಗಿದ್ದ ಆ ಸಾಮ್ರಾಜ್ಯ ನಾಮಶೇಷವಾಯಿತು. ಅದರ ಲಯ ಮೂಡಲು, ತೆಂಕಲು, ಮತ್ತು ನಡುವಲಗಳಲ್ಲಿ ಕೆಲ ಮಹಾರಾಜ್ಯಗಳನ್ನು ಬಿಟ್ಟುಹೋಯಿತಲ್ಲದೆ, ಮೊದಲಿಗಿಂತ ಅಧಿಕ ಗಲಿಬಿಲಿಯ ಜನಾಂಗ ರಾಶಿಗಳನ್ನು ವಾಯುವ್ಯದಲ್ಲಿ ಉಳಿಸಿ ನಡೆಯಿತು. ಈ ಗೊಂದಲದ ವಾಯುವ್ಯ ಭಾರತದ ದುರ್ಬಲಸ್ಥಾನವೆನಿಸಿ ಆ ಮೂಲಕ ಮುಸಲ್ಮಾನರು ಒಳಹೊಕ್ಕು ಬಡಗಲಲ್ಲಿ ಅತ್ಯಲ್ಪ ಅವಧಿಯಲ್ಲೇ ಮಧ್ಯ ಏಶಿಯದ ಮಾದರಿಯ ಸಾಮ್ರಾಜ್ಯವನ್ನು ಯಥಾಪೂರ್ವ ಕಟ್ಟಿದರು.

## ೧೧. ಪೌರಸ್ತ್ಯ ಪಂಡಿತರ ಅಪಸಿದ್ಧಾಂತ

ಈ ಮೊದಮೊದಲಿನ ವಿದೇಶೀಯ ದಾಳಿಗಳನ್ನೂ ಅವುಗಳ ಫಲಗಳನ್ನೂ ಅವುಗಳ ನಿಜಪ್ರಮಾಣಗಳಲ್ಲೇ ಅಳೆದು ನೋಡಬೇಕು. ಪೌರಸ್ತ್ಯ ಪಂಡಿತರ ಅತಿಶಯೋಕ್ತಿನಿಬದ್ಧ ಸಿದ್ಧಾಂತಗಳಿಂದ ಅವು ಅನೇಕವೇಳೆಗೊಂದಲಕ್ಕೀಡಾದ್ದುಂಟು. ಅಲೆಕ್ಸಾಂಡರನ ದಾಳಿ ಹೆಲನಿಜಮ್ಮಿನ ಮೂಡುಮೊಗದ ಇಂಡಿಯದಲ್ಲಿ ಅದಕ್ಕೆ ಭವಿಷ್ಯವಿದ್ದಿಲ್ಲ. ಚಂದ್ರಗುಪ್ತನಿಂದ ಕೂಡಲೇ ಹೊರ ಹೊರಡಿಸಲ್ಪಟ್ಟ ಅದು ಯಾವ ಅವಶೇಷವನ್ನೂ ಇಲ್ಲಿ ಉಳಿಸಲಿಲ್ಲ. ಅನಂತರದ ಮೌರ್ಯರ ದುರ್ಬಲಾವಸ್ಥೆಯಲ್ಲಿ ಪ್ರವೇಶಿಸಿದ ಗ್ರೀಕ್ ಬ್ಯಾಕ್ಟ್ರಿಯನರ ಪ್ರಾಬಲ್ಯ ಪುನರುಜ್ಜೀವಿತ ಮೌರ್ಯ ಸಾಮ್ರಾಜ್ಯದಿಂದ ನಿರ್ನಾಮಹೊಂದಿತು. ಹಾಗೆ ನಿರ್ನಾಮಹೊಂದಿದ್ದು ಆಗಲೇ ಭಾರತೀಯ ಸಂಸ್ಕೃತಿಯ ಗಾಢ ಪ್ರಭಾವಕ್ಕೊಳಗಾದ ಹೆಲ್ಲನೀಕೃತ ಜನಗಳದು. ಆಮೇಲಿನ ಪಾರ್ಥಿಯನ, ಹೂಣ ಮತ್ತು ಸಿಥಿಯನ ದಾಳಿಗಳು ಗಭೀರ ಪರಿಣಾಮಿಗಳಾಗಿದ್ದುದರಿಂದ ಭಾರತದ ಪೂರ್ಣತೆಗೆ ಅಪಾಯಕಾರಿಗಳಾಗಿ ಕಂಡವು. ಕೊನೆಗೆ ಅವು ಬಲವಾಗಿ ತಾಗಿದ್ದು ಪಂಜಾಬಿಗಷ್ಟೇ ಇನ್ನೂ ತೆಂಕಲಿಗೆ ಅವರು ತಮ್ಮ ಪ್ರಭಾವ ತರಂಗಗಳನ್ನು ಬೀಸಿದ್ದರು, ಪಶ್ಚಿಮತೀರದ ಮೇಲೆ ಅವು ಅಪ್ಪಳಿಸುತ್ತ ಬಂದದ್ದು ನಿಜ. ತೆಂಕಣಕಡೆ ಬಹಳ ಕೆಳಗೂ ವಿದೇಶೀಯ ಅರಸೊತ್ತಿಗೆಗಳನ್ನವು ಕೆಲಕಾಲ ನೆಲೆಗೊಳಿಸಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ಈ ಭಾಗಗಳ ಕುಲಗೋತ್ರ ಲಕ್ಷಣ ಅವುಗಳಿಂದ ಎಷ್ಟರಮಟ್ಟಿಗೆ ಮಾರ್ಪಾಟಿಗೀಡಾಯಿತೆಂಬುದು ಅಸ್ಪಷ್ಟ. ಪೌರಸ್ತ್ಯ ಪಂಡಿತರೂ ಕುಲಗೋತ್ರ ಶಾಸ್ತ್ರಜ್ಞರೂ ಪಂಜಾಬು ಪೂರ ಸಿಥಿಯ ನೀಕೃತವಾಯಿತು. ರಜಪೂತರು ಅದೇ ಕುಲದವರು, ಅವರ ಅಂತಃಪ್ರವೇಶದಿಂದ ದಕ್ಷಿಣದಲ್ಲಿಯೂ ಬಹಳ ದೂರದವರೆಗೆ ಕುಲಗೋತ್ರ ಪರಿವರ್ತನವಾಯಿತು ಎನ್ನುತ್ತಾರೆ. ಈ ತರ್ಕಗಳು ಪ್ರಮಾಣಗಳನ್ನು ಆಧರಿಸಿನಿಂತಿಲ್ಲ; ಮಿಕ್ಕ ಸಿದ್ಧಾಂತಗಳಿಂದ ಪ್ರತಿಹತವಾಗಿವೆ. ಅಂಥ ಗಣ್ಯ ಪರಿಣಾಮವನ್ನುಂಟು

ಮಾಡುವಷ್ಟು ಸಂಖ್ಯೆಯಲ್ಲಿ ಆ ಅನಾಗರಿಕದಾಳಿಗಾರರು ಬಂದರೆಂಬುದು ತೀರ ಸಂಶಯಾಸ್ಪದ. ಒಂದೆರಡು ಮೂರು ತಲೆಮಾರುಗಳಲ್ಲಿಯೇ ಆ ದಾಳಿಗಾರರು ಭಾರತೀಯ ಧರ್ಮವನ್ನು ಸ್ವೀಕರಿಸಿ, ಭಾರತೀಯ ರೀತಿನೀತಿ ಸಂಸ್ಕೃತಿಗಳಲ್ಲಿ ಕರಗಿ ಭಾರತೀಯರೇ ಆಗಿ, ಭಾರತೀಯ ಜನರಾಶಿಯಲ್ಲಿ ಲೀನರಾದ ಸಂಗತಿ ಅಂಥ ತರ್ಕದ ಅವಾಸ್ತವತೆಯನ್ನು ಸಾರುತ್ತದೆ. ರೋಮಕ ಚಕ್ರಾದಿಪತ್ಯದ ದೇಶಗಳಲ್ಲಾದರಂತೆ ಅನಾಗರಿಕ ಕುಲಚಕ್ರಗಳು ಅವಕ್ಕಿಂತ ಹೆಚ್ಚಿನದಾದ ಒಂದು ನಾಗರಿಕತೆಯ ಮೇಲೆ ತಮ್ಮ ಕಾಯಿದೆಗಳು ರಾಜಕೀಯ ಪದ್ಧತಿ, ಅನಾಗರಿಕ ರೂಢಿಗಳು, ವಿದೇಶೀಯ ಶಾಸನಗಳನ್ನು ಹೇರಿದ ಪರಿಸ್ಥಿತಿ ಇಲ್ಲಿ ಸಂಭವಿಸಲಿಲ್ಲ. ಈ ಉದ್ರೇಕಗಳ ಸರ್ವಸಾಧಾರಣ ಗಣ್ಯಸಂಗತಿ ಇದೇ. ಹೀಗಾದದ್ದು ಉಕ್ತ ಒಂದು ಅಥವಾ ಮೂರೂ ಕಾರಣಗಳಿಂದ ಇರಬಹುದು. ದಾಳಿಗಾರರು ಕೇವಲ ಸೈನ್ಯಗಳಾಗಿದ್ದಿರಬಹುದಲ್ಲದೆ ಜನಗಳಾಗಿದ್ದಿರಲಿಕ್ಕಿಲ್ಲ; ಆಕ್ರಮಣವು ಅನವಚ್ಛಿನ್ನ ವಿದೇಶೀಯ ಆಡಳಿತವಾಗಿರಲಿಲ್ಲ. ಅದರಿಂದ ಅದಕ್ಕೆ ತನ್ನ ವಿದೇಶೀಯತೆಯನ್ನು ದೃಢಗೊಳಿಸಲಾಗಲಿಲ್ಲ. ಏಕೆಂದರೆ ಪ್ರತಿಯೊಂದು ಆಕ್ರಮಣವಾದ ಮೇಲೂ ಭಾರತೀಯ ಸಾಮ್ರಾಜ್ಯದ ಶಕ್ತಿ ಪುನರುಜ್ಜೀವಿತವಾಯಿತು ಮತ್ತು ನಿರ್ಜಿತ ಪ್ರಾಂತಗಳನ್ನು ಪುನಃ ಸ್ವಾಧೀನಪಡಿಸಿಕೊಂಡಿತು. ಕೊನೆಯದಾಗಿ, ಆಕ್ರಾಮಕರು ಮಾನಸಿಕವಾಗಿ ಲೀನಹೊಂದುವುದಕ್ಕೆ ವಿರೋಧತೋರಲು ಬಲಿಷ್ಠ ಚೇತನವುಳ್ಳ ಭಾರತೀಯ ಸಂಸ್ಕೃತಿ ಸಾಧ್ಯವಾಗದಂತೆಮಾಡಿತು. ಹೇಗಿದ್ದರೂ ಈ ಉದ್ರೇಕಗಳೇನಾದರೂ ಗಣ್ಯಲಕ್ಷಣವುಳ್ಳವಾಗಿದ್ದುದೇ ಆದರೆ ತದ್ವಿರುದ್ಧನಿಂತ ಭಾರತೀಯ ನಾಗರಿಕತೆ ತಾನು ಅದಕ್ಕೂ ಅಧಿಕ ಸುಭದ್ರ, ಸಚೇತನ, ಘನ ಎಂದು ತೋರಿಸಿಕೊಟ್ಟಿತಲ್ಲದೆ ಆ ತಮ್ಮನಾದ ಗ್ರೀಕ್ ರೋಮಕ ನಾಗರಿಕತೆ ಟ್ಯೂಟನ ಅರಬರೆದುರು ನೆಲಕ್ಕಿಳಿದಿತು ಅಥವಾ ಗುಪ್ತಗಾಮಿನಿಯಾಗಿ ಉಳಿಯಿತು– ಅದೂ ಬಹಳ ಹೀನತೆಹೊಂದಿ, ಅನಾಗರಿಕವಾಗಿ, ಛಿನ್ನಭಿನ್ನವಾಗಿ, ಅನಭಿಜ್ಞೇಯವಾಗಿ, ಮತ್ತು ಘನತೆ, ಉನ್ನತಿ ತನ್ನಲ್ಲಿದೆಯೆಂದು ಜಂಭಕೊಚ್ಚಿಕೊಂಡ ರೋಮಕ ಚಕ್ರಾಧಿಪತ್ಯಕ್ಕಿಂತ ಒಟ್ಟಿನಲ್ಲಿ ತಾನೇ ಉತ್ತಮ ಎಂಬುದನ್ನು ಭಾರತೀಯ ಸಾಮ್ರಾಜ್ಯ ಸಿದ್ಧಮಾಡಿ ತೋರಿಸಿತೆಂದು ಹೇಳಬಹುದು. ಏಕೆಂದರೆ, ಪಶ್ಚಿಮದಲ್ಲಿ ಗಾಯಹೊಂದಿದರೂ ಅದು ಈ ದ್ವೀಪಕಲ್ಪದ ಮಹಾಜನರಾಶಿಯ ಸುರಕ್ಷಿತತೆಯನ್ನು ಉಳಿಕೊಂಬುದರಲ್ಲಿ ಯಶಸ್ವಿಯಾಯಿತು.

## ೧೨. ಮುಸಲ್ಮಾನರ ಭಾರತೀಯತೆ

ಆ ಬಳಿಕ ಒದಗಿದ ಅಧಃಪಾತ ಅರಬರ ಕೈಯಲ್ಲಿ ಪರಾಜಿತವಾದ ಮುಸಲಮಾನ ವಿಜಯ ಬಹಳ ಕಾಲಾನಂತರ ಜಯಪ್ರದವಾಗಿ ಪುನಃ ಪ್ರಯತ್ನದಿಂದ ನಡೆದದ್ದು ಮತ್ತು ಅದನನ್ನುಸರಿಸಿ ಸಂಭವಿಸಿದ ಎಲ್ಲ ಸಂಗತಿಗಳು–ಇವೇ ಭಾರತೀಯ ಜನಾಂಗಗಳ ಶಕ್ತಿಯ ಮೇಲೆ ಎಸೆದ ಸಂಶಯಾಸ್ತ್ರ ನ್ಯಾಯವೆಂದು ಸಿದ್ಧಮಾಡತಕ್ಕಂಥವು. ಆದರೆ

ಮೊಟ್ಟಮೊದಲು ನಿಜ ಸಂಗತಿಯನ್ನು ಮುಸುಕಿದ ಮೋಡಗಳನ್ನಷ್ಟು ನಾವು ದೂರಸರಿಸಿ ಇಡೋಣ. ಈ ವಿಜಯ ಸಂಭವಿಸಿದ್ದು ಎರಡುಸಾವಿರ ವರ್ಷಗಳ ಚಟುವಟಿಕೆ, ನಿರ್ಮಿತಿಗಳಿಂದ ಪ್ರಾಚೀನ ಭಾರತೀಯ ಜೀವನ ಸಂಸ್ಕೃತಿಗಳ ಪ್ರಾಣಶಕ್ತಿ ಆಗಲೇ ಕೆಲಕಾಲ ಸುಸ್ತಾಗಿ ನಿಂತಿದ್ದಾಗ ಅಥವಾ ಸುಸ್ತಾಗುವ ಸ್ಥಿತಿಗೆ ಮುಟ್ಟುತ್ತಿದ್ದಾಗ; ಅದಕ್ಕಾಗ ಸಂಸ್ಕೃತದಿಂದ ಜನಪ್ರಿಯಭಾಷೆಗಳಿಗೆ ವರ್ಗಾಯಿಸಿಕೊಂಡು, ಹೊಸದಾಗಿ ರೂಪಿತವಾಗುತ್ತಿದ್ದ ಪ್ರಾದೇಶಿಕ ಜನಾಂಗಗಳಿಗೆ ಹೊಂದಿಸಿಕೊಂಡು ತನ್ನ ಕಾಯಕಲ್ಪ ಸಾಗಿಸಿಕೊಳ್ಳಲು ಉಸಿರಿಡುವ ಅವಕಾಶಬೇಕಾಗಿತ್ತು. ಉತ್ತದಲ್ಲಿ ಈ ವಿಜಯ ಬಹುಬೇಗ ಸಾಗಿತು. ಬಹಳ ಶತಮಾನಗಳವರೆಗೇನೋ ಅದು ಪೂರ್ಣತೆಯನ್ನು ಮುಟ್ಟಲಿಲ್ಲ ಮತ್ತು ದಕ್ಷಿಣವು ಹಿಂದಿನಂತೆಯೇ, ಹಳೆಯ ದೇಶೀಯ ಸಾಮ್ರಾಜ್ಯದ ವಿರುದ್ಧ ಹೇಗೋ ಹಾಗೇ ತನ್ನ ಸ್ವಾತಂತ್ರ್ಯವನ್ನು ಬಹುಕಾಲ ಉಳಿಸಿಕೊಂಡಿತು. ವಿಜಯನಗರ ರಾಜ್ಯದ ಅಸ್ತಕ್ಕೂ ಮರಾಠರ ಉದಯಕ್ಕೂ ಬಹಳ ಉದ್ದಕಾಲದ ಅಂತರವುಂಟಾಗಲಿಲ್ಲ. ಅಕ್ಬರ ಮತ್ತು ಅವನ ಉತ್ತರಾಧಿಕಾರಿಗಳ ಕಾಲದವರೆಗೆ ರಜಪೂತರು ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಂಡರು. ಕೇವಲ ಕಟ್ಟಕಡೆಯಲ್ಲಿ ರಜಪೂತ ರಾಜರೇ ಅಂಶತಃ ಮೊಗಲರ ಸೇನಾಧಿಪತಿಗಳೂ ಮಂತ್ರಿಗಳೂ ಆಗಿ ನೆರವಿತ್ತುದರಿಂದ ಮೊಗಲರು ದಕ್ಷಿಣ ಪೂರ್ವಗಳ ಮೇಲಿನ ತಮ್ಮ ಪ್ರಭಾವವನ್ನು ಪೂರ್ತಿಗೊಳಿಸಲಾದರು. ಇದು ಏಕೆ ಸಾಧ್ಯವಾಯಿತೆಂದರೆ ಪದೇ ಪದೇ ಈ ವಿಷಯವನ್ನು ಎಲ್ಲರೂ ಮರೆಯುತ್ತಾರೆ ಮುಸಲ್ಮಾನರ ಮೇಲಧಿಕಾರವು ಬಹುಬೇಗ ವಿದೇಶೀಯ ಆಡಳಿತವಲ್ಲವಾಯಿತು. ದೇಶದಲ್ಲಿಯ ಮುಸಲಮಾನರ ಮಹಾರಾಶಿ ಕುಲಗೋತ್ರದಲ್ಲಿ ಭಾರತೀಯರಾಗಿದ್ದರು ಮತ್ತು ಈಗಲೂ ಆಗಿದ್ದಾರೆ; ಅದರಲ್ಲಿ ಎಲ್ಲೋ ಸ್ವಲ್ಪಮಟ್ಟಿಗೆ ಪಠಾನ, ತುರುಷ್ಕ ಮತ್ತು ಮೊಗಲ ರಕ್ತಮಿಶ್ರವಾಗಿತ್ತು ವಿದೇಶೀಯ ರಾಜರೂ ರಾಜಸ್ಥಾನೀಯರೂ ಕೂಡ ಒಮ್ಮೆಲೇ ಬಗೆ, ಬಾಳು, ಬಯಕೆಗಳಲ್ಲಿ ಪೂರ ಭಾರತೀಯರೇ ಆಗಿಹೋದರು. ಭಾರತಗೋತ್ರ ನಿಜವಾಗಿ ಕೆಲ ಯೌರೋಪ್ಯ ದೇಶಗಳಲ್ಲಿಯಂತೆ ಬಹಳ ಶತಮಾನಗಳವರೆಗೆ ಪರಶಾಸನದಲ್ಲಿ ನಿಷ್ಕ್ರಿಯ ನಿರ್ವೀರ್ಯ ಮತ್ತು ಮೌನಾಂಗೀಕಾರದ ಪ್ರವೃತ್ತಿಯದಾಗಿ ಉಳಿದಿದ್ದರೆ ಆಗ ಮಾತ್ರ ಅದೊಂದು ಆಜನ್ಮ ದೌರ್ಬಲ್ಯದ ಮಹಾಸಾಕ್ಷಿಯಾಗುತ್ತಿತ್ತು. ಬ್ರಿಟಿಶರದೊಂದೇ ಮೊಟ್ಟಮೊದಲಿನ ನಿಜವಾದ ಅವ್ಯವಚ್ಛಿನ್ನ ಪರಶಾಸನ ಭಾರತಕಂಡದ್ದು; ಅದೊಂದೇ ಭಾರತವನ್ನು ಅದುಮಿ ಆಳಿದ್ದು. ಆಗ ನಿಜವಾಗಿಯೂ ಭಾರತದ ಪ್ರಾಚೀನ ನಾಗರಿಕತೆ ರಾಹುಗ್ರಸ್ತವಾಯಿತು, ಹೊಂದಿಕೊಳ್ಳಲಾರದ ಮಧ್ಯ ಏಶಿಯನ ಧರ್ಮ–ಸಂಸ್ಕೃತಿಗಳ ಭಾರದಡಿಯಲ್ಲಿ ಸಿಕ್ಕಿ ಕ್ಷೀಣವಾಯಿತು–ಆದರೂ ಅದು ಆ ವಿಧರ್ಮ–ಸಂಸ್ಕೃತಿಗಳ ಒತ್ತಡದಲ್ಲಿ ಬದುಕಿ ಉಳಿಯಿತು; ಅನೇಕ ಮುಖಗಳಿಂದ ಅವುಗಳ ಮೇಲೆ ತನ್ನ ಮುದ್ರೆಯನ್ನೊತ್ತಿತ್ತು; ಮತ್ತು ಇಂದಿನವರೆಗೂ ಸಜೀವವಾಗಿ ಉಳಿದು, ಕ್ಷೀಣದಶೆಯಲ್ಲೂ ತಲೆಯೆತ್ತಲು ಸಮರ್ಥವೆನಿಸಿ, ಮಾನವ ಸಂಸ್ಕೃತಿಗಳ ಇತಿಹಾಸದಲ್ಲೇ ವಿರಳವೆನಿಸುವಂತೆ ತನ್ನ

ಶಕ್ತಿ ಸಮರ್ಪಕತೆಗಳಿಗೆ ಸಾಕ್ಷಿಕೊಟ್ಟಿದೆ. ರಾಜಕೀಯ ಕ್ಷೇತ್ರದಲ್ಲಿ ಮಹಾಶಾಸಕ, ರಾಜನೀತಿಜ್ಞ, ಯೋಧ, ಆಡಳಿತಗಾರರನ್ನು ಅದು ಎಡೆಬಿಡದೆ ನಿರ್ಮಿಸುತ್ತ ಬಂದಿದೆ. ಕ್ಷೀಣದಶೆಯಲ್ಲಿ ಅದರ ರಾಜಕೀಯ ಪ್ರತಿಭೆ ಪಠಾನ, ಮೊಗಲ, ಯೌರೋಪ್ಯರನ್ನು ಎದುರಿಸಿನಿಲ್ಲಲು ಬೇಕಾದಷ್ಟು, ತನ್ನ ನೋಟ ನಡೆಗಳಲ್ಲಿ ಸಾಕಷ್ಟು ಸುಸಂಗತ ಅಥವಾ ಶೀಘ್ರ ಆಗಿರಲಿಲ್ಲ; ಆದರೆ ಅದು ಬದುಕಿ ಉಳಿಯುವಷ್ಟು ಸಮರ್ಥವೂ ಪುನರುಜ್ಜೀವನದ ಪ್ರತಿಯೊಂದು ಸಂಧಿಯನ್ನು ನಿರೀಕ್ಷಿಸಿ ನಿಲ್ಲುವಷ್ಟು ಶಕ್ತವೂ ಆಗಿತ್ತಲ್ಲದೆ ರಾಣಾಸುಂಗನ ನೇತೃತ್ವದಲ್ಲಿ ಸಾಮ್ರಾಜ್ಯ ಕಟ್ಟಲು ತೊಡೆಚಪ್ಪರಿಸಿತು, ವಿಜಯನಗರ ರಾಜ್ಯವನ್ನು ನಿರ್ಮಿಸಿತು, ರಜಪುಟಾನದ ಗುಡ್ಡ ಗಾಡುಗಳಲ್ಲಿ ಇಸ್ಲಾಮಿನ ವಿರುದ್ಧ ಅನೇಕ ಶತಮಾನಗಳವರೆಗೆ ತನ್ನತನವನ್ನು ಕಾಯ್ದುಕೊಂಡಿತು ಮತ್ತು ತನ್ನ ಅತ್ಯಂತ ದುರ್ದಶೆಯ ಕಾಲದಲ್ಲೂ ಬಲಿಷ್ಠ ಮೊಗಲರ ಶಕ್ತಿಯ ವಿರುದ್ಧ ಶಿವಾಜಿ ರಾಜ್ಯವನ್ನು ಕಟ್ಟಿ ನಿಲ್ಲಿಸಿತು, ಮರಾಠ ಸಂಯುಕ್ತರಾಜ್ಯವನ್ನೂ ಶೀಖರ ಖಾಲ್ಸಾವನ್ನೂ ರಚಿಸಿತು, ಮೊಗಲರ ಮಹಾ ನಿರ್ಮಿತಿಯ ಮೂಲಕ್ಕೆ ಒರಲೆ ಹಿಡಿಸಿತು. ಹಾಗೂ ಪುನಃ ಸಾಮ್ರಾಜ್ಯರಚನೆಗೆ ಕೊನೆಯ ಪ್ರಯತ್ನವನ್ನು ನಡೆಸಿತು. ಅವರ್ಣನೀಯ ಕತ್ತಲೆ ಕವಿದಿದ್ದಾಗ, ಒಡಕು–ಗಲಿಬಿಲಿ ತುಂಬಿದ್ದಾಗ, ಕಟ್ಟಕಡೆಯ ಮೃತ್ಯುಪಾಶವೋ ಎಂಬಂತಿದ್ದ ಅಧಃಪಾತದ ಅಂಚಿನಲ್ಲಿದ್ದಾಗ ಕೂಡ ಅದು ರಣಜಿತಸಿಂಗ, ನಾನಾಫಡ್ನವೀಸ, ಮಧೋಜಿ ಸಿಂಧ್ಯರನ್ನು ಮುನ್ನೀಡಲು ಶಕ್ತವಾಯ್ತು ಮತ್ತು ಹಾಗೆ ಮುನ್ನಟ್ಟಿ ಇಂಗ್ಲೆಂಡಿನ ವಿಧಿದೇವತೆಯ ಅನಿವಾರ್ಯ ಮುನ್ನಡೆಯನ್ನು ವಿರೋಧಿಸಿತು. ಈ ವಿಷಯಗಳು ಭಾರತದ ಮೇಲೆ ಆರೋಪಿಸಿದ ಸರ್ವಕ್ಕೂ ಕೇಂದ್ರದಲ್ಲಿಯ ಸಮಸ್ಯೆಯನ್ನು ಕಂಡು ಕತ್ತರಿಸಿ ಪರಿಹರಿಸುವ ಶಕ್ತಿಯಿಲ್ಲವೆಂಬ ಮಾತಿನ ಭಾರವನ್ನು ಇಳಿಸಲಾರವು, ವಿಧಿದೇವತೆಯ ಆ ಒಂದು ಸತತ ಪ್ರಶ್ನೆಗವು ಉತ್ತರಕೊಡಲಾರವು. ಆದರೆ ಆಗಿನದು ಕ್ಷೀಣವಾಗುವ ಒಂದು ದುರ್ದಶೆಯ ಸಂದರ್ಭವೆಂದು ಗ್ರಹಿಸಿಕೊಂಡರೆ, ಅವು ಅಂಥ ಸಂದರ್ಭದಲ್ಲಿ ಮತ್ತೆಲ್ಲೂ ಸುಲಭವಾಗಿ ತತ್ಸಮನಿದರ್ಶನ ದೊರಕದಂತೆ ಸಾಕಷ್ಟುಮಟ್ಟಿಗೆ ಗಣ್ಯವಾದ ಅಭಿಲೇಖ ರಚಿಸಿವೆ. ಹಾಗೂ ಭಾರತ ಯಾವಾಗಲೂ ಪರಾಧೀನವಾಗಿತ್ತು ಮತ್ತು ರಾಜಕೀಯವಾಗಿ ಅಶಕ್ತವೆನಿಸಿತ್ತು ಎಂಬ ಒರಟು ಮಾತಿಗಿಂತ ನಿಜವಾಗಿಯೂ ಭಿನ್ನರೀತಿಯ ಬಣ್ಣವನ್ನು ಆ ಇಡಿ ಪ್ರಶ್ನೆಗೆಕೊಡುತ್ತವೆ.

## ೧೩. ಎರಡು ನಾಗರಿಕತೆಗಳ ನಡುವಣ ಹೋರಾಟ

ಮುಸಲ್ಮಾನ ವಿಜಯ ತಂದೊಡ್ಡಿದ ಸಮಸ್ಯೆಯೆಂದರೆ ಪರಶಾಸನಕ್ಕಡಿಯಾಳಾಗುವುದು ಹಾಗೂ ಅದರಿಂದ ಸ್ವಾತಂತ್ರ್ಯವನ್ನು ಪುನಃ ಪಡೆಯುವ ಶಕ್ತಿ ಇರುವುದು ಅಥವಾ ಇಲ್ಲದಿರುವುದು ಅಲ್ಲ; ಅಲ್ಲಿ ಸಂಭವಿಸಿದ್ದು ಒಂದು ಹಳೆಯ–ದೇಶಿಯ ಹಾಗೂ ಇನ್ನೊಂದು ಮಧ್ಯಯುಗೀನ ಪರಕೀಯ ನಾಗರಿಕತೆಗಳ

ನಡುವಣ ಘರ್ಷಣ. ಸಮಸ್ಯೆಯನ್ನು ನಿರುತ್ತಾರ್ಯಗೊಳಿಸಿದ್ದು ಎರಡೂ ನಾಗರಿಕತೆಗಳ ಎರಡು ಭಿನ್ನರೀತಿಯ ಧರ್ಮಗಳಿಗಂಟಿಕೊಂಡ ಜಿಗುಟು. ಇಸ್ಲಾಂ ಸೈನಿಕ ಪ್ರವೃತ್ತಿಯುಳ್ಳದ್ದು, ಆಕ್ರಮಣಕೀಲ; ದೇಶಿಧರ್ಮವಾದರೂ ಆಧ್ಯಾತ್ಮಿಕವಾಗಿ ಸಹಿಷ್ಣುವೂ ಪರಿವರ್ತನೀಯ ಶಿಥಿಲತೆಯುಳ್ಳದ್ದೂ ಆಗಿತ್ತು. ಆದರೆ ಈ ಎರಡೂ ತಮ್ಮ ತಮ್ಮ ತತ್ವಕ್ಕೆ ಪೂರ್ಣ ತಲೆಬಾಗುವ ನಿಷ್ಠೆಯ ಶಿಸ್ತುಳ್ಳವಾಗಿ ಸಾಮಾಜಿಕ ರೂಪ ರಚನೆಗಳ ದುರ್ಗದ ಹಿಂದೆ ಸುರಕ್ಷಿತವಾಗಿ ನಿಂತವು. ಅದಕ್ಕೆ ಎರಡು ಪರಿಹಾರಗಳನ್ನು ಹೇಳಬಹುದು. ಮಹತ್ತರವಾದ ಆಧ್ಯಾತ್ಮಿಕ ತತ್ವ ಹಾಗೂ ಸಂಘಟನೆ ಮತ್ತು ಎರಡು ನಾಗರಿಕತೆಗಳಲ್ಲೂ ರಾಜಿಯನ್ನು ಉಂಟುಮಾಡುವುದು ಅಥವಾ ಒಂದು ರಾಜಕೀಯ ದೇಶಪ್ರೇಮವೆದ್ದು ಧಾರ್ಮಿಕ ಹೋರಾಟವನ್ನು ಮೀರಿನಿಂತು ಎರಡು ಸಮಷ್ಟಿಗಳನ್ನೂ ಒಂದುಗೂಡಿಸುವುದು. ಆ ಯುಗದಲ್ಲಿ ಮೊದಲನೆಯದು ಅಸಾಧ್ಯ. ಮುಸಲಮಾನರ ಕಡೆಯಿಂದ ಅಕ್ಬರ ಅಂಥ ಪ್ರಯತ್ನ ನಡೆಸಿದ; ಆದರೆ ಅವನ ಧರ್ಮ ಬೌದ್ಧಿಕವೂ ರಾಜಕೀಯವೂ ಆಗಿತ್ತಲ್ಲದೆ ಆಧ್ಯಾತ್ಮಿಕ ಸೃಷ್ಟಿಯಾಗಿರಲಿಲ್ಲ. ಆದುದರಿಂದ ಎರಡೂ ಸಮಷ್ಟಿಗಳ ಬಹು ಸಂಖ್ಯರ ಬಲಿಷ್ಠ ಧಾರ್ಮಿಕ ಮನದ ಒಪ್ಪಿಗೆಯನ್ನು ಗಳಿಸುವ ಅವಕಾಶ ಅದಕ್ಕಿಲ್ಲವಾಯಿತು. ಹಿಂದುಗಳ ಕಡೆಯಿಂದ ನಾನಕ ಪ್ರಯತ್ನಿಸಿದ. ಆದರೆ ಸತತ್ವಃ ವಿಶ್ವಜನೀನವಾಗಿದ್ದರೂ ಅವನ ಧರ್ಮ ವ್ಯವಹಾರದಲ್ಲಿ ಬರಿಯೊಂದು ಉಪಜಾತಿಯಾಯಿತು. ಸಾಧಾರಣ ರಾಜಕೀಯ ಉತ್ಸಾಹವನ್ನೂ ಆಸಕ್ತಿಯನ್ನು ಎಬ್ಬಿಸಲೂ ಅಕ್ಬರ ಯತ್ನಿಸಿದ; ಆದರೆ ಆ ಯತ್ನವೂ ವ್ಯರ್ಥವೇ ಆಯಿತು. ಮಧ್ಯ ಏಶಿಯದ ತತ್ವದಂತೆ ಕಟ್ಟಿದ ನಿರಂಕುಶ ಸಾಮ್ರಾಜ್ಯವು ಎರಡೂ ಸಮಷ್ಟಿಗಳಲ್ಲಿಯ ಪ್ರಶಾಸನ ವಿಚಕ್ಷಣತೆಯುಳ್ಳ ದೊಡ್ಡವರನ್ನೂ ರಾಜರನ್ನೂ ರಾಜಸ್ಥಾನೀಯರನ್ನೂ ಏಕೀಕೃತ ಸಾಮ್ರಾಜ್ಯಕ ಇಂಡಿಯಾದ ನಿರ್ಮಾಣಕ್ಕಾಗಿ ದುಡಿಯಲು ನಿಮಂತ್ರಿಸಲಾರದಾಯಿತು; ಜನದ ಸಚೇತನ ಸಮ್ಮತಿ ಅದಕ್ಕೆ ಬೇಕಾಗಿತ್ತು; ಅದೋ ನಿಷ್ಕ್ರಿಯವಾಗಿಯೇ ಉಳಿಯಿತು ಏಕೆಂದರೆ, ರಾಜಕೀಯ ಧ್ಯೇಯ ಹಾಗೂ ಸಂಸ್ಥೆಗಳು ಎಚ್ಚತ್ತಿರಲಿಲ್ಲ. ಆ ಮೊಗಲ ಸಾಮ್ರಾಜ್ಯ ರಮ್ಯವಾಗಿತ್ತು. ಬಲಿಷ್ಠವಾಗಿತ್ತು, ಜನೋಪಕಾರಿಯಾಗಿತ್ತು; ಔರಂಗಜೇಬನ ಧರ್ಮಶಾಸ್ತ್ರ ಎಷ್ಟೇ ಇದ್ದರೂ ಧರ್ಮದಲ್ಲಿ ಅಂದಿನ ಎಲ್ಲ ಸಮಕಾಲೀನ ಯೌರೋಪ್ಯ ರಾಜ್ಯ ಅಥವಾ ಸಾಮ್ರಾಜ್ಯಗಳಿಗಿಂತಲೂ ಅತಿ ಹೆಚ್ಚು ಉದಾರವೂ ಸಹಿಷ್ಣುವೂ ಆಗಿತ್ತು. ಅದರ ಆಳಿಕೆಯಲ್ಲಿ ಸೈನಿಕ ಹಾಗೂ ರಾಜಕೀಯ ಶಕ್ತಿಯಲ್ಲಿಯೂ ಆರ್ಥಿಕ ಐಶ್ವರ್ಯದಲ್ಲಿಯೂ ಕಲೆ ಸಂಸ್ಕೃತಿಗಳ ಉಜ್ವಲತೆಯಲ್ಲಿಯೂ ಇಂಡಿಯ ಉನ್ನತವಾಗಿ ನಿಂತಿತ್ತು. ಅದಕ್ಕೂ ಹಿಂದಿದ್ದ ಸಾಮ್ರಾಜ್ಯಗಳಂತೆಯೇ ಅದು ಇನ್ನೂ ಹೆಚ್ಚು ದುರ್ಧರ ಕಷ್ಟದಲ್ಲಿ ಪರ್ಯವಸಾನಹೊಂದಿತು; ಅದೇ ಮೇರೆಗೆ ಹೊರಗಿನ ದಾಳಿಯಿಲ್ಲದೆ ಬರಿ ಆಂತರಿಕ ವಿಘಟನೆಯಿಂದಲೇ ಹಾಗೆ ಕೊನೆಗಂಡಿತು. ಸೈನಿಕ, ಪ್ರಶಾಸನಿಕ, ಕೇಂದ್ರೀಕೃತ ಸಾಮ್ರಾಜ್ಯವು ಭಾರತದ ಜೀವಂತ ರಾಜಕೀಯ ಐಕ್ಯವನ್ನು ಉಂಟುಮಾಡಲಾರದು. ಪ್ರಾದೇಶಿಕ ಜನಾಂಗಗಳಲ್ಲಿ ಹೊಸಬಾಳು

ಮೂಡಿದಂತೆ ತೋರಿದರೂ ಯೌರೋಪ್ಯ ರಾಷ್ಟ್ರಗಳು ತಲೆಹಾಕಿದ್ದರಿಂದ ಆ ಸಂಭವವೂ ಚಿಗುರಿನಲ್ಲೇ ಮುರುಟಿಹೋಯಿತು. ಹಾಗೆ ಅದು ಮುರುಟಿಹೋಗಲು ಪೇಶ್ವೆಗಳ ಆಕೃತಕೃತ್ಯತೆ ನಿರ್ಮಿಸಿದ ಅವಕಾಶವನ್ನು ಯೂರೋಪಿಯನ್ನರು ಬಳಸಿಕೊಂಡದ್ದೂ ಅನಂತರ ನಿರಾಶಕ್ಷೋಭೆ ಅರಾಜಕತೆ ಮತ್ತು ಕ್ಷಯಗಳು ಸಂಭವಿಸಿದ್ದೂ ಕಾರಣಗಳಾದವು.

## ೧೪. ಅಳಿಗಾಲದ ಎರಡು ಉದ್ಧಾರ ಪ್ರಯತ್ನಗಳು

ಆ ವಿಘಟನೆಯ ಅವಧಿಯಲ್ಲಿ ಎರಡು ಪ್ರಶಂಸನೀಯ ನಿರ್ಮಿತಿಗಳು ರೂಪಗೊಂಡವು. ಆ ರೂಪಣವು ಹಳೆಯ ಪರಿಸ್ಥಿತಿಯಲ್ಲಿ ಹೊಸ ಬಾಳನ್ನು ರಚಿಸಲು ಅಡಿಗಲ್ಲನ್ನು ಹಾಕುವ ಭಾರತೀಯ ರಾಜಕೀಯ ಮನದ ಕೊನೆಯ ಯತ್ನವಾಗಿತ್ತು. ಆದರೆ ಅದರಲ್ಲಿ ಯಾವ ಒಂದೂ ಸಮಸ್ಯೆಯನ್ನು ಪರಿಹರಿಸುವ ಬಗೆಯದಾಗಿ ಪರಿಣಮಿಸಲಿಲ್ಲ. ಮೊದಲ ನಿರ್ಮಿತಿಯೆಂದರೆ ರಾಮದಾಸರ ಕಲ್ಪನೆಯ ಮೇರೆಗೆ ಎದ್ದ ಮಹಾರಾಷ್ಟ್ರಧರ್ಮ, ಶಿವಾಜಿ ಅದಕ್ಕೆ ರೂಹುಗೊಟ್ಟದ್ದು, ಹಳೆಯ ಬದುಕು ಭಾವನೆಗಳೆಂದು ಇನ್ನೂ ತಿಳಿಯಬಹುದಾಗಿದ್ದ ಅಥವಾ ನೆನಪಿನಲ್ಲಿದ್ದ ಸ್ಥಿತಿಯನ್ನು ಪುನರುತ್ಥಾಪಿಸಲು ಅದು ಪ್ರಯತ್ನಿಸಿ ಕೃತಕೃತ್ಯವಾಗದಾಯಿತು. ಆಧ್ಯಾತ್ಮಿಕ ಉತ್ತೇಜನ ಮತ್ತು ಪ್ರಜಾಸತ್ತಾತ್ಮಕ ಪ್ರಯತ್ನಗಳಂತೆ ಅದೂ ವ್ಯರ್ಥವಾಯಿತು. ಎಷ್ಟೇ ಪ್ರತಿಭೆಯಿದ್ದರೂ ಪೇಶ್ವೆಗಳು–ಮೂಲ ಸ್ಥಾಪಕನ ಮುನ್ನೋಟವಿಲ್ಲದವರಾಗಿದ್ದರು ಮತ್ತು ಆ ಕಾರಣದಿಂದ ಬರಿ ಸೈನಿಕ ಹಾಗೂ ರಾಜಕೀಯ ಸಂಯುಕ್ತ ರಾಜ್ಯವನ್ನಷ್ಟೇ ಸ್ಥಾಪಿಸಲು ಶಕ್ತರಾದರು. ಅವರ ಸಾಮ್ರಾಜ್ಯ ಸ್ಥಾಪನೆಯ ಪ್ರಯತ್ನ ಯಶಸ್ವಿಯಾಗದಿರಲು ಅದು ಪ್ರಾದೇಶಿಕ ದೇಶಪ್ರೇಮದಿಂದ ಸ್ಫೂರ್ತಿ ಪಡೆದದ್ದಲ್ಲದೆ, ಆ ಸ್ಫೂರ್ತಿ ತನ್ನ ಇತಿಮಿತಿಗಳ ಹೊರಗೆ ವಿಸ್ತರಿಸಲಾರದಾಗಿ ಏಕೀಕೃತ ಇಂಡಿಯುದ ಜೀವಂತ ಧ್ಯೇಯುವನ್ನು ಮುಟ್ಟಲಾರದಾಯಿತು. ಎರಡನೆಯದಾದ ಶೀಖ ಖಾಲ್ಸಾ ಆದರೋ ಆಶ್ಚರ್ಯಕರವಾಗಿ ಅನ್ಯಾದೃಶವೂ ಹೊಸದೂ ಆದ ನಿರ್ಮಿತಿಯಾಗಿತ್ತಲ್ಲದೆ ಅದು ಹಿಮ್ಮೊಗವಾಗಿರದೆ ಮುಮ್ಮೊಗವಾಗಿತ್ತು. ತನ್ನ ದೇವಸತ್ತಾಕ ಶಿಖರದಲ್ಲೂ ಪ್ರಜಾಸತ್ತಾಕ ಸ್ವರೂಪ ಸತ್ವಗಳಲ್ಲೂ ಅದು ಮೊದಲಿನದಕ್ಕಿಂತ ದೂರವೂ ಅದ್ವಿತೀಯವೂ ಆಗಿತ್ತು; ಅದಕ್ಕೆ ಆಳವಾದ ಆಧ್ಯಾತ್ಮಿಕ ಪ್ರಾರಂಭವೂ ಇತ್ತು. ಅದು ಇಸ್ಲಾಂ ಮತ್ತು ವೇದಾಂತಗಳ ಗಂಭೀರಾಂಶಗಳನ್ನು ಒಂದುಗೂಡಿಸಲು ಯತ್ನಿಸಿತು. ಆದರೇನು? ಅದು ಮಾನವತೆಯ ಮೂರನೆಯ ಇಲ್ಲವೆ ಆಧ್ಯಾತ್ಮಿಕ ಅವಸ್ಥೆಯನ್ನು ಹೊಗುವ ಅಕಾಲಿಕ ಚಳವಳವಾಗಿತ್ತು. ಅದರಿಂದ ಅದು ಒಳಗಿನ ಭಾವನೆಗೂ ಹೊರಗಿನ ಬಾಳಿಗೂ ನಡುವೆ ವಾಹಕ–ಮಾಧ್ಯಮವಾದ ಸಂಪನ್ನ ರಚನಾತ್ಮಕ ವಿಚಾರ ಸಂಸ್ಕೃತಿಗಳನ್ನು ನಿರ್ಮಿಸಲಾರದಾಯಿತು. ಹೀಗೆ ಕುಂಠಿತವೂ ಅಪೂರ್ಣವೂ ಆಗಿ ಪ್ರಾರಂಭಿಸಿದ ಅದು ಪರಿಮಿತವಾದ ಸ್ಥಾನಿಕ ಎಲ್ಲೆಯೊಳಗೇ ಅವಸಾನ ಹೊಂದಿತು; ತೀವ್ರತೆಯನ್ನು ಸಾಧಿಸಿದರೂ ಅದಕ್ಕೆ

ವಿಸ್ತರಣ ಶಕ್ತಿಯನ್ನುಗಳಿಸಲಾಗಲಿಲ್ಲ. ಆ ಪ್ರಯತ್ನವನ್ನು ಯಶಸ್ವಿಗೊಳಿಸಲು ಬೇಕಾದ ಪರಿಸ್ಥಿತಿ ಆಗ ಇರಲಿಲ್ಲ.

ಆ ಮೇಲೆ ಕಾವಳ ಕಟ್ಟಿತು; ಎಲ್ಲ ರಾಜಕೀಯ ಆರಂಭ ಹಾಗೂ ನಿರ್ಮಾಣಗಳ ತಾತ್ಕಾಲಿಕ ಕೊನೆಗಾಲ ಪ್ರಾಪ್ತವಾಯಿತು. ಪಶ್ಚಿಮದ ಧ್ಯೇಯಗಳನ್ನೂ ಧ್ಯೇಯಸ್ವರೂಪಗಳನ್ನೂ ದಾಸವಿಧೇಯತೆಯಿಂದ ನಕಲು ಮಾಡುವ ಕಳೆದ ತಲೆಮಾರಿನ ನಿರ್ಜೀವ ಪ್ರಯತ್ನವು ಭಾರತೀಯರ ರಾಜಕೀಯ ಮನ ಮತ್ತು ಪ್ರತಿಭೆಗಳ ನಿಜವಾದ ಕುರುಹಲ್ಲ. ಆದರೆ ಪುನಃ ಗಲಿಬಿಲಿಯ ಹಿಮಪಟಲಗಳೆಲ್ಲವುಗಳ ನಡುವೆ ಇನ್ನೂ ಹೊಸ ಸಂಧ್ಯೆ ಹೊರಸೂಸುವ ಸಾಧ್ಯತೆಯಿದೆ ಸಂಜೆಯ ಸಂಧ್ಯಾಕಾಲವಲ್ಲ, ಬೆಳಗಿನ ಒಂದು ಯುಗಸಂಧ್ಯೆ. ಪ್ರಾಚೀನ ಭಾರತ ಸತ್ತಿಲ್ಲ ಅಥವಾ ಅದು ತನ್ನ ಕಡೆಯ ರಚನಾತ್ಮಕ ಮಾತನ್ನೂ ಆಡಿ ಮುಗಿಸಿಲ್ಲ; ಅದಿನ್ನೂ ಬದುಕಿದೆ ಮತ್ತು ತನಗಾಗಿಯೂ ಮಾನವ ಜನಾಂಗಗಳಿಗಾಗಿಯೂ ಮಾಡತಕ್ಕ ಕಜ್ಜವಿದೆ. ಆಂಗ್ಲೀಕೃತ ಪೌರಸ್ತ್ಯರನ್ನು, ಪಶ್ಚಿಮದವರ ವಿನಮ್ರ–ವಿಧೇಯ ಶಿಷ್ಯರನ್ನು, ಪಶ್ಚಿಮದ ಜಯಾಪಜಯಗಳ ಚಕ್ರವನ್ನು ನಕಲು ಮಾಡುವವರನ್ನು ನಿರ್ಮಿಸುವುದಲ್ಲ; ಅದು ಎಬ್ಬಿಸಿ ನಿಲ್ಲಿಸಬೇಕಾದುದೆಂದರೆ ಈಗಲೂ ಹಳೆಯದೂ ಅವಿಸ್ಮರಣೀಯವೂ ಆದ ಶಕ್ತಿಯನ್ನು ಬೆಳೆಸಿಕೊಂಡು, ಆ ಶಕ್ತಿ ತನ್ನ ಗಭೀರತಮ ಆತ್ಮವನ್ನು ಪುನಃ ಪಡೆದು, ಬಲದ ಹಾಗೂ ಬೆಳಕಿನ ಸರ್ವೋಚ್ಚ ಶಿಖರದತ್ತ ತಲೆಯೆತ್ತಿ ತನ್ನ ಧರ್ಮದ ಸಂಪೂರ್ಣ ಅರ್ಥವನ್ನೂ ವಿಶಾಲತರ ರೂಪವನ್ನೂ ಕಂಡು ಹಿಡಿಯುವಂತೆ ಎಸಗಬೇಕು.

# ಪದಾರ್ಥಕೋಶ

## ಅ

| | |
|---|---|
| ಅತ್ಯಯಪ್ರಸಂಗ | Emergency |
| ಅತಿಭೌತ ತತ್ವಜ್ಞಾನ | Metaphysics |
| ಅರ್ಥನೀತಿ | Economics |
| ಅವಯವಿ | Organism |
| ಅಧಶ್ಚೇತನೆ | Subconscient |
| ಅಧಿಕ್ಷಿಸು | Supervise, Superintend |
| ಅನಿರ್ಬಂಧ, ಸ್ವಾತಂತ್ರ್ಯ ಸ್ವಾಯತ್ತತೆ, ಸ್ವಾಧೀನತೆ | Freedom, liberty, autonomy, independence |
| ಅನ್ನಮಯ | Physical (Consciousness) |
| ಅನುಜ್ಞೆ, ಆಜ್ಞಪ್ತಿ | Decree |
| ಅಭಿಲೇಖ, ದಾಖಲೆ | Record |
| ಅಭಿವ್ಯಕ್ತಿ, ಬಾಹ್ಯಪ್ರಕಾಶ | Expression, manifestation |
| ಅರಸೊತ್ತಿಗೆ, ಶಾಸನ | Rule |
| ಅವಸಭೆ | Lower Assemby |

## ಆ

| | |
|---|---|
| ಆನುವಂಶಿಕ | Hereditary |
| ಆದರ್ಶ, ಧ್ಯೇಯ | Ideal |
| ಆದೇಶ | Order;substitute |
| ಆಧಾರ, ಪ್ರಾಧಿಕಾರ–ರಿ | Sanction, authority |
| ಆಪರಾಧಿಕ, ದಂಡನೀಯ | Criminal |
| ಆರಾಧನೆ | Pursuit |

## ಉ

| | |
|---|---|
| ಉದ್ಯಮ, ಉದ್ಯಮವಾದ, ಉದ್ಯಮಪದ್ಧತಿ | Industry, industrialism |
| ಉಪನಿವೇಶ, ಔಪನಿವೇಶಿಕ | Colony, colonial |
| ಉಪವೇಶನ | Sitting |

## ಅಂ

| | |
|---|---|
| ಅಂಗ, ನಿಕಾಯ, ಶರೀರ | Body |
| ಅಂಗ, ಅಂಶ | Element, part |

**ಕ**

| | |
|---|---|
| ಕಲ್ಪನೆ | Idea |
| ಕಾರ್ಯಪಾಲಕ–ಲಿಕೆ | Executive; Executive Department |
| ಕಾಲ್ಪನಿಕ | Imaginary, fictitious |
| ಕುಲ, ಗೋತ್ರ | Race, clan, tribe |
| ಕೃತ್ಯ | Function |
| ಕ್ಷಯ | Decary |

**ಗ**

| | |
|---|---|
| ಗಣರಾಜ್ಯ, ಗಣಪ್ರಭುತ್ವ | Republic |

**ಜ**

| | |
|---|---|
| ಜನ, ಜನತೆ, ಜನಾಂಗ | People |
| ಜರಣ | Digestion, decay, assimilation |
| ಜಾನಪದ ಸಭೆ, | General Assembly |
| ಸಾಮಾನ್ಯ ಸಭೆ | House of Commons |

**ಧ**

| | |
|---|---|
| ಧರ್ಮ, ವಿಧಿ | Religion, duty, law |
| ಧರ್ಮಾಧಿಕಾರಿ, ನ್ಯಾಯಾಧಿಕಾರಿ | Judge |

**ನ**

| | |
|---|---|
| ನಗರಸಭೆ, ನಗರಪಾಲಿಕೆ | Municipality |
| ನಿಗಮನಿಸು | Conclude |
| ನಿರಂಕುಶಪ್ರಭುತ್ವ | Autocracy |
| ನಿಯಂತ್ರಣ | Control |
| ನಿರ್ವಾಚನ, ಆಯ್ಕೆ | Election |

**ಪ**

| | |
|---|---|
| ಪದ್ಧತಿ | System |
| ಪರಿಮಿತ, ಮರ್ಯಾದಿತ | Limited |
| ಪರಿಬಂಧಕ | Binding, encircling, restricting |
| ಪರಿಸೀಮಿತ | Delimited, bounded |
| ಪಾರಂಪರಿಕ | Traditional |

| | |
|---|---|
| ಪುರೋಹಿತಪ್ರಭುತ್ವ, ಬ್ರಾಹ್ಮ ಅಥವಾ ಮತೀಯ ಪ್ರಭುತ್ವ, ದೇವಸತ್ತೆ | Theocracy |
| ಪೌರ | Metropolitan |
| ಪೌರಸ್ತ್ಯ | Oriental |
| ಪ್ರಜಾಪ್ರಭುತ್ವ, ಪ್ರಜಾಸತ್ತೆ | Democracy |
| ಪ್ರತ್ಯಾಭೂತಿ | Assurance, guarantee |
| ಪ್ರತಿಭೆ | Intuition |
| ಪ್ರತಿನಿಹಿತ | Representing |
| ಪ್ರಶಾಸನ, ಆಡಳಿತ | Administration |
| ಪ್ರಾಣಮಯ, ಜೈವಿಕ | Vital |

ಮ

| | |
|---|---|
| ಮನೋಮಯ, ಮಾನಸಿಕ | Mental |
| ಮನೋಧರ್ಮ, ಮನೋಭೂಮಿಕೆ | Psychology |
| ಮನೋವೃತ್ತಿ | Attitude, temperament |
| ಮಹಾಶಯ | Aspiration |
| ಮೂಲಪ್ರವೃತ್ತಿ | Instinct |

ಯ

| | |
|---|---|
| ಯಾಂತ್ರಿಸು, ಯಾಂತ್ರೀಕರಣ | Mechanise, mechanisation |

ರ

| | |
|---|---|
| ರಾಜನೀತಿ | Politics |
| ರಾಜಪ್ರಭುತ್ವ | Monarchy |
| ರಾಜ್ಯ, ರಾಜಕೀಯ | State, political |
| ರಾಜ್ಯಧರ್ಮ, ರಾಜ್ಯಪದ್ಧತಿ | Polity |

ಲ

| | |
|---|---|
| ಲಯ | Dissolution; Rhythm |
| ಲಕ್ಷಣ | Character, characteristic, feature |

ವ

| | |
|---|---|
| ವಲಸೆಹೋಗು | Migrate |
| ವಿಧಾನ, ವೈಧಾನಿಕ | Legislation, legislative |
| ವಿನಿಮಯ | Regulation |

| | |
|---|---|
| ವಿಸಂಧಿ | Hiatus, gap |
| ವ್ಯಂಜನ, ವ್ಯಂಜಕ, ವಾಹಕ, | Expression, vehicle |
| ವ್ಯವಸ್ಥೆ | Order, arrangement |
| ವ್ಯಷ್ಟಿ, ವ್ಯಕ್ತಿ | Individual |

**ಶ**

| | |
|---|---|
| ಶಕ್ತಿ, ಅಧಿಕಾರ | Power |
| ಶರ್ತ | Condtion |
| ಶಾಸೀನಿಕಾಯ | |
| ಶಾಸಕನಿಕಾಯ | Governing Body |

**ಸ**

| | |
|---|---|
| ಸತ್ರ | Session |
| ಸತ್ವ | Spirit |
| ಸಮಯ | Convention |
| ಸಮಷ್ಟಿ, ಸಮುದಾಯ | Community |
| ಸಮಕ್ರಮ, ಸಮನ್ವಯ | Co-ordination |
| ಸಮವಾಯ; ಸಮವೇತ | Co-operation, Co-operative |
| ಸಮಾಜನೀತಿ | Sociology |
| ಸರ್ವಾಧಿಕಾರ | Dictatorship |
| ಸ್ವರೂಪ | Form |
| ಸಾರೂಪ್ಯ, ಸಮರೂಪ | Uniformity, uniform |
| ಸಾರ್ವಭೌಮ, ಪ್ರಭು | Sovereign |
| ಸಂಘ | Guild, union |
| ಸಂಘಟಿತ | Organised, organic |
| ಸಂವಿಧಾನ | Constitution |
| ಸ್ವಯಂಪ್ರಭುತ್ವ | |
| ಸ್ವಶಾಸನ, ಸ್ವಯಂಕಾರ | Self Rule |
| ಸ್ವಯಂಭೂತಿ | Spontaneity |

**ಹ**

| | |
|---|---|
| ಹಕ್ಕು, ಅಧಿಕಾರ | Right |
| ಹಬ್ಬು | Element, offshoot |

# ಒಂದು ಮಾತು

ಶ್ರೀ ಅರವಿಂದ ಮಕರಂದಕ್ಕಾಶಿಸುವ ಕರ್ನಾಟಕದ ಬಂಡುಣಿಗಳು ನಮ್ಮ 'ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ' ಎಂಬ ಮೊದಲನೆಯ ಪುಷ್ಪವನ್ನು ಸ್ವಾಗತಿಸಿದ್ದು ಈ ಎರಡನೆಯದಾದ 'ಭಾರತೀಯ ವಾಙ್ಮಯ'ವೆಂಬ ಪುಷ್ಪವನ್ನು ಪ್ರಕಾಶಿಸಲು ನಮಗೆ ಪ್ರೋತ್ಸಾಹವಿತ್ತಿತು. ಶ್ರೀ ಅರವಿಂದ ವೈದರ್ಭಿಯ ಆಂಗ್ಲ ರೂಪವನ್ನು ಕನ್ನಡಿಸುವ ಪ್ರಯತ್ನದಲ್ಲಿ ಒದಗುವ ವಿದಗ್ಧ ವೇದನೆಯನ್ನು ಬಲ್ಲ ಕನ್ನಡ ರಸಿಕರು ಪ್ರಸ್ತುತ ಅನುವಾದದಲ್ಲಿ ಉಳಿದಿರಬಹುದಾದ ಕೊರತೆಗಳನ್ನು ಕ್ಷಮಿಸಿಯಾರೆಂದು ನಮ್ಮ ಪ್ರತ್ಯಾಶೆ.

ಭಾರತವು ಬಹಳ ಹಳೆಯ ಕಾಲದಿಂದ ನಡೆದು ಬಂದ ಸಂಸ್ಕೃತಿ ನಾಗರಿಕತೆಗಳ ತವರೆಂಬುದು ವಿಶ್ವವೇದ್ಯ. "ವಾಗ್ ವೈ ಸಮ್ರಾಟ್ ಪರಮಂ ಬ್ರಹ್ಮ" ಎಂಬ ವೇದೋಕ್ತಿಯಂತೆ ಭಾರತೀಯ ಅಭಿಜಾತ ವಾಙ್ಮಯವು ಅದರ ಸಂಸ್ಕೃತಿ–ನಾಗರಿಕತೆಗಳ ಶಿರೋರತ್ನವೆನಿಸಿದೆ. ಕೇವಲ ಸ್ವದೇಶೀಯವೆಂಬ ಅತ್ಯಭಿಮಾನದಿಂದ ಅದನ್ನು ಹೊಗಳುವ ಪರಂಪರೆಯೊಂದಾದರೆ, ತದ್ವಿರುದ್ಧವಾಗಿ ಅದು ಹಳೆಯ ಅಪ್ರಬುದ್ಧ ಜನರ ನಾಗರಿಕತೆಯ ತೊದಲು ಮಾತೆಂದು ತೆಗಳುವ ಪರಂಪರೆಯೂ ಇನ್ನೊಂದಿದೆ. ಈ ಎರಡನೆಯ ಮತವನ್ನು ಸಕಾರಣವಾಗಿ ಖಂಡಿಸುವ ಉದ್ದೇಶದಿಂದ ಹೊರಟರೂ ಶ್ರೀ ಅರವಿಂದರು ತ್ರಯಸ್ಥನಾವನಿಗಾದರೂ ನಿಷ್ಪಕ್ಷಪಾತವಾಗಿ ತೋರುವಂತೆ ಭಾರತೀಯ ವಾಙ್ಮಯದ ಅತ್ಯುತ್ತಮ ವಿಮರ್ಶೆಯನ್ನು ಇಲ್ಲಿ ಕೊಟ್ಟದ್ದು ಹೃದಯಸ್ಪರ್ಶಿಯಾಗಿದೆ. ಅಲ್ಲದೆ ಅವರು ತುಲನಾತ್ಮಕ ದೃಷ್ಟಿಯಿಂದ ವಿವಿಧ ಐತಿಹಾಸಿಕ ಯುಗಗಳ ಭಾರತೀಯ ವಾಙ್ಮಯವನ್ನು ಇತರ ದೇಶಗಳ ಆಯಾ ಯುಗಗಳ ವಾಙ್ಮಯದೊಡನೆ ಹೋಲಿಸಿ ಮೌಲ್ಯನಿರ್ಣಯ ಮಾಡಿದ್ದು ಅವರ ಹಿರಿಮೆಯನ್ನು ಎತ್ತಿ ತೋರಿಸುತ್ತದೆ. ಈ ಲೇಖದಲ್ಲಿ ಭಾರತೀಯ ವಾಙ್ಮಯ ಸಾಗರದ ಅತಿ ಗಣ್ಯವಾದ ಹೆದ್ದೆರೆಗಳ ನಿಷ್ಕೃಷ್ಟ ಸೌಂದರ್ಯಮಾಪನವನ್ನು ಕಾಣಬಹುದು. ಭಾರತೀಯ ರಾಷ್ಟ್ರಪುರುಷನ ಪರಂಪರಾಗತ ಮನೋಧರ್ಮವನ್ನು ಸಾಕ್ಷಾತ್ಕರಿಸಿಕೊಂಡ ಪ್ರತಿಭೆ ಅರವಿಂದ ಮಹರ್ಷಿಗಳಾದುದರಿಂದ ಆ ಕನ್ನಡಿಯಲ್ಲಿ ತೋರಿದ ಭಾರತೀಯ ವಾಙ್ಮಯ ಸಂಸ್ಕೃತಿಯ ಚಿತ್ರ ಸತ್ಯಸ್ವರೂಪವುಳ್ಳದ್ದೆಂದು ಯಾರಿಗಾದರೂ ಎನ್ನಿಸದಿರದು. ನಮ್ಮ ಸಂಸ್ಕೃತಾದಿ ವಾಙ್ಮಯದ ಎಲ್ಲ ಮುಖಗಳನ್ನೂ ಎದುರಿಟ್ಟ ಅವರ ಈ ಬರೆಹವು ಗುಣಗಳ ಜೊತೆಗೆ ದೋಷಗಳನ್ನೂ ವೈಜ್ಞಾನಿಕವಾಗಿ ಉಲ್ಲೇಖಿಸುತ್ತದೆ. ಅರವಿಂದರ ವಿಶ್ವವಿಶಾಲವಾದ ಪ್ರತಿಭಾನ್ವಿತ ಐತಿಹಾಸಿಕ ದೃಷ್ಟಿಯು ರೂಪಿಸಿದ ಭಾರತೀಯ ವಾಙ್ಮಯ ಪರಂಪರೆಯ ಸಂಕ್ಷಿಪ್ತವಾದರೂ ಪರ್ಯಾಪ್ತವಾದ, ಸೂಕ್ಷ್ಮಜ್ಞ–ಮನೋಹಾರಿಯೆನಿಸುವ ಈ ಪ್ರಬಂಧವನ್ನು

ಮೊದಲಿನಂತೆಯೇ ಕನ್ನಡ ನಾಡಿನ ರಸಿಕರು ಸ್ವಾಗತಿಸುವರೆಂದು ಹೃತ್ಪೂರ್ವಕವಾಗಿ ನಂಬುತ್ತೇವೆ.

ಈ ಅನುವಾದದಲ್ಲಿ ಕೊಡಲಾದ ಋಗ್ವೇದದ ಕೆಲ ಸೂಕ್ತಗಳು ಮೂಲದಲ್ಲಿ ಕೊಟ್ಟಿಲ್ಲ; ಶ್ರೀ ಅರವಿಂದರು ತಮ್ಮ ಮೂಲ ಲೇಖನದಲ್ಲಿ ಅವುಗಳ ಆಂಗ್ಲ ಭಾಷಾಂತರವನ್ನು ಮಾತ್ರ ಕೊಟ್ಟಿದ್ದಾರೆ. ನಾವು ಇಲ್ಲಿ ಓದುಗರಿಗೆ ಅನುಕೂಲವಾಗಲೆಂದು ಸಂಸ್ಕೃತದಲ್ಲಿರುವ ಮೂಲ ಸೂಕ್ತಗಳನ್ನು ಕೊಟ್ಟಿದ್ದೇವೆ. ಅವುಗಳಲ್ಲಿಯ ಕೆಲ ಋಕ್ಕುಗಳಿಗೆ ಪೂರ್ಣ ಅರ್ಥವನ್ನಿಲ್ಲಿ ನಮ್ಮ ಜವಾಬುದಾರಿಯಿಂದ ಕೊಡುವ ಯತ್ನವನ್ನು ಮಾಡಲಿಲ್ಲ; ಅವರು ಕೊಟ್ಟಷ್ಟನ್ನೇ ಕನ್ನಡಿಸಿ ನಾವಿಲ್ಲಿ ಕೊಟ್ಟಿದ್ದೇವೆ. ಶ್ರೀ ಅರವಿಂದರ ಮೂಲ ಬರಹದಲ್ಲಿ ಪ್ರತಿ ಅಧ್ಯಾಯಕ್ಕೂ ಶೀರ್ಷಿಕೆಯನ್ನು ಹಾಕಿಲ್ಲ. ನಾವಿಲ್ಲಿ ವಿಷಯಾನುಗುಣವಾಗಿ ಅವಕ್ಕೆ ಶೀರ್ಷಿಕೆಗಳನ್ನು ಒದಗಿಸಿದ್ದೇವೆ. ಓದುಗರಿಗೆ ಸಹಾಯವಾಗಲೆಂದು ಇಲ್ಲಿ ನಾವು ಬಳಸಿದ ವಾಙ್ಮಯವಿಮರ್ಶೆಯ ಗಣ್ಯವಾದ ಪಾರಿಭಾಷಿಕ ಪದಗಳ ಅರ್ಥಕೋಶಗಳನ್ನು ಕೊನೆಗೆ ಕೊಟ್ಟಿದ್ದೇವೆ.

ಹಿಂದಿನ ನಮ್ಮ ಅನುವಾದಕ್ಕೂ ಅದರ ಪ್ರಕಾಶನಕ್ಕೂ ಅನುಗ್ರಹ ಸಂಪತ್ತನ್ನು ಒದಗಿಸಿಕೊಟ್ಟಂತೆ ಪ್ರಸ್ತುತ ಪ್ರಬಂಧದ ಅನುವಾದಕ್ಕೂ ಅದರ ಪ್ರಕಾಶನಕ್ಕೂ ತಮ್ಮ ಅಮೂಲ್ಯವಾದ ಅನುಮತಿಯನ್ನು ದಯಪಾಲಿಸಿದ ಪಾಂಡಿಚೇರಿಯ ಅರವಿಂದಾಶ್ರಮದ ಅಧ್ವರ್ಯುಗಳಾದ ಶ್ರೀ ಮಾತೆಯವರಿಗೂ ಆಶ್ರಮದ ಕಾರ್ಯದರ್ಶಿಗಳಿಗೂ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆಗಳು.

ಈ ಅನುವಾದದ ಕಾರ್ಯದಲ್ಲಿ ಮೊದಲಿನಿಂದಲೂ ನಮಗೆ ಪ್ರೇರಕರಾಗಿ ನಿಂತ ಕನ್ನಡದ ಅನುಭಾವಿ ಕವಿಶ್ರೇಷ್ಠರಾದ ಶ್ರೀ ದ.ರಾ.ಬೇಂದ್ರೆಯವರನ್ನೂ ಅರವಿಂದ–ವಾಙ್ಮಯದಲ್ಲಿ ಅಪಾದಮಸ್ತಕವಾಗಿ ಈಸಾಡಿದ ಪ್ರಿನ್ಸಿಪಾಲ ವಿ.ಕೃ. ಗೋಕಾಕರನ್ನೂ ಹುಬ್ಬಳ್ಳಿಯ ಅರವಿಂದಮಂಡಲದ ಸುಪ್ರತಿಷ್ಠಿತ ಕಾರ್ಯಕರ್ತರಾದ ಪ್ರೊ.ಎ.ವಿ.ಶಾಸ್ತ್ರಿಗಳನ್ನೂ ಈ ಸಂದರ್ಭದಲ್ಲಿ ನೆನೆಯದಿರಲಾರೆವು.

ಪ್ರಸ್ತುತ ಪುಸ್ತಕಕ್ಕೆ ಶ್ರೀ ಅರವಿಂದ ಮಹರ್ಷಿಗಳ ಪಡಿಯಚ್ಚನ್ನು ಮಾಡಿಕೊಟ್ಟ ಇಲ್ಲಿಯ ಗಿಬ್ ಹೈಸ್ಕೂಲಿನ ಉಪಾಧ್ಯಾಯರಾದ ಶ್ರೀ ಎಸ್. ಜೆ. ಭಟ್ಟರ ಉಪಕಾರವನ್ನು ನಾವಿಲ್ಲಿ ಸ್ಮರಿಸದಿರಲಾರೆವು.

**ಕೆನರಾ ಕಾಲೇಜು, ಕುಮಟಾ**

೨೧–೧೧–೧೯೫೭ **ಅನುವಾದಕರು**

# ಪರಿವಿಡಿ

# ಭಾರತೀಯ ವಾಙ್ಮಯ

## ಅಧ್ಯಾಯ ಒಂದು
## ವೈದಿಕ ವಾಙ್ಮಯ

ಕಣ್ಣಿನ ಮೂಲಕ ನಮ್ಮನ್ನು ರಂಜಿಸುವ ಕಲೆಗಳು ನಮ್ಮ ಜನಾಂಗದ ಸತ್ವದ ವಿಲಕ್ಷಣ ರೀತಿಯ ಘನಾಭಿವ್ಯಕ್ತಿಯನ್ನು ಬಿಂಬಿಸಬಲ್ಲವು. ಇದು ಜನತೆಯ ರಸಪ್ರಜ್ಞೆಯ ಹಾಗೂ ರಚನಾತ್ಮಕ ಮನಸ್ಸಿನ ಆವಿರ್ಭಾವ. ಆದರೆ ಜನಾಂಗದ ಈ ಸತ್ವದ, ಬದಲಾಗಲು ಒಗ್ಗುವ ಮತ್ತು ಬಹುಮುಖವಾದ, ಆತ್ಮಾಭಿವ್ಯಕ್ತಿಯನ್ನು ಅದರ ವಾಙ್ಮಯದಲ್ಲೇ ನಾವು ಹುಡುಕಬೇಕು. ಏಕೆಂದರೆ ತನ್ನ ವಿಕಾಸಾವಸ್ಥೆಯ ಅನೇಕ ಅರ್ಥಗಳನ್ನೂ ತಿರುಪು ಹೊಳಪುಗಳನ್ನೂ ಅದರ ಅಂತರಾತ್ಮವು ನಮಗೆ ಸೂಕ್ಷ್ಮವಾಗಿಯೂ ವಿವಿಧವಾಗಿಯೂ ಶಬ್ದದ ಸ್ಪಷ್ಟವಾದ ಅಲಂಕಾರ ಧ್ವನಿಗಳ ಶಕ್ತಿಯ ಮೂಲಕ ತೋರಿಸಿಕೊಡುತ್ತದೆ. ಒಂದು ವಾಙ್ಮಯದ ಮಹತ್ವವು ಮೊಟ್ಟಮೊದಲು ಅದರ ವಸ್ತುವಿನ ಯೋಗ್ಯತೆ ಹಾಗೂ ಬೆಲೆಯನ್ನೂ ಅದರಲ್ಲಿಯ ವಿಚಾರದ ಮೌಲ್ಯ ಹಾಗೂ ಸ್ವರೂಪಗಳ ಸೌಂದರ್ಯವನ್ನೂ ಅದರ ಭಾಷೆಯ ಅತ್ಯುನ್ನತ ಮಟ್ಟದ ಶೈಲಿಯನ್ನೂ ಅವಲಂಬಿಸಿರುತ್ತದೆ. ಅದು ಜನತೆಯ, ಆಯಾ ಯುಗದ ಸಂಸ್ಕೃತಿಯ, ಆದರ್ಶ ಹೃದಯವನ್ನೂ ಜೀವಿತವನ್ನೂ ಪ್ರಾಣವನ್ನೂ ಆತ್ಮವನ್ನೂ ತನ್ನ ಕ್ರಾಂತದರ್ಶಿಗಳಾದ ವ್ಯಕ್ತಿಗಳ ಪ್ರತಿಭೆಯ ಮೂಲಕ ವ್ಯಕ್ತಗೊಳಿಸುತ್ತದೆ. ಸಂಸ್ಕೃತ ಮತ್ತು ಇತರ ಭಾರತೀಯ ವಾಙ್ಮಯಗಳಲ್ಲಿ ಮೇಲೆ ಹೇಳಿದ ಮಾರ್ಗಗಳಲ್ಲಿ ಭಾರತೀಯ ಮನ ಸಾಧಿಸಿದ ಸಿದ್ಧಿಗಳನ್ನು ಕೇವಲ ದೋಷೈಕದೃಷ್ಟಿಯವನೂ ದೂರಲಾರನು. ಗುಣದಲ್ಲಿ, ಗಾತ್ರದಲ್ಲಿ, ಉತ್ಕೃಷ್ಟತೆಯಲ್ಲಿ, ವೀರ್ಯವತ್ತೆಯಲ್ಲಿ, ಅನನ್ಯ ಸಾಧಾರಣತೆಯಲ್ಲಿ, ಸೌಂದರ್ಯದಲ್ಲಿ, ಸಾರದಲ್ಲಿ, ಕೌಶಲ್ಯದಲ್ಲಿ, ಬಂಧದಲ್ಲಿ ಮಾತಿನ ಗಾಂಭೀರ್ಯದಲ್ಲಿ, ಸಮತೆ ಕಾಂತಿಗಳಲ್ಲಿ, ಅಂತಃಸತ್ವದ ಅಗಲ–ಎತ್ತರಗಳಲ್ಲಿ ಸಂಸ್ಕೃತದ ಪ್ರಾಚೀನ ಹಾಗೂ ಅಭಿಜಾತ ಕೃತಿಗಳು ಜಗತ್ತಿನ ಮಹಾವಾಙ್ಮಯಗಳಲ್ಲಿ ಮೊದಲ ಪಂಕ್ತಿಗೆ ಸೇರುವುವು. ವಿದ್ವಜ್ಜನರ ಅಭಿಪ್ರಾಯದಂತೆ ಈ ಭಾರತೀಯ ಭಾಷೆ ಅಂತಿಸಂಪನ್ನ, ಪರಿಪೂರ್ಣ, ಸಮರ್ಥ, ಮನುಷ್ಯಬುದ್ಧಿ ನಿರ್ಮಿಸಿದ, ಬೆಳೆಸಿಕೊಂಡ ಮಾಧ್ಯಮಗಳಲ್ಲಿ ಅತ್ಯದ್ಭುತ, ಶ್ರೇಷ್ಠ, ಮಧುರ, ಪ್ರಸನ್ನ, ಓಜಸ್ವಿ, ಸುಶ್ಲಿಷ್ಟ, ಪರಿಪುಷ್ಟ, ಮಾರ್ಮಿಕ. ಅದರ ನಾದಗಾಂಭೀರ್ಯ ಮತ್ತು ಇತರ ಗುಣ–ಲಕ್ಷಣಗಳು ಭಾರತೀಯ ಮನವು ವಿಕಾಸಗೊಳಿಸಿದ ಸಂಸ್ಕೃತಿಯನ್ನು

ಬಿಂಬಿಸುತ್ತವೆ. ಕವಿಗಳೂ ಮನೀಷಿಗಳೂ ಅದರ ಗಾಂಭೀರ್ಯ ಕೆಡದಂತೆ ಅದನ್ನು ಉನ್ನತವಾಗಿಯೂ ಉದಾತ್ತವಾಗಿಯೂ ಬಳಸಿದರು. ಭಾರತದ ಸತ್ವವು ತನ್ನ ಅತಿಪ್ರಮುಖ, ಪ್ರಕಾಶಕ ಹಾಗೂ ವೈಭವಸಂಪನ್ನ ರಚನೆಗಳನ್ನು ಸಂಸ್ಕೃತ ಭಾಷೆಯಲ್ಲೇ ಮಾಡಿತಾದರೂ, ಅದು ತನ್ನ ಇತರ ಭಾಷೆಗಳಲ್ಲಿಯೂ ಅಷ್ಟನ್ನೇ ಸಾಧಿಸಿತು. ಭಾರತೀಯ ವಾಙ್ಮಯದ ಒಟ್ಟು ಬೆಲೆಯನ್ನು ಕಟ್ಟಬೇಕಾದರೆ ನಾವು ಪಾಳಿಯಲ್ಲಿರುವ ಬೌದ್ಧ ವಾಙ್ಮಯವನ್ನೂ ಇತರ ಪ್ರಾಕೃತ ಮತ್ತು ದ್ರಾವಿಡ ವಾಙ್ಮಯಗಳನ್ನೂ ಗಣನೆಗೆ ತೆಗೆದುಕೊಳ್ಳಬೇಕು. ವಾಙ್ಮಯಗಳ ರಾಶಿಯಲ್ಲಿ ಅತ್ಯಧಮ, ಅತ್ಯಧಿಕ ಎನಿಸಬಹುದಾದ ಕೃತಿಗಳಿವೆ; ಉತ್ತಮ ಕೃತಿಗಳು ಪ್ರಾಚೀನ, ಮಧ್ಯಯುಗೀನ ಮತ್ತು ಆಧುನಿಕ ಯುರೋಪಿನ ಅಜರಾಮರ ಕೃತಿಗಳನ್ನು ಸರಿಗಟ್ಟುವುವು. ಈ ಭಾಷೆಯಲ್ಲಿಯ ಮುಖ್ಯ ಕೃತಿಗಳ ಮತ್ತು ಕರ್ತರ ಹೆಸರುಗಳನ್ನು ಹೇಳ ಹೊರಟರೆ ವೇದ, ಉಪನಿಷತ್ತು, ಭರ್ತೃಹರಿ, ಜಯದೇವ, ಧರ್ಮಪದ, ಜಾತಕ, ಪಂಚತಂತ್ರ, ತುಲಸೀದಾಸ, ವಿದ್ಯಾಪತಿ, ಚಂಡೀದಾಸ, ರಾಮಪ್ರಸಾದ, ರಾಮದಾಸ, ತುಕಾರಾಮ, ತಿರುವಳ್ಳವರ್, ಕಂಬನ್, ನಾನಕ್ ಕಬೀರ, ಮೀರಾಬಾಯಿ ಮತ್ತು ದಾಕ್ಷಿಣಾತ್ಯ ಶೈವಸಂತರು ನಮಗೆ ಎದ್ದು ಕಾಣುತ್ತಾರೆ. ಇವಿಷ್ಟೇ ಅಲ್ಲದೆ ದೇಶದ ಇತರ ಭಾಷೆಗಳಲ್ಲಿ ಇನ್ನೂ ಎಷ್ಟೋ ಉತ್ತಮ ಕೃತಿಗಳಿವೆ. ಈ ಪ್ರಕಾರವಾಗಿ ಮೂರು ಸಾವಿರಕ್ಕಿಂತಲೂ ಹೆಚ್ಚು ವರುಷಗಳಿಂದ ನಡೆದುಕೊಂಡು ಬಂದ ಈಗಲೂ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದುತ್ತಿರುವ ಈ ಮಾನಸಪ್ರಜ್ಞೆಯ ವ್ಯಾಪಾರವು ದೇಶದ ಸಂಸ್ಕೃತಿಯಲ್ಲಿ ಇರುವ ಚೈತನ್ಯ ಪೂರ್ಣವೂ ಅಸಾಧಾರಣವೂ ಆದ ಅಂಶಗಳಿಗೆ ಸಾಕ್ಷಿಯಾಗಿವೆ. ಈ ಅಲಂಘ್ಯ ಅಭಿಲೇಖವನ್ನು, ಸ್ವಪ್ರಕಾಶ ಸತ್ವದ ವೈಭವವನ್ನು, ರಚನಾತ್ಮಕ ಪ್ರಜ್ಞೆಯನ್ನು ಕಡೆಗಣಿಸುವ ವಿಮರ್ಶಕನು ಅಂಥ ಅಸೂಯಾಪರ, ಅಭೇದ್ಯ ಪೂರ್ವಗ್ರಹಗ್ರಸ್ತ; ಅಂಥವನ ವಿಮರ್ಶೆ ತುಚ್ಛೀಕರಿಸಲೂ ಯೋಗ್ಯವಲ್ಲ. ನಮ್ಮ ಈ ವಿಮರ್ಶಕ ಬ್ರಹ್ಮರಾಕ್ಷಸನು ಎತ್ತಿದ ಪೂರ್ವಪಕ್ಷವನ್ನು ಉತ್ತರಿಸಹೋಗುವುದು ವ್ಯರ್ಥವೇ ಸೈ; ಏಕೆಂದರೆ ಯಾವುದೇ ಒಂದು ವಾಙ್ಮಯದ ಮಹತ್ವಕ್ಕೆ ಕಾರಣವಾದ ಯಾವ ಅಂಶವೂ ಚರ್ಚಾಸ್ಪದವಾಗಿಲ್ಲ. ಈ ಬ್ರಹ್ಮರಾಕ್ಷಸನ ವಿಮರ್ಶಬುದ್ಧಿಗೆ ಸ್ವಲ್ಪವಾದರೂ ಅನುಕೂಲಮತ ಕೊಡಬೇಕಾದರೂ ಆತನ ವಿಪರೀತ ದೃಷ್ಟಿ, ವಿಡಂಬನೆ ಮತ್ತು ಅಮುಖ್ಯ ವಿಷಯಗಳಲ್ಲಿ ವಿಸ್ತಾರವಾದ ಅತಿಶಯೋಕ್ತಿಯಿಂದ ಕೂಡಿದ ತರ್ಕ ಇವುಗಳಿಗೆ ಎಳ್ಳಷ್ಟಾದರೂ ಅವಕಾಶವಿದ್ದರೆ ಅದು ಇಂತು; ಭಾರತೀಯ ಮನವು ಧ್ಯೇಯವಾದಿಯೂ ವಿಪುಲ ಕಲ್ಪಕತೆಯುಳ್ಳದ್ದೂ ಆದ್ದರಿಂದ ಯುರೋಪಿನವನಾದ ಆತನ ಹೆಚ್ಚು ವಾಸ್ತವಿಕವಾದ ಮನಸ್ಸು ಮತ್ತು ಹೆಚ್ಚು ವಿಪುಲವಲ್ಲದ ಕಲ್ಪಕತೆ ಚೆನ್ನಾಗಿ ಅದನ್ನು ಅರ್ಥಮಾಡಿಕೊಳ್ಳಲಾರದಾದವು ಎಂಬುದಿಷ್ಟೆ. ವಿಮರ್ಶೆಯ ಈ ರಾಕ್ಷಸಕಾವ್ಯಕ್ಕೆ ಉದಾಹರಣೆಯನ್ನು ಕೊಡಬೇಕಾದರೆ ಯುರೋಪಿನ ವಾಙ್ಮಯದ ಕೆಟ್ಟ ಭಾಷಾಂತರಗಳನ್ನು ಓದಿದ ಒಬ್ಬ ಭಾರತೀಯ ವಿಮರ್ಶಕನ ದ್ವೇಷೈಕದೃಷ್ಟಿಯ ದುರಾರೋಪವೊಂದನ್ನು ಊಹಿಸಿಕೊಳ್ಳಬೇಕು. ಹಾಗೆ ಹೊರಟರೆ

ಇಲಿಯಡ್ ಎಂಬ ಗ್ರೀಕ್ ಮಹಾಕಾವ್ಯವು ಒಂದು ಕಚ್ಚಾ, ಬಾಲಿಶ, ಕಾಡುಗಬ್ಬ ಅಥವಾ ಕಗ್ಗ; ಡಾಂಟೆಯ ಮೇರುಕೃತಿಯು ಒಂದು ಕ್ರೂರ, ಅಂಧ ಧರ್ಮಪುರಾಣದ ಬೇತಾಳಗಳ ಕುಣಿತ; ಶೇಕ್ಸ್‌ಪಿಯರನು ಎಲ್ಲೋ ಅಲ್ಪಸ್ವಲ್ಪ ಕೌಶಲವುಳ್ಳ, ಅಪಸ್ಮಾರ ಬುದ್ಧಿಯುಳ್ಳ, ಕುಡಿದ ಕಾಡು ಕಪಿ; ಗ್ರೀಕ್, ಸ್ಪೇನ್ ಮತ್ತು ಇಂಗ್ಲೆಂಡುಗಳ ನಾಟಕ ಚಕ್ರವೆಲ್ಲವೂ ಅಶ್ಲೀಲದ ಬಚ್ಚಲು ಮತ್ತು ಹಿಂಸೆಯ ಕೆಚ್ಚಲು. ಫ್ರೆಂಚ್ ಕಾವ್ಯವೆಲ್ಲವೂ ಬೋಳು ಬೋಳಾದ, ಅಥವಾ "ಎದ್ದು ಮೊದ್ದು ಸ್ವರೂಪಾಯ, ಎಮ್ಮೇ ಕೋಣಾಯ ಮಂಗಳಂ" ಎಂಬ ತರಹದ ಮಾತುಗಾರಿಕೆಯ ಕುಸ್ತಿ ಅಥವಾ ಕಸರತ್ತು: ಫ್ರೆಂಚ ಕಾದಂಬರಿಗಳು ಪಾಪಕೂಪಗಳು, ಘಟಿಂಗತನದ ವೈತರಣಿಗಳು ಅಥವಾ ರಸಿಕ ಯಜಮಾನನಿಗಾಗಿ ಗ್ರಂಥಕರ್ತರು ಮಾಡಿದ ಸುದೀರ್ಘ ಮಹಾ ಮದನ–ಯಜ್ಞಗಳು ಎಂದು ಹೇಳಿ ನಡುನಡುವೆ ಎಲ್ಲಾದರೂ ಚಿಕ್ಕಪುಟ್ಟ ಒಳ್ಳೆಯ ಅಂಶಗಳನ್ನು ಹೆಕ್ಕಿ ಹೆಸರಿಸಿ, ಕೃತಿಗಳ ಭಾವಾರ್ಥವನ್ನಾಗಲಿ, ರಸದೃಷ್ಟಿಯ ಮೌಲ್ಯವನ್ನಾಗಲಿ, ರಚನಾಮಾರ್ಗವನ್ನಾಗಲಿ ತಿಳಿದುಕೊಳ್ಳಲು ಕಾಸಿನಷ್ಟೂ ಪ್ರಯತ್ನ ಮಾಡದೆ ಅವುಗಳೆಲ್ಲವೂ, ಸ್ವಕಪೋಲ ಕಲ್ಪಿತ ಸಿದ್ಧಾಂತದ ಪ್ರಕಾರ, ಅಸಂಬದ್ಧ ಅವುಗಳಲ್ಲಿಯ ಕ್ರೈಸ್ತ ಕ್ರೈಸ್ತೇತರ ಧ್ಯೇಯವಾದಗಳು ಅಸತ್ಯ ಅಲ್ಲಿಯ ಕಲ್ಪಕತೆ ಅನೂಚಾನವಾಗಿ ಬಂದ ವಿಷಯ ಲಂಪಟತೆ, ದಾರಿದ್ರ್ಯ ಮತ್ತು ಅಕ್ರಮಗಳಿಂದ ಕೂಡಿ ಕೆಟ್ಟುಹೋದದ್ದು ಎಂದು ಹೇಳಬೇಕಾಗುವುದು. ಇಂಥ ಅಕಾಂಡತಾಂಡವವು ವಿಮರ್ಶಾ ಬಾಹ್ಯ. ಇದರಲ್ಲಿ ಎಲ್ಲೋ ಕೆಲವಮ್ಮಟ್ಟಿಗೆ ಮುಖ್ಯವೆನಿಸಬಹುದಾದ ಅಂಶಗಳನ್ನು ಗಮನಿಸಬೇಕಾಗುತ್ತದೆ. ಈ ವ್ಯರ್ಥ ವಿಡಂಬನೆಗಳು ಸರ್ವಸಾಮಾನ್ಯ ಯುರೋಪಿಯನ್ನನು ಭಾರತೀಯ ವಾಙ್ಮಯದ ಬಗ್ಗೆ ತಾಳಿದ ಅಭಿಪ್ರಾಯವನ್ನೇನೂ ಪ್ರತಿನಿಧಿಸುವುದಿಲ್ಲ. ಆದರೂ ಅನೇಕ ವೇಳೆ ಭಾರತೀಯ ಬರವಣಿಗೆಯ ಸತ್ವ, ಸ್ವರೂಪ, ಸೌಂದರ್ಯ, ಸಂಪೂರ್ಣತೆ ಮತ್ತು ಶಕ್ತಿಗಳು ಹೇಗೆ ಜನತೆಯ ಸಾಂಸ್ಕೃತಿಕ ಮನಸ್ಸಿನ ಅಭಿವ್ಯಕ್ತಿಗಳೆಂದು ಅರ್ಥಮಾಡಿಕೊಳ್ಳುವುದರಲ್ಲಿ ಅಯಶಸ್ವಿಯಾಗಿರುವುದು ಕಂಡುಬಂದಿದೆ. ಭಾರತೀಯ ವಾಙ್ಮಯದ ಓಜಸ್ಸು ಕಲಾವೈಭವಗಳನ್ನು ಮೆಚ್ಚುವ ಸಹಾನುಭೂತಿಪರರಾದ ವಿಮರ್ಶಕರಿಂದಲೂ ಒಟ್ಟಿನ ಮೇಲೆ ಇದು ಅಷ್ಟೇನೂ ತೃಪ್ತಿಕರವಾಗಿಲ್ಲವೆಂಬ ವಿಮರ್ಶೆಯು ಕೇಳಿ ಬರುತ್ತಿದೆ. ಇದರ ಅರ್ಥವೇನೆಂದರೆ, ಚಿತ್ರ–ಶಿಲ್ಪಗಳಿಗಿಂತಲೂ ಹೆಚ್ಚಾಗಿ ವಿವಿಧ ಮನಸ್ಸುಗಳ ಮುದ್ರೆಗಳು ಮೂಡಿರುವ ಈ ರಚನಾತ್ಮಕ ಕ್ಷೇತ್ರದಲ್ಲಿಯೂ ತಪ್ಪು ತಿಳಿವಳಿಕೆಗಳಿರುತ್ತವೆ. ಈ ಎರಡು ಬಗೆಯ ಮನೋಧರ್ಮಗಳ ನಡುವೆ ಒಂದು ಅಡ್ಡಗೋಡೆಯಿರುತ್ತದೆ. ಒಬ್ಬನಿಗೆ ಸ್ವಾರಸ್ಯವುಳ್ಳದ್ದು ಅರ್ಥಗರ್ಭಿತ, ಸಮರ್ಥ ಎನಿಸಿದ್ದು ಮತ್ತೊಬ್ಬನಿಗೆ ಬರಿ ಶಬ್ದಾಡಂಬರವಷ್ಟೆ. ಈ ತೊಂದರೆಗೆ ಎರಡು ಕಾರಣಗಳುಂಟು. ಭಾಷೆಯ ಸಜೀವ ಸತ್ವವನ್ನು ಹೊಕ್ಕು ಸಚೇತನ ಸ್ಪರ್ಶ ಪಡೆಯಲು ಸಾಧ್ಯವಾಗದಿರುವುದು; ಎರಡನೆಯದು ಸಂಪೂರ್ಣ ಅಸಾದೃಶ್ಯ ಮತ್ತು ಭೇದಗಳಿಗಿಂತಲೂ ಹೆಚ್ಚಾಗಿ ಅವನನ್ನು ಸೋಲಿಸುವುದು

ಸಾದೃಶ್ಯದಲ್ಲಿರುವ ಒಂದು ಆಧ್ಯಾತ್ಮಿಕ ವ್ಯತ್ಯಾಸ. ಇದಕ್ಕೊಂದು ಉದಾಹರಣೆ: ಚೀನೀ ಕಾವ್ಯವು ತನ್ನದೇ ಆದ ವೈಶಿಷ್ಟ್ಯವನ್ನುಳ್ಳದ್ದು; ವಿದೇಶೀಯವೆಂದು ಮೂಲೆಗೊತ್ತುವ ಪ್ರವೃತ್ತಿಯನ್ನು ಬಿಟ್ಟಾಗ ಪಾಶ್ಚಾತ್ಯ ಮನೋಧರ್ಮಕ್ಕೆ ಅದನ್ನು ಪೂರ್ವಗ್ರಹವಿಲ್ಲದೆ ಮೆಚ್ಚಲು ಬರುತ್ತದೆ: ಏಕೆಂದರೆ ಆಗ ಯಾವುದೇ ಬಗೆಯ ಮನಕಲಕುವ ನೆನಹುಗಳಾಗಲಿ, ಹೋಲಿಕೆಗಳಾಗಲಿ ಅವನ ಆ ಪ್ರವೃತ್ತಿಗೆ ಅಡ್ಡಿ ಒಡ್ಡುವುದಿಲ್ಲ. ತದ್ವಿರುದ್ಧವಾಗಿ ಅವಲೋಕಿಸ ಹೊರಟರೆ, ಯುರೋಪಿನ ಕಾವ್ಯದಂತೆಯೇ ಭಾರತೀಯ ಕಾವ್ಯವು ಆರ್ಯರ ಅಥವಾ ಆರ್ಯಪ್ರಭಾವಕ್ಕೊಳಪಟ್ಟ ರಾಷ್ಟ್ರೀಯ ಮನಸ್ಸಿನ ರಚನೆ, ಅಂತಹದೇ ಉದ್ದೇಶಗಳಿಂದ ಅದು ಹೊರಡುತ್ತದೆ; ಅದೇ ಮಟ್ಟದಲ್ಲಿ ಹರಿಯುತ್ತದೆ, ಅದೇ ಜಾತಿಗೆ ಸೇರಿದ ಶಬ್ದ ರೂಪಗಳನ್ನು ಬಳಸುತ್ತದೆ– ಹೀಗಿದ್ದರೂ ರಸದೃಷ್ಟಿಯಲ್ಲಿ ಕಲ್ಪನಾವೈವಿಧ್ಯದಲ್ಲಿ, ಭಂಗಿ–ಭಣಿತಿಗಳಲ್ಲಿ, ಭಾವಕತ್ವದಲ್ಲಿ, ಮಾರ್ಗದಲ್ಲಿ, ಸ್ವರೂಪದಲ್ಲಿ, ಸಂವಿಧಾನದಲ್ಲಿ ಎದ್ದು ಕಾಣುವ ಪ್ರತ್ಯೇಕೀಕರಣದ ಪ್ರವೃತ್ತಿಯನ್ನು ಇದು ನಿರ್ಮಿಸುತ್ತದೆ. ಯುರೋಪಿನ ಭಾವ ಮತ್ತು ತಂತ್ರಗಳ ಬಳಕೆಯುಳ್ಳ ಮನಸ್ಸು ಇಲ್ಲಿಯೂ ಅದೇ ತೃಪ್ತಿಯನ್ನು ನಿರೀಕ್ಷಿಸುತ್ತದೆ– ಆದರೆ ಅದನ್ನದು ಪಡೆಯಲಾರದಾಗುತ್ತದೆ. ತನಗೆ ಗೊತ್ತಿಲ್ಲದ ರಹಸ್ಯವುಳ್ಳ ಆ ವ್ಯತ್ಯಾಸಕ್ಕೆ ಅದು ಸೋಲುತ್ತದೆ, ಮತ್ತು ಸೂಕ್ಷ್ಮವಾಗಿ ಹೋಲಿಕೆಯನ್ನು ಹುಡುಕುತ್ತ ಹೋಗುವ ಹಾಗೂ ನಿರರ್ಥಕವಾಗಿ ನಿರೀಕ್ಷಿಸುವ ಬುದ್ಧಿಯೂ ಆತನ ಸಂಪೂರ್ಣ ಅರ್ಥಗ್ರಹಣಕ್ಕೆ ವಿಘ್ನವಾಗಿ ನಿಲ್ಲುತ್ತವೆ. ಹೀಗಾಗಲು ಅವನ ಮನೋಭೂಮಿಕೆಯಲ್ಲಿರುವ ಮೂಲತಃ ತೀರಾ ಭಿನ್ನವಾದ ಸತ್ವದ ಅರೆಯರಿವೂ ಆಕರ್ಷಣ ಅತೃಪ್ತಿಗಳ ಮಿಶ್ರಭಾವಗಳನ್ನುಂಟು ಮಾಡುವ ಈ ಸಂಸ್ಕೃತಿಯ ಭಿನ್ನ ಹೃದಯವೂ ಕಾರಣಗಳು. ಈ ಅಲ್ಪಾವಕಾಶದಲ್ಲಿ ವಿವೇಚಿಸಲು ಈ ವಿಷಯ ಬಹಳದೊಡ್ಡದಾಗಿದೆ; ಆದ್ದರಿಂದ ನಾನು ಭಾರತೀಯ ಆತ್ಮದ ಕುರುಹು ಮುದ್ರಿತವಾಗಿರುವ ರಚನಾತ್ಮಕ ಪ್ರತಿಭೆ ಮತ್ತು ಕಲ್ಪನಾ ಶಕ್ತಿಗಳನ್ನು ಪ್ರತಿಬಿಂಬಿಸುವ ಅತ್ಯಂತ ಪ್ರಾತಿನಿಧಿಕವಾಗಿರುವ ಕೆಲವೇ ಉದ್ದಾಮ ಕೃತಿಗಳನ್ನು ಇಲ್ಲಿ ವಿವೇಚಿಸಿ ಕೆಲ ಅಂಶಗಳನ್ನು ಹೇಳುತ್ತೇನೆ.

ಆರಂಭದಲ್ಲಿ ಭಾರತವು ವೈಭವಪೂರ್ಣ ತಾರುಣ್ಯದಲ್ಲಿತ್ತು; ಆಗ ಅಗಾಧವಾದ ಆಧ್ಯಾತ್ಮಿಕ ಅಂತರ್ದೃಷ್ಟಿಯು ಕಾರ್ಯಪರವಾಗಿತ್ತು. ಇಲ್ಲಿ ಒಂದು ಸೂಕ್ಷ್ಮವಾದ ದಾರ್ಶನಿಕ ಶಕ್ತಿ ಹಾಗೂ ಆಳವೂ ತಿಳಿಯೂ ವಿಶಾಲವೂ ಆದ ಬೌದ್ಧಿಕ–ನೈತಿಕ–ವಿಚಾರ, ಶೂರತನ, ರಚನಾತ್ಮಕ ಪ್ರವೃತ್ತಿ ಅಂದು ನೆಲೆಗೊಂಡಿದ್ದವು. ಈ ಪ್ರಾಚೀನ ಭಾರತದ ಮನೋಭೂಮಿಕೆ ತನ್ನ ವಿಶಿಷ್ಟವಾದ ಸಂಸ್ಕೃತಿ– ನಾಗರಿಕತೆಗಳ ಶಾಶ್ವತ ರಚನೆಯ ಯೋಜನೆಯನ್ನು ಹಾಕಿತು. ಈ ಯೋಜನೆಯ ಫಲವಾಗಿ ಭಾರತೀಯ ಪ್ರತಿಭೆಯು ನಾಲ್ಕು ಮಹೋನ್ನತ ಕೃತಿಗಳನ್ನು ರೂಪಿಸಿತು; ಅವೇ ವೇದ, ಉಪನಿಷತ್ತು, ರಾಮಾಯಣ, ಮಹಾಭಾರತ. ಅವುಗಳಲ್ಲಿ ಪ್ರತಿಯೊಂದೂ ವಿಶಿಷ್ಟ ಬಗೆ, ಸ್ವರೂಪ ಮತ್ತು ಉದ್ದೇಶ ಉಳ್ಳದ್ದಾದುದರಿಂದ ಇನ್ನಾವ ವಾಙ್ಮಯದಲ್ಲೂ ಅವುಗಳನ್ನು ಸರಿಗಟ್ಟುವ ಗ್ರಂಥಗಳು

ಸುಲಭವಾಗಿ ಸಿಕ್ಕಲಾರವು. ಮೊದಲಿನೆರಡು, ಭಾರತದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಜೀವನದ ಪ್ರತ್ಯಕ್ಷ ಅಡಿಗಲ್ಲಾಗಿವೆ. ಮಿಕ್ಕೆರಡೂ ಅದರ ಬಾಳಿನ ಮಹೋನ್ನತಿಯ ಕಾಲದಲ್ಲಿ ಗೋಚರಿಸಿದ ಭಾವಗಳ ಮತ್ತು ಅದನ್ನು ನಿಯಂತ್ರಿಸಿದ ಧ್ಯೇಯಗಳ– ಅಲ್ಲದೆ, ಜೀವ, ಪ್ರಕೃತಿ, ದೇವರು ಮತ್ತು ವಿಶ್ವಗಳ ಸಾಕ್ಷಾತ್ಕಾರದ ರಚನಾತ್ಮಕ ಅರ್ಥವಿವರಣೆ ಎನಿಸಿವೆ. ಪ್ರತಿಮಿತ ಆಧ್ಯಾತ್ಮಿಕ ಪ್ರತಿಭೆಯ ಸಾಕಾರ ಸಾಕ್ಷಾತ್ಕಾರವಿತ್ತ ಮಾನಸಿಕ ಹಾಗೂ ಧಾರ್ಮಿಕ ಅನುಭವದಿಂದ ಕಂಡ ಉಕ್ತ ವಿಷಯಗಳ ಮೊದಲ ನಾಮರೂಪಗಳನ್ನು ಭೇದಿಸಿಕೊಂಡು ಮುಂದೆ ಹೊರಟವು. ಆದರೆ ಅವು ಆ ನಾಮರೂಪಗಳಿಂದ ಸಂಪೂರ್ಣ ಮುಕ್ತವಾಗಲಿಲ್ಲ. ಏಕೆಂದರೆ ಅವು ಯಾವಾಗಲೂ ಅದರ ಮನೋಭೂಮಿಕೆಯಲ್ಲಿ ತಪ್ಪದೆ ಮೂಡುತ್ತಿದ್ದವು. ಈ ಉಪನಿಷತ್ತುಗಳು ವಿಶಿಷ್ಟ ರೀತಿಯಿಂದ ಅವುಗಳ ಅತ್ಯಂತ ಸಾರಭೂತವೂ, ಗಂಭೀರವೂ, ಅತ್ಯಾಪ್ತವೂ, ಅತಿ ವಿಪುಲವೂ ಆದ ಸತ್ಯಸ್ವರೂಪಗಳನ್ನು ಆತ್ಮ, ಪರಮಾತ್ಮ, ಜೀವ, ಪ್ರಪಂಚ ಮತ್ತು ಇವುಗಳ ತತ್ವ ಹಾಗೂ ಶಕ್ತಿಗಳ ಆತ್ಯಂತಿಕ ಮತ್ತು ಅದ್ವಿತೀಯ ಸತ್ವಗಳನ್ನು ವಿಶಿಷ್ಟ– ಕಾವ್ಯಶೈಲಿಯಲ್ಲಿ ಸಾಕ್ಷಾತ್ಕರಿಸಿಕೊಡುತ್ತವೆ. ಅವುಗಳಲ್ಲಿ ಪ್ರತಿಭೆ ಹಾಗೂ ಮಾನಸಪ್ರಜ್ಞೆಗಳ ಮೂಲಕ ಶುದ್ಧ ಆಧ್ಯಾತ್ಮಿಕ ಪ್ರತ್ಯಕ್ಷದವರೆಗೆ ಹರಿದ ಅಕುಂಠಿತ ಸಾಕ್ಷಾತ್ಕಾರ ರೂಪದಲ್ಲಿ ಅತ್ಯುದಾತ್ತ ರಹಸ್ಯಗಳನ್ನೂ ಅತಿಸ್ಫುಟ ದರ್ಶನಗಳನ್ನೂ ಕೊಡಲಾಗಿದೆ. ಇತಿಹಾಸ ಪುರಾಣಗಳಲ್ಲಿ ಬುದ್ಧಿ, ಬಾಳು, ಆದರ್ಶ, ನೀತಿ, ರಸದೃಷ್ಟಿ, ಚೇತಸ್ಸು, ಭಾವನೆ, ಇಂದ್ರಿಯ ಮತ್ತು ಶರೀರಗಳಿಗೆ ಸಂಬಂಧಿಸಿದ ಜ್ಞಾನ, ಭಾವ, ದರ್ಶನ ಮತ್ತು ಅನುಭೂತಿಗಳ ಉಲ್ಲೇಖವಿದೆ. ಮಿಕ್ಕ ವಾಙ್ಮಯ ಭಾಗ ಇವುಗಳಿಂದ ಮುಂಬರಿದದ್ದು; ಆದರೆ ಉದ್ದಕ್ಕೂ ಇದೇ ಬುನಾದಿ ಉಳಿದುಕೊಂಡಿದೆ–ಮತ್ತು ಹಳೆಯ ಜಾತಿ–ಆಕೃತಿಗಳಿಗೆ ಬದಲಾಗಿ ಅಥವಾ ಅವುಗಳ ನಡುವೆ ಹೊಸ ಅಂಶಗಳು ಬಂದು ಮುಂದಿನ ಕೃತಿಗಳ ಒಟ್ಟನ್ನು ಹೆಚ್ಚಿಸುವವಲ್ಲದೆ, ಮೂಲ ರಚನೆಯಲ್ಲಿ, ಲಕ್ಷಣದಲ್ಲಿ ಮತ್ತು ಮೂಲ ಆಧ್ಯಾತ್ಮಿಕ ಅನುಭೂತಿಗಳ ವಿಸ್ತರಣೆಯಲ್ಲಿ ಎಂದೂ ಅವು ಅಸಂಬದ್ಧ ಅಥವಾ ಅಸಂಗತ ಮಾರ್ಗವನ್ನು ಹಿಡಿಯಲು ಕಾರಣವಾಗಲಿಲ್ಲ.

ಚಿತ್ರ–ಶಿಲ್ಪಗಳಲ್ಲಿ ಕಂಡುಬರುವಂತೆ ವಾಙ್ಮಯ–ಕೃತಿಗಳಲ್ಲಿಯೂ ಎಷ್ಟೇ ದೊಡ್ಡ ದೊಡ್ಡ ಬದಲಾವಣೆಗಳಾದರೂ ಭಾರತೀಯ ಮನವು ಉದ್ದಕ್ಕೂ ಸೂತ್ರಬದ್ಧವಾಗಿ ತನ್ನ ಸ್ವರೂಪವನ್ನು ಕಳೆದುಕೊಳ್ಳದೆ ಪ್ರಗತಿ ಹೊಂದಿರುವುದನ್ನು ನಾವು ನೋಡಬಹುದು.

ವೇದವು ಪ್ರಾಚೀನ, ಪ್ರಾತಿಭ ಹಾಗೂ ಸಾಂಕೇತಿಕ ಮಾನಸ ಪ್ರಜ್ಞೆ ಮಾಡಿದ ರಚನೆ, ವೇದದ ಕಾಲವಾದ ಮೇಲೆ ಹುಟ್ಟಿದ ಮಾನವನ ಮನಸ್ಸು ಹೆಚ್ಚು ಬುದ್ಧಿ ಪ್ರಧಾನವೂ ಕಾರ್ಯಕಾರಣ ಭಾವ ಹಾಗೂ ಕಲ್ಪಕತೆಗಳಿಂದ ನಿಯಂತ್ರಿತವಾದದ್ದೂ ಆಯಿತು. ಅಲ್ಲದೆ, ಅದು ಇಂದ್ರಿಯ ಪ್ರತ್ಯಕ್ಷವನ್ನು, ವಾಸ್ತವ ವಿಚಾರವನ್ನು, ದಿವ್ಯ ಅಥವಾ ಯೌಗಿಕ ಅರ್ಥ ಸೂಚನೆಯನ್ನು ಗಮನಿಸದೆ ಅವಲಂಬಿಸಲಾರಂಭಿಸಿತು.

ಅದು ಮಾನವನ ಕಲ್ಪಕ ಪ್ರಜ್ಞೆಯನ್ನು ರಸಪ್ರಜ್ಞೆಯ ಲೀಲೆಯೆಂದಲ್ಲದೆ, ಸತ್ಯಸಾಕ್ಷಾತ್ಕಾರದ ಬಾಗಿಲುಗಳೆಂದು ರಸಪ್ರಜ್ಞೆಯ ಲೀಲೆಯೆಂದಲ್ಲದೆ, ಸತ್ಯಸಾಕ್ಷಾತ್ಕಾರದ ಬಾಗಿಲುಗಳೆಂದು ತಿಳಿಯಲಿಲ್ಲ; ಕಲ್ಪನೆಯ ಒಳಗಣ್ಣು ಒಮ್ಮೆ ಸೂಚನೆ ಕೊಟ್ಟರೆ ಅವನ್ನೂ ತರ್ಕಬದ್ಧವಿಚಾರಕ್ಕೆ ಅಥವಾ ಪ್ರತ್ಯಕ್ಷಾನುಭವಕ್ಕೆ ಸರಿಹೊಂದಿದಾಗ ಮಾತ್ರ ನಂಬಲಾರಂಭಿಸಿತು. ಇದರಿಂದ ಬುದ್ಧಿ–ಸಂಪರ್ಕಹೊಂದಿದ ಪ್ರಾತಿಭಸೂಚನೆಗಳಷ್ಟೇ ಅದಕ್ಕೆ ತಿಳಿಯುವಂತಾಯಿತು; ಮಿಕ್ಕವನ್ನು ಅದು ಒಪ್ಪದಾಯಿತು. ಆದ್ದರಿಂದ ನಮ್ಮ ಮನಸ್ಸಿಗೆ ವೇದವು ಅರ್ಥವಾಗದ್ದು, ಒಂದುವೇಳೆ ಅರ್ಥವಾದರೂ ಆ ಅರ್ಥ ಕೇವಲ ಅದರ ಹೊರಮೈಗೆ ಸಂಬಂಧಿಸಿದ್ದು ಅದೂ ಕೂಡಾ ಭಾಷೆ ಶೈಲಿಗಳ ವಿಲಕ್ಷಣತೆಯಿಂದ ಸರಿಯಾಗಿ ತಿಳಿಯುವುದಿಲ್ಲವೆಂದು ಎನಿಸಿದರೆ ಆಶ್ಚರ್ಯವಿಲ್ಲ. ಹೀಗೆ ಇಂದಿನವರು ಮಾಡಿದ ವೇದವ್ಯಾಖ್ಯೆಗಳು ಅಸಂಪೂರ್ಣ. ಇವು ಅಂದಿನ ಮಾನವತೆಯ ಹೊಸ ಹರೆಯದ ಹೊಂಬಗೆಯ ರಚನೆಯನ್ನು ಒಂದು ತೇಪೆ, ಹರಕು–ಮುರಕು ಬರಹ, ಅಸಂಬದ್ಧ ಪ್ರಲಾಪ, ಪ್ರಾಕೃತ ಮಾನವನ ಕಲ್ಪನೆಯ ವಿಕಟತೆ ತೋರಿಸುತ್ತವೆ. ಇದರಿಂದ ಓದುಗ ಗೊಂದಲಗೆಟ್ಟು ಹೋಗುತ್ತಾನೆ. ಇವುಗಳಿಲ್ಲದೆ ಹೋಗಿದ್ದರೆ ಸ್ವಯಂ ಸ್ಪಷ್ಟವಾಗಿ ತೋರಬಹುದಾಗಿದ್ದ ವೇದವು ಇವುಗಳ ದೆಸೆಯಿಂದ ಸಪ್ಪೆಯಾಗಿಯೂ ಅಸಂಸ್ಕೃತ ಪ್ರಾಣಚೇತನೆಯ ಒರಟು ಐಹಿಕ ಅಪೇಕ್ಷೆಗಳನ್ನು ಬಿಂಬಿಸಿ, ಅವನ್ನು ಪೋಷಿಸುವ ನಿಸರ್ಗಾರಾಧನೆಯ ಧರ್ಮದ (Naturalistic Religion) ಒಂದು ಸಾಮಾನ್ಯ ಗ್ರಂಥ ಎಂಬಂತೆ ತೋರುವಂತಾಗಿದೆ. ಅನಂತರದ ಭಾರತೀಯ ಪುರೋಹಿತ–ಪಂಡಿತ ವರ್ಗಗಳ ಕರ್ಮಠವಾದ ಶುಷ್ಕಬುದ್ಧಿಗೆ ವೇದವು ಕೇವಲ ಒಂದು ಪುರಾಣ ಗ್ರಂಥ ಮತ್ತು ಯಜ್ಞ ಯಾಗಾದಿಗಳನ್ನು ಹೇಳುವ ಕಂತೆ ಎಂದು ತೋರಿತು. ತಮ್ಮ ವಿಚಾರಬುದ್ಧಿಗೆ ಗ್ರಾಹ್ಯ ಎನಿಸಿದ ಐತಿಹಾಸಿಕ ಸಂಗತಿ, ಪೌರಾಣಿಕತೆ, ಪ್ರಾಕೃತ ಜನತೆಯಲ್ಲಿ ರೂಢಿಯಲ್ಲಿದ್ದ ಧಾರ್ಮಿಕ ಕಲ್ಪನೆಗಳು– ಇವಷ್ಟನ್ನೇ ಹುಡುಕ ಹೊರಟ ಯುರೋಪಿಯನ್ ವಿದ್ವಾಂಸರು ಕೇವಲ ಬಾಹ್ಯಾರ್ಥಕ್ಕೆ ಪ್ರಾಧಾನ್ಯವನ್ನು ಕೊಟ್ಟು ಅದರ ಅಂತರಾರ್ಥವನ್ನೂ ಕಾವ್ಯ ಗುಣವನ್ನೂ ಕಡೆಗಣಿಸಿ ಅದಕ್ಕೆ ಮತ್ತಷ್ಟು ಅನ್ಯಾಯವನ್ನು ಮಾಡಿದ್ದಾರೆ.

ಮೇಲೆ ಹೇಳಿದ ವಿಕಟವ್ಯಾಖ್ಯೆಯು ವೈದಿಕ ಋಷಿಗಳಿಗೆಂದೂ ಸಮ್ಮತವಲ್ಲ; ಅವರಾದನಂತರ ಬಂದು ಈ ಅರ್ಥಗರ್ಭಿತವೂ ಪ್ರಕಾಶಮಯವೂ ಆದ ಸ್ಫೂರ್ತಿಯ ವಾಣಿಗಳನ್ನು ಆಧರಿಸಿ ಅನುಪಮ ಆಧ್ಯಾತ್ಮಿಕ ಅನುಭೂತಿ ಸಾಕ್ಷಾತ್ಕಾರಗಳ ಮೇಲೆ ಮಾತು ಮತ್ತು ವಿಚಾರದ ಅದ್ಭುತ ಕಟ್ಟಡಗಳನ್ನು ಕಟ್ಟಿದ ಮಹಾದಾರ್ಶಕನಿಕರಿಗೂ ಯೋಗಿಗಳಿಗೂ ಒಪ್ಪಿಗೆಯಾದದ್ದಲ್ಲ. ಪ್ರಾಚೀನ ಕಾಲದ ಈ ಋಷಿಗಳ ದೃಷ್ಟಿಯಲ್ಲಿ ವೇದವು ಸತ್ಯವನ್ನು ಕಾಣಿಸಿಕೊಡುವ ಶಬ್ದ, ಶಬ್ದಪ್ರಮಾಣ, ಶ್ರುತಿ. ಅದು ಸತ್ಯವನ್ನು ಹೇಳುವ ವಾಣಿ. ಜೀವನದ ಯೋಗಾರ್ಥವನ್ನು ಪ್ರತಿಮೆ ರೂಪಕಗಳ ಮೂಲಕ ಹೇಳುತ್ತದೆ. ಅದೊಂದು ದಿವ್ಯ ಸಾಕ್ಷಾತ್ಕಾರ; ವಾಕ್ಕಿನ ಅರ್ಥಶಕ್ತಿಗಳನ್ನು ಅನಾವರಣ

ಮಾಡುವಂತಹುದು; ಅದು ಅತೀಂದ್ರಿಯ ಶೋಧವನ್ನೂ ರಚನಾತ್ಮಕ ಶಕ್ತಿಯನ್ನೂ ಹೊರಗೆಡಹುವ ಸಾಧನ. ಅದೇ ಮಂತ್ರ. ಅದು ದಿವ್ಯದೃಷ್ಟಿಯ ಲಯಬದ್ಧ ಸ್ಫೂರ್ತವಾಣಿ; ಅದೆಂದೂ ಶಬ್ದಗತವಾದ ತರ್ಕಪ್ರಜ್ಞೆಯನ್ನಾಗಲೀ ರಸಪ್ರಜ್ಞೆಯನ್ನಾಗಲೀ ಅವಲಂಬಿಸಿದ್ದಲ್ಲ. ಅದರಲ್ಲಿ ದೇವತಾ ಸ್ವರೂಪ ಮತ್ತು ಪೌರಾಣಿಕ ಕತೆಗಳನ್ನು ಬೇಕಾದಹಾಗೆ ಬೆಳೆಸಲಾಗಿದೆ. ಆದರೆ ಅವುಗಳ ಬಳಕೆ ಕಲ್ಪಕ ಬುದ್ಧಿಗೆ ರಸದೂಟ ಉಣಿಸಲೆಂದಲ್ಲ–ಮತ್ತಾವ ಬಗೆಯಿಂದಲೂ ಹೇಳಲು ಸಾಧ್ಯವಾಗದ್ದರಿಂದ ದ್ರಷ್ಟಾರರಿಗೆ ಅತ್ಯಂತ ನಿಜವಸ್ತುವಾಗಿ ಕಂಡ ಅನುಭವವನ್ನು ಸಂಕೇತ ಹಾಗೂ ಸಜೀವ ಪಡಿಯಚ್ಚುಗಳಲ್ಲಿ ಅವರು ಪಡಿಮೂಡಿಸಿದ್ದಾರೆ. ಈ ಕಾರ್ಯದಲ್ಲಿ ಋಷಿಗಳ ಕಲ್ಪಕ ಪ್ರಜ್ಞೆಯು ಇಂದ್ರಿಯ ಮತ್ತು ಮನಗಳ ಹಾಗೂ ಜೀವನದ ಭೌತಿಕ ಅನುಭವದ ಬಾಹ್ಯಸೂಚನೆಗಳನ್ನು ಬದಿಗಿಟ್ಟು ಲೋಕೋತ್ತರ ಸತ್ಯಗಳನ್ನು ಆರಾಧಿಸಿತು.

ಇದೇ ಅವರು ಮಾಡಿಕೊಂಡ ಪವಿತ್ರ ಕವಿಯ ಕಲ್ಪನೆ. ಅಂದರೆ ಕವಿಯ ಮನಸ್ಸಿನಲ್ಲಿ ಉದಾತ್ತತಮವಾದ ಒಂದು ಬೆಳಕು ಮೂಡುತ್ತದೆ. ಅದರ ಪದ–ಅರ್ಥರೂಪಗಳು ಅವನಿಗೆ ಕಾಣುವುವು. ಆ ಮೂಲಕ ಅವನು ಸತ್ಯವನ್ನು, ಪರಮಾರ್ಥವನ್ನು ಕೇಳಿ ತಿಳಿಯುತ್ತಾನೆ. ಆದ್ದರಿಂದಲೇ "ಕವಯಃ ಸತ್ಯ ಶ್ರುತಯಃ" ಎಂದು ಹೇಳುತ್ತಾರೆ. ವೈದಿಕ ಕಾವ್ಯದ ಕವಿಗಳೆಂದೂ ಆಧುನಿಕ ಪಂಡಿತರು ಆರೋಪಿಸುವ ಅರ್ಥದಲ್ಲಿ ತಮ್ಮ ಕರ್ತವ್ಯವನ್ನು ತಿಳಿದುಕೊಂಡಿದ್ದಿಲ್ಲ. ಅವರು ತಮ್ಮನ್ನು ಒಂದು ಬಲಿಷ್ಠ ಅಸಂಸ್ಕೃತ ಕುಲದವರಿಗೆ ಮದ್ದು ಕೊಡುವ ಮೇಲುದರ್ಜೆಯ ವೈದ್ಯರೆಂದಾಗಲಿ, ಮಂತ್ರಗಳನ್ನೂ ಸ್ತೋತ್ರಗಳನ್ನೂ ಅವರಿಗೆ ಮಾಡಿಕೊಡುವವರೆಂದಾಗಲಿ ತಿಳಿದುಕೊಂಡಿದ್ದಿಲ್ಲ; ಅವರು ತಮ್ಮನ್ನು ದ್ರಷ್ಟಾರರೆಂದೂ ('ಋಷಿ') ಚಿಂತಕರೆಂದೂ ('ಧೀರ') ಭಾವಿಸಿದ್ದರು. ತಮ್ಮ ಹತ್ತಿರ ಉನ್ನತವೂ ಅಪರೋಕ್ಷವೂ ಪ್ರಚ್ಛನ್ನವೂ ಆದ ಸತ್ಯವಿದೆ ಎಂದು ನಂಬಿದ್ದರಲ್ಲದೆ, ದಿವ್ಯಜ್ಞಾನಕ್ಕೆ ಗ್ರಾಹ್ಯವಾದ ಭಾಷೆ ತಮ್ಮಲ್ಲಿದೆ ಎಂದೂ ಆ ಗಾಯಕರು ಹೇಳುತ್ತಿದ್ದರು. ಅವರ ಮಾತಿನಲ್ಲಿ ಈ ಅಂಶ ಸ್ಪಷ್ಟವಾಗಿ ಬಂದಿದೆ. ಅಂದರೆ ಋಷಿಗೆ ಮಾತ್ರ ತಮ್ಮ ಪೂರ್ಣ ಅರ್ಥವನ್ನು ಪ್ರಕಟಪಡಿಸುವ ರಹಸ್ಯಪದಗಳು ಗೊತ್ತು ಎಂದು ಅವರು ತಮ್ಮ ಸೂಕ್ತಗಳ ಬಗ್ಗೆ ಹೇಳಿಕೊಂಡಿದ್ದಾರೆ– 'ಕವಯೇ ನಿವಚನಾನಿ ನಿನ್ಯಾವಚಾಂಸಿ.' ಅವರ ನಂತರ ಬಂದವರಿಗೆ ವೇದವೆಂಬುದೊಂದು ಜ್ಞಾನದ ಹೆಬ್ಬೊತ್ತಗೆ, ಅತ್ಯುನ್ನತ ಅರಿವಿನ ಭಂಡಾರ, ಶ್ರುತಿ ಎನಿಸಿತು. ಅದು ದಿವ್ಯಾದಿವ್ಯ ವಿಚಾರಗಳ ಸ್ಫೂರ್ತಿಯಿಂದ ತಮ್ಮ ಒಳ ಅನುಭವದಲ್ಲಿ ಕಂಡ ಶಾಶ್ವತ ಹಾಗೂ ಅಪೌರುಷೇಯ ಸತ್ಯವನ್ನು ಕಂಡ ಹಾಗೇ ಬಿಂಬಿಸುವ ಮಹಾವಾಕ್ಯೆಂದು ಆ ಮುಂದಿನ ತಲೆಮಾರಿನ ಋಷಿಗಳು ತಿಳಿದರು. ಪ್ರಾಚೀನ ಬ್ರಾಹ್ಮಣಕಾರರಿಗೆ ಗೊತ್ತಿದ್ದಂತೆ ಸ್ತೋತ್ರ ಅಥವಾ ಸೂಕ್ತಗಳನ್ನು ಬರೆದ ಆವರಣದಲ್ಲಿಯ ಯಜ್ಞ ಯಾಗಗಳ ಸೂಕ್ಷ್ಮ ವಿವರಗಳನ್ನು ಕೊಟ್ಟಿರುವುದು ಸಾಂಕೇತಿಕ ಹಾಗೂ ಮನೋವೈಜ್ಞಾನಿಕ ಅರ್ಥದ ಶಕ್ತಿಯನ್ನು ಗರ್ಭೀಕರಿಸಲೆಂದೇ; ಪ್ರತಿಯೊಂದು ಪವಿತ್ರ

ಸೂಕ್ತವೂ ದಿವ್ಯಾರ್ಥಗರ್ಭಿತ ಬೀಜಮಂತ್ರ, ಗಭೀರ ಹಾಗೂ ಮಾರ್ಮಿಕ ಸತ್ಯದ ವ್ಯಂಜಕ, ತಮ್ಮ ಉದಾತ್ತ ಉಕ್ತಿಗಳಿಗೆ ಕೊಡಬಹುದಾದ ಅತ್ಯುನ್ನತ ಆಧಾರ– "ತದೇಷಾ ಋಚಾಭ್ಯುಕ್ತಾ" ಎಂದು ಅವರು ತಿಳಿದಿದ್ದರು. ವೇದಕಾಲೀನ ಋಷಿಗಳಾದ ಮೇಲೆ ಬಂದ ಬ್ರಾಹ್ಮಣಕಾರರು ಹೇಳಿದುದು ತಪ್ಪು; ಕೊನೆಯ ಭಾಗದ ಕೆಲವೇ ಸೂಕ್ತಗಳನ್ನು ಬಿಟ್ಟರೆ ಅವರು ಮಿಕ್ಕದ್ದಕ್ಕೆಲ್ಲ ಸಲ್ಲದ ಅರ್ಥವನ್ನು ಹಚ್ಚಿದರೆಂದೂ ಹಾಗೆ ಮಾಡಲು ಅವರಿಗೂ ಅವಕ್ಕೂ ಸುದೀರ್ಘ ಕಾಲದ ಅಂತರವಿರುವುದೂ ಅವರಿದ್ದುದು ಬೌದ್ಧಿಕ ಚೇತನೆಯ ಯುಗವಾಗಿದ್ದುದೂ ಕಾರಣವಾಯಿತೆಂದೂ ಹೇಳಿ, ಪಾಶ್ಚಾತ್ಯ ಪಂಡಿತರು ತಮಗೇ ಹೆಚ್ಚು ಗೊತ್ತಿದೆಯೆಂದು ಭಾವಿಸುತ್ತಾರೆ. ಆದರೆ ವೇದದ ಮೂಲ ಕವಿಗಳಿಗೆ ಕಾಲದಲ್ಲಿ ಅತಿ ಹತ್ತಿರವಾಗಿದ್ದ ಬ್ರಾಹ್ಮಣಕಾರರಿಗೆ ಇಬ್ಬಗೆಯಿಂದಲೂ ವಿಷಯದ ಸಾರಭೂತ ಸತ್ಯವನ್ನು ತಿಳಿದುಕೊಂಬ ಅವಕಾಶ ಹೆಚ್ಚಿತ್ತೆಂದು ಯಾವ ಸಾಮಾನ್ಯನಿಗೂ ಎನ್ನಿಸದಿರದು. ವೇದವು ತಾನು ಹೇಳಿಕೊಂಬುದನ್ನು ಹೇಳಿಕೊಂಡಂತೆಯೇ ಇದೆ. ಅಂದರೆ ಅದು ಹುಡುಕುವುದು ಅಪರೋಕ್ಷಾನು ಭೂತಿಗಾಗಿ ಎಂದು ಸಾಮಾನ್ಯ ಬುದ್ಧಿಗೆ ಹೊಳೆಯುವುದು ಸರ್ವಥಾ ಸಂಭವನೀಯವೆಂದು ಹೇಳಬಹುದು. ಭಾರತೀಯ ಮನಸ್ಸಿನ ಅವ್ಯಾಹತ ಪ್ರಯತ್ನದ ಮೊದಲ ರೂಪ ಇದೇ. ವೈದಿಕ ಋಷಿಗಳು ಎಂದಿನಿಂದಲೂ ಅದಕ್ಕೆ ಪ್ರಾಮಾಣಿಕವಾಗಿ ನುಡಿಗೊಟ್ಟಿದ್ದಾರೆ. ಅವರ ಪ್ರಕಾರ ಭೌತಿಕ ಪ್ರಪಂಚದ ತೋರಿಕೆಗಳನ್ನು ಮೀರಿದ ಸತ್ಯವೊಂದಿದೆ, ಅದನ್ನು ತಮ್ಮ ಒಳ ಅನುಭವಕ್ಕೆ ಗೋಚರವಾಗುವ ದೇವತಾಶಕ್ತಿಗಳ ಮೂಲಕ ಮುಟ್ಟಬಹುದು. ಆ ಒಂದರ ಸತ್ತೆಯನ್ನೇ ಋಷಿಗಳು ಬೇರೆ ಬೇರೆ ವಿಧವಾಗಿ ವರ್ಣಿಸಿದ್ದಾರೆ–"ಏಕಂ ಸದ್‌ವಿಪ್ರಾ ಬಹುಧಾ ವದಂತಿ" ಎಂದು ಬ್ರಾಹ್ಮಣಕಾರರು ಬಗೆದಿದ್ದರು.

ಎಲ್ಲಾದರೂ ಎತ್ತಿಕೊಂಡು ನೇರವಾಗಿ ಅದರವೇ ಆದ ಪದಸಂಹತಿ ಮತ್ತು ಪ್ರತಿಮೆಗಳಿಗನುಗುಣವಾಗಿ ವ್ಯಾಖ್ಯಾನಿಸಿದರೆ ವೇದದ ನಿಜ ಸ್ವರೂಪವು ಪ್ರತ್ಯಕ್ಷವಾಗುತ್ತದೆ. ವೇದದಲ್ಲಿ ಉದಾತ್ತ ಕಲ್ಪನೆಗಳಿವೆಯೆಂದು ನಂಬಿದವರಿಗಿಂತ ತಾನು ಬುದ್ಧಿವಂತನೆಂದು ತಿಳಿದ ಒಬ್ಬ ಸುಪ್ರಸಿದ್ಧ ಜರ್ಮನ್ ಪಂಡಿತನು ವೇದದಲ್ಲಿ ತೊದಲು ಮಾತಿದೆ, ಹಾಸ್ಯಾಸ್ಪದ ಅಭಿಪ್ರಾಯವಿದೆ, ಕರಾಳ ಕಲ್ಪನೆಗಳಿವೆ ಅದು ಬೇಸರ ಬರುವಂತಹುದು, ಕೀಳು, ಅತ್ಯಂತ ಸಾಮಾನ್ಯ ದರ್ಜೆಯದು; ಅಲ್ಲದೆ, ಅದು ಮನುಷ್ಯ ಸ್ವಭಾವದ ಕೀಳು ಮಟ್ಟದ ಸ್ವಾರ್ಥ ಮತ್ತು ವಿಷಯಲಂಪಟತೆಗಳನ್ನು ಪಡಿಮೂಡಿಸುತ್ತದೆ ಎಲ್ಲೋ ಕೆಲವೆಡೆ ಮಾತ್ರ ಆತ್ಮದ ಅಂತರಾಳದಿಂದ ಬಂದ ಕೆಲ ಸದ್ಭಾವಗಳನ್ನು ಹೇಳುತ್ತದೆ ಎಂದು ಸಾರಿದ್ದಾನೆ. ಋಷಿಗಳ ಮಾನಸ ಕಲ್ಪನೆಗಳಲ್ಲಿ ನಮ್ಮದನ್ನೂ ಸೇರಿಸಿದರೆ ವೇದಾರ್ಥವನ್ನು ಮೇಲೆ ಹೇಳಿದ ವಿಕಟಸ್ವರೂಪಕ್ಕೆ ಬದಲಿಸಬಹುದು. ಹಾಗೆ ಮಾಡಹೋಗದೆ ವೇದವನ್ನು ಇರುವಂತೆಯೇ ನೋಡಿದರೆ ಅದರ ಶಬ್ದಾರ್ಥಗಳಲ್ಲಿ ನಮಗೆ ಓಜಸ್ವಿಯೂ ಉದಾತ್ತವೂ ಆದ ಪವಿತ್ರಕಾವ್ಯವಿರುವುದು ಕಂಡುಬರುತ್ತದೆ. ಇಷ್ಟಲ್ಲದೆ ಸೂಕ್ಷ್ಮವಾಗಿ ಅವಲೋಕಿಸಿದರೆ ಅದರಲ್ಲಿ ಆಳವಾದ ಮಾನಸಪ್ರತ್ಯಕ್ಷದ

ಅರ್ಥವೂ ಇರುವುದು ಗೋಚರವಾಗುತ್ತದೆ. ಆ ಅರ್ಥವೂ ದರ್ಶನದ ಭಾವೋದ್ರೇಕವುಳ್ಳ ಆತ್ಮದ ವಾಣಿಯಿಂದ ಹೊರಟದ್ದು. ವೇದ ವಾಣಿಯನ್ನೇ ಕೇಳಿರಿ:

ಋ. ವೇ. ಮ. ೫–ಸೂ.೧೯

**ಅಭ್ಯವಸ್ಥಾಃ ಪ್ರಜಾಯಂತೇ ಪ್ರವವ್ರೇರ್ವವ್ರಿಶ್ಚಿಕೇತನ**
**ಉಪಸ್ಥೇ ಮಾತುರ್ವಿಚಷ್ಟೇ ॥೧॥**

ಅವಸ್ಥೆಗಳ ಮೇಲೆ ಅವಸ್ಥೆಗಳುಂಟಾಗುವುವು, ಆವರಣದ ಮೇಲೆ ಆವರಣ ತಿಳಿವಳಿಕೆಗೆ ಬರುವುದು: ತಾಯ ತೊಡೆಯಲ್ಲಿ ಅವನು ಪೂರ್ಣ ದರ್ಶನ ಪಡೆಯುತ್ತಾನೆ.

**ಜುಹುರೇ ವಿಚಿತಯಂತೋ ನಿಮಿಷಂ ನೃಮ್ಣಂಪಾಂತಿ**
**ಆದೃಹ್ಯಾಂ ಪುರಂ ವಿವಿಶುಃ ॥೨॥**

ವಿಶಾಲಜ್ಞಾನಸಂಪನ್ನರಾಗಿ ಅವರು ಅವನನ್ನು ಕರೆದರು. ಬಲವನ್ನವರು ನಿದ್ದೆ ಬಿಟ್ಟು ಕಾಯುತ್ತಾರೆ. ಬಲಿಷ್ಠ ನಗರದೊಳಗೆ ಅವರು ಹೊಕ್ಕರು.

**ಆಶ್ವೈತ್ರೇಯಸ್ಯ ಜಂತವೋ ದ್ಯುಮದ್ವರ್ಧಂತ ಕೃಷ್ಟಯಃ**
**ನಿಷ್ಕಗ್ರೀವೋ ಬೃಹದುಕ್ಥ ಏನಾಮಧ್ವಾನವಾಜಯಃ ॥೩॥**

ಶ್ವೇತಮಾತೆಯ ಮಗನ ದಿವ್ಯ (ತೇಜಸ್ಸನ್ನು) ಭೂಮಿಯಲ್ಲಿ ಹುಟ್ಟಿದ ಜನರು ಸಂವರ್ಧಿಸುತ್ತಾರೆ. ಅವನ ಕೊರಳಲ್ಲಿ ಚಿನ್ನವಿದೆ, ಅವನು ಮಹಾಮಾತಿನವ. ಈ ಮಧುಮದ್ಯದ ಬಲದಿಂದಲೋ ಎಂಬಂತೆ ರಾಶಿಗಟ್ಟಲೆ ದ್ರವ್ಯವನ್ನು ಹುಡುಕ ಹೊರಟಿದ್ದಾನೆ.

**ಪ್ರಿಯಂದುಗ್ಧಂ ನ ಕಾಮ್ಯಮಜಾಮಿ ಜಾಮ್ಯೋಃ ಸಚಾ**
**ಘರ್ಮೋನ ವಾಜಜಠರೋದಬ್ಧಃ ಶಶ್ವತೋದಭಃ ॥೪॥**

ಅವನು ಸುಖಾವಹವೂ ಸ್ಪೃಹಣೀಯವೂ ಆದ ಹಾಲಿನಂತಿದ್ದಾನೆ. ಅವನಿಗಾರೂ ಸರಿಜೋಡಿಯಿಲ್ಲ; ಅವನಿಗಿಬ್ಬರು ಜೊತೆಗಾರರಿದ್ದಾರೆ. ಕಾವಿನ ರೂಪದಲ್ಲಿ ಅವನೊಂದು ಬಹು ದ್ರವ್ಯ ತುಂಬಿದ ಹೊಟ್ಟೆಯಾಗಿದ್ದಾನೆ. ಅವನು ಅಜೇಯನು, ಬಹು ಜನರನ್ನು ಸೋಲಿಸುವವನು.

**ಕ್ರೀಳನ್ನೋ ರಶ್ಮ ಆಭುವಃ ಸಂಭಸ್ಮನಾ ವಾಯುನಾ ವೇವಿದಾನಃ**
**ತಾ ಅಸ್ಯ ಸಂಧೃಷಜೋ ನತಿಗ್ಮಾಃ ಸುಸಂಶಿತಾ**
**ವಕ್ಷ್ಯೋವಕ್ಷಣೇಸ್ಥಾಃ ॥೫॥**

ಎಲೈ ಕಿರಣವೇ, ಆಡು; ಪ್ರಕಟವಾಗು...

೨೦ನೆಯ ಸೂಕ್ತ:

**ಯಮಗ್ನೇ ವಾಜಸಾತಮತ್ವಂ ಚಿನ್ಮನ್ಯಸೇ ರಯಿಂ**
**ತನ್ನೋ ಗೀರ್ಭಿಃ ಶ್ರವಾಯ್ಯಂ ದೇವತ್ರಾಪನಯಾಯುಜಂ ॥೧॥**

**ಯೇ ಅಗ್ನೇ ನೇರಯಂತಿ ತೇ ವೃದ್ಧಾ ಉಗ್ರಸ್ಯ ಶವಸಃ**
**ಅಪದ್ವೇಷೋ ಅಪಹ್ವರೋಽನ್ಯ ವ್ರತಸ್ಯ ಸಶ್ಚಿರೇ ॥೨॥**

ಬಲಿಷ್ಠ (ದೇವನಾದ) ಆ ನಿನ್ನ ಅಚಲ (ಜ್ವಾಲೆಗಳು) ಸಂವರ್ಧಿಸಲ್ಪಟ್ಟಿವೆ; ಅವು ಪ್ರಭಾವಿಯಾಗಿವೆ. ವಿಧರ್ಮೀಯನ ವೈರವನ್ನೂ ವಕ್ರಸ್ವಭಾವವನ್ನೂ ಅವು ಕಳೆದೊಗೆಯುವವು.

**ಹೋತಾರಂ ತ್ವಾ ವೃಣೀಮಹೇಗ್ನೇ ದಕ್ಷಸ್ಯ ಸಾಧನಂ**
**ಯಜ್ಞೇಷು ಪೂರ್ವ್ಯಂಗಿರಾ ಪ್ರಯಸ್ವಂತೋ ಹವಾಮಹೇ ॥೩॥**

ಎಲೈ ಅಗ್ನಿಯೇ, ನಿನ್ನನ್ನು ನಾವು ಪುರೋಹಿತನನ್ನಾಗಿಯೂ ನಮ್ಮ ಶಕ್ತಿಯನ್ನು ಫಲಪ್ರದಗೊಳಿಸುವ ಸಾಧನವನ್ನಾಗಿಯೂ ಆಯುವೆವು; ಮತ್ತು ಯಜ್ಞಗಳಲ್ಲಿ ನಿನಗೆ ಪ್ರಿಯವಾದ ಆಹಾರವನ್ನು ತಂದು ಶಬ್ದವೆತ್ತಿ ನಿನ್ನನ್ನು ಕರೆಯುವೆವು.

**ಇತ್ಥಾ ಯಥಾತ ಊತಯೇ ಸಹಸಾವನ್ ದಿವೇ ದಿವೇ**
**ರಾಯ ಋತಾಯ ಸುಕ್ರತೋ ಗೋಭಿಃ ಷ್ಯಾಮ**
**ಸದಮಾದೋ ವೀರೈಃ ಸ್ಯಾಮ ಸಧಮಾದಃ ॥೪॥**

...ಕೊನೆಯದಾಗಿ ಮುಂಬರುವ ಮೂರನೆಯ ಸೂಕ್ತದ ಬಹುಭಾಗವನ್ನೆತ್ತಿಕೊಳ್ಳೋಣ. ಅದು ಯಜ್ಞದ ಸಾಮಾನ್ಯ ಸಂಕೇತಗಳಲ್ಲಿ ಗರ್ಭೀಕೃತವಾಗಿದೆ:

೨೧ನೆಯ ಸೂಕ್ತ:

**ಮನುಷ್ವತ್‌ತ್ವಾನಿ ಧೀಮಹಿ ಮನುಷ್ವತ್ ಸಂ ಇಧೀಮಹಿ**
**ಆಗ್ನೇ ಮನುಷ್ವದಂಗಿರೋ ದೇವಾನ್ ದೇವಯತೇ ಯಜ ॥೧॥**

ಮನುವಿನಂತೆ ನಾವು ನಿನ್ನನ್ನು ಸ್ವಸ್ಥಾನದಲ್ಲಿರಿಸುವೆವು, ಮನುವಿನಂತೆ ನಾವು ನಿನ್ನನ್ನು ಹೊತ್ತಿಸುವೆವು; ಎಲೈ ಅಂಗಿರಸ್ಸೇ, ದೇವತೆಗಳನ್ನು ಬಯಸುವವನಿಗಾಗಿ ದೇವತೆಗಳಿಗೆಂದು ನಾವು ಮನುವಿನಂತೆಯೇ ಯಜ್ಞ ಮಾಡುತ್ತೇವೆ.

**ತ್ವಂ ಹಿ ಮಾನುಷೇ ಜನೇಗ್ನೇ ಸುಪ್ರೀತ ಇಧ್ಯಸೇ**
**ಸೃಚಸ್ತ್ವಾ ಯಂತ್ಯಾನುಷಕ್ ಸುಜಾತ ಸರ್ಪಿರಾ ಸುತೇ ॥೨॥**

ಎಲೈ ಅಗ್ನಿಯೇ, ಸುಪ್ರಸನ್ನನಾದ ನೀನು ಮಾನವ ಜಂತುವಿನಲ್ಲಿ ಹೊತ್ತಿಸಲ್ಪಟ್ಟಿರುವೆ. ಒಂದೇ ಸಮನೆ ಸೌಟುಗಳು ನಿನ್ನ ಕಡೆ ಹೋಗುವುವು.

**ತ್ವಾಂ ವಿಶ್ವೇ ಸಜೋಷಸೋ ದೇವಾಸೋ ದೂತಮಕ್ರತ**
**ಸಪರ್ಯಂತಸ್ತಾಕವೇ ಯಜ್ಞೇಷು ದೇವಮೀಳತೇ ॥೩॥**

ಎಲ್ಲ ದೇವತೆಗಳೂ (ನಿನ್ನಲ್ಲಿ) ಏಕ ಪ್ರಕಾರದ ಸಂತೋಷ ತಾಳಿ ನಿನ್ನನ್ನು ತಮ್ಮ ದೂತನನ್ನಾಗಿ ಮಾಡಿಕೊಂಡರು. ಎಲೈ ದ್ರಷ್ಟಾರನೇ, ನಿನ್ನನ್ನು ಯಜ್ಞಗಳಲ್ಲಿ ಸೇವಿಸಿ (ಜನರು) ದೇವರ ಪೂಜೆ ಮಾಡುತ್ತಾರೆ.

**ದೇವಂ ವೋ ದೇವಯಜ್ಯಯಾಗ್ನಿಮಿಳೀತ ಮರ್ತ್ಯಃ**
**ಸಮಿದ್ಧಃ ಶುಕ್ರ ದೀದಿ ಹ್ಯತಸ್ಯ ಯೋನಿಮಾಸದಃ**
**ಸಸಸ್ಯ ಯೋನಿಮಾಸದಃ ॥೪॥**

ದೇವತೆಗಳಿಗೆ ಯಜ್ಞ ಮಾಡುತ್ತ ಮರ್ತ್ಯನು ದಿವ್ಯಾಗ್ನಿಯನ್ನು ಭಜಿಸಲಿ. ಎಲೈ ಉಜ್ವಲನೇ, ಹೊತ್ತಿಸಿದೊಡನೆಯೇ ಉರಿದೇಳು. ಸತ್ಯಾಸನದ ಮೇಲೆ ಕುಳಿತುಕೊ, ಶಾಂತ್ಯಾಸನದ ಮೇಲೆ ಕುಳಿತುಕೊ.

ವೇದದ ದೇವತಾಕಲ್ಪಕ ಪ್ರತಿಮೆಗಳಿಗೆ ನಾವು ಯಾವ ರೀತಿಯಲ್ಲಿ ಅರ್ಥವನ್ನು ಮಾಡಹೋದರೂ ಅದು ಅನುಭಾವಿಕ ಹಾಗೂ ಸಾಂಕೇತಿಕ ಕಾವ್ಯವೆಂದು ಕಂಡುಬರದಿರದು. ಅದೇ ವೇದದ ನಿಜಸ್ವರೂಪ.

ಮಾದರಿಗಾಗಿ ತೆಗೆದುಕೊಂಡ ಈ ಕೆಲವು ಮಂತ್ರಗಳಲ್ಲಿ ಕಂಡುಬರುವ ವೈದಿಕ ಕಾವ್ಯಸ್ವರೂಪದ ಬಗ್ಗೆ ಆಶ್ಚರ್ಯ ಅಥವಾ ಹೆದರಿಕೆ ಪಡಬೇಕಾಗಿಲ್ಲ. ಏಕೆಂದರೆ ಇದೇ ರೀತಿಯಲ್ಲಿ ಏಷ್ಯದ ವಾಙ್ಮಯವೂ ಸಾಗಿದೆ. ವೈದಿಕ ವಾಙ್ಮಯದ ಶ್ರುತಿಶ್ರದ್ಧೆಯೊಂದನ್ನು ಬಿಟ್ಟರೆ ಉಳಿದ ವಿಲಕ್ಷಣವಾದ ದೇವತಾಸ್ವರೂಪ ಕಲ್ಪನೆಯ ಪದ್ಧತಿ, ವಿಚಾರ ಮತ್ತು ಸಾಂಕೇತಿಕ ಅನುಭವಗಳ ಜಟಿಲತೆಗಳು ಏಷ್ಯದ ಇತರ ದೇಶದ ವಾಙ್ಮಯಗಳೊಡನೆ ಸರಿಸಮಾನವಾಗಿವೆ. ಇವನ್ನು ಆಧ್ಯಾತ್ಮಿಕ ಅನುಭವದ ಕಾವ್ಯಮಯ ಅಭಿವ್ಯಕ್ತಿಗೆ ಸಾಂಕೇತಿಕ ಅಥವಾ ಅಲಂಕಾರಿಕ ರೂಪಕಲ್ಪನೆಯ ಪ್ರಾರಂಭವೆಂದೂ ಹೇಳಬಹುದು. ಈ ಶೈಲಿಯು ಅನಂತರ ಬಂದ ಭಾರತೀಯ ಸಾಹಿತ್ಯದಲ್ಲಿ ಪುನಃ ಪುನಃ ಕಂಡುಬರುತ್ತದೆ. ಪುರಾಣಗಳಲ್ಲಿ, ತಂತ್ರಗಳಲ್ಲಿ, ವೈಷ್ಣವಕಾವ್ಯಗಳಲ್ಲಿ ಮತ್ತು ಕೆಲಮಟ್ಟಿಗೆ ಠಾಕೂರರ ಆಧುನಿಕ ಕಾವ್ಯದಲ್ಲಿ, ಅಲ್ಲದೆ ಕೆಲವು ಚೀನದ ಮತ್ತು ಸೂಫಿಕವಿಗಳ ಕೃತಿಗಳಲ್ಲಿ ಈ ರೂಪಕಪದ್ಧತಿ ಕಂಡುಬರುತ್ತದೆ. ಕವಿಗೆ ಆಧ್ಯಾತ್ಮಿಕ ಮತ್ತು ಅತೀಂದ್ರಿಯ ಪ್ರಜ್ಞೆಗಳನ್ನು ವ್ಯಕ್ತಗೊಳಿಸಲು ತಾತ್ವಿಕಚಿಂತಕನ ಶುಷ್ಕ ವಿಚಾರದ ಭಾಷೆಯನ್ನು ಬಳಸಲು ಬಾರದು. ಏಕೆಂದರೆ ಅವನು ವ್ಯಕ್ತಪಡಿಸಬೇಕಾದುದು ಅದರ ನಗ್ನಭಾವವನ್ನಲ್ಲ ಅದರ ಅಂತಸ್ಸಾರವನ್ನು ಆದಷ್ಟು ಕಣ್ಣಿಗೆ ಕಟ್ಟುವಂತೆ ಹೇಳಬೇಕಾಗಿದೆ. ಒಂದಲ್ಲಾ ಒಂದು ವಿಧದಿಂದ ಅವನು ತನ್ನೊಳಗಿನ ಇಡೀ ಪ್ರಪಂಚನ್ನೂ ತನ್ನ ಹೊರಪ್ರಪಂಚದ ಆಧ್ಯಾತ್ಮಿಕ ಅರ್ಥಗಳನ್ನೂ ಪ್ರಕಟಪಡಿಸಬೇಕಾಗಿದೆ. ಅದು ನಮಗೆ ಸಾಮಾನ್ಯವಾಗಿ ಪರಿಚಯವಿಲ್ಲದ ಪ್ರಜ್ಞಾಸ್ಥಲಗಳಿಗೆ ಗೋಚರವಾಗುವ ದೇವತೆಗಳು, ಶಕ್ತಿಗಳು, ದರ್ಶನಗಳು ಮತ್ತು ಅನುಭೂತಿಗಳಾಗಿರಬಹುದು. ಅವನು ತನ್ನ ಸ್ವಾಭಾವಿಕವಾದ ಸಾಮಾನ್ಯ ಜೀವನ, ಮನುಷ್ಯಜಾತಿಯ ಸಹಜವಾದ ಬದುಕು ಮತ್ತು ಕಣ್ಗೆಕಾಣುವ ನಿಸರ್ಗ ಇವುಗಳಿಂದ ರೂಪಕಗಳನ್ನು ಆಯ್ದುಕೊಳ್ಳುತ್ತಾನೆ. ಈ ಪ್ರತಿಮಾರೂಪಕಗಳಿಗೆ ಸ್ವತಃ ತಾವೇತಾವಾಗಿ ಆತನ ಕಾಣ್ಕೆಯನ್ನು ವ್ಯಕ್ತಪಡಿಸಲು ಸಾಧ್ಯವಾಗದಿದ್ದರೂ ಸೂಚ್ಯವಾಗಿ ತನ್ನ ಆಧ್ಯಾತ್ಮಿಕ ಮತ್ತು ಅತೀಂದ್ರಿಯ ಅನುಭವಗಳನ್ನು ವ್ಯಕ್ತಪಡಿಸಲು ಅವನು ಅವನ್ನು ಒತ್ತಾಯಿಸುತ್ತಾನೆ. ಅವನು ಅವನ್ನು ತನ್ನ ಒಳನೋಟಕ್ಕೆ ಅನುಗುಣವಾಗಿ ಆರಿಸಿಕೊಂಡು ಅಂತರಾರ್ಥಸೂಚಕಗಳನ್ನಾಗಿ ಬದಲಾಯಿಸುತ್ತಾನೆ; ಮತ್ತು ಅದೇ ಕಾಲದಲ್ಲಿ ಅವುಗಳ ಸ್ವಭಾವಸಿದ್ಧ ಕಟ್ಟಿನಲ್ಲಿಯೇ ನೇರವಾಗಿ ಆಧ್ಯಾತ್ಮಿಕ ಅರ್ಥವನ್ನು ತುಂಬುತ್ತಾನೆ. ಈ

ಕಾರ್ಯದಲ್ಲಿ ಅವನು ಅಂತಃಪದಾರ್ಥಗಳಿಗೆ ಬಾಹ್ಯ ಅಲಂಕಾರಗಳನ್ನು ಅನ್ವಯಿಸಿ ಜೀವನದ ಹೊರಮೈಗೆ ರಹಸ್ಯಾರ್ಥವನ್ನು ತಂದುಕೊಡುತ್ತಾನೆ; ಅಥವಾ ಉದ್ದಕ್ಕೂ ಒಳನೋಟಕ್ಕೆ ಅತಿ ಹತ್ತಿರವಾಗಿರುವ ಹೊರ ಅಲಂಕಾರವನ್ನೂ ಅದರ ವಸ್ತು ಸ್ವರೂಪವನ್ನೂ ತೆಗೆದುಕೊಂಡು ಅತ್ಯಂತ ವಾಸ್ತವಿಕವೂ ಸುಸಂಬದ್ಧವೂ ಆದ ರೀತಿಯಿಂದ ಆಧ್ಯಾತ್ಮಿಕ ಅನುಭವ ಉಳ್ಳವರ ಲಕ್ಷ್ಯಕ್ಕೆ ಬರುವಂತೆ ಕವಿ ಬರೆಯುತ್ತಾನೆ. ಮಿಕ್ಕವರೆಲ್ಲರಿಗೂ ಅದು ಬರೀ ಬಾಹ್ಯವಸ್ತು ಅಷ್ಟೇ. ಆದ್ದರಿಂದಲೇ ಭಕ್ತರ ಮನಸ್ಸಿಗೆ ಬಂಗಾಳದ ವೈಷ್ಣವ ಕಾವ್ಯದಲ್ಲಿಯ ಭೌತಿಕ ಭಾವನಾತ್ಮಕ ರೂಪಕ ಅಥವಾ ಧ್ವನಿಯು ದೇವರ ಬಗ್ಗೆ ಮಾನವ ಆತ್ಮಕ್ಕೆ ಇರುವ ಭಕ್ತಿಯನ್ನು ವ್ಯಕ್ತಪಡಿಸಿದರೆ ಲೌಕಿಕರಿಗೆ ಅದೆಲ್ಲಾ ಕೇವಲ ರೂಢಿ ಪರಂಪರೆಗಳಿಗನುಗುಣವಾಗಿ ದಿವ್ಯ–ಮಾನುಷ ವ್ಯಕ್ತಿಗಳಾದ ರಾಧಾ–ಕೃಷ್ಣರ ಸುತ್ತ ವರ್ಣಿಸಿದ ಶೃಂಗಾರ. ಮೇಲೆ ಹೇಳಿದ ಎರಡೂ ಮಾರ್ಗಗಳು ಒಮ್ಮೆ ಸಂಧಿಸಲೂಬಹುದು. ಬಾಹ್ಯ ರೂಪಗಳ ರೂಢ ಪದ್ಧತಿಯನ್ನು ಕಾವ್ಯದ ಮೈಯನ್ನಾಗಿ ಮಾಡಿಕೊಂಡು ಆ ರೂಪಗಳ ಪ್ರಥಮ ಪರಿಮಿತಿಗಳನ್ನು ದಾಟುವಲ್ಲಿ ಅವುಗಳ ಮೊದಲ ಸೂಚನೆಗಳನ್ನಷ್ಟೇ ಸ್ವೀಕರಿಸಿ ಅನಂತರ ಸೂಕ್ಷ್ಮವಾಗಿ ಬದಲಿಸಿ ಇಲ್ಲವೇ ಅವುಗಳಲ್ಲಿ ತದ್ವಿರುದ್ಧ ಸೂಚನೆಯನ್ನು ಅಳವಡಿಸುವುದರಲ್ಲಿ ಕವಿ ಸ್ವಾತಂತ್ರ್ಯ ವಹಿಸುತ್ತಾನೆ. ಹಾಗೆ ಅವನು ಅವು ಮುಂದಿಡುವ ಮಂಜು ಮಂಜಾಗಿ ಕಾಣುವ ಅರಿವಿನ ತೆರೆಯಲ್ಲಿ ನಮ್ಮನ್ನು ಸಾಕ್ಷಾತ್ಕಾರದತ್ತ ಒಯ್ಯುತ್ತಾನೆ. ಈ ಕೊನೆಯ ಮಾರ್ಗವೇ ವೇದಮಾರ್ಗ. ಮತ್ತು ಅದು ಕವಿಯ ಭಾವೋದ್ರೇಕ, ಒಳನೋಟದ ತೀವ್ರತೆ ಅಥವಾ ವಾಣಿಯ ಔನ್ನತ್ಯಗಳಿಗನುಗುಣವಾಗಿ ಬದಲಾಗುತ್ತದೆ.

ವೈದಿಕ ಕವಿಗಳ ಮನೋಧರ್ಮವು ನಮ್ಮದಕ್ಕಿಂತ ಭಿನ್ನವಾಗಿತ್ತು. ಅವರ ಪ್ರತಿಮಾ ಪ್ರಯೋಗ ಅಥವಾ ರೂಪಕರಚನೆ ವಿಲಕ್ಷಣ. ಮತ್ತು ಅವರ ದರ್ಶನದ ಪ್ರಾಚೀನ ಭಾಷಾಶೈಲಿ ಅದರ ಸಾರಭೂತವಾದ ಅರ್ಥಕ್ಕೆ ಒಂದು ವಿಚಿತ್ರವಾದ ಹೊರವಲಯವನ್ನು ಕಲ್ಪಿಸಿಕೊಡುತ್ತದೆ. ಈ ಭೌತಿಕ ಹಾಗೂ ಮಾನಸಿಕ ಪ್ರಪಂಚಗಳು ಅವರ ಕಣ್ಣಿನಲ್ಲಿ ಇಬ್ಬಗೆಯೂ ಭಿನ್ನವೂ, ಆದರೆ ಸುಸಂಬದ್ಧವೂ, ಆದ ಸದೃಶರೂಪದ ವಿಶ್ವವ್ಯಾಪಕ ದೇವತೆಗಳ ಆವಿರ್ಭಾವವೇ ಆಗಿದೆ. ಅವರ ದೃಷ್ಟಿಯಲ್ಲಿ ಮನುಷ್ಯನ ಅಂತರ್–ಬಾಹ್ಯ ಜೀವನವೆಂಬುದು ದೇವರೊಡನೆ ಮಾಡುವ ದಿವ್ಯ ವ್ಯವಹಾರ. ಅದರ ಹಿನ್ನೆಲೆಯಲ್ಲಿ ಏಕಮೇವಾದ್ವಿತೀಯ ಸತ್ತಾಮಾತ್ರ ಶರೀರದ ಆತ್ಮತತ್ವವಿದೆ. ದೇವತೆಗಳೆಂಬರು ಆ ಆತ್ಮತತ್ವದ ನಾಮರೂಪ ಶಕ್ತಿಗಳು. ಈ ದೇವತೆಗಳು ಭೌತಿಕ ನಿಸರ್ಗದ ಮತ್ತು ಅಂತಸ್‌ತತ್ವ ಹಾಗೂ ಅವುಗಳ ಬಾಹ್ಯ ರೂಪಗಳ ಒಡೆಯರು, ಅಧಿದೇವತೆಗಳು. ಅವುಗಳಿಗೆ ಸೂಕ್ಷ್ಮಭೌತಿಕ ಹಾಗೂ ಆಂತರಿಕ ದಿವ್ಯ ರೂಪಗಳಿರುತ್ತವೆ. ಆ ರೂಪಗಳಿಗೆ ಸರಿಯಾಗಿ ನಮ್ಮ ಮನಸ್ಸಿಗೆ ಗೋಚರವಾಗುವ ಅವಸ್ಥೆ ಮತ್ತು ಶಕ್ತಿಗಳಿರುತ್ತವೆ. ಏಕೆಂದರೆ ಅವೇ ವಿಶ್ವದ ಆತ್ಮಶಕ್ತಿಗಳು, ಅಮರತೆಯ ಪಾಲಕರು, ಅಪ್ರಮೇಯ ತತ್ವದ ಬಾಲಕರು. ಅವುಗಳಲ್ಲಿ ಪ್ರತಿಯೊಂದೂ ಮೂಲತಃ ಮತ್ತು

ಅಂತ್ಯದಲ್ಲಿ ತನ್ನ ಒಂದೊಂದು ಮುಖವನ್ನೂ ಮುಂಚಾಚುವ ಉದಾತ್ತ ಪರಮಾತ್ಮತ್ವವೇ ಆಗಿದೆ. ಈ ಋಷಿಗಳ ದೃಷ್ಟಿಯಲ್ಲಿ ಮನುಷ್ಯ ಜೀವನವು ಸತ್ಯಾಸತ್ಯಗಳ ಸಮ್ಮಿಶ್ರಣ, ಮರ್ತ್ಯದಿಂದ ಅಮರ್ತ್ಯಕ್ಕೇರುವ ಪಯಣ, ಬೆಳಕು ಕತ್ತಲೆಗಳ ಬೆರಕೆಯಿಂದ ದಿವ್ಯಸತ್ಯದ ವೈಭವದೆಡೆಗೆ ಸಾಗುವ ಯಾತ್ರೆ. ಆ ದಿವ್ಯ ಸತ್ಯದ ಉಗಮವು ಅಪ್ರಮೇಯದಲ್ಲಿದೆ. ಆದರೆ ಅದನ್ನು ಇಲ್ಲಿಯ ಮಾನವನ ಬಾಳಿನಲ್ಲೇ ಅಪ್ರಮೇಯದಲ್ಲಿದೆ. ಆದರೆ ಅದನ್ನು ಇಲ್ಲಿಯ ಮಾನವನ ಬಾಳಿನಲ್ಲೇ ಕಟ್ಟಬಹುದು. ಈ ಮನುಷ್ಯ ಜೀವನವು ಒಂದು ತಾಮಸ ಹಾಗೂ ಸಾತ್ವಿಕ ಶಕ್ತಿಗಳ ಹೋರಾಟ; ಇದು ವೀರನರನಿಗೆ ದೇವತೆಗಳು ಕರುಣಿಸುವ ವರವನ್ನೂ, ಐಶ್ವರ್ಯವನ್ನೂ ಪಡೆದುಕೊಳ್ಳುವ ಪ್ರಯತ್ನ ಮತ್ತು ಒಂದು ಪ್ರವಾಸ ಅಥವಾ ಯಜ್ಞ. ಆರ್ಯರು ಅಗ್ನಿಯ ನೈಸರ್ಗಿಕ ಶಕ್ತಿಗಳ ಪೂಜೆಯನ್ನು ಯಜ್ಞರೂಪದಲ್ಲಿ ಮಾಡುತ್ತಿದ್ದ ಬಗೆಯನ್ನು ಒಕ್ಕಲುತನದ, ಪಶುಪಾಲನೆಯ ಮತ್ತು ಯುದ್ಧದ ಆವರಣದಿಂದ ತೆಗೆದುಕೊಂಡ ಪ್ರತಿಮಾ ಪದ್ಧತಿಯಲ್ಲಿ ಹೇಳಿದ್ದಾರೆ. ಆ ಪ್ರತಿಮೆಗಳು ಅವರ ಜೀವನದಲ್ಲಿ ಮತ್ತು ವ್ಯವಹಾರದಲ್ಲಿ ಹೊರಬದುಕಿನ ಮತ್ತು ಯಜ್ಞಯಾಗಾದಿಗಳ ಸಂಕೇತಗಳಾಗಿದ್ದುವು. ಅವು ಅವರ ಕಾವ್ಯದಲ್ಲಾದರೂ ಮೃತಸಂಕೇತ ಅಥವಾ ಕೃತಕ ರೂಪಗಳಾಗಿರದೆ ಆಂತರಿಕ ಅನುಭವದ ಸಚೇತನವು ಸಮರ್ಥವೂ ಆದ ಸೂಚನೆಗಳು ಮತ್ತು ಪ್ರತಿಬಿಂಬಗಳು ಎನಿಸಿವೆ. ತಮ್ಮ ಅನುಭವದ ಪ್ರಕಟನೆಗೆ ಅವರು ನಿರ್ದಿಷ್ಟವಾದರೂ ಬದಲುಮಾಡಬಹುದಾದ ಮಿರುಗುವ ಪುರಾಣ ಕತೆಗಳ ರಾಶಿ, ಕತೆಯಾಗಿ ಪರಿಣಮಿಸಿದ ರೂಪಕಗಳು, ಪುರಾಣವಾಗಿ ಪರಿಣಮಿಸಿದ ಕತೆಗಳು, ಯಾವಾಗಲೂ ರೂಪಕಗಳಾಗಿಯೇ ಉಳಿದ ಕತೆಗಳು– ಇವನ್ನು ಬಳಸಿಕೊಂಡರು. ಇಷ್ಟಾದರೂ ಅವರಿಗೆ ಇವೆಲ್ಲಾ ಅತೀಂದ್ರಿಯವಾದ ವಾಸ್ತವಿಕ ಸತ್ಯಗಳ ದರ್ಶನದಲ್ಲಿ ಒಂದು ಮಟ್ಟವನ್ನು ಮುಟ್ಟಿದವರಿಗೆ ಕಾಣುತ್ತಿದ್ದ ಅರ್ಥದಲ್ಲೇ ಕಾಣಿಸುತ್ತಿದ್ದುವು. ಭೌತಿಕವು ಅತೀಂದ್ರಿಯದ ಕಾಂತಿಯಲ್ಲಿ ಕರಗಿತು; ಅತೀಂದ್ರಿಯವು ಆಧ್ಯಾತ್ಮಿಕ ಜ್ಯೋತಿಯಲ್ಲಿ ತೀವ್ರವಾಯಿತು. ಈ ಅವಾಂತರ ಅವಸ್ಥೆಯಲ್ಲಿ ಪೂರ್ವಾಪರಮಟ್ಟಗಳ ಭೇದವು ಸ್ಪಷ್ಟವಾಗಿ ಕಾಣುತ್ತಿದ್ದಿಲ್ಲ; ತದ್ವಿರುದ್ಧವಾಗಿ ಅವುಗಳ ಸೂಚನೆ ಮತ್ತು ವರ್ಣದರ್ಶನಗಳಲ್ಲಿ ಓತಪ್ರೋತ ಸ್ವರೂಪವಿತ್ತು. ಆದ್ದರಿಂದ ಈ ತರಹದ ದರ್ಶನ ಅಥವಾ ಕಲ್ಪನೆಗಳುಳ್ಳ ಮನುಷ್ಯರು ಬರೆದ ಕಾವ್ಯವನ್ನು ಲೌಕಿಕ ಜೀವನದ ನಿಯಮಾವಳಿಗಳನ್ನು ಅನುಸರಿಸುವ ರುಚಿವಿಚಾರಗಳ ಅಳೆಗೋಲಿನಿಂದ ಅಳೆಯಲು ಅಥವಾ ಅರ್ಥೈಸಲು ಬಾರದು. "ಎಲೈ ಕಿರಣವೆ, ನಮ್ಮ ಕಡೆಗಾಗು" ಎಂಬ ಕರೆಯು ಏಕಕಾಲಕ್ಕೆ ವೇದಿಕೆಯಮೇಲಿನ ಧಗಧಗಿಸುವ ಹುತಾಶನ ಜ್ವಾಲೆಯ ಎದ್ದು ಉರಿಯುವ ಆಟಕ್ಕೂ ಅದರಂತೆಯೇ ಇರುವ ನಮ್ಮನ್ನು ಕಾಯುವ ಅಂತರ್‌ಜ್ಯೋತಿಯ ಜ್ವಾಲೆಯ ಅಭಿವ್ಯಕ್ತಿಗೂ ಅನ್ವಯಿಸುತ್ತದೆ. ದ್ಯಾವಾಪೃಥಿವಿಗಳ ಮಗನಾದ ಇಂದ್ರನು ತಂದೆತಾಯಿಗಳನ್ನೇ ಹುಟ್ಟಿಸುತ್ತಾನೆ ಎಂಬ ಸ್ವಚ್ಛಂದ ಧೀರರೂಪಕಗಳು ಪಾಶ್ಚಾತ್ಯ ವಿಮರ್ಶಕನಿಗೆ ಕರಾಳವಾಗಿ ಕಾಣುತ್ತವೆ.

ಅದಕ್ಕೆ ಅವನು ಮೂಗುಮುರಿಯುತ್ತಾನೆ. ಆದರೆ ಇಂದ್ರನು ತನ್ನ ಸನಾತನ ಸ್ವರೂಪವೊಂದರಲ್ಲಿ ಪುರುಷೋತ್ತಮ, ಭೂಮ್ಯಾಕಾಶಗಳ ಸೃಷ್ಟಿಕರ್ತ, ಭೌತಿಕ ಮಾನಸಪ್ರಪಂಚಗಳ ನಡುವೆ ಹುಟ್ಟಿದ ವಿಶ್ವವ್ಯಾಪಕದೇವ, ಆ ಪ್ರಪಂಚಗಳ ಶಕ್ತಿಗಳನ್ನು ಮನುಷ್ಯನಲ್ಲಿ ಪುನರ್ರಚನೆ ಮಾಡುವವನು ಎಂಬುದನ್ನು ನಾವು ನೆನೆಸಿಕೊಂಡರೆ ಈ ರೂಪಕವು ಸತ್ಯವೂ ಅಂತರಾರ್ಥ ಸ್ಫೋಟಕವೂ ಆಗಿ ತೋರುತ್ತದೆ. ವೈದಿಕತಂತ್ರದಲ್ಲಿ ಲೌಕಿಕ ಕಲ್ಪನೆಗೆ ಭಂಗ ಬಂದರೆ ಅಡ್ಡಿ ಇಲ್ಲ. ಏಕೆಂದರೆ ಅದೇ ಮಟ್ಟದಲ್ಲಿ ಮನಸ್ಸನ್ನು ಎಚ್ಚರಿಸುವ ಔಚಿತ್ಯ ಮತ್ತು ಬಲಿಷ್ಠ ಕಾವ್ಯಮಯ ಓಜಸ್ಸುಗಳಿಂದ ಅಂತಹ ಉನ್ನತತರ ಸತ್ಯವನ್ನು ಇನ್ನಾವ ರೂಪಕವೂ ಹೇಳಲಾರದು. ಗುಹೆಯಲ್ಲಿ ಅಡಗಿದ ಸೂರ್ಯ, ದನಗಳ ಹಿಂಡು ಹಾಗೂ ವೇದೋಕ್ತವಾದ ವೃಷಭ–ಧೇನುಗಳು ಲೌಕಿಕ ಬುದ್ಧಿಗೆ ನಿಜವಾಗಿಯೂ ವಿಚಿತ್ರಪ್ರಾಣಿಗಳೇ; ಅವು ಭೂಲೋಕಕ್ಕೆ ಸೇರಿದವಲ್ಲ. ಅವುಗಳ ಮಟ್ಟದಲ್ಲಿ ಅವು ಒಂದೇ ಕಾಲಕ್ಕೆ ಮುಖ್ಯವೂ ಅರ್ಥಗರ್ಭಿತವೂ ಆದ ರೂಪಕಗಳೂ ನಿಜವಸ್ತುಗಳೂ ಆಗಿವೆ. ವೈದಿಕಕಾವ್ಯವನ್ನು ಅದರ ದರ್ಶನ ಸ್ವರೂಪಕ್ಕನುಗುಣವಾಗಿ ನಾವು ಹೀಗೆ ಅರ್ಥಮಾಡುತ್ತಾ ಹೋಗಬೇಕು. ಅದರ ಭಾವ ಅಲಂಕಾರಗಳ ಸ್ವಾಭಾವಿಕ ಭೌತಿಕಾಂಶಗಳು ನಮಗೆ ವಿಚಿತ್ರವೂ ಅಲೌಕಿಕವೂ ಆಗಿ ಕಂಡರೂ ಅವು ಹೇಳುವ ಸತ್ಯವನ್ನು ನಾವು ಗ್ರಹಿಸಬೇಕು.

ಜಗತ್ತಿನಲ್ಲಿ ಉಪಲಬ್ಧವಿರುವ ಪ್ರಥಮ ಪವಿತ್ರಗ್ರಂಥ ಎಂಬ ಅಂಶವನ್ನು ಹೊರಗಿಟ್ಟು ವೇದವನ್ನು ಅರ್ಥಮಾಡಿಕೊಂಡರೆ ಅದು ಲೋಕತ್ರಯದ ಬಾಳಿನ ಅತ್ಯಂತ ಪ್ರಾಚೀನ ವಿವರಣೆ, ಮತ್ತು ಉದಾತ್ತವಾದ ಕವಿಕೃತಿ. ಭಾಷೆಯಲ್ಲಿಯೂ ಶೈಲಿಯಲ್ಲಿಯೂ ಅದು ಎಂದಿಗೂ ಅಸಂಸ್ಕೃತವಲ್ಲ. ವೈದಿಕ ಕವಿಗಳು ಒಂದು ಪರಿಪೂರ್ಣ ಕಾವ್ಯತಂತ್ರದ ಒಡೆಯರು. ಅವರ ಲಯಗತಿಯು ದೇವತೆಗಳ ರಥದಂತೆ ನಾದದ ದಿವ್ಯವಿಸ್ತಾರವಾದ ರೆಕ್ಕೆಗಳಿಂದ ಸಾಗುತ್ತದೆ. ಅಲ್ಲದೆ ಅದಕ್ಕೆ ಮಹಾಸಂಚಾರಶಕ್ತಿಯೂ ಸೂಕ್ಷ್ಮಸ್ವರಸಮನ್ವಯವೂ ಇದೆ. ವೇದಕಾರರ ಮಾತು ತೀವ್ರತೆಯಲ್ಲಿ ಭಾವಗೀತದಂತಿದ್ದರೆ ಔನ್ನತ್ಯದಲ್ಲಿ ಮಹಾಕಾವ್ಯದಂತೆ ಇದೆ; ಅದೊಂದು ಮಹಾಶಕ್ತಿಯ ವಾಣಿ; ವಾಚ್ಯರೂಪದಲ್ಲಿ ಶುದ್ಧ, ಧೀರ, ಗಂಭೀರ; ಮನಸ್ಸಿನ ಮೇಲೆ ಅಚ್ಚಳಿಯದಂತೆ ಅರ್ಥವನ್ನು ಮೂಡಿಸುವುದರಲ್ಲಿ ಅದು ನೇರ ಮತ್ತು ಸಂಕ್ಷಿಪ್ತ. ಆದುದರಿಂದ ಅದರ ಪ್ರತಿಯೊಂದು ಪಂಕ್ತಿಯೂ ಸ್ವಯಂಪೂರ್ಣವೂ ಹಿಂದುಮುಂದಿನ ಪಂಕ್ತಿಗಳನ್ನು ಒಟ್ಟುಗೂಡಿಸುವ ವಿಶಾಲ ಸೋಪಾನವೂ ಆಗಿದೆ. ಅವುಗಳ ಸಾರ ಮತ್ತು ರೂಪಗಳನ್ನು ಅನೂಚಾನವಾಗಿ ಅನುಸರಿಸುತ್ತ ಬಂದ ಪವಿತ್ರಪೂಜಕ ಪರಂಪರೆ ಉಳಿಸಿಕೊಟ್ಟಿತು. ಆದರೆ ಈ ಸಾರವು ಮನುಷ್ಯನ ಆತ್ಮಕ್ಕೆ ಕಟ್ಟ ಕಡೆಯದಾಗಿ ಶಕ್ಯವೆನಿಸುವ ಅತಿ ಆಳವಾದ ಅತೀಂದ್ರಿಯ ರೂಪದಲ್ಲಿದೆ. ಅದರ ಅರ್ಥವು ಕವಿ ಅನುಭವಿಸಿದ ತನ್ನ ವೈಯುಕ್ತಿಕ ದರ್ಶನದ ಸೂಕ್ಷ್ಮತೆ ಅಥವಾ ಉದಾತ್ತತೆಗಳಿಗನುಗುಣವಾಗಿ ಮಾಡಿಕೊಂಡದ್ದು. ಮಹರ್ಷಿಗಳಾದ ವಿಶ್ವಾಮಿತ್ರ, ವಾಮದೇವ, ಧೀರ್ಘತಮಸ್ಸು

ಮುಂತಾದವರ ಸೂಕ್ತಗಳು ಅಲೌಕಿಕ ಔನ್ನತ್ಯ–ವಿಸ್ತಾರಗಳನ್ನು ಮುಟ್ಟುತ್ತವೆ. ಇದೇ ಉದಾತ್ತ ನೆಲೆಯ ಅಪರೋಕ್ಷ ಕಾವ್ಯ. ನಾಸದೀಯದಂತಹ ಗೀತಗಳು ವಿಚಾರಗಿರಿಗಳ ಉತ್ತುಂಗ ಶಿಖರಗಳಲ್ಲಿ ಓಜಃಪ್ರಸಾದಗಳಿಂದ ಸಂಚರಿಸುತ್ತವೆ. ಅಂತಹವನ್ನೇ ಉಪನಿಷತ್ತು ಪದೇ ಪದೇ ಅವಲಂಬಿಸಿ ಸಾಗುತ್ತದೆ. ಈ ದಾರ್ಶನಿಕ ಕವಿಗಳೇ ತನ್ನ ಎಲ್ಲ ತತ್ವಜ್ಞಾನ, ಧರ್ಮ ಹಾಗೂ ಸಂಸ್ಕೃತಿ–ಸಾರಗಳಿಗೂ ಮೂಲವೆಂದು ಭಾವಿಸಿದ ಪ್ರಾಚೀನ ಭಾರತದ ಮನಸ್ಸು ತಪ್ಪುಮಾಡಲಿಲ್ಲ. ಏಕೆಂದರೆ ದೇಶದಲ್ಲಿ ಅನಂತರ ಬಂದ ಎಲ್ಲ ಬಗೆಯ ಆಧ್ಯಾತ್ಮಿಕತೆಯೂ ಬೀಜರೂಪವಾಗಿ ಅಲ್ಲಿದೆ.

ವೈದಿಕ ಸೂಕ್ತರಾಶಿಯನ್ನು ಒಂದು ಬಗೆಯ ಪವಿತ್ರಗ್ರಂಥವೆಂದು ತಿಳಿದುಕೊಳ್ಳುವುದು ಬಹು ಮುಖ್ಯ. ಹಾಗೆ ತಿಳಿದುಕೊಂಡಾಗ ಮಾತ್ರ ಭಾರತದ ಮನಸ್ಸಿನಲ್ಲಿ ತುಂಬಿದ್ದ ಮಹಾಭಾವಗಳ ಮತ್ತು ಆಧ್ಯಾತ್ಮಿಕ ಅನುಭೂತಿಗಳ ವಿಶಿಷ್ಟ ಮಾದರಿಗಳ ಮೂಲರೂಪವನ್ನು ಅರಿತುಕೊಳ್ಳಬಹುದು; ಅದಲ್ಲದೆ ಅದರ ಕಲ್ಪಕ ಶಕ್ತಿಯ ತಿರುಹೂ ರಚನಾತ್ಮಕ ಮನೋಭಾವ ಮತ್ತು ಜೀವ–ಜಗತ್ತು–ಜೀವನ–ವಿಶ್ವಗಳ ದರ್ಶನವನ್ನು ಅದು ಎಡೆಬಿಡದೆ ಅರ್ಥ ಮಾಡಿಕೊಂಡ ಬಗೆಗಳೂ ನಮಗೆ ಗೊತ್ತಾಗುತ್ತವೆ. ಅದರ ಸಾಹಿತ್ಯದ ಬಹುಭಾಗದಲ್ಲಿರುವಂಥ ಸ್ಫೂರ್ತಿ–ಅಭಿವ್ಯಕ್ತಿಗಳ ಲಕ್ಷಣಗಳು ಅದರ ವಾಸ್ತುಶಿಲ್ಪ, ವರ್ಣಚಿತ್ರ ಮತ್ತು ಮೂರ್ತಿಗಳಲ್ಲಿಯೂ ಕಂಡುಬರುತ್ತದೆ. ಅಂಥ ಮೊದಲನೆ ಲಕ್ಷಣವೆಂದರೆ ಅಪ್ರಮೇಯದ ವಿಶ್ವವ್ಯಾಪಕಶಕ್ತಿಯ ವಿರಾಡ್‌ದರ್ಶನದಲ್ಲಿ ಕಾಣಿಸುವ ವಸ್ತುರೂಪಗಳನ್ನು ಅಪ್ರಮೇಯ ವಸ್ತುವಿನ ವಿಶಾಲಭಿತ್ತಿಯ ಎದುರಿಟ್ಟದ್ದು. ಅದರ ಎರಡನೆಯ ಲಕ್ಷಣವೆಂದರೆ ತನ್ನ ಆಧ್ಯಾತ್ಮಿಕ ಅನುಭೂತಿಯನ್ನು ಆಂತರಿಕ ಅತೀಂದ್ರಿಯ ಲೋಕದಿಂದ ಬಂದ ರೂಪಕಗಳಲ್ಲಿ ಅಥವಾ ಅತೀಂದ್ರಿಯ ಅರ್ಥ, ತಾತ್ಪರ್ಯ, ರೂಪ–ರೇಖೆ, ಭಾವ, ಬಣ್ಣಗಳ ಒತ್ತಡದಿಂದ ರೂಪಾಂತರಿಸಲ್ಪಟ್ಟ ಪ್ರತಿಮೆಗಳಲ್ಲಿ ಅತ್ಯಂತ ವಿಪುಲ ಪ್ರಮಾಣದಲ್ಲಿ ಕಾಣುವ ಪ್ರವೃತ್ತಿ. ಮೂರನೆಯದಾಗಿ ಮಹಾಭಾರತ ರಾಮಾಯಣಗಳಲ್ಲಿ ಕಾಣುವಂತೆ ಎಷ್ಟೋ ವೇಳೆ ಅತಿಶಯಗೊಳಿಸಿ ಚಿತ್ರಿಸುವುದು ಅಥವಾ ಅತಿಭೌತಿಕ ಅರ್ಥದಿಂದ ಕೂಡಿದ ಆವರಣದ ವಿಸ್ತಾರವಾದ ಪಾರದರ್ಶಕತೆಯಲ್ಲಿ ಸೂಕ್ಷ್ಮರೂಪದಿಂದ ಇಡುವುದು–ಅಥವಾ ತನ್ನ ಪ್ರತ್ಯೇಕ ಅಲಂಕಾರಿಕ ರೂಪವನ್ನು ಹೊರತುಪಡಿಸಿ ಈ ಬಾಳಿನ ಬಗೆಯನ್ನು ಆಧ್ಯಾತ್ಮಿಕ ಹಾಗೂ ಅತೀಂದ್ರಿಯ ಹಿನ್ನೆಲೆಯಲ್ಲಿ ಮೂಡಿಸುವುದು, ಅಪ್ರಮೇಯ ಆತ್ಮತತ್ವವು ನಮಗೆ ಹತ್ತಿರವಾದ ನಿಜವಸ್ತು; ದೇವತೆಗಳು ಸತ್ಯವಾಗಿ ಇರುವಂಥವರು ಮತ್ತು ಊರ್ಧ್ವಲೋಕಗಳು ನಿಜವಾಗಿಯೂ ದೂರವಿಲ್ಲ; ಅವು ನಮ್ಮ ಬಾಳಿನಲ್ಲಿಯೇ ಅವಿತುಕೊಂಡಿವೆ. ಪಾಶ್ಚಾತ್ಯ ಮನಸ್ಸಿಗೆ ಯಾವುದು ಕಾಲಿಲ್ಲದ ಕತೆ ಎಂದೆನಿಸುವುದೋ ಅದು ನಮ್ಮ ಬಾಳಿನ ನನ್ನಿ, ಒಳಗಣ್ಣಿನ ನೋಟ. ಅಲ್ಲಿಯವರಿಗೆ ಸೊಗಸಾದ ಕವಿಕಲ್ಪನೆ ಮತ್ತು ತಾತ್ವಿಕ ವಿವೇಚನೆ ಎನಿಸುವುದು ಇಲ್ಲಿಯವರಿಗೆ ಸದಾ ಅನುಭವದಲ್ಲಿ ಗೋಚರವಾಗುವ ಪದಾರ್ಥ. ಈ ಭಾರತೀಯ ಮನೋಧರ್ಮದ ರೂಪವೇ– ಈ

ಆಧ್ಯಾತ್ಮಿಕ ಪ್ರಾಮಾಣಿಕತೆ ಮತ್ತು ವಾಸ್ತವವಾದಗಳೇ– ವೇದ, ಉಪನಿಷತ್ತು ಮತ್ತು ಅನಂತರ ಬಂದ ಧಾರ್ಮಿಕ ಹಾಗೂ ತತ್ವಕಾವ್ಯಗಳನ್ನು ಸ್ಫೂರ್ತಿಯಲ್ಲಿ ಅಷ್ಟು ಬಲಿಷ್ಠವನ್ನಾಗಿಯೂ ವ್ಯಂಜನ–ಲಕ್ಷಣೆಗಳಲ್ಲಿ ಅಷ್ಟು ಮನಂಬುಗುವಂತೆಯೂ ಮಾಡಿದ್ದು; ಅಷ್ಟು ಮನಸ್ಸನ್ನು ಸೆರೆಹಿಡಿಯುವಂತಲ್ಲದಿದ್ದರೂ ಸಾಕಷ್ಟು ಪರಿಣಾಮಕಾರಿಯಾದ ಪ್ರಮಾಣದಲ್ಲಿ ಲೌಕಿಕ ಸಾಹಿತ್ಯದ ಭಾವ ಹಾಗೂ ಕಲ್ಪನೆಗಳ ಮೇಲೆ ಅದು ತನ್ನ ಪ್ರಭಾವ ಬೀರಿದೆ.

# ಅಧ್ಯಾಯ ಎರಡು

# ವೈದಿಕ ವಾಙ್ಮಯ (ಮುಂಬರಿದುದು)

ಉಪನಿಷತ್ತು ಭಾರತದ ಆತ್ಮದ ಶ್ರೇಷ್ಠ ಗ್ರಂಥರಾಶಿ. ಅದರ ಪ್ರತಿಭೆಯ ಮೇರುಕೃತಿ, ಅದರ ಅತ್ಯುದಾತ್ತ ಕಾವ್ಯ, ಶಬ್ದಾರ್ಥಗಳಲ್ಲಿ ಅದು ರಚಿಸಿದ ಮಹೋನ್ನತ ರಚನೆ. ಆದುದರಿಂದ ಅದು ಸರ್ವಸಾಮಾನ್ಯ ಕಾವ್ಯ ಕೃತಿ ಅಲ್ಲ. ಅದೊಂದು ಆಳವಾದ ಆಧ್ಯಾತ್ಮಿಕ ಸಾಕ್ಷಾತ್ಕಾರದ ಹೆಬ್ಬೊನಲು (ಮಹಾಪ್ರವಾಹ), ವಿಶಿಷ್ಟ ಮನೋಧರ್ಮದ ಮತ್ತು ಅಸಾಧಾರಣ ಪ್ರವೃತ್ತಿಯ ಸಾಕ್ಷಿ. ಉಪನಿಷತ್ತು ಗಭೀರ ಧರ್ಮಗ್ರಂಥ, ಗಾಢ ಆಧ್ಯಾತ್ಮಿಕ ಅನುಭೂತಿಗಳ ಅಭಿಲೇಖ, ಮೊಗೆದು ಮುಗಿಸಲಾಗದ ಕಸು–ಬೆಳಕು, ಹರಹು ಉಳ್ಳ ದಾರ್ಶನಿಕ ಹಾಗೂ ಪ್ರಾಥಿಭ ತತ್ವಜ್ಞಾನದ ದಾಖಲೆ. ಪದ್ಯದಲ್ಲೇ ಬರೆದಿರಲಿ, ಗದ್ಯದಲ್ಲೇ ಬರೆದಿರಲಿ ಅದು ಸೋಲರಿಯದ ಹೊಳಹಿನ ನಿರಂಕುಶ ಆಧ್ಯಾತ್ಮಿಕ ಕಾವ್ಯ. ಅದರ ಪದವಿನ್ಯಾಸ ಅತ್ಯಂತ ಉಚಿತ, ಯತಿ–ಗತಿ–ಅಭಿವ್ಯಕ್ತಿಗಳಲ್ಲಿ ಅದ್ಭುತವಾಗಿದೆ. ಅದು ತತ್ವ ಧರ್ಮ, ಕಾವ್ಯಗಳನ್ನು ಒಂದುಗೂಡಿಸಿಕೊಂಡ ಮನದ ಮಾತು. ಏಕೆಂದರೆ ಈ ಧರ್ಮವು ಒಂದು ಜಾತಿಪಂಥವಾಗಿ ಇಲ್ಲವೆ ಧಾರ್ಮಿಕ, ಧರ್ಮ–ನೀತಿಯ ಮಹತ್ವಾಕಾಂಕ್ಷೆಯಾಗಿ ಕೊನೆಗೊಳ್ಳಲಿಲ್ಲ; ಅದು ದೇವರ, ಆತ್ಮದ, ಅಂತರಾತ್ಮನ ಅತ್ಯುತ್ತುಂಗ ಸತ್ಯಶಿಖರದ ಸೀಮಾತೀತ ಸಾಕ್ಷಾತ್ಕಾರಕ್ಕೆ ಏರುತ್ತದೆ– ಜ್ಯೋತಿರ್ಮಯ ಪ್ರಜ್ಞೆಯ ಆನಂದದ ಉದ್ಗಾರ, ಪೂರ್ಣ ಅನುಭೂತಿಯ ಭಾವನಿರ್ಭರವಾದ ಚಿತ್‌ಸುಖದ ಚಿಲುಮೆ. ಈ ತತ್ವಜ್ಞಾನವು ಸತ್ಯದ ಬಗ್ಗೆ ಮಾಡಿದ ಶುಷ್ಕ ತರ್ಕವಲ್ಲ, ಬುದ್ಧಿಯ ಕಸರತ್ತಲ್ಲ. ಇದು ಒಳಗಿನ ಒಳಗಿನ, ಒಳಗಿನ ಮನ ಮತ್ತು ಆತ್ಮದ ಖಾತ್ರಿಯಾದ ಅನುಭವ–ಸಾಕ್ಷಾತ್ಕಾರಗಳ ಉಲ್ಲಾಸದಲ್ಲಿ ಹಾಡಿದ ಗೀತ, ನಂಬಿದ ನಂಬುಗೆ, ಬದುಕಿನ ಬದುಕು, ಕಂಡ ಕಾಣ್ಕೆ. ಈ ಕಾವ್ಯವು ಲೋಕೋತ್ತರ ಮಟ್ಟಕ್ಕೇರಿದ ರಸಪ್ರಜ್ಞೆ ವ್ಯಕ್ತಪಡಿಸಿದ ಆತ್ಮ–ಪರಮಾತ್ಮ–ವಿಶ್ವಗಳ ಆಳವಾದ ಸತ್ಯದ ಪರಂಜ್ಯೋತಿಃ ಸ್ವರೂಪದ ಅತ್ಯಪೂರ್ವ ಆಧ್ಯಾತ್ಮಿಕ ಸ್ವಸ್ವರೂಪದರ್ಶನದ ಬೆರಗು ಬೆಡಗುಗಳನ್ನು ಹಾಡಿದ ಹಾಡು. ಇಲ್ಲಿ ವೈದಿಕ ಋಷಿಗಳ ಒಳಗಣ್ಣು ಮತ್ತು ಅನುಭವ ಅತಿ ಎತ್ತರದ ನೆಲೆಯನ್ನು ಮುಟ್ಟುತ್ತದೆ. ಇಲ್ಲಿ ಕಠೋಪನಿಷತ್ತಿನಲ್ಲಿ ಹೇಳಿದಂತೆ ಆತ್ಮವು ತನ್ನ ನಿಜರೂಪವನ್ನು, ಆತ್ಮಾಭಿವ್ಯಕ್ತಿಯ ನಿಜಪದವನ್ನು ಬಯಲು ಮಾಡಿ ಆಧ್ಯಾತ್ಮಿಕ ಶ್ರುತಿ ಕೇಳುವಂತೆ ನುಡಿಗೊಡುವ ಲಯಸ್ಪಂದಗಳನ್ನು ಮನಸ್ಸಿಗೆ

ತೋರಿಸಿಕೊಡುವುದು. ಇದು ಆತ್ಮವನ್ನು ಅದರ ಎತ್ತರಕ್ಕೊಯ್ದು ತೃಪ್ತಿಗೊಳಿಸಿ ಆತ್ಮಜ್ಞಾನದ ಶಿಖರಗಳ ಮೇಲೆ ಪೂರ್ಣಗೊಳಿಸಿ ನಿಲ್ಲುತ್ತದೆ.

ಉಪನಿಷತ್ತಿನ ಈ ಲಕ್ಷಣವನ್ನು ಒತ್ತಿ ಹೇಳಬೇಕಾಗಿದೆ. ಏಕೆಂದರೆ ವಿದೇಶೀಯ ಭಾಷಾಂತರಕಾರರು ಇದನ್ನು ಅಲಕ್ಷಿಸುತ್ತಾರೆ. ಆ ಪ್ರಾಚೀನ ಪದ್ಯಪಂಕ್ತಿಗಳು ಅವಿರ್ಭವಿಸಲು ಕಾರಣವಾದ ಆಧ್ಯಾತ್ಮಿಕ ಅನುಭೂತಿಯ ವಿಚಾರ, ದರ್ಶನ, ಆನಂದಗಳ ಸಚೇತನತೆಯನ್ನು ಭಾವಿಸದೆ ಅವರು ಬರಿ ಬುದ್ಧಿಗಮ್ಯ ಅರ್ಥವಷ್ಟನ್ನೇ ಮಾಡುತ್ತಾರೆ. ಆ ವಾಣಿ ಉದ್ಬೋಧಿಸುವ, ಆತ್ಮದ ಇಡಿ ಬಾಳಿನಲ್ಲಿ ಪ್ರಚೋದಿಸುವ ಅಂಶಗಳಲ್ಲಿ ಹೊಗಬಲ್ಲವರಿಗೆ ಇಂದಿಗೂ ಅಂದಿನ ಋಷಿಗಳಿಗೆ ಕಂಡಂತೆಯೇ ಕಾಣುತ್ತದೆ. ಆಧ್ಯಾತ್ಮಿಕ ಪ್ರವೃತ್ತಿ ಉಳ್ಳವರಿಗೆ ಅದು ಕೇವಲ ಭೌತಿಕ ವಿಚಾರವಲ್ಲ, ಶ್ರುತಿ ಅಥವಾ ಸ್ಫೂರ್ತ ಪರಾವಾಕ್ ಎಂದೆನಿಸಿದೆ. ಇಂದು ಉಪನಿಷತ್ತಿನ ತತ್ವಸಾರವು ಇದಕ್ಕೂ ಹೆಚ್ಚಿನ ಮೆಚ್ಚಿಗೆಯನ್ನು ಬಯಸುವುದಿಲ್ಲ. ಮೇಧಾವಿಗಳ ಮನ್ನಣೆ ಸಾಕಷ್ಟು ಇಲ್ಲದೆ ಇದ್ದರೂ ತತ್ವಶಾಸ್ತ್ರದ ಇಡೀ ಇತಿಹಾಸವೇ ಅದರ ಬೆಲೆಗೆ ಸಾಕ್ಷಿಯಾಗಿದೆ. ಹಿಮಾಲಯದಿಂದ ಹರಿದ ಅನೇಕ ಮಹಾನದಿಗಳಂತೆ ಉಪನಿಷತ್ತುಗಳು ಅನೇಕಾನೇಕ ಗಹನವಾದ ಭಾರತೀಯ ಧರ್ಮ ಹಾಗೂ ತತ್ವಶಾಸ್ತ್ರಗಳ ಉಗಮವೆಂದೆನಿಸಿ ಅದರ ಜನತೆಯ ಬಗೆ ಬಾಳುಗಳನ್ನು ಫಲವತ್ತಾಗಿ ಮಾಡಿ ಶತಮಾನಗಳ ಮೆರವಣಿಗೆಯ ಮೂಲಕ ಪದೇ ಪದೇ ಬೆಳಕಾಗಿ ತಿರುಗಿ ಬರುವ ಅದರ ಆತ್ಮವನ್ನು ಸಜೀವವಾಗಿ ಇಟ್ಟಿವೆ. ಅವೆಂದೂ ಹೊಸಬೆಳಕನ್ನು ಕೊಡದೆ ಉಳಿದಿಲ್ಲ. ಅವು ಜೀವ ತುಂಬುವ, ಮೊಗೆದು ಮುಗಿಯದ ನೀರ್‌ಬುಗ್ಗೆಗಳು. ಸಾಂಗೋಪಾಂಗವಾದ ಬೌದ್ಧವಾದವು ಹೊಸ ದೃಷ್ಟಿಯಿಂದ ನೋಡಿ ಬುದ್ಧಿ ಗ್ರಾಹ್ಯ ತರ್ಕಲಕ್ಷಣಗಳಿಂದ ಕೂಡಿದ ಹೊಸ ಭಾಷೆಯಲ್ಲಿ ಹೇಳಿದರೂ ಅದು ಹೇಳಿದ್ದು ಉಪನಿಷತ್ತಿನ ಅನುಭೂತಿಯ ಒಂದು ಮಗ್ಗುಲನ್ನು ಮಾತ್ರ. ಹೀಗೆ ಅದು ರೂಪಾಂತರ ಗಳಿಸಿಕೊಂಡರೂ ಅರ್ಥಾಂತರ ಗಳಿಸಿಕೊಳ್ಳದೆ, ಈ ಉಪನಿಷತ್‌ಸಾರವನ್ನು ಏಷ್ಯ–ಯುರೋಪುಗಳ ಎಲ್ಲೆಡೆಯಲ್ಲೂ ಹರಡಿತು. ಉಪನಿಷತ್ತಿನ ಭಾವಗಳನ್ನು ಪೈಥಾಗೊರಸ್ ಮತ್ತು ಪ್ಲೇಟೋ ಇವರ ವಿಚಾರದ ಬಹುಭಾಗದಲ್ಲಿ ನಾವೀಗ ಕಾಣಬಹುದು. ಅವು ಪ್ಲೇಟೋ ವಾದ ಮತ್ತು ಜ್ಞಾನವಾದಗಳ ರಹಸ್ಯಭಾಗಗಳೆನಿಸಿ ಪಾಶ್ಚಾತ್ಯ ತತ್ವ ವಿಚಾರದ ಮೇಲೆ ತಕ್ಕಮಟ್ಟಿನ ಪ್ರಭಾವವನ್ನು ಬೀರಿವೆ; ಮತ್ತು ಸೂಫಿವಾದವು ಈ ಭಾಗಗಳನ್ನೇ ಇನ್ನೊಂದು ಬಗೆಯ ಧಾರ್ಮಿಕ ಶೈಲಿಯಲ್ಲಿ ಪುನರುಚ್ಚರಿಸುತ್ತದೆ. ಜರ್ಮನ್ ಅತಿಭೌತಶಾಸ್ತ್ರದ ಬಹುಭಾಗವು ಸಾರತಃ ಈ ಪ್ರಾಚೀನ ಉಪದೇಶದಲ್ಲಿ ಹೆಚ್ಚು ಆಧ್ಯಾತ್ಮಿಕವಾಗಿ ಕಂಡ ಸತ್ಯಗಳ ಬೌದ್ಧಿಕ ಬೆಳವಣಿಗೆ ಅಷ್ಟೇ. ಅಲ್ಲದೆ ಆಧುನಿಕ ವಿಚಾರವು ತ್ವರಿತಗತಿಯಿಂದ ಇವನ್ನು ಹೆಚ್ಚು ನಿಕಟವೂ ಸಚೇತನವೂ ತೀವ್ರವೂ ಆಗಿ ಹೀರಿಕೊಳ್ಳುತ್ತಿದೆ. ಇದರಿಂದ ತತ್ವಜ್ಞಾನ ಹಾಗೂ ಧರ್ಮಗಳ ವಿಚಾರಕ್ಷೇತ್ರದಲ್ಲಿ ಒಂದು ಕ್ರಾಂತಿಯೇ ಆಗಬಹುದಾಗಿದೆ; ಇಲ್ಲಿ ಅದು ತೆರೆದ ನೇರವಾದ ಮಾರ್ಗಗಳಿಂದ ಕ್ರಮೇಣ ಹರಿದು ಹೋಗಬಹುದು.

ಈ ಪಳವಾತಿನಲ್ಲಿ ಆಧಾರವನ್ನು, ಮೂಲ ಬೀಜವನ್ನು ಅಥವಾ ಮುನ್ ಸೂಚನೆಯನ್ನು ಕಾಣದ ಭಾರತೀಯ ತತ್ವಶಾಸ್ತ್ರದ ಕಲ್ಪನೆಯೊಂದೂ ಇಲ್ಲ. ಹೀಗಿರುವಾಗ ಈ ಆತ್ಮದರ್ಶನವನ್ನು ಕೆಲವರು ಉತ್ತಮ ಹಿನ್ನೆಲೆ ಇಲ್ಲದ ಹರಕು ಮುರುಕಾದ ಕಾಡಾಡಿಗಳ ನಿಸರ್ಗಾರಾಧನೆ ಮತ್ತು ಪ್ರಾಣಿಪೂಜಾ ಪದ್ಧತಿಗಳು ಅಜ್ಞಾನಿ ಜನಗಳ ವಿಗ್ರಹಾರಾಧನೆ ಎನ್ನುತ್ತಾರೆ! ಹೀಗೆ ವಿಜ್ಞಾನದ ವಿಸ್ತಾರವಾದ ಸಾಮಾನ್ಯ ಸಿದ್ಧಾಂತವೂ ಕೂಡಾ ಎಷ್ಟೋವೇಳೆ ಭಾರತೀಯ ಋಷಿಗಳು ಆಧ್ಯಾತ್ಮಿಕ ಗಾಂಭೀರ್ಯದ ದೃಷ್ಟಿಯಿಂದ ವಿಶಾಲಾರ್ಥದಲ್ಲಿ ಕಲ್ಪಿಸಿದ ಭೌತಿಕ ಸತ್ಯಕ್ಕೆ ಅನುಗುಣವಾಗಿದೆ ಎಂಬುದು ಕಂಡುಬಂದಿದೆ.

ಆದರೂ ಈ ತಾತ್ವಿಕ ವಿಚಾರಗಳು ಬೌದ್ಧಿಕವಲ್ಲ, ಕಲ್ಪನೆಗಳನ್ನು ಲಕ್ಷಣಿಸಿ ಹೇಳುವ ಅತಿಭೌತ ವಿಶ್ಲೇಷಣೆ ಅಲ್ಲ; ಕಲ್ಪನೆಗಳನ್ನು ಆರಿಸಿ, ಅವುಗಳನ್ನು ಸತ್ಯಾಸತ್ಯವೆಂದು ವಿಂಗಡಿಸಿ ತರ್ಕರೂಪಕೊಟ್ಟು ಮನಸ್ಸಿನ ಬೌದ್ಧಿಕ ಪ್ರಿಯ ಹಿತಗಳಿಗನುಗುಣವಾಗಿ ಅವಕ್ಕೆ ವಾದದಿಂದ ಬೆಂಬಲವಿತ್ತು ಆ ಈ ಭಾವ ಸಿದ್ಧಾಂತದ ಬೆಳಕಿನಲ್ಲಿ ಬಾಳಿನ ಸಮಸ್ಯೆಗೆ ವಿಶಿಷ್ಟವಿಚಾರದ ಉತ್ತರವನ್ನು ಕೊಡುವುದರಲ್ಲಿ ಸಮಾಧಾನಹೊಂದಿ ಉಳಿದೆಲ್ಲವನ್ನೂ ಆ ದೃಷ್ಟಿಕೋನದಲ್ಲಿಯೇ ಹಿಡಿದದ್ದಲ್ಲ – ಎಲ್ಲವನ್ನೂ ಅಲ್ಲಿಯೇ ಕೇಂದ್ರೀಕರಿಸಿ ನಿಶ್ಚಿತಾಭಿಪ್ರಾಯಕ್ಕೆ ಬರುವುದಿಲ್ಲ. ಉಪನಿಷತ್ತು ಮೇಲೆ ಹೇಳಿದ ನಮೂನೆಯದೇ ಆಗಿದ್ದರೆ ಅದಕ್ಕೆ ಅಂಥ ಅಮರ ಸತ್ವ, ಅಪ್ರತಿಹತ ಪ್ರಭಾವ, ಅಂಥ ಪರಿಣಾಮಕರತ್ವ ಮತ್ತು ಉಳಿದ ಜ್ಞಾನಶಾಖೆಗಳಲ್ಲಿಯ ಭಿನ್ನ ಮಾರ್ಗಗಳಿಂದ ಕಂಡುಹಿಡಿದುದನ್ನು ಸಮರ್ಥಿಸುವ ಯೋಗ್ಯತೆ ಇರುತ್ತಿದ್ದಿಲ್ಲ. ಉಪನಿಷತ್ತಿಗೆ ಇಂಥ ಅಪಾರಶಕ್ತಿ ಬರಲು ಅದರ ದ್ರಷ್ಟಾರರು ಔಪನಿಷದಿಕ ಸತ್ಯವನ್ನು ಕೇವಲ ವಿಚಾರಿಸಿ ತಿಳಿಯದೆ, ಕಂಡದ್ದೇ ಕಾರಣ; ಹಾಗೆ ಕಂಡದ್ದನ್ನು ಒಂದು ಪ್ರಾತಿಭ ಕಲ್ಪನೆ ಆವಿರ್ಭಾವಕ ಕಲ್ಪನೆಗಳ ಬಟ್ಟೆಯುಡಿಸಿ ಅವರು ನಮ್ಮೆದುರು ಇಟ್ಟಿದ್ದಾರೆ. ಆ ಬಟ್ಟೆಯಾದರೋ ಆದರ್ಶ ಪಾರದರ್ಶಕತೆಯುಳ್ಳದ್ದು. ಅದರ ಮೂಲಕ ನಾವು ಅನಂತದ ಆಳದಲ್ಲಿ ಹೊಕ್ಕು ನೋಡಬಹುದು. ಏಕೆಂದರೆ ಆ ಋಷಿಗಳು ಆತ್ಮಸತ್ತೆಯ ಬೆಳಕಿನಲ್ಲಿ ವಸ್ತುಸತ್ಯದ ಮೂಲವನ್ನು ಕಂಡರು. ಅವರು ಕಂಡದ್ದು ಅಪ್ರಮೇಯದ ದೃಷ್ಟಿಯಿಂದ. ಆದುದರಿಂದಲೆ ಅವರ ಮಾತು ಯಾವಾಗಲೂ ಸನಾತನ, ಸಚೇತನ, ಅಪಾರ ಅರ್ಥಗರ್ಭಿತ, ಅವ್ಯಾಹತ ಪ್ರಮಾಣ, ಅನಾದಿಯಾದ ಅಂತ್ಯಸಿದ್ಧಾಂತ ಎನಿಸಿದೆ. ನಮ್ಮ ಸಂಶೋಧನೆಗಳೆಲ್ಲ ಕಡೆಗೆ ಆ ಸತ್ಯವನ್ನೇ ಮುಟ್ಟುವುವು ಮತ್ತು ಮನುಷ್ಯ ಕುಲವು ತನ್ನ ಯುಗ ಯುಗಗಳ ದರ್ಶನದಲ್ಲಿ ಮಾನಸಿಕವಾಗಿ ಅಲ್ಲಿಗೇ ಹೋಗಿ ಸೇರುತ್ತದೆ. ಉಪನಿಷತ್ತೆಂದರೆ ವೇದಾಂತ, ವೇದಕ್ಕೂ ಹೆಚ್ಚಿನ ಜ್ಞಾನಭಂಡಾರ–ಆದರೆ ಈ 'ಜ್ಞಾನ'ವೆಂಬುದು ಆಳವಾದ ಭಾರತೀಯ ದೃಷ್ಟಿಯ ಅರಿವು. ಅದು ಕೇವಲ ಚಿಂತನ–ವಿಚಾರ–ವಿವೇಚನಾತ್ಮಕ ಬುದ್ಧಿಯಿಂದ ಹುಟ್ಟಿದ್ದಲ್ಲ; ಬೌದ್ಧಿಕ ಮನವು ಮಾನಸ ರೂಪದಲ್ಲಿ ಬೆನ್ನು ಹತ್ತ ಹೋಗಿ ಗ್ರಹಿಸುವ ವಸ್ತುವಲ್ಲ–ಅಂತರಾತ್ಮದ ಶಕ್ತಿಯಿಂದ ನಡೆಸುವ ಸಾಕಲ್ಯಜೀವನ, ಆಧ್ಯಾತ್ಮಿಕ ದರ್ಶನ, ಜ್ಞೇಯ ಗ್ರಹಿಕೆ. ಆತ್ಮದ ಸಾಕಲ್ಯ

ಅನುಭವದಿಂದಲೇ ಈ ತರದ ನೇರವಾದ ಜ್ಞಾನವು ಪೂರ್ಣತೆಯನ್ನು ಪಡೆಯುವುದು ಸಾಧ್ಯವಾಗಿದೆ. ವೇದಾಂತದ ಋಷಿಗಳು ಕಾಣಹೋದದ್ದು ಈ ಆತ್ಮವನ್ನು. ಅದರೊಡನೆ ತಾದಾತ್ಮ್ಯಭಾವದಿಂದ ಬದುಕಲು ಅವರು ಹೊರಟರು ಮತ್ತು ಈ ಪ್ರಯತ್ನದ ಮೂಲಕವೇ ನಮ್ಮೊಳಗಿನ ಆತ್ಮವೂ ಸರ್ವಾತ್ಮವೂ ಒಂದೇ, ಇದೂ ದೇವರೂ ಬ್ರಹ್ಮನೂ ಅತಿಮಾನಸ ಅಸ್ತಿತ್ವವೂ ಒಂದೇ ಎಂದು ಅವರು ಸುಲಭವಾಗಿ ಕಂಡರು, ಅನುಭವಿಸಿದರು, ವಿಶ್ವದ ಸಕಲ ವಸ್ತುಗಳ ಅಂತಃಸತ್ವದಲ್ಲಿ ಬಾಳಿದರು–ಈ ಏಕಮೇವಾದ್ವಿತೀಯವೂ, ಐಕ್ಯಕಾರಕವೂ ಆದ ದರ್ಶನದ ಬೆಳಕಿನಲ್ಲಿ ಮನುಷ್ಯನ ಒಳ ಹೊರ ಬಾಳಿನ ಅಂತಃಸತ್ಯದಲ್ಲಿ ನೆಲಸಿದರು. ಉಪನಿಷತ್ತೆಂದರೆ ಆತ್ಮಜ್ಞಾನ, ಪ್ರಪಂಚಜ್ಞಾನ ಮತ್ತು ದೇವಜ್ಞಾನಗಳ ಮಹಾಪುರಾಣ ಸೂಕ್ತ. ಅದು ತುಂಬಿಕೊಂಡಿರುವ ತಾತ್ವಿಕ ಸತ್ಯದ ಮಹಾಪ್ರಕ್ರಿಯೆಗಳು ಕೇವಲಶುಷ್ಕಬೌದ್ಧಿಕ ಸಿದ್ಧಾಂತಗಳಲ್ಲ, ಆತ್ಮವನ್ನು ಕಲಕಿ ಮೇಲೆತ್ತದೆ ಬರಿದೆ ಮನಸ್ಸಿಗೆ ಹೊಳೆದು ಮಾಯವಾಗತಕ್ಕವಲ್ಲ. ಅವು ಪ್ರಾತಿಭ ಹಾಗೂ ಆವಿರ್ಭಾವಕ ಪ್ರಕಾಶದ ಜ್ಯೋತಿಗಳು, ಎರಡಿಲ್ಲದ ಸತ್ತಾ ಮಾತ್ರ ಶರೀರಿಯಾದ ಅತಿಮಾಸನ, ದಿವ್ಯ ಹಾಗೂ ವಿಶ್ವವ್ಯಾಪಕ ಆತ್ಮದ ಕಾಣಿಕೆಗಳು, ಸ್ವರಗಳು. ಅಷ್ಟೇ ಅಲ್ಲದೆ ಅವುಗಳಲ್ಲಿ ಈ ವಿಶಾಲ ವಿಶ್ವದ ಸೃಷ್ಟಿಯಲ್ಲಿಯ ಚರಾಚರಗಳಿಗೂ ಮೇಲೆ ಹೇಳಿದ ಪರಮಾತ್ಮ ಪದಾರ್ಥಕ್ಕೂ ಅನ್ವಯಿಸಿ ಹೇಳಿದ ಸ್ಫೂರ್ತ ಜ್ಞಾನದ ಮಂತ್ರಗಳಿವೆ. ಮಿಕ್ಕ ಸೂಕ್ತಗಳಂತೆ ಅವುಗಳಲ್ಲಾದರೂ ಧಾರ್ಮಿಕ ಧ್ಯೇಯ ಹಾಗೂ ದಿವ್ಯ ಉನ್ಮಾದಗಳ ಧಾಟಿ ಕಂಡುಬರುತ್ತದೆ; ಆದರೆ ಅದು ಕೆಳಮಟ್ಟದ ಧಾರ್ಮಿಕ ಭಾವನೆಯದಲ್ಲ; ಆಳವಾದರೂ ಅವುಗಳ ದೃಷ್ಟಿಯು ಅಸಂಕುಚಿತ ಪಕ್ಷಪಂಥಗಳನ್ನು ಮೀರಿದ್ದು, ಸ್ವಯಂಭುವೂ ವಿಶ್ವವ್ಯಾಪಕವೂ ಆದ ಆತ್ಮ ತತ್ವದ ಐಕ್ಯವನ್ನು ಸಾಧಿಸಿದಾಗ ನಮಗೆ ಬರುವ ಸಚ್ಚಿದಾನಂದದ ಆರಾಧನೆಯ ವಿಶಿಷ್ಟ ರೂಪಗಳಿಗೆ ಸೇರಿದ್ದು. ಮನುಷ್ಯನ ಹೊರ ಬಾಳಿಗೆ ನೇರವಾಗಿ ಸಂಬಂಧಿಸದೆ ನೇರವಾಗಿ ಅಂತರ್‌ದರ್ಶನಕ್ಕೇ ಸಂಬಂಧಿಸಿದ ಆ ದೃಷ್ಟಿಯು ಧೀರ ಗಂಭೀರ ವಾಣಿಯಿಂದ ಹೇಳಿದ ಮಾತುಗಳಿಂದಲೇ ಉತ್ತರ ಕಾಲೀನ ಅತ್ಯುನ್ನತ ನೀತಿತತ್ವಗಳು ಹೊರಟಿವೆ. ಉಪನಿಷತ್ತುಗಳಲ್ಲಿ ಯಾವುದೇ ಒಂದು ವಿಶಿಷ್ಟ ನೀತಿತತ್ವ ಅಥವಾ ಸದ್ಗುಣದ ಮಾನಸಿಕ ನಿಯಮವನ್ನು ಮೀರಿದ, ಸಕಲ ಚರಾಚರ ಮತ್ತು ದೇವರಲ್ಲಿಯ ಐಕ್ಯವನ್ನಾಧರಿಸಿದ ಆಧ್ಯಾತ್ಮಿಕ ಕಾರ್ಯದ ಮಹಾದರ್ಶನ ಕಂಡುಬರುತ್ತದೆ. ಆದ್ದರಿಂದ ವೈದಿಕ ಪಂಥದ ವಿವಿಧ ಆಚಾರ–ವ್ಯವಹಾರಗಳು ಅಳಿದುಹೋದ ಮೇಲೂ ಉಪನಿಷತ್ತು ಸಜೀವವೂ ರಚನಾತ್ಮಕವೂ ಆಗಿ ಉಳಿದು ಭಕ್ತಿಪ್ರಧಾನವಾದ ಮಹಾಧರ್ಮಗಳಿಗೆ ಜನ್ಮವಿತ್ತು, ಸತತವಾಗಿ ಬಂದ ಭಾರತೀಯ ಧರ್ಮಭಾವವನ್ನು ಪ್ರಚೋದಿಸಲು ಶಕ್ತವಾಯಿತು. ಉಪನಿಷತ್ತಿನ ಪ್ರತಿಮಾ ಸಂಪುಟವು ಹೆಚ್ಚಾಗಿ ವೈದಿಕ. ಆದರೆ ಎಷ್ಟೋ ಸಾರಿ ವೇದಕ್ಕಿಂತ ಹೆಚ್ಚು ಸ್ಪಷ್ಟವೂ ನೇರವೂ ಆದ ಪ್ರಕಾಶಕ ಪ್ರತಿಮೆಯನ್ನು ಅದು ಬಳಸುತ್ತದೆ. ಅನೇಕ ವೇಳೆ ಅದು ವೈದಿಕ ಸತ್ವಕ್ಕೆ ಅನುಗುಣವಾದ, ಹೆಚ್ಚು ತಾಂತ್ರಿಕವಲ್ಲದ, ಪ್ರಾಚೀನ ಸಂಕೇತಪದ್ಧತಿಗೆ

ಸಹಜವಾದ ಪ್ರತಿಮೆ–ಪ್ರತೀಕಗಳನ್ನೇ ತಂದಿದೆ. ಇದು ನಮ್ಮ ಇಂದಿನ ವಿಚಾರಸರಣಿಗೆ ಬೇಗ ಒಳಪಡುವುದಿಲ್ಲ. ಆದ್ದರಿಂದಲೇ ಸೋತು ಕೆಲ ಪಾಶ್ಚಾತ್ಯ ಪಂಡಿತರು ಈ ಶ್ರುತಿ ಗ್ರಂಥರಾಶಿಯು ಏಕಕಾಲದಲ್ಲಿ ಅತ್ಯುದಾತ್ತ ತಾತ್ವಿಕ ವಿಚಾರಗಳ ಹಾಗೂ ಮಾನವ ಕುಲದ ಮಗುಬಗೆಯ ಮೊದಲ ತೊದಲ ಮಿಶ್ರಣ ಎಂದು ಕೂಗಿದ್ದಾರೆ. ಉಪನಿಷತ್ತು ವೈದಿಕ ಬಗೆಯನ್ನು ಬಿಟ್ಟು ಬಹುದೂರ ಹೋದ ಕ್ರಾಂತಿಕಾರಕ ಗ್ರಂಥವಲ್ಲ. ಅದು ವೈದಿಕ ಮನೋಧರ್ಮ ಹಾಗೂ ಮೂಲಭೂತ ಕಲ್ಪನೆಗಳನ್ನು ಬಿಟ್ಟು ಹೋದುದಲ್ಲ; ಅವುಗಳ ಮುಂದೋಟ ಹಾಗೂ ಮುನ್ನೆಲೆ ಎನಿಸಿದೆ: ಅಲ್ಲದೆ ಕೆಲಮಟ್ಟಿಗೆ ವಿಸ್ತೃತ ರೂಪಾಂತರವೂ ಆಗಿದೆ. ಅದರಲ್ಲಿ ವೇದವಾಣಿಯು ಅದ್ಭುತ ರಹಸ್ಯವಾಗಿಟ್ಟ ಸಂಕೇತಗತ ಅರ್ಥವೆಲ್ಲವನ್ನೂ ಸ್ಪಷ್ಟಪಡಿಸಲಾಗಿದೆ. ಅದು ವೇದ ಮತ್ತು ಬ್ರಾಹ್ಮಣಗಳ ಪ್ರತಿಮಾಸಂಪುಟವಾಗಿದೆ ಹಾಗೂ ಧರ್ಮಕರ್ಮ ಪ್ರತೀಕಗಳನ್ನು ತೆಗೆದುಕೊಂಡು ಆರಂಭಿಸಿ ಅವುಗಳ ಒಳ ಯೋಗಾರ್ಥವನ್ನು ಬೆಳಕಿಗೆ ತರುತ್ತದೆ; ಹೀಗೆ ಬೆಳಕಿಗೆ ತಂದ ಅರ್ಥವು ಅದರ ಉನ್ನತ ರೀತಿಯಲ್ಲಿ ವಿಕಾಸ ಹೊಂದಿದ ಮತ್ತು ಶುದ್ಧ ಆಧ್ಯಾತ್ಮಿಕ ಎನಿಸಿದ ತತ್ವಜ್ಞಾನಕ್ಕೆ ಬೀಜವಾಗಿದೆ. ಅನೇಕ ಗದ್ಯಮಯ ಉಪನಿಷತ್ತುಗಳಲ್ಲಿ ಈ ತೆರನಾದ ಉದಾಹರಣೆಗಳು ಸಿಕ್ಕುತ್ತವೆ. ಇವುಗಳಲ್ಲಿ ಹಳ ಕಗ್ಗದ ಮಾದರಿಯ, ಆಧುನಿಕರಿಗೆ ಅರ್ಥ ಮಾಡಲಾಗದ ವೈದಿಕ ಧಾರ್ಮಿಕ ಪ್ರಜ್ಞೆಯು ಜಾಗೃತವಾಗಿದ್ದ ಅಂದಿನ ಪ್ರತಿಮಾ ಕಲ್ಪನೆಗಳ ಅಂತರಾರ್ಥಗಳಲ್ಲಿ ಅಡಗಿದೆ. ವೇದತ್ರಯ–ಲೋಕತ್ರಯ ಹಾಗೂ ಆ ತರಹದ ಇತರ ಲೋಕಗಳ ವಿವೇಕ ಅಲ್ಲಿ ಇದೆ. ಆದರೆ ಅದು ಉಪನಿಷತ್ತಿನ ಅತಿ ಆಳವಾದ ಆಧ್ಯಾತ್ಮಿಕ ಸತ್ಯಕ್ಕೆ ಒಯ್ಯುತ್ತದೆ. ಆದರೆ ಅಂತಹ ಅವತರಣಿಕೆಗಳನ್ನು ಅರ್ಥವಿಲ್ಲದ ಶೈಶವ ಬುದ್ಧಿಯ ವಿಕಾರ ಎಂದು ಕಿತ್ತೆಸೆಯಲಾಗದು. ತದ್ವಿರುದ್ಧವಾಗಿ ಒಮ್ಮೆ ಅದರ ಒಳಗಿನ ಸಂಕೇತವನ್ನು ಗ್ರಹಿಸಿದೆವಾದರೆ ಅದರಲ್ಲಿ ಗಭೀರಾರ್ಥ ಇದೆ ಎಂಬುದು ನಮಗೆ ಹೊಳೆಯುತ್ತದೆ. ಈಗ ನಾವು ಹೆಚ್ಚು ಬೌದ್ಧಿಕವೂ ಕಡಿಮೆ ಮೂರ್ತವೂ ಆದ ರೂಪಕ ಪದಗಳನ್ನು ಬಳಸಿ ಹೇಳುವ ಮಾನಸ–ಮಾನಸೋತ್ತರ ಪ್ರಜ್ಞಾಸ್ಥಲಕ್ಕೆ ಮುಟ್ಟಿಸುವ ಭೌತಮಾನಸ ಉತ್ಪಥಗಮನಗಳಲ್ಲಿ ಇದು ಕಂಡುಬರುತ್ತದೆ. ಈ ಅಂಶವು ಯೋಗಾಭ್ಯಾಸ ಮಾಡಿ ನಮ್ಮ ಭೌತಮಾನಸ ಹಾಗೂ ಮಾನಸ–ಮಾನಸೋತ್ತರ ಅಸ್ತಿತ್ವದ ರಹಸ್ಯಗಳನ್ನು ಭೇದಿಸಿದವರಿಗೆ ಸಮಂಜಸವಾಗಿಯೇ ತೋರುತ್ತದೆ. ಸ್ವಪ್ನ–ಸುಷುಪ್ತಿಗಳನ್ನು ವಿವರಿಸುವ ಅಜಾತ ಶತ್ರುವಿನ ಮಾತು, ಪ್ರಾಣತತ್ವ ಮತ್ತು ಅದರ ಚಟುವಟಿಕೆಗಳನ್ನು ಕೊಡುವ ಉಪನಿಷತ್ತಿನ ಪ್ರಶ್ನೋತ್ತರ ಭಾಗ, ವೈದಿಕ ಕಲ್ಪನೆ ಎನಿಸಿದ ದೇವಾಸುರ ಘರ್ಷಣವನ್ನು ಆಧ್ಯಾತ್ಮಿಕ ಸಂಕೇತವಾಗಿ ತೆಗೆದುಕೊಂಡ ಪ್ರಕರಣ, ವೈದಿಕ ದೇವತೆಗಳನ್ನು ಋಕ್ ಸಾಮವೇದಗಳಿಗಿಂತ ಹೆಚ್ಚು ಸ್ಪಷ್ಟವಾಗಿ ವರ್ಣಿಸಿ ಅವುಗಳ ಅಂತಃಕೃತ್ಯ ಮತ್ತು ಆಧ್ಯಾತ್ಮಿಕ ವಿಭೂತಿಗಳ ಬೆಳಕಿನಲ್ಲಿ ಆಹ್ವಾನಿಸಿದ ಅವತರಣಿಕೆ ಮುಂತಾದವು ಮೇಲೆ ಹೇಳಿದಂತೆ ಪಾವಕಪ್ರಜ್ಞೆಯ ಸತ್ಯಗಳನ್ನು ಹೇಳುವ ವಿಲಕ್ಷಣ ಮಾತುಗಳೆನಿಸಿವೆ.

ವೈದಿಕ ಕಲ್ಪನೆ ಮತ್ತು ಪ್ರತಿಮೆಗಳನ್ನು ಬೆಳೆಸಿ ಬಳಸಿಕೊಂಡ ಅವತರಣಿಕೆಗೆ ಈ ಕೆಳಗೆ ಕಂಡ ತೈತ್ತಿರೀಯ ಭಾಗವನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಈ ಭಾಗದಲ್ಲಿ ಇಂದ್ರನು ಸ್ಪಷ್ಟವಾದ ದೇವತಾಶಕ್ತಿಯಾಗಿ ಪ್ರತ್ಯಕ್ಷಗೋಚರಿಸುತ್ತಾನೆ.

"ವಿಶ್ವರೂಪನೂ ವೇದಗಳಲ್ಲಿ ಅತ್ಯಂತ ಶ್ರೇಷ್ಠನೂ ಆದ ಇಂದ್ರನು ಅಮೃತದಿಂದೊಗೆದ ಛಂದಸ್ಸಿನಿಂದ (ವೇದಮಂತ್ರ) ಹುಟ್ಟಿದನು. ಆ ಇಂದ್ರನು ನನ್ನನ್ನು ಮೇಧಾಸಂಪನ್ನನನ್ನಾಗಿ ಮಾಡುವಂತಾಗಲಿ. ಹೇ ದೇವನೆ! ನಾನು ಅಮೃತವನ್ನುಧರಿಸುವಂಥವನಾಗಲಿ. ನನ್ನ ಶರೀರವು ಚಟುವಟಿಕೆಯುಳ್ಳದ್ದಾಗಲಿ, ನನ್ನ ಜಿಹ್ವೆಯು ಮಧುರವಾದ ನುಡಿಯನ್ನು ಹೇಳುವಂತಾಗಲಿ, ನನ್ನ ಕಿವಿಗಳು ಸುಜ್ಞಾನವನ್ನು ಹೇರಳವಾಗಿ ಕೇಳಲಿ; ನೀನು ಬುದ್ಧಿಯಿಂದ ಮರೆಮಾಡಿ ಮುಚ್ಚಲ್ಪಟ್ಟಿರುವ ಬ್ರಹ್ಮನ ಕೋಶವಿರುವೆ.

ಮತ್ತು ಈಶಾವಾಸ್ಯದ ಒಂದು ಭಾಗವನ್ನು ಈ ಮಾದರಿಗೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಅದರಲ್ಲಿ ಜ್ಞಾನಾಧಿದೇವತೆಯನ್ನಾಗಿ ಸೂರ್ಯ ದೇವನನ್ನು ಆಹ್ವಾನಿಸಲಾಗಿದೆ. ಸತ್ವದ ಏಕತ್ವವೇ ಅವನ ಅತ್ಯುನ್ನತ ಪ್ರಕಾಶ; ನಮ್ಮ ಮಾನಸಪ್ರಜ್ಞೆಯ ಮೇಲೆ ಹರಡಿದ ಕಿರಣಗಳೇ ನಮ್ಮ ಮಾನಸ ಪ್ರಜ್ಞೆಯ ಬೆಳರ್‌ವಾಸು. ಈ ಹಾಸು ಆತನ ಅಪಾರ ಅತಿಮಾನಸ ಸತ್ಯವನ್ನು ಅಡಗಿಸಿ ಇಟ್ಟುಕೊಂಡಿದೆ. ಅದೇ ಈ ಸೂರ್ಯದೇವನ ಶರೀರ ಮತ್ತು ಆತ್ಮ–ಅಂತರಾತ್ಮ, ಅಮರಾತ್ಮಗಳ ಸಾರಸರ್ವಸ್ವ.

"ಸತ್ಯದ ಮುಖವು ಚಿನ್ನದ ಮುಚ್ಚಳದಿಂದ ಮುಚ್ಚಲ್ಪಟ್ಟಿರುವುದು. ಹೇ ಪೂಷನ್! (ಜ್ಞಾನಸೂರ್ಯನೆ) ಸತ್ಯಧರ್ಮಕ್ಕೋಸುಗ, ಸತ್ಯದರ್ಶನಕ್ಕಾಗಿ ಆ ಮುಚ್ಚಳವನ್ನು ತೆರೆ. ಹೇ ಯಮನೇ, ಸೂರ್ಯನೇ, ಹೇ ಪ್ರಜಾಪತಿಪುತ್ರನೇ, ನಿನ್ನ ರಶ್ಮಿಗಳ ಸಮೂಹವನ್ನು ಏಕೀಕರಿಸು. ಕಲ್ಯಾಣತಮವಾದ ನಿನ್ನ ತೇಜೋರೂಪವು ನನ್ನ ಮುಂದೆ ಕಂಗೊಳಿಸುತ್ತಿರುವುದು. ಅಲ್ಲಿ ಗೋಚರನಾಗುವ ಅಗೋ! ಆ ಪುರುಷನು–ಅವನೇ ನಾನು (ಸೋಹಂ ಅಸ್ಮಿ)"

ವೇದಶೈಲಿಗೂ ಈ ಅವತರಣಿಕೆಗಳ ರೀತಿಗೂ ಇರುವ ಹೋಲಿಕೆ ಸುವ್ಯಕ್ತ. ಮೇಲಿನ ಎರಡನೆಯ ಅವತರಣಿಕೆ ವೇದದಲ್ಲಿ ಅತ್ರಿ ಹೇಳಿದ ಅಂಶವನ್ನು ಇನ್ನಷ್ಟು ತಿಳಿಯಾಗಿ ತಿಳಿಸುತ್ತದೆ. "ನಿನ್ನ ಸತ್ಯದಲ್ಲಿ ಅಸತ್ಯವು ಅಡಗಿದೆ. ಅದು ಸೂರ್ಯದೇವನ ಕುದುರೆಗಳನ್ನು ಕೊರಳು ಹರಿಯುವ ಸ್ಥಳದಲ್ಲಿ ಸದಾ ಸ್ಥಿರವಾಗಿ ಇರುತ್ತದೆ. ಅಲ್ಲೇ ದಶಸಹಸ್ರಗಳು ಒಟ್ಟು ನಿಂತಿವೆ. ಅದೇ ಆ ಏಕಮೇವಾದ್ವಿತೀಯ ಬ್ರಹ್ಮ–ಸದೇಹ ದೇವತೆಗಳ ಅತ್ಯುನ್ನತ ಅಧಿಷ್ಠಾನ ದೇವತೆಯನ್ನು ನಾನು ಕಂಡೆ." ನಮ್ಮ ಇಂದಿನ ಮನೋಧರ್ಮಕ್ಕೆ ಈ ವೇದ ವೇದಾಂತಗಳ ಸಂಕೇತಸಂಪುಟ ತೀರ ಹೊಸತು. ನಾವು ಸಂಕೇತದ ಸಜೀವ ಸತ್ಯವನ್ನು ನಂಬುವುದಿಲ್ಲ. ಏಕೆಂದರೆ ಬುದ್ಧಿಯಿಂದ ಭಯಗೊಳಿಸಲ್ಪಟ್ಟ ಅವಿರ್ಭಾವಕ ಕಲ್ಪನಾಶಕ್ತಿಯು ಮಾನಸ–ಮಾನಸೋತ್ತರ

ದರ್ಶನವನ್ನು ತಾದಾತ್ಮ್ಯಭಾವದಿಂದ ಗ್ರಹಿಸಿ ರೂಪಿಸಿಡುವ ಧೈರ್ಯವನ್ನು ಕಳೆದುಕೊಂಡಿದೆ. ಆದರೆ ಎಂದೆಂದೂ ಅದು ಬಾಲಭಾಷಿತವಲ್ಲ–ಪ್ರಾಚೀನ ಪ್ರಾಕೃತ ಕೀಳ್‌ಗಾಣ್ಕೆಗೆ ಹರಿದಾರಿ ದೂರವಿದೆ. ಈ ಸ್ಫುಟ, ಸಚೇತನ, ಜ್ಯೋತಿರ್ಮಯ ಕವಿಪ್ರತಿಭೆಯ ಭಾಷೆಯು ಅತ್ಯುನ್ನತವಾಗಿ ವಿಕಾಸಹೊಂದಿದ ಸ್ವಾಭಾವಿಕವಾಹಕ.

ಉಪನಿಷತ್ತಿನ ಈ ಹೊಳಹಿನ ಹೊನಲು ಇಂಥ ಸ್ಥೂಲ ಸಂಕೇತ ಪ್ರತೀಕ ರೂಪಕಗಳಿಂದಾರಂಭವಾಗುತ್ತದೆ. ಅದು ಮೊದಲು ತೆಗೆದುಕೊಳ್ಳುವುದು ಯೋಗಿಗಳ ಮನಸ್ಸಿಗೆ ಚೆನ್ನಾಗಿ ಅರ್ಥವಾಗುವ, ಆದರೆ ಆ ಆಳವಾದ ಅರ್ಥವನ್ನು ಸಾಮಾನ್ಯ ಬುದ್ಧಿಗೆ ತೋರಗೊಡದ ರಹಸ್ಯಮಯವಾದ ಆರ್ಷಪದಗಳನ್ನು ತೆಗೆದುಕೊಂಡು ಹೆಚ್ಚು ಸ್ಫುಟವಾದ ಮಾತಿಗೆ ಹೊಂದಿಸಿ, ಅನಂತರ ಅವುಗಳನ್ನು ಮೀರಿ ಮತ್ತೊಂದು ಭವ್ಯವಾಗಿ ತೆರೆದ ಉದಾತ್ತ ಸಂಕೇತ ಸಂಪುಟ ಮತ್ತು ರಚನಾಬಂಧದತ್ತ ಹರಿದು ಒಮ್ಮಿಂದೊಮ್ಮೆ ಸಕಲ ವಿಭವಸಹಿತವಾಗಿ ಆಧ್ಯಾತ್ಮಿಕ ಸತ್ಯವನ್ನು ಬಯಲುಮಾಡುತ್ತದೆ. ಗದ್ಯಮಯ ಉಪನಿಷದ್ ಗ್ರಂಥಗಳು ಭಾರತದ ಹಲವಗೆಯ ಈ ಕ್ರಮವನ್ನು ತೋರಿಸಿಕೊಡುತ್ತವೆ. ಈ ಕ್ರಮದ ಮುಖ್ಯ ಸೂತ್ರವೆಂದರೆ ಸಂಕೇತವನ್ನು ಉಪಯೋಗಿಸಿಕೊಂಡು ಅದನ್ನು ಮೀರಿ ಆಧ್ಯಾತ್ಮಿಕ ಅರ್ಥವನ್ನು ಹೊಳೆಯಿಸುವ ಸ್ಫುಟ ಉದ್ಗಾರಕ್ಕೆ ಏರುವುದೇ ಆಗಿದೆ. ಯೋಗಾಕ್ಷರವಾದ ಓಂಕಾರದ ಅರ್ಥ ಮತ್ತು ಸಾಮರ್ಥ್ಯಗಳನ್ನು ಹೇಳಹೊರಟ ಪ್ರಶ್ನೋಪನಿಷತ್ತಿನ ಅವತರಣಿಕೆಯು ಉಕ್ತಕ್ರಮದ ಈ ಕೆಳಗಿನ ಪೂರ್ವಾವಸ್ಥೆಯನ್ನು ಉದಾಹರಿಸುತ್ತದೆ.

"ಹೇ ಸತ್ಯಕಾಮನೇ, ಈ ಓಂಕಾರವೆಂಬುದು ಪರ ಮತ್ತು ಅಪರಬ್ರಹ್ಮವು. ಆದುದರಿಂದ ಬ್ರಹ್ಮಜ್ಞನೂ ಇದರ ಆಧಾರದಿಂದಲೇ ಎರಡರಲ್ಲಿ (ಪರ, ಅಪರಬ್ರಹ್ಮಗಳಲ್ಲಿ) ಒಂದನ್ನು ಸಂಪಾದಿಸುವನು. ಏಕಮಾತ್ರೆಯನ್ನಷ್ಟೇ ಧ್ಯಾನಿಸುವವನು, ಅದರಿಂದಲೇ ಜ್ಞಾನವನ್ನು ಹೊಂದಿ ಭೂಮಿಯ ಮೇಲೆ ಕ್ಷಿಪ್ರದಲ್ಲಿಯೇ ಸಂಪನ್ನನಾಗುವನು. ಅವನನ್ನು ಋಚೆಗಳು (ಋಕ್‌ಗಳು) ಮನುಷ್ಯಲೋಕಕ್ಕೆ ಒಯ್ಯುವುವು. ಅಲ್ಲಿ ತಪಸ್ಸು ಮತ್ತು ಬ್ರಹ್ಮಚರ್ಯೆ ಮತ್ತು ಶ್ರದ್ಧೆಗಳಿಂದ ಸಂಪನ್ನನಾಗಿ ಆತ್ಮದ ವೈಭವವನ್ನು ಅನುಭವಿಸುವನು. ಇನ್ನು ಮನಸ್ಸಿನಲ್ಲಿ ದ್ವಿಮಾತ್ರೆಯ ಕೂಡ ಮುಕ್ತನಾಗುವವನು ಅಥವಾ ಧ್ಯಾನಮಾಡುವವನು ಯಜುರ್ವೇದದ ಮಂತ್ರಗಳಿಂದ ಚಂದ್ರಲೋಕಕ್ಕೆ ಒಯ್ಯಲ್ಪಡುವನು. ಅವನು ಸೋಮಲೋಕದಲ್ಲಿ ಆತ್ಮದ ವೈಭವವನ್ನು ಅನುಭವಿಸುವನು ಮತ್ತು ಮರಳಿ ಬರುವನು. ಆದರೆ ತ್ರಿಮಾತ್ರೆಯಾದ ಈ ಓಂ ಎಂಬ ಅಕ್ಷರದ ಮುಖೇನ ಪರಮಪುರುಷನ ಚಿಂತನೆಯನ್ನು ಮಾಡುವವನು ತೇಜಃಸಂಪನ್ನನಾದ ಸೂರ್ಯನ ಲೋಕಕ್ಕೆ ಹೋಗುವನು. ಅವನು ಪೊರೆಬಿಚ್ಚಿದ ಹಾವಿನಂತೆ ಪಾಪಮುಕ್ತನಾಗಿ ಸಾಮವೇದದ ಮಂತ್ರಗಳಿಂದ ಬ್ರಹ್ಮ ಲೋಕಕ್ಕೆ ಒಯ್ಯಲ್ಪಡುವನು. ಅವನು ಜೀವಚೈತನ್ಯದ ಆಚೆಗಿರುವ ಶರೀರಸ್ಥ ಪರಾತ್ಪರಪುರುಷನನ್ನು ಈ ಭವ್ಯಲೋಕದಲ್ಲಿ ಸಾಕ್ಷಾತ್ಕರಿಸಿಕೊಳ್ಳುವನು. ಓಂಕಾರದ ಈ ಮೂರು ಮಾತ್ರೆಗಳ ಪ್ರತ್ಯೇಕ ಪ್ರಯೋಗವೂ

ನಾಶಹೊಂದುವಂತಹುದು. ಆದರೆ ಅವುಗಳನ್ನು ಒಟ್ಟಿಗೆ, ಏಕವಾಗಿ, ಬಿಡಿಸದೆ ಬಾಹ್ಯಾಭ್ಯಂತರ ಮಧ್ಯಮ ಕ್ರಿಯೆಗಳಲ್ಲಿ ಚೆನ್ನಾಗಿ ಪ್ರಯೋಗಿಸುವಲ್ಲಿ ಅದರ ಫಲವು ಸ್ಥಿರವೂ ನಾಶರಹಿತವೂ ಆದದ್ದು. ಋಗ್ವೇದದಿಂದ ಈ ಲೋಕವನ್ನೂ ಯಜುರ್ವೇದದಿಂದ ಅಂತರಿಕ್ಷವನ್ನೂ ಸಾಮವೇದದಿಂದ ಋಷಿಗಳು ತಿಳಿಸಿಕೊಡುವ ಪರಮ ಪದವನ್ನೂ ಜ್ಞಾನಿಯು ಸಂಪಾದಿಸುವನು. ಜ್ಞಾನಿಯು ಓಂಕಾರಮಂತ್ರದ ಆಧಾರದಿಂದ ಶಾಂತವಾದ, ಮುಪ್ಪಿಲ್ಲದ, ನಿರ್ಭಯವಾದ ಮತ್ತು ಅಮೃತ ಪರಮಪದವನ್ನು ಗೆಲ್ಲುವನು."

ಈ ಸಂಕೇತಗಳು ನಮ್ಮ ಬುದ್ಧಿಗೆ ಇನ್ನೂ ಚೆನ್ನಾಗಿ ಗಮ್ಯವಾಗಿಲ್ಲ. ಆದರೆ ಅವು ಭಿನ್ನಭಿನ್ನ ಆಧ್ಯಾತ್ಮಿಕ ಸಾಕ್ಷಾತ್ಕಾರಗಳಿಗೆ ಒಯ್ಯುವ ಇಂದ್ರಿಯಾತೀತ ಅನುಭವದ ಉಲ್ಲೇಖಗಳೆಂಬುದಕ್ಕೆ ಪುರಾವೆಗಳು ಇವೆ.

ಇಂಥ ಸಾಕ್ಷಾತ್ಕಾರಗಳು ಮೂರು: ಬಾಹ್ಯ, ಮಾನಸ ಮತ್ತು ಅತಿಮಾನಸ ಎಂದು. ಕೊನೆಯದಾದ ಅತಿಮಾನಸದಿಂದಲೇ ನಾವು ಪರಿಪೂರ್ಣತೆಯನ್ನು ಅಮರಾತ್ಮದ ಪ್ರಶಾಂತ ಕಾಲಾತೀತ ಅವಸ್ಥೆಯಲ್ಲಿ ಇಡಿ ಅಸ್ತಿತ್ವದ ಸಮಗ್ರ ಸಂಪೂರ್ಣ ಕಾರ್ಯವನ್ನು ನಾವು ಹೊಂದಬಹುದು. ಅನಂತರ ಮಾಂಡೂಕ್ಯ ಉಪನಿಷತ್ತಿನಲ್ಲಿ ಮಿಕ್ಕ ಸಂಕೇತಗಳೆಲ್ಲವನ್ನೂ ಬದಿಗೊತ್ತಿ ಅನ್ಯಾದೃಶ ಅರ್ಥದ ಎಡೆಗೆ ನಮ್ಮನ್ನು ಒಯ್ಯಲಾಗಿದೆ. ಆಮೇಲೆ ಆಧುನಿಕ ವಿಚಾರವು ತನ್ನದೇ ಆದ ಬೌದ್ಧಿಕ, ತಾರ್ಕಿಕ ಹಾಗೂ ವೈಜ್ಞಾನಿಕ ಕ್ರಮದಿಂದ ಮುಟ್ಟುತ್ತಿರುವ ಜ್ಞಾನವು ಪ್ರಕಟವಾಗುವುದು. ಆ ಜ್ಞಾನವೆಂದರೆ ನಮ್ಮ ಬಾಹ್ಯಪ್ರಜ್ಞೆಯ ಹಿನ್ನೆಲೆಯಲ್ಲಿರುವ ಉದಾತ್ತಪ್ರಜ್ಞೆ ಕಾರ್ಯನಡೆಸುವ ಅಂಶ. ಆ ಪ್ರಜ್ಞೆ ತೀರ ಭಿನ್ನವಾದುದೆಂದೂ ಹೇಳಲು ಬರದು. ಯಾಕಂದರೆ, ನಮ್ಮ ಜಾಗೃತ ಚೇತನೆಯು ಅದೇ ಮೇಲ್ಮಯ್ಯಾಗಿದೆ. ಅದರ ಮೇಲೆ ಆಧ್ಯಾತ್ಮಿಕ ಅತಿಮಾನಸ ಚೇತನೆ ಇದೆಯೆಂದು ನಾವು ಈಗಲೂ ಹೇಳುತ್ತೇವೆ. ಅದು ಬಹುಶಃ ನಮ್ಮ ಅಸ್ತಿತ್ವದ ಅತ್ಯುನ್ನತಾವಸ್ಥೆ ಮತ್ತು ಪರಮರಹಸ್ಯ ಪ್ರಶ್ನೋಪನಿಷತ್ತಿನ ಉಕ್ತ ಅವತರಣಿಕೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಈ ಜ್ಞಾನ ಆಗಲೇ ಅಲ್ಲಿ ಹೇಳಿದೆ ಎಂದು ಗೊತ್ತಾಗುತ್ತದೆ. ಆದುದರಿಂದ ಇವು ಮತ್ತು ಇನ್ನಿತರ ಋಷಿವಾಕ್ಯಗಳನ್ನು ಅವು ಎಷ್ಟೇ ಕಠಿನವೆಂದು ನಮ್ಮ ತರ್ಕಬುದ್ಧಿಗೆ ತೋರಿದರೂ ಬಾಲದರ್ಶನವೆಂದು ತೆಗೆದು ಹಾಕಲು ಬಾರದು. ಹಾಗಾದರೆ ಅವು ಅಂದಿನ ಕಾಲದ ಮನೋಧರ್ಮಕ್ಕೆ ಅನುಗುಣವಾದ ರೂಪಕೋಕ್ತಿಗಳು. ತನ್ನ ಮಾರ್ಗದಲ್ಲಿಯೇ ಇಂದು ವಿಚಾರ ಮುಂಬರಿದು ಅವೆಲ್ಲಾ ಪರಮಸತ್ಯವೆಂದು ತೋರಿಸಿಕೊಡುತ್ತಿದೆ.

ಈ ಅತಿಪ್ರಭಾವಿಯಾದ ಸಂಕೇತಪದ್ಧತಿಯನ್ನು ಪದ್ಯಮಯ ಉಪನಿಷದ್ ಗ್ರಂಥಗಳು ಮುಂದುವರಿಸಿಕೊಂಡು ಹೋಗಿ ಈ ಮೇರೆಯನ್ನು ಮೀರಿ ಸ್ಫುಟ ಉದ್ಗಾರದ ಮಟ್ಟಕ್ಕೆ ಮುಟ್ಟಿಸುತ್ತವೆ. ಅಲ್ಲಿ ಆತ್ಮನ, ಪರಮಾತ್ಮನ ಹಾಗೂ ಈ

ತ್ರಿಭುವನದಲ್ಲಿಯ ಚರಾಚರ ನಿಸರ್ಗದ ಅಂತರ್ಯಾಮಿಯೂ, ವಿಶ್ವೋತ್ತರನೂ, ಅಪ್ರಮೇಯವೂ, ಅಮೃತಾತ್ಮನೂ, ಏಕಮೇವಾದ್ವಿತಿಯನೂ ಆದ ಬ್ರಹ್ಮನ ಸ್ತುತಿ ಇದೆ. ಆ ಸ್ತುತಿ ಅನಾವೃತವಾಗಿ ಆ ಪರಾತ್ಪರ ಸತ್ವದ ಅನಂತ ಉತ್ತರೋತ್ತರ ವೈಭವಯುಕ್ತವಾದ ಸ್ವಸ್ವರೂಪದ ವಿಶ್ವರೂಪವನ್ನು ಬೆಳಕಿಗೆ ತರುತ್ತದೆ. ಋತ–ಮೃತಿಗಳ ಒಡೆಯನಾದ ಯಮನು ನಚಿಕೇತನಿಗೆ ಮಾಡಿದ ಉಪದೇಶದಲ್ಲಿಯ ಕೆಲ ಅವತರಣಿಕೆಗಳು ಇದಕ್ಕೆ ನಿದರ್ಶನವಾಗಬಲ್ಲದು.

“ಓಂ ಎಂಬ ಅಕ್ಷರವೇ ಇದು. ಇದೇ ಅಕ್ಷರಬ್ರಹ್ಮವು. ಅತ್ಯಂತ ಶ್ರೇಷ್ಠವಾದ ಅಕ್ಷರವಾದರೂ ಇದೇ. ಈ ಅಕ್ಷರದ ಪೂರ್ಣಜ್ಞಾನವನ್ನು ಪಡೆದುಕೊಂಡವನು ಯಾವ ಪದವನ್ನು ಇಚ್ಛಿಸುವನೋ ಅದನ್ನು ಪಡೆಯುವನು. ಎಲ್ಲಕ್ಕೂ ಶ್ರೇಷ್ಠವಾದ ಮತ್ತು ಎಲ್ಲಕ್ಕೂ ಹೆಚ್ಚಿನದಾದ ಸಾಧನವೆಂದರೆ ಇದುವೆ. ಈ ಸಾಧನವನ್ನರಿತವನು ಬ್ರಹ್ಮಲೋಕದಲ್ಲಿ ಸ್ವಾಗತಿಸಲ್ಪಡುವನು. ಸರ್ವಜ್ಞನಿಗೆ ಹುಟ್ಟಿಲ್ಲ, ಸಾವೂ ಇಲ್ಲ, ಅಥವಾ ಆತ್ಮವು ಮತ್ತಾವ ವಸ್ತುವಿನಿಂದಲೂ ಉತ್ಪನ್ನವಾಗಿಲ್ಲ, ಅಥವಾ ಅದು ಯಾವುದೊಂದು ವಸ್ತುವೂ ಅಲ್ಲ, ಅದು ಅಜವೂ ನಿತ್ಯವೂ ಸನಾತನವೂ ಅಗಿರುತ್ತದೆ. ಶರೀರವು ಕೊಲ್ಲಲ್ಪಟ್ಟರೂ ಆತ್ಮವು ಸಾಯಲಾರದಂತಹುದು...

ಕುಳಿತಲ್ಲಿಯೇ ಕುಳಿತು ಆತ್ಮವು ದೂರ ಚಲಿಸುವುದು, ಮಲಗಿ ಎಲ್ಲ ಕಡೆಗೂ ಹೋಗುವುದು, ಆ ಆನಂದಯುಕ್ತ ಹಾಗೂ ಆನಂದರಹಿತ ಆತ್ಮನನ್ನು ನನ್ನ ಹೊರತು ಯಾರು ತಿಳಿಯಬಲ್ಲರು? ಶರೀರಗಳಲ್ಲಿ ಅಶರೀರನಾಗಿಯೂ ಅನಿತ್ಯಗಳಲ್ಲಿ ನಿತ್ಯನಾಗಿಯೂ ಇರುವ ಆ ಸರ್ವವ್ಯಾಪಿಯಾದ ಆತ್ಮನ ಸಾಕ್ಷಾತ್ಕಾರ ಮಾಡಿಕೊಂಡ ಧೀರನು, ಶೋಕರಹಿತನು. ಆತ್ಮಜ್ಞಾನವು ಪ್ರವಚನದಿಂದ ಲಭ್ಯವಾಗುವುದಿಲ್ಲ. ಮೇಧಾಶಕ್ತಿಯಿಂದ ಅಥವಾ ಬಹಳ ಶ್ರವಣದಿಂದ ಇದು ಲಭ್ಯವಲ್ಲ. ಆತ್ಮನು ಯಾರನ್ನು ಆರಿಸಿಕೊಂಡು ತನ್ನ ನಿಜಸ್ವರೂಪವನ್ನು ಪ್ರಕಟ ಮಾಡಿ ತೋರಿಸುವನೋ ಅವನಿಂದ ಮಾತ್ರ ಆತ್ಮವನ್ನು ಅರಿಯಲು ಸಾಧ್ಯ. ಯಾವನು ದುಷ್ಟಕರ್ಮಗಳನ್ನು ಬಿಟ್ಟಿಲ್ಲವೊ ಯಾವನು ಅಶಾಂತನೊ ಯಾವನು ಏಕಾಗ್ರಚಿತ್ತವಿಲ್ಲದವನೊ ಯಾವನ ಮನಸ್ಸಿನಲ್ಲಿ ಸ್ತಿಮಿತತೆ ನೆಲೆಗೊಂಡಿಲ್ಲವೊ ಅವನು ಕೇವಲ ಬುದ್ಧಿಶಕ್ತಿಯಿಂದ ಆತ್ಮಜ್ಞಾನವನ್ನು ಪಡೆಯಲಾರನು. ಬ್ರಾಹ್ಮಣಕ್ಷತ್ರಿಯರೀರ್ವರೂ ಯಾವ ಆತ್ಮನ ಆಹಾರವೊ ಮೃತ್ಯುವು ಯಾವನ ಉಪಖಾದ್ಯವೋ ಅಂತಹನನ್ನು ಎಲ್ಲಿರುವುನೆಂಬುದನ್ನು ಯಾರು ತಿಳಿಯಬಹುದು?...

ಸ್ವಯಂಭೂ ಪರಮಾತ್ಮನು ಶಕ್ತಿಗಳನ್ನು ಬಹಿರ್ಮುಖವಾಗಿ ಹರಿಯಬಿಟ್ಟನು. ಆದುದರಿಂದ ಇಂದ್ರಿಯಗಳು ಬಾಹ್ಯವಸ್ತುಗಳನ್ನು ಮಾತ್ರ ನೋಡಬಲ್ಲುವು. ಅವುಗಳಿಗೆ ಅಂತರಾತ್ಮನು ಗೋಚರನಾಗನು. ಅಲ್ಲಿ ಇಲ್ಲಿ ಯಾವನಾದರೊಬ್ಬ ಧೀರನು ಅಮೃತತ್ವವನ್ನು ಪಡೆಯುವ ಇಚ್ಛೆಯಿಂದ ತನ್ನ ದೃಷ್ಟಿಯನ್ನು ಅಂತರ್ಮುಖಮಾಡಿ

ಅಂತರಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವನು. ಬಾಲಬುದ್ಧಿಯುಳ್ಳವರು ಬಾಹ್ಯಕಾಮನೆಗಳನ್ನು ಹುಡುಕ ಹೋಗುವರು. ಹಾಗೂ ವಿಸ್ತೃತವಾದ ಮರಣಪಾಶದಲ್ಲಿ ಸಿಕ್ಕಿ ಬೀಳುವರು. ಆದರೆ ಧೀರರು ಅಮೃತಪದವಿಯನ್ನರಿತುಕೊಂಡು ಇಹಲೋಕದ ಈ ಅನಿತ್ಯ ವಸ್ತುಗಳಲ್ಲಿ ನಿತ್ಯತೆಯನ್ನು ಅರಸುವುದಿಲ್ಲ. ರೂಪ, ರಸ, ಗಂಧ, ಶಬ್ದ, ಸ್ಪರ್ಶ ಹಾಗೂ ಮೈಥುನಗಳ ಜ್ಞಾನವೂ ಈ ಆತ್ಮದಿಂದಲೇ ಆಗುವುದು. ಇನ್ನೇನು ಉಳಿಯಿತು? ಅದು ಇದೇ. ಸ್ವಪ್ನಸ್ಥಿತಿಯಲ್ಲಿಯೂ ಜಾಗೃತ ಸ್ಥಿತಿಯಲ್ಲಿಯೂ ಆಗುವ ವ್ಯಾಪಾರಗಳು ಯಾವನ ಬಲದಿಂದ ತಿಳಿಯುತ್ತವೆಯೋ ಆ ಶ್ರೇಷ್ಠ ಸರ್ವವ್ಯಾಪಿಯಾದ ಆತ್ಮನನ್ನರಿತುಕೊಂಡು ವಿವೇಕಿಯು ಶೋಕವನ್ನು ಬಿಟ್ಟು ಬಿಡುವನು. ಜೀವನ ಸನ್ನಿಧಿಯಲ್ಲಿದ್ದು ಫಲವನ್ನುಪಭೋಗಿಸುವ ಆತ್ಮನನ್ನೂ ಭೂತಭವಿಷ್ಯಗಳೊಡೆಯನಾದವನನ್ನೂ ಅರಿತವನು ಭಯರಹಿತನಾಗುವನು. ಯಾವುದು ತಪಸ್ಸಿನ ಪೂರ್ವದಲ್ಲಿಯೂ, ಅಪ್ಪು ಮುಂತಾದ ತತ್ವಗಳ ಪೂರ್ವದಲ್ಲಿಯೂ ಉತ್ಪನ್ನವಾಯಿತೋ ಯಾವುದು ಹೃದಯಗುಹೆಯನ್ನು ಪ್ರವೇಶಿಸಿ ಸಕಲ ಭೂತಗಳೊಡನೆ ಇದ್ದುದನ್ನು ಜ್ಞಾನಿಗಳು ನೋಡಿದರೋ ಅದೂ ಇದೆ. ಸರ್ವದೇವತೆಗಳನ್ನೊಳಗೊಂಡ ಅದಿತಿಯು ಪ್ರಾಣಶಕ್ತಿ ಸಹಿತ ಹುಟ್ಟಿದಳು. ಹೃದಯಗುಹೆಯನ್ನು ಪ್ರವೇಶಿಸಿ ಅಲ್ಲಿ ಸ್ಥಿರಳಾದ ಆಕೆಯು ಸರ್ವಭೂತಗಳ ಸಹಿತ ಹುಟ್ಟಿದಳು. ಇದೇ ಅದು. ಗರ್ಭಿಣೀ ಸ್ತ್ರೀಯರಿಂದ ರಕ್ಷಿಸಲ್ಪಟ್ಟ ಅವರ ಗರ್ಭದಂತೆ ಜ್ಞಾನಿಯಾದ ಅಗ್ನಿಯು ಎರಡು ಅರಣಿಗಳ ಹೊಟ್ಟೆಯಲ್ಲಿರುವನು. ಹವಿರ್ಭಾಗಗಳನ್ನು ಕೊಡುವ ಜಾಗೃತರಾದ ಮನುಷ್ಯರು ಇವನನ್ನು ಪ್ರತಿದಿನವೂ ಬಹು ಎಚ್ಚರಿಕೆಯಿಂದ ಪೂಜಿಸತಕ್ಕದ್ದು. ಇದೇ ಅದು. ಸೂರ್ಯನು ಹುಟ್ಟುವುದು ಅಲ್ಲಿಂದಲೇ, ಮತ್ತು ಅಸ್ತವಾಗುವುದಾದರೂ ಅಲ್ಲಿಯೇ. ಸಮಸ್ತ ದೇವತೆಗಳೂ ಅಲ್ಲಿಯೇ ಇರುವರು. ಯಾವನೂ ಅದರ ಆಚೆಗೆ ಹೋಗಲಾರನು. ಇದೇ ಅದು. ಇಲ್ಲಿರುವಂತೆ ಅಲ್ಲಿ ಇರುವುದು. ಇಲ್ಲಿ ಕೇವಲ ಅನೇಕತ್ವವಿರುವುದೆಂದು ಬಗೆಯುವವನು ಪುನಃ ಪುನಃ ಮರಣಕ್ಕೆ ಒಳಗಾಗುವನು. ಇದು ಮನಸ್ಸಿನಿಂದಲೇ ಪ್ರಾಪ್ತವಾಗತಕ್ಕ ವಸ್ತುವು. ಇಲ್ಲಿ ಯಾವ ಮಹತ್ವವೂ ಇಲ್ಲ. ಹಾಗೆ ತಿಳಿಯುವವನು ಪದೇ ಪದೇ ಮರಣಕ್ಕೊಳಗಾಗುವನು. ಮನುಷ್ಯನ ಅಂತಃಕರಣದಲ್ಲಿ ಅಂಗುಷ್ಠ ಪರಿಮಾಣವುಳ್ಳ ಮನುಷ್ಯನು ಸ್ಥಿತನಾಗಿರುವನು. ಅವನು ಭೂತ–ಭವಿಷ್ಯತ್ ಕಾಲಗಳೊಡೆಯನು. ಇದನ್ನು ಅರಿತವನು ನಿರ್ಭಯನಾಗುವನು. ಇದೇ ಅದು. ಈ ಅಂಗುಷ್ಠ ಪರಿಮಿತಿಯುಳ್ಳ ಪುರುಷನು ಹೊಗೆ ಸೋಂಕದ ಜ್ಯೋತಿಯಂತಿರುವನು. ಭೂತ–ಭವಿಷ್ಯತ್ತುಗಳೊಡೆಯನಿರುವನು. ಇವತ್ತಿರುವವನೂ ಅವನೇ, ನಾಳೆಗಿರುವವನೂ ಅವನೇ. ಇದೇ ಅದು."

ಉಪನಿಷತ್ತಿನಲ್ಲಿ ಏಕಕಾಲದಲ್ಲಿ ಕಾವ್ಯ ಹಾಗೂ ಆಧ್ಯಾತ್ಮಿಕ ತತ್ವಜ್ಞಾನ ಎನಿಸುವ ಅವತರಣಿಕೆಗಳು ತುಂಬಿವೆ. ಅದರ ವಾಣಿಯು ಪೂರ್ಣಪ್ರಸಾದ ಹಾಗೂ ಸೌಂದರ್ಯಗಳಿಂದ ಕೂಡಿದೆ. ಮೂಲ ಪದಗಳ ಗಂಭೀರ, ಸೂಕ್ಷ್ಮ, ಪ್ರಕಾಶಮಯ ಅರ್ಥಧ್ವನಿ ಹಾಗೂ ಸೂಚಕತೆಗಳಿಲ್ಲದ ಭಾಷಾಂತರವು ಅದರ ಸಾಮರ್ಥ್ಯ

ಸಂಪೂರ್ಣತೆಗಳ ಕಲ್ಪನೆಗಳನ್ನು ಎಂದೂ ಮಾಡಿಕೊಡಲಾರದು. ಉಪನಿಷತ್ತಿನಲ್ಲಿ ಇನ್ನೂ ಕೆಲವು ಅವತರಣಿಕೆಗಳು ಬರುತ್ತವೆ. ಅವುಗಳಲ್ಲಿ ಸಂಪೂರ್ಣ ಸಾಮರಸ್ಯದಿಂದ ಅತಿ ಸೂಕ್ಷ್ಮ ಮತ್ತು ಮಾನಸಿಕ ತತ್ವಗಳನ್ನು ಹೇಳಲಾಗಿದೆ. ಅವುಗಳ ಶೈಲಿಯಲ್ಲಿ ಪರಿಪೂರ್ಣ ಕಾವ್ಯಸೌಂದರ್ಯ ಎಳ್ಳಷ್ಟೂ ಕುಂದಿಲ್ಲ. ಕೇವಲ ಶುಷ್ಕ ಅರ್ಥವನ್ನು ಗ್ರಹಿಸುವ ಬುದ್ಧಿಗಷ್ಟೇ ರುಚಿಸುವವೆನಿಸದೆ ಅವು ಆತ್ಮ ಅಂತಃಕರಣಗಳಿಗೆ ಯಾವಾಗಲೂ ಸಜೀವ ಸತ್ತೆಯಾಗಿ ನಿಲ್ಲುವುವು. ಕೆಲ ಗದ್ಯಮಯ ಉಪನಿಷದ್ಗ್ರಂಥಗಳಲ್ಲಿ ಇನ್ನೂ ಒಂದು ಅಂಗವಿದೆ. ಅದು ಯಾವುದೆಂದರೆ ಕಣ್ಣಿಗೆ ಕಟ್ಟುವಂಥ ಕಥನ ಮತ್ತು ಪರಂಪರಾಪ್ರವಾಹ. ಇವು ಸಂಕ್ಷೇಪತಃ ಉಪನಿಷದ್ಗ್ರಂಥಗಳಿಗೆ ಕಾರಣವಾದ ಆಧ್ಯಾತ್ಮಿಕ ಶೋಧದ ಅಸಾಧಾರಣ ಚಳವಳಿ ಹಾಗೂ ಅತ್ಯುನ್ನತ ಜ್ಞಾನದ ಬಗ್ಗೆ ತೀವ್ರಾಸಕ್ತಿ ಇವುಗಳ ಚಿತ್ರವನ್ನು ನಮ್ಮೆದುರು ಇಡುತ್ತವೆ. ಪ್ರಾಚೀನ ಪ್ರಪಂಚದ ದೃಶ್ಯಗಳು ಕೆಲವೇ ಪುಟಗಳಲ್ಲಿ ನಮ್ಮ ಕಣ್ಣ ಮುಂದೆ ಕುಣಿಯುತ್ತವೆ. ತಪೋವನದಲ್ಲಿ ಜಿಜ್ಞಾಸುವನ್ನು ಪರೀಕ್ಷಿಸಿ, ಅವನಿಗೆ ಉಪದೇಶ ಮಾಡಲು ಕುಳಿತ ಋಷಿಗಳು; ರಾಜಪುತ್ರರೂ ಶ್ರೋತ್ರಿಯರೂ ಸಿರಿವಂತರೂ ಜ್ಞಾನದ ಅರ್ಚನೆಗಾಗಿ ಬರುವುದು; ಒಂದು ಕಡೆ ಅರಸುಮಗನು ತೇರೇರಿ ಬರುವುದು; ಮತ್ತೊಂದು ಕಡೆ ಯಾವನೋ ಒಬ್ಬ ಕುಲಟೆಯ ಕುಮಾರನು ಜ್ಞಾನಾರ್ಥಿಯಾಗಿ ಧಾವಿಸುವುದು–ಹಾಗೆ ಬಂದು "ಯಾರಿವರು ಸ್ವಾಮಿ, ಜ್ಞಾನ ಜ್ಯೋತಿ ಕಂಡವರು, ಮಂತ್ರದ್ರಷ್ಟಾರರು" ಎಂದು ಬಾಗಿಲಲ್ಲಿ ಎದುರಾಗುವುದು; ಅಂಥ ಮಹಾವ್ಯಕ್ತಿಗಳು ಒಬ್ಬರೇ, ಇಬ್ಬರೇ? ಜನಕ, ಸೂಕ್ಷ್ಮಮತಿಯಾದ ಅಜಾತಶತ್ರು, ಗಾಡಿಹೊಡೆಯುವ ರೈಕ್ವ, ಸತ್ಯಯೋಧ, ಯಾಜ್ಞವಲ್ಕ್ಯ– ಈ ಯಾಜ್ಞವಲ್ಕ್ಯನಾದರೋ ಶಾಂತಮೂರ್ತಿ, ವ್ಯಂಗ್ಯ ಭಾಷಿ ಎರಡೂ ಕೈಗಳಿಂದ ಅನಾಸಕ್ತನಾಗಿ ಪ್ರಾಪಂಚಿಕ ಸ್ವತ್ತುಗಳನ್ನೂ ಆಧ್ಯಾತ್ಮಿಕ ಐಶ್ವರ್ಯಗಳನ್ನೂ ಸ್ವೀಕರಿಸಿ ಅನಂತರ ತನ್ನ ಎಲ್ಲಾ ಸಿರಿಯನ್ನೂ ತ್ಯಜಿಸಿ ಪರಿವ್ರಾಜಕನಾದವನು! ಆಮೇಲೆ ದೇವಕೀ ಪುತ್ರ ಕೃಷ್ಣನೋ ಘೋರ ಋಷಿಯ ಒಂದೇ ಒಂದು ಶಬ್ದವನ್ನು ಕೇಳಿ ಆಗಿಂದಾಗ ಅನಂತತೆಯನ್ನು ತಿಳಿದವನು; ಆಶ್ರಮಗಳೂ, ಆತ್ಮಶೋಧಕರೂ ಚಿಂತಕರೂ ಆದ ರಾಜರೂ, ಋಷಿಗಳೂ ಕೂಡಿ ತಮ್ಮ ತಮ್ಮ ಜ್ಞಾನವನ್ನು ಹೋಲಿಸಿನೋಡುತ್ತಿದ್ದ ಮಹಾಯಜ್ಞ ಸಭೆಗಳು–ಇವುಗಳಲ್ಲಿ ಭಾರತದ ಆತ್ಮವು ಹುಟ್ಟಿ ಭೂತಲದಿಂದ ವಿಯತ್ತಲದವರೆಗೆ ಏರಿದ ನಾಡಿನ ಉದಯ ಹೇಗೆ ಆಯಿತೆಂಬುದನ್ನು ನಾವು ನೋಡಬಹುದು. ವೇದ ಉಪನಿಷತ್ತುಗಳು ಭಾರತೀಯ ತತ್ವಜ್ಞಾನ ಮತ್ತು ತತ್ವಜ್ಞಾನಕ್ಕೆ ಮಾತ್ರವಲ್ಲದೆ ಭಾರತದ ಸಕಲ ಕಾವ್ಯ, ಇತಿಹಾಸ ಸಾಹಿತ್ಯಗಳಿಗೂ ಆಕರವೆನಿಸಿವೆ. ಅವುಗಳಲ್ಲಿ ಮೊದಲು ರೂಪಿಸಲ್ಪಟ್ಟ ಆತ್ಮ ಮನೋಭಾವ ಅಥವಾ ಆದರ್ಶ ಚಿತ್ತವೇ ಕೊನೆಯಲ್ಲಿ ಮಹಾತತ್ವದರ್ಶನಗಳನ್ನು, ಧರ್ಮಸೌಧಗಳನ್ನು ಕಟ್ಟಿ ತನ್ನ ವೀರ ಯೌವನವನ್ನು ರಾಮಾಯಣ–ಮಹಾಭಾರತಗಳಲ್ಲಿ ಪ್ರತಿಬಿಂಬಿಸಿ, ತನ್ನ ಪೌರುಷದ ಪಕ್ವದಶೆಯಾದ ಅಭಿಜಾತ ಸಾಹಿತ್ಯಯುಗದಲ್ಲಿ ಅವಿಶ್ರಾಂತವಾಗಿ ಬೌದ್ಧಿಕ ಶೈಲಿಯಲ್ಲಿ ನಿರೂಪಿಸಿತು; ಅಲ್ಲದೆ ಶಾಸ್ತ್ರದಲ್ಲಿ ಅನೇಕಾನೇಕ ಮೌಲಿಕ

ಪ್ರತಿಭೆಯ ಉದ್ಗಾರಗಳನ್ನು ಪ್ರಕಟಿಸಿತು; ರಸಿಕ, ವೈದಿಕ, ಐಂದ್ರಿಯಿಕ ಅನುಭವದ ಹೆಮ್ಮಿನುಗನ್ನು ಹರಿಯಿಸಿತು; ತಂತ್ರ ಪುರಾಣಗಳಲ್ಲಿ ತನ್ನ ಆಧ್ಯಾತ್ಮಿಕ ಅತೀಂದ್ರಿಯ ಅನುಭವವನ್ನು ಮುಂದುವರಿಸಿತು; ತನ್ನನ್ನೇ ವರ್ಣ–ರೇಖೆಗಳ ಸೌಂದರ್ಯ ವೈಭವಕ್ಕೆ ಸೂರೆಗೊಟ್ಟಿತು; ಕಲ್ಲು ಮತ್ತು ಕಂಚಿನಲ್ಲಿ ತನ್ನ ವಿಚಾರ–ದರ್ಶನಗಳನ್ನು ಕೆತ್ತಿ ಎರಕ ಹೊಯ್ದಿತು; ಮತ್ತು ಅನಂತರದ ಅಪಭ್ರಂಶಗಳ ಹೊಸ ಹಾದಿಯಲ್ಲಿ ತನ್ನ ಆತ್ಮಾಭಿವ್ಯಕ್ತಿಯನ್ನು ಮೂಡಿಸಿತು; ಮತ್ತು ಗ್ರಹಣೋತ್ತರ ಕಾಲದಲ್ಲಿ ಈಗ ಅದು ಎಂದಿನಂತೆಯೇ ವೈವಿಧ್ಯದೊಡನೆ ಹೊಸ ಬಾಳನ್ನೂ ಹುಟ್ಟನ್ನೂ ಹೂಡಲು ಪುನರುದಯಿಸುತ್ತಿದೆ.

# ಅಧ್ಯಾಯ ಮೂರು
# ಪುರಾಣ–ಮಹಾಕಾವ್ಯಗಳು

ಈ ಪ್ರಕಾರ ವೇದವೆಂಬುದು ಭಾರತೀಯ ಆಧ್ಯಾತ್ಮಿಕ ಮನೋವೈಜ್ಞಾನಿಕ ಬೀಜವೆನಿಸಿದೆ. ಅದೇ ಮೇರೆಗೆ ಉಪನಿಷತ್ತು ಆ ಸಂಸ್ಕೃತಿಯ ಅತ್ಯುದಾತ್ತ ಕಲ್ಪನೆಯಾಗಿ ಯಾವಾಗಲೂ ಉಳಿದ ಅತ್ಯುನ್ನತ ಆತ್ಮಜ್ಞಾನದ ಸತ್ಯಪ್ರಕಾಶ. ಅದು ವ್ಯಕ್ತಿಯ ಬಾಳನ್ನೂ ಜನತೆಯ ಮಹತ್ವಾಕಾಂಕ್ಷೆಯನ್ನೂ ಅತ್ಯಂತಿಕ ಉದ್ದೇಶ್ಯವಾದ ಆತ್ಮಜ್ಞಾನದತ್ತ ಯಾವಾಗಲೂ ಸೆಳೆಯುತ್ತ ಬಂದಿದೆ; ಭಾರತದ ಕಾವ್ಯಮಯ ಹಾಗೂ ರಚನಾತ್ಮಕ ಮಹಾಯತ್ನಗಳೆನಿಸಿದ ಈ ಎರಡು ಮಹಾಗ್ರಂಥಗಳು ಬಲಿಷ್ಠ ವಿಸ್ತಾರ ಹಾಗೂ ಪರಿಪುಷ್ಟವಾದ ವಿಲಕ್ಷಣ ಬೌದ್ಧಿಕ ವಿಕಾಸಕ್ಕೆ ಪೂರ್ವಭಾವಿಯಾಗಿ ಬಂದುವು. ಇವು ಅತೀಂದ್ರಿಯ ಹಾಗೂ ಆಧ್ಯಾತ್ಮಿಕ ಮನೋಧರ್ಮಕ್ಕೆ, ಅನುಗುಣವಾದ ಭಾಷೆಯಲ್ಲಿ ಇವೆ. ಹೀಗೆ ಪ್ರಾರಂಭವಾದ ವಿಕಾಸವು ಒಂದು ವಿಧದ ಸಂಪನ್ನ ಅವತಾರಗತಿ ಹಿಡಿದು ಆತ್ಮತತ್ವದಿಂದ ಸ್ಥೂಲ ಪದಾರ್ಥದವರೆಗೆ ಇಳಿದು ಮೊದಲು ವ್ಯಾವಹಾರಿಕ ತರ್ಕಬುದ್ಧಿಗೆ ತೋರುವ ಜಗತ್ತು–ಜೀವನ–ಆತ್ಮಗಳ ಸಂಬಂಧಗಳನ್ನು ಕಂಡುಹಿಡಿಯುವ ಪ್ರಯತ್ನದಲ್ಲಿ ಹರಿಯಿತು. ಈ ಬೌದ್ಧಿಕ ಪ್ರಯತ್ನದ ಗತಿ ಸ್ವಾಭಾವಿಕವಾಗಿ ಜೀವನದ ವ್ಯಾವಹಾರಿಕ ಸಂಘಟನೆ ಮತ್ತು ವಿಕಾಸದೊಂದಿಗೆ ಪ್ರಾರಂಭಿಸಿತು. ಅದು ಜನತೆಯ ಮನ ಆತ್ಮಗಳನ್ನು ಉದ್ದೇಶಪೂರ್ವಕವಾಗಿ ವ್ಯಕ್ತಗೊಳಿಸುವಂಥದಾಗಿತ್ತು. ಅದಕ್ಕೆ ಹಿನ್ನೆಲೆಯಾಗಿ ಎಚ್ಚರಿಕೆಯಿಂದ ರಚಿಸಿದ ನೈತಿಕ ಸಾಮಾಜಿಕ ಶಿಸ್ತು–ವ್ಯವಸ್ಥೆಗಳ ನಿಯಂತ್ರಣದಲ್ಲಿ ಐಹಿಕ ಪುರುಷಾರ್ಥಗಳನ್ನು ಸಾಧಿಸಲು ಅನುಕೂಲವಾಗುವಂತೆ ರೂಪಿಸಿದ ಬಲಿಷ್ಠವೂ, ಯಶಸ್ವಿಯೂ ಆದ ಸಮಾಜರಚನೆಯಿತ್ತು. ಈ ವ್ಯವಸ್ಥೆ ಐಹಿಕದ ಮೂಲಕ ಆಧ್ಯಾತ್ಮಿಕ ಬಿಡುಗಡೆ ಹಾಗೂ ಪರಿಪೂರ್ಣತೆಯತ್ತ ವಿಕಾಸಹೊಂದುವುದಕ್ಕೂ ಅವಕಾಶವೊದಗಿಸಿತ್ತು. ಭಾರತೀಯ ವಾಙ್ಮಯ ಸೃಷ್ಟಿಗೆ ಪೂರ್ವದ ಅವಸ್ಥೆಯನ್ನು ನಾವು ಉಕ್ತಗ್ರಂಥಗಳಲ್ಲಿ ವಿಸ್ತಾರವಾಗಿಯೂ ಪರಿಣಾಮಕಾರಿಯಾಗಿಯೂ ವರ್ಣಿಸಿದ್ದನ್ನು ನೋಡುತ್ತೇವೆ. ಭಾರತೀಯ ಮನದ ಈ ವಿಕಾಸವನ್ನು ಮಹಾದರ್ಶನ ಪದ್ಧತಿಗಳಲ್ಲಿ ಭಟ್ಟಿ ಇಳಿಸಿದ ಕಠಿನ ತತ್ವವಿಚಾರವು ಒಂದು ಕಡೆ ಪ್ರದರ್ಶಿಸಿದರೆ ಮತ್ತೊಂದು ಕಡೆ ಅಷ್ಟೇ ದೃಢ ಪ್ರಯತ್ನದಿಂದ ಭಿನ್ನ ಮಾರ್ಗದಿಂದ ವರ್ಣಿಸಿವೆ. ಧರ್ಮ ಶಾಸ್ತ್ರಗಳಲ್ಲಿ ನೈತಿಕ ಸಾಮಾಜಿಕ ಆದರ್ಶ ಹಾಗೂ ವ್ಯವಹಾರಗಳನ್ನು ತರ್ಕಬದ್ಧವಾಗಿ, ಸುಸಂಭದ್ಧವಾಗಿ ಮತ್ತು ಸುಸಂಘಟಿತವಾಗಿ

ಹೇಳಲಾಗಿದೆ. ಇವು ವೈಯಕ್ತಿಕ ಮತ್ತು ಸಾಮುದಾಯಿಕ ಜೀವನದ ರೀತಿ–ನೀತಿಗಳನ್ನು ವಿವರಿಸಲು ಯತ್ನಿಸಿವೆ. ಇವುಗಳಲ್ಲಿ ಅತ್ಯಂತ ದೊಡ್ಡ ಆಧಾರಗ್ರಂಥವೆನಿಸಿದ್ದು ಮಾನವ ಧರ್ಮಶಾಸ್ತ್ರ. ವೇದೋಪನಿಷತ್ತುಗಳಲ್ಲಿ ದಿವ್ಯದೃಷ್ಟಿ, ಅಪರೋಕ್ಷಾನುಭೂತಿ, ಆಧ್ಯಾತ್ಮಿಕ ಸಾಕ್ಷಾತ್ಕಾರಗಳ ಮೂಲಕ ಕಂಡ ಜೀವಾತ್ಮ, ಪರಮಾತ್ಮ ಪ್ರಪಂಚಗಳ ಸತ್ಯಗಳನ್ನು ತರ್ಕಬುದ್ಧಿಯಿಂದ ತತ್ವಜ್ಞಾನಿಗಳು ತರ್ಕ ಮಾರ್ಗದಿಂದ ಸಮರ್ಥಿಸಿದ್ದಾರೆ; ಅಲ್ಲದೆ ಈ ಜ್ಞಾನವನ್ನು ಆಧರಿಸಿ ಮಾನವನು ತನ್ನ ಬಾಳಿನ ಅತ್ಯುನ್ನತ ಸಿದ್ಧಿಯನ್ನು ಪಡೆಯಲು ಬೇಕಾದ ನೀತಿ ನಿಯಮಗಳನ್ನು ಕ್ರೋಢೀಕರಿಸಿ ಹೇಳಿದ್ದಾರೆ. ಈ ಕಾರ್ಯದಲ್ಲಿ ಪ್ರಾತಿಭ ಚೇತನೆಯಿಂದ ಬೌದ್ಧಿಕ ಚೇತನೆಗೆ ಹರಿದು ಹೋಗುವ ನಡುವಣ ಅವಸ್ಥೆಯನ್ನು ಕಾಣಬಹುದು. ಪವಿತ್ರಗ್ರಂಥರಾಶಿಯ ಪ್ರಾತಿಭಾಂಶವನ್ನು ವ್ಯಕ್ತಪಡಿಸುವ ಸುಶ್ಲಿಷ್ಟವೂ ಅರ್ಥಪೂರ್ಣವೂ ಆದ ಪದಪುಂಜಗಳ ಬದಲು ಈಗ ಇನ್ನೂ ಹೆಚ್ಚು ಅರ್ಥಾರೂಢವೂ ಸಂಕ್ಷಿಪ್ತವೂ ಸುಸಮಗ್ರವೂ ಆದ ಪದಪದ್ಧತಿ ಪ್ರಾರಂಭಿಸಿತು. ಇದು ಮೊದಲಿನಂತೆ ದಾರ್ಶನಿಕವೂ ಅಲ್ಲ, ಕಾವ್ಯಮಯವೂ ಅಲ್ಲ; ಆದರೆ ಉಗ್ರ ಬೌದ್ಧಿಕಸ್ವರೂಪದ್ದು. ಇದರಲ್ಲಿ ತತ್ವಾಖ್ಯಾನ, ತತ್ವವಿಚಾರದ ಬೆಳವಣಿಗೆ, ಅಲ್ಪ ಪದಗಳಲ್ಲಿ ಆದಷ್ಟು ಅರ್ಥಪರಿಣಾಮವನ್ನು ಉಂಟುಮಾಡುವ ತರ್ಕಗತಿ ಕಂಡುಬರುತ್ತವೆ. ಒಮ್ಮೆ ಒಂದು ಅಥವಾ ಎರಡೇ ಪದ ಇದರಲ್ಲಿರುವುದುಂಟು. ಇದೇ ನಿಶ್ಚಿತಾರ್ಥವನ್ನು ಹೇಳುವ ಸೂತ್ರ. ಕೆಲವೊಮ್ಮೆ ಇದು ತನ್ನ ಸಾರಭಾರದಿಂದ ಒಂದು ಒಗಟಾಗಿಬಿಡುವುದೂ ಉಂಟು. ತತ್ವಶಾಸ್ತ್ರೀಯ ಹಾಗೂ ತಾರ್ಕಿಕ ಪ್ರತಿಪಾದನ ಪದ್ಧತಿ ಮತ್ತು ಕೆಲ ವ್ಯಾಖ್ಯಾನ ಮಾರ್ಗ ಈ ಭಾಷ್ಯದಿಂದ ಬೆಳೆದು ಬಂದವು. ಸೂತ್ರಮಾಲೆಯಲ್ಲಿ ಹೇಳಿದ ಅರ್ಥವನ್ನು ವಿವರಿಸುವುದೇ ಈ ಭಾಷ್ಯದ ಕೆಲಸ. ಭಾಷ್ಯದ ಮುಖ್ಯ ಕೆಲಸ ಮೌಲಿಕವೂ ಸತ್ಯವೂ ಶಾಶ್ವತವೂ ಆದ ಸತ್ಯವನ್ನು ವಿವರಿಸಿ ಮೋಕ್ಷವನ್ನು ಪಡೆಯುವ ಮಾರ್ಗವನ್ನು ತಿಳಿಸುವುದೇ ಆಗಿದೆ.

ಇದಕ್ಕೆ ಪ್ರತಿಯಾಗಿ ಧರ್ಮಶಾಸ್ತ್ರಕಾರರು ಜೀವನದ ಸಾಮಾನ್ಯ ವ್ಯವಹಾರ ಕಾರಭಾರಗಳನ್ನು ತಮ್ಮ ವಿಷಯಗಳನ್ನಾಗಿ ತೆಗೆದುಕೊಂಡರು. ಧರ್ಮಶಾಸ್ತ್ರವು ವ್ಯಕ್ತಿಯ, ಸಮಾಜದ, ಸಾಮಾನ್ಯ ಜೀವನದ ಆಶೆ ಆಕಾಂಕ್ಷೆ, ಅಭಿರುಚಿ, ನೀತಿ ನಿಯಮ, ರೂಢಿ ಪರಂಪರೆಗಳನ್ನು ವಿವರಿಸಿ ವರ್ಗೀಕರಿಸಿ ಹಾಗೆ ಪರಿಪೂರ್ಣ ನಿರ್ಣಾಯಕ ರೀತಿಯಲ್ಲಿ ಹೇಳಿ ರಾಷ್ಟ್ರೀಯ ಸಂಸ್ಕೃತಿಯ ಮುಖ್ಯ ಕಲ್ಪನೆಗಳ ಕಟ್ಟಿನಲ್ಲಿ ಅವುಗಳನ್ನು ಅಳವಡಿಸಿ ತೀಕ್ಷ್ಣಮತಿಯಿಂದ ತಯಾರಿಸಿದ ಒಂದು ಸಮಾಜಪದ್ಧತಿಯನ್ನು ಶಾಶ್ವತಗೊಳಿಸಲು ಹೊರಟಿತು. ಆ ಪದ್ಧತಿಯನ್ನು ನಿಚ್ಚಣಿಕೆಯಾಗಿ ಮಾಡಿಕೊಂಡು ಜನತೆ ಪ್ರಾಣಮಯ–ಅನ್ನಮಯ ಅಸ್ತಿತ್ವಗಳಿಂದ ಆಧ್ಯಾತ್ಮಿಕ ಸ್ಥಲಕ್ಕೆ ಸುರಕ್ಷಿತವಾಗಿ ಹೋಗಿ ಮುಟ್ಟಲು ಅನುಕೂಲವಾಯಿತು. ಸಾಮಾಜಿಕ ಹಾಗೂ ನೈತಿಕ ನಿಯಮಾವಳಿಯೆನಿಸಿದ ಧರ್ಮದ ಅಂಕೆಗೆ ಒಳಪಟ್ಟು ಮನುಷ್ಯನ ಭಾವನಾತ್ಮಕ, ಆರ್ಥಿಕ, ರಸಾತ್ಮಕ, ವೈಷಯಿಕ ಮತ್ತು ಬೌದ್ಧಿಕ ಆಶೆ–ಅವಶ್ಯಕತೆಗಳು ಪೂರ್ತಿಗೊಂಡು

ಅವನು ನಿಸರ್ಗದ ನೇರವಾದ ನಿಯಮದಂತೆ ಆಧ್ಯಾತ್ಮಿಕ ಜೀವನವನ್ನು ನಡೆಸಲು ಸಿದ್ಧನಾಗುವಂತೆ ಮಾಡುವುದೇ ಧರ್ಮಶಾಸ್ತ್ರದ ಮುಖ್ಯೋದ್ದೇಶ. ಇಲ್ಲಿಯೂ ಮೊದಮೊದಲು ವೈದಿಕ ಗ್ರಹ್ಯಸೂತ್ರಗಳ ಶೈಲಿಯೂ ಅನಂತರ ಧರ್ಮಶಾಸ್ತ್ರಗಳ ಹೆಚ್ಚು ವಿವರಪೂರ್ಣವಾದ ಶೈಲಿಯೂ ಕಂಡುಬರುತ್ತವೆ. ಮೊದಲಿನದು ಸರಳವೂ ಮುಖ್ಯವೂ ಆದ ಸಾಮಾಜಿಕ–ಧಾರ್ಮಿಕ ತತ್ವ–ಆಚಾರಗಳನ್ನು ಸೂಚಿಸಿದರೆ ಎರಡನೆಯದು ಇಡೀ ಜನತೆಗೆ ಅನ್ವಯಿಸುವ ವ್ಯಕ್ತಿವರ್ಗಗಳ ವರ್ಣ ಆಶ್ರಮಗಳ ಬದುಕನ್ನು ಪ್ರತಿಪಾದಿಸಲು ಯತ್ನಿಸಿದೆ. ಈ ಪ್ರಯತ್ನದ ಸ್ವರೂಪ, ಪೂರ್ಣತೆ ಮತ್ತು ಅದರ ಉದ್ದಕ್ಕೂ ಹರಿಯುವ ಭಾವದ ಅವಿಚ್ಛಿನ್ನ ಐಕ್ಯ ಇವು ಅಂದಿನ ಜನದ ಪ್ರಬುದ್ಧ, ಬೌದ್ಧಿಕ, ರಸಾತ್ಮಕ ಮತ್ತು ನೈತಿಕಪ್ರಜ್ಞೆ ಹಾಗೂ ಉದಾತ್ತವೂ ಕ್ರಮಬದ್ಧವೂ ಆದ ನಾಗರಿಕತೆ ಮತ್ತು ಸಂಸ್ಕೃತಿಯತ್ತಣದ ಒಲವು ಮತ್ತು ಸಾಮರ್ಥ್ಯಗಳನ್ನು ಬಿಂಬಿಸುವುದಕ್ಕೆ ಗಣ್ಯಸಾಕ್ಷಿಗಳು ಆಗಿವೆ. ಅದರಲ್ಲಿ ಕಂಡುಬರುವ ಬುದ್ಧಿಮತ್ತೆ, ತಿಳಿವಳಿಕೆ ಮತ್ತು ಸ್ವರೂಪವನ್ನು ತಳೆಯುವ ಶಕ್ತಿ ಯಾವ ಹಳೆಯ ಅಥವಾ ಹೊಸ ಜನಾಂಗಕ್ಕೂ ಕಡಿಮೆ ಆದುದಲ್ಲ. ಅಷ್ಟಲ್ಲದೆ ಆಮೇಲೆ ಬಂದ ಜನಾಂಗಕ್ಕೆ ವಿಶಿಷ್ಟವಾದ ಹೆಚ್ಚಿನ ಸೂಕ್ಷ್ಮಜ್ಞತೆ, ಪರಿಪೂರ್ಣವಾದ ಅನುಭವ, ವಿಜ್ಞಾನ ಹಾಗೂ ಪ್ರಯೋಗ ಶೂರತೆಯ ಉತ್ಸಾಹಪೂರ್ಣ ಲಘುತ್ವಗಳಿಗೆ ಸರಿಸಮವಾದ ಗಾಂಭೀರ್ಯ, ಸೂತ್ರಬದ್ಧಸ್ಫುಟತ್ವ ಮತ್ತು ಕಲ್ಪನೆಯ ಉದಾತ್ತತೆ ಅದರಲ್ಲಿ ಇವೆ. ಅದೇನೆ ಇರಲಿ, ಒಂದು ಸೊಗಸಾದ, ಸುಸಂಘಟಿತವಾದ ಸಮಾಜ ವ್ಯವಸ್ಥೆ–ಅದನ್ನು ಪ್ರಕಾಶಿಸಲು ಅಗತ್ಯವಾದ ಒಂದು ಉನ್ನತ ಹಾಗೂ ಸ್ಪಷ್ಟವಿಚಾರ ಮತ್ತು ಜೀವನದ ಅಂತ್ಯದೆಶೆಯಲ್ಲಿ ಆಧ್ಯಾತ್ಮಿಕ ಪರಿಪೂರ್ಣತೆ ಅಥವಾ ಮೋಕ್ಷಗಳ ಬಗ್ಗೆ ತೀವ್ರವಾಗಿ ಜಾಗೃತವಾಗಿದ್ದ ಮನ ಇವುಗಳುಳ್ಳ ಆ ಜನ ಎಂದೂ ಅನಾಗರಿಕವಾಗಿದ್ದಿಲ್ಲ.

ಆ ಕಾಲದ ಶುದ್ಧ ಸಾಹಿತ್ಯವೆಂದರೆ ಮಹಾಭಾರತ ಮತ್ತು ರಾಮಾಯಣ. ಬೃಹದಾಕಾರದ ಮಹಾಭಾರತವು ಅನೇಕ ಶತಮಾನಗಳಲ್ಲಿ ಭಾರತದ ಮನವು ನಡೆಸಿದ ಕವಿಕರ್ಮದ ಬಹುಭಾಗವನ್ನು ಗರ್ಭೀಕರಿಸಿಕೊಂಡಿದೆ. ಈ ಎರಡೂ ತಮ್ಮ ಉದ್ದೇಶದಲ್ಲಿಯೂ ಸಾರಾಂಶದಲ್ಲಿಯೂ ಮಹಾಕಾವ್ಯಗಳೆನಿಸಿವೆ. ಆದರೆ ಅವೆರಡೂ ಅನ್ಯಾದೃಶವೂ ತಮ್ಮ ತತ್ವದೃಷ್ಟಿಯಲ್ಲಿ ಪರಸ್ಪರ ಸೂಕ್ಷ್ಮದೃಷ್ಟಿಭೇದವುಳ್ಳವೂ ಆಗಿವೆ. ಅವುಗಳಲ್ಲಿ ಪ್ರಾಚೀನ ವೀರಕಥೆ, ಹಳೆಯ ಕಾಲದ ಸಂಗತಿಗಳ ರೂಪಾಂತರ ಇವೆ. ಅವುಗಳ ಸ್ವರೂಪವು ಸಾಕಷ್ಟು ಬೆಳೆದ ಸಾಮಾಜಿಕ, ಬೌದ್ಧಿಕ, ನೈತಿಕ ಸಂಸ್ಕೃತಿಯ ಅವಧಿಗೆ ಸೇರಿದ್ದು. ಅವು ಪರಿಪಕ್ವವಾದ ದೊಡ್ಡ ಮನಸ್ಸು ಮತ್ತು ಸುಸಂಸ್ಕೃತವಾದ ಗಾಂಭೀರ್ಯಗಳಿಂದ ಪರಿಪುಷ್ಟವಾದ ಪಳಗಿದ ವಿಚಾರ ನಿಕಾಯದಿಂದ ಸಂಪನ್ನವಾಗಿವೆ. ಆದ್ದರಿಂದ ಈ ಕಾವ್ಯಗಳು ಪುರಾತನ ವೀರಗಾಥಾದಿಗಳಿಗಿಂತ ತೀರ ಭಿನ್ನವಾಗಿವೆ; ದೃಷ್ಟಿವೈಶಾಲ್ಯ, ವಿಷಯ ಮತ್ತು ಉದ್ದೇಶದ ಔನತ್ಯಗಳಲ್ಲಿ ಎರಡನೆಯದಕ್ಕಿಂತ ಅವು ಹೆಚ್ಚಿನವೆನಿಸಿವೆ. ರಸ, ರೀತಿ, ಗುಣಗಳ ವಿಷಯವನ್ನು ಎತ್ತದೆ ಹೇಳುವುದಾದರೂ

ಅವು ಹೋಮರನ ಕಾವ್ಯಗಳಿಗಿಂತ ಮೇಲ್ತರಗತಿಯವೆಂದು ಹೇಳಬೇಕು. ಹೀಗಿದ್ದರೂ ಅವುಗಳಲ್ಲಿ ಒಂದು ಬಗೆಯ ಪ್ರಾಚೀನತೆಯ ಧ್ವನಿ ಇದೆ. ನೇರ ಹಾಗೂ ಮನಂಬುಗುವ ವೀರ್ಯವತ್ತೆ, ಒಂದು ರೀತಿಯ ನಾವೀನ್ಯ, ಪ್ರಾಗಲ್ಭ್ಯ, ಜೀವಸ್ಪಂದ, ಸಾಮರ್ಥ್ಯ–ಸೌಂದರ್ಯಗಳ ಸರಳತನ ಅವನ್ನು ವಿಪುಲ ಪರಿಕರದಿಂದ ರಚಿತವಾದ ವರ್ಜಿಲ್, ಮಿಲ್ಟನ್, ಫಿರ್‌ದುಸಿ ಮತ್ತು ಕಾಲಿದಾಸರ ಕಾವ್ಯಗಳಿಗಿಂತ ಬೇರೆ ಬಗೆಯವನ್ನಾಗಿ ಮಾಡಿವೆ. ಹೀಗೆ ಪ್ರಾಚೀನ ವೀರಯುಗದ ಬಾಳಿನ ತೀವ್ರಗತಿಯ ಪ್ರೌಢಿಯು ನೈತಿಕ, ಬೌದ್ಧಿಕ, ತಾತ್ವಿಕ ಮನದ ಬಲಿಷ್ಠ ಬೆಳವಣಿಗೆ ಮತ್ತು ಚಟುವಟಿಕೆಗಳೊಡನೆ ಬೆರೆತ ವಿಲಕ್ಷಣ ಸಂಯೋಗವು ಅವುಗಳ ಗಣ್ಯ ಲಕ್ಷಣವೆನಿಸಿದೆ. ಈ ಪುರಾಣ ಮಹಾಕಾವ್ಯಗಳು ಒಂದು ಜನಾಂಗದ ತಾರುಣ್ಯದ ವಾಣಿ; ಆದರೆ ಅದೆಂಥ ಯೌವನ! ಆ ಯೌವನವಾದರೋ ಕೇವಲ ಹೊಸದು, ನಯವಾದುದು–ಹುರುಪಿನದಷ್ಟೇ ಅಲ್ಲ, ಅದು ಒಂದು ಬಗೆಯ ಮಹಾಯೌವನ ಸುಸಂಸ್ಕೃತ, ವಿವೇಕಸಂಪನ್ನ, ಉದಾರ ಯೌವನ. ಆದರೆ ಇದು ಕೇವಲ ಮನಃಪ್ರವೃತ್ತಿಯ ಭೇದ; ಇದಕ್ಕೂ ದೂರಸ್ಪರ್ಶಿಯಾದ ವ್ಯತ್ಯಾಸವು ಅವುಗಳ ಇಡಿ ಕಲ್ಪನೆ ಕೃತ್ಯ ಮತ್ತು ರಚನೆ ಇವುಗಳಲ್ಲಿದೆ.

ಹಳೆಯ ವೈದಿಕ ಶಿಕ್ಷಣ ಪದ್ಧತಿಯ ಒಂದು ಅಂಗವೆಂದರೆ ಪುರಾಣೇತಿಹಾಸ ಜ್ಞಾನ. ಮಹಾಭಾರತ–ರಾಮಾಯಣಗಳನ್ನು ಹಿಂದಿನ ವಿಮರ್ಶಕರು ಅನಂತರ ಬಂದ ಮಹಾಕಾವ್ಯಗಳಿಂದ ಭಿನ್ನವೆಂದು ತೋರಿಸಲು ಈ ಪದವನ್ನು ಬಳಸುತ್ತಿದ್ದರು. ಯಾವುದಾರೂ ಒಂದು ಆಧ್ಯಾತ್ಮಿಕ, ನೈತಿಕ ಕಾವ್ಯದೃಷ್ಟಿಯಿಂದ ಆದರ್ಶವನ್ನು ಹೇಳುವ ಗಣ್ಯ ಕಥಾನಕ ರೂಪದಲ್ಲಿ ಕಾವ್ಯದೃಷ್ಟಿಯಿಂದ ಎರಕ ಹೊಯ್ದ ಹಳೆಯ ಚರಿತ್ರೆ ಅಥವಾ ಪುರಾಣ ಪರಂಪರೆಗೆ ಇತಿಹಾಸವೆಂದು ಹೇಳುತ್ತಾರೆ. ಆದುದರಿಂದ ಇತಿಹಾಸವೆಂಬುದು ಜನರ ಮನಸ್ಸನ್ನು ರೂಪಿಸುವಂಥದೆನಿಸಿತು. ಮಹಾಭಾರತ–ರಾಮಾಯಣಗಳು ದೊಡ್ಡ ಪ್ರಮಾಣದಲ್ಲಿ ಘನೋದ್ದೇಶವನ್ನಿಟ್ಟುಕೊಂಡು ಬರೆದ ಇತಿಹಾಸಗಳು. ಇವುಗಳನ್ನು ಬರೆದ ಮತ್ತು ಆನಂತರ ಈ ಬರವಣಿಗೆಯನ್ನು ಬೆಳೆಸಿದ ಕವಿಗಳು ಒಂದು ಹಳೆಯ ಕತೆಯನ್ನು ಸೊಗಸಾಗಿಯೂ, ಉದಾತ್ತವಾಗಿಯೂ, ಹೇಳಲು ಹೊರಟವರಲ್ಲ, ಅಥವಾ ರಸಭಾರ ಸಂಪತ್ತನ್ನು ಅಳವಡಿಸಿ ಒಂದು ಕಾವ್ಯವನ್ನು ಬರೆಯಹೊರಟವರಲ್ಲ. ಹೀಗಿದ್ದರೂ ಈ ಎರಡನ್ನು ಅವರು ಬಹು ಯಶಸ್ವಿಯಾಗಿ ಸಾಧಿಸಿದ್ದಾರೆ. ಅವರ ಮುಖ್ಯೋದ್ದೇಶವಾದರೋ ಜೀವನಶಿಲ್ಪಿಗಳಾಗಿ, ರಚನಾತ್ಮಕ ವಿವರಣಕಾರರಾಗಿ ಬರೆಯುವುದು– ನಾಡಿನ ರಾಷ್ಟ್ರದೃಷ್ಟಿಯ ರಾಷ್ಟ್ರಧರ್ಮದ ರಾಷ್ಟ್ರನೀತಿಯನ್ನು ಅರ್ಥವತ್ತಾಗಿ ರೂಪಿಸುವುದೇ ಆಗಿತ್ತು. ಈ ಮಹಾಕಾವ್ಯಗಳಲ್ಲಿ ಬಾಳಿನ ಆಳದ ವಿಚಾರ, ಧರ್ಮಸಮಾಜಗಳನ್ನು ಕುರಿತ ವಿಶಾಲವೂ ಸಾರವತ್ತೂ ಆದ ಸಮೀಕ್ಷೆ, ತಾತ್ವಿಕ ಕಲ್ಪನೆಯ ಒಂದು ಬಗೆಯ ಲಹರಿ ಕಂಡುಬರುವುದಲ್ಲದೆ ಬೌದ್ಧಿಕ ಕಲ್ಪಕತೆಯ ಹಾಗೂ ಸಜೀವ ನಿರೂಪಣೆಯ ಮಹಾಸಾಮರ್ಥ್ಯದಿಂದ

ಪ್ರಾಚೀನ ಭಾರತದ ಇಡಿ ಸಂಸ್ಕೃತಿಯನ್ನು ಸಮಾವೇಶಗೊಳಿಸಿದ್ದು ಸ್ಪಷ್ಟವಾಗುತ್ತದೆ. ಭಾರತವನ್ನು ಪಂಚಮವೇದವೆಂದೂ ಹೇಳುತ್ತಾರೆ. ಈ ಎರಡೂ ಪುರಾಣ ಮಹಾಕಾವ್ಯಗಳನ್ನು ಕೇವಲ ಕಾವ್ಯಗಳೆಂದಲ್ಲದೆ ಧರ್ಮಶಾಸ್ತ್ರಗಳೆಂದೂ ಗಣಿಸುತ್ತಾರೆ. ಇವುಗಳಲ್ಲಿಯ ವಿಸ್ತಾರವಾದ ಧಾರ್ಮಿಕ, ನೈತಿಕ, ಸಾಮಾಜಿಕ ಮತ್ತು ರಾಜಕೀಯ ಉಪದೇಶವು ಜನದ ಬಾಳು ಬಗೆಗಳ ಮೇಲೆ ಮಾಡಿದ ಮಹಾಪರಿಣಾಮವನ್ನು ಕಂಡು ಇವನ್ನು ಭಾರತೀಯ ಬೈಬಲ್ ಎಂದೂ ಹೇಳುವುದುಂಟು. ಆದರೆ ಇದು ಅಷ್ಟೇನೂ ಸರಿಯಾದ ಉಪಮಾನವಲ್ಲ. ಯಾಕೆಂದರೆ ಇವು ಭಾರತೀಯರ ಬೈಬಲ್ಲು, ವೇದ, ಉಪನಿಷತ್ತು, ಪುರಾಣ, ತಂತ್ರ, ಧರ್ಮಶಾಸ್ತ್ರಗಳನ್ನಲ್ಲದೆ ಪ್ರದೇಶ ಭಾಷೆಗಳಲ್ಲಿಯ ಧರ್ಮಕಾವ್ಯದ ಬಹು ಭಾಗವನ್ನು ಒಳಗೊಂಡಿವೆ. ಉನ್ನತವಾದ ನೈತಿಕ ಕಲ್ಪನೆ ಮತ್ತು ಸಾಂಸ್ಕೃತಿಕ ಆಚಾರಗಳನ್ನು ಪ್ರಚಾರ ಮಾಡುವುದೇ ಈ ಪುರಾಣ ಮಹಾಕಾವ್ಯಗಳ ಕಾರ್ಯವಾಗಿತ್ತು. ಭಾರತೀಯ ಸತ್ವ ಮತ್ತು ವಿಚಾರಗಳಲ್ಲಿ ಅತ್ಯುತ್ತಮವಾದುದೆಲ್ಲವನ್ನು, ಜೀವನಕ್ಕೆ ಸಹಜವಾದುದನ್ನು, ಕಾವ್ಯಮಯ ಕಲ್ಪಕತೆ ಮತ್ತು ಆದರ್ಶ ಮನೋಭಾವಗಳಿಗೆ ಸತ್ಯವೆನಿಸಿದವುಗಳನ್ನು ಅಥವಾ ದೇಶದ ಸಾಮಾಜಿಕ, ನೈತಿಕ ಹಾಗೂ ರಾಜಕೀಯ ಸಂಸ್ಕೃತಿಗೆ ವಿಶಿಷ್ಟಾಂಶವೆನಿಸಿದ್ದನ್ನು ಮತ್ತು ಪ್ರಕಾಶಕವೆನಿಸಿದ್ದನ್ನು ಜನರಿಗೆ ಪ್ರಾತಃಸ್ಮರಣೀಯರೂ ಪ್ರಾತಿನಿಧಿಕ ಪುರುಷರೂ ಎನಿಸಿದ ಮಹಾವ್ಯಕ್ತಿಗಳ ಸುತ್ತ ಕಾವ್ಯಮಯ ಕಥಾಭಿತ್ತಿಯ ಮೇಲೆ ಮಹಾಕಾವ್ಯದ ಚೌಕಟ್ಟಿನಲ್ಲಿ ಪರಿಣಾಮಕಾರಿಯಾಗಿಯೂ ಮನಸ್ಸಿಗೆ ಹಿಡಿಯುವಂತೆಯೂ ಎದ್ದುಕಾಣುವಂತೆಯೂ ಚಿತ್ರಿಸುವುದೇ ಇವುಗಳ ಗುರಿಯಾಗಿತ್ತು. ಆ ನಂತರದ ಕಾಲದಲ್ಲಿ ಜನರು ತಮ್ಮ ಧರ್ಮದ ಅಂಗ ಅತ್ಯಂತ ಆಳವಾದ ಸಜೀವ ಸತ್ಯ ಎಂದು ಆರಾಧಿಸಿದ ಅರ್ಧಚಾರಿತ್ರಿಕ–ಅರ್ಧಪೌರಾಣಿಕ ಪರಂಪರೆಗಳನ್ನು ಒಳಗೊಂಡ ಕಾವ್ಯಶರೀರದಲ್ಲಿ ಈ ಎಲ್ಲ ವಿಷಯಗಳನ್ನು ಒತ್ತಟ್ಟಿಗೆ ತಂದು ರಸವತ್ತಾದ ಕಲಾಕೌಶಲದಿಂದ ಇಲ್ಲಿ ವರ್ಣಿಸಲಾಗಿದೆ. ಮೂಲ ಸಂಸ್ಕೃತದಲ್ಲೇ ಇರಲಿ, ಅಥವಾ ಪ್ರದೇಶಭಾಷೆಯಲ್ಲೇ ಬರೆಯಲ್ಪಟ್ಟಿರಲಿ–ಈ ರಾಮಾಯಣ ಮಹಾಭಾರತಗಳನ್ನು ಹರಿಕತೆದಾಸರು, ಲಾವಣಿಕಾರರು, ಗಮಕಿಗಳು, ಭಾಗವತರು ಸಾಮಾನ್ಯಜನರಲ್ಲಿ ಈ ರೂಪದಲ್ಲಿಯೇ ಪ್ರಚುರಪಡಿಸಿದರು. ಆದ್ದರಿಂದ ಇವು ಜನತೆಯ ಶಿಕ್ಷಣ, ಸಂಸ್ಕಾರಗಳ ಮುಖ್ಯ ಸಾಧನಗಳಾಗಿ ಅವರ ವಿಚಾರ, ಗುಣ, ರಸದೃಷ್ಟಿ ಹಾಗೂ ಧರ್ಮಬುದ್ಧಿಗಳನ್ನು ರೂಪಿಸಿದವಲ್ಲದೆ ನಿರಕ್ಷಕರಿಗೂ ಕೆಲಮಟ್ಟಿನ ತತ್ವಜ್ಞಾನ, ನೀತಿ, ಸಾಮಾಜಿಕ–ರಾಜಕೀಯ ಕಲ್ಪನೆ, ರಸ, ಭಾವ, ಕಾವ್ಯ, ಕಟ್ಟುಕತೆ ಮತ್ತು ಶೃಂಗಾರ ಸಾಹಸ ಕಥಾನಕಗಳನ್ನೂ ಪರಿಚಯ ಮಾಡಿಕೊಟ್ಟುವು. ಸುಸಂಸ್ಕೃತ ವರ್ಗಗಳಿಗಾಗಿ ವೇದೋಪನಿಷತ್ತುಗಳಲ್ಲಿಯೂ ತತ್ವಜ್ಞಾನದ ಸೂತ್ರಗಳಲ್ಲಿಯೂ ಧರ್ಮಗ್ರಂಥಗಳಲ್ಲಿಯೂ ಹೇಳಿದ ಅಂಶಗಳನ್ನು ಸಾಮಾನ್ಯರಿಗಾಗಿ ಇಲ್ಲಿ ಸುಪರಿಚಿತ ಕಥೆಗಳಿಗೆ ಸಂಬಂಧಿಸಿದ ಜೀವನದ ಸುಸ್ಪಷ್ಟ

ಸನ್ನಿವೇಶಗಳಲ್ಲಿ ಎರಕ ಹೊಯ್ದು ಸಚೇತನ ಶಕ್ತಿಯಾಗಿ ಪರಿಣಮಿಸಿದ ಕಲಾಮಯವೂ ಜೀವಂತವೂ ಆದ ರೂಪದಲ್ಲಿ ಇಡಲಾಗಿದೆ. ಏಕಕಾಲದಲ್ಲಿ ಮನ–ಭಾವ–ಬುದ್ಧಿಗಳಿಗೆ ಬಹುಬೇಗ ನಾಟುವ ಕಾವ್ಯವಾಣಿಯ ಮೂಲಕ ಇವನ್ನು ಜನರು ಬಹುಬೇಗ ಅರಗಿಸಿಕೊಳ್ಳಲು ಶಕ್ತರಾದರು.

ವಿಶೇಷತಃ ಮಹಾಭಾರತವು ಭರತವಂಶೀಯರ ಕಥೆಯಷ್ಟೇ ಅಲ್ಲದೆ, ರಾಷ್ಟ್ರೀಯ ಪರಂಪರೆಯಾಗಿ ಮುಗಿದುಹೋದ ಮಹಾಘಟನೆಯ ಇತಿಹಾಸವಾಗಿದೆ. ಅದಕ್ಕೂ ಹೆಚ್ಚಾಗಿ ಅದು ಭಾರತದ ಆತ್ಮ, ಧರ್ಮ, ನೀತಿ, ಸಾಮಾಜಿಕ ಹಾಗೂ ಧಾರ್ಮಿಕ ಆದರ್ಶ, ಸಂಸ್ಕೃತಿ ಮತ್ತು ಜೀವನಗಳ ಒಂದು ವ್ಯಾಪಕವಾದ ಮಹಾಪುರಾಣವೆನಿಸಿದೆ. ಭಾರತದಲ್ಲಿದ್ದದ್ದೆಲ್ಲ ಮಹಾಭಾರತದಲ್ಲಿ ಇದೆ ಎಂಬ ರೂಢಿಯ ಮಾತಿನಲ್ಲಿ ಸ್ವಲ್ಪ ಸತ್ಯವಿದೆ. ಮಹಾಭಾರತವು ಒಬ್ಬನೇ ಒಬ್ಬ ವ್ಯಕ್ತಿಯ ಮನೋಭಾವಗಳ ಪ್ರಕಟನೆ ಅಲ್ಲ, ನಿರ್ಮಿತಿ ಅಲ್ಲ; ಅದು ಇಡಿ ಒಂದು ರಾಷ್ಟ್ರಚೇತನೆಯ ಅಭಿವ್ಯಕ್ತಿ. ಅದು ಭಾರತೀಯರೇ ಒಟ್ಟು ಬರೆದ ಒಂದು ಆತ್ಮಕಥನ ಅದಕ್ಕಿಂತ ಚಿಕ್ಕದಾದ ಮತ್ತು ಪರಿಮಿತ ಉದ್ದೇಶವುಳ್ಳ ಮಹಾಕಾವ್ಯಕ್ಕೆ ಅನ್ವಯಿಸುವ ಪದ್ಯ–ಕಲಾ–ನಿಯಮಗಳನ್ನು ಅದಕ್ಕೆ ಅನ್ವಯಿಸುವುದು ವ್ಯರ್ಥ; ಹೀಗಿದ್ದರೂ ಅದರ ವಿವರಗಳ ಮೇಲೂ ಇಡೀ ರಚನೆಯ ಮೇಲೂ ಲಕ್ಷ್ಯಪೂರ್ವಕವಾಗಿ ಮಹಾ ಕಲೆಗಾರಿಕೆಯನ್ನು ವೆಚ್ಚ ಮಾಡಿ ಆ ಇಡಿ ಪದ್ಯಕಾವ್ಯವನ್ನು ಕಟ್ಟಲಾಗಿದೆ. ಒಟ್ಟು ಆ ಕೃತಿಯನ್ನು ಒಂದು ವಿಶಾಲವಾದ ರಾಷ್ಟ್ರೀಯ ದೇವಾಲಯದಂತೆ ಕಟ್ಟಲಾಗಿದೆ. ಅದನ್ನು ನೋಡಹೋದರೆ ಕ್ರಮಶಃ ಒಂದು ಭವನದಿಂದ ಮತ್ತೊಂದು ಭವನಕ್ಕೆ ಹೋಗುವಾಗ ತನ್ನ ಕ್ಲಿಷ್ಟ ಕಲ್ಪನೆಯನ್ನು ಅನಾವರಣ ಮಾಡುತ್ತ ಹೋಗುವುದು ಕಾಣುತ್ತದೆ. ಅದರಲ್ಲಿ ಮೂರ್ತಿಗಳು, ಶಿಲಾಶಾಸನಗಳು, ದಿವ್ಯ ಅಥವಾ ದಿವ್ಯಮಾನವ ಅಳತೆಯಲ್ಲಿ ಕಡೆದ ಆಕೃತಿಗಳ ಗುಂಪು ಅರ್ಥಪೂರ್ಣವಾಗಿ ಕಂಗೊಳಿಸುತ್ತವೆ.

ಅಲ್ಲಿಗೆ ಅತಿಮಾನವತೆಗೆ ಅರ್ಧಮರ್ಧ ಏರಿಸಲ್ಪಟ್ಟ ಶೋಷಿತ ಮನುಕುಲವು ಮಾನವನ ಉದ್ದೇಶ, ಕಲ್ಪನೆ, ಭಾವನೆಗಳಿಗೆ ಅನುಗುಣವಾಗಿರುವುದು ಕಂಡು ಬರುವುದು. ವಾಸ್ತವಿಕತೆಯನ್ನು ಪದೇ ಪದೇ ಆದರ್ಶದ ಧಾಟಿಗೆ ಏರಿಸಲಾಗುವುದನ್ನೂ ಜಗತ್ತಿನ ಹಿನ್ನೆಲೆಯಲ್ಲಿರುವ ಲೋಕಗಳ ಶಕ್ತಿಗಳ ಸತ್ತೆ ಹಾಗೂ ಜಾಗೃತ ಸ್ವಭಾವಗಳಿಗೆ ಒಳಪಡಿಸಿದ ಜಗಜ್ಜೀವನದ ವಿಶಾಲ ಚಿತ್ರವನ್ನೂ ಅಲ್ಲದೆ ಈ ಕಾವ್ಯಮಯ ಕಥೆಯ ವಿಸ್ತೃತ ಸೋಪಾನಗಳಲ್ಲಿ ಕಡೆದ ಒಂದೇ ಒಂದು ಸುಸಂಗತ ಕಲ್ಪನೆಯ ಸುದೀರ್ಘ, ಮೂರ್ತ ಮೆರವಣಿಗೆಯು ಇಡಿಯನ್ನು ಸೂತ್ರಬದ್ಧವನ್ನಾಗಿ ಮಾಡಿದುದನ್ನೂ ನಾವು ನೋಡಬಹುದು. ಮಹಾಕಥನ ಕಾವ್ಯಕ್ಕೆ ಬೇಕಾದ ಹಾಗೆ ಕಥೆ ನಡೆಸಿಕೊಂಡು ಹೋಗುವುದೇ ಅದರ ಮುಖ್ಯ ಗುರಿಯಾಗಿದೆ; ಮತ್ತು ಆ ಕಥನವನ್ನು ಘನತೆಯಲ್ಲಿ

ವಿಶಾಲವೂ ಎದ್ದು ಕಾಣುವಂತಹುದೂ, ವಿವರಗಳಲ್ಲಿ ಚಮತ್ಕಾರಯುಕ್ತವೂ ಪರಿಣಾಮಕರವೂ ಅಲ್ಲದೆ ಯಾವಾಗಲೂ ಶೈಲಿಯಲ್ಲಿಯೂ ಗತಿಯಲ್ಲಿಯೂ ಸರಳ, ದೃಢ ಆಗಿರುವ ವಿಸ್ತಾರವೂ ಸೂಕ್ಷ್ಮವೂ ಆದ ಓಟದಲ್ಲಿ ನಡೆಸಿಕೊಂಡು ಹೋಗಲಾಗಿದೆ. ಅದೇ ಸಮಯಕ್ಕೆ ಒಂದು ಕಥನ ಕಾವ್ಯವಾಗಿ ಹೊರಟ ಅದು ವಸ್ತುವಿನಲ್ಲಿ ಅತಿ ಮನೋಹರವೂ ಕಥನ ರೀತಿಯಲ್ಲಿ ಮನಂಬುಗುವಂತೆಯೂ ಇದ್ದರೂ ಅದಕ್ಕಿಂತ ಹೆಚ್ಚಾಗಿ ಅದು ಉದ್ದಕ್ಕೂ ಭಾರತೀಯ ಜೀವನ ಹಾಗೂ ಸಂಸ್ಕೃತಿಯ ಬೀಜ ಭೂತ ಕಲ್ಪನೆಗಳನ್ನು ಪ್ರತಿನಿಧಿಸುವ ಸಾರ್ಥಕ ಕಥೆ, ಇತಿಹಾಸ ಎನಿಸಿದೆ. ಅದರ ಪ್ರಧಾನೋದ್ದೇಶವು ಧರ್ಮದ ಭಾರತೀಯ ಕಲ್ಪನೆಯೇ. ಇಲ್ಲಿ ಆಧ್ಯಾತ್ಮಿಕ, ಧಾರ್ಮಿಕ ಮತ್ತು ಆಂತರಿಕ ಪ್ರಪಂಚಗಳಿಂದ ತಂದ ವೈದಿಕ ಕಲ್ಪನೆಗಳಾದ ಸತ್ಯ–ಪ್ರಕಾಸ–ಐಕ್ಯಗಳ ದೇವತೆಗಳಿಗೂ ತಮಸ್ಸು ಅನೈಕ್ಯ–ಅನೃತಗಳ ಶಕ್ತಿಗಳಿಗೂ ನಡೆವ ಘರ್ಷಣೆಯನ್ನು ಬೌದ್ಧಿಕ, ನೈತಿಕ ಮತ್ತು ಜೈವಿಕ ಹೊರವಳಯಕ್ಕೆ ಎಳೆಯಲಾಗಿದೆ. ಆ ಘರ್ಷಣೆಯಲ್ಲಿ ಎರಡು ಬಗೆಯಿದೆ–ಒಂದು ವೈಯಕ್ತಿಕ, ಮತ್ತೊಂದು ರಾಜಕೀಯ. ವೈಯಕ್ತಿಕ ಕ್ಷೇತ್ರದಲ್ಲಿ ಭಾರತೀಯ ಧರ್ಮದ ಮಹತ್ತರ ಮೂರ್ತಿಗಳೆನಿಸಿದ ಮಾದರಿಯ ಹಾಗೂ ಪ್ರಾತಿನಿಧಿಕ ವ್ಯಕ್ತಿಗಳಿಗೂ ಹಟ, ಧರ್ಮದ ದುರುಪಯೋಗ ಮತ್ತು ಆಸುರೀ ಅಹಂಕಾರಗಳ ಮೂರ್ತಿಗಳೆನಿಸಿದ ವ್ಯಕ್ತಿಗಳಿಗೂ ನಡುವೆ ಘರ್ಷಣೆ ನಡೆಯುತ್ತದೆ. ರಾಜಕೀಯದಲ್ಲಾದರೂ ಈ ವ್ಯಕ್ತಿಘರ್ಷಣವು ಅಂತಾರಾಷ್ಟ್ರೀಯ ಘರ್ಷಣದ ಮಟ್ಟವನ್ನು ಮುಟ್ಟಿ ನ್ಯಾಯಧರ್ಮಗಳ ಒಂದು ಹೊಸ ಶಾಸನವನ್ನು ಸ್ಥಾಪಿಸುವುದರಲ್ಲಿ ರಾಜರ ಹಾಗೂ ಶ್ರೀಮಂತರ ಕುಲಗಳ ಆಳಿಕೆಗೆ ಬದಲಾಗಿ ಯುದ್ಧಾಸಕ್ತ ಕುಲಗಳನ್ನು ಒಂದುಗೂಡಿಸುವ ಶಾಂತವೂ, ನ್ಯಾಯವೂ, ದಯಾಮಯವೂ ಆದ ಧರ್ಮರಾಜ್ಯ ಅಥವಾ ಧರ್ಮ ಸಾಮ್ರಾಜ್ಯದ ಪ್ರತಿಷ್ಠಾಪನೆಯಲ್ಲಿ ಕೊನೆಗೊಳ್ಳುತ್ತದೆ. ಇದು ಅದೇ ಹಳೆಯ ದೇವಾಸುರ ಸಮರವನ್ನು ಮಾನವಜೀನದ ರೂಪದಲ್ಲಿ ಚಿತ್ರಿಸಿದ್ದು.

ಭಾರತದ ವೈಯಕ್ತಿಕ ಮತ್ತು ರಾಷ್ಟ್ರೀಯ ಜೀವನ ಗತಿಗಳನ್ನು ಮೊದಲು ಮೇಲೆ ಹೇಳಿದ ಎರಡು ಬಗೆಯ ಘರ್ಷಣೆಗಳ ಹಿನ್ನೆಲೆಯಲ್ಲಿಯೂ ಅನಂತರ ರಾಜ್ಯ, ಸೈನ್ಯ, ರಾಷ್ಟ್ರಗಳ ಮುನ್ನೆಲೆಯಾಗಿಯೂ ಚಿತ್ರಿಸಿದ ಅದರ ರೀತಿಯು ಭಾರತೀಯ ಶಿಲ್ಪಕಲೆಯಲ್ಲಿ ಕಂಡುಬರುವ ಉನ್ನತ ಪ್ರತಿಭೆಯನ್ನು ತೋರಿಸುತ್ತದೆ. ಕೃತಿಯ ಇಡಿ ರಚನೆಯು ಬಹು ವಿಶಾಲವಾದ ಕೌಶಲ ಹಾಗೂ ದರ್ಶನಗಳ ದ್ಯೋತಕವಾಗಿದೆ. ವಾಸ್ತುಶಿಲ್ಪದಲ್ಲಿ ಹೇಗೋ ಹಾಗೇ ಇಲ್ಲಿಯೂ ಪೂರ್ಣದೃಷ್ಟಿಯಿಂದ ಮಹಾವಕಾಶವನ್ನು ಆಕ್ರಮಿಸುವ ಶಕ್ತಿಯೂ, ಆ ಅವಕಾಶಗಳಲ್ಲಿ ಸೂಕ್ಷ್ಮವೂ, ಸುದೃಢವೂ, ಅರ್ಥಪೂರ್ಣವೂ ಆದ ವಿವರಗಳನ್ನು ತುಂಬಿಸುವ ಪ್ರವೃತ್ತಿಯೂ ಕಂಡುಬರುತ್ತವೆ. ಇಷ್ಟೇ ಅಲ್ಲದೆ ಈ ಕಥೆಯ ಚೌಕಟ್ಟಿನಲ್ಲಿ ಅನೇಕ ಉಪಕಥೆ, ಅಜ್ಜಿಕಥೆ, ಉಪಾಖ್ಯಾನಗಳು ಇತಿಹಾಸ ಕ್ರಮಕ್ಕೆ ಉಚಿತವಾಗಿ ಬಂದಿವೆ, ಅವುಗಳಲ್ಲಿ ಹಲವು ಗಣ್ಯವಾಗಿವೆ; ಅಲ್ಲದೆ ಅತಿ

ಹೆಚ್ಚು ಪ್ರಮಾಣದಲ್ಲಿ ದಾರ್ಶನಿಕ, ಧಾರ್ಮಿಕ ಮತ್ತು ರಾಜಕೀಯ ವಿಚಾರಗಳೂ ಕೆಲವೊಮ್ಮೆ ನೇರವಾಗಿಯೂ ಮತ್ತೆ ಕೆಲವೊಮ್ಮೆ ಅಜ್ಜಿ ಕಥೆ ಮತ್ತು ಉಪಾಖ್ಯಾನಗಳ ರೂಪದಲ್ಲಿಯೂ ಬಂದಿವೆ; ಉಪನಿಷತ್ತುಗಳ ಮತ್ತು ಮಹಾದರ್ಶನಗಳ ಕಲ್ಪನೆಗಳನ್ನು ಪದೇ ಪದೇ ಯಥಾರೂಪವಾಗಿಯೂ, ಕೆಲವೊಮ್ಮೆ ಗೀತೆಯಲ್ಲಿ ಕಾಣುವಂತೆ ಹೊಸ ರೂಪವಾಗಿಯೂ ನಾವು ಇಲ್ಲಿ ಕಾಣುತ್ತೇವೆ. ಧಾರ್ಮಿಕ ಪುರಾಣ ಕತೆ, ಆಖ್ಯಾಯಿಕೆ, ಕಲ್ಪನೆ ಮತ್ತು ಉಪದೇಶಗಳು ಈ ಕಾವ್ಯಶರೀರದ ಸ್ನಾಯುಗಳಾಗಿವೆ; ಆ ಮನುಕುಲದ ನೈತಿಕ ಕಲ್ಪನೆಗಳಿಗೆ ಆಖ್ಯಾಯಿಕೆ, ಉಪಾಖ್ಯಾನಗಳ ರೂಪವನ್ನು ಕೊಡಲಾಗಿದೆ; ಅಲ್ಲದೆ ಕಥೆಯಲ್ಲಿ ಬರುವ ಪಾತ್ರಗಳಲ್ಲಿಯೂ ಅವಕ್ಕೆ ಮೂರ್ತರೂಪವನ್ನು ಕಲ್ಪಿಸಲಾಗಿದೆ. ಅದೇ ವೇಳೆಗೆ ಧಾರ್ಮಿಕ ರಾಜಕೀಯ ಸಂಸ್ಥೆಗಳನ್ನೂ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಇದರ ಮೇಲೆ ಜನತೆಯ ಜೀವನಕ್ಕೆ ಸಂಬಂಧಿಸಿದ ರಸಪ್ರಜ್ಞೆಯ ಮತ್ತು ಇತರ ಧ್ವನಿಗಳಿಗೂ ಸ್ಥಳ ಮಾಡಿಕೊಡಲಾಗಿದೆ. ಈ ಎಲ್ಲವನ್ನೂ ಸೇರಿಸಿ ಅದನ್ನು ಅದ್ಭುತ ಕೌಶಲ್ಯದಿಂದಲೂ ವಾಸ್ತವಿಕತೆಯಿಂದಲೂ ಒಂದು ಮಹಾಪುರಾಣ–ಕಾವ್ಯವನ್ನಾಗಿ ಹೆಣೆಯಲಾಗಿದೆ. ಅಂಥ ಸಂಯುಕ್ತವೂ ಸುಶ್ಲಿಷ್ಟವೂ ಆದ ಯೋಜನೆಯಲ್ಲಿ ಅನಿವಾರ್ಯವಾಗಿ ಬರುವ ವಿಸಂಗತಿಗಳೂ ಅಸಮಾನ ಪ್ರತಿಭರಾದ ಅನೇಕ ಕವಿಗಳ ಕೈವಾಡವೂ ಆ ಪುರಾಣ ಮಹಾಕಾವ್ಯ ಯೋಜನೆಯ ಸರ್ವತ್ರ ಕಂಡು ಬರುವ ಘನಜಟಿಲತೆಯಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ಕಂಡುಕೊಂಡಿವೆ. ಆದ್ದರಿಂದ ಅವು ಪೂರ್ಣತಾತ್ಪರ್ಯವನ್ನು ಒಡೆಯದೆ ಅದಕ್ಕೆ ಪೋಷಕವೇ ಆಗಿವೆ. ಈ ಪೂರ್ಣ ಕೃತಿಯು ಜನತೆಯ ಪರಿಪೂರ್ಣವಾದ ಆತ್ಮ, ವಿಚಾರ ಮತ್ತು ಜೀವನಗಳ ಇಡಿಯನ್ನು ಬಿಂಬಿಸುವ ಸಾಮರ್ಥ್ಯವುಳ್ಳ ಅನ್ಯಾದೃಶವಾದ ಕಾವ್ಯವಾಣಿ ಎನಿಸಿದೆ.

ರಾಮಾಯಣವು ಸಾರತಃ ಮಹಾಭಾರತದಂತೆಯೇ ಇರುವ ಕೃತಿ; ಆದರೆ ಅದು ಸಂವಿಧಾನದಲ್ಲಿ ಸರಳತರ, ಆದರ್ಶ ಎನಿಸಿದೆ. ಪ್ರಕ್ಷಿಪ್ತಾಂಶ ಸಾಕಷ್ಟು ಇದ್ದರೂ ಆ ಕಾವ್ಯದ ರಚನೆಯ ಸೂತ್ರಬದ್ಧತೆಯು ಅಷ್ಟು ಕ್ಲಿಷ್ಟವಲ್ಲದ್ದೂ ಸುವ್ಯಕ್ತವಾದ್ದದ್ದೂ ಆಗಿದೆ. ಅದರಲ್ಲಿ ತತ್ವಚರ್ಚೆಯ ಅಂಶ ಕಡಿಮೆ, ಶುದ್ಧ ಕಾವ್ಯಮನೋಧರ್ಮದ ಅಂಶ ಹೆಚ್ಚು; ಕಲೆಗಾರಿಕೆ ಅಧಿಕ, ಕಾಮಗಾರಿ ಕಡಿಮೆ: ಇಡಿ ಕಥೆ ಮೊದಲಿಂದ ಕೊನೆವರೆಗೂ ಒಂದೇ ವಸ್ತುವನ್ನು ತೆಗೆದುಕೊಂಡಿದೆ. ಕಥಾಪ್ರವಾಹ ಎಲ್ಲೂ ಅಡ್ಡ ತಿರುಗುವುದಿಲ್ಲ. ಅದೇ ಸಮಯದಲ್ಲಿ ದರ್ಶನ ವೈಶಾಲ್ಯವಿದೆ, ಕಲ್ಪನೆಯಲ್ಲಿ ಪೌರಾಣಿಕ ಉದಾತ್ತತೆಯ ಅತಿ ವಿಸ್ತೃತ ಪಕ್ಷ ವಿಸ್ಫಾಲನದ ಉಡ್ಡಯನವಿದೆ, ವಿವರಗಳಲ್ಲಿ ಸೂಕ್ಷ್ಮ ಕಸುಬುಗಾರಿಕೆಯ ಸಂಪತ್ತಿ ಅವಿಚ್ಛಿನ್ನವಾಗಿದೆ. ಮಹಾಭಾರತದ ರಚನಾಸಾಮರ್ಥ್ಯ ಸುದೃಢ ಬಂಧ, ನಿರೂಪಣಾಕ್ರಮಗಳು ಭಾರತೀಯ ಶಿಲ್ಪಗಳನ್ನು ನೆನಪಿಗೆ ತರುತ್ತವೆ. ರಾಮಾಯಣ ರೇಖಾನ್ಯಾಸದ ವೈಭವ ಹಾಗೂ ಭವ್ಯತೆ, ವರ್ಣಸಂಪತ್ತು, ಸೂಕ್ಷ್ಮವಾದ ಸಿಂಗಾರ–ಇವು ಭಾರತೀಯ ವರ್ಣಚಿತ್ರಕಲೆಯ ರೀತಿನೀತಿಗಳ ಸಾಹಿತ್ಯಕ ಪರಿವರ್ತನ

ಎಂಬುದನ್ನು ಸೂಚಿಸುತ್ತವೆ. ಇಲ್ಲಿಯೂ ಈ ಮಹಾಕವಿ ಭಾರತದ ಒಂದು ಪ್ರಾಚೀನ ರಾಜಮನೆತನಕ್ಕೆ ಸಂಬಂಧಿಸಿದ ಪೌರಾಣಿಕ ಇತಿಹಾಸಾಂಶವನ್ನು ವಸ್ತುವನ್ನಾಗಿ ತೆಗೆದುಕೊಂಡು ಅದರಲ್ಲಿ ಜಾನಪದ ಕಥೆಗಳ ಹಾಗೂ ದಿವ್ಯಕಥೆಗಳ ಅಂಶಗಳನ್ನು ವಿವರಗಳನ್ನಾಗಿ ತುಂಬಿದ್ದಾನೆ. ಆದರೆ ಅವೆಲ್ಲವನ್ನೂ ಮಹಾ ವೈಭವ ಸಂಪನ್ನವಾದ ಮಹಾಕಾವ್ಯ ಕೃತಿಗೆ ಏರಿಸಲಾಗಿದೆ. ಅದರಿಂದ ಅವು ಉನ್ನತಾಶಯವನ್ನು ಮತ್ತು ಉನ್ನತ ಅರ್ಥವತ್ತೆಯನ್ನು ಹೊತ್ತಿವೆ. ರಾಮಾಯಣದ ಪ್ರತಿಪಾದ್ಯ ವಿಷಯ ಭಾರತದ್ದೇ; ಅಂದರೆ ದೈವೀಶಕ್ತಿ, ಆಸುರೀ ಶಕ್ತಿಗಳ ದ್ವಂದ್ವ; ಆದರೆ ರಾಮಾಯಣದ ಮಾನುಷಪಾತ್ರಗಳಲ್ಲಿ ಭಾರತಕ್ಕಿಂತ ಹೆಚ್ಚಾಗಿ ಆದರ್ಶಮಯತೆ, ಸ್ಪಷ್ಟ ಅತಿ ಮಾನುಷ ಪ್ರಮಾಣ ಮತ್ತು ಸದಸತ್ ಶಕ್ತಿಗಳೆರಡರ ಹೆಚ್ಚಿನ ಕಲ್ಪನಾ ಶಕ್ತಿಯ ಉನ್ನತಿ ಕಂಡುಬರುತ್ತದೆ. ಒಂದು ಕಡೆ ಆದರ್ಶ ಮಾನವ ಸಾತ್ವಿಕತೆ ಹಾಗೂ ನೈತಿಕತೆಗಳ ದಿವ್ಯ ಸೌಂದರ್ಯ, ನೈತಿಕ ಆದರ್ಶವನ್ನು ಎತ್ತಿ ಹಿಡಿಯುವ ಧರ್ಮದ ತಳಹದಿಯ ಮೇಲೆ ನಿಂತ ನಾಗರಿಕತೆ ಇವನ್ನು ಅಪೂರ್ವವಾದ ಮಾಧುರ್ಯ, ಸಾಮರಸ್ಯ ಮತ್ತು ರಸಪ್ರಸಾದಗಳ ಅದಮ್ಯ ಆಕರ್ಷಕತೆಯೊಡನೆ ಕಣ್ಣೆದಿರು ಇಡಲಾಗಿದೆ. ಇನ್ನೊಂದು ಕಡೆ ಅತಿಮಾನುಷ ಅಹಂಕಾರ, ಸಂಕುಚಿತ ಸ್ವಾರ್ಥ ಮತ್ತು ಸೊಕ್ಕಿ ಮಾಡುವ ಹಿಂಸೆ ಈ ಒರಟು, ಅರಾಜಕ ಮತ್ತು ವಿರೂಪ ಉಳ್ಳ ಶಕ್ತಿಗಳನ್ನು ಬಿಂಬಿಸಲಾಗಿದೆ. ಜೀವಂತವಾಗಿ ಮೂರ್ತಿಮತ್ತಾಗಿ ಮಾನಸಿಕ ಸ್ವಭಾವದ ಕಲ್ಪನೆಗಳ ಮತ್ತು ಶಕ್ತಿಗಳ ಘರ್ಷಣವನ್ನು ತಂದು ಅದರಲ್ಲಿ ರಾಕ್ಷಸನ ಮೇಲೆ ದಿವ್ಯ ಮಾನವನು ವಿಜಯ ಸಂಪಾದಿಸುವ ನಿರ್ಣಾಯಕ ಪ್ರಸಂಗಕ್ಕೆ ಒಯ್ದು ಮುಟ್ಟಿಸಲಾಗಿದೆ. ಕಾವ್ಯದ ಮೂಲ ಕಲ್ಪನೆಯ ಏಕಮೇವ ಪಾವಿತ್ರ್ಯವನ್ನೂ ಪಾತ್ರಗಳ ರೇಖಾನ್ಯಾಸದಲ್ಲಿಯ ಪ್ರಾತಿನಿಧಿಕ ಶಕ್ತಿಯನ್ನೂ ಮನೋಧರ್ಮದ ಬಣ್ಣದ ಅರ್ಥಪ್ರಾಧಾನ್ಯವನ್ನು ಕಡಿಮೆ ಮಾಡುವಂತಹ ಕ್ಲಿಷ್ಟತೆಯನ್ನೂ ಕಲ್ಪನಾ ವಿಧಾನಗಳನ್ನೂ ಬಿಟ್ಟು ಬಿಡಲಾಗಿದೆ, ಮುಖ್ಯ ತಾತ್ಪರ್ಯದ ಆದರ್ಶಕತೆಯನ್ನು ಸಾಕಷ್ಟು ಮಾನುಷ ಸಹಜವೆನ್ನುವಂತೆ ಮಾಡಲು ಅಗತ್ಯವಾದುದಷ್ಟನ್ನೇ ಇಲ್ಲಿ ಸೇರಿಸಲಾಗಿದೆ. ನಮ್ಮ ಜೀವನದ ಹಿನ್ನೆಲೆಯಲ್ಲಿರುವ ಅಗಾಧ ಶಕ್ತಿಗಳನ್ನು ಕವಿ ನಮ್ಮ ಗಮನಕ್ಕೆ ತರುತ್ತಾನೆ. ಒಂದು ಭವ್ಯ ಮಹಾಕಾವ್ಯ ದೃಶ್ಯದಲ್ಲಿ ತನ್ನ ಕಾರ್ಯವನ್ನು ಆರಂಭಿಸುತ್ತಾನೆ; ಅಲ್ಲಿ ಒಂದು ಮಹಾಸಾಮ್ರಾಜ್ಯ, ನಗರ, ಬೆಟ್ಟ, ಕಡಲುಗಳು, ಕಾಡುಮೇಡುಗಳು–ಇವನ್ನು ತನ್ನ ಕಾವ್ಯಕ್ಕೆ ಇಡೀ ಜಗತ್ತೇ ಒಂದು ದೃಶ್ಯವಾಗಿದೆಯೋ ಎಂಬಂತೆ ನಮಗೆ ಭಾಸವಾಗುವಂತೆ ಕೆಲವೇ ಉನ್ನತ ಅಥವಾ ಭಯಂಕರ ಪಾತ್ರಗಳಲ್ಲಿ ಮನುಷ್ಯನ ದಿವ್ಯ ಅಥವಾ ದಾನವ್ಯ ಸಾಧ್ಯತೆಯನ್ನು ಪ್ರತಿಮಿಸಿ ಬಣ್ಣಿಸಲಾಗಿದೆ. ಭಾರತದ ನೈತಿಕ ಹಾಗೂ ರಸಾತ್ಮಕ ಮನವನ್ನು ಇಲ್ಲಿ ಒಂದು ಸಮನ್ವಿತ ಐಕ್ಯದಲ್ಲಿ ಎರೆದು ತನ್ನ ಭಾವಪ್ರಕಾಶನದ ಶುದ್ಧ ಸೌಂದರ್ಯ ಮತ್ತು ವೈಶಾಲ್ಯಗಳ ಸರಿದೊರೆಯಲ್ಲದ ನಿದರ್ಶನದ ಮಟ್ಟವನ್ನು ಮುಟ್ಟಿಸಲಾಗಿದೆ. ಭಾರತೀಯ ಕಲ್ಪನಾಶಕ್ತಿಗೆ ಮೆಚ್ಚುವ ಮಾನವ ಚಾರಿತ್ರದ ಅತ್ಯುನ್ನತ ಹಾಗೂ ಅತಿ ಕೋಮಲ ಆದರ್ಶಗಳನ್ನು ಧೈರ್ಯ,

ಬಲ, ದಯ, ಪಾವಿತ್ರ್ಯ, ನಿಷ್ಠೆ, ಸ್ವಾರ್ಥತ್ಯಾಗಗಳನ್ನು–ಜನತೆಯ ರಸಪ್ರಜ್ಞೆಯನ್ನೂ ಮತ್ತು ಭಾವನೆಯನ್ನೂ ಆಕರ್ಷಿಸುವ ಬಣ್ಣವುಳ್ಳ ಅತಿ ಸಾರವತ್ತೂ ಸಮನ್ವಿತವೂ ಆದ ರೂಪದಲ್ಲಿ ಮೂರ್ತಿಮತ್ತಾಗಿ ಕೊಡಲಾಗಿದೆ. ಇಲ್ಲಿ ನೀತಿಗೆ ಅಂಟಿಕೊಂಡ ಅಸಹ್ಯ ಕಾಯಕ್ಲೇಶವನ್ನೂ ಅತಿಸಾಮಾನ್ಯತೆಯನ್ನೂ ಬಿಟ್ಟು ಬಾಳಿನ ಸಾಮಾನ್ಯ ಸಂಗತಿಗಳಾದ ದಾಂಪತ್ಯ, ಮಾತಾಪಿತೃವಾತ್ಸಲ್ಯ, ಭ್ರಾತೃವಾತ್ಸಲ್ಯ, ರಾಜ–ನಾಯಕ ಕರ್ತವ್ಯ, ಪ್ರಜೆ– ಅನುಯಾಯಿ ನಿಷ್ಠೆ, ಮಹಾತ್ಮರ ಮಹಾತ್ಮ್ಯ, ಸರಳಜೀವಿಗಳ ಸತ್ಯಸಂಧತೆ ಮತ್ತು ಯೋಗ್ಯತೆ–ಇವುಗಳಿಗೆ ಒಂದು ವಿಧವಾದ ದಿವ್ಯೋನ್ನತಿಯನ್ನು ಕೊಟ್ಟು, ಆದರ್ಶ ವರ್ಣಗಳ ಕಾಂತಿಯಿಂದ ನೈತಿಕಾಂಶಗಳಿಗೆ ಮಾನಸಿಕ ಅರ್ಥ–ಸೌಂದರ್ಯದ ಒಪ್ಪವನ್ನು ಈಯಲಾಗಿದೆ. ಭಾರತದ ಸಾಂಸ್ಕೃತಿಕ ಮನವನ್ನು ರೂಪಿಸುವಲ್ಲಿ ವಾಲ್ಮೀಕಿಯ ಕೃತಿಯು ಒಂದು ಕಲ್ಪನಾತೀತ ಶಕ್ತಿಯ ಪ್ರತಿನಿಧಿಯಾಗಿತ್ತೆಂದೇ ಹೇಳಬಹುದು. ಅದು ನಿರಂತರ ಶ್ರದ್ಧೇಯ, ಪೂಜನೀಯ ವಸ್ತುಗಳಾಗುವಷ್ಟು ವಾಸ್ತವಿಕತೆಯನ್ನು ಚೆಲ್ಲಿ ದಿವ್ಯರೀತಿಯಿಂದ ರಾಮಸೀತೆಯರ ಪಾತ್ರಗಳಲ್ಲಿ ಸುಪ್ರಿಯವಾಗಿಯೂ ಮತ್ತು ಅನುಕರಣೀಯವಾಗಿಯೂ ಅದನ್ನು ಪಡಿಮೂಡಿಸಲಾಗಿದೆ; ಮತ್ತು ಹನುಮಂತ, ಲಕ್ಷ್ಮಣ, ಭರತ, ಮುಂತಾದ ಪಾತ್ರಗಳು ಅವುಗಳ ನೈತಿಕ ಆದರ್ಶಗಳ ಜೀವಂತ ಮಾನವ ಪ್ರತಿಮೆಗಳಾಗಿವೆ. ಭಾರತದ ರಾಷ್ಟ್ರಚಾರಿತ್ರ್ಯದಲ್ಲಿಯೂ ಅತ್ಯುನ್ನತ ಮತ್ತು 'ಅತಿಮಧುರ' ಅಂಶಗಳನ್ನು ವಾಲ್ಮೀಕಿಯ ಪ್ರತಿಭೆಯು ರಾಮಾಯಣದಲ್ಲಿ ರೂಪಿಸಿರುವುದಲ್ಲದೆ ಅದರಲ್ಲಿ ನಯವಾದ, ನವುರಾದ, ಹಾಗಿದ್ದೂ ಸುದೃಢವಾದ ಆತ್ಮಭಂಗಿಗಳನ್ನೂ, ಚಾರಿತ್ರ್ಯ ಹಾಗೂ ವರ್ತನೆಗಳ ಔಪಚಾರಿಕ ಹೊರಮೈಗಿಂತ ಹೆಚ್ಚು ಬೆಲೆಬಾಳುವ ಮಾನವ ಮನೋಧರ್ಮ ಸೂಕ್ಷ್ಮತೆಯನ್ನೂ ಕೆರಳಿಸಿ, ಅಚ್ಚೊತ್ತಿದೆ.

ಈ ಉಭಯ ಪುರಾಣ ಮಹಾಕಾವ್ಯಗಳ ಕಾವ್ಯಶೈಲಿಯು ಅವುಗಳ ವಸ್ತುವಿಗೆ ಕಡಿಮೆ ಆದದ್ದಲ್ಲ. ಅವುಗಳ ಶೈಲಿ ಹಾಗೂ ಬಂಧಗಳಲ್ಲಿ ಮಹಾಕಾವ್ಯದ ಉದಾತ್ತ ಗುಣವೂ ಅಭಿಜಾತ ವಾಙ್ಮಯದ ಸರಳತೆಯ ಪ್ರಸಾದವೂ ಅನವಶ್ಯಕ ಅಲಂಕಾರಗಳಿಂದ ಮುಕ್ತವಾದ ಅರ್ಥಸಂಪನ್ನ ಋಜು ಪದ ವಿನ್ಯಾಸವೂ ಮಹಾಕಾವ್ಯ ಪಂಕ್ತ್ಯಂತ ಆಯವನ್ನು ಯಾವಾಗಲೂ ಬಿಡದಿರುವ ತೀವ್ರಗಾಮಿಯೂ ಓಜಸ್ವಿಯೂ ಲಘುವೂ ಧಾರಾವಾಹಿಯೂ ಆದ ಪದ್ಯಪಂಕ್ತಿಗಳಿವೆ. ಮಹಾಭಾರತದ ವಿಶಿಷ್ಟ ಬಂಧ–ಲಕ್ಷಣವು ಅರ್ಥಗೌರವವನ್ನೂ ಭಣಿತಿ ವೈಚಿತ್ರ್ಯದ ಪ್ರಾತಿಭ ಸಾಮಂಜಸ್ಯವನ್ನೂ ನಂಬಿದ ಶುದ್ಧ ಗಂಡು ಬಗೆಯದಾಗಿದೆ; ತನ್ನ ಸರಳತೆಯಲ್ಲಿಯೂ ನೇರ್ಪಿನಲ್ಲಿಯೂ, ಪದೇ ಪದೇ ಬರುವ ಸೊಗಸಾದ ನಿರಾಡಂಬರದಲ್ಲಿಯೂ ಅದು ವ್ರತನಿಷ್ಠೆ ಹಿಡಿದು ಸಾಗಿದ ಹಾಗಿದೆ. ಅದು ವೀರ್ಯವತ್ತೂ ಮತ್ತು ತೀವ್ರವೂ ಆದ ಕವಿಪ್ರತಿಭೆಯ ವಾಣಿ, ಒಂದು ಮಹತ್ತರವೂ ಪ್ರಸನ್ನವೂ ಆದ ಸಚೇತನ ಶಕ್ತಿ. ಅದು ಪದವಿನ್ಯಾಸದಲ್ಲಿ ಸಂಕ್ಷಿಪ್ತವೂ ಸ್ಪಷ್ಟವೂ ಆದ ಆದರೆ ಏಕಾಗ್ರ ಪ್ರಾಮಾಣಿಕತೆಯ ಮೂಲಕ (ಕೆಲವೇ

ಕಠಿನ ಅವರತಣಿಕೆಗಳನ್ನು, ಕಥಾಂಶಗಳನ್ನು ಬಿಟ್ಟರೆ) ಅಚ್ಚುಕಟ್ಟುಮಾಡಬೇಕೆಂಬ ಆಲಂಕಾರಿಕ ಕ್ರಮವೇನೂ ಇಲ್ಲದೆ ನಿರರ್ಗಳವಾಗಿ ಹರಿಯುತ್ತದೆ. ಅದರ ಶೈಲಿಯು ಓಟಗಾರನ ಅತಿಮಾಂಸಲವಲ್ಲದ, ಕಾಂತಿಯುಕ್ತವಾದ ಸ್ಪಷ್ಟವೂ ನಿರ್ಮಲವೂ ನಗ್ನವೂ ಆದ ಓಟ. ಅಲ್ಲದೆ ಓಟದಲ್ಲಿ ತೀವ್ರವೂ ಚುರುಕೂ ಬಳಲಿದ್ದೂ ಆದ ಶರೀರದಂತಿದೆ. ಅನಿವಾರ್ಯವಾಗಿ ಈ ವಿಶಾಲ ಕಾವ್ಯದಲ್ಲಿ ಸ್ವಲ್ಪ ಕೆಳಮಟ್ಟದ ತರಗತಿಯು ಕಂಡುಬರುತ್ತದೆ. ಆದರೆ ಅದು ಎಲ್ಲಿಯೂ ಒಂದು ನಿಶ್ಚಿತ ಕನಿಷ್ಠ ಕೆಳಮಟ್ಟದಿಂದ ಕೆಳಗಿಳಿಯದೆ ಮೇಲೆ ಹೇಳಿದ ಅಂದದ ಒಂದಲ್ಲ ಒಂದು ಅಂಶವನ್ನು ಇಟ್ಟುಕೊಂಡೇ ಸಾಗಿದೆ. ರಾಮಾಯಣ ಬಂಧವು ಮಹಾಭಾರತಕ್ಕಿಂತ ಮತ್ತೂ ಹೆಚ್ಚು ಆಕರ್ಷಕವಾಗಿ ರೂಪಿತವಾಗಿದೆ. ಇಲ್ಲಿ ಮಾಧುರ್ಯ, ಓಜಸ್ಸು, ಪ್ರಸಾದ, ಅರ್ಥವ್ಯಕ್ತಿ ಮತ್ತು ಸೌಖ್ಯ ಕಂಡುಬರುತ್ತವೆ. ಅದರ ಪದಸಂಹತಿಯಲ್ಲಿ ಕಾವ್ಯ ಸತ್ಯ, ಮಹಾಕಾವ್ಯ ಸಹಜವಾದ ಓಜಸ್ಸು ಮತ್ತು ಬಂಧ ಇರುವುದಲ್ಲದೆ, ಕಲ್ಪನೆಯ ಭಾವನೆಯ ಅಥವಾ ವಸ್ತುವಿನ ಅನುಭವದ ಅವಿರತವೂ, ಆತ್ಮೀಯವೂ ಆದ ಸ್ಪಂದನವಿದೆ. ಅದರ ಅವ್ಯಾಹತ ಶಕ್ತಿಮತ್ತೆಯಲ್ಲಿ ಈ ಎರಡು ಕಾವ್ಯಗಳಲ್ಲಿ ಇರುವುದು ಉನ್ನತ ಕಾವ್ಯಾತ್ಮ ಮತ್ತು ಪ್ರಾತಿಭ ಪ್ರಜ್ಞೆ, ಇವುಗಳಲ್ಲಿ ವೇದ ಮತ್ತು ಉಪನಿಷತ್ತುಗಳ ಅಪರೋಕ್ಷ ಪ್ರಜ್ಞೇ ಬೌದ್ಧಿಕ ಹಾಗೂ ಮಾನಸಿಕ ಬಾಹ್ಯ ಮಾನಸ ಕಲ್ಪನಾ ಶಕ್ತಿಯ ಮರೆಯಲ್ಲಿ ವಿಶ್ರಮಿಸಿದೆ. ರಾಮಾಯಣದ ಬಂಧವು ಮತ್ತೂ ಹೆಚ್ಚು ಆಕರ್ಷಕವಾಗಿ ರೂಪಿತವಾಗಿದೆ. ಅದರಲ್ಲಿ ಮಾಧುರ್ಯ, ಓಜಸ್ಸು, ಪ್ರಸಾದ, ಕಾಂತಿ, ಮತ್ತು ಆತ್ಮೀಯತೆಗಳ ಅದ್ಭುತವಿದೆ; ಅದರ ಪದಸಂಹತಿಯಲ್ಲಿ ಕಾವ್ಯಸತ್ವವಷ್ಟೇ ಅಲ್ಲದೆ ಪುರಾಣ–ಕಾವ್ಯದ ಮಹಾಸತ್ವವೂ ಬಂಧವೂ ಕಲ್ಪನೆ, ಭಾವನೆ ಅಥವಾ ವಸ್ತುವಿನ ಭಾವದ ಸತತವಾದ ಆತ್ಮೀಯ ಸ್ಪಂದನವೂ ಇವೆ; ಅದರ ಆದರ್ಶ ನುಣುಪಿನಲ್ಲಿ ಧಾರಾವಾಹಿಯಾದ ಶಕ್ತಿಯೂ ಸಾರವತ್ತೆಯ ಉಸಿರೂ ಇವೆ. ಈ ಎರಡು ಕಾವ್ಯಕೃತಿಗಳಲ್ಲಿಯೂ ಉನ್ನತ ಕವಿಜೀವ ಮತ್ತು ಸ್ಫೂರ್ತ ಮಾನಸ ಕಲ್ಪನೆಯ ಹಿಂದೆ ವೇದೋಪನಿಷತ್ತುಗಳ ನೇರವಾದ ಪ್ರಾತಿಭ ಮನವು ಅಡಗಿದೆ ಅಥವಾ ವಿಶ್ರಮಿಸಿದೆ.

ಈ ಮಹಾಕಾವ್ಯಗಳನ್ನು ಅಜರಾಮರಗೊಳಿಸಿದ ಗುಣಗಳು ಇವು, ಸ್ವಭಾವವಿದು. ಭಾರತದಲ್ಲಿ ಮಹತ್ತಮವಾದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ರತ್ನಗಳಲ್ಲಿ ಇದನ್ನು ಪರಿಗಣಿಸಲಾಗಿದೆ. ಇವುಗಳ ಈ ಗುಣಗಳೇ ರಾಷ್ಟ್ರಮನದಲ್ಲಿ ಚಿರಂಜೀವತ್ವವನ್ನು ಕೊಟ್ಟಿವೆ. ಈ ಎತ್ತರವನ್ನು ಮುಟ್ಟಲು ಹೊರಟ ಹಾಗೂ ಇಷ್ಟ ಶ್ರಮದಿಂದ ರಚಿಸಬೇಕಾದ ಇತರ ಕೃತಿಗಳಿಗೆ ಸಾಧಾರಣವಾದ ಅಲ್ಪದೋಷಗಳು ಮತ್ತು ವಿಷಮತೆಗಳನ್ನು ಬಿಟ್ಟರೆ, ಪಾಶ್ಚಾತ್ಯರು ಟೀಕಿಸುವ ಅಂಶಗಳು ಕೇವಲ ಅವರ ಮನೋಧರ್ಮದ ಹಾಗೂ ಅಭಿರುಚಿಯ ಭೇದಗಳು. ಸಣ್ಣ ಪುಟ್ಟ ಗ್ರಂಥಗಳನ್ನು ಓದಿ ರೂಢಿಯುಳ್ಳ ಪಾಶ್ಚಾತ್ಯರನ್ನು ಈ ಯೋಜನಾ ವಿಸ್ತಾರ ವಿವರಗಳ ನಿಧಾನವಾದ ಚಿತ್ರಣ ಸುಸ್ತುಗೊಳಿಸುತ್ತದೆ. ಅವರ ಕಣ್ಣು ಮತ್ತು ಕಲ್ಪನಾಶಕ್ತಿ ಬಹುಬೇಗ ಶ್ರಾಂತವಾಗುತ್ತವೆ. ಮತ್ತು ಅವರ

ಜೀವಿತಗತಿ ಬಹು ವೇಗ ಉಳ್ಳದ್ದು. ಆದರೆ ಅವು (ಈ ಮಹಾಕಾವ್ಯ ಗುಣಗಳು) ಭಾರತೀಯ ಮನಸ್ಸಿಗೆ ಸಹಜವಾದ ದರ್ಶನವೈಶಾಲ್ಯ, ಪರಿಸ್ಥಿತಿಯ ನೈಷ್ಠಿಕ ಕುತೂಹಲಗಳಿಗೆ ಒಗ್ಗತಕ್ಕವು. ನಾನು ಆಗಲೇ ಹೇಳಿದಂತೆ ಭಾರತದ ಮನವು ಒಂದು ಬುಗ್ಗೆ, ವಾಸ್ತುಶಿಲ್ಪದಲ್ಲಿ ಕಂಡು ಬಂದಂತೆಯೇ ಇಲ್ಲಿಯೂ ಕೂಡಾ ವಿಶ್ವಪ್ರಜ್ಞೆ, ವಿಶ್ವದೃಷ್ಟಿ, ವಿಶ್ವ ಕಲ್ಪನೆ ಮತ್ತು ಅನುಭವದ ಕಾರ್ಯಗಳು ಕಂಡು ಬರುತ್ತವೆ. ಪಾಶ್ಚಾತ್ಯ ಮತ್ತು ಪೌರಸ್ತ್ಯರಲ್ಲಿ ಇರುವ ಮತ್ತೊಂದು ವ್ಯತ್ಯಾಸವೆಂದರೆ ಭೌತಿಕ ಜೀವನವನ್ನು ಭಾರತೀಯರು ಪ್ರತ್ಯಕ್ಷದಲ್ಲಿ ಇದ್ದದ್ದನ್ನು ಇರುವಂತೆಯೇ ನೋಡುವುದಿಲ್ಲ. ಅವರು ಯಾವಾಗಲೂ ಅದರ ಹಿನ್ನೆಲೆಯಲ್ಲಿರುವುದಕ್ಕೆ ಸಂಬಂಧಿಸಿಯೇ ನೋಡುತ್ತಾರೆ. ಭಾರತೀಯರ ಪ್ರಕಾರ ಮಾನವನ ಕಾರ್ಯವು ಮಹತ್ತಮವಾದ ದೈವೀ–ಆಸುರೀ–ರಾಕ್ಷಸೀ ಶಕ್ತಿಗಳಿಂದ ಸುತ್ತುವರಿಯಲ್ಪಟ್ಟಿದೆ, ಪ್ರಭಾವಿತವಾಗಿದೆ. ಆದುದರಿಂದ ಹಿರಿಯ ಮಾನವ ವ್ಯಕ್ತಿಗಳು ಒಂದು ವಿಧದಲ್ಲಿ ವಿಶ್ವಾತ್ಮ–ವ್ಯಕ್ತಿಗಳ ಅವತಾರ. ಈ ಸಾಹಿತ್ಯದಲ್ಲಿ ಕಲ್ಪಿಸಿದ ವ್ಯಕ್ತಿಗಳು ವಾಸ್ತವಿಕವಾಗಿ ಸ್ವ–ಹಿತವನ್ನು ಕಳೆದುಕೊಂಡು ವೈಶ್ವಾನರ ಶಕ್ತಿಗಳ ಕ್ರೀಡಾಗೊಂಬೆಯಾಗುತ್ತವೆ ಎಂಬ ಆರೋಪ ತಥ್ಯವಿಲ್ಲದ್ದು. ಏಕೆಂದರೆ ಇಲ್ಲಿ ಈ ವ್ಯಕ್ತಿಗಳಿಗೆ ಮಹತ್ವ, ತೇಜಸ್ಸು, ಮಹಾಸತ್ವಸಂಪನ್ನತೆ ದೊರಕುತ್ತವೆ. ಅವರ ವ್ಯಕ್ತಿತ್ವದ ಲೀಲೆಯನ್ನು ಔನ್ನತ್ಯಕ್ಕೇರಿಸುವ ಸಾರ್ವತೆಯ ಉಂಟಾಗುತ್ತದೆ. ಕೇವಲ ಊಹೆಯನ್ನು ಉಳಿದು ಸಂಪೂರ್ಣ ಪ್ರಾಮಾಣಿಕತೆ ಮತ್ತು ಸಹಜತೆಗಳಿಂದ ಭೌತ ಪ್ರಕೃತಿಯನ್ನೂ ಅತಿಭೌತ ಪ್ರಕೃತಿಗಳನ್ನೂ ಜೋಡಿಸುವುದಕ್ಕೆ ಜೀವನದಲ್ಲಿ ಭಾರತೀಯರಿಗೆ ಇರುವ ಮಹತ್ತರ ವಾಸ್ತವಿಕತೆಯ ಕಲ್ಪನೆಯೇ ಕಾರಣ. ಈ ಮಹತ್ತರ ವಾಸ್ತವಿಕತೆಯ ಅರ್ಥಪೂರ್ಣ ವ್ಯಕ್ತಿಗಳನ್ನು ಕುರಿತೇ ವಾಸ್ತವವಾದಿ ವಿಮರ್ಶಕನು ಹಾಸ್ಯಾಸ್ಪದವಾಗಿ ಅಸ್ಥಾನೀಯ ಟೀಕೆಗಳನ್ನು ಮಾಡುತ್ತಾನೆ. ಅಂತಹ ಟೀಕೆಗೆ ಗುರಿಯಾದ ವಸ್ತುಗಳೆಂದರೆ ತಪಸ್ಸಿದ್ಧಿ, ದಿವ್ಯಾಸ್ತ್ರಪ್ರಯೋಗ, ಪದೇಪದೇ ಬರುವ ಅತೀಂದ್ರಿಯ ಕಾರ್ಯ ಹಾಗೂ ಪ್ರಭಾವಗಳ ಉಲ್ಲೇಖ. ಈ ಮಹಾಕಾವ್ಯಗಳಲ್ಲಿ ಅತ್ಯುಕ್ತಿ ಇದೆ ಎಂಬ ದೂರು ಕೂಡಾ ಅಸಮರ್ಪಕ. ಏಕೆಂದರೆ ಈ ಚರಿತ ಸಾಮಾನ್ಯ ಮನುಷ್ಯರ ಮಟ್ಟಕ್ಕಿಂತ ಮೇಲಿರುವ ಮನುಷ್ಯರದ್ದು. ಈ ಸಂದರ್ಭದಲ್ಲಿ ನಾವು ಕವಿಪ್ರತಿಭೆ ಕಲ್ಪಿಸಿದ ಜೀವನದ ಎತ್ತರದ ಸತ್ಯಕ್ಕೆ ಸಮವಾದ ಅಂಗಾಂಗಿ ಸಾಮರಸ್ಯವಿದೆಯೇ ಎಂದು ಕೇಳಬಹುದಲ್ಲದೆ ಇಲ್ಲಿ ಅಪ್ರಸ್ತುತವಾದ್ದರಿಂದ ಅಸತ್ಯವೆನಿಸುವಂತೆ ಸಾಮಾನ್ಯ ಲೌಕಿಕ ಅಳತೆಗಳಿಗೆ ಹುಂಬನಿಷ್ಠೆ ಇರಬೇಕೆಂದು ಒತ್ತಾಯಿಸುವುದು ತರವಲ್ಲ. ಅದೇ ಮೇರೆಗೆ ಈ ಮಹಾಕಾವ್ಯ–ಪಾತ್ರಗಳಲ್ಲಿ ಜೀವವಿಲ್ಲ, ವ್ಯಕ್ತಿತ್ವವಿಲ್ಲ ಎಂಬ ದೂರಾದರೂ ಬುಡವಿಲ್ಲದ್ದು; ರಾಮ, ಸೀತೆ, ಅರ್ಜುನ, ಯುಧಿಷ್ಠಿರ, ಭೀಷ್ಮ, ದುರ್ಯೋಧನ ಮತ್ತು ಕರ್ಣರು ಭಾರತೀಯ ದೃಷ್ಟಿಯಲ್ಲಿ ಅತ್ಯಂತ ಸತ್ಯಸ್ವರೂಪರು, ಜೀವಂತ ವ್ಯಕ್ತಿಗಳು. ಭಾರತೀಯ ಕಲೆಯಲ್ಲಿರುವಂತೆ ಇಲ್ಲಾದರೂ ಇರುವ ಒಂದೇ ಒಂದು ನಿಯಮವೆಂದರೆ ಪಾತ್ರದ ಬಾಹ್ಯಲಕ್ಷಣಗಳು ಗೌಣವಾಗಿರುವುದು. ಏಕೆಂದರೆ ಇವನ್ನು ಪಾತ್ರದ ಪರಿಚಯಕ್ಕೆ ಮಾತ್ರ ಸಹಾಯಕವಾಗಿ

ಬೆಳೆಸಿಕೊಳ್ಳಲಾಗಿದೆ. ಆದರೆ ಪಾತ್ರದ ಜೀವನಸಾರವನ್ನು, ಆಂತರಗುಣವನ್ನು ಮಾನವ ಪ್ರತಿಭೆಗೆ ನಿಲುಕುವಷ್ಟು ಪರಮಪ್ರಮಾಣದ ಸ್ಫುಟತೆ, ದಾರ್ಢ್ಯ ಮತ್ತು ಪಾವಿತ್ರ್ಯವುಳ್ಳ ಸ್ಥೂಲ ರೇಖೆಗಳಿಂದ ಚಿತ್ರಿಸಲಾಗಿದೆ. ರಾಮ ಸೀತೆಯರಂಥ ಪಾತ್ರಗಳ ಆದರ್ಶ ಸ್ವರೂಪವು ಕೇವಲ ವರ್ಣಹೀನವೂ ಛಾಯಾಮಾತ್ರವೂ ಆದ ಅವಾಸ್ತವಿಕ ಚಿತ್ರವಲ್ಲ; ಅವು ಆದರ್ಶ ಜೀವನದ ಮತ್ತು ಮನುಷ್ಯನು ತನ್ನ ಆತ್ಮಕ್ಕೆ ಅವಕಾಶ ಮಾಡಿಕೊಟ್ಟಾಗ ವಿಕಾಸ ಹೊಂದಬಹುದಾದ ಔನ್ನತ್ಯದ ಸತ್ಯದೊಂದಿಗೆ ಸ್ಫುಟವಾಗಿ ಎದ್ದು ನಿಲ್ಲುತ್ತವೆ. ಆದ್ದರಿಂದ ನಮ್ಮ ಸಾಮಾನ್ಯ ಸ್ವಭಾವದ ಹರಕುಮುರುಕು ಅಲ್ಪತನಗಳಿಗೆ ಅವುಗಳಲ್ಲಿ ಅತ್ಯಲ್ಪವಾದರೂ ಅವಕಾಶ ಇದೆ ಎಂಬ ಆರೋಪವು ಅಸಮಂಜಸ.

ಮೇಲೆ ಹೇಳಿದ ಕಾರಣಗಳಿಂದ ಈ ಮಹಾಕಾವ್ಯಗಳು ರೂಪಾಂತರಮಾಡಿದ ಪುರಾಣ–ಪುಣ್ಯಕಥೆಗಳ ರಾಶಿಯಷ್ಟೇ ಅಲ್ಲ. ಹಾಗೆಂದು ಅಜ್ಞಾನಿಗಳು ಟೀಕಿಸುತ್ತಾರೆ. ಹಾಗಲ್ಲದೆ ಇವು ಜೀವನದ ಒಳದನಿಗಳ ಅತ್ಯುನ್ನತ ಕಲಾಕೃತಿ; ಸಮರ್ಥವೂ ಉದಾತ್ತವೂ ಆದ ಜೀವಂತ ಪ್ರಕಾಶ ಚೆನ್ನಾಗಿ ಬೆಳೆದ ನೈತಿಕ ರಸಾತ್ಮಕ ಪ್ರಜ್ಞೆಯ ದರ್ಶನ; ಉತ್ತುಂಗ ಸಾಮಾಜಿಕ, ರಾಜಕೀಯ ಆದರ್ಶ ವಿನ್ಯಾಸ, ಒಂದು ಮಹಾಸಂಸ್ಕೃತಿಯನ್ನು ಗರ್ಭೀಕರಿಸಿಕೊಂಡ ಪ್ರತಿಮೆ. ಇವು ಗ್ರೀಕ್ ಮಹಾಕಾವ್ಯಗಳಷ್ಟೇ ನವಜೀವಸ್ಪರ್ಶವುಳ್ಳವು. ಅವುಗಳಿಗಿಂತ ವಿಚಾರದಲ್ಲೂ ವಸ್ತುವಿನಲ್ಲೂ ಎಷ್ಟೋಪಟ್ಟು ಗಭೀರವಾಗಿವೆ; ರೋಮನ್ನರ ಮಹಾಕಾವ್ಯಗಳಲ್ಲಿ ಕಂಡುಬರುವ ಉನ್ನತ ಸಂಸ್ಕೃತಿಯ ಪಾಕವಿದೆ. ಆದರೆ ಅವುಗಳಿಗಿಂತ ಇವು ಸಾಮರ್ಥ್ಯದಲ್ಲಿ ತಾರುಣ್ಯವುಳ್ಳವೂ ವೀರ್ಯಸಂಪನ್ನವೂ ಪ್ರಾಣಘನವೂ ಆಗಿವೆ. ಭಾರತೀಯ ಮಹಾಕಾವ್ಯಗಳು ಉಕ್ತ ವಿದೇಶ ಮಹಾಕಾವ್ಯಗಳಿಂತಲೂ ಹೆಚ್ಚಿನ ರಾಷ್ಟ್ರೀಯ ಹಾಗೂ ಸಾಂಸ್ಕೃತಿಕ ಕಾರ್ಯವನ್ನು ನಿರ್ವಹಿಸಲೆಂದೇ ರಚಿತವಾದಂಥವು. ಇವು ಪಂಡಿತ–ಪಾಮರ, ಸುಸಂಸ್ಕೃತ ಅಸಂಸ್ಕೃತರೆಲ್ಲರಿಗೂ ಇಡೀ ರಾಷ್ಟ್ರ ಜೀವನದ ಅತಿ ನಿಕಟವೂ, ಸ್ವರೂಪ ರೂಪಕವೂ ಆದ ಭಾಗವೆನಿಸಿ, ಇಪ್ಪತ್ತು ಶತಮಾನಗಳ ಕಾಲ ರಂಜಕವೆನಿಸಿ ಉಳಿದದ್ದು ಈ ಪ್ರಾಚೀನ ಭಾರತ ಸಂಸ್ಕೃತಿಯ ಹಿರಿಮೆ ಮತ್ತು ನಯಗಳಿಗೆ ಧ್ರುವಸಾಕ್ಷಿಯಾಗಿವೆ.

# ಅಧ್ಯಾಯ ನಾಲ್ಕು
# ಅಭಿಜಾತ ವಾಙ್ಮಯ

ಸರ್ವವಿಶ್ರುತವೂ ಸರ್ವಮಾನಿತವೂ ಆದ ಪ್ರಾಚೀನ ವಾಙ್ಮಯದ ಅಭಿಜಾತಯುಗವು ಸುಮಾರು ಹತ್ತಕ್ಕೂ ಹೆಚ್ಚು ಶತಮಾನಗಳನ್ನು ಆಕ್ರಮಿಸುತ್ತದೆ. ಅದಕ್ಕೂ ಅದರ ಹಿಂದಿನ ವಾಙ್ಮಯಕ್ಕೂ ವಸ್ತುವಿನಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲ. ವ್ಯತ್ಯಾಸವಿರುವುದು ಅದರ ವಿಚಾರಧಾರೆ, ದೃಷ್ಟಿಕೋನ ಮತ್ತು ಭಾಷೆಗಳ ರೂಪ, ಬಣ್ಣ ಇವುಗಳಲ್ಲಿ. ಇಷ್ಟು ಹೊತ್ತಿಗೆ ಅದರ ಜನತೆಯ ಹಾಗೂ ಸಂಸ್ಕೃತಿಯ ದಿವ್ಯಶೈಶವ, ವೀರಯೌವನ ಮತ್ತು ಪ್ರಕಾಶಮಾನವೂ ಬಲಿಷ್ಠವೂ ಆದ ಪ್ರೌಢತಾರುಣ್ಯ ಕಳೆದು ಹೋಗಿದ್ದುವು. ಅದಕ್ಕೆ ಬದಲಾಗಿ ಸುದೀರ್ಘವೂ ಸುಸಮೃದ್ಧವೂ ಆದ ಪಕ್ವದಶೆ ಮತ್ತು ಅದರ ಫಲವಾದ ಅಷ್ಟೇ ಸುದೀರ್ಘವೂ ಸುಸಮೃದ್ಧವೂ ಆದ ವರ್ಣರಂಜಿತ ಅವನತಿ ಕಂಡುಬಂತು. ಅವನತಿ ಮೃತ್ಯುಮುಖವಾದುದಲ್ಲ. ಏಕೆಂದರೆ ಅಲ್ಲಿ ಒಂದು ವಿಧದ ಕಾಯಕಲ್ಪ, ನವಾರಂಭ, ಪುನರ್ ಉದ್ಯಮ ಕಾಣಿಸಿತು. ಅಂಥ ನವಜಾಗ್ರತಿಯ ಮಾಧ್ಯಮವು ಸಂಸ್ಕೃತವಾಗಿರದೆ ಅದರ ಪ್ರಬುದ್ಧಮಾನಕ್ಕೆ ಬಂದ ಮಕ್ಕಳೇ ಆಗಿದ್ದುವು; ಕೊನೆಯದಾಗಿ ತನ್ನ ಶಕ್ತಿ, ಸತ್ವ, ಸ್ಫೂರ್ತಿಗಳನ್ನು ಸಂಸ್ಕೃತವು ಕಳೆದುಕೊಳ್ಳುತ್ತಿದ್ದಾಗ ಅವನ್ನು ವಾಙ್ಮಯವಾಹಿಗಳನ್ನಾಗಿ ಮಾಡಲಾಯಿತು. ಮಹಾಕಾವ್ಯಗಳ ಹಾಗೂ ಭರ್ತೃಹರಿ–ಕಾಳಿದಾಸರ ಭಾಷೆಗಳ ಸತ್ವ ಮತ್ತು ಸ್ವರೂಪಗಳ ವ್ಯತ್ಯಾಸವು ಬಹುದೊಡ್ಡದಾಗಿದೆ. ಬೌದ್ಧ ಧರ್ಮದ ಆರಂಭ ಕಾಲದಲ್ಲಿ ಸಂಸ್ಕೃತವು ವಿದ್ಯಾವಂತರ ಆಡುನುಡಿಯಾಗಿ ಉಳಿಯದೆ ತದ್ವಿರುದ್ಧವಾಗಿ ಪಾಳಿ ಭಾಷೆಯು ರಾಷ್ಟ್ರದ ವಿಚಾರ ಹಾಗೂ ಜೀವನಪ್ರವಾಹದ ಬಹು ಭಾಗದ ಪ್ರಕಾಶನ ಸಾಧನವಾಗಿ ಮಾರ್ಪಟ್ಟಿದ್ದೇ ಅದಕ್ಕೆ ಕಾರಣವಿರಬಹುದು. ಪುರಾಣ–ಮಹಾಕಾವ್ಯಗಳ ಭಾಷೆ ಮತ್ತು ಗತಿಗಳಿಗೆ ಬಾಳಿನ ಚಿಲುಮೆಯಿಂದ ನೇರವಾಗಿ ಎದ್ದು ಚಿಮ್ಮುವ ವಾಣೀವಿಲಾಸದ ಓಜಸ್ಸು, ಸ್ವಚ್ಛಂದತೆ ಮತ್ತು ಸ್ವಯಂಪ್ರಭಾವಗಳಿದ್ದುವು. ಕಾಳಿದಾಸನ ಸರಸ್ವತಿಯಾದರೋ ಒಂದು ಚೆನ್ನಾಗಿ ಸಾಧಿಸಿದ ಕಲೆ–ಬುದ್ಧಿಪೂರ್ವಕವಾಗಿ, ಅಂದವಾಗಿ ಅಲಂಕರಿಸಿ ಪರಿಪೂರ್ಣತೆ ಪಡೆಯುವಂತೆ ಕಡೆದಿಟ್ಟ ಒಂದು ವಿಗ್ರಹ; ಅದಕ್ಕೆ ವರ್ಣಚಿತ್ರದ ಬಣ್ಣವಿದೆ; ಪ್ರೌಢ ಕವಿಪ್ರತಿಭೆಯ ಕೌಶಲವೂ ತಂತ್ರವೂ ಅಲ್ಲಿದ್ದರೂ ಅದು ಕೃತಕವಲ್ಲ; ಆದರೂ ಅದೊಂದು ಬೌದ್ಧಿಕ ಶ್ರಮದ ನಾಜೂಕಾದ ಕೃತಿ. ಅದರಲ್ಲಿ ಮೊದಲಿನವುಗಳಲ್ಲಿದ್ದ ನಿರರ್ಗಳ ಗತಿಯಿಲ್ಲ; ಅದರಲ್ಲಿ ನೈಸರ್ಗಿಕವೆಂದೇ ತೋರುವಷ್ಟು ಮಟ್ಟಿನ ಅಭ್ಯಾಸಸಿದ್ಧವಾದ ಲೀಲಾಜಾಲ ರೀತಿ ಕಂಡು ಬರುತ್ತದೆ. ಅನಂತರ ಬಂದ

ಲೇಖಕರಲ್ಲಿ ಕೌಶಲ ಹಾಗೂ ತಂತ್ರಗಳ ಅಂಶಗಳು ಹೆಚ್ಚುತ್ತ ಹೋಗುತ್ತವೆ, ಎದ್ದುಕಾಣುವಂತೆ ನಿಲ್ಲುತ್ತವೆ. ಅವರ ಭಾಷೆಯು ಸುಂದರವೂ ಓಜಸ್ವಿಯೂ ಆಗಿದ್ದರೂ, ಜಟಿಲವೂ ಬಳಸಾಗಿಯೂ ಉದ್ದೇಶಪೂರ್ವಕವಾಗಿ ರಚಿತವಾದವುಗಳೂ ಆಗಿರುವುದರಿಂದ ಅವು ಪಂಡಿತಸಭೆ, ವಿದ್ವನ್ ಮಂಡಳಿಗಷ್ಟೇ ಮೆಚ್ಚಿಕೆಯಾಗುವಂತಿವೆ. ಇನ್ನೂ ಸಜೀವವಾಗಿದ್ದ ತಮ್ಮ ಸರಳ ಶೈಲಿಯ ಮೂಲಕ ಹೆಚ್ಚು ಜನರಿಗೆ ಗಮ್ಯವಾಗಿದ್ದ ಹೃದಯಾಂತರಾಳದಿಂದ ಹೊರ ಹೊರಟ ಪುರಾಣ, ತಂತ್ರ ಮೊದಲಾದ ಧಾರ್ಮಿಕ ಲೇಖಗಳು ಕೆಲಕಾಲ ಪುರಾಣ–ಮಹಾಕಾವ್ಯಗಳ ಪರಂಪರೆಯನ್ನು ನಡೆಸಿಕೊಂಡು ಹೋದುವು. ಆದರೆ ಅವುಗಳ ಸೌಲಭ್ಯ–ಸರಳತೆಗಳು ಬುದ್ಧಿಪೂರ್ವಕವಾದವು –ಗಳಾಗಿದ್ದವಲ್ಲದೆ ಅವುಗಳಲ್ಲಿ ಹಿಂದಿನ ಬರಹದ ಸ್ವಾಭಾವಿಕ ಸುಗಮತೆ ಇದ್ದಿದ್ದಿಲ್ಲ. ಕೊನೆಯಲ್ಲಿ ಕೆಲ ತತ್ವಜ್ಞಾನ, ಧರ್ಮ ಮತ್ತು ಪಾಂಡಿತ್ಯದ ವ್ಯವಹಾರಗಳನ್ನು ಬಿಟ್ಟರೆ, ಉಳಿದೆಡೆಗಳಲ್ಲಿ ಸಂಸ್ಕೃತವು ಕೇವಲ ಪಂಡಿತಭಾಷೆಯಾಗಿ ಉಳಿಯಿತಲ್ಲದೆ ಜನತೆಯ ಬಾಳು ಬಗೆಗಳ ಪ್ರತ್ಯಕ್ಷ ಮಾಧ್ಯಮವಾಗಿ ಉಳಿಯಲಿಲ್ಲ.

ಪ್ರೇರೇಪಿಸುವ ಪರಿಸ್ಥಿತಿಗಳನ್ನು ಒತ್ತಟ್ಟಿಗಿಟ್ಟರೆ ಗ್ರಾಂಥಿಕ ಭಾಷೆಯಲ್ಲಾದ ಬದಲಾವಣೆಯು ಸಂಸ್ಕೃತಿಯ ಮನೋಧರ್ಮದ ಕೇಂದ್ರದಲ್ಲಿ ಉಂಟಾದ ಮಹಾಪರಿವರ್ತನೆಗೆ ಅನುಗುಣವಾಗಿದೆ. ಇನ್ನೂ ಅದು ಯಾವಾಗಲೂ ಆಧ್ಯಾತ್ಮಿಕ, ಧಾರ್ಮಿಕ, ತಾತ್ವಿಕ, ನೈತಿಕ ಎನಿಸಿದ್ದರೂ ಅದರ ಆಂತರಿಕ ವ್ರತ ಶುಚಿಯು ಏನೋ ಸ್ವಲ್ಪ ಒಳಸರಿದು ಹಿನ್ನಿಲ್ಲುವಂತೆ ತೋರುತ್ತದೆ. ಹಾಗಿದ್ದರೂ ಅದರ ಆ ಪ್ರಾಚೀನ ಗುಣಗಳು ಪ್ರಕಟವಾಗಿ ಮಿಕ್ಕವನ್ನು ಮೀರಿಸುತ್ತಿದ್ದವು. ಆದರೂ ಅವು ಸ್ವಲ್ಪ ತಮ್ಮಷ್ಟಕ್ಕೆ ತಾವು ಸರಿದು ಹೊಸ ಲಕ್ಷಣಗಳ ವಿಕಾಸಕ್ಕೆ ಅನುವು ಮಾಡಿಕೊಟ್ಟುವು. ಈ ಯುಗದ ಭಾಷೆಯ ಹೊಸ ಲಕ್ಷಣಗಳಲ್ಲಿ ಎದ್ದು ಕಾಣುವುದೆಂದರೆ – ವಿಲಕ್ಷಣ ಮೇಧಾಶಕ್ತಿ, ಪುಟಿದೇಳುವ ಪ್ರಾಣಸ್ಪಂದ, ರಸಾತ್ಮಕವೂ, ನಗರ ಸಹಜ ಚಟುವಟಿಕೆಯುಳ್ಳದ್ದೂ, ಭೋಗಪರವೂ ಆದ ಇಂದ್ರಿಯನಿಷ್ಠ ಜೀವನ. ತರ್ಕಬದ್ಧ ತತ್ವಜ್ಞಾನದ, ವಿಜ್ಞಾನದ, ಕಲೆಯ ಮತ್ತು ಕಸಬುಗಳ ಕಾಯದೆ ಕಟ್ಟಳೆಗಳ, ರಾಜನೀತಿಯ, ವ್ಯಾಪಾರದ ಉಪನಿವೇಶನದ ಹಾಗೂ ಕ್ರಮಬದ್ಧವೂ ವಿವರ ವಿಸ್ತಾರ ಉಳ್ಳದ್ದೂ ಆದ ಆಡಳಿತಗಳುಳ್ಳ, ಆಚಾರ ವಿಚಾರಗಳಲ್ಲಿ ಎಲ್ಲೆಲ್ಲೂ ಶಾಸ್ತ್ರಗಳ ಸೂಕ್ಷ್ಮ ವಿಷಯಗಳು ವ್ಯಾಪಿಸಿಕೊಂಡಿದ್ದ ರಾಜ್ಯ–ಸಾಮ್ರಾಜ್ಯಗಳ ಕಾಲವದು. ಅಂದು ಇಂದ್ರಿಯ ಮೋಹಕವೂ, ಕಾಂತಿಯುಕ್ತವೂ, ಸುಖಕರವೂ ಆದ ಸರ್ವವಸ್ತುಗಳ ಯೋಗ, ವಿವೇಚಿಸಿ ತಿಳಿಯಬಹುದಾದ ಎಲ್ಲ ವಿಷಯಗಳ ಚರ್ಚೆ, ಬುದ್ಧಿಗೂ ವ್ಯವಹಾರಕ್ಕೂ ಒಳಪಡುವ ಎಲ್ಲ ಸಂಗತಿಗಳ ಕ್ರೋಢೀಕರಣ ಮತ್ತು ಪ್ರತಿಷ್ಠಾಪನಗಳು ಕಂಡುಬಂದವು. ಅದು ಭಾರತೀಯ ಸಂಸ್ಕೃತಿಯ ಅತ್ಯಂತ ಸುಂದರವೂ ಸಮೃದ್ಧವೂ ಪ್ರಭಾವಿಯೂ ಆದ ಸ್ವರ್ಣಯುಗವಾಗಿತ್ತು.

ಈ ಅಭಿಜಾತ ವಾಙ್ಮಯ ಯುಗದಲ್ಲಿ ಗಣ್ಯವಾದ ಬೌದ್ಧಿಕತೆಯಲ್ಲಿ ಪ್ರಕ್ಷುಬ್ಧ ಮನಸ್ಕತೆಯಾಗಲೀ ನಾಸ್ತಿಕತೆಯಾಗಲೀ ಇರಲಿಲ್ಲ. ಆದರೆ ಪೂರ್ವಜರು ಕಂಡುಹಿಡಿದು

ವಿಧಿಸಿಹೋದ ಆಧ್ಯಾತ್ಮಿಕ, ಧಾರ್ಮಿಕ, ತಾತ್ವಿಕ ಹಾಗೂ ಸಾಮಾಜಿಕ ಸತ್ಯಗಳನ್ನು ಸ್ವೀಕರಿಸಿಯೂ ಹೆಚ್ಚಾಗಿ ಜಿಜ್ಞಾಸುತ್ವವನ್ನು ಹಿಡಿದು ಅವನ್ನು ಬೆಳೆಸಿ, ಪೂರ್ಣಗೊಳಿಸಿ, ವಿವರಪೂರ್ವಕವಾಗಿಯೂ ಆಮೂಲಗ್ರವಾಗಿಯೂ ತಿಳಿದು ಒಂದು ಪರಿಪೂರ್ಣ ಪ್ರತಿಷ್ಠಿತ ಪದ್ಧತಿಯಲ್ಲಿ ಸಾಂಗೋಪಾಂಗವಾಗಿ ನಿಲ್ಲಿಸುವ ಪ್ರವೃತ್ತಿ ಇತ್ತು. ಅವುಗಳನ್ನು ಶಾಖೋಪಶಾಖೆಗಳಾಗಿ ವಿಸ್ತರಿಸಿ, ಬುದ್ಧಿಯಲ್ಲಿಯೂ ಇಂದ್ರಿಯಾರ್ಥದಲ್ಲಿಯೂ ಬಾಳಿನಲ್ಲಿಯೂ ಅಳವಡಿಸುವ ಲಕ್ಷಣವಿತ್ತು. ಭಾರತೀಯ ಧರ್ಮ, ತತ್ವಜ್ಞಾನ, ಸಮಾಜಗಳ ಮೂಲ ತತ್ವ ಹಾಗೂ ರೂಪರೇಖೆಗಳನ್ನೂ ಆಗಲೇ ಕಂಡುಹಿಡಿದು, ಪ್ರಸ್ತಾಪಿಸಲಾಗಿತ್ತು ಮತ್ತು ಸಂಸ್ಕೃತಿಯ ಹೆಜ್ಜೆಗಳು ಈಗ ಒಂದು ಮಹಾಪರಂಪರೆಯ ತೃಪ್ತಿಕರವಾದ ಸುಭದ್ರತೆಯಲ್ಲಿ ಪ್ರಮಾಣಾನುರೂಪವಾಗಿ ನಡೆದವು. ಆದರೆ ಈ ಕ್ಷೇತ್ರಗಳಲ್ಲಿ ನವ ನಿರ್ಮಾಣಕ್ಕೂ ಸಂಶೋಧಕ್ಕೂ ಹೇರಳ ಅವಕಾಶ ಇನ್ನೂ ಇತ್ತು; ಮಹಾರಂಭಗಳಿಗೂ ವಿಜ್ಞಾನ, ಕಲೆ, ಸಾಹಿತ್ಯಗಳ ಸುದೃಢ ಸಂವರ್ಧನೆಗೂ ಸಾಕಷ್ಟು ಅನುಕೂಲವಿತ್ತು. ಅಲ್ಲದೆ ಶುದ್ಧ ಬೌದ್ಧಿಕ ಮತ್ತು ರಸಾತ್ಮಕ ಚಟುವಟಿಕೆಗಳಿಗೆ ಸ್ವಾತಂತ್ರ್ಯವಿತ್ತು; ಇಷ್ಟೂ ಅಲ್ಲದೆ ಪ್ರಾಣಚೇತನೆಯ ವಿಷಯೋಪಭೋಗಕ್ಕೂ ಭಾವಸ್ಥಾಯಿಯ ನಯಗಾರಿಕೆಗೂ ಬಾಳಿನ ಲಯಬದ್ಧ ವ್ಯವಹಾರದ ಹಾಗೂ ಕಲೆಗಾರಿಕೆಯ ಸಾಧನೆಗೂ ಯಥೇಷ್ಟ ಇಂಬಿತ್ತು. ಬದುಕಿನಲ್ಲಿ ಆಗ ಬುದ್ಧಿ ಪರಿಷ್ಕೃತ ಪ್ರಾಣಚೇತನೆಯ ಮುದ್ರೆ ಎದ್ದು ಕಂಡಿತು–ಬಹುಮುಖವಾದ ಆಸಕ್ತಿಯಿತ್ತು. ಶರೀರ–ಇಂದ್ರಿಯಗಳ ಸ್ಪಷ್ಟೋಲ್ಲೇಖದವರೆಗೂ ಮುಟ್ಟುವಂತಹ ಮತ್ತು ಏಕ ಕಾಲದಲ್ಲಿ ಬುದ್ಧಿ, ಮನ, ಇಂದ್ರಿಯಗಳನ್ನು ತೃಪ್ತಿಪಡಿಸುವಂಥ ರಚನೆಗಳಲ್ಲಿ ಲಾಲಸೆ ಇತ್ತು. ಆದರೆ ಆ ಲಾಲಸೆಯಲ್ಲಿ, ಲೋಲುಪ್ತಿಯಲ್ಲಿ ಒಂದು ರೀತಿಯ ಪೌರಸ್ತ್ಯರೀತಿಯ ಔಚಿತ್ಯ, ಅಚ್ಚುಕಟ್ಟು, ರಸದೃಷ್ಟಿಯ ಸಂಯಮದ ಅಂಶ, ಇತಿಮಿತಿಗಳ ಪಾಲನೆ ಕಂಡುಬರುವುದರಿಂದ ಅದು ಎಷ್ಟೋ ಪಟ್ಟು ಕಡಿಮೆ ಸಂಸ್ಕಾರವುಳ್ಳ ಕುಲಗಳು ಬೀಳಬಹುದಾದ ಲಂಗು ಲಗಾಮಿಲ್ಲದ ಸ್ಥಿತಿಗೆ ಇಳಿಯಲಿಲ್ಲ. ಅದರ ಮುಖ್ಯ ಲಕ್ಷಣವೆಂದರೆ ಬೌದ್ಧಿಕ ಪ್ರಜ್ಞೆಯ ಲೀಲೆ; ಮತ್ತು ಅದೇ ಎಲ್ಲೆಲ್ಲೂ ಕಾಣುತ್ತದೆ. ಪ್ರಾಚೀನ ಕಾಲದಲ್ಲಿ ಭಾರತೀಯ ಬಾಳು ಬಗೆಗಿನ ಬಹುಮುಖಗಳು ಏಕೀಕೃತವಾಗಿಯೂ ಅವಿಭಾಜ್ಯವಾಗಿಯೂ ಗಭೀರವೂ ಸಮೃದ್ಧವೂ ಆದರೆ ಸರಳವಾದ ಸಂಗೀತಕ್ಕೆ ಜೋಡಿಸಿದ ಏಕಮಾತ್ರ ವ್ಯಾಪಕಗತಿಯುಳ್ಳವೂ ಆಗಿದ್ದವು; ಅಲ್ಲಿ ಅವು ಸುಸಂಬದ್ಧವಾಗಿಯೂ ಸುಸಮನ್ವಿತವಾಗಿಯೂ ವಿಲಕ್ಷಣವಾಗಿಯೂ ಜಟಿಲವಾಗಿಯೂ ಅನೇಕವನ್ನೊಳಗೊಂಡೂ ಏಕವಾಗಿಯೂ ಒಟ್ಟೊಟ್ಟಾಗಿ ನಿಂತಂತೆ ತೋರುತ್ತವೆ. ಅಂದಿನ ಪ್ರಾತಿಭ ಪ್ರಜ್ಞೆಯ ಸ್ವಯಂಭೂ ಐಕ್ಯಕ್ಕೆ ಬದಲಾಗಿ ಈ ಯುಗದಲ್ಲಿ ವಿಶ್ಲೇಷಕವೂ ಸಂಶ್ಲೇಷಕವೂ ಆದ ಬುದ್ಧಿಯ ಕೃತಕ ಐಕ್ಯ ಕಾಣಿಸಿತು. ಕಲೆ, ಧರ್ಮಗಳು ಆಗಲೂ ಆಧ್ಯಾತ್ಮಿಕ ಹಾಗೂ ಅತೀಂದ್ರಿಯ ಆದರ್ಶಗಳ ಪ್ರಾಮುಖ್ಯವನ್ನು ಇಟ್ಟುಕೊಂಡೇ ನಡೆದರೂ ಸಾಹಿತ್ಯ ಮುಖದಲ್ಲಿ ಅಂತಹ ಆದರ್ಶಗಳು ಪದಚ್ಯುತವಾಗುತ್ತಾ ಬಂದವು.

ಆ ಪ್ರಜ್ಞೆಯು ತನ್ನ ಕಲ್ಪನೆಯ, ಗುರಿಯ ಮತ್ತು ಭಾವದ ಸಂಪನ್ನತೆ ಮತ್ತು ಉದಾತ್ತತೆಗಳಿಗೆ ತನ್ನ ಶೈಲಿಯ ಶಕ್ತಿ–ಸೌಂದರ್ಯಗಳನ್ನು ಸಮಗೊಳಿಸುವುದರಲ್ಲಿ ಎಚ್ಚರ ತೆಗೆದುಕೊಂಡಿತು; ರಸದರ್ಶನದ ಪೂರ್ಣತೆ ಅಥವಾ ಭಾವಿಕ ಇಲ್ಲವೇ ಇಂದ್ರಿಯ ಮೋಹಕ ಅಂಶದೊಡನೆ ತನ್ನ ರಚನಾಬಂಧದ ಸೂಕ್ಷ್ಮ ಪರಿಪೂರ್ಣತೆಯೊಡನೆ ಸಮನ್ವಯಗೊಳಿಸಿತು. ಬೇರೆ ಕಲೆಗಳಲ್ಲಿ ಮತ್ತು ಕಾರ್ಯ ಕ್ಷೇತ್ರಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ಒಂದು ಶಾಸ್ತ್ರವು ಸಿದ್ಧವಾಯಿತು. ಆ ಶಾಸ್ತ್ರವೆಂದರೆ ಸರ್ವಮಾನ್ಯವೂ, ಸರ್ವರೂ ಚಾಚೂ ತಪ್ಪದೆ ಅನುಸರಿಸಬೇಕಾದ ಕಾವ್ಯಕಲೆ ಅಥವಾ ವಿಜ್ಞಾನ. ಅದರಲ್ಲಿ ಕಾವ್ಯಮಾರ್ಗವನ್ನು ಪರಿಪೂರ್ಣತೆಗೆ ಒಯ್ಯುವ ಮತ್ತು ಕಾವ್ಯಕೃತಿಗಳನ್ನು ವಿಮರ್ಶಿಸುವ ರೀತಿ ನೀತಿಗಳಿವೆ; ಕೃತಿಕಾರರು ಬಿಡಬೇಕಾದ ಅಂಶಗಳನ್ನು ಅಲ್ಲಿ ಹೇಳಿದೆ: ಕಾವ್ಯದ ಮೂಲ ತತ್ವಗಳಾವುದು, ಕಾವ್ಯವು ಏನೇನನ್ನು ಸಾಧಿಸಬಹುದು ಎಂದು ಶೋಧಿಸುವ ಪ್ರವೃತ್ತಿ ಕಂಡು ಬರುತ್ತದೆ. ಆದರೆ ಇಂಥ ಅಲಂಕಾರ ಶಾಸ್ತ್ರವು ನ್ಯೂನತೆ, ಅತಿರಿಕ್ತತೆಗಳನ್ನೆಲ್ಲಾ ಹೊರತುಪಡಿಸುವ ಬುದ್ಧಿಯಿಂದ ಮಾನದಂಡ ಮತ್ತು ಇತಿ–ಮಿತಿಗಳ ರಾಜ್ಯವನ್ನು ಕಟ್ಟಿತು. ಆದ್ದರಿಂದ ಅದು ತತ್ವತಃ ಕವಿಯ ಕಲ್ಪನಾಸ್ವಾತಂತ್ರ್ಯವನ್ನೊಪ್ಪಿಕೊಂಡರೂ ವ್ಯವಹಾರತಃ ಎಲ್ಲ ವಿಧದ ಕಲ್ಪಕತೆಯ ಸ್ವಾಚ್ಛಂದ್ಯಕ್ಕೂ ವಿರೋಧಿಯಾಯಿತು. ಜೊತೆಗೆ ಅದಕ್ಕೂ ಹಿಂದೆ ಹೇಳಿಕೊಳ್ಳುವಷ್ಟು ರೂಢಿಯಲ್ಲಿಲ್ಲದ ಧಾರ್ಮಿಕ–ಲೌಕಿಕವೆಂಬ ಭೇದವು ಬರವಣಿಗೆಯಲ್ಲಿ ನೆಲೆಗೊಂಡಿತು. ಮಹಾಕವಿಗಳೂ ಮಹಾಲೌಕಿಕರೂ ಕೇವಲ ಲೌಕಿಕ ಕೃತಿ ನಿರ್ಮಾಪಕರಾದರು; ರಾಮಾಯಣ ಮಹಾಭಾರತಗಳಂತೆ ಅವರ ಕೃತಿಗಳಿಗೆ ಜನತೆಯ ನಿಕಟವಾದ ಧಾರ್ಮಿಕ ಹಾಗೂ ನೈತಿಕ ಮನದ ಅಂಗವಾಗಿ ನಿಲ್ಲುವ ಅವಕಾಶ ಇಲ್ಲವಾಯಿತು. ಧಾರ್ಮಿಕ ಕಾವ್ಯಪ್ರವಾಹವು ಪುರಾಣ ಮತ್ತು ತಂತ್ರಗಳಲ್ಲಿ ಪ್ರತ್ಯೇಕವಾಗಿ ಹರಿಯಿತು.

ಈ ಯುಗದ ಅತಿ ದೊಡ್ಡ ಪ್ರಾತಿನಿಧಿಕ ಕವಿಯೆಂದರೆ ಕಾಳಿದಾಸ. ಅವನಿಗೂ ಹಿಂದೆ ಪ್ರಾರಂಭಿಸಿದ ಅತಿರಂಜನೆಯ ಶೈಲಿಯನ್ನು ಕಾಳಿದಾಸನು ಪ್ರಸಿದ್ಧವಾಗಿ ರೂಢಿಗೆ ತಂದನು; ಅದು ಅವನ ಕಾಲದ ನಂತರ ಬಹಳ ಶತಮಾನಗಳವರೆಗೆ ಸಾರತಃ ಏನೂ ಬದಲಾವಣೆ ಇಲ್ಲದೆ ಮುಂದುವರಿಯಿತು. ಸ್ವರೂಪ–ಸ್ವಾರಸ್ಯಗಳಲ್ಲಿ ಸಂಪೂರ್ಣ ಸಾಮರಸ್ಯವಿರುವ ಕೃತಿಗಳನ್ನು ಅವನು ರಚಿಸಿದನು. ಅವನಿಗಿಂತ ಕಡಿಮೆ ಪ್ರತಿಭೆಯುಳ್ಳವರು ಅಥವಾ ಅವನಷ್ಟೇ ಲಯ, ಗತಿಗಳನ್ನು ಸಾಧಿಸಿಕೊಳ್ಳದವರು ಅವನ ನಂತರ ಅಷ್ಟೇ ಅಸ್ಖಲಿತವೂ ಪರಿಪೂರ್ಣವೂ ಆದ ಶೈಲಿಯಲ್ಲಿ ಕಾವ್ಯಗಳನ್ನು ರಚಿಸಿದರು. ಕಾಳಿದಾಸನ ಕಾಲದಲ್ಲಿ ಕಾವ್ಯವಾಣಿಯು ಅಸಾಧಾರಣವಾದ ಪೂರ್ಣತೆಯನ್ನು ಮುಟ್ಟಿತು. ಕಾವ್ಯಕಲೆಯೇ ಒಂದು ಉಚ್ಚ ಕಸಬೆನಿಸಿತು. ಅದಕ್ಕೆ ತನ್ನ ಸಾಧನಗಳ ಪ್ರಜ್ಞೆ ಇತ್ತು; ಅದರ ಸಾಮಗ್ರಿಗಳನ್ನು ಬಳಸುವುದರಲ್ಲಿ ಅದು ಸೂಕ್ಷ್ಮಜ್ಞತೆಯನ್ನು ತಾಳಿತು; ಮೂರ್ತಿಶಿಲ್ಪಗಳಷ್ಟೇ ತನ್ನ ತಂತ್ರದಲ್ಲಿ ಜಾಗೃತವೂ ಪ್ರಮಾಣಬದ್ಧವೂ ಆಯಿತು. ಅಲಕ್ಷ್ಯದ, ಗಡಿಬಿಡಿಯ, ಅವ್ಯವಸ್ಥೆಯ, ಅಥವಾ ಕೆಟ್ಟ

ರಚನೆಗೂ ಅದು ತಡೆಹಾಕಿತು. ಕವಿಯು ತನ್ನ ಕಲೆಯ ಬಗ್ಗೆ ಸಂಪೂರ್ಣ ಪ್ರಜ್ಞೆ ಉಳ್ಳವನಾಗಿರಬೇಕು, ವರ್ಣಚಿತ್ರಕಾರ ಮತ್ತು ಶಿಲ್ಪಿಗಳಂತೆ ರಚನೆಯ ಖಚಿತವಾದ ಮಟ್ಟ ಮತ್ತು ಮಾರ್ಗ ಹಾಗೂ ನಿಯಮಗಳನ್ನು ಅವನು ಕೂಲಂಕಷವಾಗಿ ಅರಿತಿರಬೇಕು; ಹಾಗೂ ತಿಳಿದುಕೊಂಡು ವಿಮರ್ಶಬುದ್ಧಿಯಿಂದ ತನ್ನ ಪ್ರತಿಭೆಯ ಓಟಕ್ಕೆ ಲಗಾಮುಹಾಕಬಲ್ಲವನಾಗಬೇಕು. ಕಾವ್ಯದ ಈ ಸೂಕ್ಷ್ಮ ಕಲಾಭಿಜ್ಞತೆಯೇ ಕೊನೆಯಲ್ಲಿ ಅತಿ ಬಿಗಿಯಾದ ಜಡ ಸಂಪ್ರದಾಯಕ್ಕೆ ಎಡೆಗೊಟ್ಟಿತು; ಅಲಂಕಾರಿಕ ತಂತ್ರ ಹಾಗೂ ಚಾತುರ್ಯಗಳ ಬಗ್ಗೆ ಅವಾಸ್ತವ ಪ್ರಾಮುಖ್ಯವನ್ನು ಕೊಡಲಾರಂಭಿಸಿತು; ಗ್ರೀಕ್ ಕಾವ್ಯದ ಅಲೆಕ್ಸಾಂಡ್ರಿಯ ಯುಗದಲ್ಲಿ ಕಂಡುಬರುವ ಅವನತಿಯಂತೆ ಇಲ್ಲಿಯೂ ಶುಷ್ಕಪಂಡಿತ ಬುದ್ಧಿಯ ಅತ್ಯಸಾಧಾರಣ ವಿಕಾರಗಳನ್ನು ಒಪ್ಪಿ ಮೆಚ್ಚುವವರೆಗೂ ಹೋಯಿತು; ಆದರೆ ಈ ಶಾಸ್ತ್ರದ ಬೆಳವಣಿಗೆಯ ಪೂರ್ವದಲ್ಲಿ ರಚಿತವಾದ ಕೃತಿಗಳಲ್ಲಿ ಇಂಥ ದೋಷಗಳು ಇಲ್ಲ ಅಥವಾ ಕಡಿಮೆ.

ಅಭಿಜಾತ ಸಂಸ್ಕೃತವು ಬಹುಶಃ ಇಲ್ಲಿಯವರೆಗೆ ಮನುಷ್ಯ ಸಮಾಜ ನಿರ್ಮಿಸಿದ ವಿಚಾರವಾಹಿಕಗಳಲ್ಲೆಲ್ಲಾ ಅತ್ಯಂತ ಗಮನಾರ್ಹವಾದ ಪರಿಪೂರ್ಣತೆಯನ್ನೂ ದಾರ್ಢ್ಯವನ್ನೂ ಪಡೆದಿದೆ ಎನ್ನಬಹುದು. ಒಂದು ವೇಳೆ ಈ ಮಾತು ಹೆಚ್ಚೆನಿಸಬಹುದಾದರೆ ಆರ್ಯನ್ ಅಥವಾ ಸೆಮೆಟಿಕ್ ಮನವಂತೂ ಇಂಥ ಅತಿಯಾದ ಪ್ರಸಾದ ಗುಣ, ಹೇಳಬೇಕಾದುದನ್ನು ಸ್ವಲ್ಪವೂ ಹೆಚ್ಚು ಕಡಿಮೆ ಇಲ್ಲದೆ ಹೇಳುವ ಶಕ್ತಿಯ ಪರಮಾವಧಿ, ಯಾವಾಗಲೂ ಸಮಗ್ರತೆ, ಪದ ಸಂಹತಿಯ ರಚನೆಯ ಮಿತವ್ಯಯ ನೀತಿಗಳನ್ನು ಬೇರೆ ಎಲ್ಲಿಯೂ ಸಾಧಿಸಿಲ್ಲ ಎಂದು ನಿರ್ವಿವಾದವಾಗಿ ಹೇಳಬಹುದು. ಆದರೆ ಪದಪ್ರಯೋಗದಲ್ಲಿ ಎಷ್ಟೇ ಮಿತವ್ಯಯಿಯಾದರೂ ಅದೆಂದೂ ಪದ ದರಿದ್ರ, ಅರ್ಥ ದರಿದ್ರ ಎಂದು ಎನಿಸಿಲ್ಲ. ಪ್ರಸಾದವನ್ನು ಸಾಧಿಸುವ ಪ್ರಯತ್ನದಲ್ಲಿ ಅದೆಂದೂ ಅರ್ಥಗಾಂಭೀರ್ಯವನ್ನು ಬಿಟ್ಟುಕೊಡಲಿಲ್ಲ–ಅಷ್ಟೇ ಏಕೆ, ಅದರಲ್ಲಿ ಧ್ವನಿಶಕ್ತಿ ಸಂಪನ್ನತೆ, ಕಲೆಗಾರಿಕೆಯ ರಸವತ್ತೆ, ಸಮೃದ್ಧಿ. ಪ್ರಾಚೀನ ಕಾಲದಿಂದ ನಡೆಸಿಕೊಂಡು ಬಂದ ನಾದದ ಹಾಗೂ ಬಂಧದ ವೈಭವ ಇವೆ. ಗದ್ಯಕ್ಕೆ ಅನಂತರದ ಕಾಲದಲ್ಲಿ ಮೃತ್ಯುವಾಗಿ ಪರಿಣಮಿಸಿದ ಸಮಸ್ತ ಪದರಚನೆಯ ಶಕ್ತಿಯು ಮೊದಮೊದಲಿನ ಗದ್ಯಪದ್ಯಗಳಲ್ಲಿ ಪರಿಮಿತವಾಗಿದ್ದುದರಿಂದ, ಸಂಶಯದಿಂದ ಬಲಗೊಂಡ ಸಂಪತ್ತಿನ ಪರಮಾವಧಿ ಪ್ರಯೋಜನವನ್ನು ಪಡೆಯಲು ಶಕ್ತವಾಯಿತು. ಅಭಿಜಾತ ಕಾವ್ಯದ ಲಯಗಳು ಶ್ರೇಷ್ಠವೂ ಸೂಕ್ಷ್ಮವೂ ಸಂಗೀತಗುಣ ಸಮೃದ್ಧವೂ ಆಗಿವೆ. ಅವುಗಳ ಹೆಸರು ಸ್ಫೂರ್ತಿದಾಯಕವೂ ಆಕರ್ಷಕವೂ ಸುಂದರವೂ ಆಗಿವೆ. ಆ ಲಯಗಳು ತಮ್ಮ ಶಕ್ತಿಯಲ್ಲಿ ವಿವಿಧವೂ ರಚನೆಯಲ್ಲಿ ಸೂಕ್ಷ್ಮವೂ ಆಗಿವೆ. ಅವು ಪೂರ್ಣತೆಯನ್ನು ಒತ್ತಾಯಿಸುವ ಸ್ವರೂಪದವು–ಉದಾಸೀನ ಅಥವಾ ತುಚ್ಛ ಕಸಬುದಾರಿಕೆ ಇಲ್ಲವೇ ಸ್ಖಲದ್ಗತಿಯ ಸಂಭವಕ್ಕೆ ಅವೆಂದೂ ಎಡೆಗೊಡವು. ಈ ಕಾವ್ಯಕಲೆಯ ಮೂಲಘಟಕವು ಶ್ಲೋಕ. ಶ್ಲೋಕವೆಂದರೆ ಸಂಪೂರ್ಣಾರ್ಥವನ್ನು ಕೊಡುವ ನಾಲ್ಕು ಪದ್ಯಪಂಕ್ತಿಗಳು.

ಪ್ರತಿ ಒಂದು ಶ್ಲೋಕವೂ ಒಂದು ಪರಿಪೂರ್ಣ ಕಲಾಕೃತಿಯಾಗಿರಬೇಕು; ತಾನೇ ಒಂದು ಸ್ವತಂತ್ರ ಆಕೃತಿಯಾಗಿ ನಿಲ್ಲಬಲ್ಲ ವಸ್ತು, ದೃಶ್ಯ, ವಿವರ, ವಿಚಾರ, ರಸ, ಭಾವ, ಅಥವಾ ಭಾವನೆಯನ್ನು ಸಮನ್ವಿತವಾಗಿಯೂ ಮನಂಬುಗುವಂತೆಯೂ ಸ್ಫುಟವಾಗಿಯೂ ಹೇಳಬೇಕು. ಶ್ಲೋಕಮಾಲೆಯೆಂದರೆ ಪೂರ್ಣತೆಗೆ ಪೂರ್ಣತೆಯನ್ನು ಜೋಡಿಸುತ್ತ ಸತತವಾಗಿ ಸಮೃದ್ಧವಾಗುವ ಒಂದು ಭಾವಧಾರೆ, ಇಡಿ ಪದ್ಯ ಅಥವಾ ಸರ್ಗವು. ಈ ರೀತಿಯಲ್ಲಿ ರಚಿತವಾದ ಬಗೆಗೊಳಿಸುವ ಕಲಾಸೌಧ, ಮಹಾಕಾವ್ಯ ಅಥವಾ ಸರ್ಗಬಂಧವು ಸಾಮರಸ್ಯದ ಕೊನೆಯ ಮೊತ್ತವನ್ನು ಸಾಧಿಸುವ ಖಚಿತಗತಿಗಳ ಕ್ರಮಿಕ ವಿನ್ಯಾಸ. ಕಾವ್ಯನಿರ್ಮಿತಿಯ ಈ ರೀತಿಯ ಸೂಕ್ಷ್ಮ ಕಲೆಗಾರಿಕೆಯ ಮತ್ತು ಅಭಿಜಾತ ಮಾದರಿಯ ಅತ್ಯುನ್ನತ ಶಿಖರವನ್ನು ಕಾಳಿದಾಸನ ಕಾವ್ಯ ಮುಟ್ಟಿದೆ.

ಕಾಳಿದಾಸನ ಈ ಪ್ರೌಢಿಮೆಗೆ ಎರಡು ಗುಣಗಳು ಕಾರಣವಾಗಿವೆ. ಅತಿ ಶ್ರೇಷ್ಠ ವಿಶ್ವಕವಿಗಳಲ್ಲಿ ಮಾತ್ರ ಇಂತಹ ಗುಣಗಳು ಕಂಡುಬಂದಿವೆ. ಅವರಲ್ಲಿ ಇವನಲ್ಲಿರುವಂತೆ ವಸ್ತುವಿನ, ರಚನೆಯ ಸಪ್ರಮಾಣತೆ ಹಾಗೂ ಸಾಮರಸ್ಯಗಳು ಯಾವಾಗಲೂ ಕೂಡಿಕೊಂಡೇ ಇವೆ ಎಂದು ಹೇಳಬರುವುದಿಲ್ಲ. ಕಾಳಿದಾಸನು ಮಹಾಕವಿಗಳಾದ ಮಿಲ್ಟನ್ ಮತ್ತು ವರ್ಜಿಲ್ಲರ ಶ್ರೇಣಿಗೆ ಸೇರುತ್ತಾನೆ; ಮತ್ತು ಅವನ ಕಲೆಯಲ್ಲಿ ಇಂಗ್ಲೀಷಿನಲ್ಲಿಲ್ಲದ ಸೂಕ್ಷ್ಮವೂ ನಯವೂ ಆದ ರಸ ಸ್ಪರ್ಶವಿದೆ; ಲ್ಯಾಟಿನ್ ಕವಿಗಿಂತ ತನ್ನ ರಚನೆಯನ್ನು ಸಚೇತನಗೊಳಿಸುವ ಮತ್ತು ಅರ್ಥಪ್ರಭೆ ಬೀರುವ ಒಂದು ಸಹಜ ಶಕ್ತಿಯ ಕಾವಿದೆ. ಸಾಹಿತ್ಯದಲ್ಲಿ ಇದಕ್ಕೂ ಹೆಚ್ಚಿನ ಪರಿಪೂರ್ಣವೂ ಸಮನ್ವಿತವೂ ಆದ ಶೈಲಿ ಬೇರೊಂದಿಲ್ಲ; ರಸಮೌಲ್ಯದ ಅತ್ಯುಚ್ಚ ನಯಗಾರಿಕೆಯ ಸಮೃದ್ಧಿಯನ್ನು ತೋರಿಸುವ, ಅನವಶ್ಯಕವೆನಿಸದ ಅತಿಶಯವನ್ನು ಹೊಳೆಯಿಸುವ, ದಿವ್ಯವಾದ ಸುಶ್ಲಿಷ್ಟತೆಯನ್ನು ಮೂಡಿಸುವ, ಪರಿಮಿತ ಪದಪ್ರಯೋಗದಿಂದಲೇ ನಿರರ್ಗಳತೆಯನ್ನೂ ಪದ ಪರ್ಯಾಪ್ತತೆಯನ್ನೂ ಸಮನ್ವಯದ ಚರಮಸೀಮೆಯನ್ನೂ ಸಾಧಿಸಿದ ಸ್ಫೂರ್ತಿವಂತನೂ ಸೂಕ್ಷ್ಮದರ್ಶಿಯೂ ಆದ ಸಿದ್ಧಹಸ್ತನಾದ ವರಕವಿ ಮತ್ತೊಬ್ಬನಿಲ್ಲ. ಇವನಂತೆ ಕಿರಿಯದರಲ್ಲಿ ಹಿರಿಯದನ್ನು ಹೇಳಬಲ್ಲ ಹಾಗೂ ಒಂದು ಪದ, ಅಕ್ಷರ ಅಥವಾ ನಾದವನ್ನೂ ಹೆಚ್ಚು ಬಳಸಿಕೊಳ್ಳದೆ ಹಿಂದಿನ ಅಭಿಜಾತ ಕವಿಗಳು ಸಾಧಿಸಬೇಕೆಂದಿದ್ದ ಉಚಿತವೂ ಉದಾರವೂ ಆದ ಪದಪ್ರಯೋಗದ ವೈಭವವನ್ನು ತೋರಿಸಿದವನು ಇನ್ನೊಬ್ಬನಿಲ್ಲ. ಜಗತ್ತಿನ ವಸ್ತು ವೈಚಿತ್ರ್ಯದ ಪೂರ್ಣವಾದ ಬಣ್ಣವನ್ನೂ ಆಕರ್ಷಕತೆಯನ್ನೂ ಬೆಲೆಯನ್ನೂ ಮಹತ್ವವನ್ನೂ ಉದಾತ್ತತೆಯನ್ನೂ ಅಥವಾ ಮಾರ್ದವವನ್ನೂ ಮೂಡಿಸುವ ದಿವ್ಯಕೌಶಲವನ್ನು ತೋರಿಸುವವನು ಇವನೊಬ್ಬನೇ. ಪ್ರತಿಯೊಂದು ಸಾಲಿಗೂ ಪದಸಂಹತಿಗೂ ಪೂರ್ಣವೂ ಯುಕ್ತವೂ ಮಾದರಿಯದೂ ಆದ ಸೊಬಗನ್ನು ಕೊಟ್ಟವನೆಂದರೆ ಇವನೇ. ಪದಗಳ ಆಯ್ಕೆಯ ಸೌಲಭ್ಯವು ಅವುಗಳ ಜೋಡಣೆಯ ಸೌಖ್ಯವನ್ನು ಸರಿಗಟ್ಟುತ್ತದೆ. ಇವನು ಅತ್ಯಂತ ಸೊಗಸಾಗಿ ಇಂದ್ರಿಯಗಳನ್ನು ಮೋಹಿಸುವಂತೆ ಕಾವ್ಯರಚನೆ ಮಾಡಿದ ಕವಿಗಳಲ್ಲೊಬ್ಬ. ಆದರೆ

ಈ ಇಂದ್ರಿಯಮೋಹಕತೆ ಕೀಳುದೃಷ್ಟಿಯದಲ್ಲ. ಏಕೆಂದರೆ ಇವನಿಗೆ ತನ್ನ ವರ್ಣನೀಯ ವಸ್ತುವಿನ ಸ್ಪಷ್ಟವಾದ ದರ್ಶನ ಹಾಗೂ ಭಾವಗ್ರಹಣವಿದೆ; ಇವನ ಇಂದ್ರಿಯ ಸಂಮೋಹನವು ಶಿಥಿಲ ಮಟ್ಟದ್ದೂ ಅಲ್ಲ, ಅಮಲೇರಿಸುವಂಥದೂ ಅಲ್ಲ. ಯಾವಾಗಲೂ ಅದು ನ್ಯಾಯವಾದುದೂ ತೃಪ್ತಿ ನೀಡುವಂತಹುದೂ ಆಗಿರುವುದು. ಯಾಕೆಂದರೆ ಅದು ಬುದ್ಧಿಯ ಸಾರಥ್ಯದಿಂದ ಕೂಡಿಕೊಂಡಿದೆ. ಆ ಬುದ್ಧಿಯ ಗಾಂಭೀರ್ಯ ಮತ್ತು ಸಾಮರ್ಥ್ಯಗಳು ಕೆಲವೊಮ್ಮೆ ಪ್ರತ್ಯಕ್ಷವಾಗಿದ್ದರೆ ಕೆಲವೊಮ್ಮೆ ರಸಗೂಢವಾಗಿವೆ. ಆದರೆ ಅದು ಅವನ್ನು ಇವನ ಕಾವ್ಯದ ಕುಸುರುಗೆಲಸದ ವರ್ಣಪಟ್ಟಿಯ ವೇಷದಲ್ಲೇ ಗುರುತಿಸಬಹುದು–ಹೃದಯದಲ್ಲಿ ರಾಜಗಂಭೀರ ಸಂಯಮವಿದ್ದ ಹಾಗೆ. ಪದಗಳ ಮೇಲೆ ಕಾಳಿದಾಸನಿಗೆ ಎಷ್ಟು ಸಾರ್ವಭೌಮ ಒಡೆನತವಿತ್ತೋ ಕಾವ್ಯದ ಲಯಗತಿಯ ಮೇಲೂ ಅವನಿಗೆ ಅಷ್ಟೇ ಅಪ್ರತಿಹತ ಪ್ರಭುತ್ವವಿತ್ತು. ಅವನ ಒಂದೊಂದು ಛಂದೋಬಂಧದಲ್ಲಿಯೂ ಸಂಸ್ಕೃತ ಭಾಷೆಯಲ್ಲಿಯ ಪದ ಮೈತ್ರಿಯ ಪರಿಪೂರ್ಣ ಮಾದರಿಗಳು ಸಿಕ್ಕುತ್ತವೆ. (ಜಯದೇವನಂಥ ಒಬ್ಬಿಬ್ಬರು ಕವಿಗಳಲ್ಲಿ ಮಾತ್ರ ಕಾಳಿದಾಸನಂತಹ ಶುದ್ಧಭಾವಗೀತೆಗಳ ಮಾದರಿಗಳು ಲಭ್ಯ.) ಅವನ ನಾದದ ಸಮಶ್ರುತಿಯು ಸತತವಾಗಿ ಕಂಡುಬರುವ ಮಧುರ ಅನುಪ್ರಾಸದ ಸೂಕ್ಷ್ಮ ವಿವರಬಂಧವನ್ನವಲಂಬಿಸಿದ್ದು ಮತ್ತು ಅದರಲ್ಲಿ ಕಾವ್ಯದ ಸಂಗೀತದ ಧಾಟಿಯ ಧಾರಾವಾಹಿಯಾದ ಐಕ್ಯಭಾವವನ್ನು ಎಂದೂ ಭಂಗಿಸದ ಭಾವಪೂರ್ಣವಾದ ಪಂಕ್ತ್ಯಂತಲಯದ ಸರಳವಾದ ಬಳಕೆ ಕಂಡು ಬರುತ್ತದೆ. ಕಾಳಿದಾಸನ ಕಾವ್ಯದ ಇನ್ನೊಂದು ಗುಣವೆಂದರೆ ಯಾವಾಗಲೂ ಇರುವ ಯಥಾಪ್ರಮಾಣ. ಅವನು ತನ್ನ ವಸ್ತುವನ್ನು, ವಿಚಾರವನ್ನು ವ್ಯಂಜಿಸಲು ಬಳಸಿದ ಪದ ಹಾಗೂ ನಾದಗಳ ಸಂಪೂರ್ಣ ರಸಮೌಲ್ಯವನ್ನು ಪಡೆಯುವಲ್ಲಿ ಎಚ್ಚರಿಕೆ ವಹಿಸುತ್ತಾನೆ. ಆ ವಿಚಾರ ಹಾಗೂ ವಸ್ತುಗಳಾದರೂ ಉನ್ನತ, ಸದೃಢ ಇಲ್ಲವೆ ಅರ್ಥಗೌರವವುಳ್ಳ ವರ್ಣನಾತ್ಮಕ ಅಥವಾ ಭಾವನಾತ್ಮಕ ಮೌಲ್ಯವನ್ನು ಸಾಧಿಸುವಲ್ಲಿಯೂ ಅವನು ಅಷ್ಟೇ ಎಚ್ಚರಿಕೆ ವಹಿಸಿದ್ದಾನೆ. ಹಿಂದಿನ ಕವಿಗಳಷ್ಟು ವಿಶ್ವ ವಿಶಾಲತೆ ಇಲ್ಲದಿದ್ದರೂ ಅವನ ಕಲ್ಪಕತೆಯು ಸಾಕಷ್ಟು ವಿಶಾಲವಾಗಿದೆ; ಅಲ್ಲದೆ ರಚನೆಯಲ್ಲಿ ಹೆಜ್ಜೆ ಹೆಜ್ಜೆಗೂ ಅದನ್ನು ಉಳಿಸಿಕೊಂಡು ಬರಲಾಗಿದೆ. ತನ್ನ ಸಾಮಗ್ರಿಗಳ ಬಳಕೆಯಲ್ಲಿ ಈ ಕಲೆಗಾರನ ಕೈ ಎಂದೂ ಸೋಲದು. ಈ ನಿಯಮಕ್ಕೆ ಅಪವಾದವೆಂದರೆ ಅವನ ಕೃತಿಗಳಲ್ಲಿ ಗಣ್ಯವಲ್ಲದ ಒಂದೇ ಒಂದು. ಅವನ ಕಾವ್ಯತೂಲಿಕೆಯ ಸ್ಪರ್ಶದಷ್ಟೇ ಅವನ ಕಲ್ಪನಾಶಕ್ತಿಯೂ ಕೂಡ ಉನ್ನತವೂ ಸೂಕ್ಷ್ಮತಮವೂ ಕಾರ್ಯಕ್ಷಮವೂ ಆಗಿದೆ.

ಮೂಲತಃ ಶೋಧಿಸಿದರೆ ಹಿಂದಿನ ಪುರಾಣ ಮಹಾಕಾವ್ಯಗಳಲ್ಲಿ ಸಾಧಿಸಿದ ಅತ್ಯುನ್ನತ ಕಾವ್ಯಗುಣಗಳನ್ನೇ ಇವುಗಳಲ್ಲಿಯೂ ಕಾಣಬಹುದು; ಇವುಗಳ ಸ್ವರೂಪ ಹಾಗೂ ಕ್ರಮ ಬೇರೆ ಅಷ್ಟೆ. ಇವುಗಳಲ್ಲಿ ಭಾರತದ ಮನ, ಜೀವನ ಮತ್ತು ಸಂಸ್ಕೃತಿಗಳನ್ನು ಕಾವ್ಯವಾಣಿಯ ಅರ್ಥಪೂರ್ಣವಾದ ಪ್ರತಿಮೆ ಹಾಗೂ ಅಲಂಕಾರಗಳಲ್ಲಿ ಅರ್ಥೈಸಿ

ಹೇಳುವುದೇ ಕಾಳಿದಾಸನ ಉದ್ದೇಶ. ಅವನ ಉಪಲಬ್ಧವಿರುವ ಏಳು ಕಾವ್ಯಗಳಲ್ಲಿ ತನ್ನದೇ ಆದ ರೀತಿಯಲ್ಲಿ, ಪರಿಮಿತಿಯಲ್ಲಿ ಮತ್ತು ಮಟ್ಟದಲ್ಲಿ ಒಂದೊಂದೂ ಒಂದು ಮಹಾಕೃತಿ ಎನಿಸಿದೆ; ಅವು ಒಂದೊಂದೇ ವಿಷಯದಲ್ಲಿ ಉಜ್ವಲವೂ ಸೂಕ್ಷ್ಮವೂ ರಂಜಕವೂ ಆದ ಹೃದ್ಯ ಚಿತ್ರಗಳಿಂದಲೂ ಕೂಡಿವೆ. ಆತನು ಒಬ್ಬ ಪಂಡಿತನೂ ಅಹುದು, ಸೂಕ್ಷ್ಮನಿರೀಕ್ಷಕನೂ ಹೌದು; ತನ್ನ ಕಾಲದ ರಾಜನೀತಿ, ಕಾಯದೆ, ಸಮಾಜ ನೀತಿ, ಧರ್ಮ, ಪುರಾಣ, ತತ್ವಜ್ಞಾನ, ಕಲೆಗಳನ್ನು, ರಾಜಸ್ಥಾನದ ಹಾಗೂ ಸಾಮಾನ್ಯರ ಜೀವನವನ್ನು ಅಮೂಲಾಗ್ರವಾಗಿ ಅರಿತಿದ್ದನು. ಅವನ ಮನಸ್ಸು ಎಂದರೆ ಒಂದು ಮಹಾಕೋಶ. ಅದರಲ್ಲಿ ಅವನು ಸೂಕ್ಷ್ಮವಾಗಿ ನಿಸರ್ಗದಲ್ಲಿ ಕಂಡ ಮೃಗ–ಪಕ್ಷಿ, ಗಿರಿ–ಕಾನನ ಮುಂತಾದ ಕಣ್ಮನಗಳು ಕಾಂಬ ಸರ್ವವಸ್ತುಗಳ ಜ್ಞಾನವೂ ತುಂಬಿತ್ತು. ಆ ಮನವಾದರೋ ಯಾವಾಗಲೂ ಒಬ್ಬ ಮಹಾಕವಿಯ, ಮಹಾಕುಶಲ ಕಲೆಗಾರನ ಮನವೇ ಆಗಿತ್ತು. ಮಿಕ್ಕ ಕೆಲವು ಸಂಸ್ಕೃತ ಕವಿಗಳಲ್ಲಿ ಕಂಡುಬರುವ ಕಲೆಗೆ ಮಾರಕವಾದ ಪಾಂಡಿತ್ಯಪ್ರದರ್ಶನವು ಅವನಲ್ಲಿಲ್ಲ; ತನ್ನ ವಿಷಯವನ್ನೆಲ್ಲವನ್ನೂ ತನ್ನ ಕಲಾದೃಷ್ಟಿಗೆ ಒಗ್ಗುವಂತೆ ಅಳವಡಿಸುವ ಶಕ್ತಿ ಅವನಲ್ಲಿತ್ತು. ಪಂಡಿತ ಬುದ್ಧಿಯು ಅವನಿಗೆ ವಿಷಯ ಸಂಗ್ರಹವನ್ನಷ್ಟೆ ಮಾಡಿಕೊಟ್ಟಿತು. ಆದರೂ ಅದು ಒಂದು ಘಟನೆಯ ಅಥವಾ ವರ್ಣನೆಯ ಅಂಗವಾಗಿ ಪದೇ ಪದೇ ಅನೇಕ ವಿವರಗಳನ್ನು ಕೊಟ್ಟು ಉಪಕಾರ ಮಾಡಿದೆ. ಆ ವಿವರಗಳು ಅವನ ವೈಭವ ಪೂರ್ಣವಾದ ನುಡಿಗಳಲ್ಲಿಯ ಉಜ್ವಲವಾದ ಸುದೀರ್ಘ ಪ್ರತಿಮಾಪಂಕ್ತಿಗಳ ನಡುವೆ ಬರುವುದಾದರೂ ಉಂಟು, ಹಾಗಲ್ಲದೆ ಅವುಗಳ ರಚನೆಯಲ್ಲಿ ಅಂಗವಾಗಿ ನಿಲ್ಲುವುದೂ ಉಂಟು. ಭಾರತದ ಮಹಾಪರ್ವತಗಳೂ ಕಾಡುಗಳೂ ಬಯಲುಗಳೂ ಜನತೆಗಳೂ ಸ್ತ್ರೀ ಪುರುಷರೂ ಅವರ ಜೀವನ ಪರಿಸ್ಥಿತಿಗಳೂ ಅಲ್ಲಿಯ ಪ್ರಾಣಿಗಳೂ ಹಳ್ಳಿ ಪಟ್ಟಣಗಳೂ ಆಶ್ರಮಗಳೂ ಉದ್ಯಾನಗಳೂ ನದಿಗಳೂ ಗದ್ದೆಗಳೂ ಕಾಳಿದಾಸನ ಮಹಾಕಾವ್ಯ, ನಾಟಕ ಮತ್ತು ಪ್ರೇಮಗೀತೆಗಳಿಗೆ ಹಿನ್ನೆಲೆಯಾದವು. ಅವನು ಆ ಎಲ್ಲವನ್ನೂ ಕಂಡವನು, ಅವೆಲ್ಲವನ್ನೂ ಬಗೆದುಂಬಿಕೊಂಡವನು– ತನ್ನ ಶಕ್ತಿಗೆ ತಕ್ಕಂತೆ ಮಾಡಿದ ವರ್ಣನೆಗಳಲ್ಲಿ ಅವೆಲ್ಲವನ್ನೂ ಸ್ಫುಟವಾಗಿ ಮೂಡಿಸದೆ ಉಳಿದಿಲ್ಲ. ಭರತವರ್ಷದ ನೈತಿಕ ಹಾಗೂ ಗಾರ್ಹಸ್ಥ ಆದರ್ಶಗಳನ್ನು ಕೃತಿಗಳ ಮಿಕ್ಕ ಆವರಣ ರಚನೆಗೆ ಬಳಸಿಕೊಳ್ಳಲಾಗಿವೆ. ಆ ಆದರ್ಶಗಳೆಂದರೆ ಕಾಡಿನ ಋಷಿಜೀವನ, ಬೆಟ್ಟಗುಡ್ಡಗಳಲ್ಲೂ ಧ್ಯಾನಸ್ಥರಾಗಿ ಕುಳಿತ ಸಂಯಮಿಗಳ ಬಾಳು, ಗೃಹಸ್ಥನ ಇರಸ್ತಿಕೆ, ಜನಜಂಗುಳಿಯ ಸುಪರಿಚಿತ ನಡೆನುಡಿ, ಸಾಮಾಜಿಕ ಸ್ಥಾನಮಾನಗಳು ಮತ್ತು ಧರ್ಮಕಾವ್ಯಗಳು, ನಂಬಿಗೆಗಳು, ಆರಾಧನೆಗಳು, ಪ್ರತೀಕಗಳು. ದೇವತೆಗಳ ಹಾಗೂ ರಾಜಾಧಿರಾಜರ ಮಹತ್ ಕಾರ್ಯಗಳು, ಉದಾತ್ತ ಅಥವಾ ಸೂಕ್ಷ್ಮವಾದ ಮಾನವ ಭಾವ–ರಸಗಳು, ಹೆಂಗಸರ ಸೌಂದರ್ಯ ಹಾಗೂ ಆಕರ್ಷಕತೆ, ಪ್ರಣಯಿಗಳ ಇಂದ್ರಿಯ ಸಹಜ ಪ್ರೇಮೋದ್ರೇಕ, ಋತುಗಳ ಮತ್ತು ನಿಸರ್ಗ ದೃಶ್ಯಗಳ ಸಾಲುಸಾಲಾದ ಮೆರವಣಿಗೆ ಇವು ಕಾಳಿದಾಸನಿಗೆ ಅತ್ಯಂತ ಪ್ರಿಯವಾದ ವಿಷಯಗಳು.

ಅನುಭವದ ಕಲಾತ್ಮಕ, ವಿಷಯೋನ್ಮುಖ, ಇಂದ್ರಿಯತೋಷಕ ಅಂಶಗಳನ್ನು ಬಳಸಿಕೊಳ್ಳುವುದರಲ್ಲಿ ಅವನು ತನ್ನ ಶೀಲಕ್ಕೆ ಸರಿಯಾಗಿ ನಡೆದುಕೊಂಡಿದ್ದಾನೆ. ಅದಕ್ಕೆ ತಕ್ಕ ಪ್ರತಿನಿಧಿ ಎನಿಸಿದ್ದಾನೆ. ಮುಖ್ಯವಾಗಿ ಅವನೊಬ್ಬ ಪ್ರೇಮಕವಿ, ರಸಋಷಿ, ಗೆಲುವಿನ ಗೀತಕಾರ. ಉನ್ನತಾದರ್ಶಗಳ ಬಗ್ಗೆ ತಾಳುವ ಬೌದ್ಧಿಕ ಆವೇಶ– ಜ್ಞಾನ, ಸಂಸ್ಕೃತಿ, ಧಾರ್ಮಿಕ ಕಲ್ಪನೆ, ನೈತಿಕ ಆದರ್ಶ, ತಪಸ್ವಿ ಸಹಜವಾದ ಆತ್ಮಸಂಯಮದ ಔನ್ನತ್ಯ–ಇವುಗಳಲ್ಲಿಯೂ ಅವನು ಕಾಲ ಧರ್ಮದ ಅನುಯಾಯಿಯಾಗಿ, ಅವೆಲ್ಲವನ್ನೂ ಬಾಳಸೊಬಗಿನ ಅಂಗವನ್ನಾಗಿ ಮಾಡಿ ಅವನ್ನು ಅದರ ಸಂಪೂರ್ಣ ಸೊಗಸಾದ ಚಿತ್ರದ ಭಾಗಗಳೆಂದು ಮೆಚ್ಚಿ ನೋಡುತ್ತಾನೆ. ಅವನ ಎಲ್ಲ ಕೃತಿಗಳಿಗೂ ಈ ಸ್ನಾಯುವಿದೆ. ರಘುವಂಶವೂ ಒಂದು ದೊಡ್ಡ ರಸವತ್ತಾದ ಕಾವ್ಯ. ಅದರಲ್ಲಿ ಭರತವರ್ಷದ ಅತ್ಯುನ್ನತ ಧಾರ್ಮಿಕ ಹಾಗೂ ಸಂಸ್ಕೃತಿಗಳ ಪ್ರತಿನಿಧಿಗಳೆನಿಸುವ ಹಳೆಯ ರಾಜರವಂಶದ ಕಥೆ ಇದೆ. ಆ ಕಥೆಯಲ್ಲಿ ಅಂತಹ ಆದರ್ಶ ರಾಜರ ಸದ್ಗುಣಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾದ ಭಾವ, ರಸ, ಉದಾತ್ತ ಅಥವಾ ಸುಂದರ ವಿಚಾರ ಹಾಗೂ ಮಾತು– ಅಲ್ಲದೆ ಸುಸ್ಪಷ್ಟ ಘಟನೆ ದೃಶ್ಯ ಮತ್ತು ಆವರಣಗಳಲ್ಲಿ ಮೂಡಿಸಲಾಗಿದೆ. ಇನ್ನೊಂದು ಅವನ ಅಪೂರ್ಣ ಮಹಾಕಾವ್ಯ; ಕಥಾದೃಷ್ಟಿಯಿಂದ ಮಹಾಕಾವ್ಯದ ಒಂದು ದೊಡ್ಡ ಖಂಡ. ಆದರೆ ಅವನ ರಚನಾವೈಖರಿಯು ಯೋಗ್ಯತೆಯಿಂದ ಅದು ಪೂರ್ಣವಾಗಿದೆಯೆಂದೇ ಹೇಳಬೇಕು. ಅದರಲ್ಲಿ ದೇವತೆಗಳ ಕಥೆ ಬಂದಿದೆ–ದೇವಾಸುರ ಯುದ್ಧ; ಅದರ ಪರಿಹಾರೋಪಾಯವೆಂದರೆ ಅತ್ಯುನ್ನತ ದೇವ–ದೇವಿಯರ ಸಮಾಗಮ. ಆದರೆ ವಿನ್ಯಾಸದಲ್ಲಿ ಭಾರತದ ನಿಸರ್ಗ ಹಾಗೂ ಮಾನವ ಜೀವನವನ್ನು ದಿವ್ಯತೆಯ ಮಟ್ಟಕ್ಕೇರಿಸಿ ಪವಿತ್ರ ಪರ್ವತದ ಮೇಲೆ ಉಚ್ಚ ದೇವತೆಗಳ ನಿವಾಸಗಳಲ್ಲಿ ಬಣ್ಣಿಸಲಾಗಿದೆ. ಅವನ ಮೂರೂ ನಾಟಕಗಳು ಶೃಂಗಾರವನ್ನೇ ಸುತ್ತಿ ಹರಿದಿವೆ. ಆದರೆ ಅಲ್ಲಿ ಎಂದಿನಂತೆ ಜೀವನದ ಒಪ್ಪ ಹಾಗೂ ವಿವರಗಳು ತಪ್ಪದೆ ಬಂದಿವೆ. ಅವನ ಒಂದು ಕಾವ್ಯ ಭಾರತೀಯ ಸಂವತ್ಸರವೊಂದರ ಋತುಗಳ ವರ್ಣಮಯ ಪಂಕ್ತಿಗಳನ್ನು ಅನಾವರಣ ಮಾಡುತ್ತದೆ. ಇನ್ನೊಂದು, ಮೇಘದೂತನನ್ನು ಉತ್ತರ ಭಾರತದ ಉದ್ದಕ್ಕೂ ಅದರ ದೃಶ್ಯಮಾಲೆಗಳನ್ನು ತೋರಿಸುತ್ತ ಒಯ್ದು, ಪ್ರೇಮಭಾವದ ಇಂದ್ರಿಯೋತ್ತೇಜಕವೂ ರಸಮಯವೂ ಸ್ಪಷ್ಟವೂ ಸೂಕ್ಷ್ಮವೂ ಆದ ಚಿತ್ರಕ್ಕೆ ಮುಟ್ಟಿಸುತ್ತದೆ. ಈ ವಿವಿಧ ಕಾವ್ಯಭಿತ್ತಿಗಳಲ್ಲಿ ಆ ಕಾಲದ ಭಾರತದ ಮನ, ಪರಂಪರೆ, ಭಾವನೆ– ವಿಪುಲವೂ ಸುಂದರವೂ ಕ್ರಮಬದ್ಧವೂ ಆದ ಜೀವನಗಳ ಸಂಪೂರ್ಣ ಚಿತ್ರವನ್ನು ನಾವು ಅಪೂರ್ವ ರೀತಿಯಲ್ಲಿ ಕಾಣಬಹುದು. ಹಾಗೆಂದು ಅಲ್ಲೆ ಭಾರತದ ಅತಿ ಗಭೀರ ವಿಚಾರಗಳನ್ನು ಕಾಣಲಾರೆವು. ಅದನ್ನು ನಾವು ಬೇರೆ ಕಡೆ ಹುಡುಕಬೇಕು ಆದರೆ ಆ ಕಾಲದ ಮಟ್ಟಿಗೆ ಸಹಜವೆನಿಸುವ ಬೌದ್ಧಿಕ, ಜೈವಿಕ ಮತ್ತು ಕಲಾತ್ಮಕ ಪ್ರವೃತ್ತಿಗಳನ್ನು ಕಾಣಬಹುದು.

ಮುಂದೆ ಬಂದ ಪದ್ಯ ಸಾಹಿತ್ಯವು ಮೂಲತಃ ಕಾಳಿದಾಸನ ಮಾದರಿಗೆ ಸೇರಿದುದು; ವೈಯಕ್ತಿಕ ವಿಶೇಷಗಳನ್ನು ಬಿಟ್ಟರೆ ಅದರಲ್ಲಿ ಅದೇ ವಿಚಾರ, ಅದೇ ಭಾವ, ಅದೇ ಮನೋಧರ್ಮ, ಅವೇ ಸಾಮಗ್ರಿಗಳು, ಅದೇ ರಚನಾಪದ್ಧತಿ ಕಂಡು ಬರುತ್ತವೆ. ಆ ಕೃತಿಗಳಲ್ಲಿ ಕಾಳಿದಾಸನ ಕಾವ್ಯಗಳಲ್ಲಿ ಕಂಡು ಬರುವ ಪರಿಪೂರ್ಣತೆ, ರಸವತ್ತೆ ಮತ್ತು ಸುಖ ಕಂಡುಬರದಿದ್ದರೂ ಉತ್ತಮ ಪ್ರತಿಭೆ, ಅಸಾಧಾರಣ ಗುಣ ಮತ್ತು ಯೋಗ್ಯತೆಗಳಿವೆ. ಮಾಘ ಮತ್ತು ಭಾರವಿಗಳ ಮಹಾಕಾವ್ಯಗಳು ಭಾರತೀಯ ಸಾಹಿತ್ಯದ ಅವನತಿಯ ಕಾಲದ ಆರಂಭ ದಶೆಯಲ್ಲಿ ಹುಟ್ಟಿದವು. ಅನಂತರ ಕಾಲಹೋದ ಹಾಗೆ ಕಾವ್ಯಗುಣವನ್ನು ಇಂಗಿಸುವಷ್ಟು ಹೊರೆಹೊರೆಯಾದ ಬಂಧ, ರೀತಿ, ರೂಪ ಮುಂತಾದವುಗಳ ಮೇಲಿನ ಅಲಂಕಾರಿಕ ನಿಯಮಗಳು ಹೆಚ್ಚುತ್ತಾ ಹೋದವು. ಕವಿಸಮಯ ಹಾಗೂ ಪರಂಪರಾವಿಶೇಷಗಳು ಹೆಚ್ಚುತ್ತಾ ಹೋದುವು; ಅಪರುಚಿ ಬೆಳೆಯಿತು. ಇದು ಭಾಷೆಯ ರಚನಾತ್ಮಕ ಸಾಹಿತಿಯ ಕೈತಪ್ಪಿ ಶುಷ್ಕ ಪಂಡಿತರ ವಶವಾಗುತ್ತಾ ಹೋದುದಕ್ಕೆ ಸಾಕ್ಷಿ. ಮಾಘನ ಕಾವ್ಯವು ರಚನಾತ್ಮಕ ದೃಷ್ಟಿಗಿಂತ ಹೆಚ್ಚಾಗಿ ಅಲಂಕಾರಿಕ ನಿಯಮಗಳಿಗನುಸಾರವಾಗಿ ರಚಿತವಾದುದು. ಅದರಲ್ಲಿ ಕಲನಾದದ ಶಬ್ದ ಮತ್ತು ದ್ರಾವಿಡೀ ಪ್ರಾಣಾಯಾಮದ ಶ್ಲೇಷದ ಕನಿಷ್ಠ ಮಾದರಿಯ ವ್ಯರ್ಥಾಲಾಪಗಳನ್ನು ಉತ್ತಮ ಕಾವ್ಯಗುಣಗಳೆಂದು ಕಾಣಿಸಲಾಗಿದೆ. ಭಾರವಿಯು ಈ ಅವನತಿಗೆ ಹೆಚ್ಚು ಇಳಿಯದಿದ್ದರೂ ತೀರ ಹೊರತಾಗಿಯೂ ಉಳಿಯಲಿಲ್ಲ. ಅವನ ಕೃತಿಯಲ್ಲಿ ಈ ಅವನತಿಯ ಗುರುತುಗಳು ಕಾಣುತ್ತವೆ; ಅವು ಅವನ ಮನೋಧರ್ಮಕ್ಕೂ ಪ್ರತಿಭೆಗೂ ಹೊಂದುವುದೂ ಇಲ್ಲ. ತಮ್ಮಷ್ಟಕ್ಕೇ ಆದರೂ ಅವು ಸೊಗಸಾಗಿಯೂ ಇಲ್ಲ, ನೈಜವಾಗಿಯೂ ಇಲ್ಲ. ಇಷ್ಟಾದರೂ ಗಭೀರವಾದ ಕಾವ್ಯಮಯ ಚಿಂತನದ ಗುಣಗಳೂ ವರ್ಣನಕಲೆಯ ಮಹಾಕಾವ್ಯಸಹಜ ಉದಾತ್ತತೆಯೂ ಭಾರವಿಯ ಕೃತಿಯಲ್ಲಿವೆ. ಶುಷ್ಕ ಪಾಂಡಿತ್ಯದ ಬರೆ ಮುಖದ ಮೇಲೆ ಇಲ್ಲದೆ ಹೋಗಿದ್ದರೆ ಮಾಘನ ಕಾವ್ಯಪ್ರತಿಭೆ ಅವನಿಗೆ ಸಾಹಿತ್ಯಪ್ರಪಂಚದಲ್ಲಿ ಇನ್ನೂ ಹೆಚ್ಚಿನ ಸ್ಥಾನವನ್ನು ಒದಗಿಸಿಕೊಡುತ್ತಿತ್ತು. ಈ ಪ್ರತಿಭೆ ಮತ್ತು ಅಪರುಚಿ–ಅಪರೀತಿಗಳ ಮಿಶ್ರಣವು ಅನಂತರದ ಅಭಿಜಾತ ಸಾಹಿತಿಗಳನ್ನು ಎಲಿಜಬೆತನ್ ಸಾಹಿತಿಗಳಿಗೆ ಸರಿದೋರಿಸುತ್ತದೆ; ಆದರೆ ಒಂದೇ ಒಂದು ವ್ಯತ್ಯಾಸ–ಒಬ್ಬರಲ್ಲಿ ಅತಿಪಕ್ವವೂ ಜೀರ್ಣವೂ ಆದ ಸಂಸ್ಕೃತಿ ಕಂಡುಬಂದರೆ ಇನ್ನೊಬ್ಬರಲ್ಲಿ ಇನ್ನೂ ಪಕ್ವವಾಗದ ಗಡಸುತನ ಕಂಡುಬರುತ್ತದೆ. ಆದರೆ ಎರಡರ ಫಲವೂ ಒಂದೇ– ಅಸಂಬದ್ಧತೆ. ಹೀಗಿದ್ದರೂ ಅವು ಆ ಕಾಲದ ಸಂಸ್ಕೃತ ಸಾಹಿತ್ಯದ ಲಕ್ಷಣ, ಗುಣ ಮತ್ತು ಪರಿಮಿತಿಗಳನ್ನು ಎದ್ದುಕಾಣುವಂತೆ ಮೆರೆಯಿಸಿವೆ; ಈ ಅಂಶಗಳು ಕಾಳಿದಾಸನ ಪ್ರತಿಭೆಯ ಪ್ರಕಾಶದಲ್ಲಿ ಅಡಗಿಹೋದರೂ ಅವನ ಕಣ್ಣು ತಪ್ಪಿಸಿದಂಥವು.

ಈ ಸಾಹಿತ್ಯವು ಭಾರತೀಯ ನಾಗರಿಕತೆಯ ಅತ್ಯಂತ ಮುಂದುವರಿದ ಬೌದ್ಧಿಕ ಉತ್ಕರ್ಷೆಯ ಅವಧಿಯಲ್ಲಿ ಬದುಕಿದ ಸುಸಂಸ್ಕೃತರೂ ಸುಸಂಪನ್ನರೂ ಆದ ವರ್ಗಕ್ಕೆ ಪರಂಪರಾಗತವಾಗಿ ಮೆಚ್ಚಿಗೆಗೆ ಪಾತ್ರವಾದ ಪಕ್ವವೂ ಬುದ್ಧಿ ಪೂರ್ವಕವೂ ಆದ

ಕಾವ್ಯಕೃತಿ ಮತ್ತು ವಿಚಾರ–ಜೀವನ ಹಾಗೂ ಇತರ ವಿಷಯಗಳ ವಿಮರ್ಶೆ ಎನಿಸಿದೆ. ಎಲ್ಲೆಲ್ಲೂ ಬುದ್ಧಿಯ ಪ್ರಕಾಶವು ಎದ್ದು ಕಾಣುತ್ತದೆ; ಒಮ್ಮೆ ಅದು ಮರೆಯಲ್ಲಿ ನಿಂತು ಶುದ್ಧ ವಸ್ತುಸತ್ಯವನ್ನು ಪ್ರತಿಬಿಂಬಿಸಲು ಅವಕಾಸ ಕೊಟ್ಟಿದೆ ಎಂದು ಕಂಡಾಗಲೂ ಅದರ ಮೇಲೂ ತನ್ನ ಮುದ್ರೆಯನ್ನು ಬಿಡದೆ ಅಚ್ಚೊತ್ತಿದೆ. ಹಿಂದಿನ ಪುರಾಣ–ಕಾವ್ಯಗಳಲ್ಲಿ ವಿಚಾರ, ಧರ್ಮ, ನೀತಿ, ಜೀವನ, ವ್ಯವಹಾರಗಳೆಲ್ಲವೂ ಅನುಭವಜನ್ಯ. ಕಾವ್ಯ ಪ್ರತಿಭೆಯು ಅಲ್ಲಿ ತನ್ನನ್ನು ತಾನೇ ಮರೆತು ತಲ್ಲೀನತೆಯಿಂದ ವಸ್ತುಸಾತ್ಮ್ಯ ಹೊಂದಿ ಕಾರ್ಯಾಸಕ್ತವಾಗಿದೆ. ಇದೇ ಅವುಗಳ ಮಹಾ ರಚನಾತ್ಮಕ ಶಕ್ತಿ ಹಾಗೂ ಸಚೇತನ ಕವಿ ಸಹಜ ಪ್ರಾಮಾಣಿಕತೆ ಮತ್ತು ಸಾಮರ್ಥ್ಯಗಳ ರಹಸ್ಯ. ಅವೇ ವಿಷಯಗಳಲ್ಲಿ ಅನಂತರದ ಕವಿಗಳೂ ಆಸಕ್ತರಾಗಿದ್ದರು. ಆದರೆ ಅವರ ಆ ಆಸಕ್ತಿಯ ಜೊತೆಗೆ ವಸ್ತುನಿರೀಕ್ಷಣೆಯಲ್ಲಿ ತೊಡಗಿದರೂ ಆ ವಸ್ತುಗಳೊಡನೆ ಸಮ ಸಹಾನುಭೂತಿಯಿಂದ ಬದುಕದ ವಿಮರ್ಶಾತ್ಮಕ ಬುದ್ಧಿಮತ್ತೆ ಮತ್ತು ಕೇವಲ ವಿಚಾರಾತ್ಮಕ ಅನುಭವಗಳು ಕೂಡಿಕೊಂಡಿವೆ. ಅಭಿಜಾತ ಮಹಾಕಾವ್ಯಗಳಲ್ಲಿ ಜೀವನದ ನಿಜವಾದ ಚೈತನ್ಯಮಯತೆ ಇಲ್ಲ, ಜೀವನದ ನಿಕಟವಾದ ಉಜ್ವಲ ವರ್ಣನೆ ಮಾತ್ರ ಇದೆ. ನಮ್ಮ ಕಣ್ಣ ಮುಂದೆ ಕವಿಯು ಘಟನಾಚಿತ್ರ, ದೃಶ್ಯ, ವಿವರ, ಅಲಂಕಾರ, ಮನಃಪ್ರವೃತ್ತಿಗಳನ್ನು ಬಣ್ಣ ಬಣ್ಣವಾಗಿ, ವಸ್ತುಸಹಜವಾಗಿ, ಸ್ಪಷ್ಟವಾಗಿ ಕಣ್ಮೆಚ್ಚುವಂತೆ ಹಾಯಿಸುತ್ತಾನೆ. ಆದರೆ ಅದರಲ್ಲಿ ಎಷ್ಟೇ ಆಕರ್ಷಕತೆ ಮತ್ತು ಕುತೂಹಲಜನಕತೆ ಇದ್ದರೂ ಬಹುಬೇಗ ಅದೆಲ್ಲ ಜೀವ ತುಂಬಿದ ಚಿತ್ರ ಎಂದು ನಮಗೆ ಗೊತ್ತಾಗಿಬಿಡುತ್ತದೆ. ವಸ್ತುಗಳನ್ನೇನೋ ಸ್ಪಷ್ಟವಾಗಿ ಕಂಡದ್ದಾಗಿದೆ. ಆದರೆ ಆ ಕಾಣಿಕೆ ಕಲ್ಪನಾಶಕ್ತಿಯ ಹೊರಗಣ್ಣಿನದು, ಬುದ್ಧಿ ಕಂಡದ್ದು, ಹಾಗೆ ಬುದ್ಧಿ ಕಂಡದ್ದನ್ನು ಕವಿಯ ಇಂದ್ರಿಯಪ್ರಜ್ಞೆ ಮೂಡಿಸಿದ್ದು ಅಷ್ಟೇ ಅಲ್ಲದೆ ಅವು ಆತ್ಮೀಯ ಅನುಭವದಿಂದ ಹುಟ್ಟಿದವಲ್ಲ. ಕಾಳಿದಾಸನೊಬ್ಬನೇ ಈ ಕ್ರಮಭಂಗದ ಆರೋಪದಿಂದ ಮುಕ್ತ. ಏಕೆಂದರೆ ಅವನಲ್ಲಿ ಚಿಂತನಪರವೂ ಕಲ್ಪಕವೂ ಇಂದ್ರಿಯತೇಜಸ್ಸಂಪನ್ನವೂ ಆದ ದೊಡ್ಡ ಕವಿಯ ಆತ್ಮವಿದೆ; ಅದಕ್ಕೆ ಅನುಭವವಿದೆ–ಅದು ಅವನು ಚಿತ್ರಿಸುವುದನ್ನು ಸಜೀವವಾಗಿ ಮೂಡಿಸುತ್ತದೆ. ಹಾಗಲ್ಲದೆ ಬರಿದೆ ದಂಗುಬಡಿಸುವ ದೃಶ್ಯಗಳನ್ನು, ಅಲಂಕಾರಗಳನ್ನು ಹೊಸೆಯುವುದಿಲ್ಲ. ಮಿಕ್ಕ ಕವಿಗಳು ಆಗೀಗ ಈ ಕೊರತೆಯಿಂದ ಮುಕ್ತರಾದದ್ದುಂಟು. ಹಾಗೆ ಮುಕ್ತರಾದಾಗ ಅವರು ಬರಿ ಬೆರಗುಗೊಳಿಸುವ ಅಥವಾ ಪರಿಣಾಮಕರವಾದ ರಚನೆಯನ್ನು– ಅಷ್ಟೇ ಅಲ್ಲದೆ ಮಹಾರಚನೆಯನ್ನೂ ಮಾಡಿದ್ದಾರೆ. ಅವರ ಸಾಮಾನ್ಯ ಕೃತಿಗಳು ಸ್ವಗತ ಗುಣಗಳಿಂದ ಬಹಳ ಪ್ರಶಂಸಾರ್ಹವಾಗಿವೆ. ಆದರೆ ಹಾಗೆಂದು ಅವನ್ನು ಅತ್ಯುಚ್ಚವೆಂದು ಹೊಗಳುವಂತಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಅವು ಭೂಷಣಪ್ರಿಯವಾಗಿವೆಯೇ ಹೊರತು ಪ್ರತಿಭಾನ್ವಿತ ನಿರ್ಮಿತಿಗಳೆಂದು ಹೇಳಲು ಸಾಧ್ಯವಿಲ್ಲ. ಈ ಕಾವ್ಯಪದ್ಧತಿಯ ಲಕ್ಷಣದಿಂದ ಹೊರಬೀಳುವ ಆಧ್ಯಾತ್ಮಿಕ ಫಲಿತಾಂಶವಿಂತಿದೆ; ಇದರಲ್ಲಿ ಸಮಕಾಲೀನ ಭಾರತದ ವಿಚಾರ, ನೀತಿ, ರಸಸಂಸ್ಕೃತಿ, ಚಟುವಟಿಕೆಯುಳ್ಳ ಇಂದ್ರಿಯಜೀವನಗಳು ಸ್ಪಷ್ಟವಾಗಿ ತೋರುತ್ತವೆ. ಆದರೆ ಇದರಲ್ಲಿ

ಅವುಗಳ ಶರೀರ ಹಾಗೂ ಬಾಹ್ಯಲಕ್ಷಣಗಳಲ್ಲದೆ ಒಳಗಿನ ಗಭೀರ ಆತ್ಮವು ಕಂಡುಬರುವುದಿಲ್ಲ. ಸಾಕಷ್ಟು ಉನ್ನತ ಆದರ್ಶಮಟ್ಟದ ನೈತಿಕ ಹಾಗೂ ಧಾರ್ಮಿಕ ವಿಚಾರ ಉಕ್ತಕೃತಿಗಳಲ್ಲಿದೆ; ಮತ್ತು ಅದು ಪ್ರಾಮಾಣಿಕವಾಗಿಯೂ ಬಂದಿದೆ. ಆದರೆ ಅದರ ಪ್ರಾಮಾಣಿಕತೆ ಕೇವಲ ಬೌದ್ಧಿಕವಾದದ್ದು ಮತ್ತು ಆ ಕಾರಣದಿಂದಲೇ ಅದರಲ್ಲಿ ನಮಗೆ ಮಹಾಭಾರತ, ರಾಮಾಯಣ ಮತ್ತು ಇತರ ಅನೇಕ ಭಾರತೀಯ ಸಾಹಿತ್ಯ ಮತ್ತು ಕಲೆಗಳಲ್ಲಿ ಕಂಡುಬರುವ ಗಭೀರತರ ಧಾರ್ಮಿಕ ಭಾವನೆಯ ಅಥವಾ ಜೀವಂತ ನೈತಿಕ ಶಕ್ತಿಯ ಅನುಭವ ಉಂಟಾಗುವುದಿಲ್ಲ. ಆರ್ಷ ಜೀವನವನ್ನೇನೋ ಬಣ್ಣಿಸಲಾಗಿದೆ. ಆದರೆ ಅದರ ಹೊರ ಆಕೃತಿ ಮತ್ತು ಕಲ್ಪನೆಗಳು ಮಾತ್ರ ಅಲ್ಲಿವೆ. ಅಷ್ಟೇ ಸೂಕ್ಷ್ಮಗ್ರಾಹಿ ಶೈಲಿಯಿಂದ ಇಂದ್ರಿಯಜೀವನವನ್ನೂ ವರ್ಣಿಸಲಾಗಿದೆ– ಅದನ್ನು ಚೆನ್ನಾಗಿ ನಿರೀಕ್ಷಿಸಲಾಗಿದೆ, ಮೆಚ್ಚಲಾಗಿದೆ, ಕಣ್ಮನಗಳಿಗೆ ಒಪ್ಪುವಂತೆ ಪ್ರತಿಬಿಂಬಿಸಲಾಗಿದೆ; ಆದರೆ ಅದೆಲ್ಲ ಕವಿಯ ಆತ್ಮ ತೀವ್ರವಾಗಿ ಅನುಭವಿಸಿ ಸೃಷ್ಟಿಸಿದ್ದಲ್ಲ. ಬುದ್ಧಿಯು ಅತಿ ಅನಾಸಕ್ತವೂ ಅತಿ ವಿಮರ್ಶಕ ದೃಷ್ಟಿಯುಳ್ಳದ್ದೂ ಆದುದರಿಂದ ಜೀವನದ ಸಹಜ ರಭಸದೊಡನೆ ಅಥವಾ ಪ್ರತಿಭೆಯ ತಾದಾತ್ಮ್ಯ ಭಾವದೊಡನೆ ಸಮರಸವಾಗಿ ಬಾಳಲಾರದೆ ಹೋಯಿತು. ಇದು ಅತಿಯಾಗಿ ಬೆಳೆದ ಬೌದ್ಧಿಕತೆಯ ಒಂದು ಗುಣವೂ ಅಹುದು, ಒಂದು ದೋಷವೂ ಅಹುದು; ಮತ್ತು ಅದು ಯಾವಾಗಲೂ ಅವನತಿಯ ಮೊದಲ ಹೆಜ್ಜೆ ಆಗುತ್ತ ಬಂದಿದೆ.

ಬೌದ್ಧಿಕತೆ ಹೆಚ್ಚು ಕಂಡು ಬರುವ ಭಾರತೀಯ ಸಾಹಿತ್ಯದಲ್ಲಿ ಸುಭಾಷಿತ ಎಂಬ ಸೂತ್ರಬದ್ಧಶೈಲಿಯ ಒಂದು ಬಗೆ ಹೇರಳವಾಗಿದೆ. ಈ ಪ್ರಕಾರದ ಒಂದೇ ಒಂದು ಶ್ಲೋಕವು ಒಂದು ಸ್ವತಂತ್ರ ಘಟಕವಾಗಿ ನಿಂತು ಒಂದು ವಿಚಾರ ಅಥವಾ ಬಾಳಿನ ಮುಖ್ಯ ಘಟನೆ ಅಥವಾ ಭಾವನೆಯನ್ನು ಸಾರತಃ ಬುದ್ಧಿ ಗಮ್ಯವಾಗುವಂತೆ ಸಂಪೂರ್ಣವಾಗಿ ಹೇಳುತ್ತದೆ. ಇಂಥ ಅನೇಕ ಸುಭಾಷಿತಗಳಿವೆ. ಆ ಯುಗದ ತೀಕ್ಷ್ಣ ಮೇಧಾವಿತ್ವಕ್ಕೂ ವಿಶಾಲ, ಪಕ್ವ ಮತ್ತು ಸುಸಂಚಿತ ಅನುಭವಕ್ಕೂ ಈ ಸುಭಾಷಿತ ತಕ್ಕ ಕಾವ್ಯಮಾರ್ಗವೆನಿಸಿತು. ಆದರೆ ಭರ್ತೃಹರಿಯಲ್ಲಿ ಅದು ಉತ್ತಮ ಪ್ರತಿಭಾನ್ವಿತ ಮಟ್ಟವನ್ನು ಮುಟ್ಟುತ್ತದೆ; ಯಾಕೆಂದರೆ ಅವನು ವಿಚಾರಕ್ಕಷ್ಟೇ ಅಲ್ಲದೆ ಭಾವನೆಗೂ ತಕ್ಕ ಪ್ರಾಮುಖ್ಯವನ್ನು ಕೊಟ್ಟಿದ್ದಾನೆ; ಭಾವನೆಯ ಬೌದ್ಧಿಕ ತೈಲಗತಿ ಮತ್ತು ಅವನ ವಾಣಿಗೆ ತೀಕ್ಷ್ಣತೆಯನ್ನು ಸಾಮರ್ಥ್ಯವನ್ನು ಕೊಡುವ ನಿಕಟಾನುಭವ ಅವನ ಕೃತಿಯಲ್ಲಿ ಕಂಡು ಬರುತ್ತವೆ. ಅವನು ಬರೆದದ್ದು ಶತಕತ್ರಯ–ನೀತಿಶತಕ, ಶೃಂಗಾರಶತಕ ಮತ್ತು ವೈರಾಗ್ಯಶತಕ. ಮೊದಲನೆಯದರಲ್ಲಿ ಉನ್ನತ ನೀತಿವಿಚಾರ, ವ್ಯವಹಾರ ವಿವೇಕ ಮತ್ತು ಜೀವನದ ಹಲವು ಮುಖಗಳ ಸಂಕ್ಷಿಪ್ತ ವಿಮರ್ಶೆ ಇವೆ. ಎರಡನೆಯದರಲ್ಲಿ ಶೃಂಗಾರ ರಸವಿದೆ. ಆದರೆ ಇದು ಕವಿಯ ಪ್ರತಿಭೆ, ಮನೋಧರ್ಮಗಳಿಗೆ ಸಹಜವಾಗಿ ಬಂದಿಲ್ಲ; ಇದನ್ನು ಕವಿ ಸನ್ನಿವೇಶದ ಕುತೂಹಲಜನಕತೆಗಾಗಿ ಬರೆದಂತಿದೆ. ಮೂರನೆಯದರಲ್ಲಿ ತಾಪಸಹಜ ಶ್ರಮದಿಂದ ಜಗತ್ತಿನಿಂದ ದೂರ ಸರಿಯುವ ನಿರ್ವೇದ

ಭಾವನೆಯಿದೆ. ಆ ಯುಗದ ಮೂರು ಮುಖ್ಯ ದೃಷ್ಟಿಕೋನಗಳು ಅವನ ಶತಕತ್ರಯದಲ್ಲಿ ಕಾಣಬರುತ್ತವೆ; ಬಾಳಿನಲ್ಲಿ ವಿವೇಕಪೂರ್ಣ ಆಸಕ್ತಿ ಮತ್ತು ಉನ್ನತವೂ ಸುದೃಢವೂ ಸೂಕ್ಷ್ಮವೂ ಆಗಿ ವಿಚಾರ ಮಾಡುವ ಪ್ರವೃತ್ತಿ; ಇಂದ್ರಿಯಗಳನ್ನು ತಣಿಸುವ ವಿಷಯಗಳಲ್ಲಿ ಮಗ್ನವಾಗಿರುವುದು; ತಾಪಸ ಆಧ್ಯಾತ್ಮಿಕ ಪ್ರವೃತ್ತಿ–ಅದು ಒಂದರ ಅಂತ್ಯ, ಮತ್ತೊಂದರ ಬಿಡುಗಡೆಗೆ ತೆರ. ಈ ಆಧ್ಯಾತ್ಮಿಕ ಸ್ವರೂಪದ ದೆಸೆಯಿಂದಲೂ ಅದು ಗಣ್ಯವಾಗಿದೆ; ಆದರೆ ತನ್ನದೇ ಆದ ಉನ್ನತ ರಾಜ್ಯದ ಪೂರ್ಣಯೋಗ ದಶೆಗೆ ಹಾರಿಹೋಗುವ ಆತ್ಮದ ಸ್ವಾಭಾವಿಕ ಮಹೋಡ್ಡಯನ ಇಲ್ಲಿಲ್ಲ–ಇಲ್ಲಿ ಕಾಣುವುದೆಂದರೆ ಬುದ್ಧಿ ಮತ್ತು ಇಂದ್ರಿಯಗಳು ಬಾಳಿನಲ್ಲಿ ಅಪೇಕ್ಷಿಸಿದ ತೃಪ್ತಿಯನ್ನು ಕಾಣದೆ ಶ್ರಾಂತವಾಗಿ ಅತ್ಯಂತಿಕ ವಿಶ್ರಾಂತಿಯನ್ನೂ ಕಾರ್ಯ ವಿರಾಮವನ್ನೂ ಪಡೆಯುವ ಆಧ್ಯಾತ್ಮಿಕತೆಗೆ ನಿಷ್ಕರ್ಮದಲ್ಲಿ ಶಾಂತಿಯನ್ನು ಕಾಣಲು ಹೊರಡುವುದು.

ಆ ಯುಗದ ಕವಿಹೃದಯದ ಮಹಾಫಲವೆನ್ನಲಾಗದಿದ್ದರೂ ಆಕರ್ಷಕ ಫಲವೆಂದು ನಾಟಕವನ್ನು (ರೂಪಕವನ್ನು) ಕರೆಯಬಹುದು. ಅದರಲ್ಲಿ ನಾಟ್ಯಾವಶ್ಯಕತೆಯ ಒತ್ತಾಯದಿಂದ ಯುಗಸಹಜ ಅತಿಬೌದ್ಧಿಕತೆಯು ಹೆಚ್ಚು ನಿಕಟವಾಗಿಯೂ ರಚನಾತ್ಮಕವಾಗಿಯೂ ಜೀವನದ ಹಾಸು–ಹೊಕ್ಕುಗಳಲ್ಲಿ ಒಂದಾಗಿದೆ. ಸಂಸ್ಕೃತ ನಾಟಕವು ಸುಂದರ ಸ್ವರೂಪದ್ದು. ಇಲ್ಲಿಯವರೆಗೆ ಉಳಿದುಕೊಂಡು ಬಂದ ಸಿದ್ಧಹಸ್ತ ಕಲಾಕೌಶಲ ಮತ್ತು ನಿಜವಾದ ಪ್ರತಿಭೆಗಳನ್ನು ಪ್ರದರ್ಶಿಸುವ ಅನೇಕ ಭಾರತೀಯ ದೃಶ್ಯಕಾವ್ಯಗಳಲ್ಲಿ ಈ ಸ್ವರೂಪವನ್ನು ಕಾಣಬಹುದು. ಹೀಗಿದ್ದರೂ ಈ ಸ್ವರೂಪವು ಗ್ರೀಕ್ ಅಥವಾ ಶೇಕ್ಸ್‌ಪಿಯರನ ಮಾದರಿಯ ನಾಟಕದ ಮಟ್ಟಕ್ಕೆ ಏರಲಾರದು. ಹೀಗಾಗಿದ್ದು ದುರಂತ ನಾಟಕದ ಅಭಾವದಿಂದ ಎಂದು ಹೇಳಲಾಗದು. ಏಕೆಂದರೆ ಸಾವು–ನೋವು, ದುಃಖ–ದುಮ್ಮಾನ, ದುರಂತ ಕರ್ಮಬಾಧೆಗಳಲ್ಲಿ ಬಾಳಿನ ಸಮಸ್ಯಾಪರಿಹಾರವನ್ನು ಕಂಡಲ್ಲಿ ಮಾತ್ರ ಅತ್ಯುತ್ಕೃಷ್ಟ ನಾಟಕ, ಇಲ್ಲದಿದ್ದರೆ ಇಲ್ಲ ಎನ್ನಲಾಗದು. ದುರಂತ ಧ್ವನಿಯು ಭಾರತದ ಹೃದಯಾಂತರಾಳದಲ್ಲಿ ಇಲ್ಲವೇ ಇಲ್ಲವೆಂದಲ್ಲ. ಇದು ಮಹಾಭಾರತದಲ್ಲಿ ಇದೆ; ಮತ್ತು ಮೊದಲು ಸುಖಾಂತವಾಗಿ ಮುಗಿದ ರಾಮಾಯಣಕ್ಕೆ ಈ ಮುಖವನ್ನು ಸೇರಿಸಲಾಯಿತು; ಆದರೆ ಸಾತ್ವಿಕ ಪ್ರವೃತ್ತಿಯ ಭಾರತೀಯ ಮನೋಧರ್ಮ ಮತ್ತು ಕಲ್ಪನಾ ಶಕ್ತಿಗಳಿಗೆ ಆವಿದ್ಧಗತಿಗಿಂತ ಶಾಂತಿ–ಸಮಾಧಾನಗಳ ಆವರಣದಲ್ಲಿ ಒಂದು ಕೃತಿ ಕೊನೆಗೊಳ್ಳುವುದು ಹೆಚ್ಚು ಒಗ್ಗುತ್ತದೆ. ದುರಂತ ನಾಟಕಗಳು ಭಾರತದಲ್ಲಿ ದುರ್ಲಭವಾಗಲು ಜೀವನದ ಮಹಾಸಮಸ್ಯೆಗಳನ್ನೂ ಗಂಭೀರ ಪ್ರಕರಣಗಳನ್ನೂ ತೆಗೆದುಕೊಂಡು ನಾಟಕ ರಚಿಸುವ ಧೀರ ಪ್ರಯತ್ನ ನಡೆಯದೆ ಇದ್ದುದೇ ಕಾರಣ. ಈ ಯುಗದ ನಾಟಕಗಳು ಹೆಚ್ಚಾಗಿ ಶೃಂಗಾರಪ್ರಧಾನವಾದವುಗಳು. ಆ ಕಾಲದ ಸುಸಂಸ್ಕೃತ ಜೀವನದ ಸ್ಥಿರಗತಿಗಳನ್ನೂ ಪ್ರತಿಬಿಂಬಗಳನ್ನೂ ಇಲ್ಲಿ ಕಾಣಬಹುದು. ಅವನ್ನು ಪೌರಾಣಿಕ ಕತೆಗಳ ಚೌಕಟ್ಟಿನಲ್ಲಿ ಅಳವಡಿಸಲಾಗಿದೆ. ಆದರೆ ವಿರಳವಾಗಿ ವಾಸ್ತವಿಕ ದೃಷ್ಟಿಯಿಂದ ಸಾಮಾನ್ಯ ನಾಗರಿಕ ಸದ್ಗೃಹಸ್ಥನ ಜೀವನ ಅಥವಾ ಇನ್ನಿತರ

ಸಾಮಾನ್ಯಾಂಶಗಳು ಅಥವಾ ಚಾರಿತ್ರಿಕ ವಿಷಯವು ವಸ್ತುವಾಗಿರುವ ನಾಟಕಗಳೂ ಇವೆ. ಸಂಸ್ಕೃತ ನಾಟಕಗಳಲ್ಲಿ ರಾಜಾಧಿರಾಜರ ವೈಭವಸಂಪನ್ನ ಆಸ್ಥಾನ ಮತ್ತು ನಿಸರ್ಗದ ಆವರಣದ ಸೌಂದರ್ಯ ಬರುವುದೇ ಹೆಚ್ಚು. ಅವುಗಳ ವಸ್ತು ಯಾವುದೇ ಇರಲಿ–ಅವು ಕೇವಲ ಬಾಳಿನ ಸೊಗಸಾದ ಪಡಿಯಚ್ಚು ಅಥವಾ ಬಾಳಿನ ಕಲ್ಪನಾಸುಂದರ ರೂಪಾಂತರ. ಅತ್ಯುತ್ಕೃಷ್ಟ ಅಥವಾ ಹೃದಯವಿದ್ರಾವಕ ನಾಟಕರಚನೆಗೆ ಇಷ್ಟೇ ಸಾಲದು. ಈ ನಾಟಕಗಳಲ್ಲಿ ಮಾನವಕರ್ಮ ಮತ್ತು ಗುರಿಗಳ ಯಾವ ವ್ಯಾಖ್ಯಾನವೂ ಕಂಡುಬರದಿದ್ದರೂ ಉಚ್ಚಮಟ್ಟದ ಇಲ್ಲವೆ ವೀರ್ಯನಿರ್ಭರವಾದ, ಕೋಮಲವಾದ ಪದ್ಯ ಮತ್ತು ನಾಟ್ಯಾಂಶಗಳು ಇವೆ. ಕಾವ್ಯಸೌಂದರ್ಯ, ಮಹಾಘರ್ಷಣೆ ಮತ್ತು ಸೂಕ್ಷ್ಮಭಾವ ಹಾಗೂ ಭಾವನೆಗಳುಳ್ಳ ಕಾಳಿದಾಸನ ಶಾಕುಂತಲವು ಅತ್ಯುತ್ಕ್ರಷ್ಟ ಕಲೆಯ ಮಾದರಿ. ವಿಶ್ವಸಾಹಿತ್ಯದಲೆಲ್ಲಾ ಅದು ಅತ್ಯಂತ ಪರಿಪೂರ್ಣವಾದ ಮತ್ತು ಅತ್ಯಾಕರ್ಷಕವಾದ ಶೃಂಗಾರಪ್ರಧಾನ ಸುಕುಮಾರ ಪ್ರಯೋಗ ಇಲ್ಲವೆ ಶಾಕುಂತಲ ಒಂದು ರಸ ಹಾಗೂ ಪಾತ್ರಕಾರ್ಯಗಳಿಂದ ಕುತೂಹಲ ಕೆರಳಿಸುವ ನಾಟಕ. ಅದರಲ್ಲಿ ನಾಟ್ಯಕಲೆಯ ಸುಪ್ರಸಿದ್ಧ ತತ್ವ ಮತ್ತು ಸೂಕ್ಷ್ಮವಾಗಿ ಅನುಸರಿಸುತ್ತ ಬಂದ ಸೂತ್ರಗಳಿಗನುಗುಣವಾಗಿ ಅಡೆತಡೆಯಿಲ್ಲದ ಚತುರ ವಸ್ತು–ಪಾತ್ರ–ರಸ ಪೋಷಣೆ ಇದೆ. ಸಂಸ್ಕೃತ ನಾಟಕಗಳು ಸುಲಕ್ಷಣ ಲಕ್ಷಿತ. ಅಲ್ಲಿ ಯಾವುದೂ ಮಿತಿ ಮೀರದು. ಘಟನೆಯಾಗಲಿ ಗಾಬರಿಗೊಳಿಸುವ ಸದ್ದಾಗಲಿ, ಸನ್ನಿವೇಶ ಅಥವಾ ಪಾತ್ರಬಾಹುಲ್ಯದ ಅತಿ ಪ್ರಾಧಾನ್ಯವಾಗಲಿ ಇಲ್ಲ. ನಾಟಕದ ಕಾರ್ಯಗತಿಯು ಹೆಚ್ಚಾಗಿ ಗಂಭೀರ, ಶಾಂತ; ಸೂಕ್ಷ್ಮ ಮನಸ್ಸಿನ ಪಾತ್ರಗಳು: ಯುರೋಪಿನ ನಾಟಕ ಕಲೆಗಳಲ್ಲಿ ಕಾಣುವಷ್ಟು ಸ್ಪಷ್ಟವಾದ ವ್ಯಕ್ತಿತ್ವಮುದ್ರೆ ಅವಕ್ಕಿಲ್ಲ; ಸಂಭಾಷಣೆಯಲ್ಲಿಯೂ ಪಾತ್ರಗಳ ಸ್ವರೂಪಭೇದವು ಸೂಕ್ಷ್ಮವಾಗಿ ತಿಳಿದುಬರುವುದು–ಇವೇ ಸಾಮಾನ್ಯ ಲಕ್ಷಣಗಳು. ಸಂಸ್ಕೃತ ನಾಟಕಗಳು ಅತ್ಯುನ್ನತ ಸುಸಂಸ್ಕೃತ ವರ್ಗದವರಿಗಾಗಿ ಅಂತಹ ಜನವೇ ನಿರ್ಮಿಸಿದ ಕೃತಿಗಳು. ಈ ವರ್ಗದವರು ನಾಗರಿಕರು, ಮೇಧಾವಿಗಳು, ಸೂಕ್ಷ್ಮಜ್ಞರು, ರಸಪ್ರಪಂಚದಲ್ಲಿ ಮೃದುಗಭೀರ ಶಾಂತ ಸ್ಥಿತಿಯನ್ನು ಮೆಚ್ಚುವವರು. ಅವಕ್ಕೆ ಜಾತಿಲಕ್ಷಣದ ಪರಿಮಿತಿ ಇದ್ದರೂ ಅವು ಗುಣಗೌರವದಿಂದ ರಸ್ಯಮಾನವಾಗಿವೆ. ಸಂಸ್ಕೃತ ನಾಟಕದ ಉಚ್ಛ್ರಾಯ ಕಾಲದಲ್ಲಿ ರಚನೆಯಲ್ಲಿ ಒಂದು ವಿಧವಾದ ನಯನಾಜೂಕು ಇತ್ತು; ಭಾಸನ ಮಾರ್ಗ ಸರಳ, ಉಳಿದವರಿಗಿಂತ ಹೆಚ್ಚು ನೇರ; ಆದರೂ ಅವನ ಶೈಲಿ ಸಾಕಷ್ಟು ಸಮರ್ಥವಾಗಿದೆ. ಅವನಂತೆಯೆ ಅವನ ನಂತರ ಅನೇಕರು ನಾಟಕ ರಚನೆ ಮಾಡಿದರು. ಭವಭೂತಿಯ ನಾಟಕಗಳಲ್ಲಿ ವ್ಯಾಪಕತೆ ಮತ್ತು ಓಜಸ್ವಿತೆ ಕಂಡುಬಂದರೆ ಕಾಳಿದಾಸನ ಪೂರ್ಣ ಕಲೆಯಲ್ಲಿ ಉನ್ನತವೂ ಸಾಂಗೋಪಾಂಗವೂ ಆದ ರಸಸಿದ್ಧಿ ಇದೆ.

ಅನೇಕ ಸೂಚನೆಗಳಿಂದ ನಮಗೆ ಕಂಡುಬರುವಂತೆ ಬಹುಮುಖವಾದ ವಾಙ್ಮಯ ಸೃಷ್ಟಿಯಲ್ಲಿ ಈ ನಾಟಕ, ಈ ಕಾವ್ಯ, ವರ್ಣನೆಯ ವಿವರಗಳಿಂದ ತುಂಬಿರುವ ಶೃಂಗಾರ–ಸಾಹಸ ಗದ್ಯ ಕಾವ್ಯಗಳು, ಬಾಣನ ಹರ್ಷಚರಿತೆ ಅಥವಾ ಜೋನರಾಜನ

ಕಾಶ್ಮೀರ ಚರಿತೆಯಂತಹ ಬರವಣಿಗೆಗಳು, ಧಾರ್ಮಿಕ, ವಾಸ್ತವಿಕ ಅಥವಾ ಶೃಂಗಾರ–ಸಾಹಸ ಪ್ರಧಾನ ಕಥೆಗಳ ಸಂಗ್ರಹಗಳು ಮತ್ತು ಪದ್ಯದಲ್ಲಿ ಮುಗಿಯದ ವಿಪುಲತೆಯ ಕಥನವನ್ನು ಹೇಳುವ ಜಾತಕಗಳು ಮತ್ತು ಕಥಾಸರಿತ್ಸಾಗರ, ಸೂಕ್ಷ್ಮವ್ಯವಹಾರಜ್ಞಾನ ಮತ್ತು ನೀತಿ ಹಾಗೂ ರಾಜ್ಯನೀತಿಗಳ ಒಟ್ಟು ರಾಶಿಗೇ ಒಂದು ಸುಂದರ ಹಿನ್ನೆಲೆಯನ್ನು ಒದಗಿಸಿಕೊಡುವ ರೂಪದಲ್ಲಿ ಪ್ರಾಣಿವರ್ಗದ ಕಟ್ಟುಕತೆಗಳನ್ನು ಬೆಳೆಸಿರುವ ಪಂಚತಂತ್ರ ಮತ್ತು ಹೆಚ್ಚು ಸಂಗ್ರಹವಾದ ಹಿತೋಪದೇಶ ಹಾಗೂ ಅಷ್ಟು ಪ್ರಮುಖವಲ್ಲದ ಹೇರಳವಾದ ಇನ್ನಿತರ ಕೃತಿಗಳು ಮಾತ್ರ ಉಳಿದಿರುವ ಭಾಗಗಳು. ಆದರೆ ಇವುಗಳು ಅಷ್ಟು ಪೂರ್ಣವಾದ, ಅಮೋಘವಾದ ಚಿತ್ರಣವನ್ನು, ಉದಾತ್ತ ಸಂಸ್ಕೃತಿಯ ಬಹುಮುಖಗಳನ್ನು, ಶ್ರೇಷ್ಠ ವಿವೇಚನೆಯನ್ನು, ಧಾರ್ಮಿಕ, ರಸಾತ್ಮಕ, ನೈತಿಕ, ಆರ್ಥಿಕ, ರಾಜಕೀಯ ಚಟುವಟಿಕೆಗಳುಳ್ಳ ಹಿರಿಯ ಮತ್ತು ಸುವ್ಯವಸ್ಥಿತ ಸಮಾಜವನ್ನು, ಬಹುಮುಖವಾದ ಬೆಳವಣಿಗೆಯನ್ನು, ಹೇರಳವಾದ ಜೀವನದ ಉತ್ಕರ್ಷೆಯನ್ನು ಚಿತ್ರಿಸುವುದರಲ್ಲಿ ಸಾಕಷ್ಟು ವಿಪುಲವೂ ಪ್ರಾತಿನಿಧಿಕವೂ ಆಗಿವೆ. ಭಾರತವು ತತ್ವಜ್ಞಾನದಲ್ಲೂ ಧಾರ್ಮಿಕ ಕನಸುಗಳನ್ನು ಕಾಣುವುದರಲ್ಲೂ ತಲ್ಲೀನವಾಗಿ ಜೀವನದ ಉದಾತ್ತ ವಿಷಯಗಳನ್ನು ಸಾಧಿಸಲಾಯಿತು ಎಂಬ ಕಟ್ಟುಕತೆಯನ್ನು ಪ್ರಾಚೀನ ಪುರಾಣ ಇತಿಹಾಸಗಳಷ್ಟೇ ಪೂರ್ಣವಾಗಿ ಇವು ಸುಳ್ಳು ಮಾಡಿವೆ. ಈ ಭಾವನೆಗೆ ಅವಕಾಶ ಮಾಡಿಕೊಟ್ಟಿರುವ ಮತ್ತೊಂದು ಕಾರಣವೆಂದರೆ ಅಧ್ಯಾತ್ಮಿಕ ತತ್ವ ಮತ್ತು ಅನುಭವಗಳ ದೀರ್ಘ ಪರಿಶ್ರಮವು ತೀರ ಭಿನ್ನವೆಂದು ಹೇಳಬಹುದಾದ ಬೇರೊಂದು ರೀತಿಯ ಬೆಳವಣಿಗೆಯನ್ನು ಅನುಸರಿಸಿದ್ದಲ್ಲದೆ ಬಾಹ್ಯಕ್ರಿಯೆಯ ವೈಭವ ಮತ್ತು ಗತಿಗಳ ಹಿಂದೆ ಭಾರತೀಯರ ಜೀವನವನ್ನು ಸಹಸ್ರಾರು ವರ್ಷಗಳವರೆಗೆ ನಿರ್ದೇಶಿಸಲು ಅವಶ್ಯಕವಾದ ವಿವೇಚನೆ, ಪ್ರಭಾವ, ಮನೋಧರ್ಮ ಮತ್ತು ಒಲವುಗಳನ್ನು ಬೆಳೆಸಿದ್ದು.

# ಅಧ್ಯಾಯ ಐದು
# ಅಭಿಜಾತ ವಾಙ್ಮಯ (ಮುಂದುವರಿದುದು)

ಭಾರತದ ತತ್ವಜ್ಞಾನ, ಕಲೆ ಮತ್ತು ಜೀವನಗಳ ರಚನಾತ್ಮಕ ಚಟುವಟಿಕೆಗಳಲ್ಲಿಯ ಬಹುಭಾಗವು ಆಧ್ಯಾತ್ಮಿಕ, ಪ್ರಾತಿಭ ಮತ್ತು ಮಾನಸಿಕ ಅಂಶಗಳಿಂದ ಹೊರಟದ್ದು; ಅದರ ಸಂಸ್ಕೃತಿಗೆ, ಭಾರತೀಯ ಮನದ ಈ ಧರ್ಮವೇ ತಳಹದಿಯಾಗಿದೆ ಎಂದು ನಾನು ಒತ್ತಿ ಹೇಳಿದ್ದೇನೆ! ಆದರೆ ಈ ಮೂಲಭೂತ ಪ್ರವೃತ್ತಿಯು ಬಲಿಷ್ಠವೂ ಸಮೃದ್ಧವೂ ಆದ ಭೌದ್ಧಿಕ, ವ್ಯಾವಹಾರಿಕ ಹಾಗೂ ಜೈವಿಕ (ಪ್ರಾಣಪ್ರಧಾನ) ಚಟುವಟಿಕೆಯನ್ನು ಬೆಂಬಲಿಸಿದೆಯಲ್ಲದೆ ಹೊರತುಪಡಿಸಲಿಲ್ಲ. ಲೌಕಿಕವಾದ ಅಭಿಜಾತ ವಾಙ್ಮಯದಲ್ಲಿ ಈ ಚಟುವಟಿಕೆಯು ಮುಖ್ಯಲಕ್ಷಣವಾಗಿ ಎದ್ದು ಕಾಣುತ್ತದೆ. ಹಾಗೆಂದ ಮಾತ್ರಕ್ಕೆ ಆ ಲೌಕಿಕ ಕಾವ್ಯದಲ್ಲಿ ಹಿಂದೆ ಹೇಳಿದ ಮಾನಸಿಕ ಅಥವಾ ಪ್ರಾತಿಭ ಅಂಶಗಳು ತೀರ ಇಲ್ಲವಾದುವು, ಕಳೆದೇ ಹೋದವು; ಮೊದಲಿನ ಮನೋಭಾವವು ತೀರ ಬದಲಾಯಿತು ಅಥವಾ ಕಳೆದೇ ಹೋಯಿತು ಎನ್ನುವಂತಿಲ್ಲ. ತದ್ವಿರುದ್ಧವಾಗಿ ಆ ವಾಙ್ಮಯದಲ್ಲಿ ಕಾಣುವ ಮನಸ್ಸಿನ ವಿವಿಧ ಬಗೆಗಳು ಭಾರತದ ಮನೋಧರ್ಮಕ್ಕೆ ಚಿರಪರಿಚಿತವಾದವೇ. ಅವು ಎಲ್ಲ ಬದಲಾವಣೆಯಲ್ಲೂ ತಮ್ಮ ಧಾರ್ಮಿಕ, ತಾತ್ವಿಕ, ನೈತಿಕ ಹಾಗೂ ಸಾಮಾಜಿಕ ಸ್ವರೂಪವನ್ನು ಉಳಿಸಿಕೊಂಡೇ ಇವೆ. ಅವು ಎದ್ದು ಕಾಣುವಂತಿಲ್ಲದಿದ್ದರೂ ಭಾರತದ ಆಧ್ಯಾತ್ಮಿಕ ಅನುಭವವೆಲ್ಲವನ್ನೂ ಆಧಾರವಾಗಿ ಇಟ್ಟುಕೊಂಡು ಬೆಂಬಲಿಸುತ್ತಲೇ ಹೋಗಿವೆ. ಲೌಕಿಕ ವಾಙ್ಮಯದಲ್ಲಿ ಕಂಡು ಬರುವ ಕಲ್ಪಕತೆ ಆ ಕಾಲದ ಕಲೆಗೆ ಸರ್ವಸಾಧಾರಣವಾದದ್ದೇ. ಅದರಲ್ಲಿಯ ಅರ್ಥಪೂರ್ಣವಾದ ಪ್ರತಿಮೆ, ಸಂಕೇತ ಮತ್ತು ದೈವಿಕತೆಗಳ ಸ್ವರೂಪವು ಕೆಲವು ಬದಲಾವಣೆಗಳೊಡನೆ ಮೂಡಿದೆ; ಅಂಥ ಬದಲಾವಣೆಗಳು ಮುಂದೆ ಪುರಾಣದಲ್ಲಿ ಪೂರ್ಣರೂಪವನ್ನು ಪಡೆದವು. ಅವುಗಳಿಗೆ ಒಂದು ತೀವ್ರವಾದ ಆಧ್ಯಾತ್ಮಿಕ ಧ್ವನಿಯಿದೆ. ಇದರಲ್ಲಿ ಕಾಣುವ ವ್ಯತ್ಯಾಸವೇನೆಂದರೆ ಮೇಲೆ ಹೇಳಿದ ಅಂಶಗಳು ಈ ಕವಿಗಳ ಕೈಯಲ್ಲಿ ಎಲ್ಲರಿಗೂ ತಿಳಿದ ಹಾಗೂ ಬಳಕೆಗೆ ಬಂದ ಪರಂಪರೆಯ ಸ್ವರೂಪವನ್ನು ಹೆಚ್ಚಾಗಿ ಪಡೆದಿದೆ; ಅಲ್ಲದೆ ಮೂಲ ಆಧ್ಯಾತ್ಮಿಕ ರಚನೆಯ ಸ್ವರೂಪವನ್ನು ಹಿನ್ನೆಲೆಯಲ್ಲಿ ಇಟ್ಟುಕೊಂಡಿವೆ. ಈ ಯುಗದಲ್ಲಿ ಬುದ್ಧಿಗೆ ಪ್ರಾಧಾನ್ಯ ಬಂದಿತು. ಅದರಿಂದ ಸುಪ್ರಸಿದ್ಧವಾದ ಕಲ್ಪನೆಗಳಿಗೂ ಸಂಗತಿಗಳಿಗೂ ಕಾಲಕ್ಕೆ ತಕ್ಕ ಹೊಸ ರೂಪ ಬಂತು. ಕಲಾತ್ಮಕ ನಿರೂಪಣೆಯ ಖಚಿತ ರೇಖೆ, ಸಮೃದ್ಧವಾದ ಬಣ್ಣ ಮತ್ತು ಅಲಂಕರಿಸುವ ಪ್ರತಿಮೆಗಳೊಡನೆ ಈ ಬುದ್ಧಿಪ್ರಧಾನ ಮನೋಧರ್ಮವು ಪರಂಪರಾಗತ ಭಾವನೆಯ ಮೇಲೆ ತನ್ನ ವಿಮರ್ಶಾತ್ಮಕ ವಿವೇಚನೆಯನ್ನು ಮಾಡಿ ಗ್ರಾಹ್ಯತ್ವವಿತ್ತು ಅದನ್ನು ಸ್ಪಷ್ಟೀಕರಿಸಿತು. ಮೂಲದ ಸತ್ವ

ಮತ್ತು ಪ್ರಾತಿಭದರ್ಶನಗಳು ಈಗ ಇಂದ್ರಿಯಪ್ರಜ್ಞೆ, ಬಾಹ್ಯ ಪದಾರ್ಥ ಮತ್ತು ಜೀವನದ ಜೈವಿಕಾಂಶಗಳಲ್ಲಿ ಬಲವಾಗಿ ಪ್ರಕಟವಾದವು. ಈ ಯುಗದಲ್ಲಿ ಇವುಗಳನ್ನೇ ಧಾರ್ಮಿಕ ಕ್ಷೇತ್ರದಲ್ಲಿ ಆಧ್ಯಾತ್ಮಿಕ ಅನುಭವದ ವಿಸ್ತರಣೆಗೆ ಆಧಾರವಾಗಿ ತೆಗೆದುಕೊಳ್ಳಲಾಯಿತು.

ಈ ಸಾಂಸ್ಕೃತಿಕ ವಿಕಾಸದ ಚಿತ್ರವು ಶುದ್ಧಸಾಹಿತ್ಯದ ಹೊರಗೆ ಆ ಕಾಲದ ತಾತ್ವಿಕ ಬರಹಗಳಲ್ಲಿ ಮತ್ತು ಪುರಾಣ ಹಾಗೂ ತಂತ್ರಗಳ ಧಾರ್ಮಿಕ ಕಾವ್ಯದಲ್ಲಿ ಇನ್ನೂ ಸ್ಪಷ್ಟವಾಗಿ ಕಂಡು ಬರುತ್ತದೆ. ಈ ಎರಡು ಸಾಹಿತ್ಯ ಝರಿಗಳು ಮುಂದೆ ಒಟ್ಟುಗೂಡಿ ಅಭಿಜಾತ ವಾಙ್ಮಯದ ಕಾಲದಲ್ಲಿ ಸಜೀವ ಹಾಗೂ ಸ್ಥಾಯಿ ಶಕ್ತಿಗಳೆನಿಸಿದವು; ಇವು ಜನತೆಯ ಮನಸ್ಸಿನ ಮೇಲೆ ಚಿರಪರಿಣಾಮಕಾರಿಗಳಾದವು; ರಚನಾತ್ಮಕ ಶಕ್ತಿಗಳಾಗಿ ಅನಂತರದ ಜನಪ್ರಿಯ ಸಾಹಿತ್ಯದಲ್ಲಿ ಅತ್ಯಂತ ಹೆಚ್ಚಿನ ಪಾತ್ರ ವಹಿಸಿದವು. ಇಂಥ ಮಹಾಪ್ರಭಾವವನ್ನು ಈ ಕಾಲದ ತಾತ್ವಿಕ ವಿಚಾರವು ಬಿಟ್ಟು ಹೋದದ್ದು ಭಾರತೀಯರ ಮನೋಭಾವ, ಸಾಮರ್ಥ್ಯ ಮತ್ತು ಅವರ ರಾಷ್ಟ್ರೀಯ ಮನದ ಆಳವಾದ ಆಧ್ಯಾತ್ಮಿಕ ಪ್ರತಿಭೆ ಮತ್ತು ಭಾವನೆಗಳಿಗೆ ಗಣ್ಯಸಾಕ್ಷಿಯಾಗಿದೆ; ಏಕೆಂದರೆ ಅದು ಅತ್ಯುನ್ನತವೂ ಅತ್ಯುಗ್ರವೂ ಆದ ಬೌದ್ಧಿಕ ಲಕ್ಷಣವುಳ್ಳದ್ದಾಗಿತ್ತು. ಈ ತಾತ್ವಿಕ ವಿಚಾರದ ಪ್ರವೃತ್ತಿಯು ಪ್ರಾರಂಭವಾಗಿ ಮೊದಲು ಬೌದ್ಧ ಜೈನ ಧರ್ಮಗಳನ್ನೂ ಷಡ್ದರ್ಶನಗಳನ್ನೂ ಹುಟ್ಟಿಸಿತು; ಇವುಗಳಲ್ಲಿ ಪ್ರಾತಿಭ ಚಕ್ಷುಸ್ಸು ಕಂಡ ಆಧ್ಯಾತ್ಮಿಕ ಅನುಭವದಲ್ಲಿ ಮೂಡಿದ ಸತ್ಯಗಳನ್ನು ತರ್ಕ ಬುದ್ಧಿಗೆ ಹೊಂದುವಂತೆ ನಿಯಮಬದ್ಧಗೊಳಿಸುವ ತಾತ್ವಿಕ ಮೇಧಾಶಕ್ತಿಯ ಶ್ರಮವೂ ಅವನ್ನು ತಾರ್ಕಿಕ ಹಾಗೂ ಬಹು ಬಿಗಿಯಾದ ತಾತ್ವಿಕ ಚರ್ಚೆಗಳಿಂದ ತೀಕ್ಷ್ಣ ಪರೀಕ್ಷೆಗೆ ಗುರಿಪಡಿಸುವುದೂ ಅಲ್ಲದೆ ವಿಚಾರವು ಕಂಡುಹಿಡಿಯಬಹುದಾದ ಎಲ್ಲವನ್ನೂ ಅದರಿಂದ ಹಿಂಡಿ ತೆಗೆಯುವ ಪ್ರಯತ್ನವೂ ಅತ್ಯುನ್ನತ ಮಟ್ಟವನ್ನು ಮುಟ್ಟಿದೆ. ಅಲ್ಲಿ ವಿಸ್ತೃತವೂ ತೀಕ್ಷ್ಣವೂ ಆದ ತರ್ಕಧಾರೆ, ಸೂಕ್ಷ್ಮ ವಿಮರ್ಶೆ ಮತ್ತು ವಿಶ್ಲೇಷಣೆ, ಅಲ್ಲದೆ ಸಮರ್ಥವಾದ ತರ್ಕಬದ್ಧತೆ (ಪಂಚಾವಯವದ ರಚನೆ) ಹಾಗೂ ಪದ್ಧತಿಗಳಿವೆ. ಅದರಿಂದ ಹದಿಮೂರನೆಯ ಶತಮಾನದವರೆಗಿನ ತತ್ವಶಾಸ್ತ್ರೀಯ ಬರೆಹ ಹೆಚ್ಚಾಗಿ ಬೆಳೆದ ಆ ಕಾಲದಲ್ಲಿಯೇ ದಾಕ್ಷಿಣಾತ್ಯ ಮಹಾ ಮೇಧಾವಿಗಳಾದ ಶ್ರೀ ಶಂಕರ, ರಾಮಾನುಜ ಮತ್ತು ಮಧ್ವರು ಇದ್ದದ್ದು. ಅನಂತರವೂ ಆ ಪ್ರವಾಹವು ನಿಲ್ಲದೆ ತನ್ನ ಉಚ್ಛ್ರಾಯ ಕಾಲ ಕಳೆದ ಮೇಲೆ ನಮ್ಮ ಈ ಕಾಲದವರೆಗೂ ಉಳಿದು ಅನೂಚಾನ ಪದ್ಧತಿಯ ಅನೇಕಾನೇಕ ವ್ಯಾಖ್ಯೆ–ವಿಮರ್ಶೆಗಳ ನಡುವೆ ಎಷ್ಟೋ ವೇಳೆ ಹೊಸ ಹಾಗೂ ಸೂಕ್ಷ್ಮತಾತ್ವಿಕ ಕಲ್ಪನೆಗಳನ್ನು ಮೂಡಿಸಿ ಆ ಮೂಲಕ ಭಾರತೀಯರ ಮಹಾಪ್ರತಿಭೆಯ ಉನ್ಮೇಷಗಳನ್ನು ಹೊರಸೂಸಿತು. ಇದರಲ್ಲಿ ಎಂದಿಗೂ ಅವನತಿಯ ಚಿಹ್ನವಿದ್ದಿಲ್ಲ. ಅಷ್ಟೇ ಅಲ್ಲ; ಭರತಕುಲದ ಮನದಲ್ಲಿ ತಾತ್ವಿಕ ಪ್ರವೃತ್ತಿಯ ವೀರ್ಯವತ್ತೆಯು ಮುಂದುವರಿಯುತ್ತಲೇ ಇತ್ತು. ಆ ವಿಚಾರಪ್ರವಾಹವು ಭಾರತೀಯ ತಾತ್ವಿಕ ಪ್ರತಿಭೆಯನ್ನು ದೇಶದಾದ್ಯಂತ ಹರಡುವ ಕೆಲಸವನ್ನು ಪೂರ್ಣಗೊಳಿಸಿತು. ಅದರ ಫಲವಾಗಿ ಅಂದು ಪ್ರಬುದ್ಧನಾದ ಸಾಮಾನ್ಯ ಭಾರತೀಯನ ಮನೋಧರ್ಮವು ಅತಿ ಸೂಕ್ಷ್ಮವೂ

ಗಂಭೀರವೂ ಆದ ಭಾವಗಳನ್ನು ಅತ್ಯಾಶ್ಚರ್ಯಕರವಾಗಿ ಬಹುಬೇಗ ಗ್ರಹಿಸಬಲ್ಲುದಾಯ್ತು. ಇದರಿಂದ ಹಳೆಯ ಅಥವಾ ಹೊಸದಾದ ಯಾವ ಹಿಂದು ಮತವೂ ಸ್ಪಷ್ಟವಾದ ತಾತ್ವಿಕ ತಿರುಳನ್ನೂ ಸೂಚನೆಯನ್ನೂ ಬೆಂಬಲಕ್ಕಾಗಿ ಬೆಳೆಸಿಕೊಳ್ಳದೆ ಹುಟ್ಟಿ ನಿಲ್ಲಲಾರದು ಎಂಬ ಸ್ಥಿತಿಯು ಉಂಟಾದುದು ಗಣ್ಯವಾದ ವಿಷಯ.

ಗದ್ಯದಲ್ಲಿರುವ ತಾತ್ವಿಕ ಲೇಖನಗಳು ಸಾಹಿತ್ಯವೆನ್ನಿಸಿಕೊಳ್ಳುವ ಹುಚ್ಚಿಗೆ ಬಲಿಬೀಳಲಿಲ್ಲ; ಇವುಗಳಲ್ಲೇ ಭಾರತದ ಮನದ ವಿಮರ್ಶಾಮುಖವು ಗಣ್ಯವಾಗಿ ಪ್ರಕಟವಾಗಿದೆ. ಅವಕ್ಕೆ ಸುರೂಪಿತವಾದ ರಚನಾತ್ಮಕ ಆಕೃತಿಯಿಲ್ಲ. ಆದರೆ ಅಂಥ ಮತ್ತೆ ಕೆಲವು ಲೇಖನಗಳಲ್ಲಿ ಪೂರ್ಣ ವಿಚಾರವನ್ನು ಸಾಂಗೋಪಾಂಗವಾಗಿ ಹೇಳುವ ಪ್ರಯತ್ನ ಕಂಡುಬರುತ್ತದೆ; ಮತ್ತು ಇಲ್ಲಿ ಬಳಸಿದ ಸಾಹಿತ್ಯ ಮಾರ್ಗವು ಸಾಮಾನ್ಯವಾಗಿ ತತ್ವಪದಗಳ ಮಾದರಿಯದು. ಈ ಮಾರ್ಗವನ್ನು ಬಳಸಲು ಉಪನಿಷತ್ತು ಮತ್ತು ಗೀತೆಗಳ ಪರಂಪರೆಯು ನೇರವಾಗಿ ಮುಂದುವರಿದುದೇ ಕಾರಣ. ಈ ಕೃತಿಗಳಿಗೆ ಪದ್ಯಸಾಹಿತ್ಯದಲ್ಲಿ ಉಚ್ಚ ಸ್ಥಾನವನ್ನು ಕೊಡಲು ಸಾಧ್ಯವಿಲ್ಲ. ಇವುಗಳಲ್ಲಿ ವಿಚಾರದ ಭಾರವೇ ಹೆಚ್ಚು. ಬೌದ್ಧಿಕ ಮಗ್ನತೆ ಬಹಳ. ರಚನಾತ್ಮಕ ಕವಿಮನದ ಅನಿವಾರ್ಯವಾದ ವಿಶೇಷಣಗಳೆನಿಸಿದ ಪ್ರಾಣವಾಯು ಮತ್ತು ಸ್ಫೂರ್ತಿಬಲಗಳುಳ್ಳ ಪ್ರತಿಭೆಯ ಪೂರ್ಣಶಕ್ತಿಯ ಪದ ಸಂಹತಿಗಳು ಇಲ್ಲಿಲ್ಲ. ತಾತ್ವಿಕ ಬರಹದಲ್ಲಿರುವುದು ಅತಿ ಚುರುಕಾದ ವಿಮರ್ಶಕವೂ ಪ್ರತಿಪಾದಕವೂ ಆದ ಪ್ರಜ್ಞೆಯಲ್ಲದೆ ದಾರ್ಶನಿಕ ಹಾಗೂ ಭಾವಗ್ರಾಹಕ ಪ್ರಜ್ಞೆ ಅಲ್ಲ. ಇಲ್ಲಿ ಪುರಾಣಮಹಾಕಾವ್ಯದ ಆತ್ಮಿಕ ಔನ್ನತ್ಯದಿಂದ ನೋಡುವ ದೃಷ್ಟಿ, ಆತ್ಮದರ್ಶನ, ದೇವದರ್ಶನ ಮತ್ತು ಅತ್ಯುನ್ನತ ಜಗದ್ದರ್ಶನಗಳು ಕಂಡುಬರುವುದಿಲ್ಲ; ಇವುಗಳಾದರೋ ಉಪನಿಷತ್ತುಗಳ ಶಕ್ತಿಯಾಗಿರುವ ಜ್ಞಾನಸೂರ್ಯನ ಪ್ರಭೆಗಳು. ಗೀತೆಯ ಕಾವ್ಯೋನ್ನತಿಗೆ ಕಾರಣವಾದ ಆತ್ಮದ ಅನುಭವದಿಂದಲೇ ನೇರವಾಗಿ ಚಿಮ್ಮಿದ ವಿಚಾರವಾಗಲಿ, ಅನುಭವವಾಗಲಿ, ಪರಿಪೂರ್ಣವೂ ಸುದೃಢವೂ ಅರ್ಥಾಭಿವ್ಯಂಜಕವೂ ಆದ ಪದಸಂಹಿತೆಯಾಗಲಿ ಲಯಬದ್ಧ ಪದಗತಿಯ ಸಚೇತನ ಸೌಂದರ್ಯವಾಗಲಿ ಇಲ್ಲಿಲ್ಲ. ಅದೇ ಸಮಯಕ್ಕೆ ಇಂಥ ಕೆಲವು ಪದ್ಯಗಳು ಉತ್ತಮ ಮಹಾಪದ್ಯಕಾವ್ಯಗಳೆನಿಸದಿದ್ದರೂ ಪ್ರಶಂಸನೀಯ ಸಾಹಿತ್ಯ ಕೃತಿಗಳು ಎನಿಸಿವೆ. ಇವುಗಳಲ್ಲಿ ಅತ್ಯುನ್ನತ ಸಾಹಿತ್ಯ ಚಿಂತನ, ಪ್ರತಿಭೆ ಮತ್ತು ಗಣ್ಯವಾದ ಸಾಹಿತ್ಯಿಕ ಕೌಶಲ ಕೂಡಿಕೊಂಡಿವೆ. ಇವನ್ನು ರಚನಾತ್ಮಕ ಕೃತಿಗಳೆಂದು ಹೇಳಲಾಗದಿದ್ದರೂ ಉದಾತ್ತ–ಚತುರ ರಚನೆಗಳು ಎನ್ನಬಹುದು. ಇವು ಮನುಷ್ಯರಿಗೆ ಶಕ್ಯವಿರುವ ಅತ್ಯುಚ್ಚ ವಿಚಾರಗಳನ್ನು ಗರ್ಭೀಕರಿಸಿಕೊಂಡಿವೆ. ಅಭಿಜಾತ ಸಂಸ್ಕೃತದ ಎಲ್ಲ ಗಂಭೀರ, ಸಮಗ್ರ, ಹಿತ–ಮಿತ ಪದ ಸಂಹಿತೆಯನ್ನೂ ಬಳಸಿಕೊಂಡು ತನ್ನ ಲಯದಲ್ಲಿ ಸಾಮರಸ್ಯವನ್ನೂ ಬಹುಮೇಲ್ತರಗತಿಯ ನಾಜೂಕನ್ನೂ ಇವು ಒಳಗೊಂಡಿವೆ. ಈ ಗುಣಗಳು ಅತಿ ಉತ್ತಮವಾಗಿ ಕಂಡು ಬರುವುದು ಶಂಕರರದೆಂದು ಹೇಳಲಾಗಿರುವ ವಿವೇಕ ಚೂಡಾಮಣಿಯಲ್ಲಿ ಎಷ್ಟೇ ವಿಚಾರ ಪ್ರಾಧಾನ್ಯವಿದ್ದರೂ ಉಪನಿಷತ್ತಿನ ಧ್ವನಿಯ

ಬೌದ್ಧಿಕ ಪ್ರತಿಧ್ವನಿಯೂ ಗೀತೆಯ ರೀತಿಯೂ ಇದರಲ್ಲಿ ಬಂದಿವೆ. ಹಿಂದಿನ ಭಾರತೀಯ ಕೃತಿಗಳಷ್ಟು ವೈಭವ ಸಂಪನ್ನತೆ ಹಾಗೂ ರಸವತ್ತೆ ಈ ಪದ್ಯಗಳಲ್ಲಿ ಇಲ್ಲವಾದರೂ ಭಾರತೀಯೇತರ ಕಡೆಗಳ ಅದೇ ಜಾತಿಯ ಕೃತಿಗಳಷ್ಟಾದರೂ ಕಾವ್ಯಮಯ ಶೈಲಿಯನ್ನೂ ಅವಕ್ಕಿಂತ ಹೆಚ್ಚಿನ ವೈಚಾರಿಕ ಔನ್ನತ್ಯವನ್ನೂ ನಾವಿಲ್ಲಿ ಕಾಣಬಹುದು. ಇಂಥ ಕೃತಿಗಳು ಗ್ರಂಥಕರ್ತರ ಉದ್ದೇಶವನ್ನು ಪೂರೈಸುವುದರಲ್ಲಿ ಇಂದಿಗೂ ಸಮರ್ಥವಾಗಿರುವುದರಿಂದ ಅವು ನ್ಯಾಯವಾಗಿ ಉಳಿದುಕೊಂಡು ಬಂದಿವೆ. ಇಷ್ಟಲ್ಲದೆ ಅಲ್ಲಿ ಇಲ್ಲಿ ಕಂಡು ಬರುವ ತತ್ವವಿಚಾರ ಮತ್ತು ಕಾವ್ಯಸೌಂದರ್ಯಗಳನ್ನು ಭಟ್ಟಿ ಇಳಿಸಿರುವ ಪದ್ಯಗಳು ಇವೆ. ಸ್ತೋತ್ರಕಾವ್ಯಗಳಂತೂ ಹೇರಳವಾಗಿವೆ. ಅವುಗಳಲ್ಲಿ ಹಲವು ತಮ್ಮ ಸಾಮರ್ಥ್ಯದಲ್ಲಿಯೂ ನಿಷ್ಠಾದಾರ್ಢ್ಯದಲ್ಲಿಯೂ ಲಯ ಮತ್ತು ಅಭಿವ್ಯಕ್ತಿಯ ಆಕರ್ಷಕತೆಯಲ್ಲಿಯೂ ಸಮಗ್ರವಾಗಿರುವುದರಿಂದ ಅವು ಮುಂದೆ ಬರುವ ಅವುಗಳಂತಹ, ಆದರೆ ಅವಕ್ಕೂ ವಿಸ್ತಾರವಾದ ಪ್ರಾದೇಶಿಕ ಸಾಹಿತ್ಯದ ಅವಲೋಕನಕ್ಕೆ ನಮ್ಮನ್ನು ಸಜ್ಜುಗೊಳಿಸುತ್ತವೆ.

ಭಾರತದ ತಾತ್ವಿಕ ಕೃತಿಗಳು ಯುರೋಪಿನ ಬಹುಭಾಗದ ತತ್ವವಿಚಾರದಿಂದ ಭಿನ್ನವಾಗಿವೆ. ಭಾರತದ ತಾತ್ವಿಕ ವಿವೇಚನೆ, ಬೌದ್ಧಿಕ ಕ್ರಮ ಮತ್ತು ಪದ್ಧತಿಗಳನ್ನು ಅಳವಡಿಸಿಕೊಂಡಲ್ಲಿಯೂ ಅವುಗಳ ನಿಜವಾದ ಸಾರವು ಬೌದ್ಧಿಕವಲ್ಲ; ಆಧ್ಯಾತ್ಮಿಕ ಅನುಭೂತಿ ಹಾಗೂ ಪ್ರತ್ಯಕ್ಷಾನುಭವಗಳ ತಿರುಳನ್ನು ಬಳಸಿಕೊಂಡು ಕೆಲಸ ಮಾಡುವ ಸೂಕ್ಷ್ಮವೂ ಅತ್ಯಂತ ಆಳವೂ ಆದ ಬುದ್ಧಿಯ ಫಲವೇ ಅವುಗಳ ಸಾರ. ಭಾರತವು ತತ್ವಶಾಸ್ತ್ರ, ಯೋಗ ಮತ್ತು ಧರ್ಮಗಳಲ್ಲಿ ಸದಾ ಉಳಿಸಿಕೊಂಡು ಬಂದ ಐಕ್ಯದ ಪರಿಣಾಮವಿದು. ಭಾರತದ ಧಾರ್ಮಿಕ ಮನವು ಪ್ರಥಮತಃ ಕಂಡ ಸತ್ಯವನ್ನು ಅತೀಂದ್ರಿಯ ಪ್ರಜ್ಞೆಯ ಅಥವಾ ಭೌದ್ಧಿಕ ಪ್ರಜ್ಞೆಯ ಭಾಷೆಗಳಲ್ಲಿ ವ್ಯಕ್ತಮಾಡಿದ್ದೇ ಭಾರತೀಯ ತತ್ವಜ್ಞಾನ. ಈ ತತ್ವಜ್ಞಾನವು ಕಲ್ಪನೆಯ ರೂಪದಲ್ಲಿ ಸತ್ಯವನ್ನು ಶೋಧಿಸಿ ಅದನ್ನು ತಾರ್ಕಿಕ ಬುದ್ಧಿಗೆ ಸರಿದೋರುವಂತೆ ಸಮರ್ಥಿಸಿ (ಇದನ್ನೂ ಚೆನ್ನಾಗಿ ಮಾಡಿದ್ದರೂ) ತಣಿಯದು. ಅದರ ದೃಷ್ಟಿಯು ಯಾವಾಗಲೂ ಯೋಗದ ಗುರಿಯಾದ ಆತ್ಮಸಾಕ್ಷಾತ್ಕಾರದ ಕಡೆಗೇ ಇರುತ್ತದೆ. ಬೌದ್ಧಿಕ ಮುಖ್ಯಕ್ಕೆ ಬಹಳ ಪ್ರಾಮುಖ್ಯ ಕೊಡುವ ಈ ಯುಗದ ವಿಚಾರಕ್ಕಾದರೂ ಭಾರತೀಯ ಮನೋಧರ್ಮದ ಸತತಾವಶ್ಯಕತೆ ತಪ್ಪಿದ್ದಲ್ಲ. ಭಾರತೀಯ ತಾತ್ವಿಕ ಮನೋಧರ್ಮವು ಆತ್ಮಾನುಭೂತಿಯ ಅಂಶಗಳನ್ನು ತೆಗೆದುಕೊಂಡು ಬುದ್ಧಿಯ ನಿಷ್ಕೃಷ್ಟವೂ ವಿಸ್ತಾರವೂ ಆದ ಪರೀಕ್ಷೆ ಮತ್ತು ಅಂತರ್ದರ್ಶನಗಳಲ್ಲಿ ಹಾಯಿಸಿ ಪುನಃ ಹಿಂದಕ್ಕೆ ಮತ್ತು ಒಳಕ್ಕೆ ತೆಗೆದುಕೊಂಡು ಬೌದ್ಧಿಕ ಪ್ರತ್ಯಕ್ಷಗಳನ್ನು ಮೀರಿ ಆಧ್ಯಾತ್ಮಿಕವಾದ ಹೊಸ ಅನುಭವಗಳಿಗೆ ಒಯ್ಯುತ್ತದೆ. ಈ ವಸ್ತುತಃ ಭಿನ್ನ ಭಿನ್ನ ಮಾಡುವ ಹಾಗೂ ಪ್ರತ್ಯೇಕವಾಗಿ ನಿಲ್ಲುವ ಪ್ರವೃತ್ತಿಯು, ಉಪನಿಷತ್ತುಗಳಲ್ಲಿ ಉಲ್ಲೇಖಿಸಿದ ಉನ್ನತವಾದ ಪೂರ್ಣ ಸತ್ಯವನ್ನು ಆಗಲೇ ಒಡೆದು ವಿವಿಧ ವಿಚಾರ ಪ್ರಸ್ಥಾನಗಳಿಗೆ ಎಡೆಗೊಟ್ಟಿತ್ತು. ಈಗಲಾದರೋ ಅವು ಮತ್ತಷ್ಟು

ಒಡೆದು ಇನ್ನೂ ಕಡಿಮೆ ವ್ಯಾಪ್ತಿಯ ಪ್ರಣಾಲಿಗಳಾಗಿ ಹೋಗಿವೆ. ಹೀಗಿದ್ದರೂ ಈ ಪ್ರತಿಯೊಂದು ಪರಿಮಿತವ್ಯಾಪ್ತಿಯ ಪ್ರಣಾಲಿಯಲ್ಲಿಯೂ ಸೂಕ್ಷ್ಮವೂ ಆಳವೂ ಆದ ಶೋಧಕ ಲಾಭವಿದೆ. ಆದುದರಿಂದ ಒಟ್ಟಿನಲ್ಲಿ ಉಪನಿಷತ್ತಿನ ತತ್ವಗಳ ಉನ್ನತ ಶೃಂಗಗಳ ವಿಸ್ತಾರವು ಕಡಿಮೆಯಾದರೂ ಆ ನಷ್ಟವನ್ನು ಜೀರ್ಣಿಸಿಕೊಳ್ಳಬಲ್ಲ ಆಧ್ಯಾತ್ಮಿಕ ಜ್ಞಾನದ ಕೆಲಮಟ್ಟಿನ ವಿಸ್ತರಣೆಯು ತುಂಬಿಕೊಡುತ್ತದೆ. ಆತ್ಮ ಮತ್ತು ಬುದ್ಧಿಗಳ ನಡುವಿನ ಈ ವಿನಿಮಯದ ಲಯವು ಬೇರೆ ಜನತೆಯಲ್ಲಿ ಎಲ್ಲಿಯೂ ಕಂಡುಬರಲಾರದು. ಇಲ್ಲಿ ಆತ್ಮವು ಸತ್ಯದ ಮೇಲೆ ಪ್ರಕಾಶವನ್ನು ಬೀರುತ್ತದೆ; ಅದು ತನ್ನ ಪ್ರಾತಿಭದರ್ಶನಗಳನ್ನು ಹೀರಿಕೊಳ್ಳಲು ಕೆಳಗಿನ ಪ್ರಜ್ಞಾಸ್ಥಳಕ್ಕೆ ಬಂದು ಸಹಾಯ ಮಾಡಲು, ಶೋಧಿಸಲು ನಿಲ್ಲುವುದು. ಇದರಿಂದ ಭಾರತೀಯ ಆಧ್ಯಾತ್ಮಿಕತೆಗೆ ಅದ್ಭುತವಾದ ತೀವ್ರತೆ, ಸುಭದ್ರತೆ ಮತ್ತು ಸತತ–ಗತಿ–ಶಕ್ತಿಯನ್ನು ಉಕ್ತ ಸಾಹಿತ್ಯ ನೀಡುವಂತಾಯಿತು. ಯೋಗಿಗಳೂ ಆಗಿದ್ದ ಈ ತತ್ವಜ್ಞಾನಿಗಳ ಕಾರ್ಯವೇ ಕವಿಯುತ್ತಿದ್ದ ಅವನತಿಯ ಕಾಳರಾತ್ರಿಯಿಂದ ಭಾರತದ ಆತ್ಮವನ್ನು ಬದುಕಿಸಿದ್ದು.

ಉನ್ನತ ತರ ಆಧ್ಯಾತ್ಮಿಕ ಸತ್ಯದ ಪಾಕ್ಷಿಕ ಅಭಿವ್ಯಕ್ತಿ ಮತ್ತು ಸಾಧಾರಣವಾದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಮನೋಧರ್ಮಗಳ ನಡುವಣ ಸೇತು ಎನಿಸಬೇಕಾಗಿದ್ದ ಜನಗತವಾದ ಜನರ ಕಲ್ಪನಾಶಕ್ತಿಗೆ, ಭಾವನೆಗಳಿಗೆ ನೈತಿಕ ಹಾಗೂ ರಸಾತ್ಮಕ ಪ್ರಜ್ಞೆಗಳಿಗೆ ಮೆಚ್ಚಿಗೆಯಾಗುವಂಥ ಗಣ್ಯ ಕಲ್ಪನೆಗಳು, ಸ್ವರೂಪಗಳು, ಪ್ರತಿಮೆಗಳು–ಇವುಗಳ ಮಹಾ ಸಮುದಾಯದ ನೆರವಿಲ್ಲದೆ ಮೇಲೆ ಹೇಳಿದ ಮಹಾಕಾರ್ಯವನ್ನು ಸಾಧಿಸಲು ಸಾಧ್ಯವಾಗುತ್ತಿದ್ದಿಲ್ಲ. ಈ ಸಂದರ್ಭದ ಅವಶ್ಯಕತೆಯನ್ನು ತಂತ್ರ ಮತ್ತು ಪುರಾಣಗಳು ಪೂರಯಿಸಿದವು. ಪುರಾಣಗಳು ಈ ಯಗಕ್ಕೆ ವಿಶಿಷ್ಟವಾದ ಧರ್ಮಕಾವ್ಯಗಳು; ಪುರಾಣಶೈಲಿಯು ಇದಕ್ಕೂ ಹಿಂದೆಯೇ ಇದ್ದಿರಬಹುದಾದರೂ ಅದು ಪರಿಪುಷ್ಟವಾಗಿ ಬೆಳೆದು ಭಾರತದ ಧಾರ್ಮಿಕ, ಆಧ್ಯಾತ್ಮಿಕ ಸತ್ವದ ವಿಶಿಷ್ಟ ಲಕ್ಷಣವೂ ಪ್ರಮುಖ ಸಾಹಿತ್ಯಮಾರ್ಗವೂ ಆದದ್ದು ಈ ಕಾಲದಲ್ಲೇ. ಪುರಾಣಕಥೆಗಳೆಲ್ಲವನ್ನೂ ಅಲ್ಲದಿದ್ದರೂ ಪೌರಾಣಿಕ ಬರಹಗಳ ಬಹುಭಾಗವನ್ನೂ ಈಗ ಉಪಲಬ್ಧವಿರುವ ಅವುಗಳ ಸ್ವರೂಪವನ್ನೂ ಉಕ್ತಕಾಲಕ್ಕೇ ಅನ್ವಯಿಸಬೇಕು. ಪಾಶ್ಚಾತ್ಯ ವಿಚಾರವಾದದ ಬಣ್ಣ ತಳೆದ ಆಧುನಿಕ ಕಲ್ಪನೆಗಳು ಬಂದು, ಹೊಸ ಪ್ರಚೋದನೆಗಳ ಆವರಣದಲ್ಲಿ ವಿಚಾರಶಕ್ತಿಯು ಪ್ರಾಚೀನ ಭಾರತೀಯ ಸಂಸ್ಕೃತಿಯ ಮೂಲಭೂತ ಕಲ್ಪನೆಗಳತ್ತ ಹೊರಳಿದ ಕಾಲದಂದಿನಿಂದ ಇತ್ತೀಚಿನವರೆಗೆ ಪುರಾಣಗಳನ್ನು ಬಹಳವಾಗಿ ತೆಗಳುವುದೂ ಕಡೆಗಣಿಸುವುದೂ ಸಾಗಿದೆ. ಈ ತೆಗಳಿಕೆಯ ಬಹು ಭಾಗವು ಮಧ್ಯಯುಗದ ಧಾರ್ಮಿಕ ಬರವಣಿಗೆಗಳ ಉದ್ದೇಶ, ಕ್ರಮ ಮತ್ತು ಅರ್ಥಗಳ ಸಂಪೂರ್ಣ ತಪ್ಪುತಿಳುವಳಿಕೆಯಿಂದಲೇ ಆದದ್ದು. ಅವುಗಳ ಅರ್ಥವನ್ನು ಸರಿಯಾಗಿ ಗ್ರಹಿಸಿಕೊಳ್ಳಲು ಭಾರತದ ಧಾರ್ಮಿಕ ವಿಚಾರದಲ್ಲಿ ಮತ್ತು ಅದರ ಸಂಸ್ಕೃತಿಯ ವಿಕಾಸದಲ್ಲಿ ಈ ಬರವಣಿಗೆಗಳ ಸ್ಥಾನವನ್ನು ಮೊದಲು ತಿಳಿದುಕೊಳ್ಳಬೇಕು.

ನಮ್ಮ ಸ್ವಂತ ಆತ್ಮದ ಹಾಗೂ ಗತೇತಿಹಾಸದ ಸರಿಯಾದ ತಿಳಿವಳಿಕೆ ಬಂದ ಈ ಕಾಲದಲ್ಲಿ ಪೌರಾಣಿಕ ಧರ್ಮಗಳು ಭಾರತದ ಪ್ರಾಚೀನ ಆಧ್ಯಾತ್ಮಿಕತೆಯ ಮತ್ತು ತತ್ವಜ್ಞಾನ ಹಾಗೂ ಸಾಮಾಜಿಕ–ಧಾರ್ಮಿಕ ಸಂಸ್ಕೃತಿಗಳ ಸತ್ಯದ ಹೊಸ ರೂಪ, ಹೊಸ ವಿಸ್ತರಣ ಎಂಬುದು ಗೊತ್ತಾಗುತ್ತದೆ. ಅವುಗಳ ಪ್ರಸಿದ್ಧ ಉದ್ದೇಶದ ಪ್ರಕಾರ ಪುರಾಣಗಳು ಸೃಷ್ಟಿಯ ವಿವರಣೆ, ಸಾಂಕೇತಿಕ ಗೂಢಕಥೆ ಹಾಗೂ ಪ್ರತಿಮಾಪ್ರಧಾನಕಥೆ, ಪರಂಪರೆ, ಪಂಥ, ನಡೆದುಬಂದ ಭಾರತೀಯ ಸಾಮಾಜಿಕ ಕಟ್ಟುಪಾಡುಗಳ ಜನಪ್ರಿಯ ಸಾರಸಂಗ್ರಹಗಳು. ಇಲ್ಲಿ ಮೂಲಭೂತ ಬದಲಾವಣೆ ಯಾವುದೂ ಇಲ್ಲ; ಬರಿ ಸ್ವರೂಪದ ಬದಲಾವಣೆ ಮಾತ್ರ. ವೈದಿಕ ಕಾಲದ ಆಧ್ಯಾತ್ಮಿಕ ಸಂಕೇತಗಳು ಅಥವಾ ಸತ್ಯದ ಸತ್ಯ ಪ್ರತಿಮೆಗಳು ಈ ಪುರಾಣಯುಗದಲ್ಲಿ ನಷ್ಟವಾದವು ಅಥವಾ ವಿಕಲ್ಪ–ಹ್ರಸ್ವರೂಪಕ್ಕೆ ಇಳಿಸಲ್ಪಟ್ಟು ಗೌಣವಾದವು. ಇತರ ಎದ್ದುಕಾಣುವ ಸಂಕೇತಗಳು ದೊಡ್ಡ ಗುರಿಯನ್ನಿಟ್ಟುಕೊಂಡು ವಿಶ್ವವ್ಯಾಪಕವಾಗಿಯೂ ಸರ್ವಂಕಷವಾಗಿಯೂ ಭೌತಪ್ರಪಂಚದ ಕಲ್ಪನೆಗಳಿಂದ ಆರಂಭಿಸದೆ–ನಮ್ಮೊಳಗಿನ ಆಧ್ಯಾತ್ಮಿಕ ಪ್ರಪಂಚದಿಂದಲೇ ಪೂರ್ಣವಾಗಿ ಹೊರಟಂಥವು. ವೈದಿಕ ದೇವ–ದೇವಿಯರು ಆಧ್ಯಾತ್ಮಿಕ ಅರ್ಥವನ್ನು ತಮ್ಮ ಭೌತಲಕ್ಷಣಗಳ ಮೂಲಕ ಅಪವಿತ್ರ ಭಾವಿಕರಿಂದ ಮರೆಗೊಳಿಸಿಕೊಂಡಿದ್ದಾರೆ. ಪುರಾಣದ ತ್ರಿಮೂರ್ತಿಗಳೂ ಅವರ ಪತ್ನಿಯರೂ ತದ್ವಿರುದ್ಧವಾಗಿ ಭೌತಮನಕ್ಕಾಗಲಿ, ಕಲ್ಪನೆಗಾಗಲಿ ಅರ್ಥವಿಲ್ಲದವರು; ಅವರು ಸರ್ವಾಭಿವ್ಯಕ್ತಿಸ್ವರೂಪದ ದೇವತಾತತ್ವದ ಏಕತ್ವ–ನಾನಾತ್ವಗಳ ತಾತ್ವಿಕ ಹಾಗೂ ಆಧ್ಯಾತ್ಮಿಕ ಕಲ್ಪನೆಗಳೂ ಮೂರ್ತರೂಪಗಳೂ ಆಗಿದ್ದಾರೆ. ಪೌರಾಣಿಕ ಪಂಥಗಳನ್ನು ವೈದಿಕ ಧರ್ಮದ ಅಧಮರೂಪಗಳೆಂದು ಹೇಳಲಾಗಿದೆ; ಆದರೆ ವೈದಿಕ ಧರ್ಮದ ಸಾರಸ್ವರೂಪವು ಸನಾತನವಾಗಿರುವುದರಿಂದ ಆ ಪಂಥಗಳು ಬಾಹ್ಯ ಆಚಾರಗಳಲ್ಲಿ ಅದರ ವಿಸ್ತರಣ ಹಾಗೂ ಮುನ್ನಡೆಗಳೆಂದಷ್ಟೇ ಹೇಳಬಹುದು. ಅವುಗಳ ದುರುಪಯೋಗವು ಯಾವ ಅಂಧಶ್ರದ್ಧೆ ಅಥವಾ ಬಾಹ್ಯಾಡಂಬರಗಳಿಗೆ ಕೊಂಡೊಯ್ಯಬಹುದಾದರೂ ವಿಗ್ರಹಾರಾಧನೆ, ದೇವಾಲಯ–ಪೂಜಾಪದ್ಧತಿ ಮತ್ತು ಸಾಂಗೋಪಾಂಗ ಉತ್ಸವಾದಿ ಆರಾಧನವಿಧಿಗಳು ಯಾವಾಗಲೂ ಅಧಮವೇ ಆಗಬೇಕೆಂದಿಲ್ಲ. ವೈದಿಕ ಧರ್ಮಕ್ಕೆ ವಿಗ್ರಹಗಳ ಅವಶ್ಯಕತೆಯಿದ್ದಿಲ್ಲ. ಏಕೆಂದರೆ ಅದರ ದೇವತಾತತ್ವಗಳ ಭೌತವಿಜ್ಞಾನವು ಭೌತಪ್ರಕೃತಿಯ ರೂಪಗಳೇ ಆಗಿದ್ದವು ಮತ್ತು ಬಾಹ್ಯಪ್ರಪಂಚವು ಅವುಗಳ ಕಣ್ಣಿಗೆ ಕಾಣುವಂಥ ಆಲಯಗಳಾಗಿದ್ದವು. ಪುರಾಣಧರ್ಮವು ನಮ್ಮೊಳಗಿನ ದೇವತಾತತ್ವದ ಆಧ್ಯಾತ್ಮಿಕ ರೂಪಗಳನ್ನು ಪೂಜಿಸಿತು ಮತ್ತು ಅದು ಸಾಂಕೇತಿಕ ರೂಪಗಳಲ್ಲಿ ಅದನ್ನು ಹೊರಗೆ ವ್ಯಕ್ತಮಾಡಬೇಕಾಯಿತು; ಅಲ್ಲದೆ ಆ ರೂಪಗಳನ್ನು ಅದು ವಿಶ್ವವ್ಯಾಪಕ ಅರ್ಥವುಳ್ಳ ವಾಸ್ತುಶಿಲ್ಪದ ಪ್ರತೀಕಗಳಾದ ದೇವಾಲಯಗಳಲ್ಲಿ ಪ್ರತಿಷ್ಠಿಸಬೇಕಾಯಿತು. ಅದು ಉದ್ದೇಶಿಸಿದ ಅಂತರ್ಮುಖತೆಯೇ ಸ್ಥೂಲಕಲ್ಪನೆಗೂ ನೋಟಕ್ಕೂ ಹೊಂದುವಂತೆ ಈ ಆಂತರಿಕ ಪದಾರ್ಥಗಳ ಜಟಿಲತೆಯನ್ನು ಚೆನ್ನಾಗಿ ಮೂರ್ತೀಕರಿಸಲು ಸ್ಥೂಲರೂಪದ ವಿಗ್ರಹಗಳನ್ನು ಹೆಚ್ಚಿಸುವ

ಅವಶ್ಯಕತೆಯನ್ನುಂಟುಮಾಡಿತು. ಜನದ ಧಾರ್ಮಿಕ ರಸವಿವೇಕವು ಬದಲಾದರೂ ಧರ್ಮದ ಅರ್ಥವು ಕೇವಲ ಮನೋವೃತ್ತಿ ಹಾಗೂ ರೀತಿಗಳಷ್ಟೇ ಅಲ್ಲದೆ ಸಾರತಃ ಬದಲಾಗಿಲ್ಲ. ಆದರೆ ವೈದಿಕ ಮತ್ತು ಪೌರಾಣಿಕ ಯುಗಗಳ ನಿಜವಾದ ಅಂತರ ಇಂತಿದೆ; ಪ್ರಾಚೀನ ಧರ್ಮವು ಭೌತ ಜಗತ್ತಿನ ಜೀವನದಿಂದ ಬಹುವಾಗಿ ಪ್ರಭಾವಿತವಾದ ಜನತೆಯ ನಡುವೆ ಬದುಕಿದ ಅತ್ಯುನ್ನತ ಆಧ್ಯಾತ್ಮಿಕ ಅನುಭವವುಳ್ಳವರಿಂದ ರೂಪಿತವಾದುದು; ಉಪನಿಷತ್ತುಗಳು ಭೌತ ಆವರಣವನ್ನು ತೆಗೆದೊಗೆದು ಅನಿರ್ಬದ್ಧ ಅತಿಮಾನಸ ಮತ್ತು ವಿಶ್ವದರ್ಶನ ಹಾಗೂ ಅನುಭೂತಿಗಳಿಗೆ ಎಡೆಮಾಡಿಕೊಟ್ಟವು. ಈ ದರ್ಶನ–ಅನುಭೂತಿಗಳನ್ನು ಪುರಾಣಯುಗವು ವಿಪುಲವಾದ ತಾತ್ವಿಕ ಮತ್ತು ಬೌದ್ಧಿಕ ಅರ್ಥಸಂಪತ್ತಿನಿಂದ ಕೂಡಿದ ವಿಗ್ರಹಗಳಲ್ಲಿ ಸಾರ್ವಜನಿಕರಿಗಾಗಿ ಪ್ರಕಟಗೊಳಿಸಿತು. ಅಂಥ ವಿಗ್ರಹಗಳಲ್ಲಿ ತ್ರಿಮೂರ್ತಿಗಳೂ ವಿಷ್ಣು–ಶಿವರ ಪತ್ನಿಯರೂ ಗಣ್ಯರು. ಪುರಾಣಗಳು ಈ ದೇವತಾಕೃತಿಗಳ ಹೃದಯಸ್ಪರ್ಶಿತ್ವವನ್ನು ಬುದ್ಧಿಭಾವನೆಗಳಿಗೆ ಒದಗಿಸಿಕೊಟ್ಟು ಆಧ್ಯಾತ್ಮಿಕ ಅನುಭೂತಿಗೆ, ಭಾವನೆಗೆ, ರಸ ಪ್ರಜ್ಞೆಗೆ ಹಾಗೂ ಇಂದ್ರಿಯಗಳಿಗೆ ಸಜೀವವನ್ನಾಗಿ ಮಾಡಿದವು. ಭಾರತೀಯ ಸಂಸ್ಕೃತಿಯ ಧಾರ್ಮಿಕ–ತಾತ್ವಿಕ ವಿಕಾಸದ ಅರ್ಥವು ಯೋಗಿ ಮತ್ತು ಋಷಿಗಳು ಕಂಡ ಆಧ್ಯಾತ್ಮಿಕ ಸತ್ಯಗಳನ್ನು ಸಮನ್ವಿತವಾಗಿ ವ್ಯಕ್ತಪಡಿಸಲು, ಹೃದಯಸ್ಪರ್ಶಿಯಾಗಿ ನಿರೂಪಿಸಲು, ಮಾನವನ ಇಡಿ ಸ್ವಭಾವಕ್ಕೆ ತಕ್ಕ ಪರಿಣಾಮಕ ರೀತಿಯಲ್ಲಿ ಪ್ರಕಾಶಪಡಿಸಲು ಸತತ ಪ್ರಯತ್ನವೆಸಗಲು ಹಾಗೂ ಅವುಗಳಲ್ಲಿ ಸಾಮಾನ್ಯ ಜನರೆಲ್ಲರ ಮನಸ್ಸನ್ನು ಮೊದಲ ಹಂತದಲ್ಲಿ ಪ್ರವೇಶಗೊಳಿಸಲು ಹೊರಟಿದ್ದರಲ್ಲಿದೆ.

ಪುರಾಣಗಳಲ್ಲೂ ತಂತ್ರಗಳಲ್ಲೂ ಅತ್ಯುನ್ನತ ಆಧ್ಯಾತ್ಮಿಕ ಮತ್ತು ತಾತ್ವಿಕ ಸತ್ಯಗಳು ಅಡಕವಾಗಿವೆ; ಚಿಂತಕರ ಚರ್ಚೆಗಳಲ್ಲಿರುವಂತೆ ಅಲ್ಲಿ ಅವನ್ನು ಭಿನ್ನಭಿನ್ನವಾಗಿಯೂ ಪರಸ್ಪರ ವಿರುದ್ಧವಾಗಿಯೂ ಕೊಡದೆ, ಒಂದು ಸಾಮರಸ್ಯದಿಂದ, ಸುಸಂಬದ್ಧತೆಯಿಂದ ಇಲ್ಲವೆ ಭಾರತೀಯ ಮನ–ಆತ್ಮಗಳ ಪೂರ್ವಗ್ರಹರಹಿತ ಪರ್ಯಾಪ್ತತೆಗನುಗುಣವಾಗಿ ಮಾಡಿದ ವರ್ಗೀಕರಣದಿಂದ ಕೊಡಲಾಗಿದೆ. ಈ ಕಾರ್ಯವನ್ನು ಕೆಲವೊಮ್ಮೆ ಸ್ಪಷ್ಟವಾಗಿಯೂ ಮಾಡಲಾಗಿದೆ; ಅರ್ಥಾತ್ ಹೆಚ್ಚು ಸಲ ಅಂಥ ಸತ್ಯದ ಕಲ್ಪನೆ ಸಾಮಾನ್ಯರಿಗಾಗುವಂತೆ, ಭಾವನೆಯುಂಟಾಗುವಂತೆ ಅಜ್ಜಿಕತೆ, ಕತೆ, ಸಂಕೇತ, ನೀತಿಕಥೆ, ದಿವ್ಯಕಥೆ ಮತ್ತು ದೃಷ್ಟಾಂತ ಕಥೆಗಳ ರೂಪದಲ್ಲಿ ನೆರವೇರಿಸಲಾಗಿದೆ. ತಂತ್ರಗಳಲ್ಲಿ ಮಾನಸಶಾಸ್ತ್ರೀಯವಾದ ಅನೇಕ ಜಟಿಲ ಅನುಭವಗಳು ಬಂದಿವೆ; ಅವಕ್ಕೆ ಅಲ್ಲಿ ಯೋಗಪದ್ಧತಿಯ ದಾರ್ಶನಿಕ ಪ್ರತಿಮಾಪ್ರತ್ಯಕ್ಷದ ಆಧಾರಗಳಿವೆ. ಪುರಾಣಗಳಲ್ಲಿಯೂ ಈ ಅಂಶವಿದೆ; ಆದರೆ ಅಂಥ ಅಂಶ ಸ್ವಲ್ಪ ಶಿಥಿಲವಾಗಿ, ಅಷ್ಟು ಬಿಗಿಯಾದ ಅನುಕ್ರಮಿಕತೆಯಿಲ್ಲದೆ ಬಂದಿದೆ. ಈ ಕ್ರಮವು ವೇದಗಳ ಕ್ರಮದ ಭಿನ್ನ ಮನೋಧರ್ಮಾನುಗುಣವಾದ ರೂಪಾಂತರವಷ್ಟೇ. ಪುರಾಣಗಳು ಭೌತ ಪ್ರತಿಮೆಗಳನ್ನು ನಿರ್ಮಿಸಿವೆ; ಅವುಗಳಲ್ಲಿ ಪ್ರತಿಯೊಂದಕ್ಕೂ ಆಧ್ಯಾತ್ಮಿಕ ಅರ್ಥವಿದೆ. ಹೀಗೆ ಗಂಗಾ–ಯಮುನಾ–ಸರಸ್ವತೀ ನದಿಗಳ ಸಂಗಮದ

ಪಾವಿತ್ರ್ಯವು ಯೋಗದ ಭೌತ–ಮಾನಸ ಪ್ರಕ್ರಿಯೆಯ ಒಂದು ಆಕೃತಿ; ಆ ಬಗೆಯ ಸಾಂಕೇತಿಕತೆಗೆ ಸಹಜವಾಗಿರುವಂತೆ ಅದಕ್ಕೆ ಮತ್ತೆರಡು ಅರ್ಥಗಳಿವೆ. ಪುರಾಣಗಳಲ್ಲೇ ಸ್ಪಷ್ಟವಾಗಿ ಹೇಳಿರುವ ಪೌರಾಣಿಕ ಭೂಗೋಲಶಾಸ್ತ್ರದ ಆಭಾಸಗಳು ಸಮೃದ್ಧವಾದ ಕಾವ್ಯಾಲಂಕಾರಗಳು–ಒಳಗಿನ ಆಧ್ಯಾತ್ಮಿಕ ವಿಶ್ವದ ಸಾಂಕೇತಿಕ ಭೂಗೋಲವಿವರಗಳು. ಕೆಲವೆಡೆ ಭೌತ ಜಗತ್ತಿಗೆ ಯೋಗ್ಯವಾದ ಪದಗಳಲ್ಲಿ ಮಾಡಿದ ಸೃಷ್ಟಿಕ್ರಮದ ಉಪನ್ಯಾಸವು ವೇದದಲ್ಲಿದ್ದಂತೆಯೇ ಆಧ್ಯಾತ್ಮಿಕ ಹಾಗೂ ಮಾನಸಶಾಸ್ತ್ರೀಯ ಅರ್ಥ ಮತ್ತು ಆಧಾರಗಳುಳ್ಳದ್ದು. ಅನಂತರದ ಕಾಲದಲ್ಲಿ ಹೆಚ್ಚುತ್ತ ಹೋದ ಅಜ್ಞಾನದ ಮೂಲಕ ಪುರಾಣಗಳ ಸಾಂಕೇತಿಕ ಪದ್ಧತಿಯ ಹೆಚ್ಚು ತಾಂತ್ರಿಕವಾದ ಭಾಗಗಳು ಆಧ್ಯಾತ್ಮಿಕ ಅಂಶಗಳ ಬಗ್ಗೆ ಅಂಧಶ್ರದ್ಧೆ ಹಾಗೂ ಒರಟು ಒರಟಾದ ಭೌತ ಕಲ್ಪನೆಗಳಿಗೆ ಎಡೆಗೊಟ್ಟದ್ದನ್ನು ಕಾಣುವುದು ಸುಲಭ. ಆದರೆ ಈ ಅಪಾಯವು ಭೂರಿಜನರಿಗೆ ತಿಳಿಸಲೆಂದು ಮಾಡುವ ಎಲ್ಲ ಪ್ರಯತ್ನಗಳಲ್ಲೂ ಉಂಟೇ ಉಂಟು. ಆದರೆ ಈ ಅನನುಕೂಲವು ಉನ್ನತತರ ದರ್ಶನಗಳಿಗೆ ತರಬೇತುಗೊಳಿಸುವ ಮಾನಸ–ಧಾರ್ಮಿಕ ಹಾಗೂ ಮಾನಸ–ಆಧ್ಯಾತ್ಮಿಕ ಹೃದಯಸ್ಪರ್ಶಿತ್ವಕ್ಕೆ ಅನುಕೂಲ ಪ್ರತಿಕ್ರಿಯೆಯನ್ನೆಸಗುವಂತೆ ಭೂರಿಮನವನ್ನು ಸಿದ್ಧಗೊಳಿಸುವುದರಲ್ಲಿ ಮಹಾಪರಿಣಾಮವನ್ನುಂಟು ಮಾಡಿದ್ದನ್ನು ಕಡೆಗಣಿಸುವಂತೆ ಮಾಡಕೂಡದು. ಪುರಾಣಪದ್ದತಿಯನ್ನು ಮೀರಿಸುವ, ಅದಕ್ಕೂ ಸುಂದರತರವಾದ ವರ್ಣನಾವೈಖರಿಯನ್ನು, ವಿವರಣ ಪದ್ಧತಿಯನ್ನು ಒಮ್ಮೆ ತಂದು ಸೂಕ್ಷ್ಮ ಅರ್ಥಗಳನ್ನು ಇನ್ನೂ ಹೆಚ್ಚು ನೇರವಾಗಿ ಜನತೆಗೆ ಮನಂಬುಗಿಸುವುದು ಸಾಧ್ಯವಾದಾಗಲೂ ಅಂಥ ಪ್ರಯತ್ನವು ಬಹಳ ಮಟ್ಟಿಗೆ ಪುರಾಣ ಮಾಡಿದ ಕಾರ್ಯಕ್ಕೆ ಋಣಿಯಾಗಿರಬೇಕಾಗುತ್ತದೆ.

ಪುರಾಣಗಳು ಸಾರತಃ ಧಾರ್ಮಿಕ ಕಾವ್ಯಗಳು; ಅವು ಧಾರ್ಮಿಕ ಸತ್ಯಗಳನ್ನು ರಸ್ಯಮಾನವಾಗಿ ವ್ಯಕ್ತಪಡಿಸುವ ಕಲಾರೂಪದವು. ಈ ಜಾತಿಯ ಸಾಹಿತ್ಯದಲ್ಲಿ (ಹದಿನೆಂಟು) ಪುರಾಣರಾಶಿಯ ಬಹುಭಾಗವು ಉನ್ನತ ಮಟ್ಟದಲ್ಲಿದೆ ಎನ್ನಲು ಬರದು; ಅದರಲ್ಲಿ ಬಹಳ ವ್ಯರ್ಥಾಲಾಪವಿದೆ, ನೀರಸ ಭಾಗ ಇದೆ; ಆದರೆ ಒಟ್ಟಿನಲ್ಲಿ ನೋಡಿದರೆ, ರಚನಾಕ್ರಿಯೆಯ ಸಾಮರ್ಥ್ಯ ಮತ್ತು ಸಮೃದ್ಧಿಗಳು ಅದು ಬಳಸಿದ ಕಾವ್ಯಮಾರ್ಗವನ್ನು ಸಮರ್ಥಿಸುತ್ತವೆ ಎಂದು ಹೇಳದಿರಲಾಗದು. ಪುರಾಣಗಳಲ್ಲಿ ಅತಿ ಪ್ರಾಚೀನವಾದುದು ಅತ್ಯುತ್ತಮ ಎನಿಸಿದೆ–ಆದರೆ ಕೊನೆಯದೂ ಒಂದು ತುಂಬ ಚೆನ್ನಾಗಿದೆ ಎಂಬುದು ಮೇಲಿನ ಮಾತಿಗೊಂದು ಅಪವಾದ; ಅದು ಹೊಸ ಮಾರ್ಗ ಹಿಡಿದು ಅದ್ವಿತೀಯವಾಗಿ ಉಳಿದುಕೊಂಡಿದೆ. ಅಂಥ ಪ್ರಾಚೀನತಮ ಪುರಾಣವೆಂದರೆ ವಿಷ್ಣುಪುರಾಣ; ಒಂದೆರಡು ನೀರಸ ಪ್ರಸಂಗಗಳನ್ನುಳಿದರೆ–ಅಂಥ ಒಂದೆರಡು ನೀರಸ ಪ್ರಸಂಗಗಳನ್ನಿಟ್ಟುಕೊಂಡೂ–ಅದು ಹಳೆಯ ಪುರಾಣ ಮಹಾಕಾವ್ಯಶೈಲಿಯ ಔನ್ನತ್ಯವನ್ನು ನೇರವಾದ ರಭಸಶಕ್ತಿಯನ್ನೂ ಉಳಿಸಿಕೊಂಡ ಘನಗುಣಸಂಪನ್ನವಾದ ಗಣ್ಯಸಾಹಿತ್ಯಕೃತಿ. ಅದರಲ್ಲಿ ಗತಿವೈವಿಧ್ಯವಿದೆ, ವೀರ್ಯವತ್ತೆಯಿದೆ, ಕೆಲವುಟ್ಟಿಗೆ ಉದಾತ್ತ

ಮಹಾಕಾವ್ಯಸತ್ವವಿದೆ, ಪ್ರಸನ್ನ ಮಧುರ–ಕಾಂತ ಭಾವಗೀತಾಸ್ಪರ್ಶ ಸಹ ಆಗೀಗ ಕಣ್ಣಿಗೆ ಬೀಳುತ್ತದೆ; ಅತ್ಯಂತ ನಯವಾದ ಉತ್ಸಾಹದ ಹಾಗೂ ಕಾವ್ಯರಚನೆಯ ಕುಶಲ ಸರಳತೆಯ ಅನೇಕ ಕಥಾನಕಗಳಿವೆ. ಪುರಾಣಗಳಲ್ಲಿ ಕೊನೆಯದಾದ ಭಾಗವತವು ಆಗ ಹೆಚ್ಚು ಜನಪ್ರಿಯವಾಗಿದ್ದ ರೀತಿಗಳನ್ನು ಬಹಳ ಮಟ್ಟಿಗೆ ಬಿಟ್ಟುಬಿಟ್ಟಿದೆ. ಏಕೆಂದರೆ ಅದರ ಒಲವು ವಿದಗ್ಧ, ಸಾಲಂಕಾರ ಭಣಿತಿಯ ಕಡೆಗಿದೆ. ಅದು ಪೂರ್ವೋಕ್ತ ಪುರಾಣಕ್ಕಿಂತ ಗಣ್ಯತರ ಕಾವ್ಯಕೃತಿ; ಅದರಲ್ಲಿ ಬಹಳ ಸೂಕ್ಷ್ಮತೆಯಿದೆ, ಸಂಪನ್ನವೂ ಗಭೀರವೂ ಆದ ವಿಚಾರ ಹಾಗೂ ಸೌಂದರ್ಯ ತುಂಬಿದೆ. ಮುಂದೆ ಬಂದ ಭಕ್ತಮಾರ್ಗದ ಭಾವನಾನಿರ್ಭರವೂ ಪರಮಾನಂದಪರವೂ ಆದ ಧರ್ಮಪಂಥಗಳ ವಿಕಾಸದ ಮೇಲೆ ಅತಿ ಹೆಚ್ಚಿನ ಪರಿಣಾಮವನ್ನುಂಟುಮಾಡಿದ ಚಳವಳದ ಶಿಖರವನ್ನು ನಾವು ಭಾಗವತದಲ್ಲಿ ಕಾಣುತ್ತೇವೆ. ಈ ಬೆಳವಣಿಗೆಯ ಹಿಂದಿರುವ ಪ್ರವೃತ್ತಿಯು ಭಾರತದ ಧಾರ್ಮಿಕ ಮನದ ಹಿಂದಿನ ಸ್ವರೂಪಗಳಲ್ಲೇ ಇತ್ತು; ಅದು ಕ್ರಮೇಣ ಗಟ್ಟಿಯಾಗುತ್ತ ನಡೆದಿತ್ತು. ಆದರೆ ಇದುವರೆಗೆ ಕರ್ಮ–ಜ್ಞಾನ ಮಾರ್ಗಗಳ ಸಾಧನೆಗಳೂ ಅಸ್ತಿತ್ವದ ಪರಮೋಚ್ಚಸ್ಥಲದಲ್ಲಷ್ಟೇ ಆಧ್ಯಾತ್ಮಿಕ ಪರಮಾನಂದವನ್ನು ಅರಸುವುದೂ ಅದನ್ನು ಹಿಂದೆ ದೂಡಿ ನಡೆದದ್ದರಿಂದ ಅದರ ಪೂರ್ಣಸ್ವರೂಪ ಸಿದ್ಧಿಯು ಶಕ್ಯವಾಗಲಿಲ್ಲ. ಅಭಿಜಾತ ಯುಗದ ಬಾಹ್ಯ ಜೀವನೋನ್ಮುಖತೆಯೂ ಇಂದ್ರಿಯತರ್ಪಣವೂ ಪರಮಾನಂದಸ್ವರೂಪಗಳ ಆದರ್ಶವನ್ನಿಟ್ಟುಕೊಂಡ ಉತ್ತರಕಾಲೀನ ವೈಷ್ಣವ ಧರ್ಮದ ಪರಿಪೂರ್ಣ ಅಭಿವ್ಯಕ್ತಿಗೆ ಕಾರಣವಾದ ಒಂದು ಹೊಸ ಅಂತರ್ಮುಖ ಪ್ರವೃತ್ತಿಯನ್ನು ಒಳಬಿಟ್ಟವು. ಧರ್ಮೇತರ ಬಾಹ್ಯ ಮುಖಗಳಿಗಷ್ಟೇ ಪರಿಸೀಮಿತವಾಗಿದ್ದರೆ ಈ ಜೈವಿಕ–ಐಂದ್ರಿಯ ಅನುಭವಗಳ ಮಗ್ನತೆ ನರಮಂಡಲವನ್ನು ನೀಡಿಸಿ, ಶಕ್ತಿಯನ್ನು ಕುದುರಿಸಿ ನೈತಿಕ ಅಧಃಪಾತವನ್ನು ಇಲ್ಲವೆ ಸ್ವಾಚ್ಛಂದ್ಯವನ್ನು ತಂದೊಡ್ಡುತ್ತಿತ್ತು; ಆದರೆ ಭಾರತದ ಮನವು ಯಾವಾಗಲೂ ಬಾಳಿನ ಎಲ್ಲ ಅನುಭವವನ್ನೂ ತನ್ನ ಈಶ್ವರಪ್ರೇರಣಾಬಲದಿಂದ ತತ್ಸದೃಶವಾದ, ತತ್ಸಮವಾದ ಆಧ್ಯಾತ್ಮಿಕ ಪರಿಭಾಷೆ–ಕಾರಕಗಳಿಗೆ ಪರಿವರ್ತಿಸುವ ರೂಢಿ ಸುಪ್ರಸಿದ್ಧ. ಅದರ ಫಲವಾಗಿ ಈ ಅತ್ಯಂತ ಸ್ಥೂಲ–ಬಾಹ್ಯ ವಸ್ತುಗಳನ್ನೂ ಅದು ಹೊಸ ಆಧ್ಯಾತ್ಮಿಕ ಅನುಭವಕ್ಕೆ, ತಳಹದಿಯನ್ನಾಗಿ ಮಾಡಿತು. ಆತ್ಮವನ್ನು ಮತ್ತಷ್ಟು ಹೊರಗೆಳೆವ ಮೊದಲೇ ಭಾವನಾತ್ಮಕ, ಐಂದ್ರಿಯಿಕ (ಅಸ್ತಿತ್ವದ ವಿಷಯಲಂಪಟ ಕ್ರಿಯೆಗಳನ್ನು ಕೂಡ) ಚಲನಗಳನ್ನು ತೆಗೆದುಕೊಂಡು ಆಧ್ಯಾತ್ಮಿಕ ರೂಪಕ್ಕೆ ತಿರುಗಿಸಲಾಯಿತು. ಆ ಪರಿವರ್ತನದ ದೆಸೆಯಿಂದ ಅವು ಹೃದಯ ಹಾಗೂ ಇಂದ್ರಿಯಗಳ ಮೂಲಕ ದಿವ್ಯಾತ್ಮವನ್ನು ಸೆರೆಹಿಡಿಯುವ ಯೋಗದ ಅಂಗಗಳೆನಿಸಿದವು ದೇವರ ಪ್ರೇಮದ, ಆನಂದದ ಮತ್ತು ಸೌಂದರ್ಯದ ಒಂದು ಧರ್ಮದ ರೂಪ ತಾಳಿದವು. ತಂತ್ರದಲ್ಲಿ ಹೊಸ ಅಂಗಗಳನ್ನು ತೆಗೆದುಕೊಂಡು ಯೋಗದ ಪರಿಪೂರ್ಣವಾದ ಮಾನಸ–ಆಧ್ಯಾತ್ಮಿಕ ಹಾಗೂ ಮಾನಸ–ಭೌತಿಕ ವಿಜ್ಞಾನದಲ್ಲಿ ಇಲ್ಲವೆ ಶಾಸ್ತ್ರದಲ್ಲಿ ಅವಕ್ಕೆ ತಕ್ಕ ಸ್ಥಾನವನ್ನು ಕಲ್ಪಿಸಿಕೊಡಲಾಯಿತು.

ವೈಷ್ಣವ ಧರ್ಮದಲ್ಲಿ ಉಕ್ತ ಪಂಥದ ಜನಪ್ರಿಯ ಸ್ವರೂಪವು ಬಾಲಕೃಷ್ಣನ ಗೊಲ್ಲ ಜೀವನದ ಅನುಭಾವಿಕ ನೀತಿಕಥೆಯ ಸುತ್ತ ನೆಲೆನಿಂತಿತು. ವಿಷ್ಣುಪುರಾಣದಲ್ಲಿ ಕೃಷ್ಣ ಕಥೆಯು ದಿವ್ಯಾವತಾರದ ಒಂದು ಮಹಾ ಸಾಹಸಕಥೆ; ಅನಂತರದ ಪುರಾಣಗಳಲ್ಲಿ ರಸಾತ್ಮಕ ಹಾಗೂ ಶೃಂಗಾರಮಯ ಸಂಕೇತ ಬೆಳೆಯುವುದನ್ನು ನಾವು ಕಾಣುತ್ತೇವೆ ಮತ್ತು ಭಾಗವತದಲ್ಲಿ ಅದಕ್ಕೆ ಅದರ ಪೂರ್ಣಶಕ್ತಿಯನ್ನು ಕೊಟ್ಟು ತನ್ನ ಪೂರ್ಣ ಆಧ್ಯಾತ್ಮಿಕ, ತಾತ್ವಿಕ ಹಾಗೂ ಮಾನಸ–ಚೈತನಿಕ ಅರ್ಥವನ್ನು ಪ್ರಕಟಿಸಲು ಸಿದ್ಧಗೊಳಿಸಲಾಯಿತಲ್ಲದೆ, ವೇದಾಂತದ ಹಿಂದಿನ ಅರ್ಥವನ್ನು ಜ್ಞಾನದ ಸಮನ್ವಯ ಕೇಂದ್ರದಿಂದ ಆಧ್ಯಾತ್ಮಿಕ ಪ್ರೇಮಾನಂದಗಳ ಕೇಂದ್ರಕ್ಕೆ ಬದಲಾಯಿಸಿ ತನ್ನ ದಾರಿಯೊಳಗೆ ಅದು ಪುನರ್ರಚಿಸಿ ತೆಗೆದುಕೊಂಡಂತಾಯಿತು. ಚೈತನ್ಯನು ಪ್ರಚುರಪಡಿಸಿದ ದಿವ್ಯ ಪ್ರೇಮದ ತತ್ವಜ್ಞಾನ ಮತ್ತು ಧರ್ಮಗಳಲ್ಲಿ ಈ ವಿಕಾಸದ ಪರಿಪೂರ್ಣ ಸ್ವರೂಪವನ್ನು ನಾವು ಕಾಣಬಹುದು.

ವೇದಾಂತ ತತ್ವಜ್ಞಾನದ ಅನಂತರದ ಬೆಳವಣಿಗೆಗಳು, ಪೌರಾಣಿಕ ಕಲ್ಪನೆಗಳು ಮತ್ತು ಪ್ರತಿಮೆಗಳು, ಭಕ್ತಿಧರ್ಮದ ಕಾವ್ಯಮಯವೂ ರಸಮಯವೂ ಆದ ಆಧ್ಯಾತ್ಮಿಕತೆ–ಇವು ಪ್ರಾದೇಶಿಕ ಸಾಹಿತ್ಯಗಳಿಗೆ ಹುಟ್ಟಿನಿಂದಲೂ ಸ್ಫೂರ್ತಿಯಿತ್ತವು. ಸಂಸ್ಕೃತ ಭಾಷೆಯ ಸಾಹಿತ್ಯವು ಅಕಸ್ಮಾತ್ತಾಗಿ ಕೊನೆಗೊಳ್ಳುವುದಿಲ್ಲ. ಇತ್ತೀಚಿನವರೆಗೂ ವಿಶೇಷತಃ ದಕ್ಷಿಣ ಭಾರತದಲ್ಲಿ ಅಭಿಜಾತ ಮಾದರಿಯ ಸಂಸ್ಕೃತ ಪದ್ಯಗಳನ್ನು ಬರೆಯುತ್ತ ಬರಲಾಗಿದೆ. ಅದು ಈಗಲೂ ಎಲ್ಲ ಬಗೆಯ ಪಾಂಡಿತ್ಯದ ಭಾಷೆಯೆನಿಸಿದೆ. ವಿಮರ್ಶಕಮನದ ಎಲ್ಲ ಗ್ರಂಥಗಳೂ ಹಳೆ ಮಾತಾದ ಈ ಸಂಸ್ಕೃತದ ಗದ್ಯದಲ್ಲಿವೆ. ಆದರೆ ಅದರಲ್ಲಿ ತ್ವರಿತ ಗತಿಯಿಂದ ಪ್ರತಿಭೆ ಆರುತ್ತ ಹೋಗಿ ಅದು ಒಣ ಕಟ್ಟಿಗೆಯಂತೆ ಕಠಿನವೂ ಭಾರವೂ ಕೃತಕವೂ ಆಗಿ ಪರಿಣಮಿಸಿದ್ದರಿಂದ ಅದೀಗ ಕೇವಲ ಪಾಂಡಿತ್ಯ ಬಲದಿಂದ ಬದುಕಿಕೊಂಡಿದೆ. ಪ್ರತಿ ಪ್ರಾಂತದಲ್ಲೂ ಹೆಚ್ಚು ಕಡಿಮೆ ಮೊದಲು ಅಥವಾ ಕಡೆಗೆ ಸ್ಥಳೀಯ ಭಾಷೆಗಳು ಸಾಹಿತ್ಯ ಗಾಂಭೀರ್ಯಕ್ಕೇರಿ ಕಾವ್ಯ ಕೃತಿಗಳಿಗೂ ಸಾಮಾನ್ಯ ಜನರ ಸಂಸ್ಕೃತಿಗೂ ಮಾಧ್ಯಮಗಳಾಗಿವೆ. ಸಂಸ್ಕೃತದಲ್ಲಿ ಜನಪ್ರಿಯ ಅಂಶಗಳಿಲ್ಲವೇ ಇಲ್ಲವೆಂದಲ್ಲವಾದರೂ ಅದು ಸಾರತಃ ಅತ್ಯುತ್ತಮ ಅರ್ಥದಲ್ಲಿ ಒಂದು ಕುಬೇರಭಾಷೆ. ಉದಾತ್ತ ಮಹತ್ವಾಕಾಂಕ್ಷೆ, ಮಹಾರೀತಿ, ಉನ್ನತ ಆಧ್ಯಾತ್ಮಿಕ–ಬೌದ್ಧಿಕ–ನೈತಿಕ–ರಸಾತ್ಮಕ ಸಂಸ್ಕೃತಿ–ಇವು ಉಚ್ಚ ವರ್ಗಗಳಲ್ಲಿ ಈ ಭಾಷೆಯಿಂದ ಬೆಳೆದು ಧರ್ಮ, ಕಲೆ, ಸಮಾಜನೀತಿ, ನೀತಿತತ್ವ ಮೊದಲಾದ ಸಂಸ್ಕಾರ–ಸಂಪರ್ಕ–ಸಮ್ಮಿಶ್ರಣದ್ವಾರಾ ಭೂರಿ ಜನಕ್ಕೆ ತಲುಪುತ್ತ ಬಂದಿವೆ. ಬೌದ್ಧರ ಕೈಯಲ್ಲಿ ಪಾಳಿ ಇಂಥ ಸಂಸ್ಕಾರ ಸಂಪರ್ಕಕ್ಕೆ ನೇರವಾದ ಜನತಾಮಾಧ್ಯಮವಾಯಿತು. ಪ್ರಾದೇಶಿಕ ಭಾಷೆಗಳು ತದ್ವಿರುದ್ಧವಾಗಿ–ಸರ್ವಾರ್ಥತಃ ಜನಪ್ರಿಯ ಸಾಹಿತ್ಯವನ್ನು ರಚಿಸುತ್ತ ನಡೆದವು. ಸಂಸ್ಕೃತ ಲೇಖಕರು ಮೇಲಿನ ಅತ್ಯುಚ್ಚ ಜಾತಿಗಳಿಗೆ ಸೇರಿದವರಾಗಿದ್ದರು; ಅವರಲ್ಲೂ ವೈಶ್ಯರಿಗಿಂತ ಬ್ರಾಹ್ಮಣ–

ಕ್ಷತ್ರಿಯರೇ ಹೆಚ್ಚು. ಸಂಸ್ಕೃತ ವಾಙ್ಮಯದ ಅಂತ್ಯಾವಧಿಯಲ್ಲಿ ಅವರು ಬರೆಯುತ್ತಿದ್ದುದು ಕೇವಲ ಅತಿಸಂಸ್ಕೃತ ಉಚ್ಚರಿಗಾಗಿ. ಬೌದ್ಧ ಬರಹಗಾರರು ಕೂಡ ಹೆಚ್ಚಾಗಿ ತಾತ್ವಿಕರೂ ಭಿಕ್ಷುಗಳೂ ರಾಜರೂ ತಮಗಾಗಿ ಬರೆದುಕೊಳ್ಳುತ್ತಿದ್ದ–ಕೆಲವೊಮ್ಮೆ ಜನಕ್ಕಾಗಿ ಹೆಚ್ಚು ಜನಪ್ರಿಯ ರೂಪದಲ್ಲಿ ಬರೆಯುತ್ತಿದ್ದ ಪ್ರಚಾರಕರೂ ಆಗಿದ್ದರು. ಆದರೆ ಪ್ರಾದೇಶಿಕ ಭಾಷೆಗಳ ಕಾವ್ಯವು ನೇರವಾಗಿ ಜನದೆದೆಯಿಂದೆದ್ದಂಥದು. ಅದರ ಪ್ರಾದೇಶಿಕ ಭಾಷೆಗಳ ಕಾವ್ಯವು ನೇರವಾಗಿ ಜನದೆದೆಯಿಂದೆದ್ದಂಥದು. ಅದರ ಬರಹಗಾರರು ಅತ್ಯುಚ್ಚ ಬ್ರಾಹ್ಮಣ ಜಾತಿಯಿಂದ ಹಿಡಿದು ಅತಿನೀಚ ಶೂದ್ರ ಮತ್ತು ಜಾತಿಬಾಹಿರ ವರ್ಗಗಳಿಗೆ ಸೇರಿದವರಾಗಿದ್ದಾರೆ. ಕೇವಲ ಉರ್ದುವಿನಲ್ಲಿ ಹಾಗೂ ತಮಿಳಿನಲ್ಲಿರುವಂತೆ ದಕ್ಷಿಣ ಭಾರತದ ಭಾಷೆಗಳಲ್ಲಿ ಅಭಿಜಾತ ಸಂಸ್ಕೃತ ವಾಙ್ಮಯದ ಸಮಕಾಲೀನವಾದ ಉಚ್ಛ್ರಾಯ ದಶೆ ಕಂಡು ಬರುತ್ತದೆ. ತತ್ಫಲವಾಗಿ ಅವು ಸ್ವತಂತ್ರ ಅಥವಾ ಅರೆ ಸ್ವತಂತ್ರ ದಕ್ಷಿಣ ರಾಜಸ್ಥಾನಗಳ ಆಶ್ರಯದಲ್ಲಿ ಅನಂತರದಲ್ಲೂ ಅಭಿಜಾತ್ಯ ಅಥವಾ ಪಾಂಡಿತ್ಯದ ಮನೋಧರ್ಮ ಮತ್ತು ಅಭ್ಯಾಸಗಳ ಪ್ರಭಾವವನ್ನು ಉಳಿಸಿಕೊಂಡು ಬೆಳೆದವು. ಆದರೆ ಇಲ್ಲಿಯೂ ಶಿವಶರಣರ ಹಾಗೂ ವೈಷ್ಣವ ಆಳ್ವಾರರ ಹಾಡುಗಳಲ್ಲಿರುವಂತಹ ಜನಪ್ರಿಯ ಅಂಶಗಳು ಸಾಕಷ್ಟು ತುಂಬಿಕೊಂಡಿವೆ. ಈ ಕ್ಷೇತ್ರ ಬಹಳ ವಿಸ್ತಾರವಾದದ್ದು. ಆದುದರಿಂದ ಅದನ್ನು ಇಡಿಯಾಗಿ ತಿಳಿಯುವುದೂ ಕಷ್ಟ, ತ್ವರಿತಗತಿಯಿಂದ ಅದನ್ನು ಅವಲೋಕಿಸುವುದೂ ಕಷ್ಟ. ಆದರೆ ಅದರ ಸ್ವರೂಪ ಮತ್ತು ಬೆಲೆಗಳ ಬಗ್ಗೆ ಏನನ್ನಾದರೂ ಹೇಳಲೇಬೇಕು. ಹಾಗೆ ಹೇಳಿದಲ್ಲಿ ಭಾರತೀಯ ಸಂಸ್ಕೃತಿಯು ತನ್ನ ಪರಿಸೀಮಿತ ಮತ್ತು ಅವನತ ಎಂದು ಹೇಳಬಹುದಾದ ಅವಧಿಯಲ್ಲೂ ಎಷ್ಟರ ಮಟ್ಟಿಗೆ ಜೀವನಾಧಾಯಕವೂ ಸತತವಾಗಿ ರಚನಾತ್ಮಕವೂ ಆಗಿ ಉಳಿಯಿತೆಂಬುದು ಗೊತ್ತಾಗುತ್ತದೆ.

ವೇದೋಪನಿಷತ್ತುಗಳಿಂದ ಸಂಸ್ಕೃತ ವಾಙ್ಮಯವು ಆರಂಭವಾಗಿರುವಂತೆ ಈ ಅರ್ವಾಚೀನ ಸಾಹಿತ್ಯಗಳು ಸಾಧುಸಂತರ ಹಾಗೂ ಭಕ್ತ–ಭೂಮಾನುಭಾವಿಗಳ ಸ್ಫೂರ್ತಿಪದ್ಯಗಳಿಂದ ಆರಂಭವಾಗಿವೆ. ಏಕೆಂದರೆ, ಭಾರತದಲ್ಲಿ ಯಾವಾಗಲೂ ಆಧ್ಯಾತ್ಮಿಕ ಚಳವಳವೇ ಎಲ್ಲದಕ್ಕೂ ಆಕರವಾಗಿದೆ; ಅಥವಾ ಹೊಸ ಕಲ್ಪನೆ ಹಾಗೂ ಸಾಧನೆಗಳಿಗೆ ಅದು ರೂಪುದಾಳುವ ಪ್ರಚೋದನೆ ಕೊಟ್ಟಿದೆ, ರಾಷ್ಟ್ರದ ಜೀವನದಲ್ಲಿ ಬದಲಾವಣೆ ತೋರಲು ಹಾದಿಹಾಕಿಕೊಟ್ಟಿದೆ. ಇಂದಿಗೆ ಪೂರ್ವದ ಅರ್ವಾಚೀನ ಅವಧಿಯಲ್ಲಿ ಈ ಬಣ್ಣವೇ ಭಾರತದ ಅನೇಕ ಭಾಷೆಗಳ ರಚನಾತ್ಮಕ ಚಟುವಟಿಕೆಯಲ್ಲಿ ಎದ್ದು ಕಾಣುತ್ತದೆ. ಹೀಗಾಗಲು ಜನತೆಯ ಹೃನ್ಮನಗಳಿಗೆ ಈ ಮಾದರಿಯ ಪದ್ಯವೇ ಅತಿ ನಿಕಟವೆನಿಸಿದ್ದು ಕಾರಣ. ಯಾವುದಾದರೊಂದು ಕೃತಿ ಪ್ರಧಾನವಾಗಿ ಧಾರ್ಮಿಕೇತರವಾಗಿದ್ದಾಗಲೂ ಧರ್ಮಪ್ರವೃತ್ತಿಯು ಅದರಲ್ಲಿ ಪ್ರವೇಶಿಸಿ ಅದಕ್ಕೆ ತನ್ನ ಒಂದು ಚೌಕಟ್ಟನ್ನು ಮಾಡಿಕೊಡುತ್ತ ಬಂದಿದೆ. ಅಂಥ ಚೌಕಟ್ಟು ಒಂದೇ ಕೃತಿಯ ದೃಷ್ಟಿಕೋನದ ಅಂಗವಾಗಿಯೋ ಎದುರುಕಾಣುವ ಉದ್ದೇಶವಾಗಿಯೋ ನಿಂತದ್ದುಂಟು.

ತನ್ನದೇ ಆದ ಕ್ಷೇತ್ರದಲ್ಲಿ ಈ ಪದ್ಯಪ್ರಸ್ಥಾನವು ತನ್ನ ವೈಪುಲ್ಯ, ಕಾವ್ಯಗುಣ, ನಿರರ್ಗಳ ರಸಧಾರೆ ಹಾಗೂ ಭಾವಗೀತ ಕೌಶಲಗಳ ಐಕ್ಯಗಳಿಂದ ಉಪಮಾತೀತವಾಗಿದೆ. ಭಕ್ತಿಭಾವದ ಪ್ರಾಮಾಣಿಕತೆಯೊಂದೇ ಈ ಉಚ್ಚರಸಮುಖವನ್ನು ರಚಿಸಲು ಸಾಕಾಗದೆಂಬುದು ಅದೇಕಾಲದ ಕ್ರೈಸ್ತ ಯುರೋಪಿನ ಈ ತರದ ಪದ್ಯ ಸಾಹಿತ್ಯವನ್ನು ನೋಡಿದರೆ ಗೊತ್ತಾಗುತ್ತದೆ. ಅದಕ್ಕೆ ಸಮೃದ್ಧವೂ ಗಭೀರವೂ ಆದ ಆಧ್ಯಾತ್ಮಿಕ ಸಂಸ್ಕೃತಿಬೇಕು. ಈ ಸಾಹಿತ್ಯದ ಇನ್ನೊಂದು ಭಾಗವು ರಾಮಾಯಣ–ಮಹಾಭಾರತಗಳ ಕತೆಗಳ ನವ್ಯಕಾವ್ಯರೂಪಗಳ ಮೂಲಕ ಅಥವಾ ಹಳೆಯ ಪುರಾಣಕಥೆಗಳನ್ನಾಧರಿಸಿದ ಶೃಂಗಾರ ಸಾಹಸಮಯ ಕಥನಗಳ ಮೂಲಕ ಪ್ರಾಚೀನಸಂಸ್ಕೃತಿಯ ಸಾರವನ್ನು ಜನಪ್ರಿಯ ಭಾಷೆಗಳಲ್ಲಿ ಒಡಮೂಡಿಸಿತು. ಇಲ್ಲಿಯೂ ಅತ್ಯುನ್ನತ ಪ್ರತಿಭೆಯನ್ನು ಅದಕ್ಕೆ ಸ್ವಲ್ಪ ಕಡಿಮೆಯೆನಿಸಿದರೂ ಸಾಕಷ್ಟು ಎತ್ತರದ ಇನ್ನಿತರ ಪ್ರತಿಭಾವತಾರಗಳನ್ನೂ ನಾವು ಕಾಣಬಹುದು. ಇವಲ್ಲದೆ ಮೂರನೆಯ ಬಗೆಯೂ ಒಂದಿದೆ. ಅದು ಜನತೆಯ ಧಾರ್ಮಿಕ ನಂಬಿಗೆಗಳನ್ನೂ ಭಾವನೆಗಳನ್ನೂ ಸ್ಪಷ್ಟವಾಗಿ ನಮ್ಮೆದುರಿಡುತ್ತದೆ; ಆಸ್ಥಾನ, ನಗರ, ಗ್ರಾಮ, ಗ್ರಾಮಕಗಳ ಹಾಗೂ ಒಡೆಯ, ಒಕ್ಕಲು, ವ್ಯಾಪಾರಿ, ಕಸಬುದಾರರ ಬಾಳನ್ನು ಚೆನ್ನಾಗಿ ಚಿತ್ರಿಸಿಡುತ್ತದೆ. ಪ್ರಾದೇಶಿಕ ಭಾಷೆಗಳಲ್ಲಿ ನಡೆದ ಕಾರ್ಯವು ಮೇಲೆ ಹೇಳಿದ ಒಂದಲ್ಲಾ ಒಂದು ಶೀರ್ಷಿಕೆಯಲ್ಲಿ ಗೃಹೀತವಾಗುತ್ತದೆ. ಆದರೆ ಅದರಲ್ಲಿ ವೈವಿಧ್ಯವೂ ಇದೆ. ಮಹಾರಾಷ್ಟ್ರದ ರಾಮದಾಸರ ಧಾರ್ಮಿಕ–ನೈತಿಕ ಹಾಗೂ ರಾಜಕೀಯ ಪದ್ಯಗಳು; ತಮಿಳು ಸಂತ ತಿರುವಳ್ಳವರ್ ಬರೆದ ಮಹಾಯೋಜನೆಯುಳ್ಳ, ಮಹಾಕಲ್ಪನಾನಾವಿನ್ಯಾಸವುಳ್ಳ ಹಾಗೂ ಮಹಾಬಂಧವುಳ್ಳ ಸುಭಾಷಿತಗಳು ಅವಕ್ಕೆ ನಿದರ್ಶನಗಳು ಒಂದೆರಡು ಪ್ರಾದೇಶಿಕ ಭಾಷೆಗಳಲ್ಲಿ ಶುದ್ಧ ಐಹಿಕ ಸ್ಫೂರ್ತಿಯಿಂದೆದ್ದ ಸಾಕಷ್ಟು ಭಾವಗೀತಿಕಾಸೌಂದರ್ಯವುಳ್ಳ ಅರ್ವಾಚೀನ ಶೃಂಗಾರ ಪದ್ಯಗಳೂ ಇವೆ. ಪ್ರಾದೇಶಿಕ ಜನತೆಗಳ ಈ ಎಲ್ಲ ಕೃತಿಗಳಲ್ಲಿ ಅದೇ ಸಂಸ್ಕೃತಿ ಭಿನ್ನ ಭಿನ್ನ ರೂಪಗಳಲ್ಲಿ ಪ್ರಕಟವಾಗಿದೆ; ಆದರೆ ಅವುಗಳಲ್ಲಿ ಪ್ರತಿಯೊಂದೂ ತನ್ನ ವಿಶಿಷ್ಟ ಪ್ರಾದೇಶಿಕ ಲಕ್ಷಣಗಳಿಂದಲೂ ಮನೋಧರ್ಮದಿಂದಲೂ ಕೃತಿರಚನೆ ಮಾಡಿರುವುದು ಈ ಒಂದೊಂದು ಸುಂದರ ಸಚೇತನ ಸಾಹಿತ್ಯಕ್ಕೂ ವಿಶಿಷ್ಟ ಮುದ್ರೆಯನ್ನೂ ಐಕ್ಯಗತವಾದ ಸಂಪನ್ನ ವೈವಿಧ್ಯವನ್ನೂ ದೊರಕಿಸಿಕೊಟ್ಟಿದೆ.

ಹೀಗೆ ಮನೋಧರ್ಮದ ವೈವಿಧ್ಯದ ದೆಸೆಯಿಂದ ವೈಷ್ಣವಕಾವ್ಯವು ಬೇರೆ ಬೇರೆ ಪ್ರಾಂತಗಳಲ್ಲಿ ಅತ್ಯಂತ ಭಿನ್ನ ಭಿನ್ನ ಕಲಾಸ್ವರೂಪಗಳನ್ನು ತಳೆದಿದೆ. ಮೊದಲನೆಯದಾಗಿ ಪುರಾಣಗಳು ನಿರ್ಮಿಸಿದ ಮಾನಸಿಕ ಸಂಕೇತಗಳ ಬಳಕೆ ಬಂದಿದೆ; ಇದು ಬಂಗಾಳದಲ್ಲಿ ಪರಿಪೂರ್ಣವಾಗಿ ಕಲಾಕಾರವೆತ್ತಿತು ಮತ್ತು ದೀರ್ಘಕಾಲದ ಪರಂಪರೆಯಾಗಿ ಪರಿಣಮಿಸಿತು. ಅಲ್ಲಿ ರಾಧಾಕೃಷ್ಣರ ಭಾವ ಜೀವನದ ಶೃಂಗಾರವೃತ್ತದಲ್ಲಿ ಆತ್ಮದ ದೇವರ ಬಯಕೆಯನ್ನು ಸಾಂಕೇತಿಕ ಆಕಾರದಲ್ಲಿ ನಿಲ್ಲಿಸಲಾಗಿದೆ. ಮಾನವನಲ್ಲಿಯ ಜೀವ ಅಥವಾ ಪ್ರಾಕೃತಿಕ ಆತ್ಮವು ಅಲ್ಲಿ ಪ್ರೇಮದ ಮೂಲಕ ದಿವ್ಯಾತ್ಮನನ್ನು ಅರಸುತ್ತದೆ;

ಅವನ ಸೌಂದರ್ಯದಿಂದ ಬದ್ಧವಾಗಿ, ಅದಕ್ಕೆ ವಶವಾಗಿ, ಆತನ ಮಾಯಕದ ಮುರಲಿಯಿಂದ ಆಕೃಷ್ಟವಾಗಿ, ಈ ಒಂದೇ ಒಂದು ಹುಚ್ಚು ಹಿಡಿಸುವ ಭಾವಾವೇಶಕ್ಕಾಗಿ ಬಾಳಿನ ಎಲ್ಲ ಜಾಗೃತಿಯನ್ನೂ ಕರ್ತವ್ಯಗಳನ್ನೂ ಅದು ದೂರಕ್ಕೆ ಎಸೆಯುತ್ತದೆ: ಈ ಏಣಿಯನ್ನೇರುವಾಗ ಅದು ಮೊದಲು ಸಮಾಗಮಾನಂದದ ಬಯಕೆಯನ್ನು ತಾಳಿ, ಬಳಿಕ ವಿಯೋಗ ತಾಪವನ್ನು ಅನುಭವಿಸಿ ದೇವರ ಬಗ್ಗೆ ಮಾನವಸತ್ವವು ನಡೆಸುವ ಪ್ರೇಮಲೀಲೆಯೆನಿಸುವ ನಿತ್ಯದ ಪ್ರೇಮ ತಪಸ್ಸು ಮತ್ತು ಪುನರ್ಮಿಲನಗಳಲ್ಲಿ ಸಾಗುತ್ತದೆ. ಅಲ್ಲಿ ಒಂದು ಸುಪ್ರತಿಷ್ಠಿತ ಚೌಕಟ್ಟೂ ಅನುಕ್ರಮವೂ ಸೂಕ್ಷ್ಮವಾಗಿ ಸರಳವಾದ ಭಾವಗೀತಲಯವೂ ಹೃದಯಸ್ಪರ್ಶಿಯೂ ಕೆಲವೊಮ್ಮೆ ಅತ್ಯಂತ ಸುಂದರವೂ ಆದ ಪಾರಂಪರಿಕ ಬಂಧವಿದೆ. ಈ ಸಮೃದ್ಧ ಭಾವಗೀತಸ್ವರೂಪವು ಬಂಗಾಳಿಯನ್ನು ಬಳಸಿದ ಮೊಟ್ಟಮೊದಲಿನ ಇಬ್ಬರು ಕವಿಗಳ ಪ್ರತಿಭೆಯಿಂದ ಪೂರ್ಣತೆವೆತ್ತು ಜನಿಸಿತು; ಅವರೇ ಪದ–ಪಂಕ್ತಿಗಳ ರಚನೆಯಲ್ಲಿ ಪರಿಪೂರ್ಣ ಕಲಾವಿದನೆನಿಸಿದ ವಿದ್ಯಾಪತಿ ಮತ್ತು ಅತ್ಯಂತ ಮಧುರವೂ ಹೃದಯವೇಧಕವೂ ಆದ ಚೆನ್ನುಡಿಯ ಪ್ರೇಮ ಗೀತಕಾರ ಚಂಡೀದಾಸ. ಇಲ್ಲಿ ಉಕ್ತ ಸಂಕೇತವು ಮಾನವಭಾವಾವೇಶದ ಅತಿ ಸ್ಥೂಲ ಮೂರ್ತ ಸ್ವರೂಪದಲ್ಲಿ ಸುಸಂಗತವಾಗಿ ಉಳಿದುಕೊಂಡಿದೆ. ಆದುದರಿಂದ ಹಲವರು ಈ ಪ್ರೇಮಗೀತಗಳು ಬರಿಯ ಪ್ರೇಮಗೀತೆಗಳಷ್ಟೇ, ಭಗವದ್ವಿಷಯಕವಾದವಲ್ಲ ಎನ್ನುತ್ತಾರೆ; ಆದರೆ ಚೈತನ್ಯಸಂಪ್ರದಾಯಕ್ಕೆ ಸೇರಿದ ಭಕ್ತ ಕವಿಗಳು ಆ ಆಕೃತಿಗಳನ್ನೇ ಬಳಸಿರುವುದರಿಂದ ಮೇಲಿನ ಆರೋಪ ನಿರಾಧಾರವಾಗುತ್ತದೆ. ಸಂಕೇತಾಂತರ್ಗತವಾದ ಎಲ್ಲ ಆಧ್ಯಾತ್ಮಿಕ ಅನುಭೂತಿಯೂ ಸ್ಫೂರ್ತಿಸಂಪನ್ನ ಪ್ರವಾದಿಯಾದ ಚೈತನ್ಯನಲ್ಲಿ ರೂಹುವಡೆದಿತ್ತು. ದಿವ್ಯಪ್ರೇಮದ ಆನಂದಾವತಾರವೆನಿಸಿದ ಆತನ ಉಪದೇಶದಲ್ಲಿ ಆಧ್ಯಾತ್ಮಿಕ ತತ್ವಜ್ಞಾನವು ಸುಸ್ಪಷ್ಟ ರೂಪದಲ್ಲಿ ಒಡಮೂಡಿದೆ. ಆತನ ಅನುಯಾಯಿಗಳು ಮೊದಲ ಗೀತಕಾರರ ಪರಂಪರೆಯನ್ನು ಮುಂಬರಿಸಿದರು. ಇವರು ಪ್ರತಿಭೆಯಲ್ಲಿ ಅವರಿಗೆ ಎರಡನೆಯವರಾಗಿದ್ದರೂ ಸ್ವರೂಪದಲ್ಲಿ ಸದಾ ಸುಂದರವೂ ವಸ್ತುವಿನಲ್ಲಿ ಅನೇಕ ವೇಳೆ ಆಳವೂ ಎದೆಗದಡುವಂಥದೂ ಆದ ಮಹಾಪದ್ಯರಾಶಿಯನ್ನು ಬಿಟ್ಟುಹೋಗಿದ್ದಾರೆ. ರಜಪೂತ ರಾಣಿ ಮೀರಾಬಾಯಿಯ ಸರ್ವಾಂಗ ಸುಂದರ ಭಾವಗೀತಗಳು ಇನ್ನೊಂದು ಮಾದರಿಯವು. ಅವುಗಳಲ್ಲಿ ಕೃಷ್ಣ ಸಂಕೇತದ ಪ್ರತಿಮೆಗಳನ್ನು ಇನ್ನೂ ಹೆಚ್ಚು ನೇರವಾಗಿ ಪ್ರೇಮಗೀತ ಮುದ್ರಿಕೆಗೆ ಇಳಿಸಿ ಗೀತಕರ್ತ್ರಿಯು ತನ್ನ ಆತ್ಮವು ಸ್ವಪ್ರಿಯನಾದ ದಿವ್ಯಾತ್ಮನ ಬೆಂಬತ್ತಿ ಹೋಗುವುದನ್ನು ಚಿತ್ರಿಸಿದ್ದಾಳೆ. ಬಂಗಾಳಿ ಕಾವ್ಯದಲ್ಲಿ ಕವಿಗೆ ಆ ವೈಯಕ್ತಿಕ ಸಂಬಂಧವುಳ್ಳ ಸಾಂಕೇತಿಕ ರೂಪಕದ ವಾಕ್‌ಶೈಲಿ ಪ್ರಧಾನವಾಗಿದೆ: ಇಲ್ಲಿಯಾದರೋ ಕವಿಯ ಒಂದು ವ್ಯಕ್ತಿವಿಶಿಷ್ಟ ದಾಳಿಯು ಭಾವನೆಗೆ ಒಂದು ವಿಲಕ್ಷಣವಾದ ಆಳವನ್ನು ಒದಗಿಸಿಕೊಡುತ್ತದೆ. ತನ್ನನ್ನೇ ಕೃಷ್ಣಪತ್ನಿಯೆಂದು ಪ್ರತಿಮಿಸಿಕೊಂಡ ದಾಕ್ಷಿಣಾತ್ಯ ಕವಿಯೊಬ್ಬಳಲ್ಲಿ ಇದು ಇನ್ನೂ ನೇರವಾದ ಸ್ವರೂಪವನ್ನು ತಾಳಿದೆ. ಈ ಬಗೆಯ ವೈಷ್ಣವ ಧರ್ಮ ಹಾಗೂ ಕಾವ್ಯಗಳ ವಿಲಕ್ಷಣ ಶಕ್ತಿಯಿರುವುದು

ಮಾನವ ಭಾವನೆಗಳೆಲ್ಲವನ್ನೂ ದೇವೋನ್ಮುಖಗೊಳಿಸುವುದರಲ್ಲಿ; ಅವುಗಳಲ್ಲೆಲ್ಲಾ ಅನುರಾಗವು ಅತ್ಯಂತ ಗಭೀರ ಹಾಗೂ ಮನೋಹರವೆಂದು ಗಣಿಸಿ ಅದನ್ನೇ ಬಳಸಿಕೊಳ್ಳಲಾಗಿದೆ. ಭಕ್ತಿಧರ್ಮ ಬಲಿಷ್ಠವಾಗಿ ಬೆಳೆದ ಎಲ್ಲೆಡೆಯಲ್ಲೂ ಈ ಕಲ್ಪನೆ ಕಂಡುಬಂದರೂ ಭಾರತೀಯ ಕವಿಗಳಲ್ಲಿ ಕಂಡು ಬರುವಷ್ಟು ಪ್ರಾಮಾಣಿಕವಾಗಿಯೂ ಸಮರ್ಥವಾಗಿಯೂ ಅದನ್ನು ಇನ್ನೆಲ್ಲಿಯೂ ಬಳಸಲಾಗಿಲ್ಲ.

ಮಿಕ್ಕ ವೈಷ್ಣವ ಪದ್ಯವು ಕೃಷ್ಣಸಂಕೇತವನ್ನು ಬಳಸಿಕೊಂಡಿಲ್ಲ; ಅದು ವಿಷ್ಣುವನ್ನೇ ನೇರವಾದ ಭಕ್ತಭಾಷೆಯಲ್ಲಿ ಸಂಬೋಧಿಸುತ್ತದೆ ಅಥವಾ ಕೆಲವೊಮ್ಮೆ ರಾಮಾವತಾರದ ಸುತ್ತ ಹರಿಯುತ್ತದೆ. ತುಕಾರಾಮನ ಗೀತಗಳು ಇದರ ಅತ್ಯುತ್ತಮ ಮಾದರಿಗಳು. ಬಂಗಾಳಿ ವೈಷ್ಣವ ಪದ್ಯವು ಹೆಚ್ಚಾಗಿ ಬುದ್ಧಿಗಮ್ಯ ವಿಚಾರಗಳನ್ನುಳಿದು ಭಾವನಿರ್ಭರ ವರ್ಣನೆ, ಭಾವೋದ್ರೇಕದ ಐಂದ್ರಿಯಿಕ ರೂಪಕೋಕ್ತಿ ಮತ್ತು ಭಾವನಾಗಾಂಭೀರ್ಯಗಳನ್ನೇ ಅವಲಂಬಿಸುತ್ತದೆ. ಹಾಗಲ್ಲದೆ ಮರಾಠ ಪದ್ಯವು ಮೊದಲಿನಿಂದಲೂ ಬಲಿಷ್ಠವಾದ ಬೌದ್ಧಿಕ ಗತಿಯನ್ನು ಹಿಡಿದಿದೆ. ಮೊಟ್ಟಮೊದಲಿನ ಮರಾಠಿ ಕವಿ ಏಕಕಾಲದಲ್ಲಿ ಭಕ್ತ, ಯೋಗಿ ಮತ್ತು ಚಿಂತಕ. ರಾಷ್ಟ್ರೋದಯ, ರಾಷ್ಟ್ರಜಾಗೃತಿಗಳ ಒಡನೆ ಸಂಬಂಧಿಸಿದ ರಾಮದಾಸ–ಕೃತಿ–ರಾಶಿಯು ಭಾವಗೀತದ ಸ್ವರಭಾರಕ್ಕೆ ಏರಿಸಿದ ಧಾರ್ಮಿಕ–ನೈತಿಕ ವಿಚಾರವಾಹಿನಿಯಾಗಿದೆ. ಭಕ್ತಹೃದಯಲ್ಲೇಳುವ ವಿಚಾರದ ಹೃತ್ಪ್ರವೇಶಿಯಾದ ಸತ್ಯ ಹಾಗೂ ನಿಷ್ಠೆಗಳೇ ತುಕಾರಾಮನ ಗೀತಗಳ ಸಾಮರ್ಥ್ಯ ಮತ್ತು ಶಕ್ತಿ. ಆತನ ಧಾಟಿಯನ್ನು ಸುದೀರ್ಘ ಕವಿ ಸಂತತಿ ಮುಂಬರಿಸಿಕೊಂಡು ಹೋಯಿತು ಮತ್ತು ಅವರ ಕೃತಿಗಳು ಮರಾಠಿ ಪದ್ಯಸಾಹಿತ್ಯದ ಬಹುಭಾಗವನ್ನು ಆಕ್ರಮಿಸಿದೆ. ಕಬೀರನ ಪದ್ಯಕಾವ್ಯದಲ್ಲಿ ಅದೇ ಮಾದರಿಯು ಹೆಚ್ಚು ಹಗುರವೂ ಉನ್ನತ ಸ್ವರ–ಭಾರಸಂಪನ್ನವೂ ಆಗಿ ಸಾಗುತ್ತದೆ. ಮಹಮದೀಯ ಇತಿಹಾಸಾವಧಿಯ ಅಂತ್ಯದಲ್ಲಿ ಬಂಗಾಳದಲ್ಲಿ ಉದಯಿಸಿದ ರಾಮಪ್ರಸಾದರು ದಿವ್ಯಮಾತೆಯನ್ನು ಉದ್ದೇಶಿಸಿ ಬರೆದ ಗೀತಗಳಲ್ಲಿ ನಿಷ್ಠಾನಿರ್ಭರ ಭಕ್ತಿಯನ್ನು ಅದೇಮೇರೆಗೆ ಧಾರ್ಮಿಕ ವಿಚಾರದ ಹಲವು ಮಡು ಮತ್ತು ಭಂಗಿಗಳೊಡನೆ ಎರಕಹೊಯ್ಯಲಾಗಿದೆ: ಜೊತೆಗೆ ಕಲ್ಪನಾಶಕ್ತಿಯನ್ನು ತನ್ನ ಸ್ಫುಟ ಪಕ್ಷವಿಸ್ಫಾಲನದಿಂದ ಎಲ್ಲ ಪರಿಚಿತ ಪದಾರ್ಥಗಳನ್ನೂ ಉಚಿತವೂ ಅರ್ಥಗರ್ಭಿತವೂ ಆದ ಪ್ರತಿಮೆಗಳನ್ನಾಗಿ ಮಾರ್ಪಡಿಸುತ್ತದೆ; ಮತ್ತು ಅಲ್ಲಿ ಭಾವನೆಯ ಗಂಭೀರ ಸ್ವಯಂಭೂತಿಯೂ ಅಳವಟ್ಟಿದೆ. ದಕ್ಷಿಣದ ಶೈವಕವಿಗಳಲ್ಲಿ ಅನೇಕ ಸಲ ಗಭೀರತರವಾದ ತಾತ್ವಿಕ ವಾಣಿಯು ಭಕ್ತಿಯ ಧಾಟಿಯುಲ್ಲಿ ಸಾಮರಸ್ಯಹೊಂದಿದ್ದು ಕಾಣುತ್ತದೆ; ಮೊದಲಿನ ದಶೆಯು ಸಂಸ್ಕೃತಪದ್ಯದಲ್ಲಿರುವಂತೆ ಇಲ್ಲಿಯೂ ಬಳಕೆಯ ಸಚೇತನ ಪದಸಂಹತಿಗಳೂ ಪ್ರತಿಮೆಗಳೂ ಅದನ್ನು ಸಜೀವಗೊಳಿಸಿ ನಿಲ್ಲಿಸಿವೆ. ಉತ್ತರದಲ್ಲಿ ಉನ್ನತ ವೈದಾಂತಿಕ ಆಧ್ಯಾತ್ಮಿಕತೆಯು ಸೂರದಾಸನ ಹಿಂದಿ ಪದ್ಯದಲ್ಲಿ ಪುನರ್ನವತೆ ತಳೆಯುತ್ತದೆ ಮತ್ತು ನಾನಕನನ್ನೂ ಇತರ ಶೀಖ ಗುರುಗಳನ್ನೂ ಹುರಿದುಂಬಿಸುತ್ತದೆ. ಇರ್ಭಾಸಿರ

ಕಾಲಮಾನವು ತಯಾರಿಸಿ ಪೂರ್ಣತೆಗೊಳಿಸಿದ ಹಳ ನಾಗರಿಕತೆಯ ಆಧ್ಯಾತ್ಮಿಕ ಸಂಸ್ಕೃತಿಯು ಈ ಎಲ್ಲ ಜನಾಂಗಗಳ ಹೃದಯವನ್ನು ಹೊನಲಾಗಿ ಹೊಕ್ಕು ದಾಳಿಮಾಡಿ, ಹೊಸ ಮಹಾಸಾಹಿತ್ಯಗಳಿಗೆ ಜನ್ಮವಿತ್ತು ಉದ್ದಕ್ಕೂ ತನ್ನ ಮಹಾಧ್ವನಿ ಅವುಗಳ ಮಾರ್ಗಕ್ರಮೇಣದಲ್ಲಿ ಕೇಳಿಸುವಂತೆ ಮಾಡಿದೆ.

ಈ ಕಾಲದ ಕಥನ ಕವನಗಳು ಅಷ್ಟು ಚಮತ್ಕಾರದವಾಗಿಲ್ಲ. ಅವುಗಳಲ್ಲಿ ಕೆಲವೇ ದೊಡ್ಡ ಇಲ್ಲವೆ ಪ್ರಸಿದ್ಧ ಕೃತಿಗಳಿವೆ. ಬಹುಸಂಖ್ಯ ಪ್ರಾದೇಶಿಕ ಭಾಷೆಗಳು ಮಹಾಭಾರತದ ಇಡಿ ಮುಖ್ಯ ಕಥೆಯನ್ನು–ಅದಕ್ಕೂ ಹೆಚ್ಚಾಗಿ ರಾಮಾಯಣದ ಕಥೆಯನ್ನು ಜನಪ್ರಿಯ ಮಾತಿನಲ್ಲಿ ಹೇಳುವುದು ಸಾಂಸ್ಕೃತಿಕ ಅವಶ್ಯಕತೆಗಳೆಂದು ತಿಳಿದವು. ಬಂಗಾಳದಲ್ಲಿ ಕಾಶೀರಾಮನ ಮಹಾಭಾರತವಿದೆ. ಸುಪ್ರಸನ್ನ ಅಭಿಜಾತ ಶೈಲಿಯಲ್ಲಿ ಕಾಶೀರಾಮ ಹಳ ಪುರಾಣಮಹಾಕಾವ್ಯದ ಸಾರವಷ್ಟನ್ನು ಪುನರ್ವಚಿಸಿದ್ದಾನೆ. ಕೃತ್ತಿವಾಸನ ರಾಮಾಯಣವು ಬಂಗಾಳಿ ನೆಲದ ಓಜಸ್ಸಿಗೆ ಹೆಚ್ಚು ಯುಕ್ತವಾಗಿ ಸಾಗಿದೆ, ಅನುರೂಪವಾಗಿ ರಚಿತವಾಗಿದೆ. ಈ ಎರಡೂ ಪುರಾಣ ಮಹಾಕಾವ್ಯದ ಶೈಲಿಯಲ್ಲಿಲ್ಲ; ಆದರೂ ಅವುಗಳಲ್ಲಿ ಸರಳ ಕವಿಕೌಶಲವೂ ವೇಗವಾದ ಕಥನದ ರಭಸಶಕ್ತಿಯೂ ಕಂಡುಬರುತ್ತವೆ. ಹಳಗತೆಯನ್ನು ಯಶಸ್ವಿಯಾಗಿ–ಅಷ್ಟೇ ಸಚೇತನವಾಗಿ ಪುನಾರಚಿಸಿದ ಅರ್ವಾಚೀನ ಕವಿಗಳು ಇಬ್ಬರು: ತಮಿಳು ಕವಿ ಕಂಬನ್ ಒಂದು ಮೂಲ ಪುರಾಣ ಮಹಾಕಾವ್ಯವನ್ನು ವಸ್ತುವನ್ನಾಗಿ ಮಾಡಿಕೊಂಡ; ತುಳಸೀದಾಸನು ತನ್ನ ಸುಪ್ರಸಿದ್ಧ ಹಿಂದಿ ರಾಮಾಯಣದಲ್ಲಿ ವಿಶಿಷ್ಟವಾದ ಪ್ರಭಾವಿಕ ಭಾವಗೀತಗಾಂಭೀರ್ಯವನ್ನೂ ರಂಜನಾಸಂಪನ್ನತೆಯನ್ನೂ ಪುರಾಣಮಹಾಕಾವ್ಯದ ಕಲ್ಪಕತೆಯ ಉದಾತ್ತತೆಯನ್ನೂ ತೋರಿಸಿದ್ದಾನೆ ಅದು ಏಕ ಕಾಲದಲ್ಲಿ ದಿವ್ಯಾವತಾರದ ಕತೆಯೂ ಧಾರ್ಮಿಕ ಭಕ್ತಿಯ ಧೀರ್ಘಮಂತ್ರವೂ ಆಗಿದೆ. ಒಬ್ಬ ಸಾಹೇತ್ಯೇತಿಹಾಸಕಾರನಾದ ಆಂಗ್ಲನು ತುಲಸೀರಾಮಾಯಣ ವಾಲ್ಮೀಕಿ ರಾಮಾಯಣಕ್ಕೂ ಹಿರಿದು ಎಂದದ್ದುಂಟು. ಆ ಮಾತು ಅತಿಶಯ ಉಕ್ತಿಯದು. ಏಕೆಂದರೆ, ಮಹತ್ತಮದ ಮೇಲೆ ಮತ್ತಾವ ಮಹತ್ತರ ವಸ್ತು ಇರಲು ಸಾಧ್ಯ? ಆದರೂ ತುಲಸೀದಾಸ, ಕಂಬನ್ನರ ಬಗ್ಗೆ ಅಂಥ ಉದ್ಗಾರ ಹೊರಟದ್ದು ಆ ಕವಿಗಳ ಅಪಾರ ಶಕ್ತಿಗೂ ತನ್ನ ಸಂಸ್ಕೃತಿ–ಸುಜ್ಞಾನಗಳ ವ್ಯಾಪ್ತಿ ಕಿರಿದಾಗುತ್ತಿದ್ದ ಕಾಲದಲ್ಲೂ ಭಾರತೀಯ ಪ್ರತಿಭೆಯು ಅವನತವಾಗಲಿಲ್ಲ ಎಂಬುದಕ್ಕೂ ಸಾಕ್ಷಿಯಾಗಬಲ್ಲುದಾಗಿದೆ. ಈ ಪದ್ಯಪ್ರಪಂಚವು ಭಾವತೀವ್ರತೆಯಿಂದ ಶೋಭಿಸುತ್ತಿರುವುದು ಕೆಲಮಟ್ಟಿಗೆ ಅದು ಕಳೆದುಕೊಂಡ ಹಳೆಯ ಕಾಲಕ್ಕೆ ಸಹಜವಾದ ಔನ್ನತ್ಯ ಹಾಗೂ ವಿಸ್ತಾರಗಳ ಬದಲು ಪಡೆದ ಪರಿಹಾರ ಎಂದುಕೊಳ್ಳಬಹುದು.

ಇಂಥ ಕಥಾಲೇಖನವು ಪುರಾಣಮಹಾಕಾವ್ಯಗಳ ಕಾಲದಿಂದಲೂ ನಡೆದು ಬಂದದ್ದು. ಇನ್ನೊಂದು ಬಗೆಯ ಕಥಾಲೇಖನವು ಸ್ವರೂಪದಲ್ಲಿಯೂ ರಸೋದ್ದೇಶದಲ್ಲಿಯೂ ಕಾಳಿದಾಸ, ಭಾರವಿ, ಮಾಘರ ಮಾದರಿಯನ್ನು ಅನುಸರಿಸಿದೆ.

ಹಳೆಯ ಪದ್ಯದಂತೆ ಅವುಗಳಲ್ಲಿ ಕೆಲವು ಮಹಾಭಾರತದ ಉಪಾಖ್ಯಾನಗಳನ್ನು ಅಥವಾ ಇತರ ಪುರಾಣ ಕಥೆಗಳನ್ನು ವಸ್ತುಗಳನ್ನಾಗಿ ತೆಗೆದುಕೊಳ್ಳಲಾಗಿದೆ; ಆದರೆ ಅವುಗಳಲ್ಲಿ ಪುರಾಣಮಹಾಕಾವ್ಯದ ರೀತಿಯೂ ಇಲ್ಲ, ಆಭಿಜಾತ್ಯವೂ ಇಲ್ಲ. ಅವುಗಳ ಸ್ಫೂರ್ತಿಯೇನೋ ಪುರಾಣದ ಸ್ಫೂರ್ತಿಯನ್ನು ಹೋಲುತ್ತದೆ; ಆದರೆ ಧಾಟಿಯು ಜನಪ್ರಿಯ ರಂಜನ–ಸಾಹಿತ್ಯದ ಸಡಿಲ, ಸುಲಭ ಬೆಳವಣಿಗೆಯಂತೆ ಸಾಗಿದೆ. ಇಂಥವು ಪಶ್ಚಿಮ ಭಾರತದಲ್ಲಿ ಬಹಳ. ಗುಜರಾತಿ ಕವಿಗಳಲ್ಲಿ ಅತಿ ಗಣ್ಯನಾದ ಪ್ರೇಮಾನಂದನ ಪದ್ಯದಲ್ಲಿ ಉಕ್ತಗುಣವಿದೆ. ಬಂಗಾಳದಲ್ಲಿ ಮತ್ತೊಂದು ಬಗೆಯ ಆರ್ಧರಂಜಕ ಹಾಗೂ ಅರ್ಧವಾಸ್ತವ ಎನಿಸುವ ಕಥನ ಸಾಹಿತ್ಯವಿದೆ. ಅದು ಸಮಕಾಲೀನ ಧಾರ್ಮಿಕ ಮನದ ಹಾಗೂ ಜೀವನದ ಮತ್ತು ದೃಶ್ಯಗಳ ಕಾವ್ಯಮಯ ಚಿತ್ರವನ್ನು ನಮ್ಮೆದುರಿಡುತ್ತದೆ; ತನ್ನ ರಸೋದ್ದೇಶದಲ್ಲಿ ರಜಪೂತ ವರ್ಣಚಿತ್ರಕಲೆಯ ಧ್ಯೇಯದ ಬಾಹ್ಯಾಂಶವನ್ನು ಹೆಚ್ಚಾಗಿ ಅದು ಹೋಲುತ್ತದೆ. ಚೈತನ್ಯನ ಜೀವನಚರಿತ್ರೆಯನ್ನು ಸರಳ ನಿರಾಭರಣ ರಂಜನ–ಪದ್ಯಶೈಲಿಯಲ್ಲಿ ಬರೆಯಲಾಗಿದೆ. ಅದರ ನೈಪುಣ್ಯ ಮತ್ತು ಪ್ರಾಮಾಣಿಕತೆ ಮೆಚ್ಚಲರ್ಹವಾಗಿದೆ. ಅದರ ಕಾವ್ಯ–ಸ್ವರೂಪವು ನ್ಯೂನವಾಗಿದ್ದರೂ ಅದೊಂದು ಸಮಕಾಲಿನ ಧಾರ್ಮಿಕ ಚಳವಳದ ಹುಟ್ಟು ಹಾಗೂ ನೆಲಗಟ್ಟುಗಳ ಇತಿಹಾಸದ ವಿಶಿಷ್ಟರೂಪದ ಕಾವ್ಯದಾನವಾಗಿದೆ. ಅಭಿಜಾತವೆನಿಸಿದ ಇತರ ಎರಡು ಪದ್ಯಗಳು ದುರ್ಗೆ ಅಥವಾ ಚಂಡಿಯ ಮಹಾತ್ಮ್ಯವನ್ನು ಮೆರೆಯಿಸುತ್ತವೆ. ಚಂಡಿಯು ಶಿವನ ಶಕ್ತಿ. ಮುಕುಂದ ರಾಮನ "ಚಂಡಿಯು" ಮಹಾಕಾವ್ಯ–ಸೌಂದರ್ಯವುಳ್ಳ ಶುದ್ಧ ರಂಜನಪದ್ಯ. ಅದು ತನ್ನ ಜನಪ್ರಿಯ ಕತೆಯ ಕಟ್ಟಿನಲ್ಲಿ ಜನಜೀವನದ ಜೀವಂತ ಚಿತ್ರವನ್ನು ಕೊಟ್ಟರೆ, ಭಾರತಚಂದ್ರನ "ಆನಂದಮಂಗಲವು" ತನ್ನ ಮೊದಲ ಭಾಗದಲ್ಲಿ ಅವನ ಮಾನವಜೀವನಕ್ಕೆ ಸದೃಶವಾಗಿ ಬಂಗಾಳಿ ಹಳ್ಳಿಗ ಊಹಿಸಿಕೊಳ್ಳುವ ಹಾಗೆ ದೇವತೆಗಳ ಪುರಾಣ ಕತೆಗಳನ್ನೂ ಎರಡನೆಯ ಭಾಗದಲ್ಲಿ ಒಂದು ಶೃಂಗಾರ ಸಾಹಸ ಕಥೆಯನ್ನೂ ಮೂರನೆಯದರಲ್ಲಿ ಜಹಾಂಗೀರನ ಕಾಲದ ಒಂದು ಐತಿಹಾಸಿಕ ಘಟನೆಯನ್ನೂ ಚಿತ್ರಿಸುತ್ತದೆ. ಆನಂದಮಂಗಲದಲ್ಲಿಯ ಭಿನ್ನವಸ್ತುಗಳೆಲ್ಲವೂ ಒಂದೇ ಒಂದಾದ ಪ್ರಧಾನ ರಸೋದ್ದೇಶಕ್ಕೆ ಸಾಧಕಗಳಾಗಿವೆ. ಅದರಲ್ಲಿ ಕಲ್ಪಕತೆಯ ಏರಿಕೆ ಇಲ್ಲವಾದರೂ ವರ್ಣನೆಯ ಅದ್ವಿತೀಯ ಸ್ಫುಟತೆಯೂ, ಗಣ್ಯವೂ ತೃಪ್ತಿಕರವೂ ಆದ ಪದಸಂಹತಿಯೂ ಕಂಡುಬರುತ್ತವೆ. ಈ ಮಹಾಕಾವ್ಯ, ರಂಜನಕಾವ್ಯ, ನೀತಿಕಾವ್ಯಗಳಿಗೆ ರಾಮದಾಸರ ಕೃತಿಗಳೂ ತಿರುವಳ್ಳವರರ ಕುರಳ್ಳೂ ಮುಖ್ಯ ಪ್ರತಿನಿಧಿಗಳೆನಿಸಿವೆ. ತಾತ್ವಿಕ ಹಾಗೂ ಭಕ್ತಿಭಾವದ ಗೀತಗಳು ಸುಸಂಸ್ಕೃತರಿಗಾಗಿ ಬರೆದವೂ ಅಲ್ಲ. ಕೆಲವು ಅಪವಾದಗಳಿದ್ದರೂ ಅವೆಲ್ಲ ಹೆಚ್ಚಾಗಿ ಜನಪ್ರಿಯ ಸಂಸ್ಕೃತಿಯ ಪ್ರಕಾಶನಗಳು. ತುಳಸೀ ರಾಮಾಯಣ, ರಾಮಪ್ರಸಾದನ ಗೀತೆಗಳು, ಪರಿವ್ರಾಜಕ ವಿಷ್ಣುಭಕ್ತರಾದ ಬೌಲರ ಗೀತಗಳು, ರಾಮದಾಸ–ತುಕಾರಾಮರ ಪದ್ಯಗಳು, ತಿರುವಳ್ಳವರರ ವಾಕ್ಯಗಳು ಮತ್ತು ಅವ್ವಯಿಕವಿಯ (ಕವಯಿತ್ರಿಯ) ಕೃತಿಗಳು ಹಾಗೂ ದಕ್ಷಿಣ ಭಾರತದ ಸಂತರ–

ಆಳ್ವಾರರ ಸ್ಫೂರ್ತಭಾವಗೀತಗಳು ಸಾರ್ವಜನಿಕ. ಅವುಗಳ ಭಾವನೆಗಳು ಜನಜೀವನದಲ್ಲಿ ಆಳವಾಗಿ ಪ್ರವೇಶಿಸಿದವು.

ವಾಙ್ಮಯದ ಮೇಲೆ ಇಷ್ಟು ದೀರ್ಘವಾಗಿ ನಾನು ಬರೆಯಲು ವಾಙ್ಮಯವೆಂಬುದು ಪೂರ್ಣವಾಗಿ ಅಲ್ಲವಾದರೂ ಒಂದು ಜನತೆಯ ಸಂಸ್ಕೃತಿಯ ಅತ್ಯಂತ ವಿವಿಧವೂ ವಿಸ್ತಾರವೂ ಆದ ಅಭಿಲೇಖವಾಗಿರುವುದೇ ಕಾರಣ. ಕಡೆಯ ಪಕ್ಷ ಮೂರು ಸಾವಿರ ವರ್ಷಗಳಲ್ಲಿ ನಡೆದ ಈ ತೆರನಾದ ರಚನೆ ಹಾಗೂ ಮಹತ್ವದ ಚಳವಳಗಳು ನಿಜವಾಗಿಯೂ ಒಂದು ಮಹಾಸಂಸ್ಕೃತಿಯ ಸಾಕ್ಷಿಗಳಲ್ಲವೆ! ಕೊನೆಯ ಅವಧಿಯೇನೋ ನಿಃಸಂದೇಹವಾಗಿ ಕ್ರಮಿಕ ಅವನತಿಯನ್ನು ತೋರಿಸುತ್ತದೆ; ಆದರೂ ಅವನತಿಯ ವೈಭವವನ್ನೂ ಅದರಲ್ಲೂ ಧಾರ್ಮಿಕ, ಸಾಹಿತ್ಯಿಕ ರಚನೆಯ ಸತತ ಪ್ರಾಣಶಕ್ತಿಯನ್ನೂ ಒಬ್ಬ ನೋಡಿ ಬೆರಗಾಗಬಹುದಲ್ಲವೆ! ಇನ್ನೇನು ಕೊನೆಗೊಳ್ಳುತ್ತದೆ ಎನ್ನುವಂತಹ ಕಾಲದಲ್ಲಿಯೂ ಈ ಸಂಸ್ಕೃತಿ ಮೊಟ್ಟಮೊದಲು ಕೈಗೆ ಸಿಕ್ಕಿದ ಸಂದರ್ಭವನ್ನು ಬಳಸಿಕೊಂಡು ಮತ್ತೆ ಪುನರುಜ್ಜೀವನ ಹೊಂದಿದೆ, ಮತ್ತೊಂದು ಯುಗಚಕ್ರವನ್ನಾರಂಭಿಸಿದೆ–ಮೊದಲಿನಂತೆಯೇ ಬಹಳ ಕಾಲ ಉಳಿದ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಚಟುವಟಿಕೆ, ಸಾಹಿತ್ಯ ಹಾಗೂ ವರ್ಣಚಿತ್ರಕಲೆ ಎಂಬ ಮೂರರಲ್ಲಿ. ಆದರೆ ಆಗಲೇ ಪುನರ್ನವೀಕರಣವು ಹಿಂದೆ ಭಾರತವು ಮಹಾನಾಯಕ ರಾಷ್ಟ್ರವಾಗಿ ಬದುಕಿ ನಡೆಸಿದಂತಹ ಜೀವನ–ಸಂಸ್ಕೃತಿಗಳ ಎಲ್ಲ ವಿಧದ ಕಾರ್ಯಕ್ಷೇತ್ರಗಳನ್ನೂ ವ್ಯಾಪಿಸುವುದು ಖಂಡಿತವೆಂಬ ಚಿಹ್ನವನ್ನು ತೋರಿಸುತ್ತಿದೆ.

## ಪದಾರ್ಥಕೋಶ

| | |
|---|---|
| ಅನುಭೂತಿ | Realisation |
| ಅತೀಂದ್ರಿಯ | Supersensuous |
| ಅತಿಭೌತ | Metaphysical |
| ಅಪರುಚಿ | Bad taste |
| ಅತಿಮಾನಸ | Supramental |
| ಅಜ್ಜಿಕತೆ | Fairy Tale, legend |
| ಅಲಂಕಾರ | Figure of Speech |
| ಆಖ್ಯಾಯಿಕೆ | A connected story or narrative |
| ಆನುಭಾವಿಕ, ಯೌಗಿಕ | Mystic |
| ಆವಿದ್ಧ ಪ್ರಯೋಗ | Tragedy |
| ಇಂದ್ರಿಯ | Sense organ |
| ಇಂದ್ರಿಯ ಪ್ರಜ್ಞೆ | Sense, Sentience, Sensuous Consciousness |
| ಐಂದ್ರಿಯಿಕ | Sensuous |
| ಉಪಾಖ್ಯಾನ | An episode as distinguished from the main story |
| ಓಜಸ್ಸು | Vigour as a quality of style |
| ಔಪನಿವೇಶಿಕ | Colonial |
| ಕಲ್ಪಕತೆ, ಕಲ್ಪನಾಶಕ್ತಿ | Imagination |
| ಕಲ್ಪನೆ, ಭಾವ | Idea |
| ಕುಬೇರ | Rich, aristocratic |
| ಕಾಂತ | Brilliant |
| ಕಾಂತಿ | Brilliance as a quality of style |
| ಕಾರಕ | Factor |
| ಕಾಲ್ಪನಿಕ | Imaginary |
| ಕೂಟಸ್ಥ | The Supreme Soul, standing at the top |

| | |
|---|---|
| ಗತಿ | Movement as an aspect of com position |
| ಗೌಣ | Subordinate |
| ಚೇತಸ್ಸು, ಪಾವಕ ಪ್ರಜ್ಞೆ ಚೈತಸಿಕ ಪ್ರಜ್ಞೆ | Psychic (Consciousness, force) |
| ಜೀವನಾದಾಯಕ | Life-giving |
| ಜೈವಿಕ, ಪ್ರಾಣನಿಷ್ಠ | Vital (consciousness, force) |
| ಜ್ಯೋತಿರ್ಮಯ ಪ್ರಜ್ಞೆ | Illumined mind or conciouness |
| ತರ್ಕಪ್ರಜ್ಞೆ, ವೈಚಾರಿಕಪ್ರಜ್ಞೆ | Rational consciousness |
| ತತ್ವಶಾಸ್ತ್ರ | Philosophy |
| ತಾತ್ವಿಕ | Philosophical |
| ದರ್ಶನ | Intuitive vision |
| ದಿವ್ಯ ಅಲೌಕಿಕ, | Divine; Supernatural, |
| ಅತಿಮಾನುಷ | Super human |
| ದ್ರಷ್ಟಾರ | Seer |
| ಧರ್ಮ | Religion |
| ಧ್ವನಿ, ವ್ಯಂಜನೆ | Power of suggestion, Hint |
| ನಾಟಕ | Drama |
| ನಾಟ್ಯ | The science or art of acting or dancing |
| ನಿಗಮನಿಸು | Conclude |
| ನಿರ್ಮಾಪಕ, ರಚನಾತ್ಮಕ | Constructive |
| ನೀತಿ, ನೈತಿಕ | Morality, moral |
| ಪಂಕ್ತ್ಯಂತಲಯ | Cadence |
| ಪರಂಜ್ಯೋತಿ ಸ್ವರೂಪ | Profoundest Illumined Truth |
| ಪರಮಾನಂದ, ಚಿತ್ಸುಖ | Ecstacy |
| ಪರ್ಯಾಪ್ತ | Full, complete, sufficient |
| ಪಳವಾತು | Vedic Literature |
| ಪುರಾಣ | Ancient myth, a class of sacred writings |
| ಪುರಾಣ ಮಹಾಕಾವ್ಯ | Primary Epic |

| | |
|---|---|
| ಪ್ರಕಾಶನ, ಅಭಿವ್ಯಕ್ತಿ | Manifestation, expression |
| ಪ್ರಕ್ರಿಯೆ | Process (manner, method) |
| ಪ್ರತಿಭೆ, ಪ್ರಾತಿಭ | Poet's Power, intuitive |
| ಪ್ರತಿಮೆ, ಪ್ರತಿಮಾ ಸಂಪುಟ<br>ಪ್ರತೀಕ, ಸಂಕೇತ<br>ಸಂಕೇತ ಸಂಪುಟ | Image, imagery |
| ಪ್ರತ್ಯಭಿಜ್ಞೆ | Recognition |
| ಪ್ರಮೇಯ; ಅಪ್ರಮೇಯ | Measurable, immeasurable, in finite |
| ಪ್ರಸಾದ | Clarity as a quality of style |
| ಪ್ರಜ್ಞಾಸ್ಥಲ | Plane of Consciousness |
| ಪ್ರಾಣಿಗಳಿಗೆ ಸಂಬಂಧಿಸಿದ ಕಟ್ಟುಕತೆಗಳು | Animal Stories |
| ಭಂಗಿ | A wavy turn |
| ಬಂಧ | Diction |
| ಬುದ್ಧಿ, ಬೌದ್ಧಿಕ | Intellect, intellectual |
| ಭಣಿತಿ | Turn of expression |
| ಭಾವಕತ್ವ | Ideative Mind |
| ಭಾವನೆ | Emotion |
| ಭೂತ | Past; A physical thing |
| ಭೌತಪ್ರಜ್ಞೆ | Physical consciousness, world consciousness |
| ಭೌತಿಕ | Physical |
| ಮತ | A religious sect |
| ಮನಸ್ಕತೆ, ಮಾನಸಪ್ರಜ್ಞೆ | Mentality, mental conscious ness |
| ಮಹಾಕಾವ್ಯ | Secondary or Classical Epic |
| ಮಾಧುರ್ಯ | Sweetness as a quality of style |
| ಮಾರ್ದವ, ಸುಕುಮಾರತೆ | Softness, tenderness as a quality of style |
| ಮುದ್ರೆ | Name of certain position of the fingers in acting |

| | |
|---|---|
| ಯುಗ | Age, period, generation |
| ಯೋಗಾರ್ಥ | Mystic sense |
| ರಚನೆ | Composition |
| ರಂಜಕ, ರಂಜನ | Pleasing, entertaining |
| ರಸಪ್ರಜ್ಞೆ | Aesthetic Consciousness |
| ರಸ | Sentiment |
| ರೂಪ, ಸ್ವರೂಪ, | Form, image, sign, a metaphori cal |
| ರೂಪಕ | Expression; a drama |
| ರೂಪಕ ಪದ್ಧತಿ | A system of imagery or figures |
| ಲಕ್ಷಣ | Characteristic; Definition |
| ಲಕ್ಷಣೆ | Indication, the power of signi -fying indirectly |
| ಲಯಸ್ಪಂದ | Vibration of rhythms |
| ವಸ್ತು | Subject-matter, Plot |
| ವಾಸ್ತುಶಿಲ್ಪ | Architecture |
| ವಿಕಲ್ಪ | Alternative |
| ವಿಭೂತಿ | Wealth; Superhuman power |
| ಶೃಂಗಾರ ಸಾಹಸ | Romantic |
| ಶೈಲಿ | Style |
| ಷಡಂಗ | Six works auxiliary to the Vedas |
| ಷಡ್ದರ್ಶನ | The six systems of Indian phi -losophy |
| ಸಂವಿಧಾನ | Construction of a plot |
| ಸಂಸ್ಕೃತ | Refined, polished, perfected |
| ಸಂಹತಿ, ಪದಸಂಹತಿ | Close union, phrase |
| ಸಮತೆ | Evenness as a quality of style, even balance of sound and sense |
| ಸುಕುಮಾರ ಪ್ರಯೋಗ | Tragi-comedy |
| ಸುಶ್ಲಿಷ್ಟತೆ | Suggestiveness of thought, Dig -nified and pleasing combination of sounds in diction |

| | |
|---|---|
| ಸ್ಫೂರ್ತಿ | Flashing to the mind, Poetical inspiration |
| ಸ್ವಯಂಭು | Self-born, Spontaneous, Self-existent |

# ಮುನ್ನುಡಿ

ಬ್ರಿಟಿಷ್ ಕೌನ್ಸಿಲಿನವರು ಆಂಗ್ಲಲೇಖಕರ ಮೇಲೆ ವಿದ್ವಾಂಸರಿಂದ ಬರೆಯಿಸಿದ ಅಮೂಲ್ಯ ವಿಮರ್ಶನಪುಸ್ತಿಕೆಗಳ ಅನುವಾದಮಾಲೆಯಲ್ಲಿ 'ಟೀ.ಎಸ್.ಈಲಿಯಟ್' ಮೊದಲನೆಯದು. 'ನವೋದಯ ಪ್ರಚಾರ ಪುಸ್ತಕಮಾಲೆ' ಇಲ್ಲಿಂದ ಇನ್ನೊಂದು ಪ್ರಗತಿಯ ಹೆಜ್ಜೆಯನ್ನು ಇಟ್ಟಿತೆಂದು ನಾನು ಭಾವಿಸುತ್ತೇನೆ. ಆಂಗ್ಲ ಕವಿ ಮತ್ತು ಲೇಖಕರ ವಿಚಾರ, ಸ್ಫೂರ್ತಿ, ತಂತ್ರಗಳಿಂದ ಪ್ರಭಾವಿತವಾದ ಕನ್ನಡ ಸಾಹಿತ್ಯಕ್ಕೆ ಆಂಗ್ಲ ವಿಮರ್ಶನ ಪದ್ಧತಿಯನ್ನು ಅಪ್ರತಿಮವಾಗಿ ಎತ್ತಿತೋರಿಸುವುದರ ಜತೆಗೆ ಆಯಾ ಕವಿಗಳ ಸರ್ವತೋಮುಖ ಪರಿಚಯವನ್ನು ಮಾಡಿಸುವುದೂ ನಮ್ಮ ಈ ಹೊಸ ಉದ್ಯಮದ ಧ್ಯೇಯವಾಗಿದೆ. ನಾವು ಆಂಗ್ಲ ಸಾಹಿತ್ಯಕ್ಕೆ ಚಿರಋಣಿಗಳಲ್ಲವೆ–ಹಿಂದಿನಿಂದಲೂ? ಅಷ್ಟೇ ಏಕೆ 'ನವ್ಯಕಾವ್ಯ'ವೆಂದು ಹೊಸದಾಗಿ ಆವಿರ್ಭವಿಸಿದ ಕನ್ನಡ ಕಾವ್ಯಪಂಥದಲ್ಲಿ ನಾವು ಕಾಣುವ ನೈರಾಶ್ಯ, ಎಟುಕದ ಯಾವುದೋ ಒಂದರ ಕುರಿತ ಕಾತರ, ನಮ್ಮ ಯುಗ ಧರ್ಮಕ್ಕೆ ಸಹಜವಾದ ವಸ್ತು–ಭಾವ ಪ್ರದರ್ಶನ, ಛಂದೋಬಂಧನದಿಂದ ವಿಮುಕ್ತತೆ, ಮನುಷ್ಯಚೇತನದ ಗಹನತರ ಸ್ತರಗಳ ತಡಹು–ಅಡಿಗ, ಶರ್ಮಾ, ಕಣವಿ ಮುಂತಾದ ನವ್ಯಕವಿಗಳ ಈಚಿನ ಕವಿತೆಗಳಲ್ಲಿ ಕಾಣುವ ಜೀವ ಸ್ಪಂದನವು, ನವ್ಯತೆಯು– ಹಾಪ್‌ಕಿನ್ಸ್, ಈಲಿಯಟ್, ಆಡೆನ್, ಸ್ಪೆಂಡರ್ ಮೊದಲಾದ ಆಂಗ್ಲಕವಿಗಳ ಸಂಪರ್ಕದಿಂದಲೆ ಸಾಧ್ಯವಾಯಿತೆನ್ನುವುದು ಕನ್ನಡದ ಗೌರವಕ್ಕೆ ಕುಂದಲ್ಲ. ನವ್ಯಕಾವ್ಯಕ್ಕೆ ಹಿಂದಿನ ರೊಮ್ಯಾಂಟಿಕ್ ಪರಂಪರೆಯಲ್ಲಿಯೂ ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ಥ್, ಮಿಲ್ಟನರ ಕಾವ್ಯದ ಆತ್ಮವು ಕನ್ನಡದ ಗೋಕಾಕ, ಬೇಂದ್ರೆ, ಪುಟ್ಟಪ್ಪ, ಪು.ತಿ.ನ. ಮತ್ತು ಬಿ.ಎಂ.ಶ್ರೀ, ಮಾಸ್ತಿಯವರ ಕೃತಿಗಳಲ್ಲಿ ಪಡಿನುಡಿಯುವುದನ್ನು ನಾವು ಕಾಣುತ್ತಿಲ್ಲವೆ? ಕಾವ್ಯವೊಂದೇ ಏನು ಕಾದಂಬರಿ, ಕಥೆ, ಪ್ರಬಂಧ, ವಿಮರ್ಶೆ ಮುಂತಾದ ಇತರ ಸಾಹಿತ್ಯ ಪ್ರಕಾರಗಳಿಗೂ ಆಂಗ್ಲಸಾಹಿತ್ಯದಿಂದ ಪುಷ್ಟಿ ಒದಗಿರುವುದನ್ನು ನಾವು ಒಪ್ಪಿಕೊಂಡಿರುವೆವು.

ಮದರಾಸಿನಲ್ಲಿರುವ ಬ್ರಿಟಿಷ್ ಕೌನ್ಸಿಲಿನ ಶಾಖೆಯ ಅಧಿಕಾರಿಗಳಾದ ಶ್ರೀ ಎಸ್.ಎಚ್.ಬೆಸ್ಟ್‌ರವರ ಉತ್ಸಾಹ ಪೂರ್ಣ ಪ್ರಚೋದನೆ ಮತ್ತು ಸಹಕಾರವನ್ನು ಸ್ಮರಿಸಬೇಕಾದುದು ನನ್ನ ಪ್ರಥಮ ಕರ್ತವ್ಯ. ಬ್ರಿಟಿಷ್ ಕೌನ್ಸಿಲ ಪರವಾಗಿ ನಮ್ಮ ಸಲಹೆಗಾರ–ಸಂಪಾದಕರಾಗಿ ನಿಯುಕ್ತರಾದ ಮದರಾಸು ವಿಶ್ವವಿದ್ಯಾನಿಲಯದ ಪ್ರೊ.ಮರಿಯಪ್ಪ ಭಟ್ಟರಿಗೂ 'ಟೀ.ಎಸ್.ಈಲಿಯಟ'ನ ಇಷ್ಟು ಸುಂದರ, ಖಚಿತ ಮತ್ತು ಅಮೂಲ್ಯ ಅನುವಾದನ್ನೊದಗಿಸಿದ ಪ್ರೊ.ಬಿ.ಎಚ್.ಶ್ರೀಧರ ಅವರಿಗೂ ನನ್ನ

ಕೃತಜ್ಞತೆ. ಅವರ ಮತ್ತು ಕನ್ನಡ ಕುಲರಸಿಕರ ಬೆಂಬಲವು ನಮಗಿದ್ದರೆ ನಮ್ಮ ಯೋಜನೆಗಳು ಫಲಿಸುವುವೆಂಬುದರಲ್ಲಿ ನಮಗೆ ಸಂದೇಹವಿಲ್ಲ.

ಕೊನೆಯದಾಗಿ, ನಮ್ಮ ನವೋದಯ ಪ್ರಚಾರ ಪುಸ್ತಕ ಮಾಲೆಯ ಆರ್ಥಿಕ ತಳಹದಿಯನ್ನು ಭದ್ರಗೊಳಿಸಲು ನೆರವಾದ 'ದಿ ಕೆನರಾ ಇಂಡಸ್ಟ್ರಿಯಲ್ ಎಂಡ್ ಬ್ಯಾಂಕಿಂಗ್ ಸಿಂಡಿಕೇಟಿನ' ಜನರಲ್ ಮ್ಯಾನೇಜರ ಶ್ರೀ ಟಿ.ಎ.ಪೈ, ಬಿ.ಕಾಮ್. ಎ.ಐ.ಐ.ಬಿ, ಎಫ್.ಆರ್.ಈ.ಎಸ್. (ಲಂಡನ್) ಇವರಿಗೆ ನಾವು ಮಾತ್ರವಲ್ಲದೆ ಕನ್ನಡಿಗರೆಲ್ಲರೂ ಉಪಕಾರಸ್ಮರಣೆ ಮಾಡುವರೆಂದು ನಮಗೆ ವಿಶ್ವಾಸವಿದೆ.

ಮೇ, ೬, ೧೯೫೭

**ಎಚ್.ಸುಂದರ ರಾವ್**

# I

೧೯೪೮ನೆಯ ಸೆಪ್ಟಂಬರ್ ೨೬ನೆಯ ದಿನ ಟೀ.ಎಸ್.ಈಲಿಯಟ್ ತಮ್ಮ ಷಷ್ಟ್ಯಬ್ದಿಯನ್ನು ಆಚರಿಸಿದರು. ಅವರು ಹುಟ್ಟಿದ ಹಾಗೂ ಹೋಗಿ ನೆಲಸಿದ ದೇಶಗಳಿಂದಲೂ ಯುರೋಪಿನಿಂದಲೂ ಜಗತ್ತಿನ ಇತರ ಎಲ್ಲ ಭಾಗಗಳಿಂದಲೂ ಬಂದ ಪ್ರಶಂಸೆಗಳು ಬದುಕಿರುವ ಆಂಗ್ಲಭಾಷಾ ಕವಿಗಳಲ್ಲಿ ಅವರು ಅಗ್ರಗಣ್ಯರೆಂದು ಸರ್ವರ ಮನ್ನಣೆಯಿದೆ ಎಂಬುದಕ್ಕೆ ಸಾಕ್ಷಿಯಾಗಿವೆ. ಹೀಗಿದ್ದರೂ ಮೊದಮೊದಲು ಬರೆದ ಅವರ ಕವನಗಳ ವಿಷಯವಾಗಿ ತೀವ್ರ ಭಿನ್ನಾಭಿಪ್ರಾಯವುಂಟಾಯಿತು. ಅವರ ಇತ್ತೀಚಿನ ಕೃತಿಯಾದ The Cock-tail Party ಎಂಬುದರ ಮೇಲೆ ಬಂದ ವಿಮರ್ಶೆಗಳನ್ನು ನೋಡಿದರೆ ಅವರ ಸತತವಾದ ಬೆಳವಣಿಗೆ ಹಾಗೂ ಬೌದ್ಧಿಕ ಉತ್ಕರ್ಷಗಳು ಈಗಲೂ ಅಪಾರ್ಥಕ್ಕೆ ಎಡೆಗೊಡುತ್ತಿವೆ.

ಕಾವ್ಯದೃಷ್ಟಿಯ ಪ್ರೇರಣೆಯ ನಿಯಾಮಕ ಶಕ್ತಿ ಎಷ್ಟೆಂಬುದನ್ನು ಈಲಿಯಟ್ಟರ ಸಾಹಿತ್ಯಿಕ ಜೀವನವು ಉದಾಹರಿಸುತ್ತದೆ. ಅಮೇರಿಕದ ಸಂಯುಕ್ತಸಂಸ್ಥಾನದ ಒಂದು ದೊಡ್ಡ ಉದ್ಯಮಕೇಂದ್ರವೆನಿಸಿದ ಸೇಂಟ್ ಲೂಯಿ ಮಿಸ್ಸೂರಿ ಎಂಬ ನಗರದಲ್ಲಿ ಅವರು ಹುಟ್ಟಿದರು. ಆ ನಗರದಲ್ಲಿ ಅವರ ಅಪ್ಪ ವ್ಯಾಪಾರಕ್ಷೇತ್ರದಲ್ಲಿ ಒಬ್ಬ ಗಣ್ಯರಾಗಿದ್ದರು. ಆದರೆ ಅವರ ತಂದೆ–ತಾಯಂದಿರ ಹಿರಿಯರು ಹಿಂದೆ ನ್ಯೂಇಂಗ್ಲೆಂಡ್ ಕುಟುಂಬಗಳಿಂದ ಬಂದು ನೆಲಸಿದವರು. ಆಂಡ್ರೂ ಈಲಿಯಟ್ ಎಂಬ ಅವರ ಹಿರಿಯನು ೧೬೭೦ರಲ್ಲಿ ಈಸ್ಟ್ ಕಾಕರ್ ಎಂಬ ಹಳ್ಳಿಯಿಂದ ಮಶಾಸುಶೆ (Massachusetts) ಎಂಬಲ್ಲಿಗೆ ಹೋದನು. ಮತ್ತು ಅವರ ತಾಯಿ ಐಜಾಕ್ ಸ್ಟೀರ್ನ್ಸ್ ಎಂಬವರ ಮಗಳು. ಐಜಾಕ್ ಸ್ಟೀರ್ನ್ಸ್ ೧೬೩೦ರಲ್ಲಿ ಮಶಾಸುಶೆ ಕೊಲ್ಲಿಯ ಉಪ ನಿವೇಶನದಲ್ಲಿ ಹೋಗಿ ನೆಲಸಿದವರಲ್ಲಿ ಮೊದಲಿಗರ ಗುಂಪಿಗೆ ಸೇರಿದವರು. ಅವರ ಪೂರ್ವಜರಲ್ಲಿ ಪ್ರಸಿದ್ಧರಾದ ಅನೇಕ ಪಂಡಿತರೂ ಪಾದರಿಗಳೂ ಸಾಹಿತಿಗಳೂ ಇದ್ದರು. ಅವರ ಮೊದಲ ಕವನಗಳಲ್ಲಿ ಬೋಸ್ಟನ್ ಬಂಧುಗಳ ಹಾಗೂ ಅಲ್ಲಿಯ ಶ್ರದ್ಧಾಪೂರ್ವಕವಾಗಿ ಬೌದ್ಧಿಕ ಬೆಳವಣಿಗೆಯಲ್ಲಿ ಆಸ್ಥೆಯಿಟ್ಟು, ತನ್ನ ಪ್ರತ್ಯೇಕತೆಯನ್ನು ಚೆನ್ನಾಗಿ ಕಾಯ್ದುಕೊಂಡು ಬಂದ, ಇಲ್ಲಿಯವರೆಗೂ ಅಮೇರಿಕದ ಶ್ರೀಮಂತ ಸಮಾಜವೆನ್ನಿಸಿಕೊಂಡು ಬಂದಿರುವ ಪ್ಯೂರಿಟನ್ ಜಾತಿಯ ಚಿಕ್ಕ ಸಮಾಜದ ವಿಷಯವಾಗಿ ಅನೇಕ ಚಿತ್ರಗಳು ದೊರಕುತ್ತವೆ. ಈಗೇನೋ ಆ ಸಮಾಜ ಬೋಸ್ಟನ್ ನಗರದಲ್ಲಿ ಗಣ್ಯವಾಗಿಲ್ಲ, ಹೀಗೇ ಉಳಕೊಂಡಿದೆ, ಅಷ್ಟೆ. ತಮ್ಮ ಕೊನೆಯ ಪದ್ಯವಾದ The Four Quartetsನಲ್ಲಿ ತಮ್ಮ ಕುಟುಂಬ ನೂರು ವರ್ಷಗಳ ಹಿಂದೆ ಬಿಟ್ಟುಬಂದ ಈಸ್ಟ್‌ಕಾಕರ್ ಎಂಬ ಹಳ್ಳಿಯನ್ನು ತಮ್ಮ The Dry Salvages ಎಂಬ ಕವನದಲ್ಲಿ ತಮ್ಮ ಬಾಲ್ಯದಲ್ಲಿ ತಮಗೆ ಪರಿಚಿತವಾದ ಮಸಾಶುಸೆ ತೀರವನ್ನು ಈಲಿಯಟ್ ಬಣ್ಣಿಸಿದ್ದಾರೆ.

ಈಲಿಯಟ್ಟರ ಕುಟುಂಬ ಪರಂಪರೆಯು ಅವರಿಗೆ ಹಾರ್ವರ್ಡಿನ ನೆಂಟನ್ನು ಉಂಟುಮಾಡಿತು. ಅವರ ವಿದ್ಯಾಭ್ಯಾಸ ಅಲ್ಲೇ ಆಯ್ತು. ಈಲಿಯಟ್ಟರ ಜೀವನದ ಪ್ರಾರಂಭದಶೆಯ ಕೆಲಬರಹಗಳೂ ಸಂಬಂಧಿಸಿದ ವಸ್ತುಗಳೂ ಈಗ ಹಾರ್ವರ್ಡಿನಲ್ಲಿವೆ. ಈ ಅತಿಪ್ರಸಿದ್ಧ ವಿಶ್ವವಿದ್ಯಾನಿಲಯದಲ್ಲಿ ಅವರು ನಾಲ್ಕು ವರ್ಷಗಳನ್ನು ಕಳೆದರು. ಅಲ್ಲಿ ಅವರು ವಿಶೇಷವಾಗಿ ತತ್ವಜ್ಞಾನದ ಅಭ್ಯಾಸದಲ್ಲಿ ಆಸಕ್ತರಾಗಿದ್ದರು. ೧೯೧೦ರಲ್ಲಿ ಅವರು ಸಾರ್ಬೋನಿಗೆ ಹೋದದ್ದು ಸಾಹಿತ್ಯ ಮತ್ತು ತತ್ವಜ್ಞಾನಗಳನ್ನು ಕಲಿಯಬೇಕೆಂದು; ಅನಂತರ ಮುಂದಿನ ಅಭ್ಯಾಸಕ್ಕಾಗಿ ಹಾರ್ವರ್ಡಿಗೆ ಹೋದದ್ದು. ಆ ಬಳಿಕ ಅವರು ಜರ್ಮನಿಯಲ್ಲಿಯೂ ಆಕ್ಸ್‌ಫರ್ಡಿನಲ್ಲಿಯೂ ಓದಿದರು. ೧೯೧೪–೧೮ರ ಯುದ್ಧಕಾಲದಲ್ಲಿ ಅವರು ಇಂಗ್ಲೆಂಡಿನಲ್ಲಿ ಶಾಲೋಪಾಧ್ಯಾಯರಾಗಿಯೂ, ಬ್ಯಾಂಕರ್ ಆಗಿಯೂ, ಅನಂತರ ಸಂಪಾದಕ–ಪ್ರಕಾಶಕರಾಗಿಯೂ, ಕೆಲಸಮಾಡುತ್ತಿದ್ದರು. ಈ ಅವಧಿಯಲ್ಲೇ ಅವರ ಕಾವ್ಯಕೃತಿಗಳು ವಿವಿಧ ಪತ್ರಿಕೆಗಳಲ್ಲಿ ಕಾಣಬಂದದ್ದು ಮತ್ತು ೧೯೧೭–೧೯೨೦ರ ನಡುವೆಯೇ ಅವು ಚಿಕ್ಕ ಹೊತ್ತಗೆಗಳಾಗಿ ಹೊರಬಿದ್ದದ್ದು. ಆದರೆ ಈಲಿಯಟ್ ಆಂಗ್ಲ ಕವನಪ್ರಪಂಚದಲ್ಲಿ ಅಗ್ರೇಸರರಾದದ್ದು ೧೯೨೨ರಲ್ಲಿ, ಅವರು The Waste Land ಎಂಬ ಕೃತಿಯನ್ನು ಪ್ರಕಟಿಸಿದ ಮೇಲೆಯೇ. ಈಗಲೂ ಅವರು ಈ ಸ್ಥಾನವನ್ನು ಉಳಿಸಿಕೊಂಡಿದ್ದಾರೆ. ೧೯೨೭ರಲ್ಲಿ ಅವರು ಬ್ರಿಟಿಷ್ ಪ್ರಜೆಗಳಾದರು ಮತ್ತು ಒಂದು ಪ್ರಬಂಧ ಸಂಕಲನದ ಮುನ್ನುಡಿಯಲ್ಲಿ ತಾವು ಸಾಹಿತ್ಯದಲ್ಲಿ ಅಭಿಜಾತಪಂಥದವರೆಂದೂ ರಾಜ್ಯ ಧರ್ಮದಲ್ಲಿ ರಾಜಪಕ್ಷೀಯರೆಂದೂ ಧರ್ಮದಲ್ಲಿ ಆಂಗ್ಲೋ–ಕ್ಯಾಥೋಲಿಕರೆಂದೂ ಸಾರಿದರು. ಈ ಹೇಳಿಕೆ ಈ ಯಾವ ಸಿದ್ಧಾಂತವನ್ನೂ ಗಣ್ಯವಾಗಿ ಎತ್ತಿ ಹಿಡಿಯದಿದ್ದ ಅಲ್ಲಿಯ ಸಾಹಿತಿ ಪ್ರಪಂಚದಲ್ಲಿ ಸ್ವಲ್ಪ ಗೊಂದಲವನ್ನುಂಟುಮಾಡಿತು.

ಮುಂದಿನ ದಶಕದಲ್ಲಿ ಈಲಿಯಟ್ ಕೆಲ ಗಣ್ಯ ಕಾವ್ಯವನ್ನು (ಕವಿತೆಗಳನ್ನು) ಪ್ರಕಟಿಸಿದರು; ಸಾಹಿತ್ಯ ಹಾಗೂ ಸಮಾಜಗಳಿಗೆ ಸಂಬಂಧಿಸಿದ ಅನೇಕ ಬಗೆಯ ವಿಷಯಗಳ ಮೇಲೆ ಬರೆದರು ಮತ್ತು ಭಾಷಣಮಾಡಿದರು; ಅಲ್ಲದೆ ತಾವು ಸಂಪಾದಿಸುತ್ತಿದ್ದ (The Criterion) ಎಂಬ ತ್ರೈಮಾಸಿಕದ ಮೂಲಕ ಸಾಹಿತ್ಯಪ್ರಪಂಚದ ಮೇಲೆ ತಕ್ಕಮಟ್ಟಿನ ಪ್ರಭಾವವನ್ನು ಬೀರಿದರು. ಯುದ್ಧಾನಂತರ ಬಹಳ ಜನ ಅವರ ಅತ್ಯುತ್ತಮ ಕೃತಿ(The Four Quartets) ಯನ್ನು ಪ್ರಕಟಿಸಿದರು ಮತ್ತು ರಂಗಕ್ಕಾಗಿ ನಾಟಕಗಳನ್ನು ಬರೆಯುತ್ತ ಬಂದರು. ಆದರೆ ೧೯೩೯ರಲ್ಲಿ ಅವರ ತ್ರೈಮಾಸಿಕದ ಪ್ರಕಾಶನ ನಿಂತುಹೋಯಿತು ಮತ್ತು ಮೊದಲಿಗಿಂತ ಅವರು ವಿಮರ್ಶೆ ಬರೆಯುವ ಪ್ರವೃತ್ತಿಯನ್ನು ಕಡಿಮೆಮಾಡಿದರು. ಆದರೂ ಅವರ ಪ್ರಮಾಣ ಪದವೂ ಕೀರ್ತಿಯೂ ಕ್ರಮೇಣ ಬೆಳೆಯಿತು. ೧೯೨೦ರ ಅವಧಿಯಲ್ಲಿ ಅವರ ಕೃತಿಗಳ ಪರಿಚಯವು ಚಿಕ್ಕ ಉತ್ಸಾಹಿ ವಿಶ್ವವಿದ್ಯಾನಿಲಯ–ವಿದ್ಯಾರ್ಥಿಗಳಿಗೆ ಮತ್ತು ಲಂಡನ್ನಿನ ತರುಣ ಸಾಹಿತಿಗಳ ತಲೆಮಾರಿಗೆ ಮಾತ್ರ ಪರಿಮಿತವಾಗಿತ್ತು. ಅನಂತರ ಮುಂದಿನ ದಶಕದಲ್ಲಿ ಕ್ರಮೇಣ

ಅವರನ್ನು ಸಾಹಿತ್ಯ ವೈಭವದ ಪಾರಂಪರಿಕ ಹಾಗೂ ಸಂಕುಚಿತಪಂಥೀಯ ಸಂರಕ್ಷಕರಿಂದ ಗ್ರಾಹ್ಯರೆಂಬ ಪದವಿ ಲಭ್ಯವಾಯ್ತು. ಈಗ ಕ್ಲಬ್ಬುಗಳ ಹಾಗೂ ಹೈಟೇಬಲ್ಸಿನ ಹಳೆಪರಾಕಿನವರೂ ಸಾಹಿತಿ ಸ್ತ್ರೀಯರೂ ಸಾಹಿತೀಯ ಪಾದ್ರಿವರ್ಗದವರೂ ಕೂಡ ಭಯ–ಭಕ್ತಿಯಿಂದ ನೋಡುತ್ತಿದ್ದರೆ ಬಹುಶಃ ಈ ಭಯ–ಭಕ್ತಿ ಅವರಿಗೆ ಸಂಕೋಚವುಂಟು ಮಾಡುತ್ತಿದ್ದೀತು. ಗೌರವಗಳಲ್ಲೆಲ್ಲಾ ಅತಿ ಹೆಚ್ಚಿನದೆಂದು ಎಲ್ಲರೂ ಆಶಿಸುವ Order of Merit ಎಂಬ ಬಿರುದನ್ನು ರಾಜರಿಂದಲೂ ೧೯೪೮ರ ನೊಬೆಲ್ ಸಾಹಿತ್ಯ ಪಾರಿತೋಷಕವನ್ನೂ ಅವರು ಪಡೆದರು. ಅವರ ಅತಿ ಇತ್ತೀಚಿನ ಕೃತಿಯೊಂದನ್ನು ಎಡಿನ್‌ಬರ್ಗಿನಲ್ಲಿ ನಡೆದ ೧೯೪೯ನೆ ವರ್ಷದ ಅಂತಾರಾಷ್ಟ್ರೀಯ ಉತ್ಸವದಲ್ಲಿ ಪ್ರಕಟಿಸಿದಾಗ ಸಭಿಕರಲ್ಲೊಬ್ಬ ಕೇಳುತ್ತಿದ್ದನಂತೆ: 'ಎಲ್ಲರ ಬಾಯಲ್ಲೂ ಕೇಳಿಬರುವ ಈಲಿಯಟ್ ಎಂದರೆ ಯಾರವ?' ಆದರೆ ಅಂಥ ಪ್ರಶ್ನೆ ಈಗ ಅರ್ಥಹೀನವಾಗಿದೆ, ಶುಷ್ಕಹಾಸ್ಯವೆನಿಸಿದೆ. ಸಾಮಾನ್ಯವಾಗಿ ಹೇಳುವುದಾದರೆ ಈಲಿಯಟ್ಟರ ಕೃತಿಗಳನ್ನು ಓದುವ ರೂಢಿಯಿಲ್ಲದೆಡೆಯಲ್ಲೂ ಈಗ ಅವರ ಹೆಸರು ರೂಢಿಗೆ ಬಂದುಬಿಟ್ಟಿದೆ. ಜೊತೆಗೆ, ಸಮಕಾಲೀನ ಸಾಹಿತ್ಯವೊಂದೇ ಕೊಡಬಲ್ಲುದಾದ ಪೌಷ್ಟಿಕಾಂಶವನ್ನು ಅವರ ಸಾಹಿತ್ಯಕೃತಿಗಳು ಸಾಹಿತ್ಯ ಪ್ರೇಮಿಗಳಿಗೂ ಸಾಹಿತಿಗಳಿಗೂ ಒದಗಿಸಿಕೊಡುತ್ತಿವೆ. ತಾವೇ ಸ್ವತಃ ಸಾಧಿಸಿದ ಹಾಗೂ ತಾವು ಅನ್ಯರಿಗೆ ಸಾಧಿಸಲು ಸಾಧ್ಯಮಾಡಿಕೊಟ್ಟ ಕೃತಿಗಳನ್ನು ಬರೆದದ್ದಕ್ಕಾಗಿ ಈಲಿಯಟ್ಟರಿಗೆ ಅವರೆಲ್ಲಾ ಕೃತಜ್ಞರಾಗಿದ್ದಾರೆ. ನಿಸರ್ಗದ ಮುಖಕ್ಕೆ ಕನ್ನಡಿ ಹಿಡಿಯುವುದೆಂದು ಸರ್ವಕವಿಶ್ರೇಷ್ಠನು ಹೇಳಿರುವಂತೆ ಅವರು ಈ ಯುಗದ ಅರ್ಥವನ್ನು ಅದಕ್ಕೆ ವ್ಯಾಖ್ಯಾನಿಸಿ ಹೇಳುವ ಕೆಲಸ ಮಾಡಿದ್ದಾರೆ. ಅಲ್ಲದೆ, ಮಲ್ಲಾರ್ಮೆಯ ವಾಕ್ಯವನ್ನುದ್ಧರಿಸಿ ಅವರೇ ತಮ್ಮ ಗುರಿಯೆಂದು ಸಾರಿದ ಪ್ರಕಾರ ಸ್ವಕುಲದ ಉಪಭಾಷೆಯನ್ನು ಶುದ್ಧೀಕರಿಸುವ ಮತ್ತು ಬಿಗಿಯಾದ ಮಾನದಂಡದಿಂದ ಅಳೆವ ಸಾಹಿತ್ಯ ಸೌಂದರ್ಯದ ಮಟ್ಟವನ್ನು ಕಾಯ್ದುಕೊಂಬ ಕಾರ್ಯವನ್ನೂ ಅವರು ನೆರವೇರಿಸಿದರು.

## II

ಈಲಿಯಟ್ಟರ ಪ್ರಾರಂಭಿಕ ಪದ್ಯಪುಂಜವು ಗಾದೆಯಂತಹ ಕಬ್ಬಿಣದ ಕಡಲೆಯ ಬಿಗಿಯಿಂದ ಬೋಸ್ಟನ್ ಮತ್ತು ಲಂಡನ್ನುಗಳಲ್ಲಿಯ ವಿನೀತ ಸಮಾಜದ ಚಿಕ್ಕ ಪುಟ್ಟ ಉತ್ಕಂಠೆ, ಸಾಮಾಜಿಕ ಗೊಂದಲಗೇಡು ಮತ್ತು ಬಹಳ ಜನರಿಗೆ ಗೊತ್ತಿಲ್ಲದ ಹಾಸಲುಗೇಡಿತನಗಳನ್ನು ಚಿತ್ರಿಸುತ್ತದೆ. ೧೯೧೪–೧೮ರ ಯುದ್ಧಾವಧಿಯಲ್ಲಿ ಅದನ್ನು ಹೊರಡಿಸಲಾಯ್ತು. ಅವರು ಪ್ರದರ್ಶಿಸುವ ಪ್ರಪಂಚವು ಹೆನ್ರಿ ಜೇಮ್ಸನ ಕಾದಂಬರಿಗಳಲ್ಲಿ ಕಂಡುಬರುವಂಥದು. ಅದರಲ್ಲಿ ಅತೃಪ್ತ ಗರತಿಯರು ತಮ್ಮ ಸ್ವಾಗತಾರ್ಹ–ಅನರ್ಹ ಅಭಿಪ್ರಾಯಗಳನನು ಒಳದನಿಯಲ್ಲಷ್ಟೇ ಹೇಳುತ್ತಾರೆ; ವಂಚಕ ವಿತ್ತವ್ಯವಹಾರಿಗಳೂ ಅಧಃಪತಿತ ಶ್ರೀಮಂತಕುಲವೂ ಸಾಮಾಜಿಕ ಲಾಭಗಳನ್ನು ಗಿಟ್ಟಿಸಿಕೊಳ್ಳುತ್ತಿರುತ್ತಾರೆ.

ಕಟ್ಟಕಡೆಗೆ ಲೆಕ್ಕಹಾಕಿದರೆ–

"ನಾನು ನನ್ನ ಬಾಳನ್ನು ಕಾಫೀ ಚಮಚಗಳಿಂದ ಅಳೆದು ಬಿಟ್ಟಿದ್ದೇನೆ" ಎಂದು ಕಂಡುಬರುವಂಥ ಪ್ರಪಂಚವದು.

ಕೈರೋದಲ್ಲಿ ಆರೋಗ್ಯ ಸುಧಾರಣೆಮಾಡಿಕೊಳ್ಳುತ್ತಿದ್ದಾಗ ತನಗೆ ಈಲಿಯಟ್ಟರ ಒಂದು ಕಿಬ್ಬೊತ್ತಿಗೆ ದೊರೆತದ್ದು ಎಷ್ಟು ಸಂತೋಷಕರವಾಯ್ತೆಂಬುದನ್ನು ಈ.ಎಂ.ಫಾಸ್ಟರ್ ತನ್ನ (Abinger Harvest ಎಂಬ) ಪ್ರಬಂಧ ಸಂಕಲನದಲ್ಲಿ ಹೇಳಿದ್ದಾನೆ:

"ಆ ರಾಕ್ಷಸತನದ ಭಯಂಕರ ಪ್ರಪಂಚದಲ್ಲಿ ಪ್ರತಿಕೂಲಾಭಿಪ್ರಾಯ ಸೂಚಿಸುವ ಮೂಕ ಸನ್ನೆಗಳನ್ನುಳಿದರೆ ಮತ್ತಾವುದು ಸಹ್ಯ ಎನಿಸೀತು? ಯುದ್ಧವೀರನೆಂದು ಹೇಳಿಕೊಂಡು ತನ್ನ ಪೂರ್ಣ ಪರಾಕ್ರಮವನ್ನು ಕೊಚ್ಚಿಕೊಂಡು ಆರ್ಮಡಿಲ್ಲೊ ಆರ್ಮಗೆಡ್ಡನನಿಗೆ 'ನಡೆಮುಂದೆ' ಎಂದು ಉಗ್ಗಡಿಸಿದಾತನು ಒಮ್ಮೆಲೇ ಧೂಲಿಪಾತಾಳಕ್ಕಿಳಿದುಹೋದನು. ಆದರೆ ಹೆಂಗಸರನ್ನು ದೂರಿಕೊಂಡಿದ್ದ, ಕೋಣೆ ಚೆನ್ನಾಗಿಟ್ಟಿಲ್ಲ ಎಂದು ಗೊಣಗುತ್ತಿದ್ದಾತನು ನಮಗಿರುವ ಸ್ವಾಭಿಮಾನಲವವನ್ನುಳಿಸಿ ಕೊಟ್ಟು ಮಾನವ್ಯಪರಂಪರೆಯನ್ನು ಸಾಗಿಸಿಕೊಂಡು ಹೋದನು.'

ಆದರೂ ಸಂಕೋಚಭಾವಗಳ ಹಿನ್ನೆಲೆಯಲ್ಲಿ–ಹಳೆಯ ನಾಗರಿಕತೆಯಲ್ಲಿ ಸಮಾಜದ ಸ್ತ್ರೀನೀತಿಯು ಲೋಪದೋಷಗಳೊಡನೆ ಅರ್ಧಮರ್ಧ ರಾಜಿಮಾಡಿಕೊಂಬ ವ್ಯವಹಾರಬುದ್ಧಿಯಿಂದ ತನ್ನನ್ನು ಕಾಯ್ದುಕೊಳ್ಳಲು ಪ್ರಯತ್ನಿಸುವ ತರುಣನ ವ್ಯಂಗ್ಯಯುಕ್ತಿಯ ಹಿಂದೆ, ಮಧ್ಯವಯಸ್ಸಿನ ವಿಫಲಜೀವನ ನಡೆಸಿದ ಪ್ರೂಫ್ರಾಕ್ ಎಂಬ ವ್ಯಕ್ತಿಯ ವ್ಯರ್ಥಪ್ರಯತ್ನಗಳ ಹಾಗೂ ಬೇಜಾರಬರಿಸುವ ವರ್ತನೆಗಳ ಹಿಂದೆ, ಅಥವಾ 'ಒಬ್ಬ ಹೆಂಗಸಿನ ಚಿತ್ರ' ಎಂಬುದರಲ್ಲಿ ಬರುವ ಮಧ್ಯವಯಸ್ಸಿನ ವಿಫಲ ಜೀವನ ಸಾಗಿಸಿದ ಹೆಂಗಸಿನ ಚಿತ್ರದ ಹಿಂದೆ (ಈ ಚಿತ್ರ ತಲೆಬರಹದಲ್ಲೇ ಹೆನ್ರಿ ಜೇಮ್ಸನನ್ನು ಸ್ಮೃತಿಪಥಕ್ಕೆ ತಂದುಕೊಡುತ್ತದೆ) – ಆಗೀಗ ಈಲಿಯಟ್ ಭಯಾನಕ ಅಥವಾ ವೈಭವಪೂರ್ಣ ಸನ್ನಿವೇಶದ ಅಂಶವನ್ನು ಕಣ್ಣೆದುರಿಡುತ್ತಾರೆ. ಸ್ವನಿಂದೆಯನ್ನು ವಿಲಕ್ಷಣವಾಗಿ ಸೂಚಿಸುವಂಥ ಒಂದೇ ಒಂದು ಪದಸಂಹತಿಯಿಂದ ಭಾವಗೀತದ ಸೌಂದರ್ಯದರ್ಶನವನ್ನವರು ಮಾಡಿಕೊಡಬಲ್ಲರು. ಆ ದರ್ಶನವಾದರೋ ಅಪರಿಚಿತ, ಆದರೆ ಅತಿ ನೋವಿನಿಂದ ಅನುಭವಿಸಿದಂಥದು. ಸುಂದರ–ಅಸುಂದರ, ಗಂಭೀರಭಾವತೀವ್ರತೆಯ–ಹುಡುಗಾಟಿಕೆಯ ವಿರುದ್ಧ ಚಿತ್ರಗಳನ್ನಿಡುವ ಸರಳತಂತ್ರ ಅವರ ಕವನಗಳ ಕಟ್ಟಡದ ನೆಲಗಟ್ಟೆನಿಸಿತ್ತು.

**"ಹಳಬನಾದೆ.... ಹಳಬನಾದೆ....**
**ನನ್ನ ಚಣ್ಣಗಳ ಬುಡವನು ಮಡಿಸಿ ಮತ್ತೆ ತೊಡುವೆನು.**
**ಕೂದಲನ್ನು ಕಳೆದುಕೊಳಲೆ? ಕುಂಬಳವನುತಿಂಬ**
**ಧೈರ್ಯ ಇರುವುದೇನು ನನ್ನಲಿ?**

ಬಿಳಿ ಫ್ಲಾನಲ್ ಚಣ್ಣತೊಟ್ಟು ಕಡಲ
ತಡಿಯೊಳಡ್ಡಾಡುವೆ.
ಜಲದೇವತೆಗಳು ತಮ್ಮೊಳು ಹಾಡಿಕೊಂಬುದನು ಕೇಳಿಹೆ.
ಅವು ನನ್ನನ್ನು ಕಂಡು ಹಾಡತೊಡಗವೆಂದೆ ನನ್ನೆಣಿಕೆ.
ಅಲೆಯನೇರಿ ಕಡಲ ಕಡೆಗೆ ಅವು ಹೋಗುವುದನು
ಕಂಡಿಹೆ
ಕರಿ–ಬಿಳಿ ನೀರ್ಮೇಲೆ ಗಾಳಿ ಬೀಸುತಿರಲು ತಿರುಗಿಬಿದ್ದ
ಬಿಳಿಯಲೆಗೂದಲುಗಳನ್ನು ತೆಗೆದು ಹೆಕ್ಕಿಕೊಳ್ಳುತ.
ನರಮನುಜರ ದನಿ ಎಬ್ಬಿಸುವನಕ ನಮ್ಮನಲ್ಲಿ
ಮಣ್‌ಬಣ್ಣದ ಕೆಂಬಣ್ಣದ ಕಡಲ ಪಾಚಿಸರವ ಧರಿಸಿ
ಸಾಮುದ್ರಿಕ ಕನ್ನಿಕೆಯರು ನಿಂತುಕೊಂಡ ಭವನಗಳನು
ನೋಡುತ್ತಾ ನಿಂತುದಾಯ್ತು, ಮುಳುಗಿಹೋದು
ದಾಯ್ತು ಕೊನೆಗೆ."

ಇಲ್ಲಿ 'ಅಪಾಯಕರವಾದ ಕಡಲ ನೊರೆಯ ಮೇಲೆ ಐಂದ್ರಜಾಲಿಕ ಪೆಟ್ಟಿಗೆಗಳು ಬಾಯ್ದೆರೆಯುವುದು' ಎಂಬ ಮಾತಿನ ಪ್ರತಿಧ್ವನಿಯಷ್ಟೇ ಅಲ್ಲ–ತಿರುಗುಮುರುಗು ಮಾಡಲಾದ ಆರ್ನಾಲ್ಡಿನ 'ವಿಸ್ಮೃತಮರ್ಮನ್' ಉಳಿದ ಸಮುದ್ರಕವನಗಳ ಪಡನುಡಿಯೂ ಇದೆ; ಆದರೆ ಅಲ್ಲಿಲ್ಲದ ಆಹ್ಲಾದಕರವಾಗಿ ಬೀಸುವ ತೀರದ ತಂಗಾಳಿಯ ಹೊಡೆತವಿದೆ ಇಲ್ಲಿ ಅಷ್ಟೆ. ಈ ಸಮುದ್ರ ಪ್ರದೇಶವನ್ನು Mr.Aollimax ಮತ್ತು Gerontion Marina ಮತ್ತು The Dry Salvages ಎಂಬವುಗಳಲ್ಲಿಯ ಸಮುದ್ರ ಪ್ರದೇಶಕ್ಕೆ ಹೋಲಿಸಬಹುದು. ಈಲಿಯಟ್ಟರಿಗೆ ಕೆಲವೇ ಬಲಿಷ್ಠವೂ ಕೇಂದ್ರಪ್ರಾಯವೂ ಆದ ಕಾವ್ಯವಸ್ತುಗಳಿರುವಂತೆ ಕೆಲವೇ ಸುದೃಢವೂ ನಡುಗಂಬದಂಥವೂ ಆದ ಸಂಕೇತಗಳಿವೆ. ಅವುಗಳಲ್ಲಿ ಸಮುದ್ರವು ಆದಿಜೀವನದ ಚೈತನ್ಯ ಹಾಗೂ ಶಕ್ತಿಗಳ ಆಕರವೆಂದು ಭಾವಿಸುವುದು ಅತಿಮುಖ್ಯವಾದವುಗಳಲ್ಲಿ ಒಂದು. ಆದುದರಿಂದಲೇ Waste Landನ ಸುಂದರವಾದ ನಾಲ್ಕನೆಯ ಭಾಗದಲ್ಲೂ 'ಜಲ–ಸಮಾಧಿ' ಎಂಬ ಉಲ್ಲೇಖ ಬರುತ್ತದೆ; ಅದು ಅವರದೇ ಆದ Dans le Restaurant ಎಂಬ ಫ್ರೆಂಚ್ ಕವನದಲ್ಲಿ ಬರುವ ಒಂದು ಪ್ರಕರಣದ್ದು. ಆ ಪ್ರಕರಣದಲ್ಲಿ ಫೀನಿಸ್ಸಿನ ಜಲಸಮಾಧಿ ಹೊಂದಿದ ಫ್ಲೀಬಾಸ್ ಎಂಬ ನಾವಿಕನ ವಿಷಯವಿದೆ. ಅವನು ಸರಳವೂ ನೈಸರ್ಗಿಕವೂ ಆದ ಪೂರ್ಣಜೀವನವನ್ನು ನಡೆಸಿ ನಿಷ್ಪಾಪಮನುಷ್ಯನಾಗಿ ಸಾವನ್ನು ಕಂಡವನು. ನಿರ್ಜಲ ದೇಶದಲ್ಲಿ 'ಜಲ–ಸಮಾಧಿ' ಎಂಬುದು ಭಯಕ್ಕಿಂತ ಹೆಚ್ಚಾಗಿ ಸೌಂದರ್ಯವನ್ನೇ ಕಣ್ಣೆದುರಿಡುತ್ತದೆ; ಅದರ ಪ್ರಸ್ತುತ ದೃಶ್ಯವೂ ಸ್ಮೃತಿಚಿತ್ರವೂ ಎರಡೂ ಸೌಂದರ್ಯಭಾವಕಗಳೇ.

**"ಗಾಲಿದಿರುಹುತ ಗಾಳಿಮೊಗವಾಗಿ ನೋಡುತಿಹ
ನೀನು ಕಂಜೂಷಿಯೊ ಉದಾರಿಯೊ ಅದಾರೋ,
ಫ್ಲೀಬಾಸನೊಮ್ಮೆ ನಿನ್ನಂತೆಯೆತ್ತರವಾಗಿ
ಸುಂದರಾಕೃತಿಯಾತನಾಗಿದ್ದನೆಂದು ತಿಳಿ."**

ಆ ಮೊದಲಿನ ಜಾಗತಿಕ ಯುದ್ಧದಲ್ಲಿ ತನ್ನ ಯೌವನವನ್ನು ವ್ಯರ್ಥಗೊಳಿಸಿಕೊಂಡ ತಲೆಮಾರಿಗ ಎತಮ್ಮ ಜಗತ್ತು ಅಸ್ಥಿರ, ಅದೃಢ ಎಂಬುದು ಗೊತ್ತಾದಾಗ ಉಂಟಾದ ಹೃತ್ಕಂಪವು ೧೯೩೯ನೆಯ ತಲೆಮಾರು ಎದುರಿಸಬೇಕಾಗಿ ಬಂದ ಹೃತ್ಕಂಪಕ್ಕಿಂತಲೂ ಉಗ್ರತರವಾದದ್ದು. ಎಲ್ಲೆಲ್ಲೂ ಭ್ರಮನಿರಸನವಾದುದರ ಫಲವಾಗಿ ರಾಜಕೀಯ ಹಾಗೂ ಧಾರ್ಮಿಕ ಅವಿಶ್ವಾಸಪರತೆಯೂ ಆಗಲೇ ಬಳಕೆಯಲ್ಲಿದ್ದ ಬೌದ್ಧಿಕ ವಿಲಾಸಗಳೂ ದೃಢತರವಾಗಿ ಬೇರೂರಿದವು. ಯುದ್ಧಾವಧಿಯಲ್ಲೂ ಅನಂತರದ ದಶಕದಲ್ಲೂ ಇಂಗ್ಲೆಂಡಿನ ಜನರಲ್ಲಿ ಸರ್ವತಿರಸ್ಕಾರಬುದ್ಧಿ, ವಿಪರೀತದೃಷ್ಟಿ ಹಾಗೂ ಸ್ವರಕ್ಷಣೆಗೆ ಸಿದ್ಧವಾದ ಒಂದು ಬಗೆಯ ಒರಟುತನ ತುಂಬಿದ್ದವು. ಹೌಸ್ಮನ್, ಲಿಟ್ಟನ್ ಸ್ಟ್ರ್ಯಾಚಿ, ಆಲ್ಡಸ್ ಹಕ್ಸ್ಲಿ ಮತ್ತು ಸಿಟ್ವೆಲ್ಲರ ಬರಹಗಳು ಅಂದು ವಿಚಾರಪರರಿಗೆ ಪ್ರಿಯವಾಗಿದ್ದವು. ೧೭ನೆಯ ಶತಕದ ಕಠಿಣ ಕವಿಗಳ ಹಾಗೂ ಡೋನನ ಪದ್ಯಗಳು ಪ್ರಚುರವಾಗಿದ್ದವು. ಅದಕ್ಕೆ ಅಂಶತಃ ಈಲಿಯಟ್ಟರ ವಿಮರ್ಶಕ ಲೇಖನಗಳೇ ಕಾರಣವೆನ್ನಬಹುದು. ಎಲ್ಲರ ಒಪ್ಪಿಗೆಯಂತೆ ಸಮಾಜಸಮಯಗಳಿಗೆ ಬಹಿಷ್ಕಾರ ಬಿತ್ತು. 'ಪದ್ಯಕ್ಕೂ ಯಾವ ಶ್ರದ್ಧೆಗೂ ಏನೂ ಸಂಬಂಧವಿಲ್ಲ' ಎಂಬ ನೀತಿ ಈಲಿಯಟ್ಟರಲ್ಲಿ ಉದ್ದಾಮ ವಿಮರ್ಶಕರಿಂದ ಮಾನ್ಯವಾದೀತು. ಅಂದಿನ ಪ್ರಕಾರ ಅನುಭವವು ಹೆಚ್ಚು ಹೆಚ್ಚು ಅಗಲವೂ ಅಕುಂಠಿತವೂ ಶ್ರದ್ಧಾಜನ್ಯವಲ್ಲದುದೂ ಆದಷ್ಟಕ್ಕೂ ಒಳ್ಳೆಯದು. ನರದೌರ್ಬಲ್ಯ ಹೆಚ್ಚಿದ್ದ ೧೯೨೦ರ ಬಲುಸಹಜ ತುಂಟ ಮನೋಧರ್ಮವು ಹಿಂದನ್ನು ಹಿಡಿದು ಒಂದು ವಿಧದ ಕರುಣದ ಕರಗನ್ನು ಅಳವಡಿಸಿಕೊಳ್ಳುತ್ತದೆ. ಅದು ಚೂರುಚೂರಾಗಿ ಒಡೆದು ಬರುತ್ತಿದ್ದ ಅನುಭವದಿಂದ ಉಂಟಾದ ಪ್ರತಿಕ್ರಿಯೆ; ಯುದ್ಧಾವಧಿಯ ನೆನಹುಗಳನ್ನು ಸ್ಮೃತಿಪಥಕ್ಕೆ ತಂದುಕೊಳ್ಳಲು ಇಷ್ಟಪಡದವರ ಶರಣ್ಯವಾಗಿತ್ತದು: ಏಕೆಂದರೆ ಅವರು ಸಂಘಟಿಸಲೂ ನಿಯಂತ್ರಿಸಲೂ ಪ್ರಯತ್ನಮಾಡಲಾರದವರಾಗಿದ್ದರು. ಭಾವನೆಗಳ ಸೂಕ್ಷ್ಮ ಮಿತ್ರೋದ್ರೇಕವುಳ್ಳ (Conversation Galante) ಡೋನನಲ್ಲಿಯಂತಹ ಹೃತ್ಕಂಪಕರ ವಿರುದ್ಧ ಚಿತ್ರಗಳ ಯುಗಬಂಧವುಳ್ಳ (Whispers of Immortality) ಮತ್ತು ಈಲಿಯಟ್ಟರ (Sunday Morning Service) ಪ್ರಾರಂಭಿಕ ಕವನಗಳು ಅವರ (Sweeney Poems, Sweeney Erect and Sweeney among the Nightingales) ಎಂಬವುಗಳಲ್ಲಿ ಸಂಗೃಹೀತವಾಗಿವೆ. ಅವುಗಳಲ್ಲಿ ಹಾಟೆಲು–ಗಡಂಡುಗಳ ಮೇಲೆ ಪುನರುಜ್ಜೀವನಾವಧಿಯ ಕಲಾಪ್ರಪಂಚವನ್ನೂ ಅಭಿಜಾತ ಪುರಾಣಗಳನ್ನೂ ನಿಸರ್ಗ ಸೌಂದರ್ಯವನ್ನೂ ಸುರಿದು ಎರಕಹೊಯ್ಯಲಾಗಿದೆ. ಅಲ್ಲಿ ವ್ಯಾಖ್ಯಾನವಿಲ್ಲ, ವಿವರಣೆ ಇಲ್ಲ, ಒಂದಕ್ಕೊಂದನ್ನು ಕೂಡಿಸುವ ಪ್ರಯತ್ನವಿಲ್ಲ; ಅದಕ್ಕೆ ಬದಲು, ಹರಿತವೂ

ಕಠಿನವೂ ಆದ ಪದ್ಯಪಂಕ್ತಿ, ಸಾಮಾನ್ಯ–ಅಸಾಮಾನ್ಯ ಚಿತ್ರಗಳ ಯುಗಬಂಧ, ರೂಢಪದಗಳ ಪ್ರಯೋಗ, ಪ್ರತಿಮೆಗಳ ಗಾಬರಿಗೊಳಿಸುವ ಅಸಾಂಗತ್ಯ–ಇವನ್ನು ಬೇಕಾದ ಪರಿಣಾಮವನ್ನು ಮಾಡಲೆಂದು ಬಿಟ್ಟುಬಿಡಲಾಗಿದೆ. ಓದುಗನು ತನ್ನ ಅನುಭವದ ಪರಿಮಿತಿಯೊಳಗೇ ಕೆಲಸ ಪೂರೈಸಿಕೊಳ್ಳಬೇಕು. ಈಲಿಯಟ್ಟರ ಮುಖ್ಯ ಕಾವ್ಯಾಯುಧಗಳೆರಡನ್ನು ಇಲ್ಲಿ ಕಾಣಬಹುದು. ಒಂದು ಅವರ ಅಧ್ಯಾಹರಣದ ಬಳಕೆ; ನಮ್ಮ ಮನದಲ್ಲಿ ಹೊಕ್ಕು ಮತ್ತೆ ಮತ್ತೆ ಪ್ರತಿಧ್ವನಿಸುವಂತಹ ಹೇಳಿಕೆಗಳು ತಮ್ಮ ಕೃತಕಾರ್ಥಗಳನ್ನುಳಿದು ಅವಕ್ಕೆ ಬಹುದೂರದಲ್ಲಿರುವ ಅರ್ಥ ಗೌರವವನ್ನು ಬಿಂಬಿಸುವಂತೆ ಬರೆವ ಬಗೆ. ಅಂಥ ಹೇಳಿಕೆಗಳು ಓದುಗನನ್ನು ವಿಲಕ್ಷಣ ರೀತಿಯಿಂದ ಜಾಗ್ರತಗೊಳಿಸಿ ಪದ್ಯದಲ್ಲಿ ಶ್ರಮವೀರ ಭಾಗಿಯನ್ನಾಗಿ ಮಾಡುತ್ತವೆ. ಏಕೆಂದರೆ ಯಾವಾಗಲೂ ತಮ್ಮ ಓದುಗರ ಬಗ್ಗೆ ದೃಢವಾದ ಕಲ್ಪನೆಯಿಟ್ಟುಕೊಂಡೇ ಬರೆದವರು. ಅವರು ಓದುಗರಿಂದ ಕೆಲವಂಶಗಳನ್ನು ನಿರೀಕ್ಷಿಸುತ್ತಾರೆ; ಆ ನಿರೀಕ್ಷಿತಾಂಶಗಳನ್ನು ಪೂರಯಿಸದವರಿಗೆ ಪದ್ಯಗಳು ಅಪೂರ್ಣ, 'ಸುಖದುಃಖೇ ಸಮೇಕೃತ್ವಾ' ಎಂಬ ತರಹದ ನಿಷ್ಕ್ರಿಯ ಮನೋಧರ್ಮದವರು ಈಲಿಯಟ್ಟರ ಕವನಗಳನ್ನೋದಿ ಸವಿಯಲು ಅಧಿಕಾರಿಗಳಲ್ಲ. ನೀವು ನಿಮ್ಮ ಕೌಶಲವನ್ನು ಬಳಸಬೇಕು.

ಆಗಲೇ ಸಿದ್ಧವಾದ ಶ್ರದ್ಧಾತಲಗಳಿಲ್ಲದ ಕಾಲದಲ್ಲಿ ಈ ತರಹದ ವಿಪರೀತ ಲಕ್ಷಣೆಯ ಅಧ್ಯಾಹಾರ ಅಥವಾ ವ್ಯಂಗ್ಯಧಾಟಿಯ ಸೂಚನತಂತ್ರವು ಸ್ಪಷ್ಟವಾಗಿಯೂ ಬಹಳ ಬೆಲೆಯುಳ್ಳದ್ದಾಗುತ್ತದೆ. ಈ ತಂತ್ರದಿಂದ ಓದುಗ ಒಪ್ಪದಿರಬಹುದಾದ ಅಂಶವನ್ನು ನೇರವಾಗಿ ಹೇಳದಿರಲು ಕವಿಗೆ ಅನುಕೂಲವಾಗುತ್ತದೆ; ಹಾಗೆ ತಪ್ಪಿಸಿಕೊಂಡು ಉಳಿಯಲು ಅಂಥ ನೇರ ಹೇಳಿಕೆಯನ್ನು ಒದಗಿಸಲು ಕವಿಗೆ ಅಸಾಧ್ಯವೆನಿಸಿದ್ದೂ ಕಾರಣವಾಗಬಹುದು. ಈಲಿಯಟ್ಟರ ಅನಂತರದ ಪ್ರಶಂಸಕರ ಪ್ರಕಾರ ಈಲಿಯಟ್ ಎಂದೂ ತಾವೊಬ್ಬ ದೊಡ್ಡ ಆಧಾರವೆಂದು ಹೇಳಿಕೊಂಡು ಬರೆಯ ಹೊರಟವರಲ್ಲ. ತಮ್ಮ ಕೆಲಪ್ರಾರಂಭಿಕ ಪ್ರಬಂಧಗಳ ಬಗ್ಗೆ ಅವರು ಹೀಗೆ ಸಾರಿದರು:

ಸ್ಪಷ್ಟವಾಗಿ ಹೇಳಿದರೆ ಕೂಡಲೇ ಬೈಗುಳ–ತಿರಸ್ಕಾರಗಳಿಗೆ ತುತ್ತಾಗಬಹುದಾದ ಕೆಲಕಲ್ಪನೆಗಳನ್ನು ಅವು ರಹಸ್ಯ ಸಂಕೇತ ಭಾಷೆಯಲ್ಲಿ ಕಾಯ್ದಿರಿಸಿವೆ. ಅವುಗಳಲ್ಲಿ ದೋಷಗಳಿವೆ; ಹಾಗೆ ಇದ್ದರೂ, ಅಲ್ಲದೆ ಕೆಲಮಟ್ಟಿಗೆ ಇದ್ದದ್ದರಿಂದಲೇ ಆ ಪ್ರಬಂಧಗಳು ಅಂಥ ಕಲ್ಪನೆಗಳನ್ನು ಕಾಯ್ದಿರಿಸಲು ಶಕ್ತವಾದವೆನ್ನಬೇಕು.

ಈ ವಿಪರೀತ ಬಗೆಯ, ಹೊಣೆಹೊರಲು ಹಿಂದೇಟು ಹಾಕುವ ನೀತಿಯಲ್ಲಿ ಸಮಕಾಲೀನ ಅಭಿಪ್ರಾಯದ ಹವಾಮಾನವು ಭಾವಗೀತಕಾರನ ಮೇಲೆ ಹೊರಿಸಿದ ಕಷ್ಟಗಳ ಪರಿಚಯ ನಮಗೆ ಕೆಲಮಟ್ಟಿಗೆ ಆಗುತ್ತದೆ. ಒಂದು ದೃಷ್ಟಿಯಿಂದ ಈಲಿಯಟ್ಟರ ಸ್ವೀನೀ ಪದ್ಯಗಳು ಸಾಂಕೇತಿಕ ಭಾಷೆಯಲ್ಲಿ ಬರೆದವು ಅಥವಾ ಶೂನ್ಯಮುದ್ರಿಕೆಗಳು; ಆಯಾ ಓದುಗ ಅದಕ್ಕೆ ಅವನವನ ಪರಿಹಾರವನ್ನು ಒದಗಿಸಿಕೊಳ್ಳಬೇಕು. ಹೀಗೆಂದ

ಕೂಡಲೆ ಅವೆಲ್ಲ ಸಸಂಶಯದೋಷಗಳುಳ್ಳವೆಂದು ಯಾರೂ ತಿಳಿಯಬಾರದು. ಅವು ಸಂಕ್ಷಿಪ್ತವೆಂದಿಷ್ಟೇ ಅರ್ಥ, ಒಂದೇ ಒಂದು ದೃಶ್ಯ, ಒಂದೇ ಒಂದು ಭಾವೋದ್ಬೋಧಕ ಪದಸಂಹತಿ, ಪದ್ಯ ಪಂಕ್ತಿಯ ನಿಷ್ಪಕ್ಷಪಾತವೂ ನಿಯಂತ್ರಿತವೂ ಆದ ಗತಿ– ಇವು ಒಂದು ಮಾರ್ಗವನ್ನು ಹೇಳದೆಯೇ ಹಾಕಿಕೊಡುತ್ತವೆ.

**"ಬೇಸರದ ಮೃಗಶಿರಸ್–ಶ್ವಾನನಕ್ಷತ್ರಗಳು**
**ಮುಸುಕಿನಲ್ಲಿವೆ; ಮೆತ್ತಗಿರುವುವಂಭೋಧಿಗಳು;**
**ಸ್ವೇನು ಭೂಶಿಖರದಲ್ಲಿಹ ವ್ಯಕ್ತಿ ಸ್ವೀನಿಯಾ**
**ಮೊಣಕಾಲ ಮೇಲೆ ಕೂರಲು ಯತ್ನಿಸುತ್ತಿರುವ–**
**ಮೇಜಿನಂಗಿಯ ಬೀಳಿಸುತ್ತಿರುವ, ಕಾಫಿ ಲೋ**
**ಟವ ಮತ್ತೆ ಬುಡಮೇಲು ಮಾಡುತ್ತಲಿರುವನದೊ.......**
**ಬಾಗಿಲಲಿ ಪ್ರತ್ಯೇಕವಾಗಿ ಯಜಮಾನ ನಿಂ–**
**ದಾರೊಡನೆಯೋ ಮಸುಕು ಮನುಜನೊಬ್ಬನ ಜೊತೆಗೆ**
**ಸಂಭಾಷಿಸುತ್ತಿಹನು; ಹತ್ತಿರದಿ ಟಿಟ್ಟಿಭಗ–**
**ಳುಲಿಯುತಿವೆ ಶುದ್ಧ ಹೃದಯದ ಚರ್ಚಿನೆಡೆಯಲ್ಲಿ.**
**ಉಲಿದವಾ ಟಿಟ್ಟಿಭಗಳಂಥ ಕೋಳಡವಿಯಲಿ**
**ಅಗಮೆಮ್ನನುಚ್ಚಕಂಠದಿ ಕರೆಯುತಿರಲಾಗಿ,**
**ಸತ್ತವರ ಮುಚ್ಚಿರುವ ಬಿಗಿಯಾಗಿ ಬಿಗಿದಿರುವ**
**ಅವಮಾನಿತಾಂಬರವ ಮಲಿನಗೊಳಿಸಿದವವುಗ**
**ಳೆಡೆಗೊಡಲು ತಮ್ಮ ಕೊಕ್ಕಿನ ನೀರ್ವನಿಗಳುದುರೆ,**

ಸುಂದರಗಾನ ಮತ್ತು ಹಕ್ಕಿಗಳು ಉದುರಿಸಿದ ಹನಿಗಳು, ಹಾಟೆಲಿನಲ್ಲಿಯ ಮನಂಬುಗದ ಒಳಸಂಚು, ರಾಜನೊಬ್ಬನ ಕೊಲೆ– ಇವು ಕೇವಲ ವ್ಯಂಗ್ಯರೀತಿಯ ಸಮನ್ಯಾಸದಲ್ಲಿ ಎದುರುಬದರು ವಿರೋಧವ್ಯಂಜಕವಾಗುವಂತೆ ಇಡಲ್ಪಟ್ಟಿಲ್ಲ. ಅವನ್ನು ಅವು ಅವ್ಯವಚ್ಛೇದ್ಯಗಳೇನೋ ಎಂಬಷ್ಟು ಆವಶ್ಯಕ ಸಂಬಂಧವುಳ್ಳವುಗಳನ್ನಾಗಿ ನೋಡಲಾಗಿದೆ. ಈಲಿಯಟ್ಟರ ಬಗ್ಗೆ ಅವರ ಸಮಕಾಲೀನರು ತಾಳುವ ಕೃತಜ್ಞತಾಭಾವದ ಆಕರವಿಲ್ಲಿದೆ. ಅವರು ಜಗತ್ತಿನ ಗಲಿಬಿಲಿಯನ್ನು ಅರ್ಥಯಿಸಿಕೊಟ್ಟಿದ್ದಾರೆ; ಅದು ಇನ್ನು ಮೇಲೆ ಗಲಿಬಿಲಿಯಾಗಿ ನಮಗೆದುರಾಗದು.

**Erhebung ಚಲನೆಯಿಲ್ಲದೆ ಧ್ಯಾನದೇಶಾಗ್ರ–**
**ಭಾವವಿಲ್ಲದೆ ಕಳೆದುತೆಗೆವ ಗೋಜಿಲ್ಲದಲೆ**
**ಹೊಸ–ಹಳ ಜಗತ್ತು ತಾ ತನ್ನ ಪಾಕ್ಷಿಕವಾದ**
**ಆನಂದವನ್ನು ಪೂರ್ಣತೆಗೊಯ್ಯುವಲ್ಲಿ ಮೇಣ್**
**ತನ್ನ ಪಾಕ್ಷಿಕ ಭಯವ ಪರಿಹರಿಸಿಕೊಂಬಲ್ಲಿ**
**ಪ್ರಕಟವಾಯಿತು, ಪರಸ್ಪರದರಿವ ಪಡೆದಿತ್ತು.**

**Burnt Norton, II**

ಈಲಿಯಟ್ಟರ ಈ ಕಾಲದಲ್ಲಿಯ ಸಿದ್ಧಿಯನ್ನು ಸ್ವೀನೀ ಪದ್ಯಗಳು ಸಂಗ್ರಹಿಸಿಟ್ಟರೆ ಅವರ ಇನ್ನೆರಡು ಸಂಕಲನಗಳು ಅವರ ಮುಂದಿನ ಕೃತಿಗೆ ಮಾರ್ಗಸೂಚಕವಾದವು. ಅವೆಂದರೆ La Figlia Che Piange and Gerontion ಕವಿ ಇಟಲಿಯಲ್ಲಿ ನೋಡಲಾರದೆ ಹೋದ ಒಂದು ಅಳುತ್ತಿರುವ ಹುಡುಗಿಯ ವಿಗ್ರಹದ ಮೇಲೆ ಮೊದಲನೆಯದನ್ನು ಬರೆದದ್ದಂತೆ. ಹೀಗೆ ಪ್ರಾರಂಭವಾಗುವ–

**ನಿಚ್ಚಣಿಕೆಯ ತುತ್ತತುದಿಯನೇರಿ ನಿಲ್ಲು ನಂತರ**
**ಉದ್ಯಾನದ ಬೂದಿಗೊಡವನಾಂತುಕೊಂಡು ಸ್ವಲ್ಪ–**
**ನಿನ್ನ ಕೂದಲಲ್ಲಿಹ ರವಿ–ಕಿರಣಂಗಳ ಹೆಣೆ–**
**ನೋವಿನ ಬಿಸವಂದದಿಂದ ನಿನ್ನ ಹೂಗಳನ್ನು**
**ನೀನಪ್ಪಿಕೊ ಮತ್ತವನ್ನು ಎಸೆ ಕೂಡಲೆ ನೆಲಕೆ**
**ತಲೆತಪ್ಪಿಸಿಕೊಂಡು ರಾಜಪುತ್ರನೋ ಕರಿಕೆಯನು**
**ತಳೆದ ಕಂಗಳಿಂದಕೂಡಿ: ಆದರೆಲೆಲೆ ಕೂದಲ**
**ರವಿ–ಕಿರಣಂಗಳ ಹೆಣೆ ಹೆಣೆ (ನಿಲ್ಲದೊಂದು ನಿಮಿಷವೂ).**

ಪದ್ಯವು ಆ ಅಮೃತಶಿಲಾಪುತ್ಥಳಿಗೆ ಸಂಬಂಧಿಸಿದೆ ಎಂದು ಸ್ವತಃ ಈಲಿಯಟ್ ಹೇಳಿದರೂ ನಾನೊಪ್ಪಲಾರೆ. ಸಂಬೋಧನೆಯಲ್ಲಿಯ ಮಧ್ಯಮ–ಪ್ರಥಮ ಪುರುಷಗತವಾದ ವಿಲಕ್ಷಣ ಬದಲಾವಣೆಗಳು, ಎರಡನೆಯ ನುಡಿಯ ಕೊನೆಯಲ್ಲಿ ಹೆನ್ರಿಜೇಮ್ಸನ ಸನ್ನಿವೇಶದ ಸೂಚನೆ, ಮತ್ತು ಕೊನೆಯಲ್ಲಿ ಉಪಸಂಹರಿಸುವ 'ನಾನು ಒಂದು ಭಾವಭಂಗಿಯನ್ನೂ ಅಂಗವಿನ್ಯಾಸವನ್ನೂ ಕಳೆಯಬೇಕಾಗಿತ್ತು' ಎಂಬ ಸಾಲು ಪದ್ಯದಸಾರವು ಜೀವನಕ್ಕೂ ಕಲೆಗೂ ಇರುವ ಸಂಬಂಧರೂಪದ್ದು–ಅದರಲ್ಲೂ ಜೀವನವು ಕಲೆಯ ಕ್ರಮಬದ್ಧ ಆಕೃತಿಯ ಅಚ್ಚಿನಲ್ಲಿ ಬೀಳುವಾಗ ಉಂಟಾಗುವ ಸಂಬಂಧರೂಪದ್ದು ಎಂಬುದನ್ನು ಸೂಚಿಸುತ್ತದೆ; ಆದರೆ ಪದ್ಯದ ಸುಂದರ ಗತಿ, ಆಶೆ–ಸಂಯಮಗಳು ಒಂದಾದ ಮೇಲೊಂದರಂತೆ ಬರುವಿಕೆ–ಇವು The Family Re-union ನ ವರೆಗಿನ ಎಲ್ಲ ಪದ್ಯಗಳಲ್ಲೂ ಪಡಿನುಡಿಗೊಡುವ ಒಂದು ಮಾನವ್ಯಸನ್ನಿವೇಶವನ್ನು ಅತಿ ತೀವ್ರವಾಗಿ ಸೂಚಿಸುತ್ತವೆ. Gerontion, 'ಆ ಮುದುಕ'ನ ಸ್ವಗತಭಾಷಣವು ೧೯೨೦ರ ಪದ್ಯಗಳಲ್ಲಿ ಪ್ರಮುಖವಾದದ್ದು. ಅದು ಒಂದು ಟೈರೇಸಿಯಸ್ಸಿನಂತಹ ನಾಟಕೀಯ ವ್ಯಕ್ತಿ, The Waste Land ನ ('ಬಂಜರು ಭೂಮಿ'ಯ) ಹಳಬನಾದ ಅಂಧಋಷಿ. ಎರಡೂ ವ್ಯಕ್ತಿಗಳೆಂಬುದಕ್ಕಿಂತ ಹೆಚ್ಚಾಗಿ ವ್ಯಕ್ತಿಧ್ವನಿ ಅಥವಾ ಛಾಯಾರೂಪಗಳೆನ್ನಬಹುದು–ಅವು ಸಾಮಾನ್ಯ ಮಾನವರ ಪ್ರಾತಿನಿಧಿಕ ಸ್ವರ; ಅಂಥ ಪ್ರತಿನಿಧಿ ಅಳಿದುಹೋಗುತ್ತಿರುವ ನಾಗರಿಕತೆಯ ವಿಷಯವಾಗಿಯೂ ಈ 'ಹಾಳುಮನೆ'ಯಲ್ಲಿ ವಾಸವಾಗಿರುವ ಮನುಕುಲದ ದಯಾರ್ಹವಾದ ಚೂರುಗಳನ್ನೂ ಧೇನಿಸುತ್ತಿರುವಾಗಿನ ಅನಿಸಿಕೆ. ಸಿಲ್ವರೋ, ಹಕಾಗವ, ಮೇಡಂ ಡಿ ಟಾರ್ನ್ಸ್ ಕ್ವಿಸ್ಟ್

ಮತ್ತು ಫ್ರಾಲಿನ್ ವಾನ್‌ಕಲ್ಪ್ ಎಂಬಿವೆಲ್ಲಾ ಬರಿ ಹೆಸರುಗಳು; ಆದರೆ ಅವುಗಳಲ್ಲಿ ಕಂಡುಬರುವ ರಾಷ್ಟ್ರೀಯತಾ ಮಿಶ್ರಣವು ಕಲೆ, ಅನುಭಾವ ಮುಂತಾದವುಗಳಲ್ಲಿಯ ಅಂತಾರಾಷ್ಟ್ರೀಯ ಮಾಯಾಬಜಾರದ ವಿವಿಧ ರೀತಿಗಳ ಸೂಚನೆಗಳು. ಅದು ಮನೆಯ ಮಾಲಿಕನೆನಿಸಿದ ಯೆಹೂದಿಯ ವರ್ಣನೆಯನ್ನು ಎತ್ತಿಕೊಳ್ಳುತ್ತದೆ–

**"ಆಂಟ್ವರ್ಪಿನ ಹಾಟೆಲಲ್ಲಿ ಗರ್ಭದಿಂದ ಹೊರಗೆ ಬಿದ್ದು,**
**ಬ್ರಸೆಲ್ಸಲಿ ಪಿಟ್ಟಲಿಕೆಯ ಪಡೆದು, ಲಂಡನಲ್ಲಿ ಹೊಕ್ಕು**
**ತೇಪೆ ಹೊಲಿಸಿ ಮತ್ತು ಸುಲಿಸಿಕೊಂಡ (ಪಂಡಿತ)."**

ಆ ಮುದುಕನನ್ನು ಹಿಡಿದು ಎಲ್ಲರೂ ಸ್ಥಾನಾಂತರಿತರು, ನಿರಾಶ್ರಿತರು; ಅವರ ತಾತ್ವಿಕ ಮರುಭೂಮಿಕೆಯನ್ನು ಪರಂಪರಾಗತ ಧಾರ್ಮಿಕ ಅನಾವೃಷ್ಟಿ ಸಂಕೇತಿಸುತ್ತದೆ. ಪದ್ಯದಲ್ಲಿ ಕಣ್ಣಿಗೆ ಕಾಣುವಂತೆ ವಿಚಾರಗಳ ಆನುಕ್ರಮಿಕತೆಯಾಗಲಿ ತರ್ಕಶುದ್ಧ ವ್ಯವಸ್ಥೆಯಾಗಲಿ ಇಲ್ಲ; ಕೇವಲ ಆ ಮುದುಕ ಯುದ್ಧದಲ್ಲಿ ಆದ ವೀರಮರಣಗಳನ್ನು ನೆನೆಸುತ್ತಿದ್ದಾಗ ಅವನಿಗೆ ತಾನು ಭಾಗಿಯಾಗದಿದ್ದ, ಹೋಮರಿಕ್ ಯುದ್ಧವನ್ನು ಸೂಚಿಸುವಂತಹ, ಬಿಡಿ ಬಿಡಿ, ವಿಸಂಗತ ಸ್ಮೃತಿಗಳು ಹಾಗೂ ವಿಚಾರಗಳು ಮೂಡಿದ್ದಷ್ಟೇ ಪದ್ಯದಲ್ಲಿದೆ.

**"ಉರಿವ ಹೆಬ್ಬಾಗಿಲುಗಳಲ್ಲಿಯೂ ಇರಲಿಲ್ಲ**
**ಹದಬೆಚ್ಚಗಿನ ವೃಷ್ಟಿಯಲ್ಲಿ ನಾ ಕಾದಿಲ್ಲ**
**ಸೌಳು ನೆಲದಲ್ಲಿ ಮೊಣಕಾಲ ಕಂತಿಸಿಕೊಂಡು,**
**ನೊಣ ಕಡಿದ ಕುಡುಗೋಲ ಹಿಡಿದು ಹೊಡೆದಾಡಿಲ್ಲ"**

ಮುಂದೆ ಬರುವ ವಿಚಾರಲಹರಿಯಲ್ಲಿ ಸಮಕಾಲೀನ ಸಮಾಜವಷ್ಟೇ ಅಲ್ಲದೆ ವ್ಯಕ್ತಿಯ ಆಂತರಿಕ ಪ್ರಪಂಚವೂ ಒಡೆದುರುಳುತ್ತಿರುವುದನ್ನು ಕಾಣಬಹುದು.

**"ಸಾವಿರಾರು ಅಲ್ಪತರ್ಕಮಾಡಿ ತಮ್ಮ ಚಳಿಹಿಡಿಸುವ**
**ಸಂತೃಪ್ತಿಯ ಲಾಭವನ್ನು (ದಿನ ದಿನವೂ) ಉದ್ದಮಾಡಿ,**
**ಬುದ್ಧಿ ತಣ್ಣಗಾದ ಮೇಲೆ ಬಹಳ ಖಾರದರಪು ಹಾಕಿ,**
**ಅದರ ಪೊರೆಯನುದ್ರೇಚಿಸಿ, ಕನ್ನಡಿಗಳ ನಿರ್ಜನಮರು–**
**ಭೂಮಿಯಲ್ಲಿ ವೈವಿಧ್ಯವ ಗುಣಿಸುತ್ತಿಹರಿವರು."**

ಹಿಂದಿನ ರಶಿಯನ್ ಚಲಚ್ಚಿತ್ರಗಳಂತಹ ತಂತ್ರದ ಮೂಲಕ ಈಲಿಯಟ್ ಒಂದು ಚಿತ್ರಮಾಲೆಯನ್ನು ಕೊಡುತ್ತಾರೆ. ಅವನ್ನು ಹೊಂದಿಸಿದಾಗ ಒಂದೇ ಒಂದು ಆನುಕ್ರಮಿಕ ಚಿತ್ರವಾಗುತ್ತದೆ. ಅದರ ಸೂತ್ರವಿರುವುದು ಅದರ ಸ್ಥಾಯಿಭಾವ ಹಾಗೂ ಸಂಚಾರಿ

ಭಾವಗಳಲ್ಲಿ. ಮುದುಕನ ಉತ್ತಾನವೂ ವಿರಸಪೂರ್ಣವೂ ಆದ (ಭಾವನೆಗಳನ್ನು ಹೇಳುವ) ಬಗೆಗಳಲ್ಲಿ ಅವನ್ನು ಕಾಣಬಹುದು. ಅವನ ಹಗಲುಗನಸು ಸ್ವಪ್ನದ ಅಸಾಂಗತ್ಯವನ್ನು ತೋರೀತು. ಏಕೆಂದರೆ, ಪದ್ಯದ ಆರಂಭದಲ್ಲಿ ಈಲಿಯಟ್ ಉದ್ಧರಿಸಿದ ಶೇಕ್ಸ್‌ಪಿಯರನ ಪದ್ಯಪಂಕ್ತಿಗಳು ಅಂಥ ಸೂಚನೆ ಕೊಡುತ್ತವೆ.

**"ತಾರುಣ್ಯವೂ ಇಲ್ಲ ವಾರ್ಧಕ್ಯವೂ ಇಲ್ಲ**
**ನಿನಗೆ; ಆದರೆ ನಿನಗೆ ಮಧ್ಯಾಹ್ನದೂಟವಾ–**
**ದೊಡನೆ ಬಿದ್ದಂತಿಹುದು ಎರಡರ ಸ್ವಪ್ನವೂ."**

ಪದ್ಯದಲ್ಲಿ ಶೇಕ್ಸ್‌ಪಿಯರ್ ಮತ್ತು ಇತರ ಎಲಿಜಬೆತ್ ಕಾಲದ ನಾಟಕಕಾರರ ಉಕ್ತಿಗಳ ಪ್ರತಿಧ್ವನಿಗಳಿವೆ. ಅಂಥ ಅನ್ಯಗ್ರಂಥೋಕ್ತಿಗಳನ್ನು ಅರ್ಥಮಾಡಿಕೊಳ್ಳಲಾಗದೆ ಹೋದರೆ ಪದ್ಯದ ಮುಖ್ಯಾರ್ಥವಾಗದೆ ಇದ್ದೀತೆಂದು ಓದುಗರು ಭಯಗ್ರಸ್ತರಾಗುವಂತೆ ಮಾಡುತ್ತವೆ ಈ ಸಾಹಿತ್ಯೋದ್ಧಾರಗಳು. ಈ ಭಯಕ್ಕೆ ಬುಡವಿಲ್ಲವೆಂದು ನನಗೆನಿಸುತ್ತದೆ. ಯಾವ ಯಶಸ್ವಿ ಕವನವೂ ತನ್ನ ಅರ್ಥದ ಅಂತಃಸಾರಕ್ಕಾಗಿ ತನ್ನನ್ನೇ ಅಲ್ಲದೆ ಇನ್ನೊಂದನ್ನು ಅವಲಂಬಿಸದು. ಸಾಹಿತ್ಯೋಕ್ತಿಗಳ ಉದ್ಧಾರವು ಈಲಿಯಟ್ಟರ ಸೂಚನಾತಂತ್ರದ ಒಂದು ಅಂಗವಷ್ಟೆ. ಸ್ವೀನೀಪದ್ಯದಲ್ಲಿರುವಂತೆ ಅಗಮೆಮ್ನನ್ ಮತ್ತು ಟಿಟ್ಟಿಭಗಳ ಪ್ರತಿಮೆಗಳಲ್ಲಿ ಈಲಿಯಟ್ ಗ್ರೀಕ್ ರುದ್ರನಾಟಕಗಳ ಗಾಂಭೀರ್ಯವನ್ನು ಬಿಂಬಿಸಬಲ್ಲರು; ಆ ಮೂಲಕ ಕವನದ ಮಿಕ್ಕ ಭಾಗ ಸೂಚಿಸುವ ಅಂಶವೆಲ್ಲಕ್ಕೂ ವಿರುದ್ಧವಾಗಿರುವ ಒಂದು ಇಡಿ ಅರ್ಥಮಾಲೆಯನ್ನು ಸಂಕ್ಷಿಪ್ತವಾಗಿ ಹೇಳಬಲ್ಲರು. ಆದುದರಿಂದ ತಮ್ಮ 'ಬಂಜರುಭೂಮಿ'ಯಲ್ಲಿ ಅವರು ಫ್ರೆಂಚ್ ಸಾಂಕೇತಿಕರ, ಡಾನ್ ಮತ್ತು ಅತಿಭೌತ ಪಂಥದ ಕವಿಗಳ, ಡಾಂಟೆಯ ಹಾಗೂ Dolce Stil Nuovo ಕವಿಗಳ ಕೃತಿಗಳಿಂದೆತ್ತಿದ ಉಕ್ತಿಗಳ ಮೂಲಕ ತಮ್ಮ ಮೇಲ್ಪಂಕ್ತಿಯಲ್ಲಿದ್ದ ಹಿರಿಯ ಕವಿಗಳ ದರ್ಶನ ಪ್ರಪಂಚಕ್ಕೆ ವಿರುದ್ಧವಾದ ತಮ್ಮ ನಿರ್ಜನ ಮರುಸ್ಥಲದ ಹಾಗೂ ಆತ್ಮಿಕ ಅನಾವೃಷ್ಟಿಯ ದರ್ಶನವನ್ನು ಸೂಚ್ಯವಾಗಿ ಮೂಡಿಸಿದ್ದಾರೆ. 'ಬಂಜರುಭೂಮಿ'ಯ ೨ನೆಯ ಭಾಗದಲ್ಲಿ ಬಂದ ಶೇಕ್ಸ್‌ಪಿಯರನ 'ಆಂತೊನಿ ಮತ್ತು ಕ್ಲಿಯೋಪಾತ್ರ'ದ ಪಡಿನುಡಿಗಳಂತೆ ಕೆಲವೆಡೆ ಆ ವಿರುದ್ಧಭಾವಗಳ ಯುಗಬಂಧವು ವಿಪರೀತಾರ್ಥ ಬೋಧಕವಾಗಿದೆ. ಅಲ್ಲಿ ನರವಿಕ್ಷಿಪ್ತ ತಲೆಯ ಈಗಿನ ಒಬ್ಬ ಒಳ್ಳೆಯ ಹೆಂಗಸಿನ ಖಾಸಗಿ ಕೋಣೆಯ ವರ್ಣನೆಯಿದೆ. ತೀರ ತಣ್ಣಗೆ ಮಿಣ್ಣಗೆ ಬಿದ್ದಿರುವ ಅವಳ ಗಂಡ ಅಥವಾ ಪ್ರಿಯತಮನ ಜೊತೆಗೆ ಅವಳು ಅಲ್ಲಿ ಗರಗಸದಂತೆ ತಲೆಕೆಡಿಸುವ ತರಹದ ಜಗಳಮಾಡುತ್ತಿರುತ್ತಾಳೆ. ಕೆಲವುಸಲ ಸಾಹಿತ್ಯವು ವರ್ತಮಾನ ಪರಿಸ್ಥಿತಿಯನ್ನು ಬಣ್ಣಿಸುವ ತಕ್ಕ ಪದಗಳನ್ನು ಗುರುತಿಸಿ ಆ ಮೂಲಕ 'ನೀನೊಂದೇ ಅಲ್ಲ (ಇನ್ನೂ ನಿನ್ನಂಥವರಿದ್ದಾರೆ)' ಎಂದು ನೆನಪುಮಾಡಿಕೊಟ್ಟು ಹುಚ್ಚರಂತಾದ ತಲೆಮಾರನ್ನು ಸಂತಯಿಸುತ್ತದೆ ಮತ್ತು ಬೆಂಬಲಿಸುತ್ತದೆ. ಅದರಿಂದ ಹತೋಟಿಗೆ ತರುವ ಕಾರ್ಯದಲ್ಲಿ

ಮೊದಲ ಹೆಜ್ಜೆ ಸಾಧಿಸಿದಂತಾಗುತ್ತದೆ. ಅಂಥ ಲಕ್ಷಣವನ್ನು ಇನ್ನೊಂದು ದೇಶ–ಕಾಲದ ಆವರಣದ ಮೂಲಕ ಸ್ವೀಕರಿಸುವುದು ಸಮನ್ವಯ ಸಾಧಿಸುವ ಮೊದಲ ಹೆಜ್ಜೆಯೂ ಆಗುವುದು. ಗುಡ್ಡದ ಮೇಲಕ್ಕೂ ರಾಜಾವಿಲಿಯಮ ರಸ್ತೆಯ ಕೆಳಗೂ ಹೆಬ್ಬೊನಲಾಗಿ ಹರಿದ ನಗರ–ನಾಗರಿಕರನ್ನು ಬಣ್ಣಿಸಲು ಸಪ್ತಮ ನರಕದ (Inferno) ಪದಗಳನ್ನು ಈಲಿಯಟ್ ಬಳಸಿದರು. ಏಕೆಂದರೆ ಅವರ ಮನದ ಮರುಭೂಮಿಕೆಯನ್ನು ಡ್ಯಾಂಟೆಯೊಬ್ಬನೇ ಲಕ್ಷಣಿಸಿಯಾನು ಎಂದೆನಿಸಿತವರಿಗೆ. ಅಂಥ ದರ್ಶನವು ಉಂಟುಮಾಡುವ ವೈಯಕ್ತಿಕ ಕ್ಲೇಶವನ್ನು ಕವಿ ಸ್ವೀಕರಿಸುತ್ತಾರೆ. ಅದರಿಂದಲೇ ತನ್ನ ಪಾಪಶುದ್ಧಿಶಾಲೆಯ ಜ್ವಾಲೆಗಳಲ್ಲಿಂದ ಅರ್ನಾಟ್ ಡೇನಿಯಲ್ 'Sovegna vos' ಎಂದು ಗಟ್ಟಿಯಾಗಿ ಕಿರಿಚುವ ಮತ್ತು ಮುಳುಗಿಹೋದ ನಾವಿಕನನ್ನು ಕುರಿತು ಸೇಂಟ್ ಆಗಸ್ಟೈನ್ ಕೂಗುವ ಅಂಶಗಳು ಬಂದಿವೆ. (ಅವರು ನೆನೆಸಿಕೊಂಡದ್ದು ಹೇಳಿದ್ದಲ್ಲ). ಅವುಗಳಲ್ಲಿ ಪ್ರತಿಯೊಂದೂ ಜಗತ್ತ್ಯಾಗ ಬುದ್ಧಿಯನ್ನು ಸೂಚಿಸುತ್ತದೆ ಮತ್ತು ಅವು ಕೆಲಕಾಲದವರೆಗೆ ಈಲಿಯಟ್ಟರ ಪದ್ಯದಲ್ಲಿ ಮಾರ್ದನಿಗೊಡುತ್ತ ಬಂದವು. ಕ್ಷಣಕಾಲ ಬಂದುಹೋಗುವ ಚಿರಪರಿಚಿತ ಪಾತ್ರಗಳು ಬಹಳ ಇವೆ. ಜರ್ಮನಿಯ ಹಳೆಯ ರಾಜಪುತ್ರಿ' ಲಿಲ್ ಎಂಬ ವ್ಯಕ್ತಿಯ ತೆಪ್ಪಗಿನ ಸಪ್ಪೆಮೂರ್ತಿ (ಹಾಟೆಲ್ ದೃಶ್ಯದಲ್ಲಿ); ಸ್ವೀನಿಯ ಸಖಿಯರಲ್ಲಿ ಒಬ್ಬಳಾಗಬಹುದಾದ ಟೈಪಿಸ್ಟ್; ಅವಳ ಅಕ್ಕತಂಗಿಯರಾದ ಮೂವರು ಥೇಮ್ಸ್–ಪುತ್ರಿಯರು; ಪ್ರಸಿದ್ಧ ನಿಮಿತ್ಯಕಾರ್ತಿಯಾದ ಮೇಡಂ ಸೋಸೋಸ್ಟ್ರಿಸ್ ಮತ್ತು ಸ್ಮರ್ನದ ವ್ಯಾಪಾರಿಯಾದ ಯೂಜೆನಿದಸ್, ಎಲ್ಲರನ್ನೂ ಮೊದಲೇಬಲ್ಲ ಮುದಿ ಋಷಿ ಟೈರೇಷಿಯಸ್ಸನ ಕುರುಡುಗಣ್ಣುಗಳ ಮೂಲಕ ಕಾಣಲಾಗಿದೆ; ಏಕೆಂದರೆ, ಇಡಿ ಪದ್ಯವೇ ಅವನ ಕಾಣ್ಕೆ ಎಂದು ಈಲಿಯಟ್ ಸ್ಪಷ್ಟವಾಗಿ ಹೇಳಿದ್ದಾರೆ. ನೀಚಪಾತ್ರಗಳನ್ನು ಅಷ್ಟು ತಿಳಿಯಾಗಿ ವಿಂಗಡಿಸುವಂತಿಲ್ಲ; ಏಕೆಂದರೆ, ಅವು ಒಂದು ಅವಾಸ್ತವ ನಗರದಲ್ಲಿರುವ ಛಾಯಾಜೀವಿಗಳು. ಯುದ್ಧೋತ್ತರ ಪ್ರಪಂಚವನ್ನು ಈಲಿಯಟ್ ಕಂಡದ್ದು ಹೀಗೆ; ವೀರರಿಗೆ ಅದು ಬಾಳಲು ಉಚಿತವಲ್ಲ, ಅದರಲ್ಲಿ ಬದುಕಲು ಅವರ ಗೆಳೆಯರಲ್ಲಿ ಬಹಳ ಜನರು ಉಳಿಯಲಿಲ್ಲ; ಅದೊಂದು ಚಿಕ್ಕಪ್ರಮಾಣದಲ್ಲಿ ಕಂಡ ವಿಶ್ವದರ್ಶನ. ಡಬ್ಲಿನ್ನಿನ ಜೀವನದಲ್ಲಿಯ ಒಂದು ದಿನವನ್ನು ಬಣ್ಣಿಸಲು ಜಾಯ್ಸನಿಗೆ ೨೦೦ ಪುಟಗಳು ಬೇಕಾದರೆ, ಈಲಿಯಟ್ ತನ್ನ ದರ್ಶನವನ್ನು ೪೦೦ ಸಾಲುಗಳಲ್ಲಿ ಭಟ್ಟಿ ಇಳಿಸಿದರು. ಇಡಿ ಪದ್ಯ ಅದರಲ್ಲೂ ಹೆಚ್ಚಾಗಿ ಅದರ ಕೊನೆಯ ಸಾಲುಗಳು–ವ್ಯತಿರೇಕಯುಗಬಂಧದ ತಂತ್ರವನ್ನು ಅನುಸರಿಸಿ ಹೆಚ್ಚು ಗಂಭೀರವೂ ರುದ್ರವೂ ಆದ ಪರಿಣಾಮವನ್ನು ಉಂಟುಮಾಡುತ್ತವೆ. ತಾಳತಂತಿ ಕಿತ್ತುಹೋದ ಮನಸ್ಸು ಸಾಹಿತ್ಯಪ್ರಪಂಚದ ಹರಕು ಮುರುಕು ಒಡಕುಚೂರುಗಳನ್ನು ಗಾಬರಿಯಿಂದ ಎದೆಗಪ್ಪಿಕೊಳ್ಳುತ್ತಿರುವಾಗ ಒಮ್ಮಿಂದೊಮ್ಮೆ ಮಹಾಘಂಟಾನಾದದಂಥ ಗಾಂಭೀರ್ಯವುಳ್ಳ,

**"ದತ್ತ, ದಯಧ್ವಂ, ದಮ್ಯತ.**
**ಶಾಂತಿಃ ಶಾಂತಿಃ ಶಾಂತಿಃ"**

ಎಂಬ ಸಂಸ್ಕೃತ ಆಶೀರ್ವಾದವು ಧಿಗ್ಗನೆ ಎದುರಾಗುತ್ತದೆ.

'The Waste Land (ಬಂಜರುಭೂಮಿ)'ಯನ್ನು ಕಂಡು ಸಮಕಾಲೀನ ಜನತೆ ಗೊಂದಲಕ್ಕೀಡಾಯಿತು. ಆದರೆ ಸುಮಾರು ೩೦ ವರ್ಷಗಳ ಕಾಲದ ವಿವರಣೆ–ವ್ಯಾಖ್ಯಾನಗಳ ನಂತರ ಓದುಗನಿಗದು ನಾಳಿಕೇರಪಾಕವೆನ್ನಿಸಬಾರದು. ಏಕೆಂದರೆ, ಅವನಿಗೆ ಸರಿಯಾಗಿ ಹಾದಿಹಾಕಿ ಕೊಟ್ಟಿದೆ, ಬೇಕಾದಷ್ಟು ವ್ಯಾಖ್ಯೆಗಳ ನೆರವಿದೆ. ಅದರಲ್ಲೂ ಕೆಲ ವ್ಯಾಖ್ಯೆಗಳು ಗ್ರಂಥಕರ್ತರು ವಿನಯಪೂರ್ವಕವಾಗಿ ಇಲ್ಲವೆಂದ ಆಳವಾದ ಅರ್ಥವನ್ನೂ ಹೇಳಿಬಿಟ್ಟಿವೆ. ಅದರ ಅರ್ಥವನ್ನು ಸುಲಭವಾಗಿ ಗ್ರಹಿಸುವ ಮಾರ್ಗವೆಂದರೆ ಬಹುಶಃ ಆ ಗ್ರಂಥದ ಪರಿಚಯವುಳ್ಳ ಒಬ್ಬ ಓದುವುದನ್ನು ಕೇಳುವುದು–ಅದಕ್ಕೂ ಉತ್ತಮ ಮಾರ್ಗವೆಂದರೆ ರಿಕಾರ್ಡ್‌ಮಾಡಿರುವ ಸ್ವತಃ ಈಲಿಯಟ್ಟರೇ ಕೆಲವರ್ಷಗಳ ಹಿಂದೆ ಕಾಂಗ್ರೆಸ್ ಲೈಬ್ರೆರಿಗಾಗಿ ಮಾಡಿದ ವಾಚನವನ್ನು ಕೇಳುವುದು.

ಪದ್ಯದ ರೂಪದ ಬಗ್ಗೆ (ಶರೀರದ ಬಗ್ಗೆ) ಬಹಳ ಲಕ್ಷ್ಯ ಬಿದ್ದಿದೆ. ಅದನ್ನು ೫ ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮತ್ತು ಪ್ರತಿಯೊಂದು ಭಾಗವೂ ಒಂದು ರೀತಿಯಿಂದ ಪೂರ್ಣವಾಗಿದೆ. ಅದರ ಸಾಂಗೀತಿಕ ನಿದರ್ಶನವು ವಿಮರ್ಶಕರಿಂದ ಬಹಳವಾಗಿ ಒತ್ತಿಹೇಳಲ್ಪಟ್ಟಿದೆ. ಪದೇಪದೇ ಬರುವ ಬೇರೆ ಬೇರೆ ವಸ್ತುಗಳಾದ ಅನಾವೃಷ್ಟಿ–ವೃಷ್ಟಿ, ಬಂಜೆತನ–ಉಲ್ಲಂಘನ, ನಾಶ–ಸಾಮಾಜಿಕ ಅಲ್ಪವಿಷಯಗಳು–ಇವನ್ನು ಸಾಂಗೀತಿಕ ವಸ್ತುಗಳೊಡನೆ ಹೋಲಿಸಲಾಗಿದೆ. ನಿದರ್ಶನವೇನೋ ಉಪಯುಕ್ತವಾದುದಾದರೂ ಅದನ್ನು ಎಚ್ಚರಿಕೆಯಿಂದ ಬಳಸಬೇಕು. ಅದು ಓದುಗ ಕೊಡಬೇಕಾದ ಲಕ್ಷ್ಯದ ಬಗೆಯನ್ನೂ ನಿರೀಕ್ಷಿಸಬೇಕಾದ ಆಕೃತಿಯನ್ನೂ ಸೂಚಿಸಲು ನೆರವಾದೀತು, ಅಷ್ಟೇ; ಆದರೆ ಅದನ್ನು ಅದಕ್ಕೂ ಮುಂದೆ ಒತ್ತಬಾರದು.

ಅಥವಾ ಆ ಪದ್ಯವನ್ನು ಒಂದು ನಿರಾಶೆಯ ದರ್ಶನವೆಂದೂ ಓದಕೂಡದು. ಅದನ್ನು ಈಲಿಯಟ್ಟರ ನರಕವೆಂದೂ ಕರೆಯಲಾಗಿದೆ; ಆದರೆ ಆ ನರಕದಲ್ಲೂ ಇನ್ನೊಂದು ಪ್ರಪಂಚವನ್ನು ನೆನಪಿಗೆ ತರುವಂಥ ಎಳಬೆಳಕಿನ ಕಿರಣಗಳಿವೆ. ಇಲ್ಲಿ ಸೌಂದರ್ಯ ಹಾಗೂ ಪ್ರೇಮದ ದರ್ಶನವು ಪೂರ್ತಿಯಾಗಿ ಬಹಿಷ್ಕೃತವಾಗಿಲ್ಲ!

**"ಆದರೂ ಬಂದನಂತರ ನಾವು ತಡವಾಗಿ, ಹೈಸಿಂತು**
**ತೋಟದಿಂದ**
**ನಿನ್ನ ತೋಳ್ತುಂಬಿತ್ತು, ಕುರುಳೊದ್ದೆಯಾಗಿತ್ತು,**
**ಬಾಯ್ದೆರೆಯದಾದೆ ನಾನು,**

**ನನ್ನ ಕಣ್‌ಮಂಜಾಯ್ತು, ಬದುಕಿಯೂ ಇದ್ದಿಲ್ಲ**
**ಸಾವಕಂಡಿದ್ದಿಲ್ಲ ನಾನು,**
**ನನಗಾವುದೂ ಗೊತ್ತೆ ಇದ್ದಿಲ್ಲ, ಬೆಳಕಿನೆದೆಯಾಗಿದ್ದ**
**ಮೌನದೊಳಗಿಟ್ಟೆ ಕಣ್ಣ.**
**Oed' und leer das Meer**

**ಅದಲ್ಲದೆ, ಕೊನೆಯ ಭಾಗದಲ್ಲಿ–**
**'ವ್ಯಾವಹಾರಿಕ ಜಾಣತನದ ಯುಗವೆಂದಿಗೂ**
**ಹಿಂದೆಗೆಯಲಾರದಂತೆ**
**ಒಂದೆಚಣದಲ್ಲಿ ಗೆಯ್ದಾತ್ಮಾರ್ಪಣದ ಭಯಂಕರ**
**ಧೈರ್ಯ (ಅಲ್ಲವೇನು)'**
**ಮತ್ತು ನಿಯಂತ್ರಿತ ಸುಖದ ಚಿತ್ರದಲ್ಲಿ**
**'ಹಾಯಿ–ಹುಟ್ಟುಗೋಲು ಹಿಡಿವ ಚುರುಕು**
**ಹಸ್ತಗಳಿಗೆ ದೋಣಿ**
**ಹರುಷದಿಂದ ವಶ್ಯವಾಯ್ತು, ಕಡಲು ಶಾಂತವಿದ್ದಿತು,**
**ಮುದದೆ ನಿನ್ನ ಹೃದಯ ಕೂಡ ಜೊತೆಗೆ ಓಡುತಿದ್ದಿತು.'**

ನಿರ್ವೀರ್ಯತೆಯ ಹಾಗೂ ಅನಾವೃಷ್ಟಿಯ ಪ್ರಪಂಚದಿಂದ ಕ್ಷಣಕಾಲ ತಲೆತಪ್ಪಿಸಿಕೊಂಡಿರುವ ಭಾವವಿದೆ. ಅಷ್ಟೇ ಅಲ್ಲದೆ ಚಿತ್ರಿಸಲಾದ ಪ್ರಪಂಚವು ಅಸ್ತವ್ಯಸ್ತತೆ ಮತ್ತು ಕ್ಷಯಗಳದ್ದಾಗಿದ್ದರೂ ಪದ್ಯದಲ್ಲಿಯ ಸೂಕ್ಷ್ಮವೂ ಅವ್ಯಕ್ತವೂ ಆದ ಕ್ರಮಬದ್ಧತೆಯು ಆ ದರ್ಶನವನ್ನು ಸಹ್ಯವನ್ನಾಗಿ ಮಾಡುತ್ತದೆ– ಕೇವಲ ಸಹ್ಯವಾಗಿಯಾದರೂ ಮಾಡುತ್ತದೆ. ಪದ್ಯದಲ್ಲಿ ಉದ್ದಕ್ಕೂ ಪುನಃ ಪುನಃ ಬರುವ ಪ್ರತಿಮೆಗಳು 'ತಮ್ಮ ತಮ್ಮ ವಿಶಿಷ್ಟ ಸಂದರ್ಭಗಳಿಗನುಗುಣವಾಗಿ ಗಣ್ಯವಾಗಿ ಬೇರೆ ಬೇರೆ ಭಾವನಾಛಾಯೆಗಳನ್ನು ಮೂಡಿಸುತ್ತವೆ' ಎಂದು ಅನೇಕ ಸಲ ಎತ್ತಿತೋರಿಸಲಾಗಿದೆ. ಉದಾಹರಣೆಯೆಂದರೆ ನದಿಯ ವಿವಿಧ ಪ್ರತಿಮೆಗಳಲ್ಲಿಯ ಸೂಕ್ಷ್ಮಪ್ರಭೇದ; ಎರಡನೆಯ ಭಾಗದಲ್ಲಿ ಬರುವ ಫಿಲೋಮೆಲ್ ದೂರದ ಮಾಡಿಗೆ ಹಾರಿಹೋದ ಹಕ್ಕಿಯಂತೆ ಅವ್ಯಕ್ತವಾಗುತ್ತ ಹೋಗುವುದು; ತದ್ವಿರುದ್ಧವಾಗಿ, ೩ನೆಯ ಭಾಗದಲ್ಲಿ ಟೈಪಿಸ್ಟ್ ಮೋಹಿಸುವುದರ ಮೇಲಿನ ರಭಸದ ಒತ್ತಾಸೆ ಒಂದು ಕ್ರಮಬದ್ಧತೆಯನ್ನೂ ಒಂದು ಸಂವಿಧಾನದ ತತ್ವವನ್ನೂ ಈ ಆಭಾಸಿಕ ಅಸ್ತವ್ಯಸ್ತತೆಯಲ್ಲಿ ಹೊಳೆಯಿಸುತ್ತದೆ; ಸುಸ್ತು ಗೊಂದಲ ಮತ್ತು ನಿರಾಶೆಗಳ ವಿವಿಧ ಸಂಜ್ಞೆಗಳ ವಿರುದ್ಧ ಇಡುವ ಯಾವ ಹೇಳಿಕೆಯನ್ನೂ ಈ ಒಂದೇ ಪ್ರತಿಮೆಯ ವಿವಿಧ ಮಾದರಿಗಳ ಪೌನಃಪುನ್ಯವು ಹೊರಡಿಸಲಾರದು; ಬಹುಶಃ ಅವುಗಳ ವ್ಯವಸ್ಥೆಯು ಇಸ್ಪೀಟು ಕಟ್ಟಿನಲ್ಲಿಯ ನಾಲ್ಕು ಜಾತಿಯ ಎಲೆಗಳಷ್ಟು

ಯಥೇಷ್ಟವಾಗಿದೆ. ಮೊದಲನೆಯ ಭಾಗದಲ್ಲಿಯ ಟೆರಾಟ್ ಕಟ್ಟಿನ ಸಂಕೇತಗಳನ್ನು ಪದ್ಯದ ಹಲವಾರು ಪ್ರಧಾನ ಸಂಕೇತಗಳೊಡನೆ ಸಾಮರಸ್ಯಗೊಳಿಸಬಹುದು. ಆದರೆ ಎಲೆ ಕಟ್ಟು ಯಥೇಷ್ಟವಾಗಿದ್ದರೂ ಅದರ ಸಮಯಗಳು ಕ್ರಮಬದ್ಧವಾದಂಥವು.

ಹೈಸಿಂತ್ ಹುಡುಗಿಯ ದರ್ಶನವು ಒಂದು ಕ್ಷಣವನ್ನು ಅನಂತತೆಗೇರಿಸಿದರೆ, 'ಬಂಜರು ಭೂಮಿ'ಯ ಕೊನೆಯಲ್ಲಿ ಬರುವ ನಿರೀಕ್ಷೆಯ ವಿಚಿತ್ರಭಾವವು ಕ್ಲಿಯೋಪಾತ್ರಳ–

**'ನನ್ನೆದೆಯ ಮರುಭೂಮಿಕೆಯೆ ಹಿಂದಿಗಿಂತಲೂ**
**ಉತ್ತಮದ ಬಾಳನ್ನು ಹೆಣೆಯತೊಡಗಿಹುದು'**

ಎಂಬ ಸಾಲನ್ನು ನೆನಪು ಮಾಡಿಕೊಡುತ್ತದೆ.

ಅತಿ ಅದ್ಭುತವಾದ ಸಂಸ್ಕೃತದ ಆಶೀರ್ವಾದವನ್ನುಳಿದರೆ ಇನ್ನಾವುದೂ ಈ ಭಾವನೆಗೆ ಸ್ಪಷ್ಟ ಆಧಾರವನ್ನು ಕೊಡದು; ಆದರೆ ಅದು ಲಯದ ಮೂಲಕ ನಮ್ಮ ಸಂವೇದನೆಗೆ ನಿಲುಕುತ್ತದೆ. ಆ ಲಯವು ಕೊನೆಯ ಭಾಗದ ಗಡಿಬಿಡಿಯ, ಉಸಿರು ಕಟ್ಟಿಸುವ ಭಯಸ್ವಪ್ನೋಲ್ಲೇಖದ ನಂತರ ನಾಡಿ ಹೊಡೆದುಕೊಳ್ಳಲಾರಂಭಿಸಿತೋ ಎನ್ನುವ ಹಾಗೆ ಮತ್ತಷ್ಟು ಬಲಿಷ್ಠವೂ ಎದ್ದುಕಾಣುವಂಥದೂ ಆಗುತ್ತದೆ. ಗುಡುಗಿನ ಗರ್ಜನೆಯಾದ 'ಕೊಡು, ಸಹಾನುಭೂತಿ ತೋರು, ಇಡು ಹತೋಟಿಯಲ್ಲಿ' ಎಂಬುದು ಓದುಗನಿಗೆ ಪದ್ಯದಲ್ಲೇ ಪೂರಯಿಸಲ್ಪಡುತ್ತದೆ. ಅದು ಸರ್ವಧ್ವಂಸಭಾವವನ್ನು ಚಿತ್ರಿಸುವ ಪ್ರಾಮಾಣಿಕತೆ ಮತ್ತು ಅಂತರ್ದೃಷ್ಟಿಯಿಂದ ಸಂತವಿಟ್ಟು ತನ್ನ ಕಡೆಗೆ ಲಕ್ಷ್ಯ ಸೆಳೆಯುವುದು; ಅಂಥ ದರ್ಶನವನ್ನು ಶಬ್ದರೂಪದಲ್ಲಿ ಆವಿರ್ಭವಿಸುವಂತೆ ಮಾಡುವ, ಅದನ್ನು ದೃಶ್ಯವಾಗಿ ರೂಪಿಸಿ ರಸ್ಯಮಾನಗೊಳಿಸುವ ಶಕ್ತಿಯು ಅತ್ಯುನ್ನತ ಪ್ರಮಾಣದ ನಿಯಂತ್ರಣವನ್ನು ಸೂಚಿಸುತ್ತದೆ,

'ಬಂಜರುಭೂಮಿ'ಯು ಈಲಿಯಟ್ಟರ ಅತಿ ದೊಡ್ಡ ಕೃತಿಯೆಂದಲ್ಲ; ಅದು ಅವರ ಅತಿ ಪ್ರಭಾವಕವಾದ ಪದ್ಯವಷ್ಟೇ. ೧೯೨೦ರ ಉತ್ತರ ಕಾಲದಲ್ಲಿ ಬಂದ ತಲೆಮಾರು ಅದನ್ನು ಕೊಂಡು ಹೀರಿ ತನ್ನ ಮನದ ಒಂದು ಅಭ್ಯಾಸಾಂಗವನ್ನಾಗಿ ಮಾಡಿಕೊಂಡಿತು. ಈಲಿಯಟ್ಟರ ೬೦ನೆಯ ವರ್ಧಂತಿಯಲ್ಲಿ ಆಡೆನ್ ಹೇಳಿದಂತೆ:

**"ಮೂಕೀಕೃತನಾಗದೆ ಹೃತ್ಕಂಪದಿಂದ ನೀನು**
**ಭಯ–ನೀರಡಿಕೆಗಳಿಗೊಪ್ಪುವಂಥ ಭಾಷೆಯನ್ನು**
**ಹುಡುಕಿತೆಗೆದು ಸಾರ್ವತ್ರಿಕ ಭಯವ ತಡೆದೆ ಬಹಳ"**

ಇಷ್ಟರ ಮೇಲೆ ಪದ್ಯದಲ್ಲಿಯ ವ್ಯತಿರೇಕಗಳ ಗಂಭೀರತೆ ಹಾಗೂ ಕ್ಷೋಭೆ, ಕವಿ ತನ್ನ ಒಳ–ಹೊರಗಿನ ಪ್ರಪಂಚಗಳ ಸಮಸ್ಯೆಗಳೊಡನೆ ಹೋರಾಡುವ ಭಾವ ಈಲಿಯಟ್ಟರ

ಅನಂತರದ ಪದ್ಯಗಳಿಗಿಂತ ಇಲ್ಲಿ ಹೆಚ್ಚು ಬಲಿಷ್ಠವಾಗಿದೆ. Four Quartets (ಚತುಷ್ಟಯದ) ಈಲಿಯಟ್ಟರ ಸೂತ್ರಾನುಸಾರ) 'ಸ್ಪಿನೋಜ ಮತ್ತು ಅಡಿಗೆಯ ವಾಸನೆ'ಗಳನ್ನು ಪರಸ್ಪರ ಸಂಬಂಧಿಸಲಾಗಿಲ್ಲ. ಅಡಿಗೆಯ ವಾಸನೆಯೇ ಅಳಿಸಿಹೋಗಲನುವಾಗುವುದು. ಅನಂತರದ ಪದ್ಯಗಳೆಲ್ಲ ಪೂರ್ತಿಯಾಗಿ ಒಳಅನುಭವಗಳ ವಿಷಯವಾಗಿವೆ.

## III

The Hollow Men (೧೯೨೫) ಅಥವಾ ಖಾಲಿ ಮನುಷ್ಯರೆಂಬ ಈಲಿಯಟ್ಟರ ಪದ್ಯವು ಅವರ ಇತರ ಪದ್ಯಗಳ ಬಗೆಯಿಂದ ತೀರ ಭಿನ್ನವಾಗಿದೆ; Ash Wednesday (೧೯೩೦) ಅಥವಾ ಬೂದಿಬುಧವಾರವೆಂಬುದಕ್ಕೆ ಪೂರ್ವರಂಗವೆಂದು ಅದನ್ನು ಗ್ರಹಿಸಬಹುದು. ಅವೆರಡಕ್ಕೂ ಸಾಧಾರಣವಾಗಿ ಒಂದು ಹೊಸ ಬಗೆಯ ಲಯ ಹಾಗೂ ಸ್ಥಾಯಿಪ್ರವೃತ್ತಿಗಳಿವೆ.

"ಖಾಲಿ ಮನುಷ್ಯರ"ಲ್ಲಿ ಚಿತ್ರಿಸಲಾದ ಪ್ರಪಂಚವು ಒಂದು ನರೆ ಬಣ್ಣದ ಪ್ರೇತದೇಶ; ಅದಕ್ಕೆ ಹೆಸರಿಲ್ಲ; ಲಕ್ಷಣವಿಲ್ಲ– ಅದೊಂದು ಯಮನ ಸ್ವಪ್ನದ ರಾಜ್ಯ.' ಬೊದಲೇರನ ಪ್ಯಾರಿಸ್ಸಿನಂತೆಯೇ 'ಬಂಜರು ಭೂಮಿ'ಯಲ್ಲಿಯ ಲಂಡನ್ನನ್ನು ಪ್ರತ್ಯಕ್ಷೀಕರಿಸಲಾಗಿದೆ; ಆದರೆ ಈಗ ಹೊರ ಪ್ರಪಂಚವಷ್ಟನ್ನು ಬಿಟ್ಟು ಬಿಡಲಾಗಿದೆ. 'ಖಾಲಿಮನುಷ್ಯರ'ಲ್ಲಿಯ ಅನುಭವವನ್ನೂ 'ಬಂಜರುಭೂಮಿ'ಯೊಡನಿರುವ ಅದರ ಸಂಬಂಧವನ್ನೂ ಸಂಗ್ರಹಿಸಿ ಹೇಳಬೇಕಾದರೆ 'ಚತುಷ್ಟಯ ಅಥವಾ ಭಾಗಚತುಷ್ಟಯ'ದ ಕೆಲ ಸಾಲುಗಳನ್ನು ಎತ್ತಿಕೊಡಬಹುದಾಗಿದೆ.

**"ಅಲ್ಲಿರುವ ಮುಖಗಳೋ ಕಾಲಕೀಟಾನುವಿದ್ಧ,**
**ಸುಸ್ತುಹಿಡಿದಂಥವೋ, ಮತ್ತನೇಕಾಗ್ರವಾಗಿ**
**ಭ್ರಮೆಯಿಂದ ಭ್ರಮೆಗೇರಿ, ಶುಷ್ಕ ಕಲ್ಪನೆ ಮತ್ತು**
**ಶೂನ್ಯಾರ್ಥಗಳ ತುಂಬಿಕೊಂಡು ಬಾತರುಚಿಯನು,**
**ಏಕಾಗ್ರತೆಯ ಕಳೆದುಕೊಂಡು ಕುಳಿತಿಹ ನರರು**
**ಮತ್ತು ಕಾಗದ–ಚೂರುಗಳು; ಕಾಲಪೂರ್ವೋತ್ತ**
**ರದ ಶೀತವಾತದಲಿ ಸಿಕ್ಕಿ ಸುಳಿದಿರುಗುತಿವೆ;**
**ಲಂಡನ್ನು, ಹ್ಯಾಂಪ್‌ಸ್ಟೆಡ್ಡು, ಕ್ಲಾರ್ಕನ್ನವೆಲ್ಲು ಮೇಣ್**
**ಕ್ಯಾಂಪ್ಡನ್ನು, ಪುಟ್ನಿ, ಹೈಗೇಟು, ಪ್ರಿಮ್ರೋಜು, ಆ**
**ಲ್ಯುಡ್ಗೇಟುಗಳ ಹತಪ್ರಭವಾದ ಗುಡ್ಡಗಳ**
**ಗುಡಿಸುವೆಲರಲಿ ಉರುಳಿತೇಲಿ ಹೋಗುತ್ತಿಹವು.**
**ಈ ಚಿಲಿಪಿಲಿ ಪ್ರಪಂಚದೊಳಿಲ್ಲಿ ಗಾಢಾಂಧ**

ಕಾರ ಇಲ್ಲಿಲ್ಲ ಇಲ್ಲಿಲ್ಲ (ನೋಡು).
ಇಳಿಕೆಳಗೆ, ಆ ಸನಾತನದ ಏಕಾಂತ ಪ್ರ–
ಪಂಚದಲಿ, ಅದು ಜಗತ್ತೇ? ಜಗತ್ತಲ್ಲ; ಅದು
ಅಲ್ಪದ ಜಗತ್ತು, ಒಳಗತ್ತಲೆ, ಮಹಾಪಹಾ–
ರದ ಫಸಲು, ಎಲ್ಲ ಆಸ್ತಿಗಳ ಕಸುಗೊಳ್ಳಾಟ,
ಎಲ್ಲಾ ವಿವೇಕತನವನು ಕತ್ತರಿಸುವೆಗರಾಟ,
ಕಲ್ಪನಾಜಗದಿಂದ ಹೊರಟುಹೋಗುವ ಪಾಳಿ,
ಆತ್ಮಪ್ರಪಂಚ ಕೈಸೋತು ಕುಳಿತಿಹ ಗಾಳಿ.

Burnt Norton, III.

'ಖಾಲಿಮನುಷ್ಯರು' ಎಂಬ ಈಲಿಯಟ್ಟರ ಪದ್ಯವು ಅವರ ಪದ್ಯಗಳ ಅತ್ಯುತ್ಕಟ ಭಾವಕೇಂದ್ರವಾಗಿದೆ; ಅದು ಅತಿ ಅನಾಥತೆಯ ಅನುಭವವನ್ನು ರಿಕಾರ್ಡ್ ಮಾಡಿರುವುದರಿಂದ ಅದರಲ್ಲಿ ರೂಪಗಳೇ ಇಲ್ಲ– ರಾತ್ರಿಯ ಕತ್ತುಹಿಸುಕುವ ಭಯ ಸ್ವಪ್ನದ ರೂಪಗಳೂ ಇಲ್ಲ. ಈ 'ಖಾಲಿಮನುಷ್ಯರು' ಹುಲ್ಲು ತುಂಬಿದ ಚರ್ಮದ ಚೀಲಗಳು; ಅಂದರೆ ತೊಂಡೆ ಚಪ್ಪರದ ಬೆಚ್ಚುಗಳು, ಹುಲ್ಲಿನ ಮನುಷ್ಯಾಕೃತಿಗಳು; ಅವು ಒಣಹುಲ್ಲಿನ ಮೇಲೆ ಬೀಸುವ ಗಾಳಿಯ ದನಿಯೊಡನೆ ಮಾತ್ರ ಪರಸ್ಪರ ಪಿಸುಗುಟ್ಟುವುವು. ಈ ಪ್ರತಿಮೆಯನ್ನು 'ಬಂಜರುಭೂಮಿಯ' ಕೊನೆಯ ಭಾಗದಿಂದ ತೆಗೆದುಕೊಂಡದ್ದು. ಅದೆಂದರೆ ಪೆರಿಲಸ್ ಚರ್ಚಿಗೆ ಹೋಗುವ ದಾರಿ. ಆದರೆ ಅದನ್ನಿಲ್ಲಿ ಬಹಳ ಬೇರೆಯಾಗಿ ಬಳಸಿಕೊಳ್ಳಲಾಗಿದೆ. ಕಲ್ಲು ಪ್ರತಿಮೆಗಳು, 'ಎಲೆಬೆಳೆಯದ ಬೋಳುಗುಡ್ಡೆಯ ಪ್ರದೇಶ' ಮತ್ತು 'ಬಾತುಕೊಂಡ ನದಿಯ ತೀರದ ಮಳಲು ದಿಣ್ಣೆ'; ಅಲ್ಲಿ ಈ ಖಾಲಿಮನುಷ್ಯರು ಯಮರಾಜ್ಯದ ಸಂಜೆಯ (Purgatorio II ೧೦೦–೨ರಿಂದ ತೆಗೆದುಕೊಂಡ ಒಂದು ಪ್ರತಿಮೆ) ಸಮಯದಲ್ಲಿ ಒಟ್ಟುಗೂಡುವುದು– ಇವು ಯಾವ ಸೌಂದರ್ಯದರ್ಶನದಿಂದಲೂ ಪುನೀತವಾಗಿಲ್ಲ, ಪುನರಾಶಾದಾಯಕವಾಗಿಲ್ಲ. ಅದನ್ನು ಜೀವತ್ಪ್ರಪಂಚದಲ್ಲೇ ಹಿಂದೆ ಬಿಟ್ಟು ಬರಲಾಗಿದೆ.

"ಕನಸಿನಲ್ಲಿಯೂ ನೋಡಲಾರೆನಾನಿಂಥ ಕಣ್ಣುಗಳನು
ಯಮನ ಸ್ವಪ್ನರಾಜ್ಯದಲ್ಲಿ ಕೂಡಾ ಸಿಕ್ಕವಿಂಥವುಗಳು.
ಅಲ್ಲಿ ಕಣ್ಣುಗಳು ಒಡೆದ ಸಾಲ ಮೇಲ್ಬಿದ್ದ ರವಿಯಬೆಳಕು
ಅಲ್ಲಿ ಒಂದು ಮರ ತೂಗುತಿಹುದು ತಂಗಾಳಿ ಹಾಡುವಲ್ಲಿ
ದನಿಗಳಿಹವು ಬಹು ದೂರ ದೂರ, ಅವು ಇಳಿವಕಳೆಯ ಅರಿಲ
ಹೊಳಪಿಗಿಂತ ಗಂಭೀರವಾಗಿಹವು (ನೋಡು ನಿಂತು ಮರುಳ)"

ಇಲ್ಲಿ ಕಣ್ಣುಗಳು ಪುನಃ ದೊರಕಿಯಾವೆಂಬ ದೂರದ,

ಬರಿದೆ ಹೇಳಿದ ಅಶೆಯಿದೆ–

**"ಯಮನ ಸಂಜೆರಾಜ್ಯದಲಿ ಬೆಳೆದ ಬಹುಪತ್ರ ಕಮಲದಂತೆ**
**ನಿತ್ಯತಾರೆವೊಲು ಖಾಲಿ ನರರ ಪ್ರತ್ಯಾಶೆಯೆಂಬುದಣ್ಣ."**

ಆದರೆ ಪದ್ಯವು Lord's Prayerನ ಪದಸಂಹತಿಗಳ ಛಾಯೆಯನ್ನು ಮೂಡಿಸುವ ವಿಸಂಗತವಾದ ಒಡಕು ಪ್ರಯತ್ನದಿಂದಲೂ ಮಕ್ಕಳ ಪಾದದ ಖಾಲಿ ಗಿಲಿ ಗಿಲಿ ಸದ್ದಿನಿಂದಲೂ ಕೊನೆಗೊಳ್ಳುತ್ತದೆ.

ಮೇಲೆಕೊಟ್ಟ ಪದ್ಯಭಾಗಗಳ ಆಂಗ್ಲ ಮೂಲದ ಲಯವು ಚಿಕ್ಕ, ನರವಿಲ್ಲದ ಸಾಲುಗಳನ್ನವಲಂಬಿಸಿದೆ; ಆಗೀಗ ಅಲ್ಲಿ ಅಸ್ತವ್ಯಸ್ತ ಪ್ರಾಸಗಳು ಬರುತ್ತವೆ. ಅದರಿಂದ ವಿಲಕ್ಷಣ ಶ್ರಮ, ಉತ್ತಾನತೆ ಮತ್ತು ಮೂಲೆಗುಂಪಾಗಿರುವಿಕೆಗಳು ಸೂಚಿಸಲ್ಪಟ್ಟಿವೆ, ದನಿಯು ತೆಳ್ಳಗಿನ ಯಾಂತ್ರಿಕ ರೀತಿಯಿಂದ ಪದ–ಪದಸಂಹತಿಗಳ ಪುನರುಕ್ತಿಯ ಮೂಲಕ ಹರಿಯುತ್ತದೆ. ಯಮನ ಸ್ವಪ್ನರಾಜ್ಯವನ್ನು ಅವನ ಸಂಧ್ಯಾರಾಜ್ಯ ಹಾಗೂ ಮತ್ತೊಂದು ರಾಜ್ಯಗಳೊಂದಿಗೆ ವ್ಯತಿರೇಚಿಸಿ ಹೇಳಲಾಗಿದೆ. ಈ ಸ್ಥಾಯಿಭಾವವು The Family Reunionನ್ನಿನ (ಕುಟುಂಬ ಪುನರ್ಮಿಲನದ) ಹ್ಯಾರಿಯ ಮೇರಿಗೆ, ಅನಂತರ ಅಗಾಥೆಗೆ ತನ್ನ ತಿರುಗಾಟದ ಕೆಲ ಅಂಶಗಳನ್ನು ನೆನವರಿಕೆ ಮಾಡಿಕೊಡುತ್ತ ನಾಟಕೀಯವಾಗಿ ಹೇಳಿದ ಮಾತುಗಳಲ್ಲಿ ಬಣ್ಣಿಸಲ್ಪಟ್ಟಂತೆ ತೋರುತ್ತದೆ.

'ಖಾಲಿಮನುಷ್ಯರೊ'ಡನೆ ಹೋಲಿಸಿದರೆ 'ಬೂದಿ ಬುಧವಾರವು' ಪುನರ್ಲಾಭದತ್ತ ಹರಿಯುತ್ತದೆ, ಬಾಳಿನೆಡೆಗೆ ತಿರುಗುತ್ತದೆ ಎಂದು ಕಂಡುಬರುತ್ತದೆ. ಮೊದಲಿನದು ಎದೆಯೊಡೆಯುವಂಥ ಹೊಡೆತ ಬಹಳ ಜೋರಾಗಿದ್ದಾಗಿನ ಯಾವುದೋ ಒಂದು ಸರ್ವನಾಶದ ಪರಿಣಾಮಗಳನ್ನು ಅಭಿಲೇಖಿಸುವ ವ್ಯಕ್ತಿಗತ ಅನುಭವವನ್ನು ಹೇಳುವ ಪದ್ಯವಾಗಿ ಕಂಡರೆ, ಎರಡನೆಯದು ಪರಿಣಾಮವು ಇನ್ನೂ ಬಹು ದೂರದಲ್ಲಿದೆ ಎಂಬಂತೆ ಅತಿ ಔಪಚಾರಿಕ ಹಾಗೂ ರೀತಿಸಿದ್ಧ ಪ್ರತಿಮೆಗಳ ಮೂಲಕವೇ ಬಣ್ಣಿಸಬಹುದಾದ ಒಂದು ಹೊಸ ಅಪೂರ್ವ ಜಗತ್ತಿನಲ್ಲಿ ಪುನಃ ಮೂಡಿ ಏಳುವುದನ್ನು ಚಿತ್ರಿಸುತ್ತದೆ. ಈ ಕಾಲದಲ್ಲಿ ಈಲಿಯಟ್ ಡ್ಯಾಂಟೆಯು ಪದ್ಯಪ್ರಪಂಚದ ದೃಢಪ್ರಭಾವಾಧೀನರಾಗಿದ್ದರು. ಅವರು ಡ್ಯಾಂಟೆಯ ಮೇಲೆ ಒಂದು ಲೇಖನವನ್ನು ಬರೆದರು. ಅದು ಅವರ Selected Essays – 'ಆಯ್ದ ಪ್ರಬಂಧಗಳ'ಲ್ಲಿ ಪುನಃ ಮುದ್ರಿತವಾಗಿದೆ. ಅದು ಆನುಷಂಗಿಕವಾಗಿ ಅವರ ಪದ್ಯದ ಮೇಲಿನ ಅತ್ಯುತ್ತಮ ವ್ಯಾಖ್ಯೆಯಾಗಿದೆ. Purgatorio ನರಕದ ಪಾಪಶುದ್ಧೀಕರಣ ಶಾಲೆಯ ಕೊನೆಗೆ ಬರುವ ದಿವ್ಯ ಮೆರವಣಿಗೆಯನ್ನು ಕುರಿತು (ಬೆಟ್ರಿಸಳನ್ನು ಡ್ಯಾಂಟೆ ಪುನಃ ಭೆಟ್ಟಿಯಾಗುವ ದೃಶ್ಯವನ್ನುದ್ದೇಶಿಸಿ) ಅವರು–

'ನಾನು ಉಚ್ಚಸ್ವಪ್ನವೆಂದು ಕರೆಯುವ ಪ್ರಪಂಚಕ್ಕದು ಸೇರುತ್ತದೆ ಮತ್ತು ಆಧುನಿಕ ಜಗತ್ತು ಕೇವಲ ನೀಚಸ್ವಪ್ನವನ್ನಷ್ಟೇ ಕಾಣಬಲ್ಲುದೆಂದು ತೋರುತ್ತದೆ. ಇದನ್ನೊಪ್ಪಿ ನಾನು ಈ ನಿರ್ಣಯಕ್ಕೆ ಬರಲು ನನಗೆ ಬಹಳ ಕಷ್ಟವಾಗಲಿಲ್ಲ. ಕೊನೆಯಪಕ್ಷ ಅಲ್ಲಿ ಎರಡು ಪೂರ್ವಗ್ರಹಗಳಿವೆ. ಒಂದು, ನನ್ನ ತಲೆಮಾರಿನವರಿಗೆ ಸಹಜವಾದ ಪೂರ್ವ–ರ್‍ಯಾಪೆಲೈಟ್ ಪ್ರತಿಮಾ ಮಾಲೆಯ ವಿರುದ್ಧ– ಇನ್ನೊಂದು, ಪದ್ಯವು ಕ್ಲೇಶದಲ್ಲೇ ಶೋಧನೀಯವಷ್ಟೇ ಅಲ್ಲದೆ ಕ್ಲೇಶದಲ್ಲೇ ತನ್ನ ವಸ್ತುವನ್ನದು ಪಡೆದೀತು ಎಂಬುದರ ವಿರುದ್ಧ. ಮೊದಲನೆಯದು ನನ್ನ ಕಿರಿಯ ತಲೆಮಾರಿಗೂ ಅಂಟಿಕೊಂಡಿರಬಹುದು, ಎರಡನೆಯದು ಪಾಪಶುದ್ಧೀಕರಣಶಾಲೆಯ ಈ ಕೊನೆಗೆ ಹತ್ತಿದ್ದು, ಮಿಕ್ಕ ಪ್ರತಿಯೊಂದೂ ಹರ್ಷನಿರ್ಭರ, ಆಶಾವಾದಮಯ ಮತ್ತು ಪ್ರತ್ಯಾಶಾದಾಯಕ; ಈ ಪದಗಳು ೧೯ನೆಯ ಶತಕದಲ್ಲಿ ಬಹಳವಾಗಿ ದ್ವೇಷಿಸಲಾಗುತ್ತಿದ್ದ ಬಹ್ವಂಶಕ್ಕೆ ಪ್ರಾತಿನಿಧಿಕವಾಗಿವೆ. ಡ್ಯಾಂಟೆಯ ನರಕಪಾತಗಳಿಗಿಂತ ಜಗತ್ತು ಹರ್ಷನಿರ್ಭರತೆಯೆಂದು ಊಹಿಸಬಹುದಾದ, ಅವನ ಬಣ್ಣಿಸಿದ ಮುಕ್ತಿ ಮತ್ತು ಸುಧಾರಿತ ಸ್ಥಿತಿಗಳು ದೂರ–ದೂರದಲ್ಲಿವೆ ಎಂದು ತಿಳಿಯಲು ನನಗೆ ಬಹಳ ವರ್ಷಬೇಕಾದುವು.'

Selected Essays (P. ೨೪೮)

ಈ ಅವತರಣಿಕೆಯು ನೇರವಾಗಿ 'ಬೂದಿ ಬುಧವಾರ'ದ ನಾಲ್ಕನೆಯ ಭಾಗದಲ್ಲಿ ಆ ಹೆಂಗಸು ಪುನರುದ್ಧಾರಹೊಂದುವ ಬೆಳ್ವೆಳರ್ಮುಸುಕಿದ ದೃಶ್ಯವನ್ನು ನೆನಪಿಗೆ ತಂದುಕೊಡುತ್ತದೆ:

**"ಕಾಲವನ್ನು ಪುನಹ ಪಡೆ.**
**ಆಭರಣದೆ ಕಂಗೊಳಿಸುವ ಕೋಡುಗುದುರೆ**
**ಎಳೆಯುತಿರಲು**
**ಚಿನ್ನದ ಹಾಳೆಯ ಚಟ್ಟವ, ಉಚ್ಚ ಕನಸಿನಲ್ಲಿ ನೀನು**
**ಓದದ ದೃಶ್ಯವ (ಮನುಜಾ) ಪುನಹ ಪಡೆ, (ಪುನಹ ಪಡೆ)."**

ಅಲ್ಲದೆ ಅದು ಮೊದಲ ಪದ್ಯದಲ್ಲಿಯ ಈ ಸಾಲುಗಳನ್ನು ಸೂಚಿಸುತ್ತದೆ:

**"ಸಂತೋಷಿಸೆ ನಾನು ಕಟ್ಟಬೇಕಾಯ್ತೇನಾದರೊಂದ,**
**ಫಲವಾಗಿಯೆ ಅದರ ನಾನು ಸಂತೋಷಿಸುತ್ತಿರುವೆ."**

ಇದರ ಮೇಲೆ, 'ಬೂದಿ ಬುಧವಾರ'ದ ಮೂರನೆಯ ಭಾಗದ ಮೊದಲು Al Som de L' Escalina ಆರ್ನಾಟ್ ಡೇನಿಯಲ್ಲನ ಮಾತಿನಿಂದ ಆಯ್ದ ಒಂದು ಪದಸಂಹತಿ–ಎಂಬ ತಲೆಬರಹದಲ್ಲಿ ಪ್ರಕಟವಾದದ್ದು) ಶುದ್ಧೀಕರಣ ಶಾಲೆಯ ಏಣಿಯ

ಪ್ರತಿಮೆಗೂ ಪದ್ಯದ ಉಪಾಂತ್ಯದಲ್ಲಿ ಬರುವ ಉದ್ಧಾರವಾಕ್ಯವಾದ In la sua Voluntade e' nostra pace ಎಂಬುದಕ್ಕೂ ಅದು ಉಪಲಕ್ಷಣವಾಗುತ್ತದೆ:

> **"ಹುಸಿಯಿಂದ ನಮ್ಮನ್ನೆ ನಾವು ಅಣಕಿಸಿಕೊಂಬ–**
> **ಹಾಗೆ ನರಳಿಸದಿರೆಮ್ಮನು, ಕಲಿಸು ಲಕ್ಷಿಸಲು**
> **ಲಕ್ಷಿಸದಿರಲು, ಕಲಿಸು ಈ ಬಂಡೆಗಳ ಮಧ್ಯ–**
> **ದಲ್ಲಿಯೂ ಕುಳ್ಳಿರಲು ತೆಪ್ಪಗೆಮ್ಮಾ ಶಾಂತಿ**
> **ಆತನಿಚ್ಛೆಯೊಳಿಹುದು........................."**

ಈ ಸಾಲುಗಳು ಇಡಿ ಪದ್ಯದ ವಸ್ತುವನ್ನು ಗರ್ಭೀಕರಿಸಿಕೊಂಡಿವೆ, ಅದಕ್ಕೆ ಮೂರ್ತರೂಪ ಕೊಡುತ್ತವೆ. 'ಕಲಿಸು ಲಕ್ಷಿಸಲು ಲಕ್ಷಿಸದಿರಲು' ಎಂಬ ಸಾಲು ಉತ್ತರ ಕಾಲದಲ್ಲಿ ಉದ್ದಕ್ಕೂ ಹಾಸುಹೊಕ್ಕಾಗಿ ಹರಿದ ಇಚ್ಛಾಶಕ್ತಿಯ ಪಶ್ಚಾತ್ತಾಪ, ವಿರಾಗ ಮತ್ತು ಪುನರ್ಮಾರ್ಗದರ್ಶನಗಳ ಮಿಶ್ರಭಾವವನ್ನು ಸೂಚಿಸುತ್ತದೆ. ಪದ್ಯವು ಶುದ್ಧ ಔಪಚಾರಿಕ. ಅದು ಚರ್ಚಿನ ಪಾರಂಪರಿಕ ಸೂತ್ರಗಳನ್ನು ಈಲಿಯಟ್ಟರ ಮೊದಲಿನ ಕೃತಿಯ ಹಾಗೂ ಡ್ಯಾಂಟೆಯ ವೈಯಕ್ತಿಕ ಸಂಕೇತಗಳನ್ನೂ ಬಳಸಿಕೊಂಡಿದೆ. ಪದ್ಯವು ಅಗಲಿಸಿದ ಜಾಳಿಗೆಯಂತೆ ಮರೀಚಿಕಾಗತಿಯದೂ ಗಂಭೀರವಾಗಿ ವೈಯಕ್ತಿಕವೂ ಆಗಿದೆ. ಅದರ ಶಕ್ತಿಯನ್ನು ಯಾವಾಗಲೂ ಮನ್ನಿಸಲಾಗಿದೆಯಾದರೂ ಈಲಿಯಟ್ಟರ ಬರಹಗಳಲ್ಲಿ ಅದು ತನ್ನ ವಸ್ತುಗುಣ ಹಾಗೂ ಶೈಲಿಗಳ ಮೇಲಿಂದ ಒಂದು ತರಹದ ಉಗ್ರವಿಮರ್ಶಕನಿಗೆ ರಸ್ಯಮಾನವಾದ ಖಂಡವೆನ್ನಿಸಿದೆ. ಅದೇ ಕಾಲದಲ್ಲಿ ಅಂದರೆ 'ಬೂದಿ ಬುಧವಾರ' ಬರೆದ ಕಾಲದಲ್ಲಿ ಈಲಿಯಟ್ ಅನೇಕ ಒಂಟಿಕವನಗಳನ್ನು ಬರೆದು Ariel Poemsನ ಮಾಲೆಯಲ್ಲಿ ಅಥವಾ ಪತ್ರಿಕೆಗಳಲ್ಲಿ ಪ್ರಕಟಿಸಿದರು. The Journey of the Magi ಮಾಗಿಯ ಪಯಣ ಮತ್ತು A Song for Simeon ಸೈಮಿಯನ್ನನಿಗೊಂದು ಹಾಡು ಎಂಬೆರಡೂ ನಾಟಕೀಯ ಭಾವಗೀತಗಳಾದುದರಿಂದ ಅವನ್ನು Gerontion ಆ ಮುದುಕ ಎಂಬ ಪದ್ಯಕ್ಕೆ ಹೋಲಿಸಬಹುದು. ಅವು ಒಬ್ಬ ಮುದುಕ ಹಿಂದಿರುಗಿ ತನ್ನ ಜೀವನದ ಇಡಿ ಚಿತ್ರವನ್ನು ನೋಡಿ ಅದರ ಅರ್ಥದ ಮೇಲೆ ಧೇನಿಸುವಂತಿವೆ; ಒಂದೇ ಒಂದು ವ್ಯತ್ಯಾಸವೆಂದರೆ ಅರ್ಥವು ಈಗ ಅವತಾರದಲ್ಲಿ ಸಿಕ್ಕಿದೆ. ಆದರೆ ಆ ಪದ್ಯಗಳು ಅನುಭವದ ಪದಗಳಲ್ಲದೆ ಧಾರ್ಮಿಕ ಪದಗಳಲ್ಲ. ಅಂದರೆ ಜಾರ್ಜ್ ಹರ್ಬರ್ಟ್ ಮತ್ತು ಹೆನ್ರಿವಾ ಘನ್ನರು ಬರೆದಂತಹ ಧಾರ್ಮಿಕ ಗೀತಗಳಲ್ಲವೆಂದರ್ಥ; ಅದರ ಅರ್ಥಸೂಚನೆಯೆಲ್ಲಾ ಅಧ್ಯಾಹಾರದ ಮತ್ತು ವಕ್ರೋಕ್ತಿಯ ಬಗೆಯದು. ಅಲ್ಲಿ ವ್ಯಂಗ್ಯೋಕ್ತಿಯ ಸ್ಪರ್ಶವಿದೆ (ಅದರಲ್ಲೂ 'ಮಾಗಿಯ ಪಯಣ'ದಲ್ಲಿ ಮುದುಕನ ಮನಸ್ಸಿಗೆ ಪಯಣದಲ್ಲಾಗುವ ಕ್ಷುದ್ರ ಅವಮಾನಗಳೂ ಅನನುಕೂಲಗಳೂ ಗಟ್ಟಿಯಾಗಿ ಅಂಟಿಕೊಳ್ಳುವುದು ಮತ್ತು ತನಗರಿಯದ ಆ ವಿಚಿತ್ರ ತೀರ್ಮಾನಕ್ಕಿಂತ ಅವೇ ಹೆಚ್ಚು ಸ್ಪಷ್ಟವಾಗಿ ಅವನಿಗೆ ತೋರುವುದು– ಎಂಬ ಸಂದರ್ಭದಲ್ಲಿ ಅಂಥ ಸ್ಪರ್ಶ ಹೆಚ್ಚು.)

Marina–'ಸಾಮುದ್ರಿಕೆ' ಎಂಬುದು ಈಲಿಯಟ್ಟರ Ariel Porms 'ಹರಿಣ ಗೀತಗಳ'ಲ್ಲಿ ಬಹಳ ಮುಖ್ಯವಾದುದು. ಅದು ಶೇಕ್ಸ್‌ಪಿಯರನ 'ರಾಜಾ ಪೆರಿಕ್ಲೀಸ'ನೆಂಬ ನಾಟಕದಲ್ಲಿ ಬರುವ ಕಥಾನಾಯಕ ಪೆರಿಕ್ಲೀಸನು 'ಬೂದಿ ಬುಧವಾರ'ದಲ್ಲಿಯ ಹೆಂಗಸಿನಂತೆ ಪ್ರೇತಲೋಕದಿಂದ ಪವಾಡದಿಂದಲೆಂಬಂತೆ ಹಿಂದಿರುಗಿದ ತನ್ನ ಮಗಳ ವಿಷಯವಾಗಿ ಧೇನಿಸುತ್ತಿರುವ ನಾಟಕೀಯ ಸ್ವಗತಭಾಷಣರೂಪದ್ದು. ಈ ಪದ್ಯವು ಈಲಿಯಟ್ ಬರೆದ ಉತ್ತಮ ಪದ್ಯಗಳಲ್ಲಿ ಒಂದು. ಅದು ಸುಂದರವೂ ಎದೆಕರಗಿಸುವಂಥದೂ ಆಗಿದೆ. ಸೆನೇಕನ Hercules Furens ಎಂಬ ಕೃತಿಯ ನಾಯಕನು ನರಕಾಂಧಕಾರದಿಂದ ಮುಕ್ತನಾಗಿ ಹಗಲ ಬೆಳಕನ್ನು ಕಂಡಾಗ ಉಚ್ಚರಿಸಿದ್ದೇ ಆ ಮಾತು:

Quis hic locus, quae regio, quae mundi plaga?

ಆಶ್ಚರ್ಯಭಾವವೂ ದುಃಖಮಗ್ನವಾಗಿ ಮರವಟ್ಟ ಮನಸ್ಸು ಕ್ರಮೇಣ ಚೇತನೆಹೊಂದುತ್ತಿರುವ ಭಾವವೂ ಪದ್ಯದ ಸೂಕ್ಷ್ಮಗತಿಯಲ್ಲ ಮಂದ–ಮಂದವಾಗಿ ಕೋಮಲ ಪ್ರತಿಮೆಗಳ ಮೂಲಕ ವ್ಯಕ್ತಗೊಳಿಸಲ್ಪಟ್ಟಿವೆ. ಹಳೆ ರಾಜನು ಸಮಾಧಿಯಿಂದ ಬಹಿರ್ಮುಖನಾಗುವ ಸಂದರ್ಭವನ್ನು ಆ ಪ್ರತಿಮೆ ಚೆನ್ನಾಗಿ ಹಿಡಿದು ಮೂಡಿಸಿದೆ:

**"ಯಾವ ಕಡಲುಗಳಿವಾವತೀರಗಳು, ಬೂದುಬಂಡೆ,**
**ನಡುಗಡ್ಡೆಗಳು?**
**ಯಾವ ನೀರು ಮಳೆಬಿಲ್ಲ ಸುತ್ತಿಹುದು ಸೆಲ್ಲೆಯಾಗಿ**
**ಹೇಳೆಲೆಮಗಳೆ?**
**ಪೈನುಮರದ ಈ ಗಂಧವಾವುದಿದು, ಆವ ಮರಕುಟುಕ**
**ಹಾಡುತಿದೆ**
**ಮಂಜುಮಸುಕಿನಲಿ? ಎಂಥ ಪ್ರತಿಮೆಗಳು ಕಣ್ಣಿನೆದುರು**
**ಗೋಚರಿಸುತಿವೆ?**
**ಯಾವ ವದನವಿದು, ಹೆಚ್ಚು ಹೆಚ್ಚು ಅಸ್ಪಷ್ಟ;**
**ರಟ್ಟೆನಾಡಿಯ ಬಡಿತ**
**ಹೆಚ್ಚು ಹೆಚ್ಚು ಜೋರಾಗುತಿಹುದು–ಇದು ಕಡವ**
**ತಂದುದೋ ಕೊಟ್ಟದ್ದೋ?**
**ತಾರೆಗಿಂತಲೂ ದೂರ, ಕಣ್ಣಿಗಿಂತಲೂ**
**ಹತ್ತಿರದೊಳಿಹುದಲ್ಲಾ!"**

ಪರನಿರ್ವೃತಿ ಮತ್ತು ಪ್ರತ್ಯಭಿಜ್ಞೆಗಳು 'ಖಾಲಿಮನುಷ್ಯ'ರಲ್ಲಿಯ ಅನುಭವಕ್ಕೆ ಪೂರಕವೂ ವಿರುದ್ಧವೂ ಆದಂಥವು. ಅವನ್ನು ಒಂದು ಭೂದೃಶ್ಯದ ಮೂಲಕ ಬಿಂಬಿಸಿದ್ದನ್ನು 'ಬೂದಿಬುಧವಾರ'ದ ಕೊನೆಯ ಪದ್ಯದಲ್ಲಿ ಕಂಡಿದ್ದೇವೆ ಮತ್ತು The Dry Salvages 'ಉಳಿಸಿಕೊಂಡ ಒಣಪದಾರ್ಥಗಳು' ಎಂಬ ಕವನದಲ್ಲಿ ಪುನಃ ಕಾಣಲಿದ್ದೇವೆ. ಆ ಭೂಪ್ರದೇಶದ ದಡದಲ್ಲಿ ಹಿಮಗರೆದಿದೆ, ಗ್ರಾನೈಟ್ ಬಂಡೆಗಳಿವೆ,

ದ್ವೀಪಗಳಿವೆ. ಅದು ಕವಿಯ ಬಾಲ್ಯದ ಭೂಪ್ರದೇಶದ ಒಂದು ಭಾಗ. ಈ ಪದ್ಯದಲ್ಲಿ ಜೀವನದ ಪ್ರತಿಮೆಗಳು ತಿರುಗಿ ಬರುವಾಗ ಜೀವನವೆಂದು ತಿಳಿದುಕೊಳ್ಳಲಾಗಿದ್ದ ಬೆದರಿಸುವ ಆಕೃತಿಗಳು ಹುರುಳಿಲ್ಲದವಾಗಿ ಒಂದು ಬಗೆಯ ಸಾವೆನಿಸುವುವು. ಅದು ದುಷ್ಕಲ್ಪನೀಯವೂ ಅಪಾರ್ಥಿವವೂ ಆದ ಪ್ರಶಾಂತ ಗಂಭೀರ ಗತಿಯಿಂದ ಅಸಾಧಾರಣವೂ ಅತಿನಿಕಟವೂ ದೃಢಾನುಭೂತವೂ ಆದ ಒಂದು ಇರಸ್ತಿಕೆಯನ್ನು ಬಿಂಬಿಸುತ್ತದೆ,

ಇನ್ನೆರಡು ಪದ್ಯಗಳು ತಮ್ಮ ಹಿನ್ನೆಲೆಗೆ ಶೇಕ್ಸ್‌ಪಿಯರನನ್ನಾಧರಿಸುವುವು: Coriolan ಎಂಬ ಸಂಯುಕ್ತ ಹೆಸರಿನಲ್ಲಿರುವ Triumphal March 'ವಿಜಯಗಮನ ಅಥವಾ ಗೆಲ್ನಡೆ' ಮತ್ತು Difficulties of a Statesman 'ರಾಜನೀತಿಜ್ಞನ ಕಷ್ಟಗಳು' ಎಂಬ ಪದ್ಯಗಳು. ಪ್ರಭಾಮಯವಾದ ಈ ವ್ಯತಿರೇಕಸ್ವಗತಗಳು ಹೊಸ ರಾಜ್ಯಭಾರಕ್ಕೆ ಸಂಬಂಧಿಸಿದವು. ಮೊದಲನೆಯದು ಭೂರಿಜನರ ದೃಷ್ಟಿಯಿಂದ ಹೇಳಿದ್ದು; ಎರಡನೆಯದು 'ಅತಿ ಸೂಕ್ಷ್ಮವೂ ಕಠಿನವೂ ಆದ ಸನ್ನಿವೇಶವನ್ನು' ಮನಸ್ಸಿಲ್ಲದ ಮನಸ್ಸಿನಿಂದ ಎದುರಿಸುತ್ತಿರುವ ರಾಜಕಾರಣಿಯ ದೃಷ್ಟಿಯಿಂದ ಹೇಳಿದ್ದು. ೧೯೩೦ರ ಉತ್ಕಂಠಾವಧಿಯಲ್ಲಿ, ಹಿಟ್ಲರನು ಇನ್ನೂ ಸರಿಯಾಗಿ ದರ್ಬಾರಿಗಾರಂಭಿಸದಿರುವಾಗ, ಈ ಎರಡು ಪದ್ಯಗಳು ಬರಲಿದ್ದ ರಾಜಕೀಯ ದೃಶ್ಯವನ್ನು ಸಾಕಷ್ಟು ಸೈಸೈ ಎನ್ನುವಂತೆ ಚಿತ್ರಿಸಿದವು. Coriolanನಲ್ಲಿ ಈಲಿಯಟ್ ರಾಜನೀತಿಜ್ಞನ ಹಾಗೂ ಮಹಾಜನದ (ಭೂರಿಜನದ) ಅಸಹಾಯಕತೆಯನ್ನು ಹೇಳಿದ್ದಾರೆ. ಇಬ್ಬಗೆಯವರೂ ಯುದ್ಧದ ಸುಳಿಗೆ ಸೆಳೆದೊಯ್ಯಲ್ಪಡುತ್ತಿದ್ದಾರೆ, ತಾವು ಬಿಟ್ಟ ಅಥವಾ ಬಯಲಿಗೆಳೆಯಗೊಟ್ಟ ಅಂಶಗಳ ಬಗ್ಗೆ ಅಸ್ಪಷ್ಟವಾಗಿ, ದಾರಿಗಳೆದುಕೊಂಡ ಬಗೆಯಲ್ಲಿ ಹೆಪ್ಪಳಿಸುತ್ತಿದ್ದಾರೆ. ಈ ಪದ್ಯಗಳ ಭಾಷೆ ಮತ್ತು ಲಯಗಳಲ್ಲಿ ಹಿಂದಿನವುಗಳಲ್ಲಿಗಿಂತ ಹೆಚ್ಚಿನ ವೈವಿಧ್ಯವಿದೆ. ಇವುಗಳಲ್ಲಿ ಬೇಕಾದಷ್ಟು ಆಡುಮಾತು, ಮೇಲಿಂದ ಮೇಲೆ ಅಷ್ಟು ಕಾವ್ಯಾರ್ಹವೆನಿಸದ ('ಗೆಲ್ನಡೆ'ಯಲ್ಲಿ) ಆಯುಧಗಳ ಪಟ್ಟಿ, ಆದರೂ ಆಡುದನಿಯ ನಾಟಕೀಯ ಪ್ರಸಾರ್ಯತೆ ಅಥವಾ ಶೈಥಿಲ್ಯ ಮತ್ತು ಆಗೀಗ ಬರುವ ತೂಕದ ಮಜಭೂತಾದ ಸಾಲುಗಳು–

**"ಕುಟ್ಟಿಮದ ಮೇಲೆ ಕಲ್, ಕಂಚು, ಕಲ್, ಉಕ್ಕು, ಕಲ್,**
**ಓಕ್–ಪತ್ರಗಳು, ಅಶ್ವಖುರಪುಟಗಳು"**

ಇವೆ.

ಈ ಪದ್ಯಗಳಲ್ಲಿ ಈಲಿಯಟ್ಟರ ನಾಟಕದ ಮುಖ್ಯ ಮಾತುಗಾರರಾದ ಕಥಾನಾಯಕ ಹಾಗೂ ಮೇಳಗೀತಕಾರ (ವೃಂದ) ರೂಹುದಾಳುವರೆನ್ನಬಹುದು. ಯಾರೂ ಶತಾರಿ ಅಥವಾ ಚುಚ್ಚು–ಅಣಕದ ಶೈಲಿಯನ್ನು ಬಿಟ್ಟವರಲ್ಲ; ಆದರೆ ಆ ಇಬ್ಬಣದಲ್ಲಿ ಯಾವುದೂ ಪೂರಾ ಶತಾರಿಮಯವಲ್ಲ. ವಿವಿಧ ಪಕ್ಷಗಳ ವ್ಯಾಹತ ಹಿತಗಳನ್ನು ಹೊಂದಿಸಲು ಯತ್ನಿಸುವ ಚಿಂತಾದಗ್ಧ ರಾಜಕಾರಿಣಿ ಮತ್ತು ಗೆಲ್ನಡೆಯ ವಿನಮ್ರ ಪ್ರೇಕ್ಷಕರು The

Rock 'ಆ ಬಂಡೆ' ಮತ್ತು Murder in the Cathedral 'ಚರ್ಚಿನಲ್ಲಿ ಕೊಲೆ' ಎಂಬವುಗಳಲ್ಲಿಯ ಹೆಚ್ಚಿನ ನಾಟಕೀಯ ಅಭ್ಯಾಸಕ್ಕೆ ಪೂರ್ವಭಿತ್ತಿಯಾಗುತ್ತಾರೆ. ಆ ಪ್ರೇಕ್ಷಕರ–

**"ದಯವಿಟ್ಟು ಕೊಡುವಿರಾ ನಮಗೊಂದು ದೀಪ–**
**ನಮಗೊಂದು ದೀಪ–**
**ಒಂದು ದೀಪ?"**

ಎಂಬ ನುಡಿಗೆ ಕೊನೆಯ ಪದಸಂಹತಿಯ ಪುನರುಕ್ತಿಬಲದಿಂದ ಅನಿರೀಕ್ಷಿತವಾಗಿ, ಆಳವಾದ ಸೂಚ್ಯಾರ್ಥಕೊಡುವ ಶಕ್ತಿ ಬಂದಿದೆ. ೧೯೩೦ರ ಮಧ್ಯಾವಧಿಯಲ್ಲಿ ಈಲಿಯಟ್ ಪದ್ಯನಾಟಕಗಳಿಗೆ ಒಂದು ಫ್ಯಾಶನ್ ಅಥವಾ ವಿಲಾಸವಿತಾನವನ್ನು ನಿರ್ಮಿಸಿಕೊಟ್ಟರು. ಅದನ್ನು ಆಡೆನ್, ಸ್ಪೆಂಡರ್, ಮ್ಯಾಕ್‌ನೀಸ್ ಮತ್ತು ಇತರರು ತಮ್ಮ ನಾಟಕ ಬರೆಯುವ ಪ್ರಯತ್ನದಲ್ಲಿ– ಅದರಲ್ಲೂ ರಾಜಕೀಯ ನಾಟಕ ಬರೆಯುವುದರಲ್ಲಿ–ಅನುಸರಿಸಿ ಕೆಲ ಪ್ರಾಸಂಗಿಕ ಪದ್ಯಗಳನ್ನು ಸ್ವಾರಸ್ಯವಾಗಿ ರಚಿಸಿದರು. ಆದರೆ ಅವುಗಳಲ್ಲಿ ಯಾವುದೂ ಚಿರಕಾಲ ನಿಲ್ಲುವಂಥದಾಗಲಿಲ್ಲ. ಸ್ವತಃ ಈಲಿಯಟ್ಟರೇ ರಾಜಕೀಯ ನಾಟಕವನ್ನು ವರ್ಜ್ಯ ಮಾಡಿದರು; 'ಆ ಕಲ್ಲು' ಮತ್ತು 'ಚರ್ಚಿನಲ್ಲಿ ಕೊಲೆ' ಎಂಬವುಗಳಲ್ಲಿ ರಾಜಕೀಯದ ಬಗೆ ಕೆಲಮಟ್ಟಿಗೆ ಧ್ವನಿತವಾಗಿದೆ, ಅಷ್ಟೆ– ಅದರಲ್ಲೂ ವಿಶೇಷತಃ ಮೋಹಕರ ಹಾಗೂ ಆಸ್ಥಾನವೀರರ ಮಾತುಗಳಲ್ಲಿ. ಈ ಅವಧಿಯಲ್ಲಿಯೇ ಈಲಿಯಟ್ 'ಕ್ರೈಸ್ತಸಮಾಜದ ಕಲ್ಪನೆ' ಮತ್ತು 'ವಿಚಿತ್ರ ದೇವತೆಗಳ ಮೇಲೆ' ಎಂಬಂತಹ ಅನೇಕ ಪುಸ್ತಕಗಳನ್ನೂ ಪ್ರಬಂಧಗಳನ್ನೂ ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳನ್ನು ಕುರಿತು ಬರೆದರು. ಅವರ ೨ನೆಯ ನಾಟಕವಾದ 'ಕುಟುಂಬ–ಪುನರ್‌ಮಿಲನ'ವು ೧೯೩೯ರಲ್ಲಿ ಪ್ರಕಟವಾಯ್ತು. ರಂಗದ ಕಡೆಗೆ ಅವರು ತಿರುಗಿದ್ದು ಬಹುಶಃ ತಮ್ಮ ಪ್ರವೃತ್ತಿಗೆ ಕಾರ್ಯರೂಪಕೊಡುವುದಕ್ಕಾಗಿ ಅಷ್ಟೇ ಅಲ್ಲದೆ ತಾವು ೧೯೩೩ರಲ್ಲಿ ಬರೆದ 'ಪದ್ಯದ ಉಪಯೋಗ ಮತ್ತು ವಿಮರ್ಶೆಯ ಉಪಯೋಗ' ಎಂಬುದರಲ್ಲಿ ಹೇಳಿದ್ದನ್ನು ಆಚರಣೆಗೆ ತರಲೆಂದು ಕೂಡಾ:

ಅಭಿರುಚಿಯಿಂದು ಭಿನ್ನಭಿನ್ನವಾಗಿದೆ. ಆ ಭೇದ–ಭೇದಗಳು ಸಾಮಾಜಿಕ ಭೇದ–ಭೇದಗಳ ಗುರುತುಗಳೆನ್ನಬಹುದು. ಪದ್ಯವು ಸಾಮಾಜಿಕವಾಗಿ ಉಪಯುಕ್ತವೆನಿಸಬೇಕಾದರೆ ಅದು ಸಾಮಾಜಿಕ ಅಥವಾ ಸಾರ್ವಜನಿಕ ಅಭಿರುಚಿಯ ಎಲ್ಲ ಶಾಖೋಪಶಾಖೆಗಳನ್ನೂ ಕಡಿದು ದಾಟಿಹೋಗಬೇಕು. ಪದ್ಯದ ಆದರ್ಶ ಮಾಧ್ಯಮವೂ ಅದರ ಅತ್ಯಂತ ನೇರವಾದ ಸಾಮಾಜಿಕ 'ಉಪಯುಕ್ತತೆ'ಯೂ ರಂಗಸ್ಥಲದ ಮೇಲೆ ಎಂದೆನಿಸುತ್ತದೆ ನನಗೆ. ಶೇಕ್ಸ್‌ಪಿಯರನ ಒಂದು ನಾಟಕದಲ್ಲಿ ಅರ್ಥದ ವಿವಿಧ ಹಂತಗಳು ನಿಮಗೆ ಲಭಿಸುತ್ತವೆ. ಅತಿ ಸರಳ ಪ್ರೇಕ್ಷಕರಿಗೆ ಕಥಾಸ್ವಾರಸ್ಯವಿದೆ, ಅವರಿಗಿಂತ ಸ್ವಲ್ಪ ಹೆಚ್ಚಿನವರಾದ ವಿಚಾರ ಜೀವಿಗಳಿಗೆ ಪಾತ್ರಗಳೂ ಅವುಗಳಲ್ಲಿಯ ಘರ್ಷಣವೂ ಇವೆ, ಹೆಚ್ಚು ಸಾಹಿತ್ಯಿಕರಿಗೆ ಪದ–ಪದಸಂಹತಿಗಳ ಸೌಂದರ್ಯವಿದೆ,

ಸಂಗೀತ ರುಚಿಪ್ರಧಾನರಿಗೆ ಲಯದ ಇಂಪಿದೆ; ಇನ್ನೂ ಹೆಚ್ಚು ಭಾವಿಕತೆ ಹಾಗೂ ಗ್ರಹಣಶಕ್ತಿಯುಳ್ಳ ರಸಿಕರಿಗೆ ಅದರಲ್ಲಿ ಕ್ರಮೇಣ ಪ್ರಕಟವಾಗುವ ಅರ್ಥಗೌರವವಿದೆ.

ಈ ಅವತರಣಿಕೆಯಿಂದ ಈಲಿಯಟ್ ಸ್ವತಃ ಅನುಕೂಲವೆಂದು ತಿಳಿದುಕೊಳ್ಳಬಹುದಾದ ನಾಟಕ (ರೂಪಕ) ಲಕ್ಷಣಗಳು ಯಾವುವೆಂಬುದು ಗೊತ್ತಾಗುತ್ತದೆ ಮತ್ತು ಕೊನೆಯ ಪದಸಂಹತಿಯಿಂದ ಅವರ ಪದ್ಯಶೈಲಿಯ ಗಣ್ಯ ಲಕ್ಷಣಗಳಲ್ಲೊಂದೆಂದು ಆಗಲೇ ಹೇಳಲಾದ ಪ್ರತಿಮೆಯ ಕ್ರಮಿಕ ಅರ್ಥಾಭಿವ್ಯಕ್ತಿಯ ಶೋಧ ಮತ್ತು ಸೂಚಕತೆಗಳ ಪದ್ಧತಿ ತಿಳಿದುಬರುತ್ತದೆ. 'ಬೂದಿ ಬುಧವಾರ'ದಲ್ಲಿ ಅವರು ಪಾರಂಪರಿಕ ಕಲ್ಪಸೂತ್ರಗಳ ಸಂಕೇತಗಳನ್ನು ಶೋಧಿಸಿ ಪ್ರಕಾಶಗೊಳಿಸುವ ತಮ್ಮ ಶಕ್ತಿಯನ್ನು ಬಹಳವಾಗಿ ಗಭೀರಗೊಳಿಸಿಕೊಂಡದ್ದು ಕಂಡುಬರುತ್ತದೆ. ಕಲ್ಪಗಳ, ಶ್ರದ್ಧಾಪ್ರಸ್ಥಾನಗಳ ಮತ್ತು ಸಾರ್ವಜನಿಕ ಮಹಾಭಿಪ್ರಾಯಗಳ ಮೇಲೆ ಅವರು ಅವಲಂಬಿಸಿದ್ದು ಸಾರ್ವಜನಿಕ ಹಾಗೂ ಖಾಸಗಿ ಪ್ರಪಂಚಗಳ ಸಮೀಕರಣದ ಕುರುಹು. ನಾಟಕಗಳಲ್ಲಿ ಅವರು ಐತಿಹಾಸಿಕ ಅಥವಾ ಪೌರಾಣಿಕ ವಸ್ತುವನ್ನು ಬಳಸಿದ್ದಾರೆ. ಕೊನೆಗೆ ತಮ್ಮ ಕಡೆಯದಾದ ಮತ್ತು ಎಲ್ಲರೂ ಅವರ ಅತ್ಯುನ್ನತ ಕೃತಿಯೆಂದೊಪ್ಪಿದ 'ಭಾಗಚತುಷ್ಟಯ'ದಲ್ಲಿ (ಅದನ್ನು ಬರೆದದ್ದು ೧೯೩೫–೧೯೪೨ರ ಅವಧಿಯಲ್ಲಿ) ಅವರು ಒಂದು ಹೊಸ ಗಭೀರತೆಯನ್ನೂ ಹೊಸ ಸ್ಫುಟತೆಯನ್ನೂ ಸಾಧಿಸಿದ್ದಾರೆ. ಈ ಕೃತಿ ('ಬೂದಿಬುಧವಾರ' ಹಾಗೂ 'ಬಂಜರುಭೂಮಿ'ಗಳಂತೆ) ಸ್ವಯಂಪೂರ್ಣವಾಗಿಯೂ ಪರಸ್ಪರ ಪೂರಕಗಳಾಗಿರುವ ಹಲವಾರು ಪದ್ಯಗಳಿಂದ ಕೂಡಿದೆ. ಪ್ರತಿಯೊಂದು ಪದ್ಯವೂ ಪಂಚಭಾಗವುಳ್ಳದ್ದು. ಹಾಗೇ ಪ್ರತಿಯೊಂದೂ ಒಂದೊಂದು ಸ್ಥಳದ ಹೆಸರನ್ನು ಹೊಂದಿದೆ. Burnt Norton (ಸುಟ್ಟ ನಾರ್ಟನ್ನು) ಎಂಬುದು ಕಾಟ್ಸ್‌ವಲ್ಡ್ ಗುಡ್ಡಗಳ ತುದಿಯಲ್ಲಿರುವ ಏಸ್ಯನ್ ಉಪತುದಿಯ ಬಳಿಯಲ್ಲಿಯ ಗ್ಲಾಸೆಸ್ಟರ್ ಶಾಯರಿನ ಒಂದು ಹಳೆಯ ಮನೆ; East Cocker (ಪೂರ್ವ ಕಾಕರ್) ಎಂಬುದು ಈಲಿಯಟ್ಟರ ಕುಟುಂಬ ಮೊದಲು ಬಿಟ್ಟು ಬಂದ ಸಾಮರ್ಸೆಟ್ಟಿನಲ್ಲಿಯ ಹಳ್ಳಿ; The dry Salvages (ಉಳಿಸಿಕೊಂಡ ಒಣ ಪದಾರ್ಥಗಳು) ಎಂಬುದು ಆ್ಯನ್ ಭೂಶಿಖರಕ್ಕೆ ದೂರದಲ್ಲಿರುವ ಮೂರು ದ್ವೀಪಗಳ ಮುಂದೆ ಆಯ್ದುಕೊಂಡ ಹೆಸರು; ಮತ್ತು Little Gidding (ಚಿಕ್ಕ ಗಿಡ್ಡಿಂಗು) ಎಂಬುದು ತನ್ನ 'ಪ್ರಾಟೆಸ್ಟಂಟ್ ಬ್ರಹ್ಮಚಾರಿಣಿ – 'ಸನ್ಯಾಸಿನಿಯರ ಮಂದಿರ'ದಲ್ಲಿ ಕುಟುಂಬ ಸಹಿತ ನಿಕೋಲಸ್ ಫೆರ್ರರ್ ಉಳಿದುಕೊಂಡಿದ್ದ (೧೭ನೆಯ ಶತಕದ ಆದಿಭಾಗದಲ್ಲಿ) ಹಂಟಿಂಗ್‌ಡಾನ್ ಶಾಯರಿನ ಒಂದು ಹಳ್ಳಿ. ಜಾರ್ಜ್ ಹಾರ್ಬರ್ಟ್ ಅದನ್ನು ತುಂಬ ಮೆಚ್ಚಿದವ. ಅದರಲ್ಲಿ ನೇಸ್ಬಿ ಕಾಳಗದ ಅನಂತರ ರಾಜಾ ಚಾರಲ್ಸನಿಗೆ ಆಶ್ರಯ ಕೊಡಲಾಯ್ತು. ಅದು ದಾನ, ವಿದ್ಯೆ, ಶೀಲ ಮತ್ತು ಜೀವನಸೌಂದರ್ಯ ಎಂಬ ೧೭ನೆಯ ಶತಕದ ಉತ್ತಮ ಧಾರ್ಮಿಕ ಜೀವನದ ಮುಖ್ಯ ಲಕ್ಷಣಗಳ ಪರಿಪೂರ್ಣ ಯೋಗ ಸ್ಥಿತಿಯ ಅತ್ಯುತ್ತಮ ಉದಾಹರಣೆ ಎನ್ನಬಹುದು.

ಈ ಪದ್ಯಗಳಲ್ಲಿ ಈಲಿಯಟ್ ವಿಸ್ತಾರವಾದ ವಸ್ತುವೈವಿಧ್ಯದ ಮೇಲೆ ಪ್ರಣಿಧಾನಿಸಿದ್ದಾರೆ. ಅವರ ವೈಯಕ್ತಿಕ ಅನುಭವಗಳು ಅಲ್ಲಿ ಸ್ವಯಂ ಕ್ರಮವಿನ್ಯಾಸ ಪಡೆದಿವೆ; ಯುದ್ಧಾರಂಭ ಹಾಗೂ ಲಂಡನ್ ದಹನದ ವರೆಗಿನ ಇತಿಹಾಸದ ಕ್ರಮಪ್ರಸ್ತರ ಮತ್ತು ಕವಿಯ ಕಷ್ಟಗಳು ಹಾಗೂ ಭಾಷೆಯ ಸ್ವಭಾವ. ಅಂಥ ವೈವಿಧ್ಯವು 'ಬಂಜರು ಭೂಮಿ'ಗಿಂತ ಹೆಚ್ಚಿನದಾದರೂ 'ಬೂದಿ ಬುಧವಾರ'ದಷ್ಟೇ ಸುಸಂಘಟಿತವಾದದ್ದು. ಪದ್ಧತಿಯು ಪುನಃ Solviture Ambulando. ಕವನದಿಂದ ಕವನಕ್ಕೆ ಪದಸಂಹತಿಗಳ ಪುನರುಕ್ತಿಯಿದೆ. ಕಾಣುವಂತೆ ಸಂಬಂಧಿಸಲಾದ ಅನುಭವಗಳು ಭಿನ್ನ ಭಿನ್ನ ಸಂದರ್ಭಗಳಲ್ಲಿ ಮತ್ತೆ ಮತ್ತೆ ಮೂಡಿವೆ. ಮೊದಲಿನ ಕವನಗಳ ಪಡಿನುಡಿಗಳು ಅನೇಕ ಇವೆ. ಆದರವು ಪುನರುಕ್ತಿಗಳಲ್ಲ–ಹಳೆಯ ತಾತ್ವಿಕ ಹೇಳಿಕೆಗಳ ಪುನಃಸಮನ್ವಯ ಹಾಗೂ ಪರಿಪೂರಣಗಳು. ಕೃತಿಗೆ ಒಂದು ವಿಧದ ಆತ್ಯಂತಿಕತೆ ಹಾಗೂ ಪ್ರಭುಶಕ್ತಿ ಇವೆ. ಹೆಚ್ಚಾಗಿ ಮೊದಲ ಕವನದಲ್ಲಿ ಉಪಕಾಲೀನ ಮಾರ್ಗಗಳ ಸುಖ ಮತ್ತು ಧೀರಗತಿಗಳು ತಾತ್ಕಾಲಿಕವೂ ಶೋಧಕವೂ ಆದ ರೀತಿಯೊಂದಿಗೆ ಹೊಂದಿಕೊಂಡಿವೆ. ಕೊನೆಯ ಪದ್ಯ ಮುಗಿಯುವಾಗ ಸಂಕೇತಗಳ ಸಂಪೂರ್ಣ ಆವಿಷ್ಕಾರವಾಗುತ್ತದೆ; ಸಾಮರ್ಥ್ಯ–ಸಮಾಶ್ವಾಸನಗಳ ನೆಲೆ ಸ್ಥಿರಗೊಳ್ಳುತ್ತದೆ. 'ಅರ್ಥವು ಕ್ರಮವಾಗಿ ಗೋಚರಿಸುತ್ತದೆ' ಎಂದು ಸಂಕೇತಗಳ ಪುನರುಚ್ಚಾರ–ಪುನರ್ಲಕ್ಷಣ ವಿಧಾನಗಳ ಮೂಲಕ (ಬಹುಶಃ ಆಗ ಆ ಕಲ್ಪನೆ ಸುಪ್ತವಾಗಿದ್ದಂತಿದೆ) ಮೊದಲ ಭಾಗಗಳಲ್ಲಿ ಗುರುತಿಸಿ ಹೇಳದ ತೋರಿಕೆಯ ಅಪ್ರಗತಿಯಿದ್ದಾಗಲೂ ಅಂಥ ನೆಲೆ ಅನುಭವಕ್ಕೆ ಬರುವುದು ಆಶ್ಚರ್ಯಕರ. ಈ ವಿಶಿಷ್ಟವಾದ ಅಧ್ಯಾಹಾರ ಧ್ವನಿ ಹಲವಾರು ಔಪಚಾರಿಕ ತಂತ್ರಗಳಿಂದ ಪರಿಪುಷ್ಟವಾಗಿದೆ. ಅವುಗಳಲ್ಲಿ ಕೆಲವು ಅಟ್ಟಲುಗಳ ನಮೂನೆಯವು, ಅಷ್ಟು ಗಣ್ಯವಾದಂಥವಲ್ಲ. ಉದಾಹರಣೆ: ಪ್ರತಿಯೊಂದು ಪದ್ಯವೂ ನಾಲ್ಕರಲ್ಲೊಂದು ಭೂತವನ್ನು ಅಂಟಿಕೊಂಡಿದೆ – (೧) 'ಸುಟ್ಟ ನಾರ್ಟನ್ನು' ಗಾಳಿಯೊಡನೆ, 'ಪೂರ್ವ ಕಾಕರ್' ಭೂಮಿಯೊಡನೆ 'ಉಳಿಸಿಕೊಂಡ ಒಣಪದಾರ್ಥಗಳು' ನೀರಿನೊಡನೆ ಮತ್ತು 'ಚಿಕ್ಕ ಗಿಡ್ಡಿಂಗು' ಬೆಂಕಿಯೊಡನೆ. 'ಚಿಕ್ಕ ಗಿಡ್ಡಿಂಗಿ'ನ ೨ನೆಯ ಭಾಗದ ಆದಿಯಲ್ಲಿ ಈ ಭೂತಚತುಷ್ಟಯದ ಸಮ್ಮೇಳನವಿದೆ. ಅಲ್ಲಿ ಅವು ಗುಣಿತ ಅರ್ಥಗಳ ಸಂಕೇತಗಳಾಗಿವೆ. ಆ ನೀರು ಬೆಂಕಿಗಳು ಲಂಡನ್ ದಾಳಿಯಲ್ಲಿಯ ಅಗ್ನಿಶಾಮಕರ ಅಥವಾ ಬಾಂಬರುಗಳ ನೀರು–ಬೆಂಕಿಗಳಷ್ಟೇ ಆಗಿರದೆ, ಅವು ನಾಮಕರಣದ ನೀರು ಮತ್ತು ನರಕದ ಪಾಪಪಾವಕ ಬೆಂಕಿಗಳೂ ಆಗಿವೆ. 'ಬಂಜರುಭೂಮಿ'ಯಲ್ಲಿರುವಂತೆ ನೀರು ಸ್ವಾಭಾವಿಕ ಜೀವನದ ಸಂಕೇತ, ಬೆಂಕಿಯ ನಾಶ ಹಾಗೂ ಪುನರ್ನವೀಕರಣಗಳ ಸಂಕೇತ. ಪದ್ಯದ ಮಧ್ಯಯುಗೀನ ವ್ಯಾಖ್ಯಾನ ಪದ್ಧತಿಯಲ್ಲಿ ಪ್ರತಿಯೊಂದು ಹೇಳಿಕೆಗೂ ಮೂರು ನಾಲ್ಕು ಮತ್ತು ಕೆಲವೇಳೆ ಏಳು ಅರ್ಥಗಳು ಇರಬಹುದು. ಡ್ಯಾಂಟೆಯು ಹೀಗೆ ತನ್ನ Vita Nuovaದಲ್ಲಿ ತನ್ನ ಪದ್ಯಗಳ ಅರ್ಥ ಹೇಳಿದ್ದಾನೆ. ಈಲಿಯಟ್ಟರ ಪ್ರತಿಯೊಂದು ಪದ್ಯವೂ ಹೀಗೆ ಏಕಕಾಲದಲ್ಲಿ ಅನೇಕ ಮಟ್ಟಗಳಲ್ಲಿ (ಪ್ರಜ್ಞಾವಸ್ಥೆಗಳಲ್ಲಿ) ಹರಿಯುವುದರಿಂದ ತನ್ನ ಅರ್ಥಸೂಚನೆಗಳಲ್ಲಿ ಅದು ವರ್ತಮಾನಕ್ಕೆ ಸಂಬಂಧಿಸಿದ್ದೂ ಹೌದು ಕಾಲಾತೀತವೂ

ಹೌದು ಎನಿಸಿದೆ. 'ಭಾಗಜತುಷ್ಟಯ'ದ ಮೇಲಿನ ವ್ಯಾಖ್ಯೆಗಳು 'ಬಂಜರುಭೂಮಿ'ಯ ಮೇಲಿನವುಗಳಷ್ಟೇ ಅಸಂಖ್ಯ ಹಾಗೂ ಅಷ್ಟೇ ಪರಸ್ಪರ ಭಿನ್ನ. ಆದರೆ ಅಂಥ ವ್ಯಾಖ್ಯೆಗಳಲ್ಲೆಲ್ಲಾ ಅತ್ಯುತ್ತಮವಾದುದನ್ನು ಸ್ವತಃ ಈಲಿಯಟ್ ಕೊಟ್ಟಿದ್ದಾರೆ:

**(ಸಾಂಗತ್ಯ)**

"ಪದಗಳ ಬಳಕೆಯ ಕಲಿವಾಗ ಪ್ರತಿಯೊಂದು
ಯತ್ನವೂ ಸಂಪೂರ್ಣ ಹೊಸ ತೊಡಗೇ
ಪ್ರತಿಯೊಂದೂ ಬೇರೆ ಬೇರಾದಪಜಯವಲ್ಲಿ
ಪದಕಿಂತ ಜಾಣ ತಾನಾಗುತಿರೆ,
ಪ್ರತಿಸಲ ಹೇಳಿದ್ದ ಹೇಳಲು ಬಯಸನು
ಹೇಳಿದಂತಾವನೂ ಹೇಳನಲ್ಲಾ!
ಪದವಿಡ ಹೊರಡುವುದಾವೆಮ್ಮ ಮನೆಯಿಂದ
ಮುಪ್ಪೆಮಗಡಸುತ್ತ ಹೋದಹಾಗೆ
ಜಗ ಹೆಚ್ಚು ಹೆಚ್ಚಪರೂಪವೆಂದೆನಿಸುಗು
ಉಳಿದ ಮತ್ತಳಿದೆಲ್ಲ ಜೀವಿಗಳ
ಬಾಳಿನ ಬಗೆ ಹೆಚ್ಚು ಸೀಗೆಬಲ್ಲೆಯ ಹಾಗೆ
ಆಗುತ್ತ ಹೋಗುವುದನಿಬರಲಿ.
ಹಿಂದುಮುಂದಿಲ್ಲದೆ ಪ್ರತ್ಯೇಕವಾಗದು
ಬಾಳಿನ ತೀವ್ರಾನುಭವದ ನೆಲೆ
ಆದರೆ ಅಂತಹ ಅನುಭವದ ವೇಳೆಯೊ–
ಳಾದ್ಯಂತ ಬಾಳಿನ ಉರಿತವಿದೆ;
ಅದರಲ್ಲೂ ಒಬ್ಬ ಮಾನವನ ಬಾಳಿನದಲ್ಲ–
ಗುರುತಿಸಬರದೆಲ್ಲಾ ಹಳಗಲ್ಗಳ.

**East Cocker, V.**

ಮುಪ್ಪು ಮೈಮೇಲೇರಿಬಂದಂತೆ, ತೋರುಗು
ಹಳಗಾಲಕಿನ್ನೊಂದು ಕ್ರಮವಿದ್ದಂತೆ
ಅದು ಬರಿ ಒಂದರಮೇಲೊಂದಾದದ್ದಲ್ಲ.
ಸುಖವಲ್ಲ ರಸನಿಮಿಷಗಳೆಂಬುವು–
ಸಾಫಲ್ಯ, ಪೂರೈಕೆ, ಸ್ವಾಸ್ಥ್ಯ, ವಾತ್ಸಲ್ಯವೋ
ಬರಿ ರಸಗವಳದ ಭುಕ್ತಿಯೊಂದೋ–

ಯಾವುದೇ ಆಗಲಿ ಆಕಸ್ಮಿಕೋನ್ಮೇಷ
ಆದುದುಂಟೆಮಗದನರ್ಥೈಸಲು
ಆಗದೆಹೋದದ್ದು ಹಲವಾರುಂಟಾದರೆ
ಅರ್ಥೈಸ ಹೋಗಲು ಅನುಭವದ
ಪುನರಾಗಮನವಕ್ಕು ಮತ್ತೊಂದು ರೂಪದಿ
ರಸನಿಮಿಷಕ್ಕಿರುವರ್ಥ ಮೀರಿ.

**The Dry Salvages, II.**

**ಶೋಧಿಸುವುದು ನಾವು ಬಿಡಲೆಬಾರದು ನೋಡಿ,**
**ನಮ್ಮ ಶೋಧದ ಗುರಿಯೇನು ಗೊತ್ತೆ?**
**ಹೊರಟ ಜಾಗಕೆ ಮತ್ತೆ ಬಂದು ಮುಟ್ಟಿದ ಮೇಲೆ**
**ಅರಿತುಕೊಳ್ಳುವುದದ ಮೊದಲ ಸಲ.**

**Little Gidding, V.**

'ತೀವ್ರೋನ್ಮೇಷವು" ('ಗುಲಾಬಿ–ಉನ್ಮೇಷ' ಮತ್ತು 'ಯೀಮರದ ಉನ್ಮೇಷ' ಎಂದೂ ಅದನ್ನು ಕರೆಯಲಾಗಿದೆ.) ರೂಹುದಾಳುತ್ತಿರುವ ಆಧ್ಯಾಹೃತ ಕ್ರಮವ್ಯವಸ್ಥೆಯೊಂದರ ಅಂಗವಾಗಿ 'ಬಂಜರುಭೂಮಿ'ಯಲ್ಲಿ ಬಂದಿದೆ; ಅದರ ಮುಂದೆ ಬರುವ ಪದ್ಯವೆಲ್ಲವೂ 'ಅರ್ಥಾನುಸಂಧಾನದ ಮೂಲಕ ಗ್ರಹಿಸಬೇಕಾದ' ಸ್ಮೃತಿರೂಪದ ಅನುಭವವಾಗಿದೆ. ಅದರ ವೈಭವವನ್ನಲ್ಲಗಳೆಯದೆ ಅನುಕೂಲವಿಧಿಯ ಅವಧಿಯ ಅದೃಢ ವೈಭವವನ್ನು ತ್ಯಜಿಸುವ ಹೋರಾಟವು 'ಬೂದಿಬುಧವಾರ'ದ ಭಾವ ತೀವ್ರತೆಯನ್ನು ನಿರ್ಮಿಸುತ್ತದೆ. ಈಲಿಯಟ್ ತಮ್ಮ 'ಬಂಜರುಭೂಮಿ'ಯಲ್ಲಿ ನಾವೆಲ್ಲ ಬದುಕಿರುವುದು ಈ ಉನ್ಮೇಷ–ನಿಮಿಷಗಳಿಂದಲೇ ಎಂದಿದ್ದಾರೆ. 'ಕುಟುಂಬ ಪುನರ್ಮಿಲನ'ದಲ್ಲಿ ಅಗಾಥೆ–

**"ನೇಸರು ಬೆಳಗುತ್ತಿರಲು ಗುಲಾಬಿಯ**
**ತೋಟದ ಮೇಲಕ್ಕೆ**
**ಆ ಕಿರುವಾಗಿಲ ಮೂಲಕ (ಸುಮ್ಮನೆ)**
**ನೋಡಿದೆ ನಾನಷ್ಟೆ."**

ಎಂದು ತಮ್ಮ ಹಿಂದಿನ ರಸನಿಮಿಷವೊಂದನ್ನು ನೆನೆಯುತ್ತಾಳೆ. ಆದರವಳು ಈಗ ಅದರಿಂದ ಬದುಕಿಲ್ಲ, ಅದನ್ನು ತ್ಯಜಿಸಿಯೂ ಬಿಟ್ಟಿದ್ದಾಳೆ ಎಂಬ ಅರ್ಥವೂ ಅವಳ ನೆನಹಿನಲ್ಲಿ ಅಡಗಿದೆ.

**"ಹಿಂದಿಲ್ಲ ಮುಂದಿಲ್ಲ ಈಗಿನುನ್ಮುಖವಾದ**
**ಬೆಳಕೊಂದೆ ಇಹುದೇನಿಸುವಂಥ ವೇಳೆಗಳುಂಟು**
**ಸುಟ್ಟುಕೊಳ್ಳಲು ನೀನು ಬಯಸುವಾಗ–**
**ನೀ ಮುಂದೆ ಕೈಚಾಚುವಾಗ ಕೇಸುರಿಗಳೆಡೆ;**
**ಅಂಥ ಅನುಭವ ಒಮ್ಮೆ ಮಾತ್ರ ಬರ್ಕು,**
**ದೈವಕೃಪೆಯಿಂದೆಮಗೆ ಆ ಬಗೆಯದು**
**ಮತ್ತೊಂದು ಬಗೆಯದಿದೆಯೆಂದು ತೋರುವುದದೋ–**
**ಒಡಕು ಕಲ್ಲುಗಳಿಡೀ ರಾಶಿ ದಾಟಿದ ಮೇಲೆ**
**ಸಿಗುವನ್ನತ, ಮೇಲೆತ್ತಿದಂಥ ವಿಷಕೊಂಡಿಯಿಹ,**
**ಒಂದಿಡೀ ಬಾಳ್ಗಾಲ ನಡೆವ ನಡಿಗೆ."**

ಈ ಭಿನ್ನ ಸಂದರ್ಭಗಳಲ್ಲಿಯ ಅನುಭವ ಎಷ್ಟೇ ಭಿನ್ನವಾಗಿದ್ದರೂ ಎರಡರಲ್ಲೂ ಮೂಡಿದ ಅನುಭವಗುಣ ಒಂದೇ ಬಗೆಯದು. ಈ ಉನ್ಮೇಷ–ನಿಮಿಷಗಳನ್ನು ನಿತ್ಯಜೀವನದ ಪದ್ಧತಿಯೊಂದಿಗೆ ಹೊಂದಿಸುವುದೇ ಸಾಮಾನ್ಯವಾಗಿ ಈಲಿಯಟ್ಟರ

ಅನಂತರದ ಕೃತಿಗಳ ವಸ್ತು ಮತ್ತು ವಿಶೇಷತಃ 'ಭಾಗಚತುಷ್ಟಯ'ದ ವಸ್ತು ಎಂದು ಹೇಳಬಹುದು.

**"ಅಲ್ಲಿ ನಾವು ಹೋಗಿದ್ದೆವೆಂಬುದನ್ನಿಷ್ಟೆ ಹೇಳಬಲ್ಲೆ;**
**ಹೇಳಲಾರೆನದು ಎಲ್ಲಿ ಎಂದು ಎಷ್ಟವಧಿವರೆಗೆ ಎಂದು;**
**ಹಾಗೆ ಹೇಳಿದರದನ್ನು ಕಾಲದಲ್ಲಿಟ್ಟ ಹಾಗೆ ಅಕ್ಕು."**

'ಕಾಲಾತೀತವು ಕಾಲಕ್ಕೆ ತಾಗುವ ಬಿಂದು' ನಾಟಕಗಳ ವಸ್ತು. ಬಂಡೆಗೆ ಹೇಳುವ ಮೇಳಗೀತ ಅದನ್ನು ಅತಿಸ್ಫುಟವಾಗಿ ನಮ್ಮೆದುರಿಡುತ್ತದೆ. ಈಲಿಯಟ್ಟರ ಪದ್ಯದ ತುಂಬೆಲ್ಲಾ ಈ ಮಾತುಗಳು ಮಾರ್ದನಿಗೊಳ್ಳುತ್ತವೆ–ಆದರೆ ಗದ್ಯದಲ್ಲಿ ಅಥವಾ ತತ್ತ್ವಶಾಸ್ತ್ರೀಯ ವಿವೇಚನೆಯಲ್ಲಿ ಅವಕ್ಕಿರಬಹುದಾದ ಅರ್ಥಗಳಲ್ಲಲ್ಲ. ಅಲ್ಲಿ ಪದಗಳು ಶೋಧನೀಯ; 'ಉಳಿಸಿಕೊಂಡ ಒಣಪದಾರ್ಥಗಳ' ಪ್ರಥಮ ಭಾಗದಲ್ಲಿ ಅಥವಾ ಮೇಲೆ ಕೊಟ್ಟ ದ್ವಿತೀಯ ಭಾಗದ ಅವತರಣಿಕೆ ಅಥವಾ ಪಂಚಮ ಭಾಗದಲ್ಲಿ ತೀರ್ಪಿಗೆ ಬರುವ–

**"ಪಾಲಿಗೆಮ್ಮಲ್ಲನೇಕ ಲಕ್ಷಿಸದ ನಿಮಿಷ–**
**ವೊಂದೆ, ಕಾಲದ ಹೊರಗೆವೊಳಗೆ ಇಹುದು,**
**ತಲೆಕೆಡಿಸುವುನ್ಮಾದದುದ್ರೇಕ ರವಿಕಿರಣ–**
**ಬಾಣವೊಂದಕೆ ಸಿಕ್ಕಿ ಕಳೆದು ಹೋಗುವುದು.**
**ಇವು ಬರಿಯ ಊಹೆಗಳು ಸೂಚನಾವೀಚಿಗಳು,**
**ಸೂಚನೆಗಳನು ಸರಿಸಿದೂಹೆಗಳ ಕೂಡಿರುವ;**
**ಮಿಕ್ಕೆಲ್ಲವೂ ವ್ರತ, ಪ್ರಾರ್ಥನೆ, ಸದಾಚಾರ–**
**ಶಿಸ್ತು, ಚಿಂತನ, ಕಾರ್ಯರೂಪವಯ್ಯಾ–**
**ಅರ್ಧ ಊಹಿಸಿದಂಥ ಸೂಚನೆ ಕಣಾ, ಅರ್ಧ**
**ಅಂತವರದಾನ, ಪುನರವತಾರವೋ.**

ಈಲಿಯಟ್ ಹೇಳಬೇಕೆಂದಿರುವುದನ್ನು ಗದ್ಯರೂಪಕ್ಕೆ ತರಲು ಸಾಧ್ಯವಿಲ್ಲ. ಅರ್ಥಾನುವಾದ ಮಾಡಲು ಬರದು, ಸಂದೇಶರೂಪಕ್ಕೆ ತರಲಾಗದು. ಏಕೆಂದರೆ, ಪದ್ಯದ ಪೂರ್ಣಾರ್ಥವಿರುವುದು ಅಲ್ಲಿ ಒಟ್ಟು ಗೂಡಿಸಿದ ಎಲ್ಲ ಅನುಭವ ಕ್ಷೇತ್ರಗಳ ಸಂಬಂಧದಲ್ಲಿ. ಈ ವಿವಿಧ ಅನುಭವ ಕ್ಷೇತ್ರಗಳನ್ನು ಈಲಿಯಟ್ಟರ ಭಾಷೆಗಿಂತ ಕಡಿಮೆ ಸೂಕ್ಷ್ಮ, ನಯ, ಜಟಿಲ, ಎನಿಸುವ ಯಾವ ಸಾಧನದಿಂದಲೂ ಸಂಬಂಧಿಸಲು ಸಾಧ್ಯವಿಲ್ಲ. 'ಭಾಗಚತುಷ್ಟಯ'ದ ಶೈಲಿಗಳು ಭಿನ್ನಭಿನ್ನವಾಗಿವೆ. ಗಾದೆವಾತಿನ ಪ್ರಭೋನ್ಮೇಷ ಅಲ್ಲಿದೆ, 'ಉಳಿಸಿಕೊಂಡ ಒಣ ಪದಾರ್ಥಗಳ'ಲ್ಲಿರುವಂಥ ಭಾವಗೀತ ಭಂಗಿ ಅಲ್ಲಿದೆ, 'ಚಿಕ್ಕಗಿಡ್ಡಿಂಗಿ'ನ ಚತುರ್ಥ ಭಾಗದಲ್ಲಿ ಬೆಂಕಿಯ ಸ್ವಭಾವವನ್ನು, ಪ್ರೇಮವನ್ನು ಬಿರುದೆಂದು ಒಪ್ಪಿಸಲಾದ ಪುರುಷನ ಜ್ವಾಲೆ ಎಂದು ಕೊನೆಯದಾಗಿ ಲಕ್ಷಣಿಸಿದಂತಹ ಗೀತರೀತಿ ಅಲ್ಲಿದೆ.

**"ಯೋಜಿಸಿದವರಾರು ತೀವ್ರವಾದ ನೋವ? ಪ್ರೇಮ.**
**ಮನುಜ ಶಕ್ತಿಯೆಂದೂ ಕಿತ್ತೆಸೆಯಲಾರದಂಥ**
**ಅಸಹನೀಯ ಉರಿಯಂಗಿಯ ಹೆಣೆದ ಕೈಯ ಹಿಂದೆ**
**ಇರುವ ಅಪರಿಚಿತ ನಾಮವೆ ಪ್ರೇಮವೆಂಬುದಣ್ಣ.**
**ನಾವು ಬರಿದೆ ಬದುಕುತಿಹೆವು ನಿಟ್ಟುಸಿರನ್ನಿಟ್ಟು.**
**ನುಂಗಿಸಿಕೊಂಡಗ್ನಿಯಿಂದ ಅಗ್ನಿಯಿಂದ ಅಥವಾ."**

ಅತಿ ಸರಳವೂ ಪ್ರಾಥಮಿಕವೂ ಆದ ಮತ್ತು ತಮ್ಮ ಹಿಂದಿನ ಕವಿತೆಗಳ ಮುಖ್ಯ ಸಂಕೇತಗಳಲ್ಲೊಂದಾದ ಈ ಸಂಕೇತದ ಬಳಕೆಯಿಂದ ಈಲಿಯಟ್ ಪ್ರತ್ಯಭಿಜ್ಞೆಯ ಹಾಗೂ ಸಂಶೋಧದ ಗ್ರಹಿಕೆಯನ್ನು ಒಮ್ಮೆಲೇ ಕೊಡುವ ಬಹಳ ಕಾಲ ಹುಡುಕುತ್ತಿದ್ದ ಸತ್ಯದ ಪರಿಪೂರ್ಣವೂ ತೃಪ್ತಿಕರವೂ ಆದ ಮೂರ್ತಿಯನ್ನು ರೂಪಿಸಿಕೊಟ್ಟಂತೆ ತೋರುತ್ತದೆ. ಮತ್ತೊಂದೆಡೆ ಈಲಿಯಟ್ ಸ್ವತಃ ಹೇಳಿದ್ದಾರೆ: ಅನುಭವವನ್ನು ಗ್ರಹಿಸಲು ಶಕ್ತನಾದವನು ತನ್ನ ಆಯುಷ್ಯದಲ್ಲಿ ಹತ್ತು ವರ್ಷಕ್ಕೊಮ್ಮೆ ಭಿನ್ನ ಪ್ರಪಂಚದಲ್ಲಿ ತಾನಿರುವುದನ್ನು ಕಾಣುತ್ತಾನೆ. ಅವನು ಅದನ್ನು ಭಿನ್ನ ದೃಷ್ಟಿಯಿಂದ ನೋಡುತ್ತ ಹೋದಹಾಗೆ ಅವನ ಕಲಾಸಾಮಗ್ರಿಯು ಅನವರತವೂ ಪುನರ್ನವವಾಗುತ್ತಾ ಹೋಗುತ್ತದೆ." 'ಪರಂಪರೆ ಹಾಗು ವ್ಯಕ್ತಿಯ ಪ್ರತಿಭೆ' ಎಂಬ ತಮ್ಮ ಪ್ರಬಂಧದಲ್ಲಿ ಅವರು 'ಹೊಸದೊಂದು ಕಲಾಕೃತಿಯ ನಿರ್ಮಾಣವು ಅದಕ್ಕಿಂತ ಹಿಂದೆ ಇದ್ದ ಎಲ್ಲ ಕಲಾಕೃತಿಗಳಿಗೂ ಏನೋ ಸಂಭವಿಸುವಂತೆ ಮಾಡುತ್ತದೆ' ಎಂದರು. 'ಪ್ರಸ್ತುತ ಕಲಾಸೌಧಗಳು ತಮ್ಮೊಳಗೇ ಒಂದು ಆದರ್ಶ ಕ್ರಮವ್ಯವಸ್ಥೆಯನ್ನು ಮಾಡಿಕೊಂಡಿವೆ. ಆ ವ್ಯವಸ್ಥೆಯು ನಿಜವಾಗಿಯೂ ಹೊಸದಾದ ಇನ್ನೊಂದು ಕಲಾಕೃತಿಯ ಪ್ರವೇಶದಿಂದ ಸ್ಥಿತ್ಯಂತರಹೊಂದುವುದು.' ಇಡಿ ಯುರೋಪಿಯನ್ ಸಾಹಿತ್ಯದ ವಿಷಯದಲ್ಲಿ ಇದು ಸತ್ಯವಾಗಿರಲಿ ಇಲ್ಲದಿರಲಿ, ಸುಸಂಬದ್ಧವಾದ ಇಡಿಯೆನಿಸುವ ಅವರ ಕೃತಿಗಂತೂ ಈ ಮಾತು ಅನ್ವಯಿಸುತ್ತದೆ. ಹಳೆಯ ಕೃತಿಯನ್ನು ಆಮೇಲಿನ ಕೃತಿ ಬದಲಿಸಿದೆ, ಪ್ರಕಾಶಿಸಿದೆ, ಅರ್ಥ ಪೋಷಣೆ ಮಾಡಿದೆ. 'ಭಾಗ ಚತುಷ್ಟಯ ಕಂಡುಬರುವ ಕ್ರಮವ್ಯವಸ್ಥೆಯ ಬಿಗಿವಗೆ ಅವರ ಇಡಿ ಕವನ ಪ್ರಪಂಚದ ಉದ್ದಕ್ಕೂ ಕಾಣಬಹುದು. Mary Stuart ತಿರುಗು ಮುರುಗು ಮಾಡಿದ ಧ್ಯೇಯದಿಂದ 'ಪೂರ್ವ ಕಾಕರ್' ಆರಂಭವಾಗುತ್ತದೆ. 'ನನ್ನಾರಂಭದೊಳೇ ನನ್ನವಸಾನವು ಇಹುದು' ಎಂಬ ಧ್ಯೇಯದೊಡನೆ ಕೊನೆಗೊಳ್ಳುವುದು. ವಸ್ತುಗಳ 'ಪ್ರತಿ ಬೈಂದವಿಕ' ಯುಗಬಂಧದಲ್ಲಿಯೂ ಅಧ್ಯಾಹಾರಧ್ವನಿ ಮತ್ತು ವಿಪರೀತ ಲಕ್ಷಣೆಯ ಬಳಕೆಯಲ್ಲಿಯೂ ಈಲಿಯಟ್ ಅಪೂರ್ವ ವಿಸ್ತಾರವುಳ್ಳ ಅನುಭವಪಂಕ್ತಿಯನ್ನು ನಿಯಂತ್ರಿಸಿ ಸಂಬಂಧಿಸಿದ್ದಾರೆ. ಮತ್ತು ತಮ್ಮ ಶೈಲಿಯ ಅಚ್ಚುಕಟ್ಟುತನ ಹಾಗೂ ಜಾಗೃತ ಕಲೆಗಾರಿಕೆಗಳಿಂದ ಅದನ್ನವರು ಪಳಗಿಸಿ ಏಕೀಕರಿಸಲು ಶಕ್ತರಾದರು. 'ಭಾಗಚತುಷ್ಟಯ'ದ ಕೊನೆಯ ಪದ್ಯದ ಕೊನೆಯಲ್ಲವರು ಹೀಗೆ ಬರೆಯುತ್ತಾರೆ.

"ಪ್ರತಿಯೊಂದೂ ಪದಸಂಹತಿ, ಸರಿಯಾಗಿಹ ವಾಕ್ಯ
(ಪ್ರತಿಯೊಂದೂ ಪದ ಆಯೆಡೆ ಚಿರಪರಿಚಿತವಯ್ಯಾ,
ಮಿಕ್ಕಿದ್ದ ಸಮರ್ಥಿಸಲದು ಸ್ವಸ್ಥಾನವ ಹಿಡಿಗು,
ಆಡಂಬರ–ಭೀರುತೆಗಳಾವುದೂನು ಇಲ್ಲ;
ಹಳ ಹೊಸ ಪದಗಳ ಕೂಡಿಸಿ ಬಳಸುವ ಸೌಲಭ್ಯ;
ಬಳಕೆಯ ಪದದಲ್ಲಶ್ಲೀಲಾರ್ಥತೆ ಬಂದಿಲ್ಲ,
ನಿಷ್ಕೃಷ್ಟಾರ್ಥತೆಯಲ್ಲದೆ ಶಾಸ್ತ್ರೀಯಪದಕ್ಕೆ
ಪಾಂಡಿತ್ಯವ ಮೆರೆಯಿಸುವೊಣಗೌರವವಿನಿತಿಲ್ಲ;
ಪದಗಳಲೆಲ್ಲೊಂದಿಕೆ ಸಂಮೇಳನ ನೃತ್ಯ)
ಪ್ರತಿಯೊಂದೂ ಪದಸಂಹತಿ ಪ್ರತಿಯೊಂದೂ ವಾಕ್ಯ–
ಅವಸಾನವು ಹೌದದು ಆರಂಭವು ಹೌದಯ್ಯಾ,
ಪ್ರತಿಯೊಂದೂ ಪದ್ಯಸಮಾಧಿಯ ಮೇಲಣ ಲೇಖ."

ಇಂಥ ಸುಶಿಕ್ಷಿತ, ಸುಸಂಯತ ಎನಿಸಿದ ಲೇಖನಮಾರ್ಗ ಇಂಗ್ಲೀಷಿನಲ್ಲಿ ಅಸಾಧಾರಣ; ತನ್ನ ಕಡಿಮೆ ಮಟ್ಟದ ರಸನಿಮಿಷಗಳಲ್ಲಿ ಈಲಿಯಟ್ ಕೆಲವೆಡೆ ಅತಿ ಬಿಗಿಯಾದ ಆಳಿಕೆಯ ಗ್ರಹಿಕೆಯನ್ನುಂಟುಮಾಡಿದ್ದಾರೆ. ಆದರೆ ಈ ಅನಂತರದ ಕವನಗಳಲ್ಲಿ ಹಳ ಹೊಸ ಪದಗಳ ಬಳಕೆಯು ಇನ್ನಷ್ಟು ಸುಲಭವೂ ಸುಪರಿಚಿತವೂ ಆಗಿದೆ; ಉಪಕಾಲಿಕ ಪ್ರಯೋಗಗಳು ಸೂಕ್ಷ್ಮತರವೂ ಹೆಚ್ಚು ಪ್ರಸನ್ನವೂ ಆಗಿವೆ; ಆದ್ದರಿಂದ 'ಚಿಕ್ಕಗಿಡ್ಡಿಂಗಿ'ನ ಪ್ರಾರಂಭದ ಅವತರಣಿಕೆಯಲ್ಲಿರುವಂತಹ ಸುಧೀರ ಭಾಷಾಪರಿವರ್ತನವು ಸಂಪೂರ್ಣ ನೈಸರ್ಗಿಕವಾಗಿಬಿಟ್ಟಿದೆ;

"ಚಳಿಗಾಲದ ನಡುವೆ ಬರುವ ಮಳೆಗಾಲವು ತನಗೆ
ತಾನೇ ಋತು, ಸಂಜೆಯ ಕಡೆ ಜಲಜಡತೆಯ ಹೊತ್ತೂ
ನಿತ್ಯತ್ವವ ಹೊಂದಿದೆ ನೇಲುತ್ತ ಕಾಲದಲ್ಲಿ
ಭೂಮಧ್ಯದ ವಲಯಕ್ಕೂ ಧ್ರುವಕೂ ನಡುವಿನಲಿ
ಹಿಮಮಣಿ ಬೆಂಕಿಗಳೊಟ್ಟಿಗೆ ಹೊಳೆಯಲು ಕಿರುವಗಲು
ಜಗಜಗಿಸುತ, ಕರೆಹೊಂಡಗಳಲಿ ಹಿಮಗಡ್ಡೆಗಳ
ಸಂಕ್ಷಪ್ತಾರ್ಕ ಜ್ವಾಲಾ (ಜಿಹ್ವೆ) ನೆಕ್ಕುತಿಹುದು,
ನಿರ್ವಾಣದ ಥಂಡಿಯಲ್ಲಿ ಆ ಹೃದಯದ ಶಾಖ
ಜಲದರ್ಪಣದಲಿ ಮೂಡುಗು. ಆ ಪ್ರಖರ ಪ್ರಭೆಯು
ಅಪರಾಹ್ಣದ ಆದಿಯಲ್ಲಿ ಅಂಧಕಾರವಕ್ಕು."

ಈ ಭೂಪ್ರದೇಶವು 'ಚಿಕ್ಕ ಗಿಡ್ಡಿಂಗಿನ' ಸುತ್ತಲಿನ ಹಳ್ಳಿಯೂ ಹೌದು, ಒಡಕು ಕಲ್ಗಳ ರಾಶಿ ದಾಟಿ ಹೋದಾಗ, ಆ ದೂರ ಪ್ರಯಾಣದ ನಂತರ ಸಿಗುವ ಉರಿಯೆದ್ದ ಹೃದಯ ಪ್ರದೇಶವೂ ಹೌದು. ಆ ಉರಿಗಳು ನೆನಪಿಗೆ ತಂದುಕೊಡುವ ಹೃದಯದ

ವರ್ಣನೆ ಕೊನೆಗೊಳ್ಳುವುದು ಏನೂ ಆಗಿಲ್ಲವೆಂಬಂತಹ ಸಾದಾ ರೀತಿಯಲ್ಲಿ ಅದೊಂದು ಬರಿಯ 'ಅಪರಾಹ್ಣದ ಪೂರ್ವಭಾಗ' ಅಷ್ಟೆ. ಕವಿಯೇನೋ ವಾಸ್ತವಿಕ ಪ್ರಯಾಣವನ್ನೇ ವರ್ಣಿಸಿದ್ದಾರೆ; ಆದರೆ ಅವರು ಕಾಣುವ ವಸಂತಮಾಸ, ಹಿಮಪುಷ್ಪಾಲಂಕೃತವಾದ ಬೇಲಿಸಾಲು–ಇವು 'ಕಾಲದ ಕರಾರಿನಲ್ಲಿ ಇರುವಂಥವಲ್ಲ'. ಉದಾತ್ತಭಾವವನ್ನು ಬಿಂಬಿಸಲು ದಿನಬಳಕೆಯ ಸಾಮಾನ್ಯ ವಸ್ತುಗಳನ್ನು ಉಪಯೋಗಿಸಿಕೊಳ್ಳುವುದು ಮತ್ತು ಇಡಿ ಪದ್ಯದ ಔಪಚಾರಿಕ ಕ್ರಮವಿನ್ಯಾಸ ಡ್ಯಾಂಟೆಯನ್ನು ನೆನಪಿಗೆ ತಂದುಕೊಡುತ್ತವೆ. ಈ ಭಾವಪ್ರತಿಫಲನ ಇಲ್ಲಿ 'ಬೂದಿ ಬುಧವಾರ'ದ ರಚನೆಯಲ್ಲಿರುವಷ್ಟು ಸ್ಪಷ್ಟವಾಗಿ ಅಲ್ಲದಿದ್ದರೂ ಅದಕ್ಕಿಂತ ಹೆಚ್ಚು ಆಳವಾಗಿ ಅನುಭವಕ್ಕೆ ಬರುತ್ತದೆ. ಒಂದು ವಿಚಾರ ರಾಜ್ಯಕ್ಕೂ ಇನ್ನೊಂದಕ್ಕೂ ನಡುವಿನ ಸಂಬಂಧವನ್ನು ಕೊಡುವಾಗ ಈಲಿಯಟ್ ತಮ್ಮ ವೈಯಕ್ತಿಕ ಸಂಕೇತಗಳನ್ನು ಬಳಸಿದರೆ, ಡ್ಯಾಂಟೆಯು ಪ್ರಯಾಣದ ಔಪಚಾರಿಕ ರಚನೆಯ ಹಾಗೂ ನಂಬಿಗೆಯ ಥೋಮಿಸ್ಟಿಕ್ ರಚನೆಯ ಮೂಲಕ ಸಾಧಿಸಿದ್ದಾನೆ. ಈ ಪದ್ಯಗಳಲ್ಲಿ ಈಲಿಯಟ್ ಧಾರ್ಮಿಕ ಪದಗಳನ್ನು ಬಳಸಿದ್ದು ಅತಿ ವಿರಳ, ಭಕ್ತಿಯ ಬರಹಗಳ ಪರಿಚಯವಿದ್ದವರಿಗೆ ಅನಾಸಕ್ತಿಯಿಂದಾಗುವ ಲಾಭ (Life Gidding, III) ಅಥವಾ ಆತ್ಮದ ಕಾರಿರುಳು (East Cocker, III) ಮುಂತಾದ ಅವತರಣಿಕೆಗಳ ಹಿನ್ನೆಲೆ ಧಾರ್ಮಿಕ ಎಂದೆನಿಸೀತು–ಅಷ್ಟೆ. ಆತ್ಮದ ಕಾರಿರುಳೆಂಬುದು ಯುದ್ಧದ ಅರಂಭದಶೆಯಲ್ಲಿ ಜನಕ್ಕೆ ಎಂಥ ಅನುಭವವಾಯ್ತು ಎಂಬುದರ ವರ್ಣನೆಯಾಗಿದೆ.

**"ಕತ್ತಲೋ, ಕತ್ತಲೋ, (ಎತ್ತೆತ್ತಲು) ಕತ್ತಲೋ–**
**ಕತ್ತಲೊಳಗೆ ಹೊಗುವರೆಲ್ಲ, ತಾರಾಂತಾರಾಷ್ಟ್ರೀಯ**
**ಸ್ಥಲಗಳಲ್ಲಿ, ರಂಗಸ್ಥಲದಲ್ಲಿ ಖಾಲಿ ಖಾಲಿಯೊಳಗೆ**
**ಹೊಗುವ ಹಾಗೆ; ದೀಪಗಳನು ನಂದಿಸಿಹರು (ಸುತ್ತಲೂ)**
**ಏಕೆಂದರೆ, ಬದಿಪರದೆಯು ಖಾಲಿ ಸುಯ್ಯುಡುತ್ತಿರೆ,**
**ಅಂಧಕಾರ ಅಂಧಕಾರವೇರಿ ಹರಿದು ಹಾಯ್ದಿರೆ,**
**ದೃಶ್ಯವ ಬದಲಾಯಿಸಬೇಕಯ್ಯ; ನೋಡನೋಡುತ**
**ಕುಳಿತಾಗಲೆ ಈ ಗುಡ್ಡಗಳೀಮರಗಳು, ದೂರದ**
**ಸುಂದರ ನೀಳ್ನೋಟ, ಮುಂದೆ ಧೈರ್ಯವಾಗಿನಿಂದಿಹ**
**ಈ ಅಂಗಳ ಎಲ್ಲ ಈಗ ಸುರುಳಿಸುತ್ತಿ ಒಯ್ವರು..."**

ಒಂದು ರಾತ್ರಿಯ ಬೆಂಕಿಗಾವಲಿನ ಅಂತ್ಯದಲ್ಲಿ ಸತ್ತೊಡೆಯನ ನೆರಳು ಕವಿಗೆ ಎದುರಾಗುವುದನ್ನು ವರ್ಣಿಸಿದ ಆತ್ಮಚರಿತ್ರಾತ್ಮಕ ಅವತರಣಿಕೆ ಸುಧಾರಿಸಿದ Terza Rima ನಮೂನೆಯಲ್ಲಿ ಬರೆಯಲ್ಪಟ್ಟಿದೆ; ಮತ್ತು ಆ ನೆರಳು ಮಿಕ್ಕವಕ್ಕಿಂತ ಹೆಚ್ಚಾಗಿ ಡ್ಯಾಂಟೆಯದನ್ನೇ ಹೋಲುತ್ತದೆ. ಇಲ್ಲಿ ನಿಜವಾಗಿಯೂ ಈಲಿಯಟ್ 'ವಯಸ್ಸಿಗೆ ಅಥವಾ ಬರುವ ಕಾಲಕ್ಕೆಂದು ಕಾದಿಟ್ಟ ವರಗಳ ವ್ಯಂಗ್ಯ ವರ್ಣನೆಯಲ್ಲಿ ನೇರವಾಗಿ

ಇದ್ದಕ್ಕಿದ್ದಂತೆ ತಮ್ಮ ಅಭಿಮತವನ್ನು ಹೇಳಿದ್ದಾರೆ ಎನ್ನಬಹುದು. ಆದರೆ ಪದ್ಯದಲ್ಲಿ ಬರುವ 'ನಾನು' ಎಂಬ ಪದವನ್ನು 'ಬಂಜರುಭೂಮಿ' ಯಲ್ಲಿ ಬರುವ ಟೈರೇಸಿಯಸ್ಸನು ಉತ್ತಮ ಪುರುಷದಲ್ಲಿ ನಾನೆಂದುಕೊಂಬ ಅವತರಣಿಕೆಗಳಲ್ಲಿ ಎಷ್ಟರಮಟ್ಟಿಗೋ ಅಷ್ಟರ ಮಟ್ಟಿಗೇ ಅಲ್ಲದೆ ಅದಕ್ಕೂ ಮುಂದೆ ಹೋಗಿ ಅದು ಕವಿಗೆ ಅನ್ವಯಿಸುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಮೊದಮೊದಲಿನ ನಾಟಕೀಯ ಪಾತ್ರಗಳ ಸ್ವಗತ ಭಾಷಣಗಳು ಅನೇಕ ವೇಳೆ ಅಧ್ಯಾಹರಣೀಯ ವಿಡಂಬನೆಯಿಂದ ಬದ್ಧವಾಗಿವೆ. 'ಖಾಲಿ ಮನುಷ್ಯ'ರಲ್ಲಿ 'ನಾನು' 'ನಾವಾ'ಗಿದೆ; ಏಕೆಂದರೆ ಆ ಪದ್ಯದ ಕೇವಲ ವೇದನೆಯ ಭರದಲ್ಲಿ ವ್ಯಕ್ತಿತ್ವದ ಕಲ್ಪನೆ ಮರೆತು ಹೋಗಿದೆ. 'ಭಾಗಚತುಷ್ಟಯ'ಕ್ಕೆ ಬುಡವಾದ ವಸ್ತುವಿನಲ್ಲಿ ಕಂಡುಬರುವಂತೆ ಎಲ್ಲ ವಸ್ತುಗಳಲ್ಲೂ ಈಲಿಯಟರ ವರ್ಧಮಾನ ನಾಟಕಾಸಕ್ತಿ ಕಾರ್ಯತತ್ಪರವಾದಂತೆ ಕಾಣುತ್ತದೆ. ತಮ್ಮ ಬರಹವನ್ನು ತಮಗೇ ಅನ್ವಯಿಸಿ ಅರ್ಥಮಾಡಕೂಡದೆಂದು ಈಲಿಯಟ್ ಅನೇಕ ಸಲ ಎಚ್ಚರಿಕೆ ಕೊಟ್ಟಿದ್ದಾರೆ. 'ಪರಂಪರೆ ಮತ್ತು ವ್ಯಕ್ತಿಪ್ರತಿಭೆ' ಎಂಬುದರಲ್ಲಿ 'ಪ್ರಾಮಾಣಿಕ ವಿಮರ್ಶೆ ಮತ್ತು ಭಾವಿಕ ಮೆಚ್ಚಿಗೆ ಎಂದೂ ಕವಿತೆಗಲ್ಲದೆ ಕವಿಗೆ ಅನ್ವಯಿಸದು' ಎಂದೂ ಸ್ವಲ್ಪ ಅನಂತರ 'ಪದ್ಯವೆಂಬುದು ಭಾವನೆಗಳ ಹೊನಲನ್ನು ಕಟ್ಟು, ಕಡಿದು ಬರಿಬಿಡುವುದಲ್ಲ, ಭಾವನೆಗಳಿಂದ ತಪ್ಪಿಸಿಕೊಳ್ಳುವ ತಂತ್ರ ಅದು ವ್ಯಕ್ತಿತ್ವದ ಪ್ರಕಾಶನವಲ್ಲ, ಅದರಿಂದ ತಲೆತಪ್ಪಿಸಿಕೊಂಬುದು. ಆದರೆ ವ್ಯಕ್ತಿತ್ವ ಮತ್ತು ಭಾವನೆಗಳಿದ್ದವರಿಗೆ ಮಾತ್ರ ಅವುಗಳಿಂದ ತಪ್ಪಿಸಿಕೊಂಬುದೆಂದರೇನೆಂಬುದು ಗೊತ್ತು.'

ಆದರೂ 'ಭಾಗಚತುಷ್ಟಯವು' ಆಂತರಿಕ ಅನುಭವದ ಒಂದು ಪದ್ಯವಾಗಿದೆ. ಸುಟ್ಟನಾರ್ಟನ್ನಿನ ಮನೆಯು ಖಾಲಿಯೂ ನಿರ್ಜನವೂ ಆಗಿದೆ; ಮಕ್ಕಳ ಕಲ್ಪನೆ ಮಾತ್ರ ಅಲ್ಲಿ ಮತ್ತಾರಾದರೂ ಇರಬಹುದೆಂಬ ಊಹೆಗೆ ಅವಕಾಶ ಕೊಡುತ್ತದೆ. 'ಪೂರ್ವಕಾಕರಿ'ನಲ್ಲಿ ಹಳ್ಳಿಯ ಮಜಾದಾರರ ದೆವ್ವಗಳು ನಟ್ಟಿರುಳಲ್ಲಿ ಒಂದು ಗದ್ದೆಯಲ್ಲಿ ಕುಣಿಯುವುದು ಕಂಡುಬರುತ್ತದೆ. 'ಉಳಿಸಿಕೊಂಡ ಪದಾರ್ಥಗಳಲ್ಲಿ ಹಡಗನ್ನು ಹೊರಡಿಸುವ ಮತ್ತು ತಿರುಗಿಸುವ ಮೀನುಗಾರರು, ಪಯಣಿಗರು ಮತ್ತು–

**'ತಮ್ಮ ಪುತ್ರ–ಪತಿಗಳೆಲ್ಲ ಹೊರಡುವುದನು ಕಂಡರೂನು–**
**ಅವರು ಹಿಂದಿರುಗುವುದನ್ನು ಕಾಣದಿರುವ ಹೆಂಗಸರು'**

ಹೆಚ್ಚು ಭಾರಧಡೆಯುಳ್ಳವರಾಗಿದ್ದಾರೆ. ಮತ್ತು ಕೊನೆಯ ಭಾಗದಲ್ಲಿ ಈಲಿಯಟ್ಟರ ಹಳೆಯ ಹಗೆಯಾದ ಭೂತ–ಭವಿಷ್ಯಗಳ ವ್ಯಾಪಾರಮಾಡುವ ಭವಿಷ್ಯವಾದಿ ಬರುತ್ತಾನೆ. 'ಚಿಕ್ಕ ಗಿಡ್ಡಿಂಗು' ಮಿಲ್ಟನ್, ೧ನೆಯ ಚಾರ್ಲಸ್, ಫೆರಾರ್ಸ್, ನಾರ್ವಿಚ್ಚಿನ ಜೂಲಿಯನ್ (ಅವನ ಮಾತನ್ನು ಎತ್ತಿಕೊಡಲಾಗಿದೆ) ಎಂಬಂತಹ ಐತಿಹಾಸಿಕ ಪಾತ್ರಗಳ ಭಾವದಿಂದ ತುಂಬಿದೆ. ಗಾಳಿದಾಳಿಯ ನಂತರ ಬರುವ 'ಸುಪರಿಚಿತವಾದ ಸಂಮಿಶ್ರ ಭೂತವು' ಕವಿಯು ದ್ವಿಭಾವಿಕನಾಗಿ ಸ್ವಾಗತಿಸಿದಾಗ ಮಾತ್ರ ಮಾತಾಡುತ್ತದೆ; ಅದರ ಮಾತು ಚುಚ್ಚುವಂಥದು, ಸಹಾನುಭೂತಿಪರವಾದದ್ದು, ಮಾರ್ಗದರ್ಶನವೆನಿಸುವಂಥದು;

ಅದರ ಅರ್ಥ ಪ್ರಾಮುಖ್ಯ ಅಪರಿಚಿತವಲ್ಲ; ಅದರ ಪರಿಣಾಮವೆಂದರೆ ಅದೊಂದು ಪ್ರತಿಧ್ವನಿಯಾಗಿಯೂ ದೇವದೂತನಾಗಿಯೂ ವರ್ತಿಸಿದಂತೆ ಕಾಣುವುದು.

## IV

ಈಲಿಯಟ್ಟರಲ್ಲಿ ನಾಟಕಾಸಕ್ತಿಯು ಅವರು ನಾಟಕರೂಪಗಳಲ್ಲಿ ಪ್ರಯೋಗ ಮಾಡಲು ಆರಂಭಿಸುವುದಕ್ಕಿಂತ ಬಹಳ ಮೊದಲೇ ಇತ್ತು. ಆದುದರಿಂದ ಅವರ ನಾಟಕಗಳನ್ನು ವಿವೇಚಿಸುವಾಗ ಅವರ ಹಿಂದಿನ ಪ್ರಬಂಧಗಳನ್ನು ಕೆಲಮಟ್ಟಿಗೆ ಎಚ್ಚರಿಕೆಯಿಂದಲೇ ಅವಕ್ಕೆ ಅನ್ವಯಿಸಬೇಕಾದೀತು. ಆದರೆ ಮೊದಲಿಂದಲೂ ನಾಟಕ ಬರೆಯಬೇಕೆಂಬ ಹಾಗೂ ಅಪೂರ್ಣವಾಗಿರುವ Sweeney Agonistes ನ್ನು ರಚಿಸಬೇಕೆಂಬ ಇಚ್ಛೆ ತಮಗಿತ್ತೆಂದು ಈಲಿಯಟ್ಟರೇ ಹೇಳಿದ ಮಾತು ನಮಗೆ ಸಾಕ್ಷಿಯಾಗಿದೆ.

ಈಲಿಯಟ್ಟರ 'ಆಯ್ದ ಪ್ರಬಂಧಗಳ'ಲ್ಲಿ ಅಚ್ಚಾದ 'ಅಲಂಕಾರ ಮತ್ತು ಪದ್ಯಮಯ ನಾಟಕ,' ಎಲಿಜಬೆತ್ ಕಾಲದ ನಾಲ್ವರು ನಾಟಕಕಾರರು' ಮತ್ತು ನಾಟಕೀಯ ಪದ್ಯದ ಮೇಲಿನ ಸಂವಾದ' ಎಂಬ ಪ್ರಬಂಧಗಳನ್ನು ಅವರು ೧೯೨೦ರ ಹೊತ್ತಿಗೆ ಬರೆದರು. ಇವುಗಳಲ್ಲಿಯ ಮೊದಲನೆಯ ಪ್ರಬಂಧದಲ್ಲಿ (ಅದನ್ನು ಬೆನ್ ಜಾನ್ಸನ್ನನ ಮೇಲೆ ಬರೆದ ಪ್ರಬಂಧದೊಡನೆ ಓದಬೇಕು) ಈಲಿಯಟ್ ಅಲಂಕಾರವನ್ನೂ ನಾಟಕದ ಕೃತಕ ಶೈಲಿಯನ್ನೂ ಸಮರ್ಥಿಸುವುದರಲ್ಲಿ ಮಗ್ನರಾಗಿದ್ದಾರೆ. ಜಾನ್ಸನ್ನರ ಅಲಂಕಾರವು ಬಹು ಜಾಗ್ರತೆಯಿಂದ ಬಲಿಷ್ಠವೂ ಸರಳವೂ ಆದ ಸ್ಥೂಲ ರೇಖೆಯನ್ನೂ ಅನ್ಯೂನಾನತಿರಿಕ್ತವಾಗಿ ತುಂಬುವುದು, ಮತ್ತು ಅದೆಲ್ಲೂ ಆ ಸ್ಥೂಲ ಸೀಮಾರೇಖೆಯನ್ನು ದಾಟದು... ಅಷ್ಟು ವಿಲಂಬದಲ್ಲಿ ಪ್ರಕಾಶನವನ್ನು ಬಯಸುವ ಒಂದು ನಿಶ್ಚಿತ ಕಲಾತ್ಮಕ ಭಾವನೆಯಿದೆ.

ಪಾತ್ರಗಳನ್ನು ವಾಸ್ತವಿಕ ಜೀವನದಲ್ಲಿಯ ವ್ಯಕ್ತಿಗಳನ್ನು ನೆನಪಿಗೆ ತರುವ ವೈಯಕ್ತಿಕ ವೇಷಗಳೆಂದು ಪರಿಗಣಿಸದೆ 'ಅವು ಒಟ್ಟು ಇಡಿಯಾಗಿ ನಿಲ್ಲುವ ಬಗೆಯನ್ನೇ ದೃಷ್ಟಿಯಲ್ಲಿಟ್ಟುಕೊಳ್ಳಲಾಗಿದೆ, ಮತ್ತು ಆ ಕೃತಿಗಳು ಭಾವಗಳ ಮೂರ್ತಿ ಕಾರಣದಿಂದಾದುವಲ್ಲ. ಪ್ರತ್ಯೇಕವಾಗಿ ತೆಗೆದುಕೊಂಡರೆ ಅವಕ್ಕೆ ಅಷ್ಟು ಸತ್ಯತೆಯೂ ಇಲ್ಲ, ಅವು ಅಂಗಗಳು,' ಇಲ್ಲಿ ಅವರು ತಮ್ಮ ಮೊದಲನೆಯ ನಾಟಕ 'ಚರ್ಚಿನಲ್ಲಿ ಕೊಲೆ'ಯಲ್ಲಿ ಬರುವ ಮೋಹಕರು ಮತ್ತು ಆಸ್ಥಾನವೀರರನ್ನೋ, 'ಕುಟುಂಬ ಪುನರ್ಮಿಲನ'ದ ಮೇಳಗೀತಕಾರರಾದ ಪಿತೃವ್ಯ–ಮಾತೃವ್ಯ ಮತ್ತು ಅವರ ಪತ್ನಿಯರನ್ನೋ ಬಣ್ಣಿಸುತ್ತಿರಬೇಕು. ಈಲಿಯಟ್ಟರ ಪ್ರಕಾರ ಜಾನ್ಸನ್ನನು ಮಾರ್ಲೋವಿನ ಅನುಯಾಯಿ; ಅವನ ದುರಂತ 'ಪ್ರಹಸನವು' 'ಅಣಕ ನಾಟಕ'ದ ಅಥವಾ ಹುಚ್ಚು ಹಾಸ್ಯ ನಾಟಕದ ಜಾತಿಗೆ ಸೇರಿದ್ದು.'

'ಎಲಿಜಬೆತ್ ಕಾಲದ ನಾಲ್ವರು ನಾಟಕಕಾರರು' ಎಂಬ ಪ್ರಬಂಧದಲ್ಲಿ ಈಲಿಯಟ್ ಕವಿಸಮಯಗಳನ್ನು ಬೆಂಬಲಿಸಿ ಎಲಿಜಬೆತ್ ಕಾಲದ ಲೇಖಕರು ಅವನ್ನು ಬಳಸುವುದರಲ್ಲಿ ಸುಸಂಗತಿಯನ್ನು ಸಾಧಿಸಲಿಲ್ಲ ಎಂದು ಪರಿತಪಿಸಿದ್ದಾರೆ, ಅಷ್ಟೆ. ಅವರು ಮೇಳ ನೃತ್ಯದ ಅವ್ಯೆಯಕ್ತಿಕ ಕಲೆಯನ್ನು ಹೊಗಳುತ್ತಾರೆ.

ಮಹಾನರ್ತಕನಿಗೂ ಸಾಮಾನ್ಯ ಯೋಗ್ಯ ನರ್ತಕನಿಗೂ ವ್ಯತ್ಯಾಸವಿರುವುದು ಜೈವಿಕ ಜ್ವಾಲೆಯಲ್ಲಿ–ವ್ಯಕ್ತ್ಯುತ್ತರ ಭಾವದಲ್ಲಿ. ಮಹಾನರ್ತಕನ ಪ್ರತಿ ಗತಿಯ ನಡುವೆ ಉಂಟಾಗುವ ಅಮಾನುಷ ರಭಸಶಕ್ತಿ ಎಂದು ಬೇಕಾದರೂ ಅದನ್ನು ಕರೆಯಬಹುದು... ತನ್ನ ವ್ಯಕ್ತಿತ್ವವನ್ನು ಪ್ರಕಾಶಿಸಲೆಂದು ಬುದ್ಧಿ ಪೂರ್ವಕವಾಗಿ ಮಾಡುವ ಪ್ರಯತ್ನದಿಂದ ಯಾವ ಕಲೆಗಾರನೂ ಮಹಾಕಲೆಯನ್ನು (ಹೆಗ್ಗಲೆಯನ್ನು) ನಿರ್ಮಿಸಲಾರ. ಒಳ್ಳೆಯ ಯಂತ್ರವೊಂದನ್ನೋ ಹೂಜಿಯನ್ನೋ ಮೇಜಿನ ಕಾಲನ್ನೋ ಮಾಡುವ ಬಗೆಯದೇ ಆದ ಕಾರ್ಯದಲ್ಲಿ ಮಗ್ನನಾಗಿ ಅವನು ತನ್ನ ವ್ಯಕ್ತಿತ್ವವನ್ನು ಅಪ್ರತ್ಯಕ್ಷವಾಗಿ ಪ್ರಕಾಶಪಡಿಸುತ್ತಾನೆ.

'ನಾಟಕೀಯ ಪದ್ಯದಲ್ಲಿಯ ಒಂದು ಸಂವಾದ' ಎಂಬುದರಲ್ಲಿ 'ಮೇಳನೃತ್ಯದ ಔಪಚಾರಿಕತೆಗೆ ನಾಟಕ ಹತ್ತರಿಸಬೇಕು. ನಾವು ಶಾಶ್ವತವೂ ವಿಶ್ವವ್ಯಾಪಕವೂ ಆದ ಭಾವಗಳನ್ನು ಹೇಳ ಹೊರಟಾಗ ಗದ್ಯಕ್ಕಿಂತ ಹೆಚ್ಚಾಗಿ ಪದ್ಯವನ್ನೇ ಆಶ್ರಯಿಸುವ ಪ್ರವೃತ್ತಿಯುಳ್ಳವರಾಗಿರುವುದರಿಂದ ಗೀತನಾಟಕವು ಗದ್ಯ ನಾಟಿಕಕ್ಕಿಂತ ಹೆಚ್ಚು ಪ್ರಭಾವಶಾಲಿ' ಎಂದಿದ್ದಾರೆ ಈಲಿಯಟ್. ಅಂಥ ನಾಟಕದಲ್ಲಿ ಪದ್ಯ ಹಾಗೂ ನಾಟಕಗಳು ಪ್ರತ್ಯೇಕಿಸಬರುವಂಥವಲ್ಲ. ಎಲಿಜಬೆತ್ ಕಾಲದ ನಾಟಕಕಾರರಲ್ಲಿ ಅತಿ ಯಶಸ್ವಿಗಳಾದವರು ಅತಿ ಯಶಸ್ವಿ ಕವಿಗಳೂ ಹೌದು.

ಸಂಗೀತಶಾಲೆಯ ಲಯದಿಂದ ಈಲಿಯಟ್ಟರ ನಾಟಕ ರಚನೆಯ ಪ್ರಯತ್ನ ಪ್ರಾರಂಭವಾಯಿತು. Sweeny Agonistes ನಲ್ಲಿಯ jazz ಹಾಡುಗಳು, ನಾಟಕದ ಪಾತ್ರಗಳಾದ ಸರಳ ಪ್ರಾಣಿಗಳು ಮತ್ತು ಕೊಲೆಯ ಭಯಂಕರ ಕತೆ ಒಟ್ಟು ಕೂಡಿ ಒಂದು ದುರಂತ ಗೇಲಿ ನಾಟಕವಾಗಿ ರೂಪಿಸಲ್ಪಟ್ಟಿವೆ.

Sweeny Agonistes ನ ಪ್ರಪಂಚವು ಶ್ರೀ ಗ್ರಾಹಾಂಗ್ರೀನರ ಮೊದಮೊದಲಿನ ಕಾದಂಬರಿಗಳ ಪ್ರಪಂಚದಂತಿದೆ. ಗುಂಪುಗಳ್ಳರು, ಸಾಹಸಿಕರು, ಸೂಳೆಯರು ಮತ್ತು ಮೂಕ ವ್ಯಾಪಾರಿಗಳು ಈ ಎಲ್ಲರೂ ಗುಪ್ತಭಯಪೀಡಿತರು. ಈ ಭಯವು ಶಕುನವ್ಯಂಜಕ ಪೇಷಣಾಲಯದಿಂದ ಮತ್ತು ಭಾರವಾದ ಪುನರುಕ್ತಿ ಹಾಗೂ ಪಡಿನುಡಿಗಳಿಂದ ಸೂಚಿತವಾಗಿದೆ. ಅದರ ಗತಿ ಬಹು ಸರಳ; ಅದರಲ್ಲಿ ೨–೩ ಸ್ವರಗಳ ಸಂಯೋಗವಿದೆ. ಅದು ಆರಂಭಿಸುವುದು ಹೀಗೆ:

**ಡಸ್ಟಿ=ಪೆರೀರ ಹೇಗೆ?**
**ಡೋರಿಸ್–ಪೆರೀರನ ವಿಷಯವೇನು?**

**ಡಸ್ಟಿ–ನೀನು ಲಕ್ಷಿಸುವುದಿಲ್ಲ!**
**ಯಾರು ಬಾಡಿಗೆ ಕೊಡುವವರು?**
**ಡೋರಿಸ್–ಹೌದು ಅವನೇ ಬಾಡಿಗೆ ಕೊಡುತ್ತಾನೆ.**
**ಡಸ್ಟಿ–ನಿಜ, ಕೆಲವರು ಕೊಡುತ್ತಾರೆ, ಕೆಲವರು ಕೊಡರು;**
**ಕೆಲವರು ಕೊಡುವುದಿಲ್ಲ–ನಿನಗವರಾರೆಂಬುದು ಗೊತ್ತು.**
**ಡೋರಿಸ್–ನೀನು ಪೇರಿರನನ್ನು ಇಟ್ಟುಕೊಳ್ಳಬಹುದು.**
**ಡಸ್ಟಿ–ಪೆರೀರನ ವಿಷಯವೇನು?**
**ಡೋರಿಸ್–ಪೆರೀರ ಸದ್‌ಗೃಹಸ್ಥನೇ ಅಲ್ಲ, ಅವನನ್ನು**
**ನಂಬಲಿಕ್ಕೇ ಸಾಧ್ಯವಿಲ್ಲ.**
**ಡಸ್ಟಿ–ನಿಜ, ಅದು ಸತ್ಯ.**

ಡೋರಿಸ್ ಹಗ್ಗ ತುಂಡರಿಸಿ ಹೆಣದ ಪೆಟ್ಟಿಗೆಯನ್ನು ಎಳೆದಾಗ ಮತ್ತು ಕೊನೆಗೆ ಸ್ವೀನಿಯು ಒಬ್ಬ ಹುಡುಗಿಯನ್ನು ಕೊಂದು ಅವಳ ದೇಹವನ್ನು ಬಚ್ಚಲುಮನೆಯಲ್ಲಿಟ್ಟ ಮನುಷ್ಯನ ಕತೆಯನ್ನು ಹೇಳುತ್ತ ಗುಂಪಿನಲ್ಲಿ ಹೊಕ್ಕಾಗ ಅಶುಭ ಸೂಚಕ ಪ್ರತಿಧ್ವನಿಗಳು ಇನ್ನೂ ಸಾಗುತ್ತಲೇ ಇರುತ್ತವೆ.

**ಯಾರೂ ಬರಲಿಲ್ಲಾ**
**ಹೋದವರಾರಿಲ್ಲಾ**
**ಹಾಲು ಕುಡಿದು ಅವ ತೆತ್ತುಬಾಡಿಗೆಯ**
**(ಹೋಗಿಬಿಟ್ಟನಲ್ಲಾ)**

ಒಂದು ತೀವ್ರಗತಿಯ ತ್ರಿಲಯದ ಮೇಳದಲ್ಲಿ ಭಯಂಕರ ನಿಶಾಸ್ವಪ್ನ ವರ್ಣಿತವಾಗುವುದರಿಂದ ನಾಟಕ ಅಂತಗೊಳ್ಳುತ್ತದೆ;

**ನೀನು ನಟ್ಟಿರುಳಲ್ಲಿ ಒಬ್ಬನೇ ಇದ್ದಾಗ**
**ಬೆವರು ಹರಿಸುವ ಭಯಂಕರ ನರಕದೊಡನೇಳೆ...**

ಮತ್ತು ಅಪಾಯಕರ ವ್ಯಕ್ತಿಯಾದ ಪೆರೀರನ ಬರವನ್ನು ಬಹುಶಃ ಸೂಚಿಸುವ, ಮತ್ತು ಕ್ರಮೇಣ ಜೋರುಜೋರಾಗುವ ಬಾಗಿಲು ಬಡಿತ ನಾಟಕವನ್ನು ಇತಿಶ್ರೀಗೊಳಿಸುತ್ತದೆ.

ಈ ಸಣ್ಣ ತುಂಡನ್ನೆಂದೂ ಒಂದು ನಾಟಕವನ್ನಾಗಿ (ದೊಡ್ಡದಾಗಿ ಅಥವಾ ಚಿಕ್ಕದಾಗಿ) ವಿಸ್ತರಿಸುತ್ತಿದ್ದಿಲ್ಲ, ವಿಸ್ತರಿಸಲು ಶಕ್ಯವಾಗುತ್ತಿದ್ದಿಲ್ಲ; ಈ ಲಯವು ತೀರಾ ಜೋರಿನದು, ಮತ್ತು ಇಲ್ಲಿಯ ಸ್ಥೂಲಚಿತ್ರ ತೀರಾ ಸ್ಥೂಲ. ಆದರೆ ಇದು ಈಲಿಯಟ್ಟರ ನಾಟಕಶೈಲಿಯ ಪರಿಚಯಮಾಡಿಕೊಡುವ ಮೊಟ್ಟಮೊದಲಿನ ಕೃತಿ–ಇದು ಅತ್ಯಂತ ತ್ಯಕ್ತಛಂದದ, ಅತಿ ಒತ್ತುಗಡೆಯ, ಅಕ್ರಮ ಅಥವಾ ವಕ್ರ ಪದ್ಯಪಂಕ್ತಿಗಳ ಪುಂಜ;

ಇದರಲ್ಲಿ ಹೊಡೆದು ಮೂಡಿದ ಪ್ರಾಸ ಮತ್ತು ಅಪಶಕುನ ಸೂಚಕವಾದ ವೈವಿಧ್ಯರಹಿತ ಸ್ವರಭಾರಗಳಿವೆ. ಇದಕ್ಕೆ ಒರೆಸ್ಟೀಸನ ಮಾತಿನಿಂದ ಮುನ್ನುಡಿ ಇಡಲಾಗಿದೆ:

'ನೀನವನ್ನು ಕಾಣುತ್ತಾ ಇಲ್ಲ, ಇಲ್ಲ–ಆದರೆ ನನಗವು ಕಾಣಿಸುತ್ತಾ ಇವೆ; ಅವು ನನ್ನನ್ನೀಗ ಬೆನ್ನಟ್ಟಿಕೊಂಡು ಬರುತ್ತಾ ಇವೆ, ನಾನು ಮುಂದೆ ಸಾಗಲೇಬೇಕು.'

ದೆವ್ವಕ್ಕಿಂತ ಹೆಚ್ಚು ನಾಟಕೀಯವಾದುದಿನ್ನೊಂದಿಲ್ಲ ಎಂದಿದ್ದಾರೆ ಈಲಿಯಟ್; ಅವರ ನಾಟಕಗಳಲ್ಲೆಲ್ಲಾ ಈ ಅತಿಮಾನುಷದ ಬಲವಾದ ವಾಸನೆ ತುಂಬಿಕೊಂಡಿದೆ. ಅವರ ಮೊಟ್ಟಮೊದಲನೆಯ ನಾಟಕ ಕೃತಿಯಾದ 'ಆ ಬಂಡೆ' ಎಂಬುದೊಂದು ಆಡಂಬರದ ಮೆರವಣಿಗೆಯ ಚಿತ್ರ. ಅದನ್ನು ಲಂಡನ್ನಿನ ಪಾದ್ರಿ ಜಿಲ್ಲೆಯ ಕಟ್ಟಡ ನಿಧಿಗಾಗಿ ಬರೆದದ್ದು. ಅವರ 'ಸಂಗೃಹೀತ ಕವನಗಳ'ಲ್ಲಿ ಅದರ ಮೇಳಗೀತಗಳಷ್ಟನ್ನೇ ಮುದ್ರಿಸಲಾಗಿದೆ. ಅವು ತಾಂತ್ರಿಕ ಅಭ್ಯಾಸಗಳ ರೂಪದವು ಎಂಬ ಕಾರಣದಿಂದಲೂ ಗಮನಾರ್ಹವಾಗಿವೆ; ಅಲ್ಲದೆ ಈಲಿಯಟ್ಟರ ನಿಜವಾದ ಪದ್ಯಕ್ಕೂ ಅವರು ಸಾಕಷ್ಟು ಚೆನ್ನಾಗಿ ಹೇಳಿದ ತಾತ್ವಿಕ ವಸ್ತುಗಳಿಗೂ ಎಷ್ಟು ದೊಡ್ಡ ಅಂತರವಿದೆ ಎಂಬುದನ್ನು ಅವು ತೋರಿಸುತ್ತವೆಂಬುದು ಅತಿ ಮಹತ್ವದ ವಿಷಯ. ಅವರ ಭಾವಗೀತಗಳಲ್ಲಿಗಿಂತ ಈ ಮೇಳಗೀತಗಳಲ್ಲಿಯ ಲಯವು ಅತ್ಯಂತ ಸರಳವಾಗಿದೆ. ಅವರು ಅವು 'ಪದ್ಯದ ಉಪಯೋಗ ಮತ್ತು ವಿಮರ್ಶೆಯ ಉಪಯೋಗ' ಎಂಬುದರಲ್ಲಿ ಕಾಣಿಸಿದಂತೆ ನಾಟಕದ ಸಾಮಾಜಿಕ ಕರ್ತವ್ಯವನ್ನು ಸಾಧಿಸಲೆಂದೇ ರಚಿಸಲ್ಪಟ್ಟವು. ಇಡಿ ಕೃತಿಯೂ ಧರ್ಮ ಮತ್ತು ಸಮಾಜದ ವಸ್ತುವನ್ನಾಧರಿಸಿ ನಿಂತಿದೆ. ಅಲ್ಲಿ ಕೆಲವು ಗಾದೆಗಾರಿಕೆಯ ಸಾಲುಗಳು ಚುಚ್ಚುವ ಹಾಗೂ ಬೈದು ಬುದ್ಧಿಹೇಳುವ ಬಗೆಯಲ್ಲಿವೆ:

**"ಲೊಬೀಲಿಯಗಳರಳಿನಿಂತ**
**ಟೆನಿಸ್ ಫ್ಲಾನಲೆಸೆದಿರುವಾ**
**ನಾಡಿನಲ್ಲಿ ಮೊಲವು ಗುಳಿಯ ತೋಡುತೈತಿ,**
**ಮುಳ್ಳುಕಂಟಿ ಮತ್ತು ತಲೆಯ ಹಾಕುತೈತಿ;**
**ಚುಚ್ಚುರುಣಿಯ ಎಲೆಗಳುಳ್ಳ**
**ಗಿಡವು ಕಲ್ಲಿನಂಗಳದಲಿ**
**ಮತ್ತೆ ರಾಶಿರಾಶಿಯಾಗಿ ಬೆಳೆಯುತೈತಿ,**
**ಗಾಳಿಯಾಗ ಬೀಸಿಬಂದು ಹೇಳುತೈತಿ–**
**'ಇಲ್ಲಿದ್ದರು ನಾಸ್ತಿಕರಾದೊಳ್ಳೆ ಜನಗಳವರಿಗಿರುವ**
**ಒಂದೇ ಸ್ಮಾರಕವೆಂದರೆ ಅಸ್ಫಾಲ್ಟ್‌ರೋಡದರ ಮೇಲೆ**
**ಕಳೆದುಹೋದ ಸಾವಿರಾರು ಗಾಲ್ಫ್‌ಚೆಂಡುಗಳು."**

Coriolanನ ಪ್ರಪಂಚ ಇದು; ನಿರುದ್ಯೋಗಿಗಳ ಮೇಳಗೀತ ಅದರ ಹಿನ್ನೆಲೆಗಿದೆ. ಇಲ್ಲಿರುವುದು ಅಳಿಬೆಲೆಯ ಹಾಗೂ ಯುರೋಪಿನ ಸರ್ವಾಧಿಕಾರಿಗಳ ಉದಯದ

ಪ್ರಪಂಚ. 'ಅ ಬಂಡೆ' ಪ್ರಕಾಶವಾಗಿ ಒಂದು ಪ್ರಚಾರ. ಅದಕ್ಕೆ ಪ್ರಚಾರದ ಗುಣಗಳೂ ಇವೆ, ಗಡಿಮಿತಿಗಳೂ ಇವೆ; 'ಆದಿಯಲ್ಲಿ ದೇವ ಜಗವ ಸೃಷ್ಟಿಮಾಡಿದ' ಎಂಬ ೭ನೆಯ ಮೇಳಗೀತವು 'ಭಾಗಚತುಷ್ಟಯ'ದ ವಸ್ತುಗಳಲ್ಲಿ ಕೆಲವನ್ನು ಬೀಜರೂಪದಲ್ಲಿ ಒಳಗೊಂಡಿದೆ; ಚರ್ಚಿನ ನಿತ್ಯಸೇವೆಗೆ ಬಳಸಲಾಗುವ ಬೈಬಲ್ಲಿನ ಭಾಗಗಳ ಪ್ರಭಾವವು ಆ ಲಯಗಳ ಬಳಕೆಯನ್ನು ಬರಲಿದ್ದ ನಾಟಕಗಳಲ್ಲಿ ಕಾಣುವ ನಿರೀಕ್ಷೆಗೆ ಕಾರಣವಾಗಿದೆ.

'ಚರ್ಚಿನಲ್ಲಿ ಕೊಲೆ' (೧೯೩೫), 'ಕುಟುಂಬ ಪುನರ್ಮಿಲನ' (೧೯೩೯) ಮತ್ತು 'ಹೆಂಡದ ಕೂಟಗುಡಿತ' (೧೯೫೦) ಒಟ್ಟು ಒಂದು ಗುಂಪಿಗೆ ಸೇರುತ್ತವೆ. ಪ್ರತಿಯೊಂದೂ ಒಂದು ಮೆರವಣಿಗೆ ಅಥವಾ ಮೇಳನೃತ್ಯದ ಅಂಶವನ್ನು ಇಟ್ಟುಕೊಂಡಿದೆ ಮತ್ತು ನಾಯಕ ಹಾಗೂ ಮೇಳದವರ ನಡುವಣ ವೈಪರೀತ್ಯ ಮತ್ತು ಕಣ್ಣಿದ್ದ ನೋಟಕ ಒಬ್ಬ ಹಾಗೂ ಮಿಕ್ಕ ಕುರುಡರ ನಡುವಣ ಅಂತರ ಇವುಗಳನ್ನೇ ಆಧರಿಸಿದೆ. ಈಲಿಯಟ್ ಒಂದು ವಿಶಿಷ್ಟವೂ ಪರಿಮಿತವೂ ಆದ ಅರ್ಥದಲ್ಲಿ ನಾಟಕಕಾರರು; ಆದರೆ ಅವರು ತಮ್ಮ ಪರಿಮಿತಿಗಳನ್ನು ಕಂಡುಕೊಂಡು ಅವನ್ನು ಬಳಸಿಕೊಂಡದ್ದರಿಂದ ಅವರ ವಿಶಿಷ್ಟರೂಪದ ನಾಟಕವು ಅಲ್ಪವ್ಯಾಪ್ತಿಯುಳ್ಳದ್ದಾದರೂ ಸುಸಂಬದ್ಧವೂ ಸುಸಂಗತವೂ ಅತಿ ಚೆನ್ನಾಗಿ ಅಭಿನೇಯವೂ ಆಗಿದೆ. ಬೆನ್ ಜಾನ್ಸನ್ನನವಂತೆ ಈ ನಾಟಕಗಳೂ ದ್ವಿಪರಿಮಾಣದವು, ಆದರೆ ಹಗುರಹೊಟ್ಟಲ್ಲ. ಇವು ಮೇಲ್ಮೆಯ ನಾಟಕಗಳು, ಆದರೆ ಕೆಳನೆಲೆಯನ್ನು ಕಂಡುಬರುವಂಥ ಸೂಚನೆಗಳಿಂದ ಕೂಡಿದಂಥವು. ಪಾತ್ರಗಳು ಸಾಪೇಕ್ಷ; ಅವು ಪರಸ್ಪರ ಹೊಂದಿಕೆಯುಳ್ಳವು, ಪರಸ್ಪರ ಘಟಕಾಂಗಗಳು; ಮುಖ್ಯ ಕಥಾವಸ್ತುವಿನ ಮಾನಕ್ಕೆ ವಿಪರ್ಯಾಸ್ತವಾದವುಗಳು. ಕಾರ್ಯಭಾಗ ಬಹಳ ಸ್ವಲ್ಪ. ಒಂದೇ ಒಂದು ಆಯ್ಕೆಯ ಅವಸರವನ್ನು ಮುಖ್ಯ ಪಾತ್ರದೆದುರಿಡಲಾಗುತ್ತದೆ; ನಾಟಕದ ಮಿಕ್ಕ ಭಾಗವು ಈ ಅವಸರದ ಕಡೆಗೂ ಅದರ ವಿರುದ್ಧ ದಿಶೆಗೂ ಕಾರ್ಯಗತಿಯನ್ನು ಕೊಂಡೊಯ್ಯುತ್ತದೆ. ಉಪಸಂವಿಧಾನವಾಗಲಿ, ಗೌಣಹಿತಗಳಾಗಲಿ, ಉಪಕಥೆಗಳಾಗಲಿ ಇಲ್ಲ. ಆಯ್ಕೆಯ ಅವಸರವು ಎಲ್ಲರಿಗೂ ಸಮ. ಎಷ್ಟೋ ವೇಳೆ ಒಂದು ನಾಟಕದ ಅಂಶ ಇನ್ನೊಂದರಲ್ಲಿ ಪುನರುಕ್ತವಾದದ್ದುಂಟು. 'ಭಾಗಚತುಷ್ಟಯ'ದಲ್ಲಿ ಈಲಿಯಟ್ ಹೇಳಿದಂತೆ:

> **'ಹಿಂದೆ ಹೇಳಿದ್ದನ್ನೇ ಮತ್ತೆ ಹೇಳುವೆಯೆಂದು**
> **ನೀನು ಹೇಳುವೆ, ಅದನು ಮತ್ತೆ ಹೇಳುವೆನು,**

**East Coker, III**

'ಕಾಲಗತ ಕಾರ್ಯಕ್ಷಣಕ್ಕೂ ಕಾಲಾತೀತ ಕಾರ್ಯಕ್ಷಣಕ್ಕೂ' ಇರುವ ಸಂಬಂಧವೇ ಮುಖ್ಯವಸ್ತು–ಕ್ಯಾಂಟರ್ ಬರಿಯ ಥಾಮಸ್ಸನು ನಿರ್ಣಯಕ್ಕೆ ಬರುವ ಕಾರ್ಯಕ್ಷಣ (ಅವಸರ), ಹ್ಯಾರಿಮಾನ್‌ಶೆನ್ಸಿ ಗುರುತಿಸುವ (ಅವನ ಅಭಿಜ್ಞಾನದ) ಕಾರ್ಯಕ್ಷಣ, ಸೀಲಿಯನ ಅಂಥ ಆಯ್ಕೆಯ ಕಾರ್ಯಕ್ಷಣ. ಮೂರು ನಾಟಕಗಳಲ್ಲಿಯೂ ಕೇಂದ್ರ

ಪಾತ್ರವು ಅಕ್ಷರಶಃ ಜೀವನ–ಮರಣಗಳಲ್ಲಿ ಒಂದನ್ನು ಆಯ್ದುಕೊಳ್ಳಬೇಕಾಗುತ್ತದೆ. ಥಾಮಸ್ ಹಾಗೂ ಸೀಲಿಯರಿಗಾಗಿ ಅವರ ಸಾವನ್ನು 'ಕುಟುಂಬ ಪುನರ್ಮಿಲನ'ದ ನಾಯಕ ಹ್ಯಾರಿ ಈಲಿಯಟ್ಟರ ಮನದಲ್ಲಿ ಬಹಳ ಕಾಲ ಅಂಟಿಕೊಂಡಿದ್ದ ಆರೆಸ್ಟಿಸನ ಆಕೃತಿ; ಅವನು ತನ್ನ ತಾಯನ್ನು ಕೊಲ್ಲುವ ಆಯ್ಕೆಯನು ಮಾಡುತ್ತಾನೆ ಮತ್ತು ಅಜ್ಞಾತ ಭವಿತವ್ಯತೆಯನ್ನು ಹೊಗುತ್ತಾನೆ. ಇಬ್ಬಗೆಯ ಕಾರ್ಯದಲ್ಲಿ ಆಯ್ಕೆಮಾಡಬೇಕಾಗುತ್ತದೆ; ಪ್ರತಿಯೊಂದು ಪಕ್ಷದ ಫಲವಾಗಿಯೂ ಅಲ್ಲಿಯ ಅನ್ಯೋನ್ಯಾಶ್ರಯವು (ಧರ್ಮಸಂಕಟವು, ಉಭಯ ಸಂಕಟವು) ಪರಿಹಾರವಾಗುತ್ತದೆ. ಈ ಯಾವ ನಾಟಕವೂ ದುರಂತವಲ್ಲ; ಪ್ರತಿಯೊಂದು ವ್ಯಕ್ತಿಗೂ ಅನಿವಾರ್ಯವಾದರೂ ಅವಶ್ಯವಾಗಿ ತಾತ್ಕಾಲಿಕವೆನಿಸುವ ಸ್ಥಿತಿಯಾದ ದುರಂತಾನುಭವವು ಕಳೆದುಬಿಟ್ಟ ಬಳಿಕ ಬರೆದಂತಹ ನಾಟಕಗಳಿವು. ಈಲಿಯಟ್ ಏನಾದರೂ ಬರೆದಿದ್ದರೆ ಅವರ ದುರಂತ ನಾಟಕವು 'ಖಾಲಿ ಮನುಷ್ಯರ' ಅವಧಿಗೆ ಸೇರಬಹುದಾಗಿತ್ತು.

ಸುಲಭವಾದರೂ ನಿಜವಾದ ರೂಪದಲ್ಲಿ ಈ ನಾಟಕಗಳು ಹಿತ್ತಾಳಿಗಲ್ಲದೆ ತಂತಿಗಳಿಗಾಗಿ ಕತ್ತರಿಸದಿರುವಂತೆ 'ಭಾಗಚತುಷ್ಟಯ'ದ ಅನುಭವವನ್ನೇ ಬಿಂಬಿಸುತ್ತವೆ. 'ಚರ್ಚಿನಲ್ಲಿ ಕೊಲೆ' ಜನಪ್ರಿಯವಾಗಿದೆ: 'ಕುಟುಂಬ ಪುನರ್ಮಿಲನವು' ಅತಿ ವೈಯಕ್ತಿಕವೆಂದು ತೋರುವಂಥದೂ ಅಪರಿಪೂರ್ಣವಾಗಿ ಬಿತ್ತರಿಸಿದಂಥದೂ ('ಹ್ಯಾಮ್ಲೆಟ್' ನಾಟಕದಲ್ಲಿದೆಯೆಂದು ಈಲಿಯಟ್ ಹೇಳಿದ ತೊಂದರೆಗಳುಳ್ಳದ್ದೂ) ಆಗಿದ್ದರೂ ಅಭಿನಯಿಸಲು ಬಹಳ ಚೆನ್ನಾಗಿದೆ. ಈ ಮೂರರಲ್ಲಿ 'ಹೆಂಡದ ಕೂಟ ಗುಡಿತವು' ಅನೇಕ ರೀತಿಯಿಂದ ಹೆಚ್ಚು ಬೆಳವಣಿಗೆಯುಳ್ಳದ್ದು; ಈ ನಾಟಕದಲ್ಲಿ ತಾವು ಹುಡುಕುತ್ತಿದ್ದ ಯುಕ್ತಸೂತ್ರವನ್ನು (ಅವರದೇ ಮಾತಿನಲ್ಲಿ ಹೇಳುವುದಾದರೆ 'ಪರನಿಷ್ಠ ಪ್ರತಿಯೋಗಿ'ಯನ್ನು) ಈಲಿಯಟ್ ಹುಡುಕಿತೆಗೆವಲ್ಲಿ ಯಶಸ್ವಿಯಾಗಿದ್ದಾರೆ ಎನ್ನಬಹುದು.

ಥಾಮಸ್ ಆ ಬೆಕೆಟ್ಟಿನ ಖೂನಿಯು ಇಂಗ್ಲಿಷ್ ಚರಿತ್ರೆಯಲ್ಲಿ ಒಂದು ಮಹತ್ವದ ಘಟನೆ. ಒರೆಸ್ಟಿಯಾ ಕಥೆಯು ಇಡಿ ಯುರೋಪಿಗೇ ಸಾಧಾರಣವಾದ ಮಹಾಪುರಾಣ ಕಥೆಗಳಲ್ಲೊಂದು; ೨ನೆಯ ಜಾಗತಿಕ ಯುದ್ಧ ಕೊಟ್ಟ ಆಸ್ತಿಯೆನಿಸಿದ ನರದೌರ್ಬಲ್ಯವು (ಅಸ್ತಿಮಿತತೆಯು) ಈಗ ಸಾಮಾಜಿಕ ದೃಶ್ಯವನ್ನು ರೂಪಿಸುವ ಮಹಾಕಾರಕಗಳಲ್ಲಿ ಒಂದೆನಿಸಿದೆ ಅದು ಕರಿಯ ಮೃತ್ಯುವಿನ ಆಧುನಿಕ ಪರ್ಯಾಯ. ಈಲಿಯಟ್ ತಮ್ಮ ನಾಟಕಗಳನ್ನು ಈ ಬಾಹ್ಯಸ್ಥಲಗಳಲ್ಲಿ ಸುದೃಢವಾಗಿ ಬೇರೂರಿಸಿದರು; ಆದರೆ ಅವು ಸಾರತಃ ಆಂತರಿಕ ಅನುಭವದ ನಾಟಕಗಳು.

**"ಯಾರಿಗೇನೂ ಆಗದಿಹುದೊ ಎಂದೆಂದೂ**
**ಘಟನೆಗಳ ಅಮಹತ್ವವನ್ನರಿತುಕೊಳಲು**
**ಅವರಿಗಾಗದು (ಹ್ಯಾರಿ ಹೇಳುವನು ಬಂದು)."**

ಎಂಬುದು 'ಕುಟುಂಬ ಪುನರ್ಮಿಲನ'ದಲ್ಲಿದೆ. ನಾಲ್ಕನೆಯ ಮೋಹಕನು ಥಾಮಸ್ಸನಿಗೊಂದು ಸಂದರ್ಭವನ್ನು ಹೀಗೆ ವರ್ಣಿಸುತ್ತಾನೆ–

**"ಬದ್ನಾಮಮಾಡಲೋ ಶಪಿಸಿದೂರಿಡಲೋ**
**ಜನ ನಿನ್ನ ದ್ವೇಷಿಸದು; (ಆದರೇನಯ್ಯಾ)**
**ನಿನ್ನಲ್ಲಿ ಕೊರತೆಯಾಗಿಹ ಗುಣಗಳನ್ನು**
**ಕುರಿತು ಚಿಂತಿಸಿ ಆಳವಾಗಿ ಶೋಧಿಸಲು**
**ಐತಿಹಾಸಿಕ ಸತ್ಯವನ್ನು ಯತ್ನಿಸುಗು."**

ಥಾಮಸ್ ಮಾಡಿದ ಆಯ್ಕೆಯು 'ಒಬ್ಬನೇ ಒಬ್ಬ ಮನುಷ್ಯನ ಜೀವಮಾನಕ್ಕಾಗಿ' ಮಾತ್ರವಲ್ಲ. ಅದನ್ನು ಕಾಲಾತೀತ ಕ್ಷಣಗಳ ಕ್ರಮ ವ್ಯವಸ್ಥೆಯ ಅಂಗವನ್ನಾಗಿ ನೋಡಲಾಗಿದೆ. ಒಂದೇ ಕ್ಷಣ ಅದನ್ನು ಹಾಗೆಕಂಡರೂ ಥಾಮಸ್ ಹೇಳುವಂತೆ 'ಸುಟ್ಟ ನಾರ್ಟನ್ನಿ'ನ ಒಂದು ಸಾಲಿನ ಪ್ರತಿಧ್ವನಿ:

**"ಸಹಿಸದೋ ನರಕುಲವು ಬಹುವಾಸ್ತವಿಕವ."**

ಆದರೆ ಅಂಥ ಕ್ಷಣಗಳ ಬೆಳಕಿನಲ್ಲೇ ಸಾಮಾನ್ಯಮಾನವ ಬದುಕನ್ನು ಕಳೆಯುತ್ತಾನೆ. 'ಚರ್ಚಿನಲ್ಲಿ ಕೊಲೆ'ಯಲ್ಲಿ ಮೂರು ಮಟ್ಟದ ಪಾತ್ರಗಳಿವೆ. ನಾಯಕತ್ವದ ಪೂರ್ಣ ವಿಶ್ವಾಸದಿಂದ ಮಾತಾಡುವ ಥಾಮಸ್, ಮೋಹಕರು ಮತ್ತು 'ಅತಿಮಾನುಷ ಕೇಡು' ಆ ಸ್ಥಳಕ್ಕೆ ಉಂಟಾಗಲಿರುವುದನ್ನು ವಾಸನೆ ಹಿಡಿದೂ ಆದಷ್ಟು ನಿರಾತಂಕವಾಗಿ ತಮ್ಮ ಬಾಳನ್ನು ಸಾಗಿಸಿಕೊಂಡು ಹೋಗಲು ಯತ್ನಿಸುವ ಕ್ಯಾಂಟರ್‌ಬರಿಯ ಬಡ ಹೆಂಗಸರು.

**"ಏನಾದರಾಗಬೇಕೆಂದಾಶಿಸೆವು ನಾವು**
**ಏಳು ವರ್ಷದವರೆಗೆ ಬದುಕಿದೆವು ನಾವಿಲ್ಲಿ**
**ತೆಪ್ಪಗಾರೂ ಕಾಣದಂತೆ, ಬದುಕಿದೆವಯ್ಯ**
**ಬದುಕಿದೆವು ಅರೆಬದುಕ (ನಂತು ಇಂತು)."**

'ಸಣ್ಣ ವಸ್ತುಗಳೊಳತೆ ಬಾಳಿಕೊಂಡಿದ್ದ ಆ ಸಣ್ಣ ಜನಗಳಿಗೆ' ಇಷ್ಟವಿಲ್ಲದಿದ್ದರೂ ವಿಧೇಯರಾಗುವ ಒತ್ತಾಯದಿಂದ ಕಾದು ಸಾಕ್ಷಿ ನಿಲ್ಲುವ, ತಮ್ಮ ದೌರ್ಬಲ್ಯದ ಅಪರಾಧದ ಕೊನೆಯಲ್ಲಿ ಜಾಗೃತರಾಗುವ, ಹೊತ್ತು ಬರುತ್ತದೆ;

**"ಕ್ಷಮಿಸೆಮ್ಮನೋ ದೇವ, ಸಾಮಾನ್ಯ ಮಾನವನ**
**ಮಾದರಿಗಳಾವೆಂದು ಒಪ್ಪಿಕೊಳ್ಳುವೆವು,**
**ಕದವಿಕ್ಕಿಕೊಂಡು ಬೆಂಕಿಯ ಕಾಯಿಸುತ ಕುಳಿತ**
**ಗಂಡುಹೆಂಗಳ ಧರ್ಮಹಿಡಿದ ಜನರೋ..."**

ಹಿಂದಿರುಗಿದರೆ ತಾನು ಸಾವನ್ನಾಯ್ದುಕೊಂಡಂತೆಯೇ ಎಂಬುವುದು ಥಾಮಸ್ಸನಿಗೆ ಗೊತ್ತು; ಮತ್ತು ನಾಲ್ವರು ಮೋಹಕರ ದೃಶ್ಯದಲ್ಲಿ ಅವನು ಅಲ್ಲೇ ಉಳಿಯಲು ನಿಶ್ಚಯಿಸುತ್ತಾನೆ. ಅವನು ಅಧಿಕಾರದ ಲಂಚವನ್ನು ತ್ಯಜಿಸುತ್ತಾನೆ–ನಾಲ್ಕನೆಯ ಮೋಹಕನು ಕೋ ಎಂದ ಅಮೃತತ್ವದ ಆಯ್ಕೆಯ ಆತ್ಮಿಕ ಅಧಿಕಾರವನ್ನು ಅವನು ಒಲ್ಲೆನೆನ್ನುತ್ತಾನೆ:

**"ಕೊನೆಯ ಪ್ರಲೋಭನ ಮಹತ್ತಮ ದ್ರೋಹ:**
**ತಪ್ಪು ಕಾರಣಕೆ ಸರಿಗಜ್ಜವೆಸಗುವುದು."**

ಮೋಹಕರಿಗೆ ಸರಿಸಮಾನವಾಗಿ ನಾಲ್ವರು ಆಸ್ಥಾನವೀರರಿದ್ದಾರೆ. ಅವರು ಥಾಮಸ್ಸನನ್ನು ಕೊಂದು, ಆ ಕೊಲೆ ಉದಾತ್ತವಾದುದೂ ಅತ್ಯಾವಶ್ಯಕವಾದುದೂ ಎಂದು ಚೌಕಶುದ್ಧವಾದ ವಿವರಣೆಯನ್ನು ಕೊಡುತ್ತಾರೆ. ಮೋಹಕರಂತೆಯೇ ಅವರು ಆಧುನಿಕ ಆಡುಮಾತಿನ ಪಡೆನುಡಿಯನ್ನು ಬಳಸುತ್ತಾರೆ, ಆಧುನಿಕ ರಾಜಕಾರಣಿಯ ಮೇಳನುಡಿಯಿಂದ ಅವರು ಮಾತಾಡುತ್ತಾರೆ. ಅವರು ಲೊಬೇಲಿಯಸ್ ಹೂವುಗಳ ಹಾಗೂ ಟೆನಿಸ್ ಫ್ಲಾನಲ್ಲುಗಳ ಪ್ರದೇಶದಿಂದ ಮತ್ತು ಅಕ್ವಿಟೇನಿನಿಂದ ಬಂದವರು. ಅವರ ಕೊನೆಯ ವಾದ ಇಂತಿದೆ: ಥಾಮಸ್ಸನು ಸ್ವಯಂ ಮರಣವನ್ನು ಬಯಸಿದನು, ಆದ್ದರಿಂದ ನಡೆದದ್ದಕ್ಕೆ ನಿಜವಾಗಿಯೂ ಅವನೇ ಹೊಣೆ. (ಈ ವಿಷಯ ನಿಮ್ಮೆದುರಿರುವಾಗ ನೀವು ಹಿಂದೆಮುಂದೆ ನೋಡದೆ ಅಸ್ವಸ್ಥ ಮನಸ್ಕತೆಯಿಂದ ಆತ್ಮಹತ್ಯೆಮಾಡಿಕೊಂಡನೆಂದು ತೀರ್ಪು ಕೊಡುವಿರಿ ಎಂದು ನಾನು ಭಾವಿಸುತ್ತೇನೆ)– ಈ ವಾದವು ಸರ್ವಾಧಿಕಾರಿತ್ವದ ರೂಢಿಗಳನ್ನೆಣಿಸಿದರೆ ಅಷ್ಟೇನೂ ದೂರಾನ್ವಯದ ಮಾತೆಂದು ಹೇಳಲಾಗದು. ಕಟಕಿ, ಗಾದೆವಾತು ಮತ್ತು ಸಾಮಾಜಿಕ ಗೇಲಿವಾತುಗಳೂ ಕಾವ್ಯಮಯ ಮೇಳಗೀತಗಳೂ ಒಂದಾದ ಮೇಲೊಂದರಂತೆ ಬರುತ್ತವೆ. ಮೇಳಗೀತಗಳಲ್ಲಿ ಅತಿಮಾನುಷ ಕೇಡಿನ ಸುಳಿವು–ಹೊಳವು ಇದೆ. ಅಲ್ಲಿ ತ್ಯಕ್ತಛಂದದ ವಕ್ರ ಪದ್ಯಪಂಕ್ತಿಗಳಿವೆ. ಅವು ಬೈಬಲ್ಲಿನ ಲಯವನ್ನಾಧರಿಸಿವೆ–ಕೆಲವು ಸಲ ಬೈಬಲ್ಲಿನ ಪದ ಸಂಹತಿಗಳನ್ನೇ ಬಳಸುವುವು, ಉಳಿದ ವೇಳೆಯಲ್ಲಿ ಆಡುಮಾತಿನ ಮೇಳನುಡಿಯನ್ನು ಹಿಡಿಯುವುವು ಮತ್ತು ಯಾವಾಗಲೂ ಪೌನರುಕ್ತಿಕವಾಗಿರುವುವು. ಮಾತಿನ ಕರ್ಮಕಾಂಡದ ವರಸೆ, ರೀತಿಬದ್ಧ ಪಾತ್ರಗಳು ಮತ್ತು ಅತಿಪರಿಮಿತ ಕಾರ್ಯಭಾರ– ಇವು ನಾಟಕದ ಜಟಿಲ ಭಾಷೆಗೆ ಸರಿ ವಿರುದ್ಧವಾಗಿವೆ. (ಅದರಲ್ಲಿ ಗದ್ಯದ ಉದ್ದ ಅವತರಣಿಕೆ ಇದೆ; ಅದರಲ್ಲಿ ಮಹಾಪಾದ್ರಿಯ ಉಪದೇಶವೂ ಸೇರಿದೆ). ತಲೆಬರಹದಲ್ಲಿ ಸೂಚಿತವಾದ ಕಹಿಭಾವವು (ಪತ್ತೆದಾರಿ ಕತೆಗೆ ತಕ್ಕುದಾದೀತು) ಆಸ್ಥಾನವೀರರ ಚಿತ್ರಣದಲ್ಲಿ ಕೊನೆಯತನಕ ಉಳಿಸಿಕೊಂಡು ಹೋಗಲಾಗಿದೆ. ಕೆಲಬಗೆಗಳಲ್ಲಿ ಆ ವೀರರು ನೀತಿ ನಾಟಕಗಳಲ್ಲಿಯ ವಿದೂಷಕ ದೆವ್ವಗಳಂತಿದ್ದರೆ ಮತ್ತೆ ಕೆಲಬಗೆಗಳಲ್ಲಿ ಸಂಗೀತಶಾಲೆಯ ತಿರುಹುಗಳಂತಿದ್ದಾರೆ. ಒಂದು ಪ್ರಯೋಗದಲ್ಲಿ ಪಕ್ಷದ ನಾಯಕನು ಗಾಲ್ಫ್ ಗದೆಯೊಂದನ್ನು

ಎತ್ತಿ ಹಿಡಿದುಕೊಂಡು ತನ್ನ ಮಾತಿನ ನಡುನಡುವೆ ಅಭ್ಯಾಸದ ಹೊಡೆತಗಳನ್ನು ಹೊಡೆಯುತ್ತಾನೆ.

'ಕುಟುಂಬಪುನರ್ಮಿಲನ'ವಾಗಲಿ 'ಹೆಂಡದ ಕೂಟಗುಡಿತ'ವಾಗಲಿ ಕ್ರೈಸ್ತ ಪದಪುಂಜವನ್ನು ಬಳಸಿಲ್ಲ. ಹಾಗಂದಮಾತ್ರಕ್ಕೆ ಅವೇನೂ ಸಮಾಸೋಕ್ತಿ ಪ್ರಯೋಗಗಳೆಂದ ವಿಮರ್ಶಕನೊಬ್ಬನ ವ್ಯಾಖ್ಯೆಗೆ ಪಕ್ಕಾಗಲಾರವು; 'ವೈದ್ಯನಿಲ್ಲಿ ಪಾದ್ರಿ ಮತ್ತು ಚರ್ಚಿಗೆ ಹೋಗುವ ಭಕ್ತರು ಅವನ ರೋಗಿಗಳೇ' ಎಂದ ಹಾಗಲ್ಲ. ಆಧುನಿಕ ಲೌಕಿಕ ಪೂರ್ವಾವರಣದ ಬಳಕೆಯು ಈಲಿಯಟ್ಟರಿಗೆ ತಮ್ಮ ವಸ್ತುವನ್ನು ಹೆಚ್ಚು ಅನ್ಯೂನಾನತಿರಿಕ್ತವಾಗಿಯೂ ದಟ್ಟವಾಗಿಯೂ ಸಂಬಂಧಿಸಲು ಅನುಕೂಲ ಮಾಡಿಕೊಟ್ಟಿದೆ. 'ಹೆಂಡದ ಕೂಟಗುಡಿತ'ದಲ್ಲಿ Sweeney Agonistesನ ಲಯಗಳನ್ನು ಅನುಸರಿಸಿದ್ದು ಎದ್ದು ಕಾಣುತ್ತದೆ:

**ಜೂಲಿಯಾ:** ಅದರವನಿಲ್ಲಿಗೆ ಹೇಗೆ ಬಂದ?

**ಎಡ್ವರ್ಡ್:** <u>ನನಗೆ</u> ಗೊತ್ತಿಲ್ಲ.

**ಜೂಲಿಯಾ:** ನಿನಗೆ ಗೊತ್ತಿಲ್ಲ! ಮತ್ತವನ ಹೆಸರೇನು?
ತನ್ನ ಹೆಸರು ರೈಲಿ ಎಂದು ಹೇಳಿದ್ದನ್ನು ನಾನು ಕೇಳಿದ್ದೇನೆ?

**ಎಡ್ವರ್ಡ್:** ನನಗವನ ಹೆಸರು ಗೊತ್ತಿಲ್ಲ.

**ಜೂಲಿಯಾ:** ಅವನ <u>ಹೆಸರು</u> ನಿನಗೆ ಗೊತ್ತಿಲ್ಲ?

**ಎಡ್ವರ್ಡ್:** ಅವನು ಯಾರೆಂದಾಗಲಿ, ಅವನಿಲ್ಲಿಗೆ ಹೇಗೆ ಬಂದನೆಂಬುದಾಗಲಿ
ನನಗೆ ಗೊತ್ತಿಲ್ಲಾ ಅಂತೇನೆ.

ಈ ಅತ್ಯಂತ ಅಶುಭಸೂಚಕ ಲಯವಲ್ಲದಿದ್ದರೆ (ಮೂಲದಲ್ಲೇ ನೋಡಿಕೊಳ್ಳಿರಿ) ನಾಟಕಾರಂಭದ ಚುರುಕು ಸಂವಾದವು ಸಾಮಾಜಿಕ ಹರಟೆಗೆ ತೀರಾ ಸಮೀಪವೆಂದಿಷ್ಟೇ ಅನಿಸುತ್ತಿತ್ತು. ಈ ಲಯವು ಸಮಪಾರ್ಶ್ವವಾಗಿ ಸಮಾಹರಿಸಿದ ಪಾತ್ರವೃಂದದ ಸುತ್ತಲೂ ತನ್ನ ಪಡಿನುಡಿಗೊಡುವ ಸ್ವರಮೇಳವನ್ನು ಹೊರಡಿಸುತ್ತದೆ. 'ಕುಟುಂಬ ಪುನರ್ಮಿಲನ'ದಲ್ಲಿ ನಾಲ್ವರು ಮಾತೃವ್ಯಪಿತೃವ್ಯರ ಹಾಗೂ ಅವರ ಪತ್ನಿಯರ ಮೇಳಗೀತವನ್ನು ಹೀಗೆ ಬಳಸಿಕೊಳ್ಳಲಾಗಿದೆ. ಅವರು ದಡ್ಡರು. ಹ್ಯಾರಿಗೆ ಏನಾಗಿದೆ ಎಂಬುದವರಿಗೆ ತಿಳಿಯದು. ತಮ್ಮ ಕ್ಲಬ್ಬುಗಳನ್ನೂ ವಿಕಾರ್ ಪದವಿಯ ಚಹಾ ಪಾರ್ಟಿಗಳನ್ನು ಮನಸ್ಸಿಲ್ಲದ ಮನಸ್ಸಿನಿಂದ ಬಿಟ್ಟುಕೊಟ್ಟು ಯೂಮೆನಿಡೀಸನ ನಾಟಕದಲ್ಲಿ ಭಾಗವಹಿಸಲು ಅವರನ್ನು ಕರೆದೊಯ್ಯಲಾಗುತ್ತದೆ.

'ಕುಟುಂಬ ಪುನರ್ಮಿಲನ'ದ ನಾಯಕನಿಗೆ ಅಪರಾಧವೊಂದರ ದೆವ್ವ ಬಡಿದುಕೊಂಡಿರುತ್ತದೆ; ಮನೆಗೆ ಹಿಂದಿರುಗುವವರೆಗೆ ಅವನು ಒಂದು ಛಾಯಾಮಯವಾದ ಭಯಂಕರ ಭಾವನಾ ಪ್ರಪಂಚದಲ್ಲಿ ಬದುಕಿರುತ್ತಾನೆ. ಇಲ್ಲಿ ಅವನ ಅಪ್ಪ–ಅಮ್ಮಂದಿರ ಹಳೆಯ ಅಪರಾಧದ ಪೆಟ್ಟಿಗೆಯ ಮುಚ್ಚಳ ತೆರೆದುತೋರಿಸಲಾಗಿದೆ. ಅವನ ತಂದೆ ತನ್ನ ಹೆಂಡತಿಯನ್ನು ಕೊಲೆಮಾಡಲು ಬಯಸಿದ್ದನ್ನು ಅಜ್ಞಾತ ನಂಬಿಗೆಯನ್ನಾಗಿ ರೂಪಿಸಿಕೊಂಡ ಅವನು ತನ್ನ ಹೆಂಡತಿಯನ್ನು ಕೊಂದದ್ದು ತಿಳಿದುಬರುತ್ತದೆ.

**ಹ್ಯಾರಿ:** "ನನ್ನ ಬಾಳ್ ಮಿಕ್ಕವರ ಹೃದಯ ನನ್ನಲಿ ಕಂಡ ಕನಸಷ್ಟೆ ಆಗಿರಲುಬಹುದು; ನಾನವಳನ್ನು ದೂಡಿದೆನು ಎಂದಿಷ್ಟೆ ಕನಸ ಕಂಡೆನು; ಬಹುಶ ಹಾಗೆ ನಾನೂಹಿಸಿದೆ. ಆ ವಿಚಾರದಿನೇನು?

**ಅಗಾಥೆ:** ಪತ್ತೆದಾರಿಯ ಕತೆಯಿದಲ್ಲ ನಾವ್ ಬರೆದದ್ದು ಅಪರಾಧ–ಶಿಕ್ಷೆಗಳದಲ್ಲ, ಪಾಪದ ಮತ್ತು ಮಾಳ್ಪ ಪ್ರಾಯಶ್ಚಿತ್ತ ವಿಧಿಯ ಕತೆ ಕಾಣಯ್ಯ–

**ನಿನ್ನ ದುಃಖಿತ ಕುಟುಂಬದ ಪ್ರಜ್ಞೆನೀನಾಗಿ**
**ಇರಬಹುದು, ಅದರ ಹಕ್ಕಿಯೆ ನೀನು, ಆ ನಿನ್ನ**
**ಪಾಪಶುದ್ಧಿಯ ನರಕಶಾಲೆಯ ಜ್ವಾಲೆಯಲಿ**
**ಹೊಕ್ಕು ಹೊರಡಲು ಕಳಿಸಿಬಿಟ್ಟಿರಲು ಬಹುದು."**

ಹ್ಯಾರಿಯ ಕಷ್ಟ, ಅದಕ್ಕೆ ಸ್ವಲ್ಪ ಕಡಿಮೆಯೆನಿಸುವ ಮೇರಿಯ (ಅವಳು ಅವನನ್ನು ಪ್ರೀತಿಸಿದರೂ ಅವಳ ಮೇಲೆ ಅವನ ಲಕ್ಷ್ಯ ಸರಿಯಾಗಿ ಬೀಳದ್ದರಿಂದ ಅವಳಿಗುಂಟಾದ ಸಾಮಾನ್ಯ ನಿರಾಶೆಯ) ಕಷ್ಟ ಮತ್ತು ಅವನ ಅಪ್ಪನನ್ನು ಪ್ರೀತಿಸಿ ತ್ಯಜಿಸಿದ ಅಗಾಥೆ– ಇಷ್ಟು ನಾಟಕದ ತಿರುಳು. ಇಲ್ಲಿ ನಾಟಕವು ಭಾವಗೀತಗಳಿಗೆ ಅತಿನಿಕಟವರ್ತಿಯಾಗಿದೆ. ಕೆಲವೇಳೆ ತನ್ನ ಮಟ್ಟಸವಾದ ಸರಳತನದಿಂದ ಅವಕ್ಕೂ ಹೆಚ್ಚಾಗಿ ಹೃದಯ ಸ್ಪರ್ಶಿಯಾಗಿದೆ. ಸಾಮಾಜಿಕ ಆವರಣ, ಅಂಧ ಅಧಿಕಾರಿ ಮನೋವೃತ್ತಿಯುಳ್ಳ ತಾಯಿಯ ಪಾತ್ರ– ಇವು ಕಷ್ಟಾನುಭವದ ತಿರುಳಿಗೆ ವ್ಯತಿರೇಕವಾಗಿ ಬಂದಿವೆ. ಇವು ಅದಕ್ಕೆ ಸಂಬಂಧಿಸಿದವಲ್ಲ. ಹೀಗೆ ನಾಟಕವು ಎರಡು ಮಟ್ಟದಲ್ಲಿ ಸಾಗುತ್ತದೆ 'ಬಂಜರು ಭೂಮಿ'ಯ ಪ್ರಪಂಚದ್ವಯದಂತೆ ಇಲ್ಲಿಯೂ ಸಾಮಾಜಿಕ ಹಾಗೂ ಅತಿಮಾನುಷ ಜಗತ್ತುಗಳಿವೆ.

'ಹೆಂಡದ ಕೂಟಗುಡಿತ'ದಲ್ಲಿ ಈ ಎರಡು ಪ್ರಪಂಚಗಳೂ ಹೆಚ್ಚು ನಿಕಟ ಸಂಬಂಧವುಳ್ಳವಾಗಿವೆ. ಅದು ಒಂದು ಅಯಶಸ್ವಿ ಸಮಾರಂಭದೊಡನೆ ಆರಂಭವಾಗಿ ಒಂದು ಯಶಸ್ವಿಸಮಾರಂಭದೊಡನೆ ಮುಗಿಯುತ್ತದೆ. ಮಧ್ಯಾವಧಿಗಳಲ್ಲಿ ಸಾಮಾಜಿಕ ವಿನಿಮಯದ ಚಿಲ್ಲರೆ ಸಂಗತಿಗಳೆಲ್ಲವನ್ನು ಶೋಧಿಸಲಾಗಿದೆ; ಅವುಗಳ ಪರಿಣಾಮಗಳನ್ನು ಚೆನ್ನಾಗಿ ಬೆಳಕಿಗೆ ತರಲಾಗಿದೆ. ನಾಲ್ಕು ಮುಖ್ಯಪಾತ್ರಗಳು ಮೂರು ಭಿನ್ನ ಪರಿಹಾರಗಳನ್ನು

ಕಂಡರು: ಕರ್ಮ ಹಾಗೂ ಸಾಮಾಜಿಕ ಯಶಸ್ಸು; 'ಮಾನುಷ ಪರಿಸ್ಥಿತಿಯ' ಪರಿಮಿತಿಗಳನ್ನು ಸ್ವೀಕರಿಸಿ, ನಿತ್ಯದ ಆಚಾರಗಳನ್ನಿಟ್ಟುಕೊಂಡು, ಅತಿ ಹೆಚ್ಚಿನ ನಿರೀಕ್ಷೆಗಳನ್ನು ತ್ಯಜಿಸುವುದನ್ನು ಕಲಿತುಕೊಳ್ಳುವುದು; ಕೊನೆಯದಾಗಿ, ಕಠಿನ ವೃತ್ತಿಯನ್ನು ಹಿಡಿದು ಹಿಂಸಾರಭಸದ ಮರಣವನ್ನು ಹೊಂದುವುದು.

ಮೊದಲು ಬೇಸರ ಬರಿಸುವ ಚಿಲ್ಲರೆ ಪಾತ್ರಗಳಾದ ನಡುವೆ ತಲೆಹಾಕುವ ಮುದುಕಿ, ನೆರವಿಗನಾದ ಲೌಕಿಕ ಮನುಷ್ಯ ಇವರೆಲ್ಲರೂ ವೈದ್ಯನೊಡನೆ ಪರೋಪಕಾರಿಗಳಾಗಿ ಕೂಡಿಕೊಂಡು ಒಳ್ಳೆಯದಕ್ಕಾಗಿ ಕೆಲಸಮಾಡುತ್ತಾರೆ.

ಒಂದು ದೃಷ್ಟಿಯಿಂದ ಈ ನಾಟಕಗಳಾವುವೂ ವಾಸ್ತವಿಕ ವರ್ಚಸ್ಸುಳ್ಳವಲ್ಲ. ಹೆಂಗಸರ ಕಾಲೇಜಿನ ಪ್ರಿನ್ಸಿಪಾಲಗಿರಿಗೆ ಅಗಾಥೆಯನ್ನು ಆಯುವ ಸಂಭವ ಕಡಿಮೆ ಎನ್ನಲಾಗಿದೆ. ಆದರೆ ಇದ್ದ ಯಾರೂ 'ಕುಟುಂಬ ಪುನರ್ಮಿಲನ'ಕ್ಕೆ ತಕ್ಕವರಾಗಲಾರರೆಂದು ನನ್ನೆಣಿಕೆ. ಯಾವ ಧಾರ್ಮಿಕ ಪಂಥವೂ ಸೀಲಿಯಾಳನ್ನು ನೆಟ್ಟಗೆ ಒಂದು ಕಠಿನ ದೇಶಕ್ಕೆ ಕಳಿಸಲಾರದೆಂದು ಹೇಳಲಾಗಿದೆ. ಆದರೆ ಅವಳು ಒಮ್ಮೆಲೇ ಹೊರಟುಹೋಗುವುದೂ ತೀವ್ರ ಆಘಾತದಿಂದ ಸಾಯುವುದೂ (ದಿನಪತ್ರಿಕೆಯನ್ನು ಬಹುಶಃ ಓದದ ಕೆಲ ವಿಮರ್ಶಕರು ಅತಿರೇಕ ಭಯಂಕರ ಎಂದರು) ಐತಿಹಾಸಿಕ ಸತ್ಯದ ಮಟ್ಟದಲ್ಲಿ ಓದಬಾರದು. ಹಾಗಲ್ಲದೆ ಕೆಲ ದೃಶ್ಯಗಳು ತೀವ್ರ ವೇದನೆಯ ವಾಸ್ತವಿಕತೆಯನ್ನು ತಳೆದಿವೆ. ಲ್ಯಾವಿನಿಯಾ–ಎಡ್ವರ್ಡರಲ್ಲಿಯ ಜಗಳ ಅಂಥದು. ಅದರ ಪೂರ್ಣಾಭ್ಯಾಸವು 'ಬಂಜರುಭೂಮಿ'ಯ ೨ನೆಯ ಭಾಗದಲ್ಲಿ ಸೂಚಿತವಾಗಿದೆ. ಆದರೆ ಈ ದೃಶ್ಯಕ್ಕೆ ಆಂತರಿಕ ಅರ್ಥವಿದೆ. ಇದು ಬರಿ ಒಂದು ಘಟನೆಯಲ್ಲ. ಇದರಲ್ಲಿ ಮರ್ಮಭೇದಕ ಹಾಸ್ಯವಿದೆ. ಅದನ್ನು ಲಕ್ಷ್ಯವಿಡದ ವಾಚಕರು ತಪ್ಪಾಗಿ ಭಾವಿಸುವುದುಂಟು. ಅದೇ ಅಗಾಥೆ ಹಾಗೂ ಸರ್ ಹೆನ್ರಿ ಹಾರ್‌ಕೋರ್ಟ್ ರೀಲಿಗಳಿಗಿರುವ ಅಣಕ ಘನಸ್ತಿಕೆ ಮತ್ತು ಕೃತಕ ಗಾಂಭೀರ್ಯ. 'ಚರ್ಚಿನಲ್ಲಿ ಕೊಲೆ'ಯ ಮೊದಲನೆಯ ಪಾದ್ರಿಯೂ ಹಾಗೇ ಇದ್ದಾನೆ. ಆ ಧಾಟಿ ಈಲಿಯಟ್ಟರಿಗೇ ಸೇರಿದ್ದು;

> **ಜೂಲಿಯಾ:** "ಓ ಹೆನ್ರಿ, ನೀನೆಣಿಸಿದುದಕ್ಕಿಂತ ಹೆಚ್ಚು ಸೂಕ್ಷ್ಮಾಕ್ಷಿಲ್ಯಾವಿನಿಯೆ, ಒರಟಾಗಿ ಹೇಳುವೊಡೆ ಕೇಳ್ ನಿನ್ನನೊತ್ತಾಯಿಸಿಹಳವಳು ಕೊನೆ–ಕಾಳಗಕೆ.

**ಹೆನ್ರಿ:** ಜೂಲಿಯಾ, ನೀನು ಸರಿಯಾಗಿಯೇ ಹೇಳಿರುವೆ."

ಈಲಿಯಟ್ಟರ ಸಂಕ್ಷೇಪೋಕ್ತಿಗಳು ಅವರ ಮೊದಮೊದಲಿನ ಕವನಗಳನ್ನು ನೆನಪಿಗೆ ತರುತ್ತವೆ. ಸೀಲಿಯಾ ತನ್ನ ಪರಿಸ್ಥಿತಿಯನ್ನು ಹೇಳಿ ಅವಳು ತನ್ನ ಕಾರ್ಯದಿಶೆಯನ್ನು ಆಯ್ದುಕೊಳ್ಳುವ ಕೇಂದ್ರ ದೃಶ್ಯವು ಬೇರೆಯ ಬಗೆಯದೇ ಆಗಿದೆ. ಆದರೆ ಈ ದೃಶ್ಯವು ಅವಳ ಪ್ರೇಮಿಯಾದ ಎಡ್ವರ್ಡ್‌ನೊಡನಾದ ಹಿಂದಿನ ದೃಶ್ಯವನ್ನು ಪಡಿಮೂಡಿಸುತ್ತದೆ.

ಈ ನಾಟಕದಲ್ಲಿ ಭೂತವನ್ನು ವರ್ತಮಾನ ಬದಲಾಯಿಸಿದೆ ಮತ್ತು ಹಿಂಬೆಳಕು ಬೀರುವ ತಂತ್ರವು ಆರಂಭದ ಸಾಲುಗಳಲ್ಲಿಯ ಚಿಲ್ಲರೆ ಲಘು ಅಂಶಗಳನ್ನು ಕೂಡಾ ಸ್ವಾಭಾವಿಕವಾಗಿ ಕೊನೆಯಲ್ಲಿ ಸ್ಮೃತಿಪಥಕ್ಕೆ ತರಲು ನೆರವಾಗುತ್ತದೆ. 'ಹೆಂಡದ ಕೂಟಗುಡಿತವು' (ಅಥವಾ 'ಸುರಾಸಮಾರಂಭವು') ಪೂರ್ಣತೆವೆತ್ತು ಈಲಿಯಟ್ಟರ ಅತ್ಯಂತ ತೃಪ್ತಿಕರವೂ ಪರಿಣತವೂ ಆದ ನಾಟಕವೆನಿಸಿದೆ: 'ಭಾಗಚತುಷ್ಟಯವು' ಅವರ ಮಿಕ್ಕ ಪದ್ಯಗಳಿಗೆ ಹೇಗೋ ಈ ನಾಟಕವು ಅವರ ಮಿಕ್ಕನಾಟಕಗಳ ಪಂಕ್ತಿಯಲ್ಲಿ ಹಾಗಿದೆ.

## V

ಈಲಿಯಟ್ಟರು ತಮ್ಮ ಕಾಲದ ಅತ್ಯುತ್ತಮ ಕವಿಗಳೆಂದೆನಿಸದಿದ್ದರೆ ಅವರು ಆ ಕಾಲದ ಅತಿ ಪ್ರಸಿದ್ಧ ವಿಮರ್ಶಕರೆನಿಸುತ್ತಿದ್ದರು. ಈ ಮಾತಿಗೆ ನಿಜವಾಗಿಯೂ ಕವಿಯನ್ನೂ ವಿಮರ್ಶಕನನ್ನೂ ಪ್ರತ್ಯೇಕಿಸುವುದಸಾಧ್ಯ ಎಂಬ ಮಾತನ್ನೂ ಸೇರಿಸಬೇಕಾಗಿದೆ; ಏಕೆಂದರೆ ಅವರ ವಿಮರ್ಶೆಯು ಅವರ ಕಾವ್ಯಪ್ರಜ್ಞೆಯಿಂದ ಹುಟ್ಟಿದ್ದು ಮತ್ತು ಅವರ ಪದ್ಯವು ಅವರ ವಿಮರ್ಶೆಯ ಪರಿಭಾಷೆಯಿಂದ ಅತ್ಯುತ್ತಮವಾಗಿ ವಿವರಿಸಲ್ಪಡುತ್ತದೆ. ಇಂಗ್ಲಿಷ್ ವಿಮರ್ಶಕರಲ್ಲಿ ರಚನಾತ್ಮಕ ಕಲೆಗಾರರಾದವರೆ ಹೆಚ್ಚು ಸಂಸ್ಮರಣೀಯರಾಗಿದ್ದಾರೆ–ಫಿಲಿಪ್ ಸಿಡ್ನಿ, ಬೆನ್‌ಜಾನ್ಸನ್, ಡ್ರೈಡನ್, ಸಾಮ್ಯುಯಲ್ ಜಾನ್ಸನ್, ಕೋಲ್‌ರಿಜ್ ಮತ್ತು ಆರ್ನಾಲ್ಡ್, 'ತಾವು ಬರೆದ ಕಲೆಗಳನ್ನು ಚೆನ್ನಾಗಿ ಕಾರ್ಯ ರೂಪಕ್ಕೆ ತರುತ್ತಿರುವವರಷ್ಟೇ ವಾಚನೀಯರು' ಎಂದು ಈಲಿಯಟ್ ಒಮ್ಮೆ ತಾವು ಭಾವಿಸಿರುವುದಾಗಿ ಹೇಳಲು ಧೈರ್ಯ ಮಾಡಿದ್ದುಂಟು. ಈ ಅತಿವಾದವನ್ನು ಉಳಿಸಿಕೊಳ್ಳಲು ಅವರು ಗಂಭೀರವಾಗಿ ಪ್ರಯತ್ನಿಸಲಿಲ್ಲ; ಆದರೆ ಅವರು ಪರಿಪೂರ್ಣ ವಿಮರ್ಶಕನ ಬಗ್ಗೆ ಹೇಳಿದಂತೆ ವಿಮರ್ಶೆಯ ಬಗ್ಗೆ ಕೊಟ್ಟ ಲಕ್ಷಣವಾದರೂ–

ಪ್ರತಿಭಾನದ ಎರಡು ಮುಖಗಳೂ ಪರಸ್ಪರ ಪೂರಕಗಳು; ಪ್ರತಿಭಾನವು ಅಪೂರ್ವವೂ ಜನರಲ್ಲಿ ಅಪ್ರಿಯವೂ ಸ್ಪ್ರಹಣೀಯವೂ ಆಗಿರುವುದರಿಂದ ಅನೇಕ ವೇಳೆ ವಿಮರ್ಶಕನೂ ನಿರ್ಮಾಪಕ ಕಲೆಗಾರನೂ ಒಬ್ಬನೇ ಆಗಿರಬೇಕಾಗುತ್ತದೆ.

**'The Perfect Critic'**

**(The Sacred Wood, 1920)**

ಎಂದಿದೆ.

ಈಲಿಯಟ್ಟರ ಪ್ರಕಾರ ಪರಿಪೂರ್ಣ ವಿಮರ್ಶಕನು ವ್ಯಕ್ತಿ ಗ್ರಹವಿಲ್ಲದವನೂ ಅಧೀತಿಯೂ ಆಗಿರಬೇಕಲ್ಲದೆ ಅಪೂರ್ತ ನಿರ್ಮಾಪಕಪ್ರವೃತ್ತಿಯಾಗಲಿ ಸಾಹಿತ್ಯವನ್ನು ಧರ್ಮ ಮುಂತಾದ ಮಿಕ್ಕಿವುಗಳಿಗೆ ಬದಲಾಗಿ ಬಳಸುವ ಬಯಕೆಯುಳ್ಳವನಾಗಲಿ

ಆಗಿರಬಾರದು. ಆರ್ಥರ್ ಸೈಮನ್ಸನ ಪಾತ್ರದಲ್ಲಿ ಅವರು ಅಪರಿಪೂರ್ಣ ವಿಮರ್ಶಕನ ಪ್ರಥಮ ಮಾದರಿಯನ್ನು ನಿರೂಪಿಸಿದ್ದಾರೆ. 'ಕೆಲವು ವೇಳೆ ಓದುವುದರಿಂದ ಅವನ ಭಾವನೆಗಳು ಗರ್ಭೀಕೃತವಾಗುತ್ತವೆ. ಅವುಗಳ ಪ್ರಸವ ಏನೋ ಒಂದು ಹೊಸತನವುಳ್ಳದ್ದಾಗಿರುತ್ತದೆ. ಆದರೆ ಅದು ವಿಮರ್ಶೆಯೂ ಅಲ್ಲ; ನಿರ್ಮಾಪಕತೆ, ಬಹಿಃಸಾರಣ, ಆವಿರ್ಭೂತಿ ಎಂದೂ ಹೇಳುವಂತಿಲ್ಲ'. ಎರಡನೆಯ ಮಾದರಿಯ ಅಪರಿಪೂರ್ಣ ವಿಮರ್ಶಕನನ್ನು ಮ್ಯಾಥ್ಯೂ ಅರ್ನಾಲ್ಡನಲ್ಲಿ ಅವರು ಕಂಡಿದ್ದಾರೆ: 'ಧರ್ಮದ ಸ್ಥಾನದಲ್ಲಿ ಸಂಸ್ಕೃತಿಯನ್ನು ಸಂಸ್ಥಾಪಿಸಿ ಭಾವನೆಯ ಅರಾಜಕತೆಯಿಂದ ಧರ್ಮವನ್ನು ಬಂಜರಾಗಲು ಬಿಡುವುದು ಆರ್ನಾಲ್ಡನ ತತ್ವಜ್ಞಾನದ ಸಮಗ್ರ ಪರಿಣಾಮ.'

ರೇಮಿಡೀ ಗೂರ್ಮೋನರ ಮಾತಿನಲ್ಲಿ ವಿಮರ್ಶಕನ ಕರ್ತವ್ಯವನ್ನು ಲಕ್ಷಣಿಸಲಾಗಿದೆ: Eriger en lois ses impressions personelles, c'est le grand effort d'un homme s'ilest sincere.'ವಿಮರ್ಶಕನು ಸ್ವಾಭಾವಿಕ ಪ್ರತಿಭಾನವುಳ್ಳವನೆಂದು ಭಾವಿಸೋಣ. 'ಅವನ ವಾಚನದ ಗೃಹೀತಾಂಶವು ಸಾಹಿತ್ಯಸೌಂದರ್ಯದ ಸಾಧಾರಣೀಕೃತ ಹೇಳಿಕೆಯ ರೂಪದಲ್ಲಿ ಅರ್ಥವತ್ತಾಗುವ ಪ್ರವೃತ್ತಿಯನ್ನು ತೋರುತ್ತದೆ. ಏಕೆಂದರೆ ನಿಜವಾದ ರಸಗ್ರಹಣಶೀಲವುಳ್ಳ ಹೃದಯದಲ್ಲಿ ಇಂದ್ರಿಯ ಪ್ರತ್ಯಕ್ಷವು ಒಂದು ರಾಶಿಯಾಗಿ ನಿಲ್ಲದೆ, ಒಂದು ರಚನೆಯಾಗಿ ರೂಪಿತವಾಗುತ್ತದೆ. ಈ ರಚನೆಯನ್ನು, ಕಟ್ಟಡವನ್ನು ಭಾಷಾರೂಪದಲ್ಲಿ ಹೇಳುವುದೇ ವಿಮರ್ಶೆ; ಅದು ಪ್ರತಿಭಾನದ ಒಂದು ಬೆಳವಣಿಗೆ.'

ಪ್ರೇರಕವನ್ನು, ಪ್ರಚೋದಕವನ್ನು ಹುಡುಕುವ ವಾಚಕನಿಗೆ ಒಳ್ಳೆಯ ವಿಮರ್ಶಕನ ಕೃತಿಯು ಸಪ್ಪೆಯೂ ವ್ಯಕ್ತಿಗ್ರಹ ರಹಿತವೂ ಆಗಿ ತೋರುತ್ತದೆ. ಏಕೆಂದರೆ, ಪ್ರಚೋದಿಸುವುದು ವಿಮರ್ಶಕನ ಕೆಲಸವಲ್ಲ, ಅಗತ್ಯವಾದ ವಾಸ್ತವಿಕ ವಿಷಯಗಳನ್ನು ಓದುಗನೆದುರಿಗಿಡುವುದಷ್ಟೇ ಅವನ ಕೆಲಸ–ಬರಿದೆ ಹೊರಗಿನ ಸಂಗತಿಗಳನ್ನು ಹೇಳುವುದಲ್ಲ–ಇಡಿ ಕಲಾಕೃತಿಯನ್ನೇ ಅವನೆದುರಿಡುವುದು. ಅದು ಹೇಗೆಂದರೆ, ವ್ಯಾಖ್ಯಾನ ಕೊಡುವುದು ಅಥವಾ ಓದುವುದು; ಇದು ಅರ್ಥವಿವರಣೆಯ ಸೂಕ್ಷ್ಮತಮ ಕ್ರಮ. 'ಆದರೆ ಅತಿ ಮಹತ್ವದ ವಿಷಯಗಳಲ್ಲಿ ವಿಮರ್ಶಕನು ಬಲಾತ್ಕಾರದಿಂದ ಇದು ಹೆಚ್ಚಿನದು, ಇದು ಕಡಿಮೆಯದು ಎಂದು ತೀರ್ಮಾನ ಕೊಡಬಾರದು. ಅವನು ಸುಮ್ಮನೆ ವಿವರಿಸಬೇಕು; ಓದುಗನೆ ಸ್ವತಃ ತೀರ್ಮಾನಕ್ಕೆ ಬರುತ್ತಾನೆ.'

'ಪರಂಪರೆ ಹಾಗೂ ವ್ಯಕ್ತಿಪ್ರತಿಭೆ' ಎಂಬುದರಲ್ಲಿ ಪದ್ಯ ಪ್ರತಿಭೆಯ ರಚನಾ ವಿಧಾನವನ್ನೇ 'ಒಂದು ಅವಿರತ ಸ್ವಾರ್ಥತ್ಯಾಗ ಒಂದು ಅವಿಶ್ರಾಂತಗತಿಯ ವ್ಯಕ್ತಿತ್ವನಿರ್ವಾಣ' ಎಂದೂ ಕವಿಯೊಬ್ಬ ಕೆಟಲಿಟಿಕ್ ಪದಾರ್ಥ (ಸ್ವತಃ ನಿರ್ವಿಕಾರ ಸ್ಥಿತಿಯಲ್ಲಿದ್ದು ಬೇರೆಯವುಗಳಲ್ಲಿ ವಿಕಾರವುಂಟುಮಾಡುವ ವಸ್ತು), ಅವನು ರಸಪ್ರತಿಕ್ರಿಯೆಯಲ್ಲಿ ಆ ಪ್ರತಿಕ್ರಿಯೆಯ ಚೋದಕನಲ್ಲದೆ ಭಾಗಿಯಾಗುವುದಿಲ್ಲ ಎಂದೂ ಬಣ್ಣಿಸಲಾಗಿದೆ.

ಮೇಲೆ ಹೇಳಿದ ಮಾತಿನ ಪ್ರಕಾರ ವಿಕೃತಮನಸ್ಕನು ಅವಶ್ಯವಾಗಿ ದುರ್ವಿಮರ್ಶಕನೆಂದಾಗುತ್ತದೆ; ವಿದ್ವಾಂಸರು ಅಥವಾ ವಸ್ತುವಿಷಯಗಳ ವ್ಯಾಪಾರಿಗಳು ವಂಚಕರಾಗದೆ ಹೋದರೂ 'ವೈಲಾಸಿಕ ಕಲ್ಪನೆಗಳನ್ನು ಪೂರೈಸುವವರು ನಿಜವಾದ ಮೋಸಗಾರರು; ಗೈಥೆ ಮತ್ತು ಕೋಲ್ರಿಜ್ಜರು ನಿರ್ದುಷ್ಟರಲ್ಲ; ಏಕೆಂದರೆ, ಕೋಲ್‌ರಿಜ್ಜನ 'ಹ್ಯಾಮ್ಲೆಟ್' ಎಂಥದು? ದತ್ತ ವಿಷಯಗಳ ದೃಷ್ಟಿಯಿಂದ ಅದೇನಾದರೂ ಪ್ರಾಮಾಣಿಕ ಪರಿಶೀಲನವಾಗಿದೆಯೇ ಅಥವಾ ಕೋಲ್‌ರಿಜ್ಜನನ್ನು ಆಕರ್ಷಕ ಉಡುಪಿನಲ್ಲಿ ಪ್ರದರ್ಶಿಸುವ ಪ್ರಯತ್ನವಾಗಿದೆಯೇ?

ಸಂಯಮ, ಆತ್ಮದಮನ ಮತ್ತು ಅನುಭವಕ್ಕೆ ತಲೆವಾಗಿ ರಚನಾ ತತ್ವಗಳನ್ನು ಹುಡುಕುವುದು ವಿಮರ್ಶಕನ ಸುಗುಣಗಳಷ್ಟೇ ಅಲ್ಲ ಈಲಿಯಟ್ಟರ ಮೊದಲ ಕವನಗಳ ಗಣ್ಯವಾದ ಲಕ್ಷಣಗಳೂ ಆಗಿವೆ. ಅವರ ಯುಗಬಂಧ (ಎರಡು ದೃಶ್ಯಗಳನ್ನೊಟ್ಟಿಗಿಡುವುದು ಇಲ್ಲವೆ ಎರಡು ಜಗತ್ತುಗಳನ್ನು ಜೋಡಿಯಾಗಿ ಇಡುವುದು ಮತ್ತು ಅವನ್ನು ಪರಸ್ಪರ ವ್ಯಾಖ್ಯೆಮಾಡಲು ಬಿಟ್ಟುಬಿಡುವುದು), ಅಧ್ಯಾಹಾರಧ್ವನಿಯನ್ನು ಅವಲಂಬಿಸುವುದು ಮತ್ತು ವ್ಯತಿರೇಕವಿಧಾನ ಪದ್ಧತಿಯನ್ನು ಆಧರಿಸುವುದು ಇವನ್ನು ಹಿಂದೆಯೇ ಹೇಳಲಾಗಿದೆ. ಅದು ಸಾಕ್ರೇಟಿಸನ ಅಥವಾ ಮಯೂಟಿಕ್ ವಿಮರ್ಶನ ಪದ್ಧತಿಗೆ ಸರಿಯಾದುದು. ಅದೇ ಮೇರೆಗೆ ಅವರ ಪದ್ಯಶೈಲಿಯ ವಿಪರೀತಲಕ್ಷಣೆಯ ಏಕಾಗ್ರತೆ ಹಾಗೂ ಬಿಗುವೂ ಸಂಕ್ಷಿಪ್ತವೂ ಆದ ಅಷ್ಟೇ ಏಕಮುಖಲಕ್ಷದ ಗದ್ಯಶೈಲಿ ಪರಸ್ಪರ ಸದೃಶವಾಗಿವೆ. ತಮ್ಮ ಶೈಲಿಯ ಈ ಏಕತ್ರಶಕ್ತಿ ಸನ್ನಿಪಾತವನ್ನು ಅವರು ತಮ್ಮ ಒಂದು ಚಿಕ್ಕ ವಿಡಂಬನ ಕವನದಲ್ಲಿ ಬಣ್ಣಿಸಿದ್ದಾರೆ:

**ಕಾರಕೂನನ ಲಕ್ಷಣಗಳಿಹ,**
**ಭಾರಿ ಬಿಗುಮೊಗವುಳ್ಳ, ಮೇಣುಪ**
**ಚಾರನಿರ್ಭರ ಬಾಯ, ಸಂಭಾಷಣೆಯ ಶೈಲಿಯಲಿ।**
**ತೀರ ಸರಿತನ, 'ಬಹುಶ' 'ಆದರೆ'–**
**ತೋರ ರೇಫದುಪಾಧಿದೋರುವ**
**(ಶಾರದಾ)ಶ್ರೀ ಈಲಿಯಟ್ಟರನೊಳ್ಪುದೆಷ್ಟ ಸುಖ॥**

ಈ ಈಲಿಯಟ್ಟರ ರೀತಿಯು ಒಂದು ವಿಧವಾಗಿ ಕತ್ತರಿಸಿದ, ತಾಟಸ್ಥ್ಯದ ತರಹದ್ದು; ಆದರೆ ಅವರ ಧಾಟಿ ಹಾಗೂ ಬುದ್ಧಿಮತ್ತೆ ಬಲಿಷ್ಠವಾದುದು. ಅದು ನಿಷೇಧಾತ್ಮಕ ಪದಗಳಲ್ಲಿ, ವಿಶೇಷಣಗಳಲ್ಲಿ ಮತ್ತು ನಿಯಂತ್ರಣಗಳಲ್ಲಿ ಹರಿಯುತ್ತದೆ.

ಚಳಿಗಾಲದ ಕಳೆಗಳಿಂದ ಹಾವನ್ನು ಬೇರ್ಪಡಿಸುವ ಪ್ರತಿಮೆಯಲ್ಲಿ ಔಚಿತ್ಯವನ್ನು ಕಾಣುವುದು ಅಷ್ಟು ಸುಲಭವಲ್ಲ... ಚಮತ್ಕಾರ ಎಂಬ ಹಳೆಯ ಅಸ್ಪಷ್ಟ ಪದದಿಂದ ಸೂಚಿತವಾದ ಗುಣವನ್ನು ಭಾಷಾಂತರಿಸಲು ಮಾಡಿದ ಪ್ರಯತ್ನವು ನಮ್ಮನ್ನು

ಸುಸ್ತುಹೊಡೆಸಿಬಿಡುವುದು. ಆ ಭಾಷಾಂತರವನ್ನು ಮಾಡಿದ್ದಾದರೂ ಯಾವುದಕ್ಕೆ? ಅಷ್ಟೇ ಅತೃಪ್ತಿಕರವಾದ ನಮ್ಮ ಕಾಲದ ಪದಗಳಿಗೆ.

ಹೀಗೆ ಸಾಮಾನ್ಯವಾದ ವಿಮರ್ಶಾತ್ಮಕ ಪದಭಂಡಾರವಿಲ್ಲದುದೇ ಈಲಿಯಟ್ಟರ ಸೆಟೆವು ಮತ್ತು ಆತ್ಮರಕ್ಷಕ ವಿಪರೀತ ಧಾಟಿ ಹಾಗೂ ಅವರು ಆ ಮೇಲೆ ಕ್ಷಮಾಪಣೆ ಕೇಳಬೇಕಾಗಿ ಬಂದ 'ಧರ್ಮಗುರುವಿನ ಧಾಟಿ'ಗಳಿಗೆ ಕಾರಣ. ಕವಿಯಂತೆಯೇ ೧೯೨೦ನೆಯ ಆರಂಭಕಾಲದ ವಿಮರ್ಶಕನಾದರೂ ಬಂಜರುಭೂಮಿಯಲ್ಲಿ ಬಿದ್ದಿದ್ದ; ಅವಲಂಬನೀಯ ಸಾಧನ ಸಾಮಗ್ರಿಗಳು ಅವನಿಗೆ ಅತ್ಯಲ್ಪವಾಗಿದ್ದವು. ಈಲಿಯಟ್ ಮುಖ್ಯವಾಗಿ ೧೯ನೆಯ ಶತಕದ ಕೊನೆಯಭಾಗ ಮತ್ತು ೨೦ನೆಯ ಶತಕದ ಆದಿಭಾಗದ ಫ್ರೆಂಚ್ ವಿಮರ್ಶಕರಿಗೂ ಹಾಗೇ ಬಹುಶಃ ಹೆನ್ರಿ ಜೇಮ್ಸನ ವಿಮರ್ಶಾತ್ಮಕ ಮುನ್ನುಡಿಗಳಿಗೂ ಋಣಿಯಾಗಿದ್ದಾರೆ. ವಿಮರ್ಶೆಯ ತತ್ವಗಳ ಶೋಧ ಹಾಗೂ ಕವಿಯಾದ ತಾವು ವಿಶೇಷತಃ ಋಣಿಗಳಾಗಿರುವ ಕವಿಗಳ ಕೃತಿಗಳ ವಿವರಪೂರ್ವಕವಾದ ಪರಿಶೀಲನ–ಈ ಕಾರ್ಯಗಳಲ್ಲಿ ಅವರು ಮಗ್ನರಾದರು. ಅವರ ಸಾಮಾನ್ಯ ಸಾಹಿತ್ಯಸಿದ್ಧಾಂತವು "ಪರಿಪೂರ್ಣವಿಮರ್ಶಕ," "ಅಪರಿಪೂರ್ಣವಿಮರ್ಶಕ," "ಪರಂಪರೆ ಹಾಗೂ ವ್ಯಕ್ತಿಪ್ರತಿಭೆ ಮತ್ತು "ವಿಮರ್ಶೆಯ ಕರ್ತವ್ಯ" ಎಂಬವುಗಳಲ್ಲಿ ಬಿತ್ತರಿಸಲಾಗಿದೆ. ಮೊದಲ ಮೂರು "ಪವಿತ್ರ ಅರಣ್ಯ"ದಲ್ಲಿಯೂ ಕೊನೆಯದು "ಆಯ್ದಪ್ರಬಂಧಗಳ"ಲ್ಲಿಯೂ ಪ್ರಕಟವಾಗಿವೆ (೧೯೩೦). ಈ ಸಣ್ಣಕೃತಿಗಳು ಅವುಗಳ ಪ್ರಮಾಣಕ್ಕೆ ಮೀರಿದ ಪ್ರಭಾವವನ್ನು ಬೀರಿದವು; ಮತ್ತು ಕೇಂಬ್ರಿಜ್ಜಿನ ವಿಮರ್ಶಾ ಪ್ರಸ್ಥಾನವು (ಹಾಗೆ ಕರೆಯಲು ಅದಕ್ಕಷ್ಟೇನೂ ಸಮರ್ಥನೆಯಿಲ್ಲ.) ಟೀ.ಎಸ್. ಈಲಿಯಟ್ಟರ ಹಾಗೂ ಐ.ಎ.ರಿಚರ್ಡ್ಸ್‌ರ ಪ್ರಾರಂಭಿಕ ವಿಮರ್ಶಾಲೇಖಗಳನ್ನು ಆಶ್ರಯಿಸಿದೆಯಲ್ಲದೆ ಅಮೇರಿಕದ "ಹೊಸ ವಿಮರ್ಶೆ"ಗೂ ಅವೇ ಆಧಾರವಾಗಿವೆ.

ಆ ಕಾಲದ ಅಭಿರುಚಿಯನ್ನು ಪುನಃ ದಿಗ್ದರ್ಶಿಸುವುದರಲ್ಲಿ ಈಲಿಯಟ್ಟರು ವೈಯಕ್ತಿಕ ಲೇಖಕರ ಮೇಲೆ ಬರೆದ ಕೃತಿಗಳು ಅವಕ್ಕೂ ಹೆಚ್ಚು ಪ್ರಭಾವ ಶಾಲಿಗಳಾದವು. ಅವು ಕವಿಯಾದ ಅವರ ಅನುಭವವನ್ನು ಆಧರಿಸಿ, ವಿಮರ್ಶೆಯ ಸನಾತನವೂ ಮಹತ್ತರವೂ ಆದ ಕಾರ್ಯವೆನಿಸಿದ "ಹಳೆಯ ಸಂಪರ್ಕಗಳ ಪುನರುದ್ಘಾಟನೆ" ಹಾಗೂ "ಕವಿಯನು, ಪುನಃ ಬಾಳಿಗೆ ತರುವುದು" ಎಂಬುದನ್ನು ಸಾಧಿಸಲು ಯತ್ನಿಸಿದವು. ವಿಮರ್ಶೆಯ ದ್ವಿಮುಖ ಕರ್ತವ್ಯವನ್ನು ಲಕ್ಷಣಿಸುವಲ್ಲಿ ಅವರು "ಪದ್ಯವೆಂದರೇನು?" ಎಂಬ ಮತ್ತು "ಈ ಪದ್ಯ ಒಳ್ಳೆಯದೇ?" ಎಂಬ ಮುಖ ದ್ವಯವನ್ನೆತ್ತಿ ಈ ರೀತಿ ಬರೆಯುತ್ತಾರೆ:

ಎರಡನೆಯ ಪ್ರಶ್ನೆಯನ್ನು ಉತ್ತರಿಸಲು ಯಾವ ತಾತ್ವಿಕ ಕೌಶಲವೂ ಸಾಗದು. ಏಕೆಂದರೆ ಒಳ್ಳೆಯ ಪದ್ಯದ ನೇರವಾದ ಅನುಶೀಲನವನ್ನವಲಂಬಿಸದ ಯಾವ ಸಿದ್ಧಾಂತವೂ ಹೆಚ್ಚು ಪ್ರಯೋಜನಕರವಾಗದು; ಆದರೆ ಹಾಗಲ್ಲದೆ ನಮ್ಮ ನೇರವಾದ

ಪದ್ಯಾನುಶೀಲನವು ಬಹಳ ಮಟ್ಟಿಗೆ ಉತ್ಸರ್ಗವಿಧಾನದ ಕಾರ್ಯವನ್ನೊಳಗೊಂಡಿದೆ.

ವೈಯಕ್ತಿಕ ಕವಿಗಳ ಮೇಲೆ ಬರೆದದ್ದರಲ್ಲಿ ಈಲಿಯಟ್ ಅವರ ಕೃತಿಗಳ ಸರಿಯಾದ ಗುಣವನ್ನು ತೋರಿಸಲೆಂದು ಸರಿಯಾಗಿ ಆಯ್ದ ಉದ್ಧೃತಾಂಶಗಳನ್ನು ಎಚ್ಚರಿಕೆಯಿಂದ ಎದುರಿಟ್ಟಿದ್ದಾರೆ. ಉದ್ಧೃತಾಂಶಗಳೇ ವಿಮರ್ಶಕನ ಕೆಲಸಮಾಡುವಂತೆಯೂ ಯೋಚಿಸಲಾಗಿದೆ. ಅವು ಸಾಮಾನ್ಯಾರ್ಥದ ಸುಖೋದ್ಧಾರಗಳಿಗಿಂತ ಹೆಚ್ಚಿನವು; ಬಹಳ ಸಲ ಅವು ಅವರ ಮುಖ್ಯ ಹೇಳಿಕೆಗಳಾಗಿರುತ್ತವೆ. ಹೀಗೆ ಅವು ಅವರ ಪದ್ಯದಲ್ಲಿಯ ಉದ್ಧೃತಾಂಶಗಳ ಬಳಕೆಯನ್ನು ನೆನಪಿಗೆ ತರುತ್ತವೆ. ಈ ವಿಶಿಷ್ಟ ಸಾಲುಗಳ ಮೇಲೆ ಓದುಗ ವಿಚಾರಮಾಡಬೇಕಾಗುತ್ತದೆ–ಸಕ್ರಿಯವಾಗಿ ಅವಕ್ಕೆ ಪ್ರತಿಕ್ರಿಯೆ ತೋರಬೇಕಾಗುತ್ತದೆ, ಚರ್ಚಾವಸ್ತುವಾದ ಲೇಖಕನ ಬಗ್ಗೆ ತನಗಿದ್ದ ಪೂರ್ವಾನುಭವವೆಲ್ಲವನ್ನೂ ಅದಕ್ಕೆ ಹೊಂದಿಸಿಕೊಳ್ಳಬೇಕಾಗುತ್ತದೆ. ಆದುದರಿಂದಲೇ ಈಲಿಯಟ್ಟರ ಉದ್ಧಾರಾಂಶಗಳು ಓದುಗನ ಮನದ ಮೇಲೆ ಅಷ್ಟು ಬಲವಾಗಿ ಬಿಂಬಿಸುವುವು ಮತ್ತು ತಮ್ಮ ಪೌನಃ ಪುನ್ಯದಿಂದ ಅವು ಸರ್ವತ್ರ ಪ್ರಚುರವಾಗುವುವು.

ಅವರ ಮೊದಲಿನ ವಿಮರ್ಶಾಪ್ರಬಂಧಗಳಾದ "ಪವಿತ್ರಾರಣ್ಯ" (೧೯೨೦) ಮತ್ತು "ಜಾನ್‌ಡ್ರ್ಯಾಡನ್ನನಿಗೆ ಗೌರವ ಪ್ರದಾನ" ಎಂಬವುಗಳಲ್ಲಿ ಸಾಮಾನ್ಯ ವಿಷಯಗಳ ಮೇಲಿನ ಪ್ರಬಂಧಗಳಲ್ಲದೆ, ಬೆನ್‌ಜಾನ್ಸನ್, ಮಾರ್ಲೋ, ಮಸಿಂಜರ್, ಅತಿಭೌತಶಾಸ್ತ್ರೀಯ ಕವಿಗಳು, ಆ್ಯಂಡ್ರೂ ಮಾರ್ವೆಲ್ ಮತ್ತು ಜಾನ್‌ಡ್ರ್ಯಾಡನ್ನರ ಕೃತಿಗಳ ಅಭ್ಯಾಸಗಳೂ (ವ್ಯಾಸಂಗಗಳೂ) ಇವೆ. ಇವುಗಳಲ್ಲಿ ಈಲಿಯಟ್ ಇಡೀ ಒಂದು ದಶಮಾನಕ್ಕೆ ಮಾದರಿ ಹಾಕಿಕೊಟ್ಟರು. ಡಾನ್ ಮತ್ತು ಮಾರ್ವೆಲ್ಲರ ಜಟಿಲವೂ ವೈಡಂಬಿಕವೂ ಅಶ್ರದ್ಧಾಬದ್ಧವೂ ಆದ ಪದ್ಯವು ಆ ಕಾಲದ ಅಭಿರುಚಿಗೆ ತಕ್ಕುದಾಗಿತ್ತು; ಅದೇ ವೇಳೆಗೆ ಮೇಲೆ ಮೇಲಿನ ಸಂಪರ್ಕವನ್ನಿಟ್ಟುಕೊಂಡು, ತಾವು ನೇರವಾಗಿ ಶೋಧಿಸದ ಆಳಗಳನ್ನು ಸೂಚಿಸಿದ ಅಲಂಕಾರಿಕ ಲೇಖಕರ ಪದ್ಯವು ಎಲ್ಲ ಮೂಲಭೂತ ಪ್ರಶ್ನೆಗಳನ್ನು ಹೊರಗಿಟ್ಟು, ಅತಿ ಭೌತಶಾಸ್ತ್ರದ ಸತ್ಯತೆಯನ್ನಲ್ಲಗಳೆದು, ಹೊಳೆಯುವ ಹಾಗೂ ಮುಟ್ಟಿದಾಕ್ಷಣ ಒಡೆಯುವಂಥ ಭ್ರಮನಿಸನದಲ್ಲಿ ಆಶ್ರಯಪಡೆದ ತಲೆಮಾರಿಗೆ ಅಷ್ಟೇ ಸರಿಯಾಗಿ ಹೊಂದತಕ್ಕದ್ದಾಗಿತ್ತು. ಎಲಿಜಬೆತ್ ಕಾಲದ ಮತ್ತು ಅತಿಭೌತಶಾಸ್ತ್ರೀಯ ಕವಿಗಳಾದ ಡಾನ್, ಹರ್ಬರ್ಟ್, ಚೆರ್ಬರಿ ಹರ್ಬಟ್, ಮಾರ್ವೆಲ್ ಮತ್ತು ಮಿಕ್ಕವರು ಈಲಿಯಟ್ಟರ ಸ್ವಂತ ಪದ್ಯವನ್ನು ರೂಪಿಸುವಲ್ಲಿ ಪ್ರಭಾವಬೀರಿದವರಲ್ಲಿಯೇ ಬರುತ್ತಾರೆ. ಅವರ ಕೃತಿಗಳ ಪುನರ್ಮೌಲ್ಯನಿರ್ಧಾರಮಾಡಿದ್ದು ಈಲಿಯಟ್ ಅವರಿಂದ ಕಲಿತುದೇನೆಂಬುದನ್ನು ಬೆಳಕಿಗೆ ತರುತ್ತದೆ; ಆ್ಯಂಡ್ರೂಮಾರ್ವೆಲ್ಲನ ಮೇಲಿನ ಪ್ರಬಂಧದಲ್ಲಿ 'ಚಮತ್ಕಾರ'ದ ಮೇಲೆ ಅವರು ಬರೆದ ಪ್ರಸಿದ್ಧ ಅವತರಣಿಕೆಯು ಅವರ ಪದ್ಯಪಂಕ್ತಿಗಳಿಗೆ ಅನ್ವಯಿಸುವಂತಿದೆ:

ಚಮತ್ಕಾರವು ಪಾಂಡಿತ್ಯವಲ್ಲ; ಕೆಲವೊಮ್ಮೆ ಪಾಂಡಿತ್ಯದಿಂದ ಅದು ಕುಂಠಿತವಾಗುತ್ತದೆ–ಮಿಲ್ಟನ್ನನ ಕೃತಿಗಳಲ್ಲಿ ಬಹಳ ಮಟ್ಟಿಗೆ ಹೀಗಾಗಿದೆ. ಅದು ಜಗತ್ತುಚ್ಛೀಕರಣ ವಿಘ್ನಸಂತೋಷವಲ್ಲ. ಮೃದುಮನಸ್ಕರು ಅದರ ಒರಟುತನವನ್ನು ಅಂಥ ವಿಘ್ನಸಂತುಷ್ಟಿಯ ದೃಷ್ಟಿಯೆಂದು ಗೊಂದಲಗೊಂಡಾರು. ಅನುಭವದ ತಲೆಮಾರುಗಳ ಸಂಪತ್ತಿರುವ ಸುಶಿಕ್ಷಿತ ಮನಸ್ಸಿಗೆ ಸೇರಿದ್ದಾದುರಿಂದ ಅದನ್ನು ಪಾಂಡಿತ್ಯವೆಂದು ತಪ್ಪಾಗಿ ತಿಳಿದುಕೊಳ್ಳಲಾಗುತ್ತದೆ; ಅನುಭವದ ವಿಮರ್ಶೆ ಹಾಗೂ ಸತತ ಪರಿಶೀಲನಗಳನ್ನದು ಸೂಚಿಸುವುದರಿಂದ ಅದನ್ನು ಸರ್ವದ್ವೇಷಭಾವದೊಡನೆ ಗಲಿಬಿಲಿ ಮಾಡಿಕೊಳ್ಳಲಾಗುತ್ತದೆ. ಬಹುಶಃ ಅದರಲ್ಲಿ ಸಾಧ್ಯವಾದ ಇತರ ವಿಧದ ಅನುಭವಗಳ ಪ್ರತ್ಯಭಿಜ್ಞೆಯು ಪ್ರತಿಯೊಂದು ಅನುಭವದ ಪ್ರಕಾಶನದಲ್ಲೂ ಗರ್ಭಿತವಾಗಿರುತ್ತದೆ.

ವಿಲಿಯಂ ಮಾರಿಸ್ಸನ "ಹ್ಯಾಲಾಸಿಗೆ ಗೀತ"ಕ್ಕೂ ೧೯ನೆಯ ಶತಕದ ಪದ್ಯಕ್ಕೂ ಇರುವ ವ್ಯತಿರೇಕ ಸಂಬಂಧ ಮತ್ತು ಡ್ರೈಡನ್ ಮತ್ತು ಮಿಲ್ಟನ್ನರ ಕೃತಿಗಳ ನಡುವಣ ವಿರುದ್ಧ ಕೋಟಿಯ ದೃಷ್ಟಿ–ಇವು ಈಲಿಯಟ್ ಅಷ್ಟು ಕಲಿತ ಕವಿಗಳ ಗುಣವನ್ನು ಲಕ್ಷಣಿಸಲಿಕ್ಕೂ ಅವರು ನಿರಾಕರಿಸಿದ ಗುಣಗಳನ್ನು ವ್ಯಾವರ್ತಿಸಿ ಹೇಳಲೂ ಕಾರಣಗಳಾದವು. ಮಿಲ್ಟನ್ನನ ಬಗೆಗಿರುವ ಅವರ ದೃಷ್ಟಿಕೋನವು ಕುಪ್ರಸಿದ್ಧ; ೧೯೪೭ರಲ್ಲಿ ಬ್ರಿಟಿಷ್ ಅಕಾದಮಿಯೆದುರುಕೊಟ್ಟ ಒಂದು ಭಾಷಣದಲ್ಲಿ ೧೯೨೦ರಲ್ಲಿ ಮಿಲ್ಟನ್ನನದು ಕೆಟ್ಟ ಪ್ರಭಾವವಾಗಿದ್ದರೆ (ಏಕೆಂದರೆ ಆಗ ಶೈಥಿಲ್ಯ, ವೈವಿಧ್ಯ ಮತ್ತು ಪ್ರಯೋಗ ಪರೀಕ್ಷೆಗಳು ಅಗತ್ಯವಾಗಿದ್ದವು) ಸಂಯಮ ಅಗತ್ಯವಾಗಿರುವ ಇಂದಿನ ಅಭ್ಯಾಸಿಕವಿಗಳ ಮೇಲೆ ಕೆಟ್ಟಪ್ರಭಾವ ಬೀರುವಂಥದಾಗಿಲ್ಲ ಎಂದು ಹೇಳಿ ಈಲಿಯಟ್ ಸೂಕ್ಷ್ಮವೂ ರಾಜತಾಂತ್ರಿಕವೂ ಆದ ಯಶಸ್ಸನ್ನು ಗಳಿಸಿದರು.

ಪದ್ಯವು ಗದ್ಯದ ಸುಗುಣಗಳಿಂದ ಕೂಡಿರಬೇಕು, ಬಂಧವು ಅಭ್ಯಸಿಸಿದ ಸಮಕಾಲೀನ ಆಡುಮಾತಿನಲ್ಲಿ ಜೀರ್ಣಗೊಳ್ಳಬೇಕು. ಯಾವಾಗ? ಪದ್ಯದ ಔನ್ನತ್ಯವನ್ನು ಆಶಿಸುವುದಕ್ಕಿಂತ ಮೊದಲು ಇದು ನಮ್ಮ ತತ್ವಗಳಲ್ಲಿ ಒಂದಾಗಿತ್ತು. ಇನ್ನೊಂದು ತತ್ವವೆಂದರೆ, ಪದ್ಯದ ವಸ್ತು ಮತ್ತು ಪ್ರತಿಮಾವಳಿಗಳನ್ನು ಆಧುನಿಕ ಮನುಷ್ಯನ ಅಥವಾ ಮನುಷ್ಯಳ ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನೊಳಗೊಳ್ಳುವಂತೆ ವಿಸ್ತರಿಸಬೇಕು; ಪದ್ಯರೂಪಕ್ಕೆ ತಿರುಗಿಸಲು ಅಸಾಧ್ಯವಾದ ವಸ್ತುವನ್ನು ಹುಡುಕಬೇಕು, ಹಿಂದೆ ಪದ್ಯದಲ್ಲಿ ಬಳಸದಂಥ ಪದ–ಪದಸಂಹತಿಗಳನ್ನು ಅಪೇಕ್ಷಿಸಬೇಕು. ಮಿಲ್ಟನ್ನನನ್ನು ಓದುವುದು ಅಪ್ರಯೋಜಕ. ಅದು ಒಂದು ಅಡ್ಡಿಯಷ್ಟೇ.

ಜೀವನದಲ್ಲಿ ಹೇಗೋ ಹಾಗೇ ಸಾಹಿತ್ಯದಲ್ಲೂ ನಾವು ನಿತ್ಯಕ್ರಾಂತಿಯಲ್ಲಿ ಬದುಕಲಾರೆವು... ಪದ್ಯವು ದತ್ತಕಾಲದ ಭಾಷೆಯನ್ನು ಪರಿಷ್ಕರಿಸಲು ನೆರವಾಗಬೇಕಲ್ಲದೆ ಅದು ಅತಿ ಶೀಘ್ರವಾಗಿ ಬದಲಾವಣೆಹೊಂದುವುದನ್ನು ತಡೆಯಲೂ ನೆರವಾಗಬೇಕು.

ಅತಿವೇಗದ ಭಾಷಾವೃದ್ಧಿಯು ಪ್ರಗತಿಪರ ಅಧಃಪತನ ಎಂಬ ಅರ್ಥದಲ್ಲಷ್ಟೇ ಆದೀತು. ಇಂದು ನಮ್ಮೆದುರಿರುವ ಅಪಾಯ ಅದೇ.

ಈಲಿಯಟ್ ಈ ಮಾತನ್ನಾಡಿದಾಗ ಎದುರಿಗಿದ್ದ ವೃದ್ಧ ಅಕಾದಮೀಶರ ಸಭೆಗೆ ಅಪಾಯಕರನೂ ಪ್ರಭಾವಶಾಲಿಯೂ ಆದ ಅಸಾಂಪ್ರದಾಯಿಕ ಮತಸ್ಥನು ಸಂಪ್ರದಾಯ ಧರ್ಮವನ್ನು ತ್ಯಾಜ್ಯವೆಂದು ಖಂಡಿಸಿದ್ದನ್ನು ಕೇಳುವುದನ್ನು ನೆನಪು ಮಾಡಿ ಕೊಟ್ಟಿರಬೇಕು. ಇಡಿ ಕಾರ್ಯಕ್ರಮವನ್ನು ಆಕಾಶವಾಣಿಯಿಂದ ಪ್ರಸರಿಸಲಾಗಿದ್ದರೂ ಅವರಲ್ಲಿ ಒಬ್ಬಾತ ಕೂಗಿದನಂತೆ –'ದಯವಿಟ್ಟು ಗಟ್ಟಿಯಾಗಿ ಹೇಳಿರಿ' ಎಂದು. ಆದರೆ ಈಲಿಯಟ್ ೧೯ನೆಯ ಶತಕದ ಕವಿಗಳ ವಿಷಯವಾಗಿ ಆಗ ಖಂಡನಾಭಿಪ್ರಾಯವನ್ನು ಉದ್ಘೋಷಿಸಿದ್ದಿಲ್ಲ, ಹಾಗೆ ಅವರು ಮಾಡುವುದೂ ಸಂಭವವಾಗಿರಲಿಲ್ಲ. ಕಿಪ್ಲಿಂಗನ ತಂತ್ರಶಕ್ತಿಯನ್ನು ಪ್ರಶಂಸಿಸಿ ಬರೆದ ಮುನ್ನುಡಿಯೊಡನೆ ಅವನ ಕವನ ಸಂಗ್ರಹವೊಂದನ್ನು ಈಲಿಯಟ್ ಪ್ರಕಟಿಸಿದ್ದೇನೋ ನಿಜ. ಆದರೆ ಟೆನಿಸನ್, ಮಾಥ್ಯೂ ಅರ್ನಾಲ್ಡ್ ಮತ್ತು ಪ್ರಾಗ್ರಾಫಲೈಟರೂ ಅವಿಲಂಬಿತರಾಗಿಯೇ ಉಳಿದಿದ್ದಾರೆ.

ತಮಗೆ ಆಶ್ಚರ್ಯವಾಯಿತೆಂದು ಈಲಿಯಟ್ ಹೇಳಿದ ಅವರ ಒಂದೆರಡು ಪದಸಂಹತಿಗಳು ಜನಪ್ರಿಯವಾದವು. ಮಿಲ್ಟನ್ ಮತ್ತು ಡ್ರೈಡನ್ನರೊಡನೆ ರೂಢಿಗೆ ಬಂದದ್ದೆಂದು ಅವರು ಬಣ್ಣಿಸಿದ "ಪ್ರತಿಭಾನದ ಪ್ರತ್ಯೇಕೀಕರಣ" ಅವುಗಳಲ್ಲೊಂದು. ೧೭ನೆಯ ಶತಕದ ಉತ್ತರ ಭಾಗದಲ್ಲಿ (ಡಾನ್ ಮತ್ತು ಮಾರ್ವೆಲ್ಲರಲ್ಲಿ ಅವರು ಕಂಡ) ವಿಚಾರ ಹಾಗೂ ಭಾವನೆಗಳ ವಿಲಕ್ಷಣ ಸಂಯೋಗವು ಮುರಿದು ಹೋಯ್ತು.

ಡಾನನಿಗೆ ವಿಚಾರವು ಒಂದು ಅನುಭವವಾಗಿತ್ತು. ಅದು ಅವನ ಪ್ರತಿಭಾನವನ್ನು ಬದಲಾಯಿಸುತ್ತಿತ್ತು. ಒಬ್ಬ ಕವಿಯ ಚಿತ್ತವು ತನ್ನ ಕಾರ್ಯಕ್ಕೆ ಸುಸಜ್ಜಿತವಾದಾಗ ಪದೇ ಪದೇ ಬಿಡಿ ಅನುಭವಗಳನ್ನು ತನ್ನಲ್ಲಿ ಜೀರ್ಣಿಸಿಕೊಳ್ಳುತ್ತ ಹೋಗುತ್ತದೆ. ಸಾಮಾನ್ಯ ಮಾನವನ ಅನುಭವವು ಅಕ್ರಮ, ಛಿನ್ನಭಿನ್ನ, ಅಸ್ತವ್ಯಸ್ತ. ಆತನು ಪ್ರಣಯದಲ್ಲಿ ಬೀಳುತ್ತಾನೆ. ಸ್ಪಿನೋಜನ ಕೃತಿಗಳನ್ನು ಓದುತ್ತಾನೆ ಮತ್ತು ಈ ಎರಡು ಅನುಭವಗಳಲ್ಲಿ ಪರಸ್ಪರ ಸಂಬಂಧ ಇಲ್ಲ ಅಥವಾ ಟೈಪರೈಟರ್ ಶಬ್ದಕ್ಕೂ ಅಡಿಗೆಯ ವಾಸನೆಗೂ ನಡುವೆ ಇರುವಂತೆ ಅಸಾಂಗತ್ಯವಿರುತ್ತದೆ; ಕವಿಯ ಮನದಲ್ಲಿ ಈ ಅನುಭವಗಳು ಯಾವಾಗಲೂ ಹೊಸ ಇಡಿಗಳಾಗುತ್ತ ಹೋಗುತ್ತಿರುತ್ತವೆ.

ಈ ಹೊಸ ಇಡಿಗಳ ನಿರ್ಮಾಣವನ್ನೇ, ಅನುಭವಗಳ ಸಂಬಂಧವನ್ನೇ ಈಲಿಯಟ್ ಎಲಿಜಬೆತ್‌ನ ಹಾಗೂ ಅತಿಭೌತಶಾಸ್ತ್ರೀಯ ಕವಿಗಳಿಂದ ಕಲಿತದ್ದು. ಅವರ ಪದ್ಯಪ್ರತಿಭೆಯು ಅನುಭವ ವಿವೇಕವು ಕೋಲ್‌ರಿಜ್ಜನು ತನ್ನ Biographia Literaria ಎಂಬ ಗ್ರಂಥದ ೧೪ನೆಯ ಅಧ್ಯಾಯದಲ್ಲಿ ಕೊಟ್ಟ ಮಹಾಲಕ್ಷಣವನ್ನೇ ಆಧರಿಸಿದ್ದು. ಆಂಡ್ರೂ ಮಾರ್ವೆಲ್ಲನ ಮೇಲಿನ ಆ ತಮ್ಮ ಪ್ರಬಂಧದಲ್ಲಿ ಅವರು ಈ ಅವತರಣಿಕೆಯನ್ನು ಉದ್ಧರಿಸುತ್ತಾರೆ ಈಲಿಯಟ್ಟರ ವಿಮರ್ಶೆಯ ಈ ಮುಖದಲ್ಲಿ

ಬಾರದ ಕವಿಯೆಂದರೆ ಶೇಕ್ಸ್‌ಪಿಯರ್ ಒಬ್ಬನೇ. "ಹ್ಯಾಮ್ಲೆಟ್ಟ"ನ ಮೇಲಿನ ಪ್ರಬಂಧದಲ್ಲಿ ಶೇಕ್ಸ್‌ಪಿಯರನ ಕಷ್ಟಗಳಿಗಿಂತ ಈಲಿಯಟ್ಟರ ಕಷ್ಟಗಳೇ ಹೆಚ್ಚಾಗಿ ಹೊರಪಡುತ್ತವೆ. ಭಾಗಶಃ ಅದು ಅವರ Sweeny Agonistes ಮೇಲಿನ ವ್ಯಾಖ್ಯೆಯಾದೀತು ಅಷ್ಟೆ.

೧೯೨೦ರ ನಂತರ ಈಲಿಯಟ್ ಅನೇಕ ಪ್ರಬಂಧಗಳನ್ನು ಪ್ರಕಟಿಸಿದರು. ಆದರೆ ಡ್ಯಾಂಟೆಯ ಮೇಲೆ (೧೯೨೭) ಬರೆದ ಚಿಕ್ಕ ಪ್ರಬಂಧವು ಅವರ ವಿಮರ್ಶೆಯ ಬೆಳವಣಿಗೆಯ ಮುಂದಿನ ಘಟ್ಟವನ್ನು ಗುರುತುಮಾಡುತ್ತದೆ. ಅದು ಆಗಲೇ ಬಣ್ಣಿಸಲಾದ ಅವರ ಪದ್ಯಶೈಲಿಯ ಬದಲಾವಣೆಯೊಂದಿಗೆ ಕೂಡಿಕೊಳ್ಳುತ್ತದೆ. ಇದೇ ವೇಳೆಯಲ್ಲಿ ಅವರು ಡ್ಯಾಂಟಿ ಮತ್ತು ಡಾನರನ್ನು ಹೋಲಿಸುವ ಒಂದು ಪ್ರಬಂಧವನ್ನು ಬರೆದರು. ಅದರಲ್ಲಿ ಡ್ಯಾಂಟೆಯ ಕೃತಿಗಳಿಗೆ ಬಹಳ ಲಾಭವಾಯ್ತು. ಅಂದಿನಿಂದ ಈಲಿಯಟ್ಟರ ಬರವಣಿಗೆಯಲ್ಲಿ ಡ್ಯಾಂಟೆಯ ಪ್ರಭಾವವು ಒಂದೇ ಒಂದಾಗಿ ಎದ್ದು ಕಾಣಿಸುವಂತಾಯ್ತು. ಅವರ ಹಿಂದಿದ್ದ ೧೭ನೆ ಶತಕದಲ್ಲಿಯ ಆಸಕ್ತಿಯಂತೆ ಮಧ್ಯಯುಗೀನ ಸಾಹಿತ್ಯದಲ್ಲಿಯ ಅವರ ಆಸಕ್ತಿಯು ಆ ಕಾಲದ ಸಾಮಾನ್ಯಾಭಿರುಚಿಯತ್ತ ಅವರನ್ನೊಯ್ದಿತು. ಬೆಟ್ರಿಸ್ ಪಾತ್ರದ ಮೇಲೆ ಚಾರಲ್ಸ್ ವಿಲಿಯಮ್ಸ್‌ನ ಬರಹ ಮುಂತಾದ ಜನಪ್ರಿಯ ಪ್ರಬಂಧಗಳ ಅಭ್ಯಾಸ ಮತ್ತು ಮಧ್ಯಯುಗದ ಉತ್ತರಕಾಲದ ದೃಷ್ಟಿಯಿಂದ ಪುನರುಜ್ಜೀವನ ಸಾಹಿತ್ಯ ಓದುವುದರಲ್ಲಿ ಬೆಳೆದ ಪ್ರವೃತ್ತಿ ಇವು ಈಲಿಯಟ್ಟರಲ್ಲಿ ಅಭಿರುಚಿ ಹಾಗೂ ಮೆಚ್ಚಿಗೆಗಳ ಮೇಲೆ ಅನ್ಯೂನ ಶಕ್ತಿ ಉಳಿಯುವಂತೆ ಮಾಡಿದವು. ತಾವೇ ಸ್ವತಃ ವಿಮರ್ಶೆ ಬರೆಯುವುದನ್ನವರು ಬಿಡುತ್ತಾಬಂದಿದ್ದಾರೆ; ಬಹುಶಃ ಅವರ ಬೆಳವಣಿಗೆಯ ಮುಖ್ಯಾವಧಿ ಮುಗಿಯುತ್ತ ಬಂದೊಡನೆ ಇಂಥ ಕೆಲಸ ಮಾಡುವ ಪ್ರವೃತ್ತಿಯೂ ನಿಂತು ಹೋಯಿತೆಂದು ತೋರುತ್ತದೆ. ಅವರ ವಿಮರ್ಶೆಯೀಗ ಅವರ ನಿರ್ಮಾಪಕ ಕೃತಿಗಳಲ್ಲಿ ಅಧ್ಯಾಹೃತವಾಗಿ, ಅವ್ಯಕ್ತವಾಗಿ ಕಂಡುಬರುವುದಲ್ಲದೆ ಅದನ್ನು ಪ್ರತ್ಯೇಕಿಸಿ ತೆಗೆಯುವಂತಿಲ್ಲ. ಉದಾಹರಣೆಗಾಗಿ 'ಭಾಗಚತುಷ್ಟಯ'ದಲ್ಲಿ ಅರ್ಥಗರ್ಭಿತವಾದ ಕೆಲವಿಚಾರವಿರುವುದನ್ನು ತೆಗೆದುಕೊಳ್ಳಬಹುದು.

## VI

ಈಲಿಯಟ್ಟರ ಸಾಹಿತ್ಯಿಕ ಪ್ರಭಾವವು ಕೇವಲ ಅವರ ಪದ್ಯ ಹಾಗೂ ವಿಮರ್ಶಾಲೇಖಗಳಿಗೆ ಪರಿಸೀಮಿತವಾಗಿಲ್ಲ. The Criterion 'ನಿಕಷ' ಎಂಬ ಹೆಸರಿನ ತ್ರೈಮಾಸಿಕವನ್ನು ಅವರು ಹೊರಡಿಸಿದ ೧೫ ವರ್ಷಗಳ ಅವಧಿಯಲ್ಲಿ ಅದು ಆ ಕಾಲದ ಅತಿ ಪ್ರಭಾವಿ ಸಾಹಿತ್ಯಿಕ ಪ್ರಕಟನೆಗಳಲ್ಲಿ ಒಂದಾಗಿತ್ತು; ಮತ್ತು ತಮ್ಮ ಸಂಪಾದಕೀಯಗಳಲ್ಲಿ ಈಲಿಯಟ್ ಹರಿತವೂ ಬಲವರ್ಧಕವೂ ಆದ ತಮ್ಮ ಸಾಮಯಿಕ ಬರಹಗಳಲ್ಲಿ ಅತ್ಯುತ್ತಮವೆನಿಸುವ ಕೆಲಲೇಖಗಳನ್ನು ಬರೆದರು. ಅವರೊಬ್ಬ ಡೈರೆಕ್ಟರರಾಗಿದ್ದ ಫೇಬರ್ ಮತ್ತು ಫೇಬರ್ (ಮೊದಲು ಫೇಬರ್ ಮತ್ತು ಗ್ವೈರ್ ಎಂದಿತ್ತು) ಕಂಪೆನಿಯು

ಆಧುನಿಕ ಕವಿಗಳ ಕೃತಿಯನ್ನು ಪ್ರಕಟಿಸುವ ವೈಶಿಷ್ಟ್ಯ ತಾಳಿದೆ; ಅನೇಕ ತರುಣ ತಲೆಮಾರಿನ ಕವಿಗಳ ಕೃತಿಗಳನ್ನದು ಪ್ರಕಾಶಿಸಿದೆ; ತಕ್ಕ ಸಂದರ್ಭಗಳಲ್ಲಿ ಆಂಗ್ಲಸಾಹಿತ್ಯದ ಮೇಲೆ ಅಧಿಕಾರವಾಣಿಯಿಂದ ಮಾತಾಡಬಲ್ಲ ಒಬ್ಬರೆಂದರೀಗ ಈಲಿಯಟ್. ವೈಭವಪೂರ್ಣ ನಿರಂತಕುಶಪ್ರಭು ಸ್ಯಾಮ್ಯುಯಲ್ ಜಾನ್ಸನ್ನನ ಆಳಿಕೆಯ ಅನಂತರ ತತ್ಸದೃಶ ಸ್ಥಾನವನ್ನು ಆಕ್ರಮಿಸಿದವರು ಯಾರೂ ಇಲ್ಲ. ಕೋಲ್‌ರಿಜ್ಜನ ಕೃತಿ ಬಹಳ ಅನನುಸ್ಯೂತ, ಅಸಮಗ್ರ, ಹರಡಿ ಹೋದ ತರಹದ್ದು; ಆರ್ನಾಲ್ಡನ ಸ್ಥಾನವು ಅನಾಹೂತವಾಗಿರಲಿಲ್ಲ, ಅಪ್ರತಿಸ್ಪರ್ಧಿತವಾಗಿರಲಿಲ್ಲ.

ಈಲಿಯಟ್ಟರ ಈ ಅಧಿಕಾರ ಸ್ಥಾನಕ್ಕೆ ಅವರ ಕಾರ್ಯದ ಸದುವಾಯ–ಸಾಂಗತ್ಯಗಳೇ ಬಹುಮಟ್ಟಿಗೆ ಕಾರಣ. ಅದು ಬಹಳ ವಿಶಿಷ್ಟಾರ್ಥದಲ್ಲಿ ಒಂದು (ರಚನಾಪೂರ್ತಿ) ಪರಿಪೂರ್ಣ ರಚನೆ ಮತ್ತು ಅವರ ಕೊನೆಯ ಕೃತಿಯಲ್ಲಿ ಇನ್ನೆಲ್ಲೂ ಕಂಡು ಬರದಷ್ಟು ಬಲಿಷ್ಠವಾಗಿ ಐಕ್ಯ ಹಾಗೂ ಸ್ಥೈರ್ಯಗಳ ಗ್ರಹಿಕೆ ನಮಗುಂಟಾಗುತ್ತದೆ; ಅವರ ಕೀರ್ತಿಯಾದರೋ ಚಿಕ್ಕಪುಟ್ಟ ಏರಿಳಿತಗಳಿಗೊಳಗಾದದ್ದು. ಅವರಿಗಿಂತ ಕಿರುಬರಹಗಾರರಲ್ಲಿ ವಿಶೇಷತಃ ಅವರಿಂದಲೇ ಕಲಿತುಕೊಂಡುಹೋದವರು ಪದೇ ಪದೇ ಅವರ ಕೃತಿಗಳನ್ನು ನಿಂದಿಸುವುದರಲ್ಲೂ ಗೇಲಿ ಮಾಡುವುದರಲ್ಲೂ ಕೆಲಮಟ್ಟಿನ ಸಂತೋಷ ಪಡೆಯುತ್ತಾರೆ. ಅವರ ವಿಲಕ್ಷಣ (ಅಮೇರಿಕನ್ನೆಂದರೂ ಸರಿಯೆ) ಮಾದರಿಯ ವ್ಯಂಗ್ಯ ಅಥವಾ ವಿಡಂಬನೆ ಇಲ್ಲವೆ ವಿಪರೀತ ಧ್ವನಿಯನ್ನು ಎಷ್ಟೋ ವೇಳೆ ಜನ ತಪ್ಪು ತಿಳಿದುಕೊಳ್ಳುತ್ತವೆ. ಅವರ ಹಾಸ್ಯಭಾವವನ್ನಾದರೂ ಯಾವಾಗಲೂ ಅರ್ಥಮಾಡಿಕೊಳ್ಳಲಾಗುತ್ತಿಲ್ಲ ಮತ್ತು ಸಾಹಿತ್ಯಿಕ ಚರ್ಚೆಗಳನ್ನೇ ಉಸಿರನ್ನಾಗಿ ತೆಗೆದುಕೊಂಡು ಬದುಕುವವರಿಗೆ ಹೊಗಳಿಕೆ ತೆಗಳಿಕೆಗಳ ಹುಚ್ಚಾಟಗಳಿಂದ ಅವರು ಅನಾಕೃಷ್ಟರಾಗಿವುದು ಸುಸ್ತು ಉಂಟುಮಾಡಿ ಬಿಟ್ಟಿದೆ. ಅಕಾಡಮಿಗಳ, ಸಾಹಿತ್ಯಿಕ ಸಂಘಗಳ ಅಥವಾ ಬೌದ್ಧಿಕ ಸದುದ್ದೇಶಿಗಳ ಆವರಣ ಅವರಿಗಿಲ್ಲ; ಅವರ ಕೆಲ ಅಭಿರುಚಿಗಳು ಅಸಾಹಿತ್ಯಿಕ ಕೂಡಾ ಆಗಿವೆ. ಅವರು ಮಕ್ಕಳಿಗಾಗಿ ಬೆಕ್ಕುಗಳ ಮೇಲೆ ಅತಿ ಉತ್ಸಾಹಜನಕವಾದ ಹಾಸ್ಯಪದಗಳ ಪುಸ್ತಕವನ್ನು ಬರೆದಿದ್ದಾರೆ. ಬೆಕ್ಕುಗಳ ನೈಸರ್ಗಿಕ ಸ್ವಚ್ಛಂದ ವರ್ತನೆ, ಬೌದ್ಧಿಕ ಮೇಲ್ಮೆ ಹಾಗೂ ಬಲಿಷ್ಠವಾದ ವ್ಯಾಪಾರಿ ಪ್ರವೃತ್ತಿಗಳನ್ನು ಮೆಚ್ಚುವವರೆಲ್ಲರಿಗೂ ಹೃದಯಂಗಮವಾಗುವಂತೆ ಅದನ್ನು ಬರೆಯಲಾಗಿದೆ. ಮಿಸ್ಟರ್ ಮೆಫಿಸ್ಟೊಫಿಲೀಸೆಂಬ ಐಂದ್ರಜಾಲಿಕ ಅವತಾರದ ಹಿನ್ನೆಲೆಯಲ್ಲಿರುವ ಮನುಷ್ಯನಾದ "ಮುದಿ ಪಾಸ್ಸಂ" ಮತ್ತು ರಹಸ್ಯಮಾರ್ಜಾರವಾದ ಮೆಕೆವಿಲಿಗಳ ಸೂಚ್ಯವರ್ಣನೆಯೇ ಬಹುಶಃ ಈ ಕೈಗೆಟುಕದ, ಅತಿ ಬುದ್ಧಿವಂತನಾದ ಮತ್ತು ಅಪೂರ್ವ ನಿರೀಕ್ಷಣೀಯನೆನಿಸಿದ ಬರಹಗಾರರ ಅತ್ಯುತ್ತಮ ಚಿತ್ರವಾಗಿದೆ.

ಈ ಗ್ರಂಥಕ್ಕೆ ಭೂಷಣಪ್ರಾಯವಾಗಿ
ಮುನ್ನುಡಿ ಬರೆದುಕೊಟ್ಟು ಹರಸಿದ
ಜ್ಞಾನವೃದ್ಧ ಶ್ರೀ ಡಿ.ವಿ.ಜಿ. ಅವರಿಗೆ
ಅನಂತ ಕೃತಜ್ಞತೆಗಳು

– ಸಂಪಾದಕರು ಮತ್ತು ಅನುವಾದಕರು

# ಮುಮ್ಮಾತು

೧೯೦೮ರಲ್ಲಿ ಇಂದಿಗೆ ೫೩ ವರ್ಷಗಳ ಹಿಂದೆ – ಮೈಸೂರು ರಾಜ್ಯದಲ್ಲಿ ವೃತ್ತಪತ್ರಿಕೆಗಳ ವಾಗ್ಬಂಧನದ ಶಾಸನ ನಿರ್ಮಾಣವಾಯಿತು. ಅದಕ್ಕೆ ತಮ್ಮ ವಿರೋಧವನ್ನು ಪ್ರದರ್ಶಿಸಲೆಂದು ಆಗ ಬೆಂಗಳೂರು–ಮೈಸೂರುಗಳಲ್ಲಿ ಪ್ರಕಟವಾಗುತ್ತಿದ್ದ ಬಹು ಸಂಖ್ಯೆಯ ಪತ್ರಿಕೆಗಳು ತಮ್ಮ ಪ್ರಕಟನೆಯನ್ನು ನಿಲ್ಲಿಸಿದವು. ಹಾಗೆ ನಿಂತುಹೋದ ಪತ್ರಿಕೆಗಳಲ್ಲಿ ಇಂಗ್ಲೀಷಿನ 'ಮೈಸೂರ್ ಸ್ಟಾಂಡರ್ಡ್' (Mysore Standard) ಎಂಬುದು ಒಂದು, ಕನ್ನಡದ 'ನಡೆಗನ್ನಡಿ' ಎಂಬುದು ಒಂದು. ಈ ಎರಡು ಪತ್ರಿಕೆಗಳ ಒಡೆಯರೂ ಸಂಪಾದಕರೂ ಆಗಿದ್ದ ಶ್ರೀಮಾನ್ ಎಂ.ಶ್ರೀನಿವಾಸ ಅಯ್ಯಂಗಾರ್ಯರವರು, ಹಾಗೆ ತಮ್ಮ ಮುದ್ರಣಾಲಯಕ್ಕೆ ಕೆಲಸವಿಲ್ಲದೆ ಹೋಗಿ, ಅದು ಬಿಡುವಾಗಿದ್ದಾಗ, ಅದರಿಂದ ಕೆಲವು ಜನೋದ್ಬೋಧಕ ಗ್ರಂಥಗಳನ್ನು ಅಚ್ಚುಮಾಡಿಸಿ ಪ್ರಚುರಗೊಳಿಸಬೇಕೆಂದು ಆಲೋಚಿಸಿದರು. ಅದಕ್ಕಾಗಿ ಅವರು ಆರಿಸಿಕೊಂಡ ಗ್ರಂಥಗಳಲ್ಲಿ ಜಾನ್ ಸ್ಟೂಅರ್ಟ್ ಮಿಲ್ (John Stuart Mill) ಎಂಬ ಆಂಗ್ಲೇಯ ತತ್ತ್ವವಿಚಾರಿಯ "ಸ್ವಾತಂತ್ರ್ಯವನ್ನು ಕುರಿತು"– (On Liberty) ಎಂಬ ಉಪನ್ಯಾಸ ಒಂದು.

ಶ್ರೀ ಶ್ರೀನಿವಾಸಯ್ಯಂಗಾರ್ಯರಿಗೆ ನನ್ನ ವಿಷಯದಲ್ಲಿ ತುಂಬ ಪ್ರೀತಿ ಮಮತೆಗಳಿದ್ದವು. On Liberty–"ಸ್ವಾತಂತ್ರ್ಯವನ್ನು ಕುರಿತು"– ಗ್ರಂಥದ (ಇಂಗ್ಲೀಷ್ ಮೂಲದ) ಮುದ್ರಣದ ಕೆಲಸವನ್ನು ನನಗೆ ಒಪ್ಪಿಸಿದರು. ನಾನು ಅಚ್ಚಿನ ಕರಡು ಪ್ರತಿಗಳನ್ನು (Proofs) ಓದಿ ತಿದ್ದಬೇಕಾಗಿ ಬಂದದ್ದರಿಂದ ಗ್ರಂಥವನ್ನು ಪುನಃ ಪುನಃ ನೋಡಿ ವಿಷಯವನ್ನು ಮನನಮಾಡುವ ಅವಕಾಶವಾಯಿತು. ನನಗೆ ಆ ಗಹನವಾದ ಗ್ರಂಥದಲ್ಲಿ ತೋರಿದ ಕ್ಲಿಷ್ಟಾಂಶಗಳನ್ನು ಶ್ರೀನಿವಾಸಯ್ಯಂಗಾರ್ಯರವರಲ್ಲಿ ಅರಿಕೆಮಾಡಿ ಚರ್ಚಿಸುವ ಸೌಕರ್ಯವನ್ನೂ ಅವರು ನನಗೆ ಕೊಟ್ಟಿದ್ದರು. ಗ್ರಂಥದ ಮುದ್ರಣವಾದ ಮೇಲೆ ಅದಕ್ಕೆ ಒಂದು ಸಣ್ಣ ಪೀಠಿಕೆಯನ್ನು ಬರೆಯಬೇಕೆಂದೂ ಅವರು ನನ್ನನ್ನು ಪ್ರೇರೇಪಿಸಿ, ನನ್ನ ಬರಹವನ್ನು ಪರಿಷ್ಕಾರಪಡಿಸಿದರು. ಮಿಲ್ ತಾತ್ತ್ವಿಕನ ವಿಷಯದಲ್ಲಿ ನನ್ನ ಆದರ ಗೌರವಗಳು ಮೊದಲಾದದ್ದು ಹೀಗೆ.

ದಿವಂಗತರಾದ ಶ್ರೀಮಾನ್ ಎಂ.ಎಸ್.ಪುಟ್ಟಣ್ಣನವರು ೧೯೧೦ರ ಸುಮಾರಿನಲ್ಲಿ ಒಂದುದಿನ ತಮ್ಮ ಕುಣಿಗಲ್ ರಾಮಶಾಸ್ತ್ರಿಗಳ ಚರಿತ್ರೆ ಎಂಬ ಗ್ರಂಥವನ್ನು ಮುದ್ರಣಮಾಡಿಸುವ ಏರ್ಪಾಡಿಗಾಗಿ ಆಗ ಬೆಂಗಳೂರಿನಲ್ಲಿದ್ದ ಜೆ.ಎಲ್.ಎನ್.ಪ್ರೆಸ್ ಎಂಬ ನವರತ್ನ ಕುಟುಂಬದವರ ಕಾರ್ಖಾನೆಗೆ ಬಂದರು. ಕಾರ್ಖಾನೆಯ ಯಜಮಾನರು ತಮ್ಮ ಅಚ್ಚುಗಾರಿಕೆಯ ಮಾದರಿಯನ್ನು ತೋರಿಸುವುದಕ್ಕಾಗಿ ಅಲ್ಲಿ

ಆಗ ಅಚ್ಚಾಗುತ್ತಿದ್ದ (ಬಹುಶಃ "ಸುಮತಿ" ಎಂಬ) ವಾರಪತ್ರಿಕೆಯ ಒಂದು ಪ್ರತಿಯನ್ನು ಶ್ರೀ ಪುಟ್ಟಣ್ಣನವರ ಕೈಗೆ ಕೊಟ್ಟರು. ಅವರು ಅದನ್ನು ತೆಗೆದುಕೊಂಡುಹೋಗಿ ಮೂರು ನಾಲ್ಕು ದಿನಗಳ ಬಳಿಕ ಆ ಪ್ರೆಸ್ಸಿಗೆ ಬಂದು, ಆ ಪತ್ರಿಕೆಯನ್ನು ನಡಸುವವರು ಯಾರು?– ಎಂದು ವಿಚಾರಿಸಿದರು. ಕಾರ್ಖಾನೆಯವರು ನನ್ನ ಹೆಸರನ್ನು ಹೇಳಿದರು. ನಾನು ಆಗ ಆ ಜಾಗದಲ್ಲಿ ಇರಲಿಲ್ಲ. ಪುಟ್ಟಣ್ಣನವರು ಯಾವಾಗ ನನ್ನನ್ನು ಕಾಣಬಹುದೆಂದು ವಿಚಾರಿಸಿಕೊಂಡು ಮರಳಿ ಬರುವುದಾಗಿ ಹೇಳಿ ಹೊರಟುಹೋದರು. ಮತ್ತೆ ಮೂರು–ನಾಲ್ಕು ದಿನಗಳಾದ ಮೇಲೆ ಅವರು ಅಲ್ಲಿಗೆ ಬಂದಾಗ ನಾನು ಅಲ್ಲಿದ್ದೆ. ಆಗ ನಡೆದ ಸಂಭಾಷಣೆ:–

ಶ್ರೀ ಪು:– ಈ ಪತ್ರಿಕೆಯನ್ನು ನಡಸುವವರು ನೀವಂತೆ?

ನಾನು :– ಹೌದು.

ಶ್ರೀ ಪು:– ಇದರಲ್ಲಿ ಮಿಲ್ ತಾತ್ವಿಕನ 'ಲಿಬರ್ಟಿ' ಎಂಬ ಗ್ರಂಥದ ತರ್ಜುಮೆ ಇದೆಯಲ್ಲಾ, ಇದು ನೀವು ಮಾಡಿದ್ದೊ?

ನಾನು :– ಪ್ರಯತ್ನ ನನ್ನದೇ.

ಶ್ರೀ ಪು :– ಪತ್ರಿಕೆಯಲ್ಲಿ ಮುಪ್ಪಾಗಪಾಲೆಲ್ಲಾ ನಿಮ್ಮದೇ ಅಂತ ಕಾಣುತ್ತದೆ.

ನಾನು :– ಕೊಂಚ ಹೆಚ್ಚು ಕಡಮೆ ಹಾಗಾಗಿದೆ.

ಶ್ರೀ ಪು :– ಕಷ್ಟದ ಪ್ರಯತ್ನ ಮಾಡಿದ್ದೀರಿ. ಮಾಡಬೇಕಾದದ್ದೇ. ಆದರೆ ತುಂಬ ಕಷ್ಟ.

ಇಷ್ಟು ಹೇಳಿ, ಅವರು ಬೇರೆ ವಿಷಯವನ್ನೆತ್ತಿ ಮುದ್ರಣಕರ್ತರೊಡನೆ ಮಾತನಾಡಿ ಹೊರಟುಹೋದರು. ಅವರು "ಕಷ್ಟ" ಎಂದು ಹೇಳಿದ್ದು ಯಾವುದನ್ನು ಕುರಿತು? ಗ್ರಂಥವಿಷಯವನ್ನೆ? ಭಾಷಾಂತರಕಾರ್ಯವನ್ನೆ? ಅಂಥ ಪತ್ರಿಕೆ ನಡೆಸುವುದನ್ನೆ? ಓದುಗರನ್ನು ಹುಡುಕುವುದನ್ನೆ? ಈ ಪ್ರಶ್ನೆಗಳನ್ನು ಕೇಳುವಷ್ಟು ಧೈರ್ಯ ನನಗೆ ಆಗ ಬರಲಿಲ್ಲ.

ಶ್ರೀಮಾನ್ ಎಂ.ಎಸ್.ಪುಟ್ಟಣ್ಣನವರು ಪ್ರಸಿದ್ಧರಾಗಿದ್ದವರು. ಅವರು ತಮ್ಮ ಗ್ರಂಥಗಳಿಂದಲೂ ಪ್ರಸಿದ್ಧರು; ನಿಃಸ್ಪೃಹತೆ ಪ್ರಾಮಾಣಿಕತೆ ನಿರ್ಭಯತೆಗಳಿಂದಲೂ ಪ್ರಸಿದ್ಧರು. ನನಗಿಂತ ತುಂಬ ಹಿರಿಯರು. ಎಲ್ಲ ವಿಧಗಳಲ್ಲಿಯೂ ನನಗೆ ಪೂಜ್ಯರಾಗಿದ್ದವರು. ಅಂಥವರನ್ನು ನಾನು ಪ್ರಶ್ನೆಹಾಕಿ ಆಯಾಸಪಡಿಸತಕ್ಕದ್ದಲ್ಲವೆಂದೂ, ಹೇಳಿದಷ್ಟನ್ನು ಸ್ವೀಕರಿಸಬೇಕೆಂದೂ, ಸಂದೇಹ ಬಂದರೆ ಉತ್ತರೋತ್ತರ ಪರಿಚಯ ಬೆಳೆದಾಗ ಸಾವಕಾಶವಾಗಿ ಬಿನ್ನಯಿಸಿಕೊಳ್ಳಬೇಕಾದದ್ದೆಂದೂ ಭಾವಿಸಿದೆ. ನನ್ನ ಮನಸ್ಸು ಆಗ ಅವರೊಡನೆ ಚರ್ಚೆ ತೆಗೆಯಲು ಒಡಂಬಡಲಿಲ್ಲ.

ಆ ಮೇಲೆ ಅವರ ಮಾತಿನ ಅರ್ಥ ನನಗೆ ತಾನಾಗಿ ಅನುಭವವಾಗುತ್ತ ಬಂತು. ಮೇಲೆ ಸೂಚಿಸಿರುವ ಎಲ್ಲ ಕಷ್ಟಗಳೂ ಆ ಪ್ರಯತ್ನದಲ್ಲಿದ್ದವು. ಈಗ ಶ್ರೀಮಾನ್ ಬಿ.ಎಚ್.ಶ್ರೀಧರ ಅವರೂ, ಶ್ರೀಮಾನ್ ಎನ್.ರಾಜಗೋಪಾಲರಾವ್ ಅವರೂ ಜೊತೆಗೂಡಿ ಮಾಡಿರುವ ಪ್ರಯತ್ನದ ವಿಷಯದಲ್ಲಿ ನನಗಿರುವ ಸಹಾನುಭೂತಿ ಎಂಥಾದ್ದು ಎಂಬುದನ್ನು ತೋರಿಸಲು ಮೇಲಣ ಎರಡು ವೈಯಕ್ತಿಕ ಸಂಗತಿಗಳನ್ನು ಉದಾಹರಿಸಿದ್ದೇನೆ. ಇನ್ನು ಗ್ರಂಥದ ಪ್ರಾಶಸ್ತ್ಯವನ್ನು ಕುರಿತು ಒಂದೆರಡು ಮಾತು ಅರಿಕೆ ಮಾಡಬಹುದೆಂದು ತೋರುತ್ತದೆ.

ಮನುಷ್ಯ ಸಮಾಜದ ಜೀವನವು ಅದರ ಸಂಸ್ಥೆ ಸಂಪ್ರದಾಯಗಳ ಮೂಲಕ ನಡೆಯುತ್ತದೆ. ಆ ಸಂಸ್ಥೆ ಸಂಪ್ರದಾಯಗಳಾದರೋ, ಜನದ ನಂಬಿಕೆಗಳನ್ನೂ ಅಭಿಪ್ರಾಯಗಳನ್ನೂ ಅವಲಂಬಿಸಿಕೊಂಡಿರುತ್ತವೆ. ಕಾಲ ಕ್ರಮದಲ್ಲಿ ಹೊಸ ಹೊಸ ಅಭಿಪ್ರಾಯಗಳು ಸಮಾಜದಲ್ಲಿ ಸ್ವಾಭಾವಿಕವಾಗಿ ತಲೆದೋರುತ್ತವೆ. ಹೀಗೆ ನೂತನ ಅಭಿಪ್ರಾಯಗಳ ಉದಯಕ್ಕೆ ಕಾರಣಗಳು ವಿಶೇಷವಾಗಿ ಮೂರು ಬಗೆಯಾಗಿರುತ್ತವೆ. (೧) ಸರ್ವದಾ ಕಾರ್ಯಮಾಡುತ್ತಿರುವುದೇ ಬುದ್ಧಿಯ ಸ್ವಭಾವ. ಬುದ್ಧಿಯು ಜಡವಸ್ತುವಿನಂತೆ ನಿಶ್ಚೇಷ್ಟವಾಗಿ ಕುಳಿತಿರಲಾರದು. ಅದು ಕ್ಷಣ ಕ್ಷಣವೂ ಏನನ್ನಾದರೊಂದನ್ನು ಹುಡುಕಿಕೊಂಡು, ಅದರ ಮೇಲೆ ಕೆಲಸ ಮಾಡುತ್ತಲೇ ಇರಬೇಕು. ಹೀಗೆ ಅನ್ಯಾಪೇಕ್ಷೆ ಇಲ್ಲದಿದ್ದಾಗಲೂ ಸ್ವತಃ ಪ್ರವೃತ್ತಿಯಿಂದಲೇ ಬುದ್ಧಿಯು ಕಾರ್ಯ ಮಾಡುತ್ತ, ಹೊಸ ಹೊಸ ಭಾವನೆಗಳನ್ನೂ ಅಭಿಪ್ರಾಯಗಳನ್ನೂ ಉತ್ಪತ್ತಿ ಮಾಡಬಹುದು. (೨) ಬುದ್ಧಿಯು ಕೆಲಸಮಾಡಲು ಸಾಮಗ್ರಿಗಾಗಿ ದೂರ ಹುಡುಕಿಕೊಂಡು ಹೋಗಬೇಕಾದದ್ದೂ ಇಲ್ಲ. ಸಮಾಜ ಜೀವನದಲ್ಲಿ ವ್ಯಕ್ತಿಗೂ ವ್ಯಕ್ತಿಗೂ ಘರ್ಷಣೆಗಳು ಸ್ವಾಭಾವಿಕವಾಗಿಯೇ ಉಂಟಾಗುತ್ತವೆ. ಇದರಿಂದ ಹೊಸ ಪ್ರಶ್ನೆಗಳು ಉದ್ಭವಿಸುತ್ತವೆ. ಆಗ ಹೊಸ ಆಲೋಚನೆಗಳು ಅವಶ್ಯವಾಗುತ್ತವೆ. ಅದರಂತೆ ಹಳೆಯ ಸಂಸ್ಥೆಗಳನ್ನೂ ಹಳೆಯ ಸಂಪ್ರದಾಯಗಳನ್ನೂ ಕೊಂಚವಾಗಿಯೋ ಹೆಚ್ಚಾಗಿಯೋ ಬದಲಾಯಿಸಬೇಕಾಗುತ್ತದೆ. ಹೀಗೂ ನೂತನ ಅಭಿಪ್ರಾಯಗಳು ಉತ್ಪನ್ನವಾಗುತ್ತವೆ. (೩) ಒಂದಾನೊಂದು ಸಮಾಜದ ಒಳಜೀವನದ ಸಂದರ್ಭ ಹೀಗಿರುವಲ್ಲಿ, ಅದರ ಹೊರಗಣ ವ್ಯತ್ಯಾಸಗಳೂ ಆ ಸಂದರ್ಭವನ್ನು ಮತ್ತಷ್ಟು ಹೆಚ್ಚು ಮಾಡುತ್ತವೆ. ಒಂದು ದೇಶಕ್ಕೂ ಮತ್ತೊಂದು ದೇಶಕ್ಕೂ ಸಂಪರ್ಕ ಉಂಟಾದಾಗ ಹೊಸ ಹೊಸ ಪದ್ಧತಿಗಳೂ ಹೊಸ ಹೊಸ "ಫ್ಯಾಷನ್ನು"ಗಳೂ ಎಲ್ಲೆಲ್ಲಿಂದಲೋ ನಮ್ಮ ಸಮಾಜದೊಳಕ್ಕೆ ನುಗ್ಗಿಬರುತ್ತವೆ. ಈ ರೀತಿ ನಮ್ಮ ಹಳೆಯ ಸಂಪ್ರದಾಯಗಳೂ ಬದಲಾವಣೆ ಹೊಂದುತ್ತವೆ. ಈಗ ಇಂಡಿಯ ದೇಶದಲ್ಲಿ ಹಾಗೆ ಎರಡು ಮೂರು ಬೇರೆ ಬೇರೆ ಜಾತಿಯ ಸಂಸ್ಕೃತಿ ಸಂಪ್ರದಾಯಗಳು ಸಂಘರ್ಷಣೆ ಮಾಡಿಕೊಂಡು ಹೋರಾಟ ನಡೆಸುತ್ತಿರುವುದು ಪ್ರತ್ಯಕ್ಷವಾಗಿದೆ. ಇದರಿಂದಲೂ ನಮ್ಮಲ್ಲಿ ಹೊಸ ಹೊಸ ಅಭಿಪ್ರಾಯಗಳೂ ಹೊಸ ಹೊಸ ಭಾವನೆಗಳೂ ಹುಟ್ಟಿ ಹರಡುತ್ತವೆ.

ಹೀಗೆ ಮನುಷ್ಯವ್ಯಕ್ತಿಯ ಸಹಜವಾದ ಬುದ್ಧಿವಿಕಾಸದ ಕಾರಣದಿಂದಲೂ, ಸಮಾಜ ಜೀವನದ ಅಂತರ್ವ್ಯವಹಾರದ ಪ್ರೇರಣೆಯಿಂದಲೂ, ದೇಶವಿದೇಶಗಳ ಸಂಪರ್ಕ ಪ್ರಭಾವದಿಂದಲೂ ನವ ನವೀನವಾದ ಅಭಿಪ್ರಾಯಗಳೂ ಆಲೋಚನೆಗಳೂ ಆಸೆಗಳೂ ಸಂಕಲ್ಪಗಳೂ ಆಗ್ಗಿಂದಾಗ್ಗೆ ತೋರಿಕೊಳ್ಳುವುದು ಅನಿವಾರ್ಯವಾಗಿದೆ. ಹೀಗೆ ಅನಿವಾರ್ಯವಾಗಿರುವ ಬುದ್ಧಿಪರಿಚಲನೆಯಲ್ಲಿ ಒಂದಾನೊಂದು ನೂತನ ಭಾವನೆ ಯಾರೊಬ್ಬನ ಮುಖಾಂತರವಾಗಿಯೋ ವ್ಯಕ್ತಪಟ್ಟಾಗ ಆ ಹೊಸ ಭಾವನೆಯನ್ನು ಆ ಹಳೆಯ ಸಮಾಜವು ಆ ತತ್‌ಕ್ಷಣವೇ ಅಂಗೀಕರಿಸಲಾರದು. ಹೊಸ ಅಭಿಪ್ರಾಯ ಅಸಂಗತವಾದದ್ದು, ದೋಷವುಳ್ಳದ್ದು, ಸಮಾಜಕ್ಕೆ ಭಂಗಕಾರಕವಾದದ್ದು ಎಂಬ ಆಶಂಕೆ ಬಹು ಮಂದಿಗೆ ಸ್ವಾಭಾವಿಕವಾಗಿ ತೋರುತ್ತದೆ. ಅಂಥವರು ನೂತನಾಭಿಪ್ರಾಯವಾದಿಯನ್ನು ಪ್ರತಿಭಟಿಸಿ ನಿಂತು, ಅವನ ಬಾಯಿ ಮುಚ್ಚಿಸಬೇಕೆಂದು ಹೊರಡುತ್ತಾರೆ. ರೂಢಿಗೆ ಬಾರದ ನವೀನ ಅಭಿಪ್ರಾಯದಲ್ಲಿ ಅಪಾಯ ಸಂಭವ ಅಷ್ಟೋ ಇಷ್ಟೋ ಇರುತ್ತದೆ. ಆದುದ್ದರಿಂದ ನೂತನಾಭಿಪ್ರಾಯ ವಿರೋಧಿಗಳನ್ನು ದುರುದ್ದೇಶವುಳ್ಳವರೆಂದು ಯಾರೂ ಹೇಳಲಾಗದು. ವಾದಿಯಲ್ಲಿ ಹೇಗೋ ಪ್ರತಿವಾದಿಯಲ್ಲೂ ಹಾಗೆಯೇ ಮೂಲಭೂತವಾಗಿರುವ ಕಾರಣವು ಸಮಾಜ ಹಿತಚಿಂತನೆಯೇ. ಉದ್ದೇಶ ಇಬ್ಬರದೂ ಒಂದೇ; ಅಭಿಪ್ರಾಯ ಮಾತ್ರ ಬೇರೆ ಬೇರೆ. ಹೀಗೆ ನೂತನ ಬುದ್ಧಿಕಾರ್ಯಕ್ಕೂ ಪ್ರಾಚೀನ ಬುದ್ಧಿ ರೂಢಿಗೂ ವಿರೋಧವೆದ್ದಾಗ ಅದನ್ನು ತೀರ್ಮಾನಿಸುವ ಬಗೆ ಹೇಗೆ? ಅದರ ತೀರ್ಮಾನ ಮನುಷ್ಯಬುದ್ಧಿಗೆ ಎಷ್ಟು ದೂರ ಸಾಧ್ಯವೋ ಅಷ್ಟುಮಟ್ಟಿಗಾದರೂ ಅದು ಬಗೆ ಹರಿಯಬೇಕಾದರೆ ಅದಕ್ಕಿರುವ ಸಾಧನ ಒಂದೇ; ಅದು ಚರ್ಚೆ, ಅಥವಾ ತರ್ಕ, ಅಥವಾ ವಾದ–ಪ್ರತಿವಾದ. ಬುದ್ಧಿಯು ಬುದ್ಧಿಯೊಡನೆ ಸಂಭಾಷಣೆ ನಡಸಬೇಕು; ಒಂದು ಇನ್ನೊಂದನ್ನು ಶೋಧಿಸಬೇಕು. ಈ ಚರ್ಚಾ ಪ್ರಸಂಗಕ್ಕೆ ಅವಶ್ಯವಾದ ಅವಕಾಶವೇ ಸ್ವಾತಂತ್ರ್ಯದ ಮೊದಲನೆಯ ರೂಪ. ವಿಚಾರ ಸ್ವಾತಂತ್ರ್ಯ, ಭಾಷಣ ಸ್ವಾತಂತ್ರ್ಯ, ಭಾವನಾ ಪ್ರಯೋಗ ಸ್ವಾತಂತ್ರ್ಯ ಇವು ನಮ್ಮ ನಡವಳಿಕೆಯಲ್ಲಿ ಸರಿ–ತಪ್ಪುಗಳನ್ನು ಕಂಡುಕೊಳ್ಳಲು ನಮಗೆ ಇರಬೇಕಾದ ಸೌಕರ್ಯಗಳು.

ಆದರೆ ಸ್ವಾತಂತ್ರ್ಯದಲ್ಲಿ ಅಪಾಯವಿಲ್ಲವೊ? ಮನುಷ್ಯಜೀವನದ ಎಲ್ಲ ವ್ಯವಹಾರಗಳಲ್ಲಿಯೂ ಕ್ಷೇಮಾಂಶವೂ ಅಕ್ಷೇಮಾಂಶವೂ ಬೆರೆತುಕೊಂಡೇ ಇರುತ್ತವೆ. ಉದಾಹರಣೆಗಾಗಿ ಭೋಜನ ಸ್ವಾತಂತ್ರ್ಯದಲ್ಲಿ ರುಚಿಯ ಸಂತೋಷಾಂಶ ಇರುವಂತೆ ಅಜೀರ್ಣದ ಸಂಕಟಾಂಶವೂ ಅಡಗಿಕೊಂಡಿರುತ್ತದೆ. ಸ್ವಾತಂತ್ರ್ಯದಲ್ಲಿಯೂ ಹಾಗೆಯೇ ಇಷ್ಟಾನಿಷ್ಟಗಳೆರಡೂ ಅಡಗಿಕೊಂಡಿರುತ್ತವೆ. ಬುದ್ಧಿಸ್ವಾತಂತ್ರ್ಯವು ಭಾಷಣದ ಮೂಲಕವೂ ಚರ್ಚೆಗಳ ಮೂಲಕವೂ ಹೊರಪಡುತ್ತಿದ್ದರೆ ಆಗ ಹೊಸ ಹೊಸ ಭಾವನೆಗಳು ಉದಿಸಿ ಹಳೆಯ ಭಾವನೆಗಳ ಹಿಡಿತವನ್ನು ಸಡಲಿಸಿಯಾವು; ಸಮಾಜದಲ್ಲಿ ಸಂಕ್ಷೋಭೆಯುಂಟಾದೀತು; ಬಹುಕಾಲದಿಂದ ಜನಕ್ಕೆ ರೂಢಿಯಾಗಿರುವ ವ್ಯವಸ್ಥೆ

ಒಡೆದುಹೋಗಿ, ಅದರ ಜಾಗದಲ್ಲಿ ಜನವನ್ನು ಕಟ್ಟಿನಿಲ್ಲಿಸಬಲ್ಲ ಹೊಸದೊಂದು ಏರ್ಪಾಟು ಬಾರದೆ ಹೋದೀತು. ಇದು ಸ್ವಾತಂತ್ರ್ಯದಲ್ಲಿರುವ ಅಪಾಯ ಸಂಭವ. ಸ್ವಾತಂತ್ರ್ಯ ಬೇಡವೆಂದರೋ, ಸಮಾಜ ಕರಡುಕಟ್ಟುತ್ತದೆ; ಜನಕ್ಕೆ ಪ್ರಗತಿ ದುರ್ಲಭವಾಗುತ್ತದೆ; ಜೀವನಕ್ರಮವು ಯಂತ್ರದಂತೆ ನೀರಸವೂ ನಿರುತ್ಸಾಹಿಯೂ ಆಗುತ್ತದೆ. ಹೀಗೂ ಅಪಾಯ ಹಾಗೂ ಅಪಾಯ. ಇಂಥಾ ಎರಡು ಅಪಾಯಗಳ ನಡುವೆ ನಿರಪಾಯವಾದ ದಾರಿಯಲ್ಲಿ ಸ್ವಾತಂತ್ರ್ಯವನ್ನು ಪ್ರವರ್ತನೆ ಮಾಡಿಸಬೇಕೆಂಬುದು ಮಿಲ್ ತಾತ್ವಿಕನ ಅಂತರಂಗ. ಬೆಳವಣಿಗೆ–ಅಭಿವೃದ್ಧಿ – ಎಂಬ ಮಾತಿನಲ್ಲಿ ಹಳತು ಹೊಸತುಗಳ ಸಮ್ಮೇಳನ ಅಡಗಿಕೊಂಡಿರುತ್ತದೆ. ಹಳೆಯ ಬೇರಿಲ್ಲದಿದ್ದರೆ ಗಿಡ ಒಣಗುತ್ತದೆ; ಹೊಸ ಚಿಗುರು ಹುಟ್ಟದಿದ್ದರೆ ಮರ ಬರಡು ಬೀಳುತ್ತದೆ. ನಿಜವಾದ ಪ್ರಗತಿಯಲ್ಲಿ ಹಳೆಯದೂ ಹೊಸದೂ ಏಕಾಕಾರವಾಗಿ ಹಬ್ಬಿಕೊಂಡಿರುತ್ತವೆ. ಸಮಾಜದ ಜೀವನದಲ್ಲಿ ಸಂಪ್ರದಾಯವೆಂಬುದೇ ಹಳೆಯದು, ಅದೇ ಬೇರು; ಸ್ವಾತಂತ್ರ್ಯವೆಂಬುದೇ ಹೊಸದು, ಅದೇ ಚಿಗುರು. ಹೀಗೆ ಸಂಪ್ರದಾಯ–ಸ್ವಾತಂತ್ರ್ಯಗಳನ್ನು ಪರಸ್ಪರ ಹಾನಿಯಾಗದಂತೆ ಸಮಗೂಡಿಸುವುದು ನಿಜವಾದ ಸಮಾಜ ಹಿತಚಿಂತಕರಿಗೆ ಇರುವ ಕೆಲಸ.

ಮನುಷ್ಯನ ಬುದ್ಧಿಕಾರ್ಯವು ಹೇಗಾದರೂ ಪ್ರಮಾದ ಸಂಭವವುಳ್ಳದ್ದು. ಬುದ್ಧಿಯ ನೈಜವಾದ ಅಸಾಮರ್ಥ್ಯದಿಂದ ಪ್ರಮಾದವಾಗಬಹುದು. ಆಲಸ್ಯ ಕಾರಣದಿಂದಲೋ ಅನವಧಾನದ ಕಾರಣದಿಂದಲೋ ಬುದ್ಧಿಯು ಸಮರ್ಥವಾಗಿದ್ದರೂ ಪ್ರಮಾದಕ್ಕೆ ಬೀಳಬಹುದು; ಜಗದ್ವಿಷಯಗಳನ್ನು ಗ್ರಹಿಸುವ ಇಂದ್ರಿಯಶಕ್ತಿಗಳ ಸಹಜ ನ್ಯೂನತೆಯಿಂದಲೂ ಪ್ರಮಾದವಾಗಬಹುದು. ಹೀಗೆ ಪ್ರಮಾದ ಸಂಭವದ ಕಾರಣಗಳು ನಮ್ಮ ಸ್ವಭಾವದಲ್ಲಿಯೇ ಬಹುವಾಗಿ ಇರುತ್ತವೆ. ಈ ಬುದ್ಧಿಪ್ರಮಾದಕ್ಕೆ ಇರುವ ಪರಿಹಾರ ಮಾರ್ಗ ಚರ್ಚೆಯೊಂದೇ. ಯಾವನೊಬ್ಬನ ಬುದ್ಧಿಯಾಗಲಿ, ಅದು ತನ್ನ ಒಂದಾನೊಂದು ಕಾರ್ಯದಲ್ಲಿ ಆಗಿರಬಹುದಾದ ಪ್ರಮಾದವನ್ನು ತಾನೇ ಕಂಡುಕೊಳ್ಳುವುದು ಅಪರೂಪ. ನಮ್ಮ ತಾಲ್ಲೂಕು ಕಚೇರಿಗಳ ಖಜಾನೆಗಳಲ್ಲಿ ಗುಮಾಸ್ತರುಗಳು ಹಣದ ಲೆಕ್ಕಗಳನ್ನು ಗೊತ್ತುಮಾಡುವಾಗ ಹತ್ತಾರು ಸಾಲು ಅಂಕಿಗಳನ್ನು ಸಂಕಲನ ಮಾಡಬೇಕಾಗುತ್ತದಷ್ಟೆ? ಹಾಗೆ ಅಂಕಿಗಳನ್ನು ಕೂಡಿಸುವಾಗ ಗುಮಾಸ್ತನ ತುಟಿ ಏನಾದರೂ ಒಂದು ಸಲ ತಪ್ಪಿದರೆ, ಆಮೇಲೆ ಆ ಗುಮಾಸ್ತನು ಅದೇ ಅಂಕಿಯನ್ನು ಎಷ್ಟು ಸಾರಿ ಬೇರೀಜು ಮಾಡಿದರೂ ಆ ತುಟಿಯ ತಪ್ಪು ಅವನಿಗೆ ತಿಳಿದು ಬರಲಾರದು. ಅವನು “೬+೭=೧೩” ಎನ್ನುವುದಕ್ಕೆ ಬದಲಾಗಿ “೬+೭=೧೬” ಎಂದು ನುಡಿದಿದ್ದರೆ, ಸಾರಿಸಾರಿಗೂ ಆರೂ ಏಳೂ ಹದಿನಾರು ಎಂದೇ ಅವನ ಬಾಯಿಂದ ಹೊರಡತ್ತಿರುತ್ತದೆ. ಸಾರಿಸಾರಿಗೂ ಆ ತಪ್ಪುಲೆಕ್ಕ ಮತ್ತಷ್ಟು ಸ್ಥಿರವಾಗುತ್ತದೆ. ಅದನ್ನು ಕಂಡುಹಿಡಿಯಲು ಮತ್ತೊಬ್ಬನು ಆ ಲೆಕ್ಕವನ್ನು ಪರೀಕ್ಷಿಸಬೇಕಾಗುತ್ತದೆ. ಅಭಿಪ್ರಾಯಶೋಧನೆಯಲ್ಲಿ ರೀತಿಯೂ ಹೀಗೆಯೇ. ಯಾವನೊಬ್ಬನೂ ತನ್ನ ಬುದ್ಧಿಯ

ಶೋಧನೆಯನ್ನು ತಾನೇ ಮಾಡಿಕೊಳ್ಳಲಾರ, ತನ್ನ ಕಣ್ಣಿನ ಒಳಭಾಗವನ್ನು ತಾನೇ ಪರೀಕ್ಷಿಸಿಕೊಳ್ಳಲಾರ. ಹೀಗೆ ಬುದ್ಧಿಪರಿಶೋಧನೆಗೆ ಅನ್ಯಬುದ್ಧಿಯ ಸಹಾಯ ಅವಶ್ಯ. ಅದರಿಂದ ತರ್ಕ. ತರ್ಕವೆಂದರೆ ಪದಪರೀಕ್ಷೆ, ವಾಕ್ಯಪರೀಕ್ಷೆ, ಅರ್ಥಪರೀಕ್ಷೆ, ಅರ್ಥಾರ್ಥ ಸಂಬಂಧ ಪರೀಕ್ಷೆ; ಇಂಥ ಅನೇಕ ಪರೀಕ್ಷೆಗಳ ಸರಣಿಯೇ ತರ್ಕ. ನಮ್ಮಲ್ಲಿ ತರ್ಕಶಾಸ್ತ್ರಕ್ಕೆ ಪ್ರಾಶಸ್ತ್ಯ ದೊರೆತಿರುವುದು ಈ ಕಾರಣದಿಂದ ತರ್ಕವೇ ಚರ್ಚೆ, ಅದೇ ವಾದ ಪ್ರತಿವಾದ ಸ್ಪರ್ಧೆ.

॥ ವಾದೇ ವಾದೇ ಜಾಯತೇ ತತ್ತ್ವಬೋಧಃ ॥

ಸೂತ್ರಭಾಷ್ಯಾದಿ ಶಾಸ್ತ್ರಪ್ರಬಂಧಗಳಿಗೆ ವಾದಕಥಾ ಎಂದೇ ಹೆಸರು. ಭಗವದ್ಗೀತೆಯು ಕೃಷ್ಣಾರ್ಜುನರ ಸಂವಾದ–ಅದು ಪ್ರಶ್ನೆ, ಉಪಪ್ರಶ್ನೆ, ಉತ್ತರ, ವಿವರಣಾದಿ ತರ್ಕಾವಯವಗಳುಳ್ಳದ್ದು. ಪ್ರಶ್ನೋಪನಿಷತ್ತು, ಬೃಹದಾರಣ್ಯಕ ಮೊದಲಾದ ಉಪನಿಷತ್ತುಗಳು ಚರ್ಚಾತ್ಮಕವಾಗಿರುವುದರಿಂದಲೇ ಅವುಗಳ ಸಿದ್ಧಾಂತಗಳು ಮನುಷ್ಯಬುದ್ಧಿಗೆ ಗ್ರಾಹ್ಯವಾಗಿರುತ್ತವೆ. ಗ್ರೀಸ್ ದೇಶದ ಪ್ಲೇಟೊ ತತ್ವವಿಚಾರಿಯು ಬರೆದಿರುವ ಸಂವಾದಗಳೆಲ್ಲಾ ಪ್ರಶ್ನೋತ್ತರ ರೂಪದ ತರ್ಕ ಮರ್ಯಾದೆಯಲ್ಲಿವೆ. ಒಂದು ಬುದ್ಧಿ ಮತ್ತೊಂದು ಬುದ್ಧಿಯನ್ನು ತನ್ನದಾಗಿ ಮಾರ್ಪಡಿಸಿಕೊಳ್ಳಲಾಗುವುದು ತರ್ಕದ ಬಲದಿಂದ. ಭಿನ್ನಾಭಿಪ್ರಾಯ ಪ್ರಶ್ನೆ ಸಂದೇಹಗಳ ಗೊಂದಲಗಳ ನಡುವೆ ನಮಗೆ ಸತ್ಯದರ್ಶನಕ್ಕೆ ದಾರಿಬಿಡಿಸುವ ಸತ್ಯಸೇವಕನು ತರ್ಕ. ಇಂಥಾ ತರ್ಕದ ಜೀವಾಳ ಸ್ವಾತಂತ್ರ್ಯ.

ಚರ್ಚೆ ಫಲಕಾರಿಯಾಗಬೇಕಾದರೆ ಅದು ವಾದಿ–ಪ್ರತಿವಾದಿಗಳಿಂದ ನಿಸ್ಸಂಕೋಚವಾಗಿಯೂ ನಿರ್ಭಯವಾಗಿಯೂ ಸಾಗಬೇಕು. ಅವರು ತಮ್ಮ ತಮ್ಮ ಮನಸ್ಸುಗಳನ್ನು ಬಿಚ್ಚಿ ಮಾತನಾಡದಿದ್ದರೆ, ಅವರ ಶಂಕೆಗಳನ್ನು ಸ್ಪಷ್ಟಪಡಿಸದೆ ಹೋದರೆ, ಅವರ ಆಕ್ಷೇಪಣೆಗಳನ್ನು ಹೇಳಲು ಹೆದರಿಕೊಂಡರೆ, ಆ ಚರ್ಚೆಯು ಫಲಕಾರಿಯಾಗಲಾರದು. ಹೀಗೆ ತರ್ಕವು ಸಾರ್ಥಕಪಡಲು ಸಂದರ್ಭಾನುಕೂಲತೆ ಸ್ವಾತಂತ್ರ್ಯ – ಬುದ್ಧಿ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ. ಪ್ರಯೋಗ ಪರೀಕ್ಷಾ ಸ್ವಾತಂತ್ರ್ಯ ಅವಶ್ಯ.

ಈ ಸ್ವಾತಂತ್ರ್ಯವನ್ನು ಮಿತಿಯಿಲ್ಲದಂತೆ ಬಿಡತಕ್ಕದ್ದೆ? ಅಥವಾ ಅದಕ್ಕೆ ಪರಿಮಿತಿಗಳನ್ನು ಗೊತ್ತುಮಾಡತಕ್ಕದ್ದೆ? ಮಿತಿ ಇರಬೇಕೆಂದರೆ ಅದು ಎಂಥೆಂಥ ಸಂದರ್ಭಗಳಲ್ಲಿ ಎಷ್ಟೆಷ್ಟು ಮಾತ್ರ ಇರಬೇಕು? ವಾಕ್ಕಿನರಂಗದಲ್ಲಿ ಎಷ್ಟು, ಕಾರ್ಯರಂಗದಲ್ಲಿ ಎಷ್ಟು? ಇವೇ ಮೊದಲಾದ ಪ್ರಶ್ನೆಗಳನ್ನು ಮಿಲ್ ತಾತ್ವಿಕನು ವಿಚಾರಮಾಡಿದ್ದಾನೆ. ಆತನ ವಿಚಾರಸರಣಿಯು ಇಂಡಿಯದ ಜನಕ್ಕೆ ಈ ಹೊತ್ತು ಅತ್ಯಂತ ಅವಶ್ಯವಾದದ್ದು. ನಾವು ಈಗ ಪ್ರಜಾರಾಜ್ಯವೆಂಬ ಹೊಸ ರಾಜಕೀಯ ಪದ್ಧತಿಯನ್ನು ಅಂಗೀಕಾರ ಮಾಡಿಕೊಂಡಿದ್ದೇವೆ. ಪ್ರಜಾರಾಜ್ಯದಲ್ಲಿ ಎಲ್ಲವನ್ನೂ

ಗೊತ್ತುಮಾಡತಕ್ಕದ್ದೂ, ಆಳತಕ್ಕದ್ದೂ, ಪ್ರಜಾಭಿಪ್ರಾಯ. ಆದರೆ ಪ್ರಜಾಭಿಪ್ರಾಯವು ಸ್ವತಃ ಪರಿಶುದ್ಧವಾಗಿ ನಿರ್ದುಷ್ಟವಾಗಿ ಇರುತ್ತದೆಯೆ? ಅದಕ್ಕೆ ಪರೀಕ್ಷೆ ಪರಿಷ್ಕಾರಗಳ ಅವಶ್ಯಕತೆ ಇಲ್ಲವೆಂದು ಯಾರಾದರೂ ವಾದಿಸಿಯಾರೆ? ಆ ಆವಶ್ಯಕತೆ ಉಂಟೆಂದರೆ ಚರ್ಚೆಯ ಆವಶ್ಯಕತೆಯನ್ನು ಒಪ್ಪಿಕೊಂಡಂತೆ ಆಗುತ್ತದೆ. ಚರ್ಚೆಯಾದರೋ, ಅದು ಕೃತಕೃತ್ಯವಾಗಬೇಕಾದರೆ ಅದಕ್ಕೆ ಮೊದಲು ಬೇಕಾದದ್ದು ಸ್ವಾತಂತ್ರ್ಯ. ಸ್ವಾತಂತ್ರ್ಯವು ಸತ್ಯಶೋಧನೆಗಾಗಿ. ಎಲ್ಲಿ ಆಲೋಚನಾ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ, ಪರೀಕ್ಷಾ ಸ್ವಾತಂತ್ರ್ಯಗಳಿಲ್ಲವೋ ಅಲ್ಲಿ ಸತ್ಯಪ್ರಾಪ್ತಿಯ ಸಂಭವವಿಲ್ಲ.

ಇದು ರಾಜಕೀಯಕ್ಕೋಸ್ಕರ ಮಾತ್ರವೇ ಅಲ್ಲ. ಸಮಾಜ–ಸಂಸ್ಥೆಗಳ ಹಿತಸ್ಥಿತಿಗೂ ಸಂಪ್ರದಾಯ–ರೂಢಿಗಳ ಪರಿಷ್ಕರಣಕ್ಕೂ ಬುದ್ಧಿವ್ಯಾಪಾರದ ಸ್ವಾತಂತ್ರ್ಯವೇ ನಮಗಿರುವ ಪರಮಸಾಧನ. ವಿಜ್ಞಾನಾದಿ ಶಾಸ್ತ್ರಗಳಿಗೆ ವಿಚಾರ ಸ್ವಾತಂತ್ರ್ಯವೇ ಜೀವಾಳ. ಅಧ್ಯಾತ್ಮ ಶಾಸ್ತ್ರದಲ್ಲಿಯೂ ವಿಚಾರ ಸ್ವಾತಂತ್ರ್ಯಕ್ಕೆ ಅತ್ಯುನ್ನತ ಸ್ಥಾನವುಂಟು. ಗೀತೆಯ ಸಮಾಪ್ತಿಯಲ್ಲಿ ಭಗವಂತನು ಅರ್ಜುನನನ್ನು ಕುರಿತು–

"ವಿಮೃಶ್ಯೈತದಶೇಷೇಣ"

– "ಹೇಳಿದ್ದನ್ನೆಲ್ಲವನ್ನೂ ನೀನು ಪೂರ್ತಿಯಾಗಿ ವಿಮರ್ಶೆಮಾಡು"– ಎಂಬ ಎಚ್ಚರಿಕೆಯ ಮಾತಿನಿಂದ ಸ್ವತಂತ್ರ ವಿಚಾರದ ಆವಶ್ಯಕತೆಯನ್ನು ಸೂಚಿಸಿದ್ದಾನೆ.

ಪಾಶ್ಚಾತ್ಯರು ಸ್ವಾತಂತ್ರ್ಯವಿಚಾರದಲ್ಲಿ ಹೆಚ್ಚು ಜಿಜ್ಞಾಸೆ ನಡೆಸಿದ್ದಾರೆ. ಆ ಜಿಜ್ಞಾಸಾ–ಸಾಹಿತ್ಯದಲ್ಲಿ ಪ್ರಸಿದ್ಧವಾದ ಗ್ರಂಥಗಳು ಮೂರು:–

೧) ಮಿಲ್ಟನ್ ಕವಿಯ (Areopagitica) ಏರಿಯೊಪೆಜಿಟಿಕ ಎಂಬ ಪ್ರಬಂಧ, ೨) ಮಿಲ್ ಬರೆದ "ಸ್ವಾತಂತ್ರ್ಯವನ್ನು ಕುರಿತು" (On Liberty) ಎಂಬ ಪ್ರಬಂಧ, ೩) ಮಾರ್ಲೆಯ "ಸ್ನೇಹ ಸಮ್ಮತಿ" (On Compromise) ಎಂಬ ಪ್ರಬಂಧ. ಈ ಪ್ರಶಸ್ತಿ ಈಗ ನಮ್ಮ ಕನ್ನಡ ಅನುವಾದಕಾರರು ಮಾಡಿರುವ ಪ್ರಯತ್ನದ ಮೇಲ್ಮೆಯನ್ನು ತಿಳಿಸುತ್ತದೆ.

ನಾನು ಈ ಮುನ್ನುಡಿಯ ಮೊದಲಿನಲ್ಲಿ ಸೂಚಿಸಿರುವ ಸಂಗತಿಗಳು ನಡೆದು ಈ ಹೊತ್ತಿಗೆ ಐವತ್ತು ವರುಷದ ಮೇಲೆ ಆಗಿದೆಯಲ್ಲವೆ? ಈ ಅರ್ಧ ಶತಮಾನದ ಕಾಲದಲ್ಲಿ ನಮ್ಮದೇಶದಲ್ಲಿ ವಿದ್ಯಾಭ್ಯಾಸ ವಿಸ್ತಾರಪಟ್ಟಿದೆ. ಹಿಂದೆ ಅಕ್ಷರ ಗಂಧವಿಲ್ಲದಿದ್ದ ಕಡೆ ಈಗ ಉಪಾಧ್ಯಾಯರ ಧ್ವನಿ ಕೇಳಬರುತ್ತಿದೆ. ಹಳ್ಳಿಗಳಲ್ಲಿ ಹೈಸ್ಕೂಲುಗಳಾಗಿವೆ. ಹಿಂದೆ ಹೈಸ್ಕೂಲುಗಳಿದ್ದಷ್ಟು ಈಗ ಕಾಲೇಜುಗಳಾಗಿವೆ. ವೃತ್ತಪತ್ರಿಕೆಗಳ ಪ್ರಚಾರವೂ ಹೆಚ್ಚಿ ಹಬ್ಬುತ್ತಿದೆ. ಜನತೆಯಲ್ಲಿ ರಾಜಕೀಯ ಜಾಗೃತಿಯೂ ಸಾಮಾಜಿಕ ಜಾಗೃತಿಯೂ ನಾನಾ ರೂಪಗಳಲ್ಲೆದ್ದು ದೊಂಬಿಮಾಡುತ್ತಿವೆ. ಹೊಸ ಹೊಸ ಸಂಸ್ಥೆಗಳನ್ನೂ ಹೊಸ ಹೊಸ ಸಂಪ್ರದಾಯಗಳನ್ನೂ ಮಾಡಿಕೊಳ್ಳುವ ಆಲೋಚನೆಗಳು ದಿನೇ ದಿನೇ ನಾಲ್ಕಾರು ದಿಕ್ಕುಗಳಿಂದ ಕೇಳಬರುತ್ತಿವೆ. ಈ ವಾತಾವರಣದಲ್ಲಿ ಮಿಲ್ ತಾತ್ವಿಕನ ಸಾರ್ವಕಾಲಿಕ

ಗ್ರಂಥಕ್ಕೆ ಐವತ್ತು ವರುಷಗಳ ಹಿಂದೆ ಇದ್ದದ್ದಕ್ಕಿಂತ ಈಗ ಪುರಸ್ಕಾರ ಹೆಚ್ಚಾಗಿ ಇದ್ದೀತೆಂದು ನಿರೀಕ್ಷಿಸಲು ಕಾರಣತೋರುತ್ತಿದೆ. ಅದಕ್ಕೆ ಶ್ರೀ ರಾಜಗೋಪಾಲರಾವ್, ಶ್ರೀ ಶ್ರೀಧರ ಇವರ ಜಾತಕ ಬಲವೂ ಅನುಗೂಡಲೆಂದು ಹಾರೈಸುತ್ತೇನೆ. ಅವರಿಬ್ಬರೂ ವಿದ್ವಾಂಸರು, ಕನ್ನಡದಲ್ಲಿ ಬರವಣಿಗೆಯ ಅಭ್ಯಾಸಕ್ಕಾಗಿ ಪರಿಶ್ರಮ ಮಾಡಿರುವವರು, ಪ್ರಪಂಚದ ಇಂದಿನ ಪರಿಸ್ಥಿತಿಯನ್ನು ವಿಚಾರದಿಂದ ಕಂಡುಕೊಂಡಿರುವವರು, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಜನರಲ್ಲಿ ಜ್ಞಾನೋನ್ನತಿಯೂ ವಿಚಾರೋನ್ನತಿಯೂ ಬೆಳೆಯಬೇಕೆಂದು ತಮ್ಮ ಹೃದಯದಲ್ಲಿ ಆಸೆ ಉತ್ಸಾಹಗಳನ್ನು ಬೆಳಸಿಕೊಂಡಿರುವವರು. ಈ ಯುವಕ ಸ್ನೇಹಿತರ ಪ್ರಯತ್ನಕ್ಕೆ ಯಶಸ್ಸು ದೊರೆಯಲಿ, ಅವರು ಪಟ್ಟಿರುವ ಶ್ರಮ ಸಫಲವಾಗಲಿ – ಎಂದು ನನ್ನಂಥ ಹಳಬನು ಬಯಸುವುದು ಸ್ವಾಭಾವಿಕತಾನೆ?

ಬೆಂಗಳೂರು **ಡಿ.ವಿ.ಜಿ**

೫–೭–೧೯೬೧

"ತೃಪ್ತ ಹಂದಿಯಾಗಿರುವುದಕ್ಕಿಂತ ಅತೃಪ್ತ ಸಾಕ್ರೆಟೀಸನಾಗಿರುವುದೇ ಲೇಸು."

– ಜೆ.ಎಸ್.ಮಿಲ್

# ಅನುವಾದಕರ ಮುನ್ನುಡಿ

## I

ಹದಿನೆಂಟನೆಯ ಶತಮಾನದಲ್ಲಿ ಆರಂಭವಾದ ಬೌದ್ಧಿಕವಾದವು ಮುಂದಿನ ಶತಮಾನದ ಪೂರ್ವಾರ್ಧದಲ್ಲಿ ಜೆರಮಿ ಬೆಂಥಮ್ ಮತ್ತು ಜಾನ್‌ಮಿಲ್ ಇವರ ಶಕ್ತಿಯುತ ಪ್ರಭಾವದಿಂದಾಗಿ ಉಚ್ಛ್ರಾಯಸ್ಥಿತಿಯನ್ನು ಮುಟ್ಟಿತು. ಅದೇ ಕಾಲದಲ್ಲಿ ಕವಿ ಕೊಲರಿಡ್ಜ್, ತತ್ವಜ್ಞಾನಿ ಕಾರ್ಲೈಲ್ ಮತ್ತು ಇನ್ನಿತರ ಪ್ರಭಾವ–ಪ್ರಚೋದನೆಗಳಿಂದಾಗಿ ಬೌದ್ಧಿಕವಾದವು ಅದರ ತೀವ್ರತೆಯನ್ನು, ಕಾಠಿಣ್ಯವನ್ನು ಕಳೆದುಕೊಳ್ಳುವುದು ಅನಿವಾರ್ಯವಾಯಿತು. ಹದಿನೆಂಟನೇ ಶತಕದ ಯುರೋಪಿನ ಯುಗಧರ್ಮವು ಹತ್ತೊಂಬತ್ತನೇ ಶತಕದ ಮಧ್ಯದಲ್ಲಿ ಹಿಂಜರಿದಂತೆ ಹೊಸತೊಂದು ತತ್ವಪ್ರಣಾಲಿಯು ರೂಪುಗೊಳ್ಳುತ್ತಿದ್ದ ಸಂಧಿ ಕಾಲದಲ್ಲಿ ಜಾನ್ ಸ್ಟೂಅರ್ಟ ಮಿಲ್ಲನು ಜೀವಿಸಿದ್ದನು. ಅವನ ವಿದ್ಯಾಭ್ಯಾಸ, ಸಂಸ್ಕಾರ, ಚಲನ–ವಲನ ಎಲ್ಲವೂ ಮರೆಯಾಗುತ್ತಿದ್ದ ಯುಗ ಧರ್ಮಕ್ಕೆ ಒಪ್ಪುವಂತೆ ಇದ್ದವು. ವರುಷಗಳು ಉರುಳಿದಂತೆ ಹಳೆಯ ವಿವೇಚನೆಯ ಚೌಕಟ್ಟು ಹೊಸ ಶಕ್ತಿಗಳನ್ನು, ಹೊಸ ಅವಶ್ಯಕತೆಗಳನ್ನು ಅಳವಡಿಸಿಕೊಳ್ಳಲಾರದೆಂದು ತೋರಿದಾಗ ಅದನ್ನು ಮೂಲಭೂತಸ್ವರೂಪದಲ್ಲಿ ಅಲ್ಲದಿದ್ದರೂ ಬಹ್ವಂಶ, ಇಲ್ಲವೆ ಪೂರ್ಣವಾಗಿ ಬದಲಿಸಿ ಬೌದ್ಧಿಕವಾದವು ಸ್ವದೇಶದಲ್ಲಿ ಮಾತ್ರವಲ್ಲದೆ ಯುರೋಪು ಮತ್ತು ಅಮೇರಿಕೆಗಳಲ್ಲಿ ಪ್ರಸರಿಸುವಂತೆ ಮಾಡಿದ ಯಶಸ್ಸು ಅವನದು. ವಿಕ್ಟೋರಿಯ ಕಾಲದ ಬ್ರಿಟನ್ನಿನ ಪ್ರಕೃತವಾದ ಮತ್ತು ವಿಜ್ಞಾನವಾದಗಳು ಜೆ.ಎಸ್.ಮಿಲ್ಲನ ವಿಚಾರ ಧಾರೆಯಿಂದ ಪೋಷಿತವಾದವುಗಳೆಂದು ಹೇಳಬೇಕು.

ಜೆ.ಎಸ್.ಮಿಲ್ಲನು ಪ್ರಥಮ ಶ್ರೇಣಿಯ ತತ್ವಶಾಸ್ತ್ರಜ್ಞನೆಂದು ಪರಿಗಣಿಸಲ್ಪಡದಿದ್ದರೂ ಅವನ ವಿವೇಚನೆಯು ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ನೈತಿಕ ಸಮಸ್ಯೆಗಳ ಮೇಲೆ ಇಂದಿಗೂ ಹೊಸ ದೃಷ್ಟಿಯನ್ನು, ಬೆಳಕನ್ನು ನೀಡುವಂತಹುದಾಗಿದೆ. ವ್ಯವಹಾರಕ್ಕೆ ಸಂಬಂಧಿಸಿದಂತೆಯೇ ಅವನು ಪ್ರತಿಯೊಂದು ತತ್ವವನ್ನೂ –ಅದು ತಾರ್ಕಿಕವಿರಲಿ ಅಥವಾ ಆರ್ಥಿಕ–ರಾಜಕೀಯವಿರಲಿ–ನಿರೂಪಿಸಿದನು. ಜ್ಞಾನವು ಮಾನವಸುಖಕ್ಕಾಗಿ ಪ್ರಯೋಗವಾಗಬೇಕೆಂಬ ಹಂಬಲು ಬೆಂಥಮ್ ಮತ್ತು ಮಿಲ್ಲನ ಉಪಯುಕ್ತತಾವಾದವನ್ನು ಹಿಂದಿನ ಹ್ಯೂಮ್ ಮತ್ತು ಲಾಕ್ ಇವರ ವಿಜ್ಞಾನವಾದದಿಂದ ಬೇರ್ಪಡಿಸುವುದು. "ತತ್ವ ಮತ್ತು ಪ್ರಯೋಗವನ್ನು ಬೇರ್ಪಡಿಸುವಂತೆ ಸಲಹೆಯನ್ನೀಯುವುದೆಂದರೆ ಅನಾಚಾರವನ್ನು ಪುರಸ್ಕರಿಸುವಂತೆ ಸಲಹೆಯನ್ನಿತ್ತಂತೆಯೆ

ಸರಿ" ಎಂದು ಆಚಾರ–ವಿಚಾರಗಳ ಸಂಬಂಧವನ್ನು ಕುರಿತು ಅವನೇ ವಿವರಿಸಿರುವನು. ಸ್ಟೂಅರ್ಟ ಮಿಲ್ಲನು ಒಂದು ಶಕ್ತಿಯುತ ವಿಚಾರ ಪ್ರಣಾಲಿಯ* ಮಧ್ಯದಲ್ಲಿ ಬೆಳೆದು ಅದರ ಮೂಲಾಂಶಗಳನ್ನು ಉಳಿಸಿಕೊಳ್ಳಲು ಬಹುಶ್ರಮಿಸಿದನು. ಉಪಯುಕ್ತತಾವಾದದ ಸತ್ವಾಂಶವನ್ನು ಸಜೀವವಾಗಿ ಉಳಿಸಿಕೊಳ್ಳುವುದರಲ್ಲಿ ಅವನು ಕೃತಕೃತ್ಯನಾದನೆಂದು ಹೇಳಬಹುದು. ಬೌದ್ಧಿಕವಾದಕ್ಕೆ ಹೊಸ ಮೆರಗನ್ನು ಕೊಟ್ಟಿದ್ದರಿಂದಲೆ ಅವನ ಕೆಲವು ಕೃತಿಗಳು ಕಾಲಪ್ರವಾಹಕ್ಕೆ ಸಿಕ್ಕಿಯೂ ಹಳಸದೆ ಆರ್ಷವಾಣಿಯಂತೆ ವಿವೇಕದ ಮಾರ್ಗವನ್ನು ಇಂದಿನ ಸಮಾಜಕ್ಕೂ ತೋರಿಸುತ್ತಿರುವಂತೆ ಅನೇಕರಿಗೆ ತೋರುತ್ತಿರುವುದು.

## II

ಜೇಮ್ಸ ಮಿಲ್ ಮತ್ತು ಹ್ಯಾರೆಟ್‌ಬರ್ರೋ ದಂಪತಿಗಳಿಗೆ ಜಾನ್ ಸ್ಟೂಅರ್ಟನು ೨೦ನೇ ಮೇ ಮಾಸ ೧೮೦೬ ರಂದು ಜನಿಸಿದನು. ಇಂಡಿಯಾ ಆಫೀಸಿನಲ್ಲಿ ಮುಖ್ಯ ಪರೀಕ್ಷಕನಾಗಿದ್ದ ತಂದೆ ಜೇಮ್ಸ ಮಿಲ್ಲನು ಅವನ ಕಾಲದ ಹಿರಿಯ ಮೇಧಾವಿಯೆಂದು ಪರಿಗಣಿಸಲ್ಪಟ್ಟಿದ್ದನು. ಕೆಲವು ವಿಷಯಗಳಲ್ಲಿ ಪ್ರತಿಭಾನ್ವಿತ ಚಿಂತಕನಾದರೂ ಜೇಮ್ಸನು ಬಹುವಾಗಿ ಅವನ ಉಪದೇಶಕರಾದ ಜೆರಮಿ ಬೆಂಥಮ್ ಮತ್ತು ಹಾರ್ಟ ಅವರ ಚಿಂತನೆಯನ್ನೇ ವೀರ್ಯವತ್ತಾಗಿ ಅನೇಕ ಗ್ರಂಥಗಳಲ್ಲಿ ಪ್ರತಿಪಾದಿಸಿದನು.

ಜಾನ್ ಮಿಲ್ಲನ ವಿದ್ಯಾಭ್ಯಾಸಕ್ರಮವು ಇತಿಹಾಸದಲ್ಲೇ ಅಪೂರ್ವವಾದುದು. ಅದನ್ನು ಕುರಿತಾದ ವಿಮರ್ಶೆ ಇಂದಿಗೂ ಕೊನೆಯಾಗಿಲ್ಲ. ಜಾನನು ಶಾಲಾ–ಕಾಲೇಜುಗಳ ಮೆಟ್ಟಲುಗಳನ್ನು ತುಳಿಯದೆ ಸಂಪೂರ್ಣವಾಗಿ ತಂದೆಯಿಂದಲೇ ಪಾಠ–ಪ್ರವಚನಗಳನ್ನು ಕಲಿತನು. ಜೇಮ್ಸ್ ಮಿಲ್ಲನು ಮೂರು ವರುಷದ ಮಗ ಜಾನನಿಗೆ ಗ್ರೀಕ್ ಹೇಳಿಕೊಡಲು ಆರಂಭಿಸಿ, ಹನ್ನೆರಡು ವರುಷ ತುಂಬುವುದರೊಳಗೆ ಲ್ಯಾಟಿನ್, ಗಣಿತ, ತರ್ಕ, ತತ್ವಶಾಸ್ತ್ರಗಳದಲ್ಲದೆ ಕಾವ್ಯೇತಿಹಾಸಗಳ ಅಧ್ಯಯನವನ್ನೂ ಮಾಡಿಸಿದ್ದನು. ಇವುಗಳೊಂದಿಗೆ ಅಭಿಜಾತಕೃತಿಗಳ ಪರಿಚಯವನ್ನು ಮಾಡಿಕೊಡಲು ಮರೆಯಲಿಲ್ಲ. ಜಾನನು ತಾನು ಪಠಿಸಿದ ಗ್ರಂಥಗಳ ಮೇಲಿನ ಟೀಕೆ–ಟಿಪ್ಪಣಿಗಳನ್ನು ಜೇಮ್ಸನಿಗೆ ಅವನ ಸಂಗಡ ತಿರುಗಾಡಲು ಹೊರಟಾಗ ಒಪ್ಪಿಸಬೇಕಿದ್ದಿತು. ಇದರಿಂದ

* ಅವನ ಕಾಲಕ್ಕೆ ಉಪಯುಕ್ತತಾವಾದವು ಒಂದು ಪ್ರಸಿದ್ಧ ಚಿಂತನಪದ್ಧತಿಯಾಗಿದ್ದಿತು. ಉಪಯುಕ್ತತಾವಾದವು ಪುರಸ್ಕರಿಸುವುದು ಉಪಯೋಗ ಅಥವಾ ಬಹುಸುಖ ತತ್ವವನ್ನು. 'ಅಧಿಕ ಜನರ ಅಧಿಕ ಸೌಖ್ಯ' ಎಂಬುದು ಇದರ ಸೂತ್ರ. ಬೆಂಥಮ್ ಮತ್ತು ಅವನ ಅನುಯಾಯಿಗಳು ಈ ವಿಚಾರಪದ್ಧತಿಗೆ ಶಾಸ್ತ್ರೀಯಸ್ವರೂಪವನ್ನು ತಂದು ಕೊಟ್ಟರಲ್ಲದೆ ಗಣ್ಯವೆಂದು ಕಾಣುವಂತೆಯೂ ಮಾಡಿದರು. ಈ ತತ್ವವನ್ನು ಈ ಕೆಳಗೆ ಕಾಣಿಸಲಾಗಿರುವ ಸಾಮಾಜಿಕ ಕ್ಷೇತ್ರಗಳಲ್ಲಿ ಅನ್ವಯಿಸಲು ಪರಿಶ್ರಮಪಟ್ಟರು. ೧) ಕಾನೂನಿನ ಪುನರ್‌ವಿಮರ್ಶೆ, ೨) ಪ್ರಜಾಪ್ರತಿನಿಧಿತತ್ವವನ್ನು ವಿಸ್ತರಿಸುವುದು, ೩) ಶಾಸ್ತ್ರೀಯ ರೀತಿಯಲ್ಲಿ ಅರ್ಥಶಾಸ್ತ್ರವನ್ನು ರಚಿಸುವುದು, ೪) ನೈತಿಕ ತತ್ವಗಳನ್ನು ಪುನರ್‌ವಿಮರ್ಶಿಸಿ ನೈತಿಕ ಸಂಬಂಧಗಳನ್ನು ಹೊಸ ರೀತಿಯಲ್ಲಿ ಕಲ್ಪಿಸುವುದು, ಮತ್ತು ೫) ವಿದ್ಯಾಭ್ಯಾಸವನ್ನು ಧರ್ಮದಿಂದ ಪೂರ್ಣವಾಗಿ ಬೇರ್ಪಡಿಸುವುದು.

ಜಾನನ ವಿಮರ್ಶಕ ವಿಶೇಷಣ ಮತ್ತು ಸ್ವತಂತ್ರ ವಿಚಾರ ಶಕ್ತಿಯು ಪುಷ್ಟವಾದಂತೆ ತೀಕ್ಷ್ಣವೂ ಆಯಿತೆಂದು ಬೇರೆ ಹೇಳಬೇಕಾಗಿಲ್ಲ.

ತಂದೆಯ ಸ್ನೇಹಿತರನ್ನು ಬಿಟ್ಟರೆ ಜಾನನಿಗೆ ತನ್ನ ವಯಸ್ಸಿನ ಗೆಳೆಯರ ಬಳಗವೆಂಬುದೇ ಇರಲಿಲ್ಲ. ಮಗನ ಸತ್ವವನ್ನು ಅರಿತಿದ್ದ ಜೇಮ್ಸನು ಬಾಲಕ ಜಾನನನ್ನು ಬಾಹ್ಯಜಗತ್ತಿನಿಂದ ಹದಿನಾಲ್ಕನೇ ವರುಷದ ವರೆಗೂ ಬೇರ್ಪಡಿಸಿಟ್ಟಿದ್ದನು. ತನ್ನ ಆತ್ಮಚರಿತ್ರೆಯಲ್ಲಿ ಈ ವಿಷಯವನ್ನು ನೆನಪಿಗೆ ತಂದುಕೊಂಡು ತಾನು ಹುಡುಗನೇ ಆಗಿರಲಿಲ್ಲವೆಂದು ಜಾನನು ಹೇಳಿರುವನಲ್ಲದೆ ಪ್ರಕೃತಿಯು ತನ್ನ ಮಾರ್ಗದತ್ತ ಹೋಗುವಂತೆ ಬಿಡಬೇಕೆಂದು ಅಭಿಪ್ರಾಯಪಟ್ಟಿರುವನು. ಆದರೂ ಅಂದಿನ ಕಾಲದ ಶ್ರೇಷ್ಠ ತಾತ್ವಿಕರೆಂದೆನಿಸಿದ್ದ ರಿಕಾರ್ಡೋ, ಬೆಂಥಮ್, ಪ್ಲೇಸ್, ಜಾನ್ ಆಸ್ಟಿನ್ ಮುಂತಾದವರ ನಿಕಟ ಸಹವಾಸ-ಸಂಪರ್ಕಗಳು ಅವನ ಚೇತನವು ಜಾಗ್ರತಗೊಳ್ಳುವುದರಲ್ಲಿ ಬಹುಮಟ್ಟಿನ ಕಾರಣಗಳಾದವೆಂಬುದು ನಿರ್ವಿವಾದ.

೧೮೨೦ರಲ್ಲಿ ಒಂದು ವರುಷದವರೆಗೆ ಯುರೋಪು ಪ್ರವಾಸವನ್ನು ಕೈಕೊಂಡು ಮರಳಿದ ಮೇಲೆ ಜಾನನು ಇಂಡಿಯ ಆಫೀಸಿನಲ್ಲಿ ಗುಮಾಸ್ತೆಯ ಕೆಲಸಕ್ಕೆ ಸೇರಿದನು. ಈಸ್ಟ ಇಂಡಿಯಾ ಕಂಪನಿಯ ಆಡಳಿತವು ಹಸ್ತಾಂತರವಾಗುವ ವರೆಗೂ ಅಂದರೆ ೧೮೫೮ರ ವರೆಗೂ ಅಲ್ಲಿಯೇ ಕೆಲಸಮಾಡುತ್ತಿದ್ದು ನಿವೃತ್ತನಾದನು.

ಜಾನ್‌ಮಿಲ್ಲನು ತಂದೆಯ ರಕ್ಷಣೆಯಿಂದ ಹೊರಬಿದ್ದ ಕೂಡಲೇ ತರುಣ ಸ್ನೇಹಿತರ ಕೂಟವನ್ನು ಸೇರಿದನು. ಉಪಯುಕ್ತತಾವಾದಿ ಸಂಘ, ಲಂಡನ್ನಿನ ಚರ್ಚಾಕೂಟ ಇವುಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸಿದುದಲ್ಲದೆ ಬೆಂಥಮ್ ತತ್ವಕ್ಕೆ ಪ್ರತಿಕ್ರಿಯೆ ಎನಿಸಿದ ಕಾಮ್‌ಟೆ ಮತ್ತು ಮಕಾಲೆ ಇವರ ಭಿನ್ನ ತತ್ವಮಾರ್ಗವನ್ನು ಅರಿತುಕೊಳ್ಳುವ ಅವಕಾಶವೊದಗಿತು. ಈ ವಿಚಾರಘರ್ಷಣೆಯು ಮಿಲ್ಲನಿಗೆ ಬೆಂಥಮ್ ತತ್ವಗಳು ಬಹು ಸಂಕುಚಿತ ಮತ್ತು ಅಸಹಿಷ್ಣುಗಳು ಎಂಬುದನ್ನು ತೋರಿಸಿಕೊಟ್ಟಿತು. ಈ ಭಾವನೆಯು ಅವನ ಮನಸ್ಸಿನ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡದಿರಲಿಲ್ಲ. ಆವುದೋ ಒಂದು ಅನಿರ್ವಚನೀಯ ಮಾನಸಿಕ ದುಗುಡವು ಅವನನ್ನು ಆ ಕೂಡಲೆ ಆವರಿಸಿತು. "ಮನದ ಇಂತಹ ಸ್ಥಿತಿಯಲ್ಲಿ ನೇರವಾಗಿ ನನಗೆ ನಾನೇ ಒಂದು ಪ್ರಶ್ನೆಯನ್ನು ಕೇಳಬೇಕೆಂದೆನಿತು. 'ಜೀವನದಲ್ಲಿ ನಿನ್ನ ಎಲ್ಲ ಧ್ಯೇಯುಗಳೂ ಈಡೇರಿದುವೆಂದು ಇಟ್ಟುಕೊಳ್ಳುವಾ. ಅದು ನಿನಗೆ ಅಮಿತ ಸುಖ-ಸಂತೋಷಗಳನ್ನು ನೀಡಬಹುದೆ?' ಹತ್ತಿಕ್ಕಲಾದ ಚೇತನವೊಂದು ಸ್ಫುಟವಾಗಿ ಉತ್ತರಿಸಿತು. 'ಖಂಡಿತ ಇಲ್ಲ!' ಈ ಉತ್ತರದೊಂದಿಗೆ ನನ್ನ ಹೃದಯವೂ ಕುಸಿಯಿತು. ನನ್ನ ಜೀವನ ಸೌಧವನ್ನು ನಿರ್ಮಿಸಿದ್ದ ತಳಹದಿಯು ಬಾಯ್ಬಿಟ್ಟಿತು." ೧೮೨೬ರಲ್ಲಿ ತೋರಿ ಬಂದ ಈ ಮನೋವ್ಯಾಕುಲವು ಅನೇಕ ಮಾಸಗಳ ಪರ್ಯಂತ ಅವನನ್ನು ಘಾಸಿಪಡಿಸಿತು. ಭಾವನೆಗಳನ್ನು ಪ್ರಚೋದಿಸುವ ಮತ್ತು ತೃಪ್ತಿಪಡಿಸುವ ಸಾಹಿತ್ಯಗಳನ್ನು ಪಠಿಸಲು ಆರಂಭಿಸಿದ ಮೇಲೆ ಅವನ ಕಳವಳವು ದೂರಾಯಿತೆಂದು ಅವನೇ ಹೇಳಿಕೊಂಡಿರುವನು.

ಅದರಲ್ಲೂ ವರ್ಡ್ಸ್‌ವರ್ತ ಕವಿಯ ಕೃತಿಗಳು ಆತ್ಮ ಸಂತೋಷವನ್ನೂ ಸಹೃದಯ ಸುಖವನ್ನೂ ಅವನಿಗೆ ನೀಡಿದವು. ಆಂತರಿಕವಾಗಿ ತತ್ವ ಮತ್ತು ಕಾವ್ಯಗಳನ್ನು ಒಗ್ಗೂಡಿಸಲು ಯತ್ನಿಸುತ್ತಿದ್ದಂತೆ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿ ಮಿಲ್ಲನು ಸಮತೋಲನವನ್ನು ಮತ್ತು ನಿರ್ದಿಷ್ಟತೆಯನ್ನು ಕಳೆದುಕೊಂಡನೆಂಬುದನ್ನು ಅವನ ಹಿರಿಯ ಸ್ನೇಹಿತರು ಸ್ವಲ್ಪ ಖೇದ ಆಶ್ಚರ್ಯಗಳಿಂದ ಈಕ್ಷಿಸಿದರು. ಕೇವಲ ಬೌದ್ಧಿಕತೆಯನ್ನೇ ಮುಂದುಮಾಡಿ ಭಾವನಾವಿಶೇಷಗಳನ್ನು ಬತ್ತಿಸ ಹೊರಟ ಅವನ ಬಾಲ್ಯ ವಿದ್ಯಾಭ್ಯಾಸವೇ ಇದಕ್ಕೆ ಕಾರಣ. ಯಾವುದೇ ಸಮಗ್ರ ತತ್ವದಲ್ಲಿ ಪ್ರಜ್ಞೆಯಷ್ಟೇ ಭಾವನೆಗೂ ತರ್ಕದಷ್ಟೇ ಕಾವ್ಯಕ್ಕೂ ಸಹಜತೆಯಷ್ಟೇ ಕಲ್ಪನೆಗೂ ಸ್ಥಾನವಿರುವದು ಅತ್ಯವಶ್ಯಕವೆಂದು ಸ್ನೇಹಿತನೊಬ್ಬನಿಗೆ ಬರೆದ ಪತ್ರದಲ್ಲಿ ಕಾಣಿಸಿರುವುದು ಶುದ್ಧ ಬೌದ್ಧಿಕವಾದದಿಂದ ಹೊರಬಿದ್ದುದನ್ನು ಸಕಾರಣವಾಗಿ ಸೂಚಿಸುತ್ತದೆ. ಇಲ್ಲಿಂದ ಮುಂದೆ ಜಾನ್ ಸ್ಟೂಅರ್ಟನು ವ್ಯಕ್ತಿವೈಶಿಷ್ಟ್ಯಗಳನ್ನೊಳಗೊಂಡ ತನ್ನದೇ ಆದ ನೈತಿಕ ಸಾಮಾಜಿಕ ತತ್ವಗಳನ್ನು ರೂಪಿಸಲು ಉಪಕ್ರಮಿಸಿದನು.

## III

ಜಾನನ ಜೀವನದಲ್ಲಿ, ಅವನ ಬುದ್ಧಿವಿಕಾಸದಲ್ಲಿ ಜರುಗಿದ ಒಂದು ಮಹತ್ವದ ಘಟನೆಯೆಂದರೆ ಅವನು ೧೮೩೦ರಲ್ಲಿ ಜಾನ್ ಟೇಲರ್ ಎಂಬ ವ್ಯಾಪಾರಸ್ಥನ ಹೆಂಡತಿ ಹ್ಯಾರೆಟ್ ಟೇಲರಳನ್ನು ಸಂಧಿಸಿದ್ದು. ೨೨ ವರುಷದ ಹ್ಯಾರೆಟಳು ಬಹು ಚೆಲುವೆ, ವಿದ್ಯಾವತಿ, ಆಧುನಿಕ ಅಭಿಪ್ರಾಯಗಳನ್ನು ಹೊಂದಿದವಳು ಎಂದು ಪರಿಚಿತಳಾಗಿದ್ದಳು. ಮಿಲ್ಲನು ಪರಿಚಯದ ಆರಂಭದಲ್ಲಿಯೆ ಹ್ಯಾರೆಟಳ ಕುಶಾಲಗ್ರಮತಿ, ಪಾಂಡಿತ್ಯ, ವಿನಯ, ಆತ್ಮೀಯತೆ ಇವುಗಳನ್ನು ಗಮನಿಸಿ ಅವಳದು ಅಸಾಧಾರಣ ವ್ಯಕ್ತಿತ್ವವೆಂದು ಮನಬಿಚ್ಚಿ ಆಡಿದನು. ಹಾರೆಟಳಾದರೋ ಮಿಲ್ಲನಲ್ಲಿ ಪ್ರಗತಿಹೊಂದಿದ ಮಾನವಕುಲದ ಆದರ್ಶ ವ್ಯಕ್ತಿಯನ್ನು ಕಂಡಳು. ಜಾನ್ ಟೇಲರನು ಇವರಿಬ್ಬರ ಸ್ನೇಹದ ಯಥಾರ್ಥವನ್ನು ತಿಳಿದು ವಸ್ತುಸ್ಥಿತಿಗೆ ಹೊಂದಿಕೊಂಡನು. ೧೮೩೬ರಲ್ಲಿ ಜಾನನು ತನ್ನ ಆರೋಗ್ಯಸುಧಾರಣೆಗೆಂದು ಯುರೋಪಿಗೆ ತೆರಳಲು ಟೇಲರಳೂ ಅವನನ್ನು ಹಿಂಬಾಲಿಸಿದಳು. ಈ ಸಂದರ್ಭದಲ್ಲಿ ಕಾರ್ಲೈಲ ಮಹನೀಯನು ಈ ರೀತಿ ಅಭಿಪ್ರಾಯ ಪಟ್ಟನು. "ಸಹಾನುಭೂತಿಯು ಅವರು ನಿಷ್ಪಾಪರು ಎಂದು ಹೇಳುತ್ತದೆ; ಆರೋಪಣೆಯು ಅವರು ಅಪರಾಧಿಗಳು ಎಂದು ಹೇಳುತ್ತದೆ." ಮಿಲ್ಲನ ಹೇಳಿಕೆಯಿಂದಲೂ, ಟೇಲರಳ ಸಂಯಮಯುತ ನಡೆವಳಿಕೆಯನ್ನು ಗಮನಿಸಿಯೂ ಬಹುಶಃ ಸಹಾನುಭೂತಿಯ ಹೇಳಿಕೆಯೆ ಸರಿಯೆಂದು ನಂಬಬಹುದು. ಅಕಾಲಮರಣಕ್ಕೆ ಟೇಲರನು ತುತ್ತಾಗಲು ೧೮೫೧ರಲ್ಲಿ ಮಿಲ್ ಮತ್ತು ಟೇಲರರಿಬ್ಬರೂ ನಿರಾಡಂಬರದಿಂದ ಮದುವೆಯಾದರು. ಇಂತಹ ವಿಷಯಗಳಲ್ಲಿ ಅಮಿತ ಆಸಕ್ತಿಯನ್ನು ತೋರುವುದು ಅಸಾಧು, ಅಧಿಕಪ್ರಸಂಗತನವೆಂದಿಷ್ಟೇ ಹೇಳಿ ಮಿಲ್ಲನಿಗೆ ಮಾನವತೆಯ ಬಗ್ಗೆ ಅಪಾರವಾದ ಭಾವೋದ್ರೇಕವನ್ನೂ ವಸ್ತುಸ್ಥಿತಿಯ ಅರಿವನ್ನೂ, ಸ್ತ್ರೀಸಹಜವಾದ ವ್ಯವಹಾರ

ಚಾತುರ್ಯವನ್ನೂ ಟೇಲರಳು ತಂದುಕೊಟ್ಟುದು ಅವಳಿಗಾಗಿ ಅವನು ವ್ಯಕ್ತಪಡಿಸಿದ ಅತಿಶಯ ಕೃತಜ್ಞತೆಯ ಕಾರಣವೆಂದು ಸುಲಭವಾಗಿ ಊಹಿಸಬಹುದು. ಅವನ ಅನೇಕ ಕೃತಿರಚನೆಯಲ್ಲಿ ಅವಳು ಸಹಕರಿಸಿ ನೆರವು ನೀಡಿದುದನ್ನು ಆತ್ಮಚರಿತ್ರೆಯಲ್ಲಿ ಸ್ಪಷ್ಟವಾಗಿ ಕಾಣಿಸಿರುವನು. ಪ್ರಸ್ತುತ ಅನುವಾದಿತ ಗ್ರಂಥ 'ಸ್ವಾತಂತ್ರ್ಯವನ್ನು ಕುರಿತಾದ ಪ್ರಬಂಧ'ವು ಮಿಲ್ಲನ ಹೇಳಿಕೆಯಂತೆ ಟೇಲರಳಿಂದ ಸ್ಫೂರ್ತಿ ಪಡೆದು, ವಿವರಾಂಶಗಳಲ್ಲಿಯೂ ಅವಳ ಅಸಾಧಾರಣ ಬುದ್ಧಿಭಾವನಾ ಸಂಪತ್ತಿಯನ್ನು ಒಳಗೊಂಡಿದೆ. ಬಹು ಸಮಂಜಸವಾಗಿಯೇ ಈ ಗ್ರಂಥವನ್ನು ಅವಳ ಸವಿನೆನಪಿಗಾಗಿ ಅರ್ಪಿಸಿರುವನು. ಮಿಲ್ಲನ ಸ್ವಾತಂತ್ರ್ಯ ಪ್ರಬಂಧದ ನಂತರದ ಕೃತಿ 'ಸ್ತ್ರೀಯರ ದಾಸ್ಯ'ದಲ್ಲಿ ಟೇಲರಳ ಪರಿಣಾಮಕಾರಿ ಪ್ರಭಾವವನ್ನು ನಿಸ್ಸಂದಿಗ್ಧವಾಗಿ ನೋಡಬಹುದು. ಅದರ ನಿರ್ಮಾಪಕತ್ವ ಬಹುಮಟ್ಟಿಗೆ ಇವಳದೇ; ಮಿಲ್ಲನು ಅವಿಕಾರನೆಂದರೂ ಸಲ್ಲುವುದು. ಆಧುನಿಕಯುಗದ ಸ್ತ್ರೀ ಸ್ವಾತಂತ್ರ್ಯ ಚಳುವಳಿಯು ಈ ಕಾಲದಿಂದ ಆರಂಭವಾಯಿತೆನ್ನಬಹುದು. ಜಾನ್ ಮಿಲ್ ಮತ್ತು ಟೇಲರರ ಅಪೂರ್ವ ದಾಂಪತ್ಯವು ೧೮೫೮ರ ವರೆಗೂ ಸಾಗಿತು. ಅದೇ ವರುಷ ಟೇಲರಳು ಆಕಸ್ಮಿಕ ಮರಣವನ್ನೈದಳು. ಈ ಆಘಾತದಿಂದುಂಟಾದ ಅಪಾರ ನಷ್ಟವನ್ನು ಮಿಲ್ಲನು ಮೂಕನಾಗಿ ಮೌನದಿಂದ ಸಹಿಸಿದನು. "ಅತ್ಯಂತ ಅಸ್ಪಷ್ಟವಾಗಿಯಾದರೂ ಆ ಹಾನಿಯು ಎಷ್ಟೆಂಬುದನ್ನು ನಾನು ವಿವರಿಸಲಾರೆ. ನನ್ನ ಮಿಕ್ಕ ಜೀವಿತಕಾಲವನ್ನು ಅವಳು ಉದ್ದೇಶಿಸಿದ್ದ ಕಾರ್ಯಸಾಧನೆಗೆ ಅವಳ ಸ್ಮರಣೆಯಿಂದ ಒದಗಿ ಬರುವ ಉತ್ಸಾಹದಿಂದ ಯತ್ನಿಸುತ್ತೇನೆ." ಈ ಮಾತುಗಳಲ್ಲಿ ಅವನ ದುಃಖದ ಆಳವನ್ನು ಕಂಡುಕೊಳ್ಳಬಹುದು.

## IV

ಔದ್ಯೋಗಿಕ ಕ್ರಾಂತಿಯ ಪರಿಣಾಮಗಳು ಇಂಗ್ಲೆಂಡಿನ ಆರ್ಥಿಕ-ರಾಜಕೀಯ ವ್ಯವಸ್ಥೆಯ ಮೇಲೆ ಹತ್ತೊಂಬತ್ತನೇ ಶತಮಾನದ ಆರಂಭದ ದಶಕದಲ್ಲಿಯೇ ಕಂಡುಬಂದವು. ಇದರಿಂದ ಉದ್ಭವಿಸಿದ ರಾಜಕೀಯ-ಸಾಮಾಜಿಕ ಅಸಂತುಷ್ಟಿಯನ್ನು ಮತ್ತು ದುಷ್ಪರಿಣಾಮವನ್ನು ನೀಗಲು ಸುಧಾರಣಾ ಚಳುವಳಿಯು ಬೆಂಥಮ್ ಮತ್ತು ಜೇಮ್ಸ್ ಮಿಲ್ ಇವರ ದಿಗ್ದರ್ಶನದಲ್ಲಿ ನಡೆಯುತ್ತಿತ್ತು. ಸಂಪೂರ್ಣ ಸಹಾನುಭೂತಿಯಿಂದ ಜಾನ್ ಮಿಲ್ಲನು ಈ ಚಳುವಳಿಯಲ್ಲಿ ಧುಮುಕಿದನು. ತತ್ಸಂಬಂಧದಲ್ಲಿ ೧೮೩೧-೩೨ರಲ್ಲಿ "ಯುಗಧರ್ಮ" ಎಂಬ ಶೀರ್ಷಿಕೆಯಲ್ಲಿ ಐದು ಪ್ರಮುಖ ಲೇಖನಗಳನ್ನು ಪ್ರಕಟಿಸಿದನು. ಇದನ್ನು ಓದಿದ ಕಾರ್ಲೈಲನು "ಇಕೋ! ಇಲ್ಲಿ ಒಬ್ಬ ಹೊಸ ಅನುಭಾವಿ ಇರುವನು" ಎಂದು ಉದ್ಗರಿಸಿದನು. ಅಂದಿನ ಕಾಲಕ್ಕೆ ವಾಮಪಕ್ಷದ ಅಭಿಪ್ರಾಯಗಳೆಂದು ತಿಳಿಯಲಾಗಿದ್ದ ಸೇಂಟ್ ಸೈಮನ್, ಆಗಸ್ಟ ಕಾಮ್‌ಟೆ ಮುಂತಾದವರ ವಿವೇಚನೆಯಿಂದ ಮಿಲ್ಲನು ಪ್ರಭಾವಿತನಾಗಿ ಸಮತಾವಾದವು ಸಮಾಜದ ವಿಕಾಸದಲ್ಲಿ ಅಂತಿಮ ಸ್ವರೂಪವೆಂಬ ನಂಬಿಕೆಗೆ ಬಂದು ಮುಟ್ಟಿದನು. ವಿಕಾಸದ ಮಾರ್ಗದಲ್ಲಿ ಅಲ್ಲದಿದ್ದರೂ ಒಂದು ರೀತಿಯ ಸಮತಾವಾದವು ಅನಿವಾರ್ಯ, ಅವಶ್ಯಕ. ಸಮತಾವಾದಿಗಳ

ಬರವಣಿಗೆಯಿಂದ ಇತಿಹಾಸದಲ್ಲಿ ಒಂದು ಕ್ರಮ, ಗತಿ, ಸೂತ್ರ ಇರುವುದೆಂಬುದನ್ನು ಕಂಡುಕೊಂಡದ್ದು ಮಿಲ್ಲನಿಗೆ ಆದ ಪರಮಲಾಭ. ಸಮಾಜದ ಬೆಳವಣಿಗೆಯಲ್ಲಿ ಕೆಲವು ಸ್ವಾಭಾವಿಕ ಹಾಗೂ ನಿರ್ದಿಷ್ಟ ಘಟ್ಟಗಳಿವೆ, ಸಮಾಜದ ಆಚಾರ–ವಿಚಾರಗಳು, ತತ್ವ–ಭಾವನೆಗಳು, ಸ್ವರೂಪ–ಸಂಘಟನೆಗಳು ಸ್ತಿಮಿತಗೊಂಡು, ಇವು ಅಬಾಧಿತ ಸತ್ಯವೋ ಎಂಬಂತೆ ತೋರುವ ಕಾಲಗಳು ಉಂಟು. ಇಂತಹ ಕಾಲಗಳ ನಡುವಿನ ಕಾಲವೇ ಸ್ಥಿತ್ಯಂತರಯುಗ. ಮಧ್ಯಯುಗದಲ್ಲಿ ಕ್ರಿಶ್ಚಿಯನ್ ಧರ್ಮವು ಸಂಪೂರ್ಣವಾಗಿ ತನ್ನ ರೀತಿ–ನೀತಿಗಳನ್ನು ಸ್ಥಾಪಿಸಿದ್ದ ಕಾಲ. ಮಾರ್ಟಿನ್ ಲೂಥರನಿಂದ ಪ್ರಾರಂಭಿಸಲ್ಪಟ್ಟ ಕ್ರಾಂತಿಯು ಮಧ್ಯಯುಗದ ನಂಬಿಕೆಗಳ ಬುನಾದಿಯನ್ನೇ ಅಲ್ಲಾಡಿಸಿ ಒಂದು ರೀತಿಯ ಅನಿಶ್ಚಿತತೆಯ ವಾತಾವರಣವನ್ನು ನಿರ್ಮಿಸಿತು. ರಾಷ್ಟ್ರೀಯ–ರಾಜ್ಯಗಳ, ಹೊಸ ಭೂ–ಒಡೆಯ ವರ್ಗದ ಉದಯದಿಂದ ಒಂದು ಸ್ತಿಮಿತ ಸ್ಥಿತಿ ಏರ್ಪಟ್ಟಂತೆ ಕಂಡಿತು. ಜಾನ್‌ಲಾಕ್, ಡೆಸ್‌ಕಾರ್ಟಿಸ್ ಇವರುಗಳೇ ಸ್ಥಿಮಿತಗೊಂಡ ೧೭–೧೮ನೇ ಶತಮಾನದ ಯುರೋಪು ಸಮಾಜದ ಉತ್ಕೃಷ್ಟ ಪ್ರತಿನಿಧಿಗಳು. ಔದ್ಯೋಗಿಕ ಕ್ರಾಂತಿಯು ಮತ್ತೊಮ್ಮೆ ಯುಗಧರ್ಮವನ್ನು ಬದಲಿಸುವಂತೆ ಪ್ರೇರೇಪಿಸುತ್ತಿರುವ ಮಹಾಶಕ್ತಿಯೆಂದು ಮಿಲ್ಲನು ಆರಂಭದಲ್ಲಿಯೇ ಕಂಡುಕೊಂಡನಲ್ಲದೆ ತಾನು ಅಂತಹ ಪರ್ವಕಾಲದಲ್ಲಿರುವೆನೆಂದು ಪೂರ್ಣ ಅರಿತಿದ್ದನು. ಕದಡಿದ ಅಶಾಂತಿಯಿಂದ ಕೂಡಿದ ೧೯ನೇ ಶತಮಾನವು ಒಂದು ವಿಧದ ಸಮಾಜವಾದದಲ್ಲಿ ಪರ್ಯವಸಾನ ಹೊಂದುವದೆಂಬುದು ಅವನ ಗ್ರಹಿಕೆ. ಬಹುಶಃ ಈ ಐತಿಹಾಸಿಕ ವಿಶ್ಲೇಷಣೆಯ ಸೂತ್ರದಲ್ಲಿ ಮಾರ್ಕ್ಸನು ಅದೇ ಸಮಯಕ್ಕೆ ಪ್ರತಿಪಾದಿಸಲಿದ್ದ ಇತಿಹಾಸದ ಭೌತಿಕ ವ್ಯಾಖ್ಯೆಯ ಛಾಯೆಯನ್ನು ಕಾಣಬಹುದೆಂದು ನಮಗೆ ಅನಿಸುತ್ತದೆ. ಮಾನವನ ಇತಿಹಾಸವು ನಿರಂತರ ಪ್ರಗತಿಯ ಪ್ರಬಂಧ ಎಂಬ ಅಭಿಪ್ರಾಯವನ್ನು ಮಿಲ್ಲನು ಅನುಮೋದಿಸಿದುದು ಸ್ಪಷ್ಟವು.

ಜೆರಮಿ ಬೆಂಥಮ್ (೧೮೩೨) ಮತ್ತು ಜೇಮ್ಸ ಮಿಲ್ (೧೮೩೬) ಇವರ ಮರಣಾನಂತರ ಜಾನನು ವಿಜ್ಞಾನವಾದಿಗಳ ಆಚಾರ್ಯನೆಂದು ಪುರಸ್ಕರಿಸಲ್ಪಡದಿದ್ದರೂ ಆ ಗುಂಪಿನ ಪ್ರಮುಖ ಪ್ರತಿಪಾದಕನೆಂದೆನಿಸಿಕೊಂಡನು. ೧೮೪೦ರಲ್ಲಿ ಜಾನನು ಬೆಂಥಮ್ ಮತ್ತು ಜೇಮ್ಸರ ತತ್ವಗಳನ್ನು ಉಗ್ರ ಟೀಕೆಗೆ ಗುರಿಪಡಿಸಿದುದು, ಇವನು ಬೌದ್ಧಿಕವಾದದಿಂದ ಸಿಡಿದು ಹೋದನೆಂಬ ಕಲ್ಪನೆಯನ್ನು ತಂದುಕೊಟ್ಟಿತು. ತಾತ್ವಿಕ ನೆಲೆಯನ್ನು ಅರಿತುಕೊಳ್ಳಲು ಶ್ರಮಿಸುವ ಎಲ್ಲ ಚಿಂತಕರದೂ ಇದೇ ಪಾಡು. ಅವನು ಫ್ರೆಂಚ್ ಸಮಾಜ ವಿಜ್ಞಾನಿ ಟಾಕ್‌ವೆಲ್‌ನ 'ಅಮೇರಿಕದ ಪ್ರಜಾಪ್ರಭುತ್ವ' ಎಂಬ ಗ್ರಂಥವನ್ನು ಇದೇ ಕಾಲದಲ್ಲಿ ಆಮೂಲಾಗ್ರವಾಗಿ ಅಭ್ಯಸಿಸಿದನು. ಇದರಿಂದ ಗಂಭೀರ ಪ್ರಶ್ನೆಗಳಿಗೆ ಹುಡುಕುತ್ತಿದ್ದ ಉತ್ತರವು ಅವನಿಗೆ ದೊರಕಿದುದರ ಫಲವಾಗಿ ಮತ್ತೊಮ್ಮೆ ವಿಜ್ಞಾನವಾದವನ್ನು ಹೊಸ ರೀತಿಯಿಂದ ಎತ್ತಿ ಹಿಡಿಯುವ ನವಚೈತನ್ಯವು ಮೂಡಿಬಂದಿತು. ಈ ಅವಧಿಯಲ್ಲಿಯೇ ಜಾನ್ ಮಿಲ್ಲನು ಒಂದು ದೃಢನಿರ್ಧಾರಕ್ಕೆ ಬಂದುದು: ಕೇವಲ ಉಪಯುಕ್ತತೆಯೇ ಸಮಾಜದ ಮತ್ತು ಸರಕಾರದ ಸಂಬಂಧ–

ವಿಷಯಕಗಳಲ್ಲಿ ತಳಹದಿಯಾಗಲಾರದು, ಹೆಗ್ಗುರಿಯೂ ಆಗಲಾರದು. ಎಷ್ಟೇ ವಿರೋಧ ಬಂದರೂ ತಾನು ಕಂಡ ಸತ್ಯವನ್ನು ನಿಸ್ಸಂಕೋಚವಾಗಿ ಪ್ರಕಟಿಸಬೇಕು, ಅದಕ್ಕಾಗಿ ಶ್ರಮಿಸಬೇಕು. ಈ ಸತ್ಯಶೋಧನ ದೃಷ್ಟಿ, ತತ್ವಾನ್ವೇಷಣೆ ಅವನ ಎಲ್ಲ ಗ್ರಂಥಗಳಲ್ಲೂ ಎದ್ದು ಕಾಣುವುದು.

"ನಿನ್ನ ವ್ಯಕ್ತಿತ್ವದ ವೈಶಿಷ್ಟ್ಯವನ್ನು ತಿಳಿದುಕೊಂಡು ಅದರ ಪರಿಧಿಯಲ್ಲಿಯೇ ಬದುಕಿ ಬಾಳು.... ಇಲ್ಲಿರುವವರೆಗೂ ಪ್ರತಿಯೊಬ್ಬರೂ ಒಂದೊಂದು ಪಾತ್ರವನ್ನು ನಿರ್ವಹಿಸಬೇಕು. ಅದನ್ನು ನಿರ್ವಹಿಸುವುದರಲ್ಲಿ ಉತ್ಸಾಹವನ್ನು, ಉದ್ಯಮವನ್ನು ತೋರುವುದು ಅತ್ಯವಶ್ಯಕ" ಯಾವ ಅದ್ವಿತೀಯ ಚಿಂತಕನಾದರೂ ಇದಕ್ಕೂ ಮಿಗಿಲಾದುದನ್ನು ಏನು ಹೇಳಿಯಾನು? ಹೇಳುವುದಾದರೂ ಹೇಗೆ ಸಾಧ್ಯ?

## V

ಜಾನ್ ಸ್ಟೂಅರ್ಟ ಮಿಲ್ಲನು ರಚಿಸಿದ ಬಹುಮುಖ ಸಾಹಿತ್ಯವನ್ನು ಸ್ಥೂಲವಾಗಿ ಅವಲೋಕಿಸುವ ಪೂರ್ವದಲ್ಲಿ ಅವನು ತನ್ನ ಜೀವಿತದ ಕೊನೆಯ ವರುಷಗಳಲ್ಲಿ ಎಸಗಿದ ಸಾರ್ವಜನಿಕ ಕಾರ್ಯವನ್ನು ಈ ಸಂಧಿಯಲ್ಲಿ ನಾವು ನೋಡಬಹುದು. ಮಿಲ್ಲನು ಇಂಗ್ಲೆಂಡಿನ ಅಂದಿನ ಸಾಹಿತ್ಯಕ್ಷೇತ್ರದಲ್ಲಿ ಬಹುಬೇಗನೆ ಸ್ಥಾನವನ್ನು ಗಳಿಸಿ, ಉದಾರವಾದಕ್ಕೆ ತಾತ್ವಿಕ ಹಿನ್ನೆಲೆಯನ್ನು ನಿರ್ಮಿಸಿದ ವಿವೇಚಕನೆಂದು ಪ್ರಸಿದ್ಧನಾಗಿದ್ದನು. ಎಲ್ಲ ಕ್ಷೇತ್ರಗಳಲ್ಲಿ, ಎಲ್ಲ ರಂಗಗಳಲ್ಲಿ, ಎಲ್ಲ ಸಮಸ್ಯೆಗಳಲ್ಲಿ ಮಿಲ್ಲನು ತನ್ನ ವಿವೇಕದ ವರ್ಚಸ್ಸನ್ನು ಬೀರದಿರಲಿಲ್ಲ. ಅವನದು ಯಾವ ವಿಷಯದಲ್ಲೂ ಮಾನವೀಯತೆಯಿಂದ ಕೂಡಿದ ಬೌದ್ಧಿಕತೆ, ಸದ್ಭಾವನೆಯಿಂದ ಕೂಡಿದ ಶುದ್ಧ ತಾರ್ಕಿಕತೆ, ಅತಿರೇಕದ ಎರಡೂ ಅವಸ್ಥೆಗಳನ್ನು ಬಿಟ್ಟುಕೊಟ್ಟ ಮಧ್ಯಮಮಾರ್ಗ.

ಪಾರ್ಲಿಮೆಂಟಿನ ಸದಸ್ಯತ್ವಕ್ಕೆ ಸ್ಪರ್ಧಿಸಲು ವೆಸ್ಟಮಿನಿಸ್ಟರ್ ಮತದಾರ ಸಂಘದ ಲಿಬರಲ್ ಪಕ್ಷದ ಜನರು ೧೮೬೫ರಲ್ಲಿ ಮಿಲ್ಲನಿಗೆ ಆಹ್ವಾನವನಿತ್ತರು. ಮಿಲ್ಲನು ಬಹು ಕಟ್ಟುನಿಟ್ಟಾದ ನಿಯಮಗಳನ್ನು ಆಹ್ವಾನ ಸ್ವೀಕರಿಸುವ ಪೂರ್ವದಲ್ಲಿ ಹಾಕಿದನು. ನಿರ್ವಾಚನವು ನಡೆಯುವ ಎಲ್ಲ ಸಮಯದಲ್ಲೂ ಸ್ಪರ್ಧಾಳುಗಳು ಅವನ ನಿಯಮಗಳನ್ನು ಪಾಲಿಸಿದರೆ ಪ್ರಜಾಪ್ರಭುತ್ವದ ಅದೆಷ್ಟೋ ಸಮಸ್ಯೆಗಳು ಮಾಯವಾದಾವು! ಇಷ್ಟಾದರೂ ಮಿಲ್ಲನನ್ನು ಆ ಮತದಾರಕ್ಷೇತ್ರವು ಆರಿಸಿ ಸಂಸತ್ತಿಗೆ ಕಳುಹಿತು. ಸಂಸತ್ತಿನಲ್ಲಿ ಕಾರ್ಮಿಕರ ಮೇಲಿನ ಆರೋಪಗಳಲ್ಲಿ ತಥ್ಯಾಂಶವಿಲ್ಲವೆಂಬುದನ್ನು ಯಥೋಚಿತವಾಗಿ ಕಾಣಿಸಿಕೊಟ್ಟು ಅವರಿಗೆ ಹೆಚ್ಚಿನ ಪ್ರಾತಿನಿಧ್ಯವು ದೊರಕುವುದರ ಅವಶ್ಯಕತೆಯನ್ನು ಬಿಂಬಿಸಿ ಹೇಳಿದನು. ಇದಲ್ಲದೆ ಇನ್ನೂ ಅನೇಕ ವಿಷಯಗಳ ಚರ್ಚೆಯಲ್ಲಿ ಟೋರಿ ಸರಕಾರದ ನಿಲುಮೆಯನ್ನು ನಿರ್ದಾಕ್ಷಿಣ್ಯವಾಗಿ ಟೀಕೆಗೆ ಗುರಿಪಡಿಸಿದನು. ಸ್ತ್ರೀಯರಿಗೆ ಮತದಾನದ ಹಕ್ಕಿರಬೇಕೆಂಬುದನ್ನು ಸೂಚ್ಯವಾಗಿ, ಠರಾವಿಗೆ ತಿದ್ದುಪಡಿಯೊಂದನ್ನು ಮಾಡುವ ರೀತಿಯಲ್ಲಿ, ಮಂಡಿಸಿದನು. ಸಾರ್ವಜನಿಕ ಜೀವನದಲ್ಲಿ ನೀತಿಯ ಮಟ್ಟವನ್ನು

ಹೆಚ್ಚಿಸಲು ಕಳಕಳಿಯಿಂದ ಶ್ರಮಿಸಿದನು. ಪಾರ್ಲಿಮೆಂಟಿನಲ್ಲಿ ಎಲ್ಲ ಸದಸ್ಯರೂ ಮಿಲ್ಲನ ಮಾತುಗಳನ್ನು ಗೌರವಾಸಕ್ತಿಗಳಿಂದ ಆಲಿಸುತ್ತಿದ್ದರು. ಅತ್ಯಂತ ನಿರ್ಲಿಪ್ತತೆಯಿಂದ ತನ್ನ ವಾದವನ್ನು ಅವನು ಮಂಡಿಸುತ್ತಿದ್ದನೆಂದು ಗ್ಲ್ಯಾಡ್‌ಸ್ಟನ್ ಮಹಾಶಯನು ಬರೆದಿಟ್ಟಿರುವನು– ಅವನ ಮಾತುಗಳು ಮುತ್ಥಳಿಯಿಂದ ಬಂದಂತೆ ಭಾಸವಾಗುತ್ತಿತ್ತಂತೆ! ೧೮೬೮ರ ಸಾರ್ವತ್ರಿಕ ಚುನಾವಣೆಯಲ್ಲಿ ಕೆಲವು ಕಾರಣಗಳಿಂದಾಗಿ ಮಿಲ್ಲನು ಆಯ್ಕೆಹೊಂದಲಿಲ್ಲ. ಕೂಡಲೆ ಜಾನನು ಅವಿಗಾನಿನ್‌ನ ತನ್ನ ನಿವಾಸಕ್ಕೆ ತೆರಳಿ ಸಾರ್ವಜನಿಕ ಜೀವನದಿಂದ ನಿವೃತ್ತನಾದನು.

ಅರವತ್ತು ವರುಷಕ್ಕೂ ಮಿಕ್ಕ ಜೀವಿತದಲ್ಲಿ ಬಾಲ್ಯದಿಂದಲೂ ಅವಿಶ್ರಾಂತವಾಗಿ ದುಡಿದುದರ ಫಲವಾಗಿ ಮಿಲ್ಲನ ಆರೋಗ್ಯವು ಮೇಲಿಂದಮೇಲೆ ಕೆಡಲಾರಂಭಿಸಿತು. ಆದರೂ ಜಾನನು ಬೌದ್ಧಿಕ ಚಟುವಟಿಕೆಗಳಿಂದ ವಿಮುಖನಾಗಲೇ ಇಲ್ಲ. ಹೊಸ ಕೃತಿಗಳನ್ನು ರಚಿಸಿದುದಲ್ಲದೆ ಬಹು ವಾದ–ವಿವಾದಗಳಿಗೆಡೆ ಮಾಡಿ ಕೊಟ್ಟ ಧರ್ಮ–ಮತ ವಿಷಯಕವಾದ ಅವನ ಕೊನೆಯ ಅಭಿಪ್ರಾಯವನ್ನು ಬರೆದಿಟ್ಟನು. ೧೮೭೩ರಲ್ಲಿ, ಮೇ ೮ ರಂದು, ಜಾನ್‌ಸ್ಟೂಅರ್ಟನು ವಿಧಿವಶನಾದನು. ಮಿಲ್ಲನ ಮರಣವಾರ್ತೆಯನ್ನು ಕೇಳಿ ಉದಾರವಾದಿ ಜಾನ್ ಮಾರ್ಲೆಯು 'ಇಂದು ಒಬ್ಬ ಮಹಾಪುರುಷನು ಕಣ್ಮರೆಯಾದನು' ಎಂದು ನಿಟ್ಟುಸಿರುಬಿಟ್ಟನು.

ಮಿಲ್ಲನದು ಅದ್ಭುತ ವ್ಯಕ್ತಿತ್ವ, ಅಸಾಧಾರಣ ಚೈತನ್ಯ, ಅಪಾರ ಸಂಯಮಶೀಲತೆ, ನಿರಾಡಂಬರ ಜೀವನ, ಋಜು ಸ್ವಭಾವ. ಅವನ ಸಮಕಾಲೀನರೆಲ್ಲರೂ ಮಿಲ್ಲನ ಈ ಗುಣಗಳನ್ನು ಕುರಿತು ಬಹು ಮೆಚ್ಚಿಕೆಯಿಂದ ನುಡಿದಿರುವರು. ಗ್ಲ್ಯಾಡ್‌ಸ್ಟನ್ ಮಹಾಶಯನು ಮೊದಲೊಮ್ಮೆ ಮಿಲ್ಲನನ್ನು ಕುರಿತು ಅವನ ಬಹುಮುಖ ಜೀವನವನ್ನು ತಾತ್ಪರ್ಯರೂಪದಲ್ಲಿ ಯಥಾರ್ಥವಾಗಿ ಬಣ್ಣಿಸಿರುವುದನ್ನು ನೆನಪಿಗೆ ತಂದುಕೊಳ್ಳುವುದು ಈ ಸಂದರ್ಭಕ್ಕೆ ಉಚಿತ. ಅದೇಂದರೆ "ಮಿಲ್ಲನು ಬೌದ್ಧಿಕವಾದದ ದ್ರಷ್ಟಾರ."

## VI

ಸ್ಥಿತ್ಯಂತರಗಳ ಮೇಲೆ ಸ್ಥಿತ್ಯಂತರಗಳು, ಅಲೆಗಳ ಮೇಲೆ ಅಲೆಗಳು ಹಾದು ಹೋಗುವಂತೆ ಜರುಗುತ್ತಿರುವ ಇಂದಿನ ಕಾಲದಲ್ಲೂ ಮಿಲ್ಲನು ಬದುಕಿರುವುದು ಅವನ ವಿವಿಧ ಸಾಹಿತ್ಯನಿರ್ಮಿತಿಯಿಂದ; ವ್ಯಕ್ತಿಸ್ವಾತಂತ್ರ್ಯ ಶಬ್ದಕ್ಕೆ ವೈಜ್ಞಾನಿಕ ರೀತಿಯಲ್ಲಿ ನಿರ್ದಿಷ್ಟಾರ್ಥವನ್ನು ಕಲ್ಪಿಸಲು ಯತ್ನಿಸಿದುದರಿಂದ; ಸಾಮಾಜಿಕ ವಿವೇಚನೆಯಲ್ಲಿಯೂ ವಿಜ್ಞಾನದ ಅನುಸಂಧಾನಗಳು ಸಾಧ್ಯ ಎಂಬುದನ್ನು ತೋರಿಸಿಕೊಟ್ಟುದರಿಂದ. ಮಿಲ್ಲನು ಇನ್ನೂ ಹದಿನಾರು ವರುಷದವನಿರುವಾಗಲೇ ಬರವಣಿಗೆಗೆ ತೊಡಗಿ ೫೦–೫೫ ವರುಷಗಳ ವರೆಗೂ ಸಾಹಿತ್ಯಕ್ಷೇತ್ರದಲ್ಲಿ ಕೃಷಿಮಾಡಿದನು. ಪ್ರಾರಂಭದಲ್ಲಿ 'ವೆಸ್ಟಮಿನಿಸ್ಟರ್ ರೆವ್ಯೂ' 'ಲಂಡನ್ ರೆವ್ಯೂ' ಪತ್ರಿಕೆಗಳಲ್ಲಿ ತಪ್ಪದೆ ಉಗ್ರಗಾಮಿ ಪಕ್ಷದ ಅಭಿಪ್ರಾಯಗಳನ್ನು ಪ್ರಕಟಿಸುತ್ತಿದ್ದನು. ಬಹುಕಾಲ ಪರಿಶ್ರಮಿಸಿ ಬೆಂಥಮನ ಕೈಬರಹ ಪ್ರತಿಯ ಸಹಾಯದಿಂದ

೧೮೨೭ರಲ್ಲಿ 'ರಾಷನೇಲ್ ಆಫ ಜ್ಯುಡಿಷಿಯಲ್ ಎವಿಡೆನ್ಸ್' ಎಂಬ ಉದ್ಗ್ರಂಥವನ್ನು ಮುದ್ರಣಕ್ಕೆ ಸಿದ್ಧಪಡಿಸಿದನು. ೧೮೪೪ರಲ್ಲಿ 'ಪರಿಹಾರವಾಗದುಳಿದಿರುವ ಕೆಲವು ಆರ್ಥಿಕ ಪ್ರಶ್ನೆಗಳ ಪ್ರಬಂಧಗಳು' ಎಂಬ ಲೇಖನಸಂಕಲನಗಳು ಪ್ರಕಾಶಿತವಾದವು. ಮಿಲ್ಲನಿಗೆ ಪ್ರಶಸ್ತಿಯನ್ನು ತಂದುಕೊಟ್ಟ ಮೊದಲ ಗ್ರಂಥವೆಂದರೆ ೧೮೮೨ರಲ್ಲಿ ಪ್ರಕಟಿತವಾದ ಅವನ 'ತರ್ಕಶಾಸ್ತ್ರ.' ತರ್ಕಶಾಸ್ತ್ರ ಸಾಹಿತ್ಯದಲ್ಲಿ ಮಿಲ್ಲನ ಕೃತಿ ಅಭಿಜಾತಕೃತಿಯೆಂದು ಪರಿಗಣಿಸಲ್ಪಟ್ಟಿದೆ. ಈ ಗ್ರಂಥವು ಇಂದಿಗೂ ಅನೇಕ ಚಿಂತಕರ ಮೇಲೆ ತನ್ನ ವರ್ಚಸ್ಸನ್ನು ಹರಹಿದೆ. ಇದನ್ನು ಹಿಂಬಾಲಿಸಿ ೧೮೪೭ರಲ್ಲಿ 'ಅರ್ಥಶಾಸ್ತ್ರ'ವು ಹೊರಬಿದ್ದಿತು. ಇದೇ ಗ್ರಂಥದಲ್ಲಿ ಟೇಲರಳ ಪ್ರಭಾವವು ಮೊಟ್ಟಮೊದಲಿಗೆ ಕಂಡುಬರುವುದು. ಈ ವೇಳೆಗೆ ಜಾನ್ ಮಿಲ್ಲನು ತಾತ್ವಿಕನೆಂದೂ ವಿವೇಚಕನೆಂದೂ ಪ್ರಸಿದ್ಧಗೊಂಡಿದ್ದನು. ಇಲ್ಲಿಂದ ಮುಂದೆ ರಾಜ್ಯಶಾಸ್ತ್ರ ಮತ್ತು ನೀತಿಶಾಸ್ತ್ರಗಳ ಮೂಲಚಿಂತನೆಯನ್ನು ಮಾಡತೊಡಗಿದನು. ಧರ್ಮ, ಉಪಯುಕ್ತತೆ ಮತ್ತು ಸ್ವಾತಂತ್ರ್ಯ ಮುಂತಾದ ಕಲ್ಪನೆಗಳ ಅರ್ಥವ್ಯಾಪ್ತಿಯನ್ನು ವಿವೇಚಿಸಿದುದರ ಫಲವಾಗಿ 'ಸ್ವಾತಂತ್ರ್ಯವನ್ನು ಕುರಿತಾದ ಪ್ರಬಂಧ'ವು ಹೊರಬಿದ್ದಿತು. ಈ ಹಿಂದೆಯೇ ಕಾಣಿಸಿದಂತೆ ಮಿಲ್ಲನು ಈ ಪ್ರಬಂಧವನ್ನು ತಾನು ಮತ್ತು ಟೇಲರಳು ಕೂಡಿ ಬರೆದುದೆಂದು ಹೇಳಿರುವನು. 'ಸ್ತ್ರೀದಾಸ್ಯ'ದ ರಚನೆಯೂ ಇದೇ ಕಾಲಕ್ಕೆ ಸೇರುತ್ತದೆ. ಸ್ತ್ರೀದಾಸ್ಯವಿಮೋಚನೆಯ ಚಳುವಳಿಗೆ ರಾಷ್ಟ್ರೀಯ ಸ್ವರೂಪವನ್ನು ಈ ಕೃತಿಯು ತಂದು ಕೊಟ್ಟಿತು. ೧೮೫೮ರಲ್ಲಿ ಮಿಲ್ಲನು ತನ್ನ ಆತ್ಮಚರಿತ್ರೆಯನ್ನು ಮಲಮಗಳ ನೆರವಿನಿಂದ ಬರೆಯಲುಪಕ್ರಮಿಸಿದನು. 'ಉಪಯುಕ್ತತಾವಾದ'ವು ಮಿಲ್ಲನ ಮತ್ತೊಂದು ಪ್ರಸಿದ್ಧ ಹೊತ್ತಿಗೆ, ೧೮೬೧ರಲ್ಲಿ ಪ್ರಕಟವಾಯಿತು. ಕ್ಯಾಂಟನ ಸಿದ್ಧಾಂತವನ್ನು ಅಂದಿನ ಕಾಲಕ್ಕೆ ಇಂಗ್ಲೆಂಡಿನಲ್ಲಿ ಪ್ರತಿಪಾದಿಸುತ್ತಿದ್ದ ಅಲೆಗ್ಝಾಂಡರ್ ಹ್ಯಾಮಿಲ್ಟನನನ್ನು ಕುರಿತು ಬಹು ತೀಕ್ಷ್ಣಸ್ವರೂಪದ ವಿಮರ್ಶನ ಗ್ರಂಥವನ್ನು ಹೊರತಂದನು. ಕೆಲವು ಪಂಡಿತರು ಈ ವಿಮರ್ಶನ ಪುಸ್ತಕದಲ್ಲಿ ಸ್ವರೂಪಪ್ರಧಾನತರ್ಕ ಮತ್ತು ಗಣಿತತರ್ಕಗಳ ಆರಂಭವನ್ನು ನೋಡಬಹುದೆಂದು ಅಭಿಪ್ರಾಯಪಡುವರು. ಕೊನೆಯ ದಿನಗಳಲ್ಲಿ 'ಧರ್ಮದ ಮೇಲಿನ ಮೂರು ಪ್ರಬಂಧಗಳು– ಪ್ರಕೃತಿ, ಧರ್ಮದ ಉಪಯುಕ್ತತೆ, ದೇವವಾದ' ಮತ್ತು 'ಸಮಾಜವಾದದ ಮೇಲಿನ ಅಧ್ಯಾಯಗಳು' ಎಂಬ ಲೇಖನಗಳನ್ನು ಬರೆದಿಟ್ಟನು.

ಇವುಗಳ ಜೊತೆಗೆ ಮಿಲ್ಲನು ವಿವಿಧ ಪತ್ರಿಕೆಗಳಿಗೆ ತಪ್ಪದೇ ಲೇಖನಗಳನ್ನೂ ವಿಮರ್ಶೆಗಳನ್ನೂ ಬರೆಯುತ್ತಿದ್ದನೆಂಬುದನ್ನು ನೆನೆಸಿಕೊಂಡರೆ ಅವನ ಬರವಣಿಗೆಯ ಪ್ರಮಾಣವು ಹಿರಿದಾಗಿದ್ದಷ್ಟೇ ವೈವಿಧ್ಯಪೂರ್ಣವೂ ಆಗಿತ್ತೆಂದು ಒಪ್ಪಬೇಕು.

ಜಾನ್ ಮಿಲ್ಲನ ತತ್ವಗಳ ಸಮಗ್ರಸ್ವರೂಪದ ಸಮಾವಲೋಕನವು ಇಷ್ಟವೆನಿಸಬಹುದಾದರೂ ಪ್ರಸ್ತುತ ಪರಿಚಯಲೇಖನದಲ್ಲಿ ಔಚಿತ್ಯಕಾರಣಕ್ಕಾಗಿ ಬಿಟ್ಟು ಕೊಡಲಾಗಿದೆ. ಆದರೆ ಇಲ್ಲಿ ಅನುವಾದಿತವಾಗಿರುವ 'ಸ್ವಾತಂತ್ರ್ಯವನ್ನು ಕುರಿತಾದ ಪ್ರಬಂಧ'ದ ವಿಷಯವಾಗಿ ಪೀಠಿಕಾರೂಪದ ಕೆಲವು ಮಾತುಗಳನ್ನು ಹೇಳುವುದು ಅವಶ್ಯಕವೆನಿಸುತ್ತದೆ.

ತರ್ಕಶಾಸ್ತ್ರವನ್ನು ಹೊರತು ಪಡಿಸಿದರೆ ಬಹುಶಃ 'ಸ್ವಾತಂತ್ರ್ಯ'ವು ಮಿಲ್ಲನ ಗಂಭೀರ ಚಿಂತನೆಯ ಕೊಡುಗೆಯೂ ಅವನ ಆಳವಾದ ಆಲೋಚನೆಯ ಅಭಿವ್ಯಕ್ತಿಯೂ ಎಂದು ಪರಿಗಣಿಸಬಹುದು. ೧೮೫೪ರಿಂದಲೇ ಸಮಾಜ–ವ್ಯಕ್ತಿ ಸಂಬಂಧಗಳ ವಿಷಯದಲ್ಲಿ ವಿಚಾರಮಾಡತೊಡಗಿದ್ದ ಅವನ ಈ ಬರವಣಿಗೆಯು ಟೇಲರಳ ನೆರವು, ವಿಮರ್ಶೆಗಳಿಂದಾಗಿ ಸಂಪೂರ್ಣವಾಗಿ ಮಾರ್ಪಾಟು ಹೊಂದಿತು. ಸ್ವಾತಂತ್ರ್ಯ ಪ್ರಬಂಧವು ಅವನ ಅತ್ಯಂತ ಪ್ರಸಿದ್ಧ ಬರವಣಿಗೆಯೆಂದು ಇಂದಿಗೂ ಗಣಿಸಲ್ಪಟ್ಟು ಎಲ್ಲ ಪ್ರಮುಖ ಭಾಷೆಗಳಲ್ಲೂ ತರ್ಜುಮೆ ಮಾಡಲ್ಪಟ್ಟಿದೆ. ಮಿಲ್ಲನೇ ಇದನ್ನು ತನ್ನ ಮೇರುಕೃತಿಯೆಂದು ಭಾವಿಸಿದ್ದನು. ಇದರ ಹೊರತು ಮತ್ತಾವ ಬರವಣಿಗೆಯನ್ನೂ ಅತಿ ಮುಂಜಾಗ್ರತೆಯಿಂದ ಬರೆದುದಾಗಲಿ ಇಲ್ಲವೆ ಪುನಃ ಪುನಃ ಪರಿಶೀಲಿಸಿದುದಾಗಲಿ ಇಲ್ಲವೆಂದು ಹೇಳಿರುವನು. ಮಿಲ್ಲನ ಗ್ರಂಥಪರಿಚಯವಿರುವ ಅನೇಕರಿಗೆ ಈ ಗ್ರಂಥವೊಂದರಿಂದಲೇ ಅವನ ಪರಿಚಯ. ಏನೇ ಆದರೂ ಪ್ರಜಾಪ್ರಭುತ್ವವನ್ನು ಕುರಿತ ವಾಙ್ಮಯದಲ್ಲಿ ಮಿಲ್ಲನ 'ಸ್ವಾತಂತ್ರ್ಯವನ್ನು ಕುರಿತ ಪ್ರಬಂಧ'ವು ಒಂದು ಉನ್ನತ ಅಭಿಜಾತಕೃತಿ. ಸಮಾಜವಿಷಯಕವಾದ ಯಾವ ಕೃತಿಯನ್ನೂ ಕಾಲವೆಂಬುದು ಶಾಶ್ವತವಾಗಿಡಗೊಡದೆ ನೆನಪಿನಿಂದಲೂ ಹೊರಗಟ್ಟುವುದು. ೧೮–೧೯ನೇ ಶತಮಾನಗಳ ಹಿನ್ನೆಲೆಯಲ್ಲಿ ಬರೆದ ಈ ಗ್ರಂಥದ ಕೆಲವು ಭಾಗಗಳು ಇಂದು ಎಷ್ಟೂ ಅನ್ವಯಿಸಲಾರವೆಂಬುದು ಸ್ಪಷ್ಟ. ಆದರೆ ಈ ಪ್ರಬಂಧಕ್ಕೆ ಕೇವಲ ಈ ಚಾರಿತ್ರಿಕ ಪ್ರಾಮುಖ್ಯತೆಯಲ್ಲ, ಅದರಲ್ಲೂ ಚ್ಯುತಿ ಇಲ್ಲದ ಹಾಗೂ ಅತ್ಯಮೂಲ್ಯವಾದ ಸಾಮಾಜಿಕ–ನೈತಿಕ ಸಿದ್ಧಾಂತವೊಂದರ ಸಲುವಾಗಿ ನಿರಗ್ಗಳ ಮತ್ತು ಪರಿಶುದ್ಧವಾದ ಕಳಕಳಿಯ ಬಿನ್ನಹವಿದೆ.

ಸಮಾಜದಲ್ಲಿ ಹಾಗೂ ರಾಜ್ಯದಲ್ಲಿ ವ್ಯಕ್ತಿ ಸ್ವಾತಂತ್ರ್ಯದ ಪ್ರತಿಪಾದನೆಯೇ ಈ ಪ್ರಬಂಧದ ಮುಖ್ಯೋದ್ದೇಶ. ಆದರೆ ಸ್ವಾತಂತ್ರ್ಯದ ಮೇಲ್ಮೆಯನ್ನು, ಮೂಲ್ಯವನ್ನು, ಸಾರ್ಥಕತೆಯನ್ನು ಎತ್ತಿತೋರಿಸುವುದರಲ್ಲಿ ಕೇವಲ ನೈಷೇಧಿಕ ಮಾರ್ಗವನ್ನಾಗಲೀ, ವ್ಯವಹಾರಕ್ಕೆ ನಿಲುಕದ ಆದರ್ಶವಾದವನ್ನಾಗಲೀ ಅನುಸರಿಸಿಲ್ಲ, ಮುಂದಿಟ್ಟಿಲ್ಲ. ಸಮಾಜ, ಸರಕಾರಗಳ ನೆರವಿನಿಂದ ಮಾತ್ರ ಸ್ವಾತಂತ್ರ್ಯದ ಕಲ್ಪನೆ ಮತ್ತು ಅನುಭವ ಸಾಧ್ಯವೆಂಬುದನ್ನು ಮಿಲ್ಲನು ಉಚ್ಚರಿಸಿರುವನು. ಆದರೂ, ಸ್ವಾತಂತ್ರ್ಯಸಿದ್ಧಿಗಾಗಿ ರಾಜ್ಯದ ಮತ್ತು ವ್ಯಕ್ತಿಯ ಕಾರ್ಯಪರಿಧಿಗಳು ನಿರ್ದಿಷ್ಟಗೊಳಿಸಲ್ಪಡಬಹುದು, ನಿರ್ದಿಷ್ಟಗೊಳಿಸಲ್ಪಡುವುದು ಅಗತ್ಯ ಎಂಬುದು ಅವನ ಪ್ರಬಂಧದ ಮೂಲ ವಾದಾಂಶ. ಎರಡೂ ಕಾರ್ಯಕ್ಷೇತ್ರಗಳ ಬೇರ್ಪಡೆಯನ್ನು ಸಾಧಿಸದಿದ್ದರೆ ಸ್ವಾತಂತ್ರ್ಯವು ಪರಸೀಮಿತವಾಗುವುದೆಂಬುದು ಅವನ ನಿರ್ಧಾರ ಸ್ವರೂಪದ ಅಭಿಪ್ರಾಯ. ಪ್ರತಿಪಾದಿಸಿದ ರೀತಿಯಲ್ಲಿ ಮಿಲ್ಲನ ಸರಕಾರದ ಕರ್ತವ್ಯಗಳನ್ನು ಆದಷ್ಟು ಕನಿಷ್ಟಗೊಳಿಸಬೇಕೆಂಬ ಇಚ್ಛೆಯ ಧ್ವನಿ ಅಡಗಿದೆ. ಸಮಾಜವಾದಿಗಳಿಗೂ ಮಿಲ್ಲನಷ್ಟೇ ವ್ಯಕ್ತಿವೈಶಿಷ್ಟ್ಯ ಮತ್ತು ವ್ಯಕ್ತಿ ವಿಕಾಸ ಆದರ್ಶ, ಮೂಲ ಮೂಲ್ಯ. ಆದರೆ ಮಿಲ್ಲನು

ರಾಜಕೀಯ ಶಿಕ್ಷಣದಿಂದ ಮತ್ತು ಸಂಘಟನೆಯಿಂದ ಸಮಾಜವನ್ನು ಪ್ರಗತಿಪಥದಲ್ಲಿ ಸಾಗುವಂತೆ ಸಾಧಿಸುವುದು ಅಸಾಧ್ಯವೇನೂ ಅಲ್ಲ ಎಂದು ನಂಬಿದುದು ಮನುಷ್ಯನ ಮೂಲ ಸ್ವಭಾವವನ್ನಾಗಲಿ, ಸಂಘಟನೆಯ ಇತಿ–ಮಿತಿಗಳನ್ನಾಗಲಿ ಗಣನಾರ್ಹವೆಂದು ಗಮನಿಸಿದಂತೆ ತೋರುವುದಿಲ್ಲ. ಸ್ವಭಾವಧರ್ಮದ ಮಹತ್ವವನ್ನು ಕಡೆಗಣಿಸುವ ಹಾಗೂ ಸಂಘಟನಾಕ್ರಮವನ್ನು ಬದಲಿಸುವುದೊಂದರಿಂದಲೇ ಸಮಾಜ ಮತ್ತು ವ್ಯಕ್ತಿಗಳ ಉನ್ನತಿಯು ಸಾಧಿಸಲ್ಪಟ್ಟೇ ತೀರುವುದೆಂಬ ಸಮಾಜ ವಿಜ್ಞಾನಿಗಳ ನಂಬಿಕೆ ಆಶಾವಾದವೆನಿಸಬಹುದಾದರೂ ಪ್ರಮಾದದಲ್ಲಿ ಪರ್ಯವಸಾನ ಹೊಂದುವುದು.

ಮಿಲ್ಲನು ಉದಾರವಾದಿಯಾಗಿದ್ದಷ್ಟೇ ಪ್ರಜಾಪ್ರಭುತ್ವವಾದಿಯೂ ಆಗಿದ್ದನು. ರಾಜ್ಯಾಧಿಕಾರವನ್ನು, ಮತ್ತು ಸರಕಾರದ ಎಲ್ಲ ಚಲನವಲನಗಳನ್ನು ಸಂಶಯದೃಷ್ಟಿಯಿಂದ ನೋಡುವುದರಲ್ಲಿ, ಒಗ್ಗದೆಂದು ತೋರಿಬರುವ ರೀತಿಯಲ್ಲಿ ಪರೀಕ್ಷಿಸುವುದರಲ್ಲಿ ಮಿಲ್ಲನು ಉದಾರವಾದಿ. ಆದರೆ ಅವನು, 'ಸ್ವಾತಂತ್ರ್ಯ ಕುರಿತಾದ ಪ್ರಬಂಧ'ದಲ್ಲಿ ರಾಜ್ಯಾಧಿಕಾರ ಕ್ಷೇತ್ರವು ಸಹಜವಾಗಿದ್ದು ವ್ಯಕ್ತಿ ಸ್ವಾತಂತ್ರ್ಯದ ಸೀಮೆಯು ಹೆಚ್ಚು ವಿಸ್ತೃತವಾಗಬೇಕೆಂದು ಉದಾರವಾದಿಯ ರೀತಿಯಲ್ಲಿ ಹೇಳಿದ್ದಕ್ಕಿಂತಲೂ, ಸಮಾಜದ ಹಿಡಿತದಿಂದ, ಕಟ್ಟುಪಾಡುಗಳಿಂದ, ಅಭಿಪ್ರಾಯ ಬಿಗಿತದಿಂದ ವ್ಯಕ್ತಿಯ ಬಿಡುಗಡೆ ಅವಶ್ಯಕ, ವ್ಯಕ್ತಿಗೆ ಸ್ವಾತಂತ್ರ್ಯವಿರಬೇಕು ಎಂದು ಶಕ್ತಿಪೂರ್ಣವಾಗಿ ಪ್ರತಿಪಾದಿಸಿದನು. ಮಿಲ್ಲನ ಕಾಲಕ್ಕೆ ಸರಕಾರವು ಮಾಡುತ್ತಿದ್ದ ಕಾರ್ಯಗಳು ಇಂದಿನ ಮಾನದಿಂದ ಅತ್ಯಲ್ಪ. ಆದರೆ ಸಮಾಜದ ದಬ್ಬಾಳಿಕೆಯು ವ್ಯಕ್ತಿಗಳ ಮೇಲೆ ಉಗ್ರವಾಗಿತ್ತು. ವ್ಯವಹಾರದ ರೀತಿ–ನೀತಿಗಳಲ್ಲಿ, ನಡತೆ–ನುಡಿಗಳಲ್ಲಿ ವ್ಯಕ್ತಿಯ ಮೇಲೆ ಸಮಾಜವು ವಿಪರೀತ ನಿಯಂತ್ರಣವನ್ನು ಹಾಕಿತ್ತು. ಈ ನಿಬಂಧನೆಯಲ್ಲಿ ರಾಜ್ಯದ ದಬ್ಬಾಳಿಕೆಯಷ್ಟೇ ಕ್ರೂರವಾದುದನ್ನು, ಅಸಾಧುವಾದುದನ್ನು ಮಿಲ್ಲನು ಗುರುತಿಸಿದನು. ಸಮಾಜದ ಅಭಿಪ್ರಾಯಕ್ರೌರ್ಯದಿಂದ ವ್ಯಕ್ತಿಯ ಬಿಡುಗಡೆಯ ಬೇಡಿಕೆಯನ್ನು ಶಕ್ತಿಯುತವಾಗಿ ಪ್ರತಿಪಾದಿಸಿದನು. ವ್ಯಕ್ತಿಯ ಅಭಿಪ್ರಾಯ ಸ್ವಾತಂತ್ರ್ಯ ಮತ್ತು ಚರ್ಚಾಸ್ವಾತಂತ್ರ್ಯವನ್ನು ಅಸದೃಶವಾದ ರೀತಿಯಲ್ಲಿ ಮಂಡಿಸಿರುವುದರಲ್ಲಿಯೇ ಮಿಲ್ಲನ ಪ್ರಬಂಧದ ಪ್ರತಿಭೆಯು ಮಸುಕಾಗದೆ ಇರುವುದು.

ಎರಡು ಮತ್ತು ಮೂರನೆಯ ಅಧ್ಯಾಯಗಳು ಬಹುಶಃ ಇಡೀ ಪ್ರಬಂಧದ ಅತ್ಯಂತ ಸಾರವತ್ತಾದ ಭಾಗ. ಪ್ರಜಾಪ್ರಭುತ್ವವಾದಿಗಳು ಹಾಗೂ ವ್ಯಕ್ತಿ ಸ್ವಾತಂತ್ರ್ಯನಿಷ್ಠರು ಈ ಭಾಗವನ್ನು ಮತ್ತೆ ಮತ್ತೆ ಅಭ್ಯಸಿಸಿ ಅದರಲ್ಲಡಗಿರುವ ವಿಚಾರಗಳನ್ನು ಮೆಲಕು ಹಾಕುವುದರಿಂದಲೇ ಅದೆಷ್ಟೋ ಸಮಾಜಸಂಸ್ಕಾರವಾಗುವುದೆಂಬುದು ನಿರ್ವಿವಾದ.

ವ್ಯಕ್ತಿಯ ಅಭಿಪ್ರಾಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಪರವಾಗಿ ಮಿಲ್ಲನು ಮೂರು ರೀತಿಯ ವಾದವನ್ನು ಮುಂದಿಟ್ಟಿರುವನು.

೧. ಅಭಿಪ್ರಾಯಗಳನ್ನು ಹತ್ತಿಕ್ಕುವುದರಿಂದ ಸತ್ಯದ ನೆಲೆಯು ಬತ್ತಿ ಹೋಗಬಹುದು. ಹತ್ತಿಕ್ಕಿದ ಅಭಿಪ್ರಾಯವೇ ಸತ್ಯವಾಗಿರಬಹುದಾದ ಸಂದರ್ಭದಲ್ಲಿ, ಸತ್ಯದ ಅನ್ವೇಷಣೆಯೆಂಬುದು ಅರ್ಥಹೀನವಾಗುವುದು.

೨. ವ್ಯಕ್ತಿಯ ಅಭಿಪ್ರಾಯವು ಸುಳ್ಳೆಂದು ಇಟ್ಟುಕೊಳ್ಳೋಣ. ಅಂತಹ ಸಂದರ್ಭದಲ್ಲಿಯೂ ಅದರ ಪ್ರಕಟಣೆಗೆ ಅವಕಾಶವನ್ನು ಕಲ್ಪಿಸುವುದು ಅತ್ಯಂತ ಸಮಂಜಸ. ಯಾಕೆಂದರೆ ಸತ್ಯವಾದ ಅಭಿಪ್ರಾಯ ಅಥವಾ ನಂಬಿಕೆಯು ಅಸತ್ಯ ಅಥವಾ ಅರೆಸತ್ಯದ ಅಭಿಪ್ರಾಯದೊಡನೆ ಘರ್ಷಿಸಿದಾಗ ಅದರ ಸಮರ್ಥನೆಯು, ಮಹತ್ವವು, ಶಕ್ತಿಯು ಮತ್ತೂ ಅಧಿಕವಾಗಿ ಪ್ರಕಟವಾಗುವುದು. ಇದರಿಂದ ತೊಳೆದ ವಜ್ರದಂತೆ ಸತ್ಯಕ್ಕೆ ಕಳಂಕ ತಗಲದೆ ಕಳೆಬರುವುದು. ವಿರುದ್ಧಾಭಿಪ್ರಾಯದಿಂದ ಘರ್ಷಿಸಲ್ಪಡದ ಸತ್ಯವೂ ಕೂಡ ಕಾಲಕ್ರಮೇಣ ತುಕ್ಕು ಹಿಡಿದು ಹೋದಂತಾಗಿ ವಿಚಾರಶಕ್ತಿಯನ್ನು ನಿರ್ವೀರ್ಯಗೊಳಿಸುವುದು.

೩. ಆಧುನಿಕ ಅಭಿಪ್ರಾಯವು ಸುಳ್ಳು–ಸತ್ಯಗಳ ಮಿಶ್ರಣ, ಅರೆಸತ್ಯ, ಅರೆ ಅಸತ್ಯ ಎಂದು ಇಟ್ಟುಕೊಳ್ಳೋಣ. ಬಹು ಸಂದರ್ಭಗಳಲ್ಲಿ ವಸ್ತುಸ್ಥಿತಿಯು ಈ ರೀತಿಯಿರುವುದೇ ಸಾಮಾನ್ಯವೆಂಬುದು ಮಿಲ್ಲನ ಮತ. ಇಂತಹ ಸನ್ನಿವೇಶದಲ್ಲಿ ಅಭಿಪ್ರಾಯಪ್ರಕಟಣೆಯ ಸ್ವಾತಂತ್ರ್ಯವು ಸ್ಥಾಪಿಸಲ್ಪಟ್ಟ ಅಭಿಪ್ರಾಯದಲ್ಲಿರುವ ಅಸತ್ಯಾಂಶವನ್ನು ಕಿತ್ತೊಗೆದು, ಹೊಸ ಅಭಿಪ್ರಾಯದ ಸತ್ಯಾಂಶವನ್ನು ಸ್ವೀಕರಿಸುವುದಕ್ಕೆ ನೆರವು ನೀಡುವುದು.

ಸತ್ಯದ ಸಲುವಾಗಿ ಅನಿರ್ಬಂಧ ಅಭಿಪ್ರಾಯ ಮತ್ತು ಪ್ರಕಟಣಾ ಸ್ವಾತಂತ್ರ್ಯ ಯೋಗ್ಯಮಾರ್ಗವು.

ಅಭಿಪ್ರಾಯ, ಅಭಿವ್ಯಕ್ತಿಸ್ವಾತಂತ್ರ್ಯಗಳ ಕುರಿತಾದ ಮಾತಾಯಿತು. ಕ್ರಿಯಾಸ್ವಾತಂತ್ರ್ಯ ವಿಷಯದಲ್ಲಿ ಏನು ಹೇಳಬಹುದು? ಎಷ್ಟರ ಮಟ್ಟಿಗೆ ವ್ಯಕ್ತಿಯ ನಡೆನುಡಿಗಳನ್ನು ಸಮಾಜವು ನಿಯಂತ್ರಿಸಬಹುದು?

ಸಮಾಜವು ಅನೇಕ ತೆರನಾದ ಒತ್ತಾಯವನ್ನು, ಕಡ್ಡಾಯವನ್ನು ಸದಸ್ಯರ ಮೇಲೆ ಹೇರುವುದನ್ನು ನೋಡಿ ಮಿಲ್ಲನು ವಿವಂಚನೆಗೊಳಗಾದನು. ತನ್ನ ಪ್ರಬಂಧದಲ್ಲಿ ಸಮಾಜವು ವ್ಯಕ್ತಿಯ ಹಿತಸಂಬಂಧಗಳಲ್ಲಿ ಎಷ್ಟರಮಟ್ಟಿಗೆ ನ್ಯಾಯವಾಗಿ ಪ್ರವೇಶಿಸಬಹುದು ಮತ್ತು ಬಾರದು ಎಂಬುದರ ಗಡಿನಿರ್ದೇಶನವನ್ನು ಯತ್ನಿಸಿರುವನು. ವ್ಯಕ್ತಿಯ ಕಾರ್ಯಕ್ಷೇತ್ರವನ್ನು ಸ್ವ–ವಿಷಯಸಂಬಂಧ ಮತ್ತು ಪರ–ವಿಷಯಸಂಬಂಧ ಅಥವಾ ಸಮಾಜ–ವಿಷಯಸಂಬಂಧ ಎಂದು ಎರಡು ಭಾಗಗಳಾಗಿ ಮಿಲ್ಲನು ವಿಂಗಡಿಸಿರುವನು. ಈ ಸಂದರ್ಭದಲ್ಲಿ ನಾಲ್ಕನೇ ಅಧ್ಯಾಯದಲ್ಲಿ ಉಕ್ತವಾಗಿರುವ ಈ ಮಾತುಗಳನ್ನು ನೋಡಬಹುದು.

“ಯಾವನೊಬ್ಬ ವ್ಯಕ್ತಿಯ ನಡತೆಯು ಇತರರ ಹಿತಗಳಿಗೆ ಧಕ್ಕೆ ತರುವಂತಹ ರೀತಿಯಲ್ಲಿದ್ದರೆ, ಸಮಾಜಕ್ಕೆ ಅಂತಹ ನಡತೆಗಳ ಮೇಲೆ ಪ್ರಾಧಿಕಾರವುಂಟು. ಸಾಮೂಹಿಕ

ಕಲ್ಯಾಣವು ಇಂತಹ ಪ್ರವೇಶದಿಂದ ಸಾಧಿಸಲ್ಪಡುವುದೇ ಅಥವಾ ಇಲ್ಲವೇ ಎಂಬ ಪ್ರಶ್ನೆಯ ಚರ್ಚೆಗೆ ತೆರವು ಮಾಡಿಕೊಡುವುದು. ಆದರೆ ವ್ಯಕ್ತಿಯ ನಡತೆಯು ತನ್ನ ಹಿತಕ್ಕಷ್ಟೇ ಸಂಬಂಧಿಸಿದ್ದು. ಬೇರೆ ಯಾರ ಹಿತಕ್ಕೆ ಸಂಬಂಧಿಸಿರದಿದ್ದರೆ ಅಂತಹ ಪ್ರಶ್ನೆಯನ್ನು ಮಾನ್ಯಮಾಡುವ ಅವಕಾಶವೇ ಇಲ್ಲವಾಗುವುದು. ಅಂತಹ ಎಲ್ಲ ಸನ್ನಿವೇಶಗಳಲ್ಲೂ ವ್ಯಕ್ತಿಗೆ ಕಾರ್ಯವನ್ನು ಎಸಗಲು ಮತ್ತು ಅದರ ಫಲವನ್ನನುಭವಿಸಲು ಸಂಪೂರ್ಣವಾದ ಶಾಸನಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯವಿರಬೇಕು."

ಉಪಯುಕ್ತತಾವಾದದ ಸಿದ್ಧಾಂತದ ಮೇಲೆಯೇ ಸಾಮಾಜಿಕ ಹಾಗೂ ವೈಯಕ್ತಿಕ ಕ್ಷೇತ್ರಗಳ ಕಲ್ಪನೆ ವ್ಯಾವಹಾರಿಕ ಜೀವನದಲ್ಲಿ ಸಾಧ್ಯ. ಸಮಾಜವು ವಿನಾಕಾರಣವಾಗಿ, ಇಲ್ಲವೆ ಅಸಾಧುವಾಗಿ ವ್ಯಕ್ತಿಯ ಸ್ವಂತ ವಿಷಯಗಳಲ್ಲಿ ಪ್ರವೇಶಿಸುತ್ತದೆಂಬುದು ಮಿಲ್ಲನ ಭೀತಿ. ಮಿಲ್ಲನು ವ್ಯಕ್ತಿಯ ಅಭಿವ್ಯಕ್ತತೆ, ವಿಶಿಷ್ಟತೆ ಮತ್ತು ವಿಕಾಸ ಬೆಳವಣಿಗೆಗಳನ್ನು ಮತ್ತೆ ಯಾವುದಕ್ಕಿಂತಲೂ ಹೆಚ್ಚು ಮನ್ನಿಸಿ ಪ್ರತಿಪಾದಿಸಿರುವನು. ವೈಯಕ್ತಿಕ ವ್ಯಕ್ತಿತ್ವವನ್ನು ಬೆಳೆಸುವುದರಿಂದಲೇ "ಮನುಷ್ಯರು ಚಿಂತನೆಗೆ ಉತ್ಕೃಷ್ಟ ಹಾಗೂ ಸುಂದರ ವಸ್ತುಗಳಾಗುವರು."

ಬೆಂಥಮನ ಉಪಯುಕ್ತತಾವಾದವನ್ನು ರಾಜಕೀಯ–ಆರ್ಥಿಕ ಸ್ಥಿತ್ಯಂತರಗಳಿಂದಾಗಿ ಉದಯಿಸುತ್ತಿದ್ದ ಉದಾರವಾದದೊಡನೆ ಹೆಣೆಯುವುದರ ಮೂಲಕ ಲಿಬರಲ್ ಪ್ರಜಾಪ್ರಭುತ್ವದ ಬುನಾದಿಯನ್ನು ಕಳೆದ ಮಹಾಯುದ್ಧದವರೆಗೂ ಭದ್ರವಾಗಿರುವಂತೆ ನಿರ್ಮಿಸಿದುದು ಮಿಲ್ಲನ ಸ್ವಾತಂತ್ರ್ಯತತ್ವದ ಮಹತ್ವವನ್ನು ಹಾಗೂ ಅದರ ಇತಿ–ಮಿತಿಗಳನ್ನು ಸ್ಪಷ್ಟಪಡಿಸುತ್ತದೆ. ಇತ್ತೀಚೆಗೆ ಅನ್ಯ ಸಾಮಾಜಿಕ ಸಿದ್ಧಾಂತಗಳನ್ನು ಎದುರಿಸಲಾರದೆ ಲಿಬರಲ್ ಪ್ರಭುತ್ವವು, ಲಿಬರಲ್ ವೈಚಾರಿಕಮಾರ್ಗವು ಹಿಂದೆಸರಿಯುತ್ತಲಿದೆ. ಮಿಲ್ಲನು ತನ್ನ ವಿವೇಚನೆಯಲ್ಲಿ ಉಪಯುಕ್ತತಾತತ್ವದ ಒಂದು ಮುಖ್ಯಾಂಶವನ್ನು ಬಿಟ್ಟು ಕೊಟ್ಟಿದ್ದನು. ಸಮಾಜದ ಚರಮೋದ್ದೇಶವಾವುದು? ಇದನ್ನು ಉಪಯುಕ್ತತಾವಾದಿಗಳು 'ಅಧಿಕ ಜನರ ಅಧಿಕ ಹಿತ' ಎಂದು ಉತ್ತರಿಸುವರು. ಆದರೆ ಜಾನ್ ಮಿಲ್ಲನು ವ್ಯಕ್ತಿ ಸ್ವಾತಂತ್ರ್ಯವು ಸಮಾಜ–ಸಂಘಟನೆಯ ಮೂಲತತ್ವ ಅಥವಾ ಹೆಗ್ಗುರಿ ಎಂದು ಕಂಡುದು ಅವನನ್ನು ಅವನ ಸಮಕಾಲೀನ ವಿಚಾರಧಾರೆಯಿಂದ ಬೇರ್ಪಡಿಸುವುದು. ಸ್ವಾತಂತ್ರ್ಯತತ್ವ ಮತ್ತು ಅಧಿಕಾರತತ್ವಗಳ ಘರ್ಷಣೆಯು ಪ್ರಗತಿಯ ಒಳಮರ್ಮ ಎಂದು ಮಿಲ್ಲನು ಬಹುಮಟ್ಟಿಗೆ ತೀರ್ಮಾನಿಸಿದಂತೆ ಕಾಣುತ್ತದೆ.

ಈ ಪರಿಯ ವಿಚಾರಸರಣಿಯನ್ನು ವೈಜ್ಞಾನಿಕ, ಧಾರ್ಮಿಕ ಮತ್ತು ರಾಜಕೀಯ ಇತಿಹಾಸಗಳಲ್ಲಿಯ ಅಸಂಖ್ಯ ನಿದರ್ಶನಗಳಿಂದ ಪುಷ್ಟೀಕರಿಸಬಹುದು. ಆದರೆ ಮಿಲ್ಲನ ಸ್ವಾತಂತ್ರ್ಯ ಮತ್ತು ಅಧಿಕಾರ, ವ್ಯಕ್ತಿ ಮತ್ತು ಸಮಾಜ ಇವುಗಳ ನಡುವೆ ಒಂದು ರೀತಿಯ ತಿಕ್ಕಾಟವು ನಿರಂತರವೂ ನಡೆಯುತ್ತಲಿದ್ದು ಬಹು ಸಂದರ್ಭಗಳಲ್ಲಿ ವ್ಯಕ್ತಿಯೂ

ಸರಕಾರದ ಇಲ್ಲವೆ ಸಮಾಜದ ರಾಜಕೀಯ, ನೈತಿಕ, ಅಭಿಪ್ರಾಯದಬ್ಬಾಳಿಕೆಯನ್ನು ಎದುರಿಸುವ ಸಾಮರ್ಥ್ಯ ಸಾಧನಗಳಿಲ್ಲದೆ ಮೂಕನಾಗಿ ಅನುಭವಿಸುತ್ತಿರುವನೆಂಬ ಪ್ರತಿಪಾದನೆಯಲ್ಲಿ ವ್ಯಕ್ತಿ ಮತ್ತು ಸಮಾಜ ಅಥವಾ ರಾಜ್ಯಗಳು ಒಂದನ್ನೊಂದು ಹೊರತುಪಡಿಸುತ್ತವೆ ಎಂಬ ಧ್ವನಿ ಸ್ಫುಟವಾಗಿ ಹೊಳೆಯುತ್ತದೆ. ಸಮಾಜ–ಸರಕಾರಗಳು ವ್ಯಕ್ತಿಯ ಶತ್ರುಗಳೇನೂ ಅಲ್ಲ; ವ್ಯಕ್ತಿಯ ಪರಿಪುಷ್ಟ, ಪರಿಪೂರ್ಣ ಬೆಳವಣಿಗೆಯು ಸಮಾಜದಲ್ಲಿ ರಾಜ್ಯದ ನೆರವಿನಿಂದ ಮಾತ್ರ ಆಗಬಲ್ಲುದು. ರಾಜ್ಯಾಧಿಕಾರವು ವ್ಯಕ್ತಿಯ ವಿಕಾಸಮಾರ್ಗದಲ್ಲಿ ಪೂರಕವೇ ಹೊರತು ಮಾರಕವಲ್ಲ. ಸಮಾಜ ಮತ್ತು ರಾಜ್ಯವನ್ನು ವ್ಯಕ್ತಿಯು ಕಂಟಕಗಳೆಂದು ಅವುಗಳನ್ನು ದುರ್ಬಲಗೊಳಿಸುವುದಾದರೆ, ನಿಸ್ತೇಜಗೊಳಿಸುವುದಾದರೆ ವ್ಯಕ್ತಿಯ ವ್ಯಕ್ತಿತ್ವವೆಂಬುದು ಎಷ್ಟು ಉಳಿದೀತು? ಮತ್ತೊಮ್ಮೆ ನಾವೆಲ್ಲರೂ ಕೌಟಿಲ್ಯನ ಮತ್ಸ್ಯ ನ್ಯಾಯದ ಸ್ಥಿತಿಗೊ ಇಲ್ಲವೆ ಹಾಬ್ಸನು ಕಲ್ಪಿಸಿದ ಅಸಹನೀಯ ಸ್ಥಿತಿಗೊ ಇಳಿದೇವು. ಅನವಶ್ಯಕ ಸಂಶಯ, ಅಪನಂಬಿಕೆಗಳಿಂದ ಎಲ್ಲ ರೀತಿಯ ಸಮಾಜಾಧಿಕಾರವನ್ನು, ವ್ಯಕ್ತಿಯ ನಿಯಂತ್ರಣವನ್ನು ವಿರೋಧಿಸಿದುದು ಮಿಲ್ಲನನ್ನು ತೀಕ್ಷ್ಣವಾದ ಟೀಕೆಗೆ ಗುರಿಪಡಿಸಿರುವುದು ಸ್ಟೀಫನನು ಮಿಲ್ಲನ ಪ್ರಬಂಧಕ್ಕೆ ಉತ್ತರ ರೂಪವಾಗಿ ಬರೆದ ಸ್ವಾತಂತ್ರ್ಯ, ಸಮತೆ ಮತ್ತು ಸಹೋದರತೆ, ಎಂಬ ಲೇಖನದಲ್ಲಿ ಈ ವಿಶಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಈ ರೀತಿ ಅಭಿಪ್ರಾಯಪಟ್ಟಿರುವನು. “ಅಧಿಕಾರವು ಸ್ವಾತಂತ್ರ್ಯಕ್ಕೂ ಮೊದಲು. ಸ್ವಭಾವತಃ ಸ್ವಾತಂತ್ರ್ಯವು ಯಾವಾಗಲೂ ಅಧಿಕಾರಾವಲಂಬಿ. ಸುಸಂಘಟಿತ ಸರಕಾರವಿರುವಲ್ಲಿ ಮಾತ್ರ ಸ್ವಾತಂತ್ರ್ಯದ ಕಲ್ಪನೆಯೂ ಸಾಧ್ಯ. ಸಾರಾಂಶದಲ್ಲಿ ರಾಜ್ಯದ, ಸಮಾಜದ, ಶಾಸನದ ಒತ್ತಾಸೆಯಿಲ್ಲದಿದ್ದರೆ ಸ್ವಾತಂತ್ರ್ಯವು ಸ್ವೇಚ್ಛಾಚಾರವಾದೀತು, ಅಡೆತಡೆಯಿಲ್ಲದೆ ತುಂಬಿ ಹರಿಯುವ ಹುಚ್ಚು ಹೊಳೆಯಾದೀತು. ದಿಟವಾಗಿಯೂ ಸಮಾಜದಲ್ಲಿಯ ವ್ಯಕ್ತಿಯ ಸಂಯಮನಡತೆ, ಸ್ವಾತಂತ್ರ್ಯಾನುಭವ, ವ್ಯಕ್ತಿತ್ವದ ಹರಹು ರಾಜ್ಯಶಾಸನದ ಮಹೋನ್ನತ ಕೊಡುಗೆ. ಸಮಾಜದ ಶ್ರೇಯಸ್ಸನ್ನು ಶಾಸನವು ಸ್ವಾತಂತ್ರ್ಯಕ್ಕಿಂತಲೂ ಅಧಿಕವಾಗಿ ಕೋರುವುದು ಮತ್ತು ಸಾಧಿಸುವುದು.”

ಸಮಕಾಲೀನ ರಾಜಕೀಯ ಮತ್ತು ನೈತಿಕ ತತ್ವಗಳು, ವ್ಯಕ್ತಿವೈಶಿಷ್ಟ್ಯದ ಅವಶ್ಯಕತೆಯನ್ನು ಮಿಲ್ಲನಷ್ಟೇ ಒತ್ತಿಹೇಳುವುದಾದರೂ ಅವನ ಸ್ವಹಿತ ಸಂಬಂಧ ಮತ್ತು ಪರಹಿತಸಂಬಂಧ ಎಂಬ ವಿಂಗಡಣೆಯು ಅತ್ಯಂತ ಜಟಿಲ ಹಾಗೂ ಅವಿಭಾಜ್ಯವೆಂದೆನಿಸಿದ ಸಮಾಜ– ವ್ಯಕ್ತಿ ಸಂಬಂಧಗಳನ್ನು ಅಸಹಜವೆಂದು ತೋರುವಷ್ಟು ದೂರ ಬೇರ್ಪಡಿಸಲು ಯತ್ನಿಸಿದೆ ಎಂಬುದನ್ನು ತೋರಿಸಿ ಕೊಟ್ಟಿದೆ. ಆದರೂ ಸರಕಾರದ ಕಾರ್ಯಗಳ ಪಟ್ಟಿಯು ಬೆಳೆಯುತ್ತಿರುವ ಇಂದಿನ ದಿನಗಳಲ್ಲಿ ಮಿಲ್ಲನ ವಿವೇಚನೆಯು ಮಹತ್ವವನ್ನು ಗಳಿಸಿದೆ. ಗಾಂಧಿವಾದದಲ್ಲಿ ವಿಕೇಂದ್ರೀಕರಣದ ಮಹತ್ವ, ಗಿಲ್ಡ ಸಮಾಜವಾದದಲ್ಲಿ ಔದ್ಯಮಿಕ ಪ್ರಜಾಪ್ರಭುತ್ವವನ್ನು ಸಾಧಿಸಲು ಸೂಚಿಸುವ ಮಾರ್ಗ, ಫೆಬಿಯನ್ ಸಮಾಜವಾದಿಗಳು ಮನ್ನಿಸುವ ರಾಜ್ಯಾಧಿಕಾರದ ಹಂಚುವಿಕೆಯ ಕ್ರಮ ಇವುಗಳೆಲ್ಲವೂ ಬೃಹದಾಕಾರವನ್ನು ತಾಳುತ್ತಿರುವ ರಾಜ್ಯವನ್ನು ವಿರೋಧಿಸಿಯೇ.

ಆಧುನಿಕ ಯುಗದ ವೈಜ್ಞಾನಿಕ ಮತ್ತು ಆರ್ಥಿಕ ಪ್ರಗತಿಯು ದಿಗ್ದರ್ಶನದ ಮತ್ತು ಮೇಲ್ವಿಚಾರಣೆಯ, ನಿಯಂತ್ರಣದ ಮತ್ತು ಯೋಜನೆಯ ಅಧಿಕಾರವು ರಾಜ್ಯದಲ್ಲಿ ಕೇಂದ್ರೀಕರಣವಾಗುವುದನ್ನು ತಪ್ಪಿಸಲು ಅಸಾಧ್ಯವೆಂಬಂತೆ ಪ್ರೋತ್ಸಾಹಿಸುತ್ತಿರುವುವು. ಕೇಂದ್ರೀಕರಣವು ಹಿಗ್ಗಿದ ಪ್ರಮಾಣದಲ್ಲಿ ವ್ಯಕ್ತಿಸ್ವಾತಂತ್ರ್ಯವು ಕುಗ್ಗುವುದು. ಈ ಸಮಸ್ಯೆಗೆ ಪರಿಹಾರೋಪಾಯವನ್ನು ಅರಸುವುದರಲ್ಲಿ ಸ್ವಾತಂತ್ರ್ಯದ ಪುರಸ್ಕರ್ತರೆಲ್ಲರೂ ಜಾಗ್ರತರಾಗುವುದು ಕ್ಷೇಮಕರ.

ರಾಜ್ಯಾಧಿಕಾರವು ವಿಧಾಯಕ ರೀತಿಯಲ್ಲಿ ವ್ಯಕ್ತಿಯ ಶ್ರೇಯಸ್ಸನ್ನು ವೃದ್ಧಿಗೊಳಿಸಲಾರದು, ಎಂಬುದು ಮಿಲ್ಲನ ನಿಶ್ಚಿತಾಭಿಪ್ರಾಯ. 'ಕಲ್ಯಾಣ ರಾಜ್ಯ' 'ರಾಮರಾಜ್ಯ' 'ಯೋಜನಾಬದ್ಧ ರಾಜ್ಯ' ಇವೇ ಮುಂತಾದ ಕಲ್ಪನೆಗಳು ರಾಜ್ಯವನ್ನು, ರಾಜ್ಯಾಧಿಕಾರವನ್ನು ವ್ಯಕ್ತಿಯ ಹಾಗೂ ಸಮಾಜದ ಕೇಂದ್ರಬಿಂದುವನ್ನಾಗಿ ಮಾರ್ಪಡಿಸಿವೆ. ಅಧಿಕ ಜನರ ಅಧಿಕ ಹಿತಸಾಧನೆಗೆ ಸರಕಾರವೇ ಸೂಕ್ತ ಮತ್ತು ಯೋಗ್ಯ ಬಾಧ್ಯಸ್ಥನೆಂದು ತಿಳಿಯಲಾಗಿದೆ. ಈ ಹೊಸ ಆವರಣದಲ್ಲಿ ಮಿಲ್ಲನ ವ್ಯಕ್ತಿ–ಸಮಾಜ ಸಂಬಂಧಸೂತ್ರವನ್ನು ಎಷ್ಟರ ಮಟ್ಟಿಗೆ ಅನ್ವಯಿಸಬಹುದು? ಏನೇ ಆದರೂ ಮಿಲ್ಲನು ಕಂಡುಕೊಂಡ ರೀತಿಯಲ್ಲಿ ಸಾಧ್ಯವಾಗಲಾರದು. ಅನೇಕ ವೈಜ್ಞಾನಿಕ, ವೈಚಾರಿಕ, ಆರ್ಥಿಕ ಬದಲಾವಣೆಗಳಿಗೊಳಗಾದ ಇಂದಿನ ಪರಿಸ್ಥಿತಿಯನ್ನು ಅನುಲಕ್ಷಿಸಿ ವ್ಯಕ್ತಿ–ಸಮಾಜಸಂಬಂಧವನ್ನು ಹೊಸ ದೃಷ್ಟಿಕೋನದಿಂದ ಪರಿಶೀಲಿಸಿ ನಿರ್ದಿಷ್ಟಗೊಳಿಸಲು ಬರ್ಟ್ರಾಂಡ್ ರಸಲ್, ಲಾಸ್ಕಿ, ಗಾಂಧಿ ಮುಂತಾದವರು ಪರಿಶ್ರಮಿಸಿರುವರು.

ಕೊನೆಯ ಅಧ್ಯಾಯದಲ್ಲಿ ಮಿಲ್ಲನು ತಾನು ಪ್ರತಿಪಾದಿಸಿರುವ ಸೂತ್ರಗಳನ್ನು ಕೆಲವು ವಿಶಿಷ್ಟ ಸಾಮಾಜಿಕ ಸಮಸ್ಯೆಗಳಿಗೆ ಅನ್ವಯಿಸಿ ತೋರಿಸಿಕೊಟ್ಟಿರುವನು. ಅವನು ಪರಿಶೀಲನೆಗೆಂದು ಎತ್ತಿಕೊಂಡ ಸಮಸ್ಯೆಗಳು ಇಂದು ಇಲ್ಲ, ಕೆಲವೊಮ್ಮೆ ಇದ್ದರೂ ಆ ಪ್ರಮಾಣದಲ್ಲಿ ಇಲ್ಲ. ಆದರೂ ಸೂತ್ರ ಪ್ರಯೋಗವನ್ನು ಮಾಡಿ ತೋರಿಸಿದುದು ಭಿನ್ನ ಸನ್ನಿವೇಶಗಳಲ್ಲಿ ಸೂತ್ರಗಳನ್ನು ಹೇಗೆ ಕಾರ್ಯಗತಗೊಳಿಸಬೇಕೆಂಬ ನಿರ್ದಿಷ್ಟ ಕಲ್ಪನೆಗೆ ಸಹಾಯಕವಾಗುವುದು.

ಜಾನ್ ಮಿಲ್ಲನು ತನ್ನ ಕೊನೆಯ ದಿನಗಳಲ್ಲಿ ಸಮಾಜವಾದವು ಅವಶ್ಯಕವೂ ಅನಿವಾರ್ಯವೂ ಎಂಬುದನ್ನು ಕಂಡುಕೊಂಡನೆಂಬುದನ್ನು ಈ ಹಿಂದೆಯೆ ಹೇಳಲಾಗಿದೆ. ಆದರೂ ಸರಕಾರದ ಕಾರ್ಯಕ್ಷೇತ್ರದ ವಿಸ್ತರಣೆಯಿಂದ ಆಗುವ ಲಾಭಕ್ಕಿಂತಲೂ ನಷ್ಟವೇ ಅಧಿಕವೆಂಬುದು ಅವನ ಮತವಿದ್ದಂತೆ ಕಾಣುತ್ತದೆ. ಸ್ವಾತಂತ್ರ್ಯಪ್ರಬಂಧವನ್ನು ಸಮಾಪ್ತಗೊಳಿಸುತ್ತ ಈ ರೀತಿ ಅಭಿಪ್ರಾಯ ಪಟ್ಟಿರುವನು: ತನ್ನ ಪ್ರಜೆಗಳಿಗಾಗಿ ಎಲ್ಲವನ್ನೂ ಮಾಡಲು ತೊಡಗುವ ಸರಕಾರವು ಕಾರ್ಯವನ್ನು ತ್ವರಿತದಲ್ಲಿ ಹೆಚ್ಚು ದಕ್ಷತೆಯಿಂದ ನಿಪುಣತೆಯಿಂದ ಮಾಡಬಹುದು; ಆದರೆ ವ್ಯಕ್ತಿಯು ತಾನೇ ಸ್ವಾನುಭವದಿಂದ ಕಲಿಯುವ, ಅರಿತುಕೊಳ್ಳುವ ಅವಕಾಶವನ್ನು ಕಿತ್ತುಕೊಂಡಂತಾಗುವುದು. ನೈತಿಕ ನಿರ್ಧಾರಗಳನ್ನು ವ್ಯಕ್ತಿಯೇ ಸ್ವಯಂಸ್ಫೂರ್ತಿಯಿಂದ ಕೈಗೊಳ್ಳುವುದೇ ಸ್ವಾತಂತ್ರ್ಯದ

ಜೀವಾಳ. ಅಂತಹ ನೈತಿಕ ನಿರ್ಧಾರಕ್ಕೆ ಬರುವಂತಹ ಕ್ಷೇತ್ರವನ್ನೇ ಸಂಕುಚಿತಗೊಳಿಸಿದರೆ, ಸಂದರ್ಭಗಳನ್ನೇ ತಗ್ಗಿಸಿದರೆ ಸ್ವಾತಂತ್ರ್ಯದ ವ್ಯಾಪ್ತಿಯೂ ಕಿರಿದಾಗುವುದು, ಅರ್ಥವೂ ಸಂಕೋಚಗೊಳ್ಳುವುದು. ಸ್ವಾನುಭವದಿಂದ, ಒಳಪ್ರೇರಣೆಯಿಂದ, ಸ್ಫೂರ್ತಿಯಿಂದ ಹಲವಾರು ಮಾರ್ಗಗಳಲ್ಲಿ ಒಂದನ್ನು ಆರಿಸುವ ಅವಕಾಶ ಸ್ವಾತಂತ್ರ್ಯದಿಂದ ಮಾತ್ರ ಲಭಿಸುವುದು. ಆರಿಸುವ ಅವಕಾಶಗಳು ಇಲ್ಲವೆನ್ನುವಷ್ಟು ಕಡಿಮೆಯಾದರೆ ಸ್ವಾತಂತ್ರ್ಯಕ್ಕೆ ಅನುಭವದಲ್ಲಿ ಏನು ಬೆಲೆ? ಎಷ್ಟು ಮಹತ್ವ? ಯಾವ ಸ್ಥಾನ?

ಭಾರತೀಯ ಪ್ರಜಾಪ್ರಭುತ್ವವು ಸಾಂಗೋಪಾಂಗವಾಗಿ ಮುನ್ನಡೆಯಬೇಕಾದರೆ, ಪ್ರಜಾಪ್ರಭುತ್ವತತ್ವವನ್ನು ಎತ್ತಿ ಹಿಡಿಯುವ, ಪೋಷಿಸುವ, ಬೆಂಬಲಿಸುವ ವಾಙ್ಮಯಸಂಪತ್ತು ನಮ್ಮ ಜೀವನದುದ್ದಕ್ಕೂ ಬೆಳೆದು ಬರಬೇಕು, ಬೆಳೆದು ಹೆಮ್ಮರವಾಗಬೇಕು. ಇದು ಆಶಯದ ಮಾತಾಯಿತು. ವಾಸ್ತವವಾಗಿ–ನಮ್ಮ ಕನ್ನಡ ವಾಙ್ಮಯವನ್ನೇ ದೃಷ್ಟಾಂತವಾಗಿ ತೆಗೆದುಕೊಳ್ಳುವಾ. ಭಾರತೀಯ ಪ್ರಜಾಪ್ರಭುತ್ವಸಸಿಗೆ ತಂಪೆರೆವ ಚಿಲುಮೆಗಳು ಯಾವುವಾದರೂ ಇವೆಯೇ? ರಕ್ಷಣೆಯನ್ನು ನೀಡುವ ವಿಚಾರಪ್ರಧಾನ ಕೃತಿಗಳಾವುವಾದರೂ ಇವೆಯೇ? ತಾತ್ವಿಕ ವಿವೇಚನೆಗೆ ಸಂಬಂಧಪಟ್ಟಂತಿರುವ ಸಾಹಿತ್ಯವು ಶೂನ್ಯವೆಂದರೂ ಸಲ್ಲುವುದು. ಮಿಲ್ಲನ ಮಹಾಕೃತಿಯೆಂದೆನಿಸಿದ 'ಸ್ವಾತಂತ್ರ್ಯವನ್ನು ಕುರಿತಾದ ಪ್ರಬಂಧ'ದ ಅನುವಾದವು, ಕನ್ನಡದ ಅನೇಕ ಅತ್ಯವಶ್ಯಕಗಳಲ್ಲಿ ಅತ್ಯಲ್ಪಾಂಶವನ್ನಾದರೂ ತುಂಬಿಕೊಟ್ಟಿದೆ ಎಂದು ನಮ್ಮ ನಂಬಿಕೆ. ಇದರಲ್ಲಿ ಕಂಡುಬರುವ ವಿಚಾರಲಹರಿ ನಮಗೆ ಅಪರಿಚಿತವೆಂದು ಕಂಡು ಬರದಿದ್ದರೂ ಶಾಸ್ತ್ರೀಯ ವಿವೇಚನೆಯ ಧಾಟಿ ಹೊಸತೆಂದು ತೋರಬಹುದು. ಸಾಮಾನ್ಯವಾಗಿ ನಾವು ಉಪಯೋಗಿಸುವ ಸಮಾಜ, ಸ್ವಾತಂತ್ರ್ಯ, ವ್ಯಕ್ತಿ ಹಕ್ಕು ಮುಂತಾದ ಇನ್ನೂ ಎಷ್ಟೋ ನುಡಿಕಟ್ಟುಗಳಿಗೆ ಒಂದು ಪರಿಮಿತ ಅರ್ಥವ್ಯಾಪ್ತಿಯನ್ನು ನಿರ್ಮಿಸುವುದರಲ್ಲಿ ಮತ್ತು ಅವುಗಳ ಅನ್ಯೋನ್ಯ ಸಂಬಂಧವನ್ನು ಅರಿಯುವುದರಲ್ಲಿ ಮತ್ತು ಎಲ್ಲಕ್ಕೂ ಮಿಗಿಲಾಗಿ ವ್ಯಕ್ತಿತ್ವವಿಕಾಸವೇ ಪರಮಸಾರ್ಥಕವಾದುದೆಂದು ತಿಳಿದು ಅದಕ್ಕಾಗಿ ಶ್ರಮಿಸುವುದರಲ್ಲಿ ಈ ಕೃತಿಯು ಅಲ್ಪವಾಗಿಯಾದರೂ ಕಾರಣವೆಂದೆನಿಸಿದಲ್ಲಿ ನಮ್ಮ ಅನುವಾದಕಾರ್ಯವು ಸಫಲವಾಯಿತೆಂದು ತಿಳಿಯುತ್ತೇವೆ. ಕನ್ನಡ ಜನ ಇದನ್ನು ಆಧರಿಸಿಯಾರು ಎಂದು ನಮ್ಮ ನಂಬಿಕೆ.

ಈ ಪುಸ್ತಕವನ್ನು ಅಚ್ಚುಹಾಕಿಸುವುದರಲ್ಲಿ ನೆರವಾದ ಧಾರವಾಡದ ಸಾಧನ ಮುದ್ರಣಾಲಯದವರಿಗೂ ಇದರ ಪ್ರೂಫುಗಳನ್ನು ತಿದ್ದುವುದರಲ್ಲಿ ಯಶಸ್ವಿಯಾಗಿ ನೆರವಾದ ನಮ್ಮ ಹಿಂದಿನ ವಿದ್ಯಾರ್ಥಿಗಳೂ ಈಗ ಕರ್ನಾಟಕ ಕಾಲೇಜಿನಲ್ಲಿ ಸಂಸ್ಕೃತಾಧ್ಯಾಪಕರೂ ಆದ ಶ್ರೀಮಾನ್ ಡಿ.ಎನ್.ಶಾನಭಾಗರಿಗೂ ನಮ್ಮ ಹಾರ್ದಿಕ ಕೃತಜ್ಞತೆಗಳು.

ಕೆನರಾ ಕಾಲೇಜು **ಎನ್.ರಾಜಗೋಪಾಲರಾವ್**

೨೮ ಫೆಬ್ರವರಿ ೧೯೬೦ **ಬ.ಹೆ.ಶ್ರೀಧರ**

# ಪರಿವಿಡಿ

# ಸ್ವಾತಂತ್ರ್ಯ ಮೀಮಾಂಸೆ

## ಅಧ್ಯಾಯ ಒಂದು

## ಪ್ರಾಸ್ತಾವಿಕ

'ತಾತ್ವಿಕ ಅವಶ್ಯಕತೆ' ಎಂಬುದೊಂದು ತಪ್ಪು ಹೆಸರಿನ ಸಿದ್ಧಾಂತ. 'ಸಂಕಲ್ಪ ಸ್ವಾತಂತ್ರ್ಯ' ಎಂದು ಮಂದಿ ಕರೆಯುವ ಸಿದ್ಧಾಂತವು ಮೇಲಿನದಕ್ಕೆ ದುರ್ದೈವವಶಾತ್ ವಿರುದ್ಧವಾಗಿದೆ. ಈ ವಿರುದ್ಧ ಸಿದ್ಧಾಂತವು ಈ ಪ್ರಬಂಧದ ವಸ್ತುವಲ್ಲ. ನಾಗರಿಕ ಅಥವಾ ಸಾಮಾಜಿಕ ಸ್ವಾತಂತ್ರ್ಯ ಎಂಬುದೇ ಇದರ ವಸ್ತು: ವ್ಯಕ್ತಿಯ ಮೇಲೆ ಸಮಾಜವು ನ್ಯಾಯವಾಗಿ ನಡೆಸಬಹುದಾದ ಪ್ರಭುತ್ವದ ಸ್ವರೂಪ ಮತ್ತು ಇತಿ–ಮಿತಿಗಳು ಎಂಥವು, ಯಾವುವು ಎಂಬುದೇ ಇಲ್ಲಿ ವಿಚಾರಣೀಯ. ಈ ಪ್ರಶ್ನೆಯನ್ನು ಎಲ್ಲಿಯೂ ಎತ್ತಿಲ್ಲ; ಸಾಮಾನ್ಯ ಸ್ವರೂಪದಲ್ಲಿ ಇದನ್ನಾರೂ ಚರ್ಚಿಸಿಲ್ಲ. ಆದರಿದು ಅಪ್ರತ್ಯಕ್ಷವಾಗಿಯೇ ಕುಳಿತು ಈ ಯುಗದ ವ್ಯಾವಹಾರಿಕ ಚರ್ಚೆಗಳ ಮೇಲೆ ಗಂಭೀರವಾಗಿ ಪ್ರಭಾವ ಬೀರುತ್ತದೆ; ಅಲ್ಲದೆ, ಭವಿಷ್ಯದಲ್ಲಿ ಇದೊಂದು ಅತಿ ಮುಖ್ಯವಾದ ಪ್ರಶ್ನೆಯೆಂದು ಗಣಿಸಲ್ಪಡಬಹುದು. ಇದೇನೂ ಹೊಸ ಪ್ರಶ್ನೆಯೆಂಬಂತಿಲ್ಲ. ಅತಿ ಪ್ರಾಚೀನ ಕಾಲದಿಂದಲೂ ಇದು ಮನುಷ್ಯಜಾತಿಯನ್ನು ಪಕ್ಷರೂಪದಲ್ಲಿ ವಿಂಗಡಿಸಿ ಒಗೆದಿದೆ ಎಂದೂ ಒಂದು ದೃಷ್ಟಿಯಿಂದ ಹೇಳಬಹುದು. ಆದರೆ ಮಾನವ ಜಾತಿಯಲ್ಲಿಂದು ಹೆಚ್ಚು ನಾಗರಿಕರೆನಿಸಿದವರು ಈಗ ಬಂದು ಮುಟ್ಟಿದ ಪ್ರಗತಿಯ ಮಟ್ಟದಲ್ಲಿ ಈ ಪ್ರಶ್ನೆ ಒಂದು ಹೊಸ ಸನ್ನಿವೇಶದಲ್ಲಿ ತಲೆಯೆತ್ತಿಕೊಂಡಿದೆ. ಆದುದರಿಂದ ಇದನ್ನೀಗ ಹೊಸಬಗೆಯದಾದ ಮೂಲಭೂತ ರೀತಿಯಿಂದ ಬಿಡಿಸಬೇಕಾಗಿದೆ.

ನಮಗೆ ಮೊಟ್ಟಮೊದಲು ಪರಿಚಯವಾದ ಗ್ರೀಸ್–ರೋಂ–ಇಂಗ್ಲೆಂಡುಗಳ ಇತಿಹಾಸ ಭಾಗಗಳಲ್ಲಿ ಸ್ವಾತಂತ್ರ್ಯ ಹಾಗೂ ಪ್ರಾಧಿಕಾರಗಳ ನಡುವಣ ಸಂಘರ್ಷವು ಎದ್ದುಕಾಣುವ ಲಕ್ಷಣವಾಗಿದೆ. ಆದರೆ ಹಿಂದಿನ ಕಾಲದಲ್ಲಿ ಈ ಪೈಪೋಟಿಯು ಪ್ರಜೆಗಳ ಇಲ್ಲವೆ ಕೆಲ ಪ್ರಜಾವರ್ಗಗಳ ಮತ್ತು ಸರಕಾರದ ನಡುವೆ ನಡೆಯುತ್ತಿತ್ತು. ರಾಜಕೀಯ ಆಡಳಿತಗಾರರ ದುಃಶಾಸನದಿಂದ ಪ್ರಜೆಯು ರಕ್ಷಣೆ ಪಡೆಯುವುದೇ ಅಂದು ಸ್ವಾತಂತ್ರ್ಯವೆನಿಸಿತ್ತು. ಗ್ರೀಸಿನ ಕೆಲ ಜನಪ್ರಿಯ ಸರಕಾರಗಳನ್ನುಳಿದರೆ ಮಿಕ್ಕ ಎಲ್ಲೆಡೆಯಲ್ಲಿಯೂ ಶಾಸಕರೆಂದರೆ ಶಾಸ್ಯರಾದ ಜನರ ವಿರೋಧಿಗಳು ಎಂದೇ

ತಿಳಿದುಕೊಳ್ಳಲಾಗಿತ್ತು. ಅಂದು ಶಾಸಕ ಒಬ್ಬ, ಒಂದುಕುಲ ಅಥವಾ ಜಾತಿ ಆಗಿರುವುದು ರೂಢಿ. ಆ ಆಡಳಿತಗಾರರು ಆನುವಂಶಿಕ ಅಧಿಕಾರವಂತರೋ ಗೆದ್ದು ಅಧಿಕಾರ ಪಡಕೊಂಡವರೋ ಆಗಿರುತ್ತಿದ್ದರು. ಅದು ಹೇಗಿದ್ದರೂ ಅವರೆಂದೂ ಶಾಸ್ಯರ ಅನುಗ್ರಹದಿಂದ ಅಂಥ ಅಧಿಕಾರ ಪಡೆದವರಾಗಿದ್ದಿಲ್ಲ. ಅವರ ಪ್ರಭುತ್ವವನ್ನು ಸ್ಪರ್ಧಿಸುವ ಅಪಾಯವನ್ನೂ ಜನ ತೆಗೆದುಕೊಳ್ಳುತ್ತಿದ್ದಿಲ್ಲ. ಅಂಥ ಬಯಕೆ, ಬಹುಶಃ, ಅವರಿಗೆ ಇದ್ದಿರಲೂ ಇಲ್ಲ; ಅವರ ಪ್ರಭುತ್ವವು ತಮ್ಮನ್ನು ದಮನ ಮಾಡಲು ತೊಡಗದಂತೆ ಏನಾದರೂ ಎಚ್ಚರಿಕೆ ತೆಗೆದುಕೊಂಡಿರಬಹುದು– ಅಷ್ಟೆ. ಅವರ ಪ್ರಭುತ್ವವನ್ನು ಅಗತ್ಯವೆಂದೇನೋ ತಿಳಿಯಲಾಗುತ್ತಿತ್ತು; ಆದರೆ ಅದು ಬಹಳ ಅಪಾಯಕರವೆಂದೂ ಗ್ರಹಿಸಲಾಗಿತ್ತು. ಅದನ್ನವರು ಹೊರಗಿನ ಹಗೆಗಳ ಮೇಲೆ ಹೇಗೋ ಹಾಗೇ ತಮ್ಮ ಪ್ರಜೆಗಳ ಮೇಲೂ ಉಗ್ರವಾಗಿ ಉಪಯೋಗಿಸಬಹುದೆಂಬುದು ಎಲ್ಲರಿಗೂ ಗೊತ್ತು. ಸಮಾಜದಲ್ಲಿಯ ದುರ್ಬಲರನ್ನು ಬಲಿಷ್ಠರು ಶೋಷಿಸದಂತೆ ನೋಡಿಕೊಳ್ಳಲು ಎಲ್ಲರಿಗಿಂತಲೂ ಬಲಶಾಲಿಯಾದ ಒಂದು ಹಿಂಸ್ರಜಂತು ಇರುವುದಗತ್ಯ. ಆದರೆ ಅಂಥ ಗೃಧ್ರರಾಜನಿಗಾದರೂ ಉಪಗೃಧ್ರಗಳಿಗಿರುವಂತೆಯೇ ಚಿಲ್ಲರೆಗಳನ್ನು ಸ್ವಾಹಾಕರಿಸುವ ಅಭ್ಯಾಸವಿರುವುದರಿಂದ ಯಾವಾಗಲೂ ಅವನ ಉಗುರು–ಕೊಕ್ಕುಗಳಿಂದ ರಕ್ಷಿಸಿಕೊಳ್ಳುವ ಸಿದ್ಧತೆಯಲ್ಲಿ ಮಿಕ್ಕೆಲ್ಲವೂ ಇರಬೇಕಾಗಿತ್ತು. ಆದುದರಿಂದ ಅಂದಿನ ದೇಶಭಕ್ತನ ಮುಖ್ಯ ಕರ್ತವ್ಯವೆಂದರೆ ಸಮಾಜವು ಸಹಿಸಿಕೊಳ್ಳಬೇಕಾದ ಪ್ರಭುಶಕ್ತಿಗೆ ಇತಿ–ಮಿತಿಯನ್ನು ಕಲ್ಪಿಸಿಕೊಡುವುದೇ ಆಗಿತ್ತು. ಅಂದಿನ ಜನರ ದೃಷ್ಟಿಯಲ್ಲಿ ಈ ಇತಿಕರಣವೇ ಸ್ವಾತಂತ್ರ್ಯವೆನಿಸಿತ್ತು. ಅದನ್ನು ಇಬ್ಬಗೆಯಿಂದ ಸಾಧಿಸಲಾಗುತ್ತಿತ್ತು; (೧) ರಾಜಕೀಯ ಹಕ್ಕುಗಳನ್ನು ಪ್ರಭುವಿನಿಂದ ಪಡೆದುಕೊಳ್ಳುವುದು; ಅದನ್ನು ಹತ್ತಿಕ್ಕುವುದು ಶಾಸಕರಲ್ಲಿ ಕರ್ತವ್ಯಭ್ರಷ್ಟತೆ ಎಂದು ತಿಳಿಯಲಾಗುತ್ತಿತ್ತು; ಹಾಗೇನಾದರೂ ಆತ ಹತ್ತಿಕ್ಕಿದ ನಿರ್ದಿಷ್ಟ ವಿರೋಧ ಪ್ರದರ್ಶನಮಾಡುವುದು ಅಥವಾ ಸಾರ್ವತ್ರಿಕವಾಗಿ ದಂಗೆಯೇಳುವುದು ನ್ಯಾಯವೆಂದು ಗ್ರಹಿಸಲಾಗುತ್ತಿತ್ತು. (೨) ಶಾಸಕ ಪ್ರಭುತ್ವದ ಹೆಚ್ಚು ಮುಖ್ಯವಾದ ಕಾರ್ಯಾರಂಭಗಳಿಗೆ ಸಮಾಜದ ಅಥವಾ ಅದರ ಹಿತಾರ್ಥವನ್ನು ಪ್ರತಿನಿಧಿಸುವುದೆಂದು ಗ್ರಹಿಸಲಾದ ಯಾವುದಾದರೊಂದು ಸಮಿತಿಯ ಒಪ್ಪಿಗೆಯನ್ನು ಪ್ರಭು ಪಡೆದುಕೊಳ್ಳಬೇಕೆಂಬ ಶರ್ತವನ್ನು ಸಾಂವಿಧಾನಿಕ ತಡೆಯನ್ನಾಗಿ ಸ್ಥಾಪಿಸುವುದು. ಇತಿಕರಣದ ಮೊದಲನೆಯ ಬಗೆಗೆ ಅನೇಕ ಯುರೋಪಿಯನ್ ಶಾಸಕರನ್ನು ಹೆಚ್ಚು ಕಡಿಮೆ ಒತ್ತಾಯ ತಂದು ಒಪ್ಪುವಂತೆ ಮಾಡಲಾಗಿತ್ತು. ಎರಡನೆಯ ಬಗೆಯ ಕತೆ ಬೇರೆಯದೇ ಆಗಿತ್ತು. ಅದನ್ನು ಸಾಧಿಸಲು ಅಥವಾ ಕೆಲಮಟ್ಟಿಗೆ ಸಾಧಿಸಿದ್ದರೆ ಮತ್ತಿಷ್ಟನ್ನು ಸಾಧಿಸಲು ಹೆಣಗುವುದೇ ಮುಖ್ಯ ಗುರಿ ಎಂದು ಅಂದಿನ ಸ್ವಾತಂತ್ರ್ಯಪ್ರಿಯರು ತಿಳಿಯುತ್ತಿದ್ದರು. ಒಬ್ಬ ಹಗೆಯನ್ನು ಇನ್ನೊಬ್ಬ ಹಗೆಯ ಮೂಲಕ ಹಣೆಯುವುದು, ದುಃಶಾಸನದಲ್ಲಿ ಕೈಹಾಕುವುದಿಲ್ಲವೆಂದು ಒಡೆಯನೊಬ್ಬನಿಂದ ಹೆಚ್ಚುಕಡಿಮೆ ಸಮರ್ಪಕವಾದ ಗ್ಯಾರಂಟಿಯನ್ನು ಪಡೆದುಕೊಂಡು ಆತನ ಆಳ್ವಿಕೆಗೆ ಒಳಪಟ್ಟಿರುವುದು – ಇಷ್ಟಕ್ಕಿಂತ ಮುಂದೆ ಅಂದಿನ ಜನಗಳ ಮಹತ್ವಾಕಾಂಕ್ಷೆ ಹರಿಯಲಿಲ್ಲ.

ಆ ಮೇಲೆ ಒಂದು ಕಾಲ ಬಂತು. ಜನರ ವ್ಯಾವಹಾರಿಕ ಪ್ರಗತಿಯು ಒಂದು ಮಟ್ಟ ಮುಟ್ಟಿತು. ಆಗ ಶಾಸಕರು ತಮ್ಮ ಹಿತಾರ್ಥಕ್ಕೆ ವಿರುದ್ಧವಾದ ಹಿತಾರ್ಥವುಳ್ಳವರಾಗಿ ಸ್ವತಂತ್ರ ರೀತಿಯಿಂದ ವರ್ತಿಸುವುದು ನೈಸರ್ಗಿಕ ಅಗತ್ಯವಲ್ಲ ಎಂಬ ಆಲೋಚನೆ ಜನರಲ್ಲಿ ಮೂಡಿತು. ರಾಜ್ಯದ ವಿವಿಧ ನ್ಯಾಯಾಧೀಶರು ತಮ್ಮ ಒಕ್ಕಲೋ ಪ್ರತಿನಿಧಿಗಳೋ ಆಗಿದ್ದು ತಮಗೆ ಬೇಕಾದಾಗ ಅವರನ್ನು ಮನೆಗೆ ಕಳಿಸುವಂತಹ ವ್ಯವಸ್ಥೆ ಇರುವುದು ಒಳ್ಳೆಯದೆಂದು ಅವರಿಗೆ ತೋರಲಾರಂಭಿಸಿತು. ತಮಗೆ ಹಾನಿಯಾಗುವ ರೀತಿಯಿಂದ ಸರಕಾರದ ಶಕ್ತಿಗಳು ಎಂದೂ ದುರುಪಯುಕ್ತವಾಗದೆ ತಮ್ಮ ಸುರಕ್ಷಿತತೆಯು ಸಂಪೂರ್ಣವಾಗಿ ಉಳಿಯುವಂತಾಗಲು ಅದೊಂದೇ ಮಾರ್ಗವೆಂದು ಅವರಿಗೆನಿಸಿತು. ಜನಪ್ರಿಯ ಪಕ್ಷಗಳಿದ್ದಲ್ಲೆಲ್ಲಾ ಚುನಾಯಿತರಾದ ತಾತ್ಕಾಲಿಕ ಶಾಸಕರು ಬೇಕೆಂಬ ಬೇಡಿಕೆಯು ಅವುಗಳ ಪ್ರಯತ್ನಕ್ಕೆ ಕ್ರಮೇಣ ಮುಖ್ಯೋದ್ದೇಶವಾಗುತ್ತ ನಡೆದುದರಿಂದ, ಶಾಸಕರ ಪ್ರಭುಶಕ್ತಿಯನ್ನು ಪರಿಸೀಮಿಸುವ ಹಿಂದಿನ ಕಾಲದ ಪ್ರಯತ್ನವು ಕೆಲಮಟ್ಟಿಗೆ ಗೌಣವಾಗುತ್ತ ಹೋಯಿತು. ಶಾಸ್ಯರ ನಿಯತಾವಧಿಕ ಆಯ್ಕೆಯಿಂದ ಶಾಸನಪ್ರಭುತ್ವ ಉದಯಿಸುವಂತೆ ಮಾಡುವ ಹೋರಾಟ ಮುಂಬರಿದ ಹಾಗೆ ಪ್ರಭುಶಕ್ತಿಯ ಪರಿಸೀಮನಕ್ಕೆ ಬೇಡವಾದಷ್ಟು ಪ್ರಾಮುಖ್ಯ ಕೊಡಲಾಗುತ್ತಿದೆ ಎಂದು ಕೆಲವರು ತಿಳಿಯಲಾರಂಭಿಸಿದರು. ಅದು ನಿತ್ಯವೂ ಪ್ರಜಾಹಿತಕ್ಕೆ ವಿರುದ್ಧವಾದ ಹಿತಾರ್ಥಗಳನ್ನಿಟ್ಟುಕೊಳ್ಳುವ ಶಾಸಕರನ್ನು ಹದಕ್ಕೆ ತರಲು ಜನ ಇಟ್ಟುಕೊಳ್ಳುವಂಥ ಆಪತ್ಕಾಲಿಕ ಅಸ್ತ್ರ ಎಂದು ಕಾಣಬಹುದು. ಆಗ ಮುಖ್ಯವಾಗಿ ಬೇಕಾದುದೆಂದರೆ ಪ್ರಭು–ಪ್ರಜೆಗಳಲ್ಲಿ ತಾದಾತ್ಮ್ಯಭಾವ ಮತ್ತು ಪ್ರಭುಗಳ ಹಿತಾರ್ಥ ಹಾಗೂ ಸಂಕಲ್ಪಗಳು ಪ್ರಜೆಗಳ ಹಿತಾರ್ಥ ಹಾಗೂ ಸಂಕಲ್ಪಗಳೇ ಆಗುವುದು. ರಾಷ್ಟ್ರಕ್ಕೆ ತನ್ನ ಸಂಕಲ್ಪದ ವಿರುದ್ಧವಾಗಿ ತನ್ನನ್ನು ರಕ್ಷಿಸಿಕೊಳ್ಳಬೇಕಾದ ಅಗತ್ಯವಿಲ್ಲ. ರಾಷ್ಟ್ರವು ತನ್ನನ್ನೇ ತಾನು ಶೋಷಿಸಿಕೊಂಬ ಭಯಕ್ಕೀಡಾಗದು. ಪ್ರಭುಗಳು ರಾಷ್ಟ್ರಕ್ಕೆ ಹೊಣೆಗಾರರೆನಿಸಿದರೆ, ತನಗೆ ಬೇಕಾದಾಗ ಅವರನ್ನದು ಮನೆಗೆ ಕಳಿಸಬಲ್ಲದು; ತನಗೆ ಬೇಕಾದ ರೀತಿಯಲ್ಲಿ ಬಳಸಬೇಕೆಂದು ತಾನು ವಿಧಿಸಬಹುದಾದ ಅಧಿಕಾರವನ್ನು ರಾಷ್ಟ್ರವು ಅವರಲ್ಲಿ ನಂಬಿಕೆಯಿಂದ ಇರಿಸಬಲ್ಲುದು. ಶಾಸಕರ ಶಕ್ತಿಯೆಂದರೆ ಆಗ ರಾಷ್ಟ್ರದ ಶಕ್ತಿಯೇ; ಶಾಸಕರಲ್ಲದು ಬಳಸಲು ಅನುಕೂಲವಾಗುವಂತೆ ಕೇಂದ್ರೀಕೃತವಾಗಿರುತ್ತದೆ–ಅಷ್ಟೆ. ಈ ಬಗೆಯ ವಿಚಾರ ಅಥವಾ ಭಾವನೆಯು ಯುರೋಪಿಯನ್ ಲಿಬರಲಿಸಂ ಇಲ್ಲವೆ ಉದಾರವಾದವನ್ನು ಪುರಸ್ಕರಿಸಿದ ಈ ಹಿಂದಿನ ತಲೆಮಾರಿನವರಲ್ಲಿತ್ತು; ಯುರೋಪಿನ ಇತರ ಭಾಗದಲ್ಲಿ ಈಗಲೂ ಇದು ಗಣ್ಯತೆಯನ್ನು ಪಡೆದಿದೆ. ಉಳಿಯಲರ್ಹವಲ್ಲದ ಸರಕಾರಗಳ ಕಾರ್ಯಶಕ್ತಿಯನ್ನು ಪರಿಸೀಮಿಸಿದರೆ ಸಾಕೆಂಬುದು ಯುರೋಪಿನ ರಾಜಕೀಯ ವಿಚಾರಗಳಲ್ಲಿ ಕೇವಲ ಅಪವಾದ ಪಂಕ್ತಿಯಲ್ಲಿದ್ದಾರೆನ್ನಬಹುದು. ಪರಿಸೀಮನಪಂಥದ ಭಾವನೆಯನ್ನು ಪೋಷಿಸುತ್ತ ಹೋದ ಪರಿಸ್ಥಿತಿಯು ಬದಲಾಗದೆ ಅದು ಹಾಗೇ ಮುಂದುವರಿಯುತ್ತ ಹೋಗಿದ್ದರೆ ನಮ್ಮ ಇಂಗ್ಲಂಡಿನಲ್ಲಿ ಈ ಹೊತ್ತಿಗೆ ಅಂಥದೇ ಭಾವನೆಯು ನೆಲೆಸಿರುತ್ತಿತ್ತು.

ಆದರೆ ರಾಜಕೀಯ ಹಾಗೂ ತಾತ್ವಿಕ ಸಿದ್ಧಾಂತಗಳಲ್ಲೂ ವ್ಯಕ್ತಿಗಳಲ್ಲೂ ಅಪಜಯವು ಕಣ್ಮರೆ ಮಾಡಬಹುದಾಗಿದ್ದ ತಪ್ಪುಗಳನ್ನೂ ದೌರ್ಬಲ್ಯಗಳನ್ನೂ ಜಯವು ಬಯಲಿಗೆಳೆಯುತ್ತದೆ. ಜನಪ್ರಿಯ ರಾಜ್ಯಭಾರವು ಕನಸಿನ ಮಾತಾಗಿದ್ದಾಗ, ಹಿಂದೆ ಎಂದೋ ಎಲ್ಲೋ ಇತ್ತೆಂದು ಓದುವ ಸಂದರ್ಭವಿದ್ದಾಗ ಮಾತ್ರ ತಮ್ಮ ಮೇಲಿನ ತಮ್ಮ ಪ್ರಭುತ್ವವನ್ನು ಜನರು ಪರಿಸೀಮಿಸಿಕೊಂಬುದು ಅಗತ್ಯವಿಲ್ಲ. ಪರಿಮಿತಗೊಳಿಸಿಕೊಳ್ಳುವ ಅವಶ್ಯಕತೆಯಿಲ್ಲ– ಎಂಬುದು ಸ್ವತಃಸಿದ್ಧ ಸತ್ಯವೆನ್ನಿಸಬಹುದು. ಫ್ರಾನ್ಸಿನ ಕ್ರಾಂತಿ ಕೂಡ ಅಂಥ ಕಲ್ಪನೆಗೆ ಭಂಗ ತರಲಿಲ್ಲ. ಆ ಕ್ರಾಂತಿಯೊಂದು ತಾತ್ಕಾಲಿಕ ವಿಕ್ಷೇಪವಾಗಿತ್ತು. ಅಲ್ಲಿ ಅಧಿಕಾರ ಕಸಿದುಕೊಂಡ ವಿಕ್ಷಿಪ್ತರು ಅತ್ಯಲ್ಪ ಸಂಖ್ಯರು; ಅಂಥ ವಿಕ್ಷಿಪ್ತ ಕಾರ್ಯಗಳನ್ನು ಮಾಡಿದ್ದು ಚಿರಸ್ಥಾಯಿಯಾಗಿ ನಡೆದು ಬಂದಿದ್ದ ಜನಸಂಸ್ಥೆಗಳಲ್ಲ – ರಾಜ ಹಾಗೂ ಕುಬೇರರ (Aristocrats) ನಿರಂಕುಶ ಪ್ರಭುತ್ವದ ವಿರುದ್ಧವಾಗಿ ಏಕಾಏಕಿ ತಳಮಳಿಸಿ ಬಂಡೆದ್ದ ಜನಸ್ತೋಮ, ಅಂತೂ ಕಾಲಕ್ರಮೇಣ ಒಂದು ಬಗೆಯ ಪ್ರಜಾಸತ್ತಾತ್ಮಕ ಗಣರಾಜ್ಯಪದ್ಧತಿಯು ಭೂಮಿಯು ವಿಸ್ತಾರವಾದ ಪ್ರದೇಶದಲ್ಲಿ ಹಬ್ಬಿತು; ಹಾಗೆ ಹಬ್ಬಿದಾಗ ಆ ಪ್ರದೇಶವು ರಾಷ್ಟ್ರಗಳ ಸಮಷ್ಟಿಯ ಒಂದು ಬಲಿಷ್ಠ ಸದಸ್ಯನೆಂದೂ ಎನಿಸಿತು. ಅಲ್ಲದೆ, ಚುನಾಯಿತವೂ ಹೊಣೆಯುಳ್ಳದ್ದೂ ಆದ ಸರಕಾರವು ವಿಚಾರ–ವಿಮರ್ಶೆಗಳಿಗೆ ವಸ್ತುವಾಯ್ತು. ದೊಡ್ಡ ವಾಸ್ತವಿಕ ವಿಷಯವೆನಿಸಿದ ಅದಕ್ಕಿಂದು ಅಂಥ ವಿಚಾರ–ವಿಮರ್ಶೆಗಳು ಬಹಳ ಉಪಯುಕ್ತವಾಗಿವೆ. ಈಗ "ಸ್ವರಾಜ್ಯ", "ಜನತೆಗೆ ತನ್ನ ಮೇಲಿರುವ ಪ್ರಭುತ್ವ" ಎಂಬಂತಹ ಮೇಳನುಡಿಗಳು ಪ್ರಕರಣದ ವಸ್ತುಸ್ಥಿತಿಯನ್ನು ವ್ಯಕ್ತಪಡಿಸುವುದಿಲ್ಲ ಎಂಬುದು ಕಂಡುಬಂದಿತು ಪ್ರಭುಶಕ್ತಿಯನ್ನು ಚಲಾಯಿಸುವ ಜನವೂ ಅದಕ್ಕೆ ಒಳಪಟ್ಟ ಜನವೂ ಯಾವಾಗಲೂ ಒಂದೇ ಅಲ್ಲ; ಈ "ಸ್ವರಾಜ್ಯ" ಎನ್ನುವುದಾದರೂ ಪ್ರತಿಯೊಬ್ಬನೂ ತಾನೇ ಸರಕಾರ ನಡೆಸುವುದು ಎಂದಾಗುವುದಿಲ್ಲ– ಪ್ರತಿಯೊಬ್ಬನನ್ನೂ ಮಿಕ್ಕೆಲ್ಲರೂ ಆಳುವುದೆಂಬುದೇ ಇದರ ಅರ್ಥ. ಜನತೆಯ ಸಂಕಲ್ಪ, ಇಚ್ಛೆ ಎಂದರೆ ವ್ಯಾವಹಾರಿಕವಾಗಿ ಜನತೆಯಲ್ಲಿಯ ಬಹುಸಂಖ್ಯರು ಅಥವಾ ಅತ್ಯಂತ ಕ್ರಿಯಾಶೀಲರು ಎಂದೆನಿಸಿದ ಭಾಗದವರ ಸಂಕಲ್ಪ ಅಥವಾ ಇಚ್ಛೆ ಎಂದೇ ತಿಳಿಯತಕ್ಕದ್ದು. ಆ ಭಾಗವೆಂದರೆ ಬಹುಸಂಖ್ಯರೆಂದೆನಿಸಿಕೊಳ್ಳುವವರಲ್ಲಿ ಜಯಶೀಲರಾದ ಜನರು; ಹಾಗೆ ಜನರಿಂದ ಸ್ವೀಕೃತರಾದವರು. ಆದುದರಿಂದ ಅಂಥ ಬಹುಸಂಖ್ಯರು ತಮ್ಮಲ್ಲಿಯ ಒಂದು ಭಾಗದವರನ್ನು ಶೋಷಿಸತೊಡಗಬಹುದು. ಹೀಗಿರುವಾಗ ಮಿಕ್ಕ ಅಧಿಕಾರದ ದುರುಪಯೋಗವಾಗದಂತೆ ಹೇಗೆ ಎಚ್ಚರಿಕೆ ಅಥವಾ ಮುಂಜಾಗ್ರತೆ ತೆಗೆದುಕೊಳ್ಳಬೇಕಾಗುವುದೋ ಹಾಗೇ ಈ ಮಹಾಭಾಗರಿಂದ ಶೋಷಣೆಯಾಗದಂತೆಯೇ ಮುನ್ನೆಚ್ಚರಿಕೆ ತೆಗೆದುಕೊಳ್ಳುವುದಗತ್ಯ. ಪ್ರಜೆಗಳಲ್ಲಿಯ ಬಲಿಷ್ಠ ಪಕ್ಷಕ್ಕೆ ಪ್ರಭುವರ್ಗ ಹೊಣೆಗಾರವಾಗಿರುವಾಗಲೂ ವ್ಯಕ್ತಿಗಳ ಮೇಲೆ ಸರಕಾರದ ಪ್ರಭುತ್ವ ಗಡಿಮಿತಿಗೊಳಪಟ್ಟೇ ಇರುವುದರ ಪ್ರಾಧಾನ್ಯವೇನೂ ಕಡಿಮೆಯಾಗದು ಪ್ರಜಾಪ್ರಭುತ್ವವು ಯಾರ ಹಿತಾರ್ಥಕ್ಕೆ

ನಿಜವಾಗಿಯೋ ಕಲ್ಪಿತವಾಗಿಯೋ ವಿರುದ್ಧವಾಗಿರುವುದೋ ಅಂಥ ಗಣ್ಯ ಯುರೋಪಿಯನ್ ವರ್ಗಗಳ ಒಲವಿಗೂ ವಿಚಾರಿಗಳ ಬುದ್ಧಿಗೂ ಆಪ್ಯಾಯಮಾನವಾಗಿ ಪರಿಣಮಿಸಿದ್ದರಿಂದ ಈ ವಿಚಾರವು ಅಲ್ಲಿ ಇಲ್ಲಿ ನೆಲೆಗೊಳ್ಳಲು ಬಹಳ ತೊಂದರೆಯಾಗಲಿಲ್ಲ; ರಾಜಕೀಯ ಅನ್ವೀಕ್ಷಣಗಳಲ್ಲಿ 'ಮಹಾಭಾಗರ (Majority) ದುಃಶಾಸನ (Tyranny)' ಎಂಬುದನ್ನಿಂದು ಸಾಮಾನ್ಯವಾಗಿ ಸಮಾಜವು ಉಂಟಾಗದಂತೆ ಜಾಗ್ರತೆವಹಿಸಬೇಕಾದ ದುರ್ಯೋಗಗಳ ಪಟ್ಟಿಗೆ ಸೇರಿಸಲಾಗುತ್ತದೆ.

ಮಿಕ್ಕ ದುಃಶಾಸನಗಳಂತೆಯೇ ಮಹಾಭಾಗರ ದುಃಶಾಸನವನ್ನೂ ಮೊದಲು (ಈಗಲೂ ಸ್ವಲ್ಪ ಕುತ್ಸಿತ ದೃಷ್ಟಿಯಿಂದ ಭಯಂಕರವೆಂದು ತಿಳಿಯಲಾಯಿತು. ಅಂಥ ದುಃಶಾಸನದ ಕೃತ್ಯಗಳು ಸಂಭವಿಸುವುದು ಸಾರ್ವಜನಿಕ ಅಧಿಕಾರಿಗಳ ಮೂಲಕವಾಗಿಯೇ. ಆದರೆ ಸಮಾಜವೇ ದುಃಶಾಸನವಾದಾಗ ಅರ್ಥಾತ್ ಸ್ವಾಂಗವಾದ ವ್ಯಕ್ತಿಗಳ ಮೇಲೆ ಸಾಮೂಹಿಕವಾಗಿ ದಬ್ಬಾಳಿಕೆ ನಡೆಸುವಾಗ– ಅದರ ರಾಜಕೀಯ ಕರ್ತವ್ಯನಿರ್ವಾಹಕರ ಕೃತ್ಯಗಳಿಗಷ್ಟೇ ಆ ದುಃಶಾಸನವು ಪರಿಮಿತವಾಗಲಾರದು ಎಂಬುದು ವಿಚಾರವಂತರಿಗೆ ಹೊಳೆಯಿತು. ಸಮಾಜವು ತನ್ನ ನಿರ್ಣಯಗಳನ್ನು ಜಾರಿಗೆ ತರಲೂ ಬಲ್ಲದು– ತಂದೂ ತರುತ್ತದೆ; ಅದು ನ್ಯಾಯವಾದುದರ ಬದಲು ಅನ್ಯಾಯವಾದ ಆಜ್ಞೆಗಳನ್ನು ಹೊರಡಿಸಿದರೆ ಅಥವಾ ತಾನು ಕೈಹಾಕಬಾರದಿರುವ ವಿಷಯಗಳ ಬಗ್ಗೆ ಯಾವುದಾದರೂ ಆಜ್ಞೆಯನ್ನು ಕೊಟ್ಟರೆ ಆಗ ಅದು ನಡೆಸುವುದು ಇತರ ವಿವಿಧ ರಾಜಕೀಯ ಶೋಷಣೆಗಳನ್ನು ಮೀರಿಸಿದ ಶೋಷಣೆಯಾಗುವುದು. ಹೇಗೆಂದರೆ, ಅಂಥ ಸಮಯದಲ್ಲದು ತನ್ನ ಆಜ್ಞೆಯನ್ನು ಮುರಿದುದಕ್ಕೆ ಅತ್ಯುಗ್ರದಂಡಗಳನ್ನು ವಿಧಿಸದಿದ್ದರೂ ವ್ಯಕ್ತಿಗಳಿಗೆ ಅದರಿಂದ ತಪ್ಪಿಸಿಕೊಳ್ಳಲು ಅತ್ಯಲ್ಪ ಮಾರ್ಗಗಳನ್ನು ಉಳಿಸುತ್ತದೆ. ಏಕೆಂದರೆ ಜೀವನದ ವಿವರಗಳಲ್ಲದು ಮತ್ತಷ್ಟು ಆಳವಾಗಿ ಹೊಕ್ಕಿರುತ್ತದೆ– ಆದ್ದರಿಂದ ಬಾಳಿನ ಆತ್ಮವನ್ನೇ ಅದು ಗುಲಾಮಗಿರಿಯಲ್ಲಿಟ್ಟಿರುತ್ತದೆ! ಇಂಥ ಸಂದರ್ಭದಲ್ಲಿ ನ್ಯಾಯಾಧೀಶನ ದುಃಶಾಸನದಿಂದ ಉಳಿದುಕೊಳ್ಳಲು ರಕ್ಷಣೆಯಿದ್ದರಷ್ಟೇ ಸಾಲದು; ಪ್ರಚಲಿತ ಭಾವನೆ ಹಾಗೂ ಅಭಿಪ್ರಾಯಗಳಿಂದಲೂ ಸಮಾಜಾಭಿಪ್ರಾಯವನ್ನು ಒಪ್ಪದವರ ಮೇಲೆ ವರ್ತನೆಯ ನೀತಿಯೆಂದು ಸಮಾಜವು ತನ್ನದೇ ಆದ ಆಚಾರ–ವಿಚಾರಗಳನ್ನು ಹೇರಲು ನಾಗರಿಕ ದಂಡ ವಿಧಾನದ ಹೊರತಾಗಿ ಬೇರೆಯ ಮಾರ್ಗಗಳನ್ನು ಹಿಡಿಯುವ ಪ್ರವೃತ್ತಿಯಿಂದಲೂ ವ್ಯಕ್ತಿಗೆ ರಕ್ಷಣೆ ಅಗತ್ಯ. ಅಂಥ ರಕ್ಷಣೆಯಿಲ್ಲದಲ್ಲಿ ಅದು ವ್ಯಕ್ತಿಯ ವಿಕಾಸವನ್ನು ತಡೆಗಟ್ಟೀತು; ಸಾಧ್ಯವಾದರೆ ತನ್ನ ರೀತಿನೀತಿಗಳಿಗೆ ಹೊಂದಿಕೆಯಾಗದ ವ್ಯಕ್ತಿತ್ವವು ರೂಪಿತವಾಗುವುದನ್ನು ತಡೆದು, ತಾನೆದುರಿಡುವ ಮಾದರಿಯಂತೆಯೇ ಎಲ್ಲರ ವ್ಯಕ್ತಿತ್ವವೂ ರೂಪಿಸಲ್ಪಡಬೇಕೆಂದು ಒತ್ತಾಯಿಸೀತು. ವ್ಯಕ್ತಿ ಸ್ವಾತಂತ್ರ್ಯದಲ್ಲಿ ಸಾಮೂಹಿಕ ಅಭಿಪ್ರಾಯವು ನ್ಯಾಯವಾಗಿ ಕೈಹಾಕುವುದಕ್ಕೂ ಒಂದು ಪರಿಮಿತಿಯಿದೆ. ಆ ಗಡಿಯನ್ನು ಹುಡುಕಿ ತೆಗೆದು, ಆಕ್ರಾಂತವಾಗದಂತೆ ಅದನ್ನು ಉಳಿಸಿಕೊಳ್ಳುವುದೂ

ಮಾನವ ವ್ಯವಹಾರವು ಒಳ್ಳೆಯದಾಗಿರಬೇಕಾಗಿದ್ದರೆ ರಾಜಕೀಯ ನಿರಂಕುಶಾಧಿಕಾರದಿಂದ ಉಳಿದುಕೊಳ್ಳಲು ಬೇಕಾದ ಸಂರಕ್ಷಣೆಯಷ್ಟೇ ಅನಿವಾರ್ಯ.

ಸಾಮಾನ್ಯರೂಪದಲ್ಲಿ ಈ ಪ್ರಮೇಯವನ್ನು ಯಾರಾದರೂ ವಿರೋಧಿಸುವ ಸಂಭವವಿಲ್ಲದಿದ್ದರೂ ಗಡಿಗೆರೆಯನ್ನು ಎಲ್ಲಿ ಎಳೆಯಬೇಕು–ವ್ಯಕ್ತಿ ಸ್ವಾತಂತ್ರ್ಯ ಹಾಗೂ ಸಾಮಾಜಿಕ ನಿಯಂತ್ರಣಗಳಲ್ಲಿ ಯೋಗ್ಯವಾದ ಹೊಂದಿಕೆಯನ್ನು ಹೇಗೆ ಸಾಧಿಸಬೇಕು– ಎಂಬ ವ್ಯಾವಹಾರಿಕ ಪ್ರಶ್ನೆ ಇಡೀ ಹಾಗೇ ಉಳಿಯಿತು. ಯಾರಿಗಾದರೂ ಬಾಳುವೆಗೆ ಬೆಲೆಯಿದೆ ಎನ್ನಿಸಬೇಕಾದರೆ ಮಿಕ್ಕವರ ಚಟುವಟಿಕೆಗಳ ಮೇಲೆ ನಿಯಂತ್ರಣ ಹೇರುವುದು ಅಗತ್ಯವಾಗುತ್ತದೆ. ಆದುದರಿಂದ ಮೊಟ್ಟಮೊದಲು ಕಾಯಿದೆಯ ಮೂಲಕವಾಗಿ ಕೆಲವಾದರೂ ವರ್ತನಾನಿಯಮಗಳನ್ನು ಹೇರಬೇಕಾಯಿತು; ಹಾಗೇ ಕಾಯಿದೆಯ ಕಕ್ಷೆಯೊಳಗೆ ಬಾರದ ವಿವಿಧ ವಿಷಯಕ ಅಭಿಪ್ರಾಯದಿಂದಲೂ ಅಂಥ ನಿಯಮಗಳನ್ನು ಹೊರಿಸಬೇಕಾಗುತ್ತದೆ. ಈ ನಿಯಮಗಳು ಯಾವುವಾಗಿರಬೇಕು ಎಂಬುದೇ ಮಾನವವ್ಯವಹಾರದಲ್ಲಿ ಮುಖ್ಯ ಪ್ರಶ್ನೆಯಾಗಿದೆ. ಆದರೆ ಅತಿ ಸ್ಪಷ್ಟವಾದ ಕೆಲ ಪ್ರಕರಣಗಳನ್ನುಳಿದರೆ ಮಿಕ್ಕವುಗಳಲ್ಲಿ ಈ ಪ್ರಶ್ನೆಯ ಪರಿಹಾರ– ಪ್ರಯತ್ನವು ಅತ್ಯಂತ ಮಂದಗತಿಯಿಂದ ಸಾಗಿದೆ. ಇದನ್ನು ಯಾವ ಯುಗದ್ವಯವೂ ದೇಶದ್ವಯವೂ ಏಕರೂಪವಾಗಿ ನಿರ್ಣಯಿಸಿದ್ದಿಲ್ಲ. ಯಾವುದಾದರೂ ಒಂದು ದೇಶದ ಅಥವಾ ಕಾಲದ ನಿರ್ಣಯವು ಮತ್ತೊಂದು ದೇಶಕ್ಕೆ ಅಥವಾ ಕಾಲಕ್ಕೆ ಯಾವಾಗಲೂ ಆಶ್ಚರ್ಯಕರವೆಂದು ತೋರುತ್ತ ಬಂದಿದೆ. ಹೀಗಿದ್ದರೂ ಯಾವಾಗಲೂ ಮಾನವಕುಲವು ಒಪ್ಪಿದಂಥ ವಿಷಯವೊಂದನ್ನು ಲೀಲಾಜಾಲವಾಗಿ ಹೇಗೆ ನಿರ್ಣಯಿಸಿಬಿಡಬಹುದೇನೋ ಹಾಗೇ ಇದನ್ನೂ ಬಿಡಿಸಿ ಒಗೆಯಬಹುದೆಂದು ಎಲ್ಲ ಕಾಲದ ಎಲ್ಲ ದೇಶದ ಜನವೂ ಭಾವಿಸುತ್ತ ಬಂದಿದೆ. ತಮ್ಮ ಬಳಕೆಯಲ್ಲಿರುವ ನಿಯಮಗಳು ಸ್ವತಃಸಿದ್ಧವೂ ಸ್ವಯಂಸ್ಪಷ್ಟವೂ ಆಗಿ ಜನರಿಗೆ ತೋರುವುವು. ಇದೊಂದು ಸಾರ್ವತ್ರಿಕ ಭ್ರಮೆ, ರೂಢಿಮಾಯೆಯಿಂದ ಹುಟ್ಟಿದ ಭ್ರಾಂತಿಗಳಿಗೊಂದು ಉದಾಹರಣೆ. ರೂಢಿ ಅಥವಾ ಅಭ್ಯಾಸವೆಂಬುದು ನಮ್ಮ 'ದ್ವಿತೀಯ ಸ್ವಭಾವ' ಎನ್ನುವರಲ್ಲಾ – ಅದು ಹಾಗಲ್ಲ; ಯಾವಾಗಲೂ ಅದೇ ನಮ್ಮ ಸ್ವಭಾವ ಎಂದು ಭಾವಿಸುವ ಸಂದರ್ಭಗಳೇ ಹೆಚ್ಚು. ತಮ್ಮಲ್ಲಿ ಒಬ್ಬರೊಬ್ಬರ ಮೇಲೆ ಮಾನವರು ತಾವೇ ಹೇರಿದ ವರ್ತನಾನಿಯಮಗಳ ಬಗ್ಗೆ ಸಂಶಯ ಉಂಟಾಗದಂತೆ ಮಾಡುವಲ್ಲಿ ರೂಢಿಯ (Custom) ಪರಿಣಾಮ ಸಂಪೂರ್ಣರೂಪದ್ದಾಗಿದೆ; ಏಕೆಂದರೆ, ಅಂಥ ನಿಯಮಗಳ ವಿಷಯವು ವಿಚಾರ ಮಾಡಬೇಕಾದಂಥದೇ ಅಲ್ಲ– ತಾನೇ ಆಗಲಿ ಅನ್ಯೋನ್ಯವಾಗಿಯಾಗಲಿ ಯಾರೂ ವಿಮರ್ಶಿಸಬೇಕಾದದ್ದೇ ಅಲ್ಲ– ಅಂಥ ಅಗತ್ಯವೇ ಇಲ್ಲ– ಎಂದು ಸಾಮಾನ್ಯವಾಗಿ ನಂಬಲಾಗುತ್ತದೆ. ಜನರ ನಂಬಿಗೆ ಇರುವುದೂ ಹೀಗೆ; ಅಲ್ಲದೆ ತತ್ವಜ್ಞಾನಿಗಳೆನ್ನಿಸಿಕೊಳ್ಳಬೇಕೆಂಬ ಕೆಲವರು ಇಂಥ ವಿಷಯಗಳಲ್ಲಿ ಅವರ ಭಾವನೆಯೇ ಸಾಕು, ವಿಚಾರ ಅನಗತ್ಯ– ಎಂದು ಹೇಳಿ ಅಂಥ ನಂಬಿಗೆಗೆ ಪ್ರೋತ್ಸಾಹಕೊಡುತ್ತ

ಬಂದಿದ್ದಾರೆ. ಎಲ್ಲರೂ ತಾನು ನಡೆದುಕೊಳ್ಳುವಂತೆ ಮತ್ತು ತನ್ನ ಸಹಾನುಭೂತಿಗೊಳಗಾದವರು ಬಯಸುವಂತೆ ನಡೆದುಕೊಳ್ಳಬೇಕು– ಎಂಬುದೇ ಜನರು ಅಂಥ ಅಭಿಪ್ರಾಯಕ್ಕೆ ಬರಲು ಆಧರಿಸಿದ ವ್ಯಾವಹಾರಿಕ ತತ್ವವಾಗಿದೆ. ತನ್ನ ತೀರ್ಮಾನದ ಮಟ್ಟವು ತನಗಷ್ಟೇ ಪ್ರಿಯವಾದುದು, ತಾನು ಬಯಸಿದಂತೆ ತನ್ನ ತೀರ್ಮಾನವಿದೆ ಎಂಬುದನ್ನು ಯಾರೂ ವಿಚಾರಿಸಿ ತಿಳಿದುಕೊಂಡಂತಿಲ್ಲ. ವಿಚಾರ ಮಾಡದೆ ನಡತೆಯ ಯಾವುದಾದರೊಂದು ಅಂಶದ ಬಗ್ಗೆ ಕೊಟ್ಟ ಒಬ್ಬನ ಅಭಿಪ್ರಾಯವು ಕೇವಲ ಆತನ ಆಯ್ಕೆ ಎನಿಸಿತು. "ಎಲ್ಲರೂ ಹಾಗೇ ಹೇಳುತ್ತಾರೆ" ಎಂದೊಮ್ಮೆ ಆತ ತನ್ನ ಅಭಿಪ್ರಾಯವನ್ನು ಸಮರ್ಥಿಸಿಕೊಂಡರೆ, ಆಗ ಅಂಥ ಅಭಿಪ್ರಾಯವು ಒಬ್ಬನದಾಗಿರುವುದರ ಬದಲು ಬಹಳ ಜನರು ಬಯಸಿದ್ದು ಎಂದಿಷ್ಟೇ ಆಗುವುದು. ಸಾಮಾನ್ಯವಾಗಿ ಹೀಗೆ ಬೆಂಬಲಪಡೆದ ತನ್ನ ಇಷ್ಟಾಭಿಪ್ರಾಯವೇ ಸಂಪೂರ್ಣ ತೃಪ್ತಿಕರವಾದ ಸಮರ್ಥನೆ; ಇಷ್ಟೇ ಅಲ್ಲದೆ, ಅವನಿಗೆ ತನ್ನ ಧರ್ಮಶಾಸ್ತ್ರದಲ್ಲಿ ಬರೆದಿಡದ ನೀತಿ–ಅಭಿರುಚಿ–ಔಚಿತ್ಯ–ಪ್ರಜ್ಞೆಗಳಿಗೆ ಸಂಬಂಧಿಸಿದ ಎಲ್ಲ ಕಲ್ಪನೆಗಳಿಗೂ ಇದೊಂದೇ ಸಮರ್ಪಕವೆನಿಸುವ ಸಮರ್ಥನೆಯಾಗಿರುತ್ತದೆ. ಧರ್ಮಶಾಸ್ತ್ರದ ಅರ್ಥ ಮಾಡಿಕೊಳ್ಳುವುದರಲ್ಲಿ ಕೂಡ ಅವನ ಪಾಲಿಗೆ ಇದೇ ಮುಖ್ಯ ಸೂತ್ರವೂ ಹೌದು. ಈ ಪ್ರಕಾರವಾಗಿ, "ಇದು ನಿಂದ್ಯ, ಇದು ವಂದ್ಯ" ಎಂಬ ಜನರ ಅಭಿಪ್ರಾಯಗಳು ಪರರ ವರ್ತನೆಯ ಬಗ್ಗೆ ತಮ್ಮಲ್ಲಿರುವ ಅಪೇಕ್ಷೆಗಳ ಮೇಲೆ ಪ್ರಭಾವ ಬೀರಿದ ವಿವಿಧ ಕಾರಣಗಳಿಂದ ರೂಪಿತವಾಗಿರುತ್ತವೆ; ಅಂಥ ಕಾರಣಗಳಾದರೋ ಯಾವುದಾದರೂ ಇತರ ವಿಷಯದ ಬಗ್ಗೆ ತಮಗಿರುವ ಬಯಕೆಗಳನ್ನ ನಿರ್ದಿಷ್ಟಗೊಳಿಸುವ ಕಾರಣಗಳಷ್ಟೇ ಅಸಂಖ್ಯವಾಗಿರುತ್ತವೆ. ಕೆಲವೊಮ್ಮೆ ಅವರ ವಿಚಾರ ಅಂಥ ಕಾರಣವಾಗಬಹುದು; ಇನ್ನೊಮ್ಮೆ ಅವರ ಪೂರ್ವಗ್ರಹಗಳೋ ಮೂಢನಂಬಿಗೆಗಳೋ ಅಂಥ ಕಾರಣಗಳೆನಿಸಿಯಾವು– ಎಷ್ಟೋ ಸಲ ಅವರ ಸಾಮಾಜಿಕ ಭಾವನೆಗಳು, ಅವರ ಅಸಾಮಾಜಿಕ ಭಾವನೆಗಳೂ ಒಮ್ಮೆ ಕಾರಣಗಳಾದರೆ ಆಶ್ಚರ್ಯಪಡಬೇಕಾಗಿಲ್ಲ– ಅವರ ಹೊಟ್ಟೆಕಿಚ್ಚು, ಕರಬು, ಸೊಕ್ಕು ಅಥವಾ ತಿರಸ್ಕಾರಬುದ್ಧಿ ಅಂಥ ಕಾರಣಗಳಾಗಬಹುದು. ಆದರೆ ಬಹಳ ಸಲ ಕಾರಣಗಳಾಗುವಂಥವೆಂದರೆ ತಮ್ಮ ಬಗ್ಗೇ ತಮಗಿರುವ ಆಸೆಪಾಸೆ ಹಾಗೂ ಅಂಜಿಕೆಗಳು– ಅವರ ನ್ಯಾಯವಾದ ಅಥವಾ ಅನ್ಯಾಯವಾದ ಸ್ವಾರ್ಥಬುದ್ಧಿ ಉಚ್ಚವರ್ಗವೆಂಬುದೊಂದಿರುವ ದೇಶಗಳಲ್ಲೆಲ್ಲಾ ದೇಶದ ನೀತಿಗಳಲ್ಲಿ ಬಹ್ವಂಶವು ಅದರ ವರ್ಗಹಿತಾರ್ಥಗಳಿಂದಲೂ ವರ್ಗೌನ್ನತ್ಯದ ಭಾವನೆಗಳಿಂದಲೂ ಹುಟ್ಟಿಬಂದುದಾಗಿರುತ್ತದೆ. ಸ್ಪಾರ್ಟನ್ನ–ಹೆಲಾಟ, ತೋಟದೊಡೆಯ–ನೀಗ್ರೋ, ರಾಜ–ಪ್ರಜೆ, ಒಡೆಯ–ಒಕ್ಕಲು, ಗಂಡು–ಹೆಣ್ಣುಗಳ ನಡುವಣ ನೀತಿನಿಯಮಗಳು ಹೆಚ್ಚಾಗಿ ಇಂಥ ವರ್ಗಹಿತ–ವರ್ಗಭಾವನೆಗಳಿಂದಲೇ ಹುಟ್ಟಿದಂಥವು. ಹೀಗೆ ಹುಟ್ಟಿದ ರಸಗಳು (Sentiments) ಉಚ್ಚವರ್ಗದವರ ಪರಸ್ಪರ ಸಂಬಂಧಗಳ ನೀತಿನಿಯಮಗಳ ಭಾವನೆಗಳಿಗೂ ಅನ್ವಯಿಸುತ್ತವೆ. ಹಾಗಲ್ಲದೆ, ಮೊದಲು

ಮೇಲ್ಮಟ್ಟದಲ್ಲಿದ್ದು ಅನಂತರ ಕೆಳಗಿಳಿದಾಗ ಅಥವಾ ಅಂಥ ವರ್ಗದ ಔನ್ನತ್ಯವು ಜನರಿಗೆ ಅಪ್ರಿಯವಾದಾಗ ಎಷ್ಟೋ ವೇಳೆ ಸಮಾಜದ ಜೀವಂತ ನೀತಿರಸಗಳು (Moral Sentiments) ಉನ್ನತ ಮಟ್ಟವನ್ನೇ ಒಲ್ಲದ ಅಸಹನೆಯ ಮುದ್ರೆಯನ್ನು ತಾಳಿರುತ್ತವೆ. ನೀತಿ ನಿಯಮಗಳನ್ನು ನಿರ್ದೇಶಿಸುವ ಇನ್ನೊಂದು ವರ್ತನಾನಿಯಾಮಕ ಮಹಾತತ್ವವೂ ಕಾರ್ಯದಲ್ಲೂ ಸಹನೆಯಲ್ಲೂ ಅಮಲಿನಲ್ಲಿರುವುದುಂಟು. ಕಾಯಿದೆ ಇಲ್ಲವೆ ಜನಮತ ಅದನ್ನು ಜಾರಿಗೆ ತಂದಿರುವುದೂ ಇದೆ. ಅದೆಂದರೆ ತಮ್ಮ ದೇವತೆಗಳ ಅಥವಾ ಒಡೆಯರ ಕಲ್ಪಿತ ಇಷ್ಟಾನಿಷ್ಟಗಳಿಗೆ ಮಾನವಕುಲ ಅಡಿಯಾಳಾಗಿರುವುದು. ಮೂಲತಃ ಸ್ವಾರ್ಥಜನ್ಯವಾಗಿದ್ದರೂ ಈ ಅಡಿಯಾಳ್ತನವು ವಂಚಕತೆಯ ರೂಪದ್ದಲ್ಲ. ಇದು ಸಂಪೂರ್ಣವಾಗಿ ಸಹಜವಾದ, ನಿಂದ್ಯಗಳ ಬಗ್ಗೆ ಇರುವ, ಭಯರಸಕ್ಕೆಡೆಗೊಡುತ್ತದೆ. ಇದು ಐಂದ್ರಜಾಲಿಕರನ್ನೂ ಧರ್ಮದ್ರೋಹಿಗಳನ್ನೂ ಮನುಷ್ಯರು ಸುಡುವಂತೆ ಮಾಡಿತು. ಅನೇಕ ಕೀಳು ಪ್ರಭಾವಗಳಲ್ಲಿ ನೀತಿರಸಗಳ ದಿಕ್ಕಿನಲ್ಲಿ ಸಮಾಜದ ಸಾಮಾನ್ಯವೂ ಸುಸ್ಪಷ್ಟವೂ ಆದ ಹಿತಾರ್ಥಗಳು ತಮ್ಮ ದೊಡ್ಡ ಪಾಲನ್ನು ತೆಗೆದುಕೊಂಡವು. ಹಾಗೆ ಅವು ತೆಗೆದುಕೊಂಡದ್ದು ವಿಚಾರಬಲದಿಂದ ಅಥವಾ ನೀತಿ ಸಿದ್ಧಿಯ ದೃಷ್ಟಿಯಿಂದ ಎಂಬುದಕ್ಕಿಂತ ಹೆಚ್ಚಾಗಿ ಅವುಗಳಲ್ಲಿ ಹುಟ್ಟಿಬಂದ ಸಹಾನುಭೂತಿ–ಅಸಹಾನುಭೂತಿಗಳ ಪರಿಣಾಮವಾಗಿ– ಎಂಬುದೇ ನಿಜ. ಸಮಾಜದ ಹಿತಾರ್ಥಗಳಿಗೆ ಯಾವ ಸಂಬಂಧವೂ ಇಲ್ಲದ ಆ ಬಗೆಯ ಸಹಾನುಭೂತಿ–ಅಸಹಾನುಭೂತಿಗಳು ನೀತಿತತ್ವಗಳ ಪ್ರಸ್ಥಾಪನ ಕಾರ್ಯದಲ್ಲಿ ಅಷ್ಟೇ ಶಕ್ತಿಯನ್ನು ಪ್ರದರ್ಶಿಸಿದವು.

ಸಮಾಜದ ಪ್ರಿಯಾಪ್ರಿಯಗಳೇ (ಅಥವಾ ಅವುಗಳ ಸಮರ್ಥವಾದೊಂದು ಭಾಗವು) ಕಾಯದೆ ಅಥವಾ ಅಭಿಪ್ರಾಯ ಹೊರಿಸುವ ದಂಡಗಳ ಮೂಲಕ ಸಾಮಾನ್ಯವಾಗಿ ಆಚರಿಸಲು ವಿಧಿಸಿದ ನಿಯಮಗಳನ್ನು ವಸ್ತುತಃ ನಿರ್ದಿಷ್ಟಗೊಳಿಸಿದ್ದು. ಸರ್ವಸಾಧಾರಣವಾಗಿ, ವಿಚಾರ–ಭಾವನೆಗಳಲ್ಲಿ ಸಮಾಜಕ್ಕಿಂತ ಮುಂದುವರಿದವರು (ಆ ವಿಧಾನದ ಎಷ್ಟೋ ವಿವರಗಳು ತಮಗೆ ವಿರುದ್ಧವಾಗಿದ್ದಾಗಲೂ) ತತ್ವಶಃ ಈ ಸನ್ನಿವೇಶಕ್ಕೆ ಪ್ರತೀಕಾರಮಾಡದೆ ಉಳಿದರು. ಸಮಾಜದ ಪ್ರಿಯಾಪ್ರಿಯಗಳು ವ್ಯಕ್ತಿಗಳಿಗೆ ಕಾಯದೆಯಾಗಿ ನಿಲ್ಲಬೇಕೇ? ಎಂಬುದನ್ನು ಪ್ರಶ್ನಿಸದೆ, ಸಮಾಜವು ಯಾವುದನ್ನು ಪ್ರಿಯವೆಂದು ಭಾವಿಸಬೇಕು, ಯಾವುದನ್ನು ಅಪ್ರಿಯವೆಂದು ಭಾವಿಸಬೇಕು ಎಂದು ವಿಮರ್ಶಿಸುವುದರಲ್ಲೇ ಅವರು ಕಾಲಕಳೆದರು. ತಾವೇ ಯಾವ ಅಂಶಗಳ ಬಗ್ಗೆ ವಿರುದ್ಧವಾಗಿದ್ದರೋ ಅವುಗಳ ಬಗ್ಗೆ ಮನುಕುಲ ಇಟ್ಟುಕೊಂಡಿದ್ದ ಭಾವನೆಗಳನ್ನು ಬದಲಾಯಿಸುವ ಯತ್ನವೇ ಯೋಗ್ಯವೆಂದು ಅವರು ತಿಳಿಸಿದರಲ್ಲದೆ, ಅಂಥ ದ್ರೋಹಿಗಳೊಡನೆ ಸೇರಿಕೊಂಡು ಸ್ವಾತಂತ್ರ್ಯ ಸಂರಕ್ಷಣೆಗಾಗಿ ಸಾಮಾನ್ಯವಾಗಿ ಹೋರಾಡಲಿಲ್ಲ. ತತ್ವಶಃ ಯಾವುದಾದರೊಂದು ಉನ್ನತ ಹೇತುವನ್ನು ಅಲ್ಲಿ ಇಲ್ಲಿ ಯಾವನಾದರೊಬ್ಬ ಇಟ್ಟುಕೊಂಡಿದ್ದರೆ ಮತ್ತು ಹಾಗೇ ಅದನ್ನು ಸತತವಾಗಿ ಉಳಿಸಿಕೊಂಡು

ಬಾಳಿದ್ದರೆ ಆ ಹೇತು ಧರ್ಮಶ್ರದ್ಧೆಯೊಂದೇ. ಅಂಥ ಪ್ರಕರಣವು ಬಹಳ ವಿಧದಲ್ಲಿ ಬೋಧಕವೂ ನೀತಿಪ್ರಜ್ಞೆಯೆಂಬುದರ ದೌರ್ಬಲ್ಯಕ್ಕೆ ದೃಷ್ಟಾಂತವೂ ಆಗಿರುತ್ತಿತ್ತು. ಏಕೆಂದರೆ ದೇವರಿಂದ ದ್ವೇಷ್ಯ ಎನ್ನತಕ್ಕದ್ದು ಪ್ರಾಮಾಣಿಕ ಧರ್ಮಾಂಧನಲ್ಲಿ ನಿಃಸಂದಿಗ್ಧವಾದ ನೈತಿಕ ಭಾವನೆಯ ಪ್ರಕರಣಗಳಲ್ಲಿ ಒಂದು ಸಾರ್ವತ್ರಿಕ ಚರ್ಚು ತಾನೆಂದು ಹೇಳಿಕೊಂಡ ಸಂಸ್ಥೆಯ ನೊಗವನ್ನು ಕೊಡಹಿ ಎದ್ದವರೂ ಸಾಮಾನ್ಯವಾಗಿ ಧಾರ್ಮಿಕ ಅಭಿಪ್ರಾಯಭೇದಕ್ಕೆ ಅವಕಾಶಕೊಡುವುದರಲ್ಲಿ ಅದರಷ್ಟೇ ಅನುತ್ಸುಕರಾಗಿದ್ದರು. ಆದರೆ ಘರ್ಷಣೆಯ ಬಿಸಿಯಡಗಿದ ಕೂಡಲೆ ಯಾವ ಪಕ್ಷಕ್ಕೂ ಪೂರ್ಣ ಜಯವನ್ನು ಕೊಡದೆ ಪ್ರತಿಯೊಂದು ಚರ್ಚು ಅಥವಾ ಪಂಥವನ್ನು ತನ್ನ ಮೊದಲಿನ ನಿಲುಮೆಯನ್ನು ಉಳಿಸಿಕೊಂಬ ಪ್ರತ್ಯಾಶೆಗಷ್ಟೇ ಪರಿಮಿತಗೊಂಡಿರುವಂತೆ ಮಾಡಲಾಯಿತು. ತಾವೆಂದೂ ಮಹಾಭಾಗರಾಗಲಾರೆವೆಂಬುದನ್ನರಿತ ಅಲ್ಪಭಾಗರು (Minorities) ತಮ್ಮತ್ತ ಒಲಿಸಿಕೊಳ್ಳಲು ಸಾಧ್ಯವಾಗದವರಲ್ಲಿ ತಮಗೆ ಭಿನ್ನಾಭಿಪ್ರಾಯವನ್ನಿಟ್ಟುಕೊಳ್ಳಲು ಅನುವು ದೊರೆಯಬೇಕೆಂದು ಬೇಡಬೇಕಾಯಿತು. ವಿಶಾಲವಾದ ತಾತ್ವಿಕ ತಳಹದಿಯ ಮೇಲೆ ಸಮಾಜದ ವಿರುದ್ಧವಾಗಿ ವ್ಯಕ್ತಿಯ ಹಕ್ಕುಗಳನ್ನು ಸ್ಥಾಪಿಸುವ ಹೋರಾಟ ನಡೆದದ್ದು ಈ ರಣರಂಗವೊಂದರಲ್ಲೇ ಇದರಲ್ಲೇ ಭಿನ್ನಾಭಿಪ್ರಾಯವುಳ್ಳವರ ಮೇಲೆ ತನ್ನ ಅಧಿಕಾರ ಚಲಾಯಿಸಬಹುದೆಂಬ ಸಮಾಜದ ಹಕ್ಕನ್ನು ಬಹಿರಂಗವಾಗಿ ಪ್ರಶ್ನಿಸಲಾಯಿತು. ತನಗಿರುವ ಧಾರ್ಮಿಕ ಸ್ವಾತಂತ್ರ್ಯಕ್ಕೆ ಜಗತ್ತು ಯಾರಿಗೆ ಹೊಣೆಯಾಗಿದೆಯೋ ಅಂಥ ಮಹಾಲೇಖಕರೆಲ್ಲರೂ ಹೆಚ್ಚಾಗಿ ಆತ್ಮಸ್ವಾತಂತ್ರ್ಯವು (Freedom of consience) ಅಭೇದ್ಯ, ಅನಪಹಾರ್ಯ ಎಂದು ಖಂಡಿತೋಕ್ತಿಯಿಂದ ಹೇಳಿದ್ದಾರೆ; ತನ್ನ ಧಾರ್ಮಿಕ ಶ್ರದ್ಧೆ ಏಕಿದೆ, ಏನಿದೆ ಎಂಬುದರ ಬಗ್ಗೆ ಯಾವನೂ ಇನ್ನೊಬ್ಬರಿಗೆ ಅರಿಕೆ ಮಾಡಿಕೊಳ್ಳಬೇಕಾಗಿಲ್ಲ ಎಂದು ಸಾರಿದ್ದಾರೆ. ಹೀಗಿದ್ದರೂ ನಿಜವಾಗಿ ತಾವು ಲಕ್ಷ್ಯಕೊಡತಕ್ಕ ವಿಷಯಗಳಲ್ಲೆಲ್ಲಾ ಮಾನವಕುಲಕ್ಕೆ ಅಸಹನೆಯೇ ಸ್ವಾಭಾವಿಕವೆನಿಸಿ ಬಿಟ್ಟಿರುವುದರಿಂದ ವ್ಯಾವಹಾರಿಕವಾಗಿ ಧಾರ್ಮಿಕ ಸ್ವಾತಂತ್ರ್ಯವು ಎಲ್ಲೂ ಇಲ್ಲವಾಗಿದೆ– 'ಆ ದೇವ ಈ ದೇವ' ಎಂಬ ಜಗಳ ತನಗಡ್ಡಿಯಾದೀತೆಂದು ತಿಳಿದ ಉದಾಸೀನ ಪಂಥವಿದ್ದಲ್ಲಿ ಮಾತ್ರ ಧರ್ಮಸ್ವಾತಂತ್ರ್ಯಕ್ಕೆ ಸ್ವಲ್ಪ ಬಲ ಸಿಕ್ಕಿರಬಹುದು, ಅಷ್ಟೇ. ಎಲ್ಲ ಧಾರ್ಮಿಕರಲ್ಲೂ– ಅತ್ಯಂತ ಸಹನಶೀಲ ದೇಶದಲ್ಲೂ–ನಿರ್ದಿಷ್ಟ ಗ್ರಹಿಕೆಯ ಪ್ರಕಾರ ಪರಧರ್ಮಸಹನೆಯ ವ್ಯಾಪ್ತಿ ಕಡಿಮೆಯೇ ಆಗಿದೆ. ಒಬ್ಬನು ಚರ್ಚಿನ ಆಡಳಿತದ ವಿಷಯದಲ್ಲಿ ಸಹಿಷ್ಣುವಾಗಿದ್ದರೆ ಕರ್ಮವಿಧಿಗಳ ವಿಷಯದಲ್ಲಿ ಅಸಹಿಷ್ಣುವಾಗಿರುತ್ತಾನೆ; ಮತ್ತೊಬ್ಬ ಯಾರನ್ನಾದರೂ ಸಹಿಸಿಕೊಂಡಾನು, ಪೋಪಭಕ್ತ ಇಲ್ಲವೆ ಯೂನಿಟೇರಿಯನ್ನನನ್ನು ಸಹಿಸಿಕೊಳ್ಳಲಾರ; ಮಗುದೊಬ್ಬ ಶ್ರುತಿಯನ್ನಾಧರಿಸಿದ (Revealed) ಧರ್ಮವನ್ನು ಉಳಿಯಲೆಂದಾನು; ಇನ್ನು ಕೆಲವರು ತಮ್ಮ ಧರ್ಮಬುದ್ಧಿಯನ್ನು ಇನ್ನೂ ಸ್ವಲ್ಪ ವಿಸ್ತರಿಸಿಯಾರು– ಆದರೆ ನಾಸ್ತಿಕನನ್ನು ಸಹಿಸರು. ಜನರ ಮಹಾಭಾಗದ ನಂಬಿಗೆಯು ಎಲ್ಲೆಲ್ಲಿ ಇನ್ನೂ ನಿಜವಾದ ನಂಬಿಗೆಯಾಗಿಯೇ ಉಳಿದಿದೆಯೋ ಅಲ್ಲೆಲ್ಲಾ ಪರಧರ್ಮದ ಅಸಹಿಷ್ಣುತೆಯು ಅವಿಧೇಯನನ್ನು ಸ್ವಲ್ಪವೂ ಸಹಿಸಿಕೊಂಡಿಲ್ಲ.

ನಮ್ಮ ರಾಜಕೀಯ ಇತಿಹಾಸದ ವಿಲಕ್ಷಣ ಪರಿಸ್ಥಿತಿಯು ದೆಸೆಯಿಂದ ಒಂದು ವೇಳೆ ಅಭಿಪ್ರಾಯದ ಭಾರ ಹೆಚ್ಚಾಗಿದ್ದರೂ, ಯುರೋಪಿನ ಇತರ ದೇಶಗಳಲ್ಲಿರುವದಕ್ಕಿಂತ ಕಾಯದೆಯ ಭಾರ ನಮ್ಮಲ್ಲಿ ಸ್ವಲ್ಪ ಕಡಿಮೆ ಎಂದೇ ಹೇಳಬೇಕು; ಜನರ ಖಾಸಗಿ ವರ್ತನೆಯಲ್ಲಿ ಕಾಯದೆಯ ಅಥವಾ ಆಡಳಿತದ ಶಾಖೆ ಕೈಹಾಕಬಂದರೆ ಅವರಿಗೇನೋ ಒಂದು ತರಹದ ಹೊಟ್ಟೇಕಿಚ್ಚು ಏಳುವಂತೆ ತೋರುತ್ತದೆ. ಹಾಗೆ ಜನರು ಭಾವಿಸುವುದಕ್ಕೆ ವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ನ್ಯಾಯವಾಗಿ ಇರಬೇಕಾದ ಗೌರವ ಕಾರಣವಾಗಿದೆ ಎನ್ನುವಂತಿಲ್ಲ– ಸರಕಾರವೆಂದರೆ ಸಾರ್ವಜನಿಕ ಹಿತಾರ್ಥಕ್ಕೆ ವಿರುದ್ಧವಾಗಿ ನಿಂತ ಪ್ರತಿನಿಧಿ ಎಂಬ ಭಾವನೆ ಇನ್ನೂ ಅವರಲ್ಲಿ ಉಳಿದುಕೊಂಡಿರುವುದೇ ಕಾರಣ. ಸರಕಾರದ ಪ್ರಭುತ್ವ ಎಂದರೆ ತಮ್ಮ ಪ್ರಭುತ್ವ, ಅವರ ಅಭಿಪ್ರಾಯವೆಂದರೆ ತಮ್ಮ ಅಭಿಪ್ರಾಯ ಎಂದು ಇನ್ನೂ ನಮ್ಮ ಜನದ ಮಹಾಭಾಗ ಭಾವಿಸಲು ಕಲಿತುಕೊಂಡಿಲ್ಲ. ಅವರು ಹಾಗೆ ಕಲಿತುಕೊಂಡಾಗ ಸಾರ್ವಜನಿಕ ಅಭಿಪ್ರಾಯದಿಂದ ಹೇಗೋ ಹಾಗೇ ವ್ಯಕ್ತಿಸ್ವಾತಂತ್ರ್ಯವು ಸರಕಾರದಿಂದಲೂ ದಬ್ಬಾಳಿಕೆಗೆ ತುತ್ತಾದೀತು. ಆದರೆ ಈಗಲೂ ಸಂಪ್ರದಾಯದಲ್ಲಿಲ್ಲದ ಹೊಸ ಅಂಶದ ಬಗ್ಗೆ ಕಾಯದೆಯೇನಾದರೂ ವ್ಯಕ್ತಿಗಳನ್ನು ನಿಯಂತ್ರಿಸಬಂದರೆ ಅದನ್ನು ಪ್ರತಿಭಟಿಸುವ ಬುದ್ಧಿ ಜನರಲ್ಲಿ ಉಳಿದುಕೊಂಡಿದೆ. ಅಂಥ ಅಂಶವು ನ್ಯಾಯವಾಗಿ ಕಾಯದೆಯ ಕಕ್ಷೆಯೊಳಗೆ ಬಂದಿರಲಿ, ಬರದೆ ಇರಲಿ ಜನ ಅದಕ್ಕಾಗಿ ಹೇಳುವ ನಿಯಂತ್ರಣವನ್ನು ಸಹಿಸದು. ಒಟ್ಟಿನಲ್ಲೇನೋ ಈ ಬುದ್ಧಿ ಒಳ್ಳೆಯದೇ. ಆದರೆ ಎಷ್ಟೋ ಸಲ ಇದು ಅಸ್ಥಾನೀಯವೂ ವಿಶಿಷ್ಟ ಪ್ರಕರಣನಿಷ್ಠವೂ ಆಗಿರುತ್ತದೆ. ಸರಕಾರದ ಹಸ್ತಕ್ಷೇಪ ನ್ಯಾಯವೋ ಅಲ್ಲವೋ ಎಂಬುದನ್ನು ಪರೀಕ್ಷಿಸಲು ಯಾವ ತತ್ವವೂ ರೂಢಿಯಲ್ಲಿಲ್ಲ. ಯಾವ ವ್ಯಾವಹಾರಿಕ ಮಾನದಂಡವೂ ಇಲ್ಲ. ಜನರು ತಮಗೆ ಬೇಕುಬೇಕಾದ ಹಾಗೆ ನಿರ್ಣಯಿಸಿಬಿಡುತ್ತಾರೆ. ಏನಾದರೂ ಒಳ್ಳೆಯದಾಗಬೇಕೆಂದಿದ್ದಾಗ ಇಲ್ಲವೆ ಕೇಡು ಪರಿಹಾರವಾಗಬೇಕಾಗಿದ್ದಾಗ ಕೆಲವರು ಅಂಥ ಕಾರ್ಯವನ್ನು ಕೈಕೊಳ್ಳಬೇಕೆಂದು ಸರಕಾರವನ್ನು ಪ್ರಚೋದಿಸುತ್ತಾರೆ; ಆದರೆ ಮತ್ತೆ ಕೆಲವರು ಸಾಮಾಜಿಕ ಕೇಡು ಎಷ್ಟಾದರೂ ಸಹಿಸಿಕೊಂಡೇವಲ್ಲದೇ, ಮಾನವ ಹಿತಾರ್ಥಗಳ ಶಾಖೆಗಳಲ್ಲಿ ಒಂದು ಹೊಸ ಶಾಖೆಯನ್ನು ಸರಕಾರದ ನಿಯಂತ್ರಣಕ್ಕೆ ಒಳಪಡಿಸೆವು– ಎನ್ನುತ್ತಾರೆ. ಯಾವುದಾದರೊಂದು ವಿಶಿಷ್ಟ ಪ್ರಕರಣದಲ್ಲಿ ಜನರು ತಂತಮ್ಮ ರಸಾನುಗುಣವಾಗಿ ಆ ಈ ಪಕ್ಷವನ್ನು ಹಿಡಿಯುತ್ತಾರೆ; ಇಲ್ಲವೆ ಸರಕಾರ ಮಾಡಬೇಕೆಂದು ಹೇಳಲಾದ ವಿಷಯದಲ್ಲಿ ತಮಗಿರುವ ಆಸಕ್ತಿಯ ಪ್ರಮಾಣದ ಪ್ರಕಾರ ನಿರ್ಣಯಿಸಿದರೂ ನಿರ್ಣಯಿಸಿದರೇ: ಅಥವಾ ಸರಕಾರವು ಅಂಥ ಕಾರ್ಯವನ್ನು ತಾವೆಣಿಸಿದಂತೆ ಮಾಡಬಹುದೋ ಇಲ್ಲವೋ ಎಂಬ ಬಗ್ಗೆ ತಮಗಿರುವ ನಂಬಿಗೆಯನುಸಾರ ಅತ್ತ ಇತ್ತ ಒಲೆಯುವದೂ ಉಂಟು. ಆದರೆ ಸರಕಾರ 'ಇದನ್ನು ಮಾಡುವುದುಚಿತ' ಎಂದು ತಾವು ಸತತವಾಗಿ ತಾಳಿರುವ ಅಭಿಪ್ರಾಯದ ದೆಸೆಯಿಂದ ಪ್ರಕರಣದ ಆ ಈ ದಿಶೆಯನ್ನು ಜನರು ಹಿಡಿದು ನಿಲ್ಲುವುದು ಬಹು ವಿರಳ. ಹೀಗೆ

ಮಾನದಂಡರೂಪದ ತತ್ವವಿಲ್ಲದುದರಿಂದ ಒಂದು ಪಕ್ಷವು ಎಷ್ಟೋ ವೇಳೆ ಮತ್ತೊಂದರಷ್ಟೇ ಹಾದಿ ತಪ್ಪಿದ್ದಾಗಬಹುದಾಗಿದೆ; ಸರಕಾರದ ಹಸ್ತಕ್ಷೇಪವನ್ನು ಅನುಚಿತವಾಗಿ ಬೇಕೆಂದು ಕರೆಯುವುದು ಎಷ್ಟು ಸಲವೋ ಸುಮಾರು ಅಷ್ಟೇಸಲ ಅಂಥ ಹಸ್ತಕ್ಷೇಪವನ್ನು ಅನುಚಿತವಾಗಿ ಖಂಡಿಸುವುದೂ ಈಗ ನಡೆಯುತ್ತಿದೆ.

ವ್ಯಕ್ತಿಯೊಡನೆ ಸಮಾಜ ನಡೆಸುವ ವ್ಯವಹಾರಗಳನ್ನು ಒತ್ತಾಯ ಮತ್ತು ನಿಯಂತ್ರಣಗಳ ರೂಪದಲ್ಲಿ ಆಳಲು ಸರಕಾರಕ್ಕಿರುವ ಹಕ್ಕನ್ನು ನಿರ್ಧರಿಸುವ ಒಂದೇ ಒಂದು ಸರಳ ತತ್ವವನ್ನು ಒತ್ತಿ ಹೇಳುವುದೇ ಈ ಪ್ರಬಂಧದ ಉದ್ದೇಶ. ಅಂಥ ನಿಯಂತ್ರಣಕಾರ್ಯದಲ್ಲಿ ಸರಕಾರ ಬಳಸುವುದು ದಂಡರೂಪದ ಭೌತಿಕ ಶಕ್ತಿಯಾಗಿರಬಹುದು ಅಥವಾ ಸಾರ್ವಜನಿಕ ಅಭಿಪ್ರಾಯರೂಪದ ನೈತಿಕ ಶಕ್ತಿಯಾದರೂ ಆಗಿರಬಹುದು. ಸಾಮೂಹಿಕವಾಗಿ ಅಥವಾ ವೈಯಕ್ತಿಕವಾಗಿ ತನ್ನ ಬಳಗದ ಯಾವುದಾದರೊಂದು ವ್ಯಕ್ತಿಯ ವ್ಯವಹಾರದಲ್ಲಿ ಮಾನವಕುಲ ಕೈಹಾಕಬೇಕಾದ ಒಂದೇ ಒಂದು ಉದ್ದೇಶವೆಂದರೆ ಆತ್ಮರಕ್ಷಣೆ. ಯಾವ ನಾಗರಿಕ ಸಮಾಜವೇ ಆಗಲಿ– ಒಬ್ಬನ ಇಷ್ಟಕ್ಕೆ ವಿರುದ್ಧವಾಗಿ ಅವನ ಮೇಲೆ ಹಕ್ಕಿನ ಬಲದಿಂದ ಶಕ್ತಿ ಪ್ರಯೋಗ ಮಾಡಬೇಕಾದ ಒಂದೇ ಒಂದು ಉದ್ದೇಶವೆಂದರೆ ಇನ್ನೊಬ್ಬರಿಗೆ ಅವನಿಂದ ಹಾನಿಯಾಗಬಾರದೆಂಬುದೇ. ಅವನೊಬ್ಬನ ಭೌತಿಕ ಅಥವಾ ನೈತಿಕ ಹಿತಾರ್ಥವೊಂದೇ ಎಂದೂ ಸಾಕಷ್ಟು ಅಧಿಕಾರ ಅದಕ್ಕೆ ಕೊಡಲಾರದು. ಅವನಿಗದು ಉತ್ತಮ, ಅವನಿಗದರಿಂದ ಸುಖವಾಗುತ್ತದೆ, ಅವರಿವರ ಹೇಳಿಕೆಯ ಪ್ರಕಾರ ಅವನು ಹಾಗೆ ಮಾಡುವಂತೆಸಗುವುದು ವಿವೇಕ ಅಥವಾ ನ್ಯಾಯ ಎಂಬೀ ಯಾವ ಕಾರಣದಿಂದಲೂ ಅವನನ್ನು ಒತ್ತಾಯಕ್ಕೊಳಪಡಿಸುವುದು ನ್ಯಾಯವಾಗದು. ಇವೆಲ್ಲ ಅವನ ಮುಂದೆ ಪ್ರತಿಭಟನೆಯನ್ನು ವ್ಯಕ್ತಪಡಿಸಲು, ಚರ್ಚಿಸಲು, ಪ್ರಾರ್ಥಿಸಲು ಕಾರಣಗಳಾಗಬಹುದಲ್ಲದೆ ಅವನನ್ನು ಒತ್ತಾಯಿಸಲಾಗಲಿ, ಮೀರಿ ನಡೆದರೆ ಹಾನಿಯನ್ನುಂಟುಮಾಡಲಾಗಲಿ ತಕ್ಕ ಕಾರಣಗಳಾಗಲಾರವು ಒತ್ತಾಯವು ನ್ಯಾಯವಾದುದೆನಿಸಬೇಕಾದರೆ ಅದನ್ನು ತರಬೇಕಾಗಿ ಬಂದ ವ್ಯಕ್ತಿವರ್ತನೆ ಪರರಿಗೆ ಹಾನಿಕರವಾಗಿರಬೇಕು. ವ್ಯಕ್ತಿಯ ನಡತೆಯಲ್ಲಿ ಪರರಿಗೆ ಸಂಬಂಧಿಸುವ ಅಂಶವೊಂದರ ಬಗ್ಗೆ ಮಾತ್ರ ಸಮಾಜ ತಲೆಹಾಕಬಲ್ಲುದು. ಅವನೊಬ್ಬನಿಗೇ ಸಂಬಂಧಿಸಿದ ಅಂಶದಲ್ಲಿ ಸರ್ವತಂತ್ರ ಸ್ವತಂತ್ರನಾಗಿರುವುದು ವ್ಯಕ್ತಿಯ ಹಕ್ಕು. ತನ್ನಮೇಲೆ, ತನ್ನದೇ ಆದ ಮೈ–ಮನಗಳ ಮೇಲೆ ವ್ಯಕ್ತಿಯು ಸಾರ್ವಭೌಮ, ಸಮ್ರಾಟ್, ಸರ್ವಾಧಿಕಾರಿ!

ಪ್ರೌಢ ಮಾನವರಿಗಷ್ಟೇ ಈ ತತ್ವ ಅನ್ವಯಿಸುವುದೆಂಬುದನ್ನು ಹೇಳಬೇಕಾಗಿಲ್ಲ. ಮೈನರರಿಗೂ (Minor) ಇದಕ್ಕೂ ಸಂಬಂಧವಿಲ್ಲ. ಪಾಲನೀಯ ಅವಸ್ಥೆಯಲ್ಲಿರುವ ಎಲ್ಲರನ್ನೂ ಅವರ ಕಾರ್ಯಗಳಿಂದಲೂ ಪರರ ಕಾರ್ಯಗಳಿಂದಲೂ ಹಾನಿಗೀಡಾಗದಂತೆ ಕಾಯಬೇಕಾದದ್ದು ಅಗತ್ಯ. ಈ ಕಾರಣದಿಂದ ಒಂದು ಇಡಿ ಕುಲವು ಅಧಮ ಸಾಮಾಜಿಕ ಅವಸ್ತೆಯಲ್ಲಿದ್ದರೆ ಅದನ್ನು ಶಿಶುವೆಂದೇ ಗ್ರಹಿಸಬೇಕಾಗುತ್ತದೆ. ಸ್ವಯಂಸ್ಫೂರ್ತ

ಪ್ರಗತಿಯ ಮಾರ್ಗದಲ್ಲಿರುವ ಪ್ರಾರಂಭಿಕ ತೊಂದರೆಗಳು ಅತಿ ದೊಡ್ಡವು. ಅವನ್ನು ನಿವಾರಿಸಲು ಬೇಕಾದ ಸಾಧನದ ಆಯ್ಕೆ ಅಗಮ್ಯವೆಂದೇ ಹೇಳಬೇಕು; ಮತ್ತು ಸುಧಾರಣಾಪರನಾದ ಶಾಸಕನೊಬ್ಬನು ಸುಧಾರಣೆಯ ಸಿದ್ಧಿಗಾಗಿ ಏಕಮಾತ್ರವೆನಿಸಬಹುದಾದ, ಅನಿವಾರ್ಯವೆಂದೆನಿಸುವ ಯಾವ ಉಪಾಯವನ್ನು ಹಿಡಿದರೂ ನ್ಯಾಯವೇ. ಅನಾಗರಿಕರೊಡನೆ ವ್ಯವಹರಿಸುವಲ್ಲಿ ನಿರಂಕುಶ ಪ್ರಭುತ್ವವೇ ಯೋಗ್ಯ; ಆದರೆ ಅಂಥ ನಿರಂಕುಶಾಧಿಕಾರ ಚಲಾಯಿಸುವುದರ ಗುರಿ ಆ ಅನಾಗರಿಕರನ್ನು ಸುಧಾರಿಸುವುದೇ ಆಗಿರಬೇಕು. ಅಂಥ ಸುಧಾರಣೆಮಾಡಿ ತೋರಿಸುವುದರ ಮೂಲಕ ಆ ಅಧಿಕಾರ ಚಲಾವಣೆ ಸಮರ್ಥಿತವಾಗಬೇಕು. ಅನಿರ್ಬದ್ಧವೂ ಸಮಾನಸ್ಕಂಧವೂ ಆದ ಚರ್ಚೆಯ ಮೂಲಕ ಸುಧಾರಿಸಿಕೊಳ್ಳಬಲ್ಲ ಮಟ್ಟವನ್ನು ಮನುಕುಲವು ಮುಟ್ಟುವತನಕ ಸ್ವಾತಂತ್ರ್ಯವೆಂಬುದು ಅದಕ್ಕೆ ತತ್ವಶಃ ಅನ್ವಯಿಸದು. ಆ ಮಟ್ಟಕ್ಕೆ ಬರುವವರೆಗೆ ಅದರ ಸುದೈವದಿಂದ ದೊರಕಬಹುದಾದ ಅಕ್ಬರ, ಚಾರ್ಲ್‌ಮೇನರಂತಹ ಒಡೆಯರಿಗೆ ಸಂಪೂರ್ಣ ವಿಧೇಯತೆಯಿಂದಿರುವುದೊಂದೇ ಕರ್ತವ್ಯ. ಆದರೆ ಈಗ ಆತ್ಮಸಮಾಧಾನ ಮತ್ತು ಹೃದಯಪರಿವರ್ತನಗಳಿಂದ ಸ್ವಸುಧಾರಣೆಯ ದಿಕ್ಕಿಗೆ ಮಾನವಕುಲವನ್ನು ಒಯ್ಯಬಹುದಾಗಿದೆ ಎನ್ನಬಹುದು. ಆದುದರಿಂದ ಅನ್ಯರಾಷ್ಟ್ರಗಳ ಸುರಕ್ಷಿತತೆಗಾಗಿ ಅಲ್ಲದೆ, ಆಯಾ ರಾಷ್ಟ್ರದ ಹಿತಸಾಧನೆಗಾಗಿ ಎಂದು ಪ್ರತ್ಯಕ್ಷ ಬಲಾತ್ಕಾರದ ಅಥವಾ ತಪ್ಪುದಂಡ ಶಿಕ್ಷೆಗಳ ಮೂಲಕ ರಾಷ್ಟ್ರವೊಂದನ್ನು ನಿಯಂತ್ರಿಸುವುದು ಗ್ರಾಹ್ಯವಲ್ಲ.

ಈ ಸಂದರ್ಭದಲ್ಲಿ ಪ್ರಯೋಜನನಿರಪೇಕ್ಷವಾದ ಅಮೂರ್ತ ಹಕ್ಕಿನ ಕಲ್ಪನೆಯಿಂದ (From the idea of abstract right) ನನ್ನ ವಾದಕ್ಕೆ ದೊರಕಬಹುದಾದ ಲಾಭವನ್ನು ನಾನು ಬಿಟ್ಟಿದ್ದೇನೆ ಎಂದು ಹೇಳುವುದು ಉಚಿತ. ಪ್ರತಿಯೊಂದು ನೈತಿಕ ಪ್ರಶ್ನೆಯಲ್ಲೂ 'ಪ್ರಯೋಜನ ಮನುದ್ದೀಶ್ಯ ನ ಮಂದೋಽಪಿ ಪ್ರವರ್ತತೇ' ಎಂಬ ನ್ಯಾಯವನ್ನು ಹಿಡಿಯುವವನು ನಾನು. ಆದರೆ ಆ ಪ್ರಯೋಜನವೆಂಬುದು ಅತ್ಯಂತ ವಿಶಾಲವಾದ, ವ್ಯಾಪಕವಾದ, ಅರ್ಥವುಳ್ಳದ್ದು; ಪ್ರಗತಿಪರ ಜೀವಿಯಾದ ಮನುಷ್ಯನ ಚಿರಸ್ಥಾಯಿಯಾದ ಹಿತಾರ್ಥಗಳನ್ನಾಧರಿಸಿದ್ದು; ಪ್ರತಿಯೊಬ್ಬನ ಅನ್ಯಹಿತಾರ್ಥ ಸಂಬಂಧವುಳ್ಳ ಚಟುವಟಿಕೆಗಳ ಬಗ್ಗೆ ಮಾತ್ರ ಅವನ ವೈಯಕ್ತಿಕ ಸ್ವಯಂಸ್ಫೂರ್ತಿಯ ಮೇಲೆ ನಿಯಂತ್ರಣ ಹೇರಬಹುದೆಂದು ನಾನು ಸಾರುತ್ತೇನೆ. ಪರಹಾನಿಕರವಾದ ಕೆಲಸವನ್ನೊಬ್ಬ ಮಾಡಿದನೆಂದರೆ ಕಾಯದೆ ಅವನನ್ನು ಶಿಕ್ಷಿಸಬೇಕಾದದ್ದು ಸ್ವತಃಸಿದ್ಧ; ಸುರಕ್ಷಿತವಾಗಿ ಕಾಯದೆ ವಿಧಿಸುವ ದಂಡ ಅನ್ವಯಿಸದ ಪ್ರಕರಣದಲ್ಲಿ ಸಾರ್ವಜನಿಕ ಅಥವಾ ಸಾಮಾಜಿಕ ನಿಷೇಧ ಘೋಷಣೆ ಆ ಕೆಲಸಮಾಡಬೇಕು. ಈ ಅನ್ವಯ (Positive) ಕರ್ತವ್ಯವಲ್ಲದೆ ವ್ಯಕ್ತಿಗೆ ವ್ಯತಿರೇಕ ಕರ್ತವ್ಯಗಳೂ ಇವೆ; ನ್ಯಾಯಾಲಯದಲ್ಲಿ ಸಾಕ್ಷಿ ಹೇಳುವುದು, ಸಾರ್ವಸಂರಕ್ಷಣೆಯಲ್ಲಿ ತನ್ನ ಪಾಲನ್ನು ನಿರ್ವಹಿಸುವುದು ಅಥವಾ ತಾನು ರಕ್ಷಣೆಪಡೆದ ಸಮಾಜದ ಹಿತಾರ್ಥಸಾಧಕವಾದ ಯಾವುದಾದರೂ ಸಂಯುಕ್ತಕಾರ್ಯದಲ್ಲಿ ಭಾಗಿಯಾಗುವುದು, ಸಹಜೀವಿಯ ಪ್ರಾಣ ರಕ್ಷಣೆ ಮಾಡುವುದು,

ಅರಕ್ಷಿತರನ್ನು ಶೋಷಣೆಯಿಂದ ಬಿಡಿಸಲು ಕೈಹಾಕುವುದು ಮುಂತಾದ ಪರಹಿತಸಾಧಕವೂ ಸ್ವತಃಸಿದ್ಧವೂ ಆದ ವೈಯಕ್ತಿಕ ಕರ್ತವ್ಯಗಳನ್ನು ಮಾಡಲು ವ್ಯಕ್ತಿಯನ್ನು ಸಮಾಜವು ಹಕ್ಕಿನಿಂದ ಒತ್ತಾಯಿಸಬಹುದು. ಇಂಥ ವಿಷಯಗಳಲ್ಲಿ ವ್ಯಕ್ತಿಯು ಸಮಾಜಕ್ಕೆ ಜವಾಬುದಾರ; ಇಂಥವನ್ನು ಏಕೆ ಮಾಡಲಿಲ್ಲ ಎಂದು ಸಮಾಜ ಅವನನ್ನು ತರಾಟೆಗೆ ತೆಗೆದುಕೊಳ್ಳಬಹುದು. ವ್ಯಕ್ತಿಯು ಕ್ರಿಯೆಯಿಂದ ಎಂತೋ ಅಂತೆಯೇ ನಿಷ್ಕ್ರಿಯೆಯಿಂದಲೂ ಪರರಿಗೆ ಕೇಡನ್ನುಂಟುಮಾಡಬಹುದು. ಈ ಎರಡೂ ಸಂದರ್ಭಗಳಲ್ಲಿ ಅವನು (ಅಥವಾ ಅವಳು) ಹಾನಿಗೀಡಾದ ಇತರರಿಗೆ ತಾನು ಮಾಡಿದ್ದರ ಬಗ್ಗೆ ವಿವರಣೆ ಕೊಡಲು ಬಾಧ್ಯ. ಎರಡನೆಯ ಸಂದರ್ಭದಲ್ಲಿ ಮೊದಲಿನದರಲ್ಲಿ ತೆಗೆದುಕೊಳ್ಳುವುದಕ್ಕಿಂತ ಹೆಚ್ಚು ಎಚ್ಚರಿಕೆ ತೆಗೆದುಕೊಂಡು ವ್ಯಕ್ತಿಯ ಮೇಲೆ ಒತ್ತಾಯ ಹೇರಬೇಕಾಗುತ್ತದೆ. ಪರರಿಗೆ ಕೇಡುಮಾಡಿದವರನ್ನು ವಿವರಣೆಗೆ ಬಾಧ್ಯರನ್ನಾಗಿ ಮಾಡುವುದೇ ನಿಯಮ. ಪರರಿಗೆ ಆಗುತ್ತಿರುವ ಕೇಡನ್ನು ತಡೆಯದೆ ಉಳಿದುದಕ್ಕೆ ವಿವರಣೆ ಕೊಡಲು ಅವರನ್ನು ಬಾಧ್ಯರನ್ನಾಗಿ ಮಾಡುವುದು ಹೋಲಿಕೆಯ ದೃಷ್ಟಿಯಿಂದ ಅಪವಾದ ಎನ್ನಬಹುದು. ಹೀಗಿದ್ದರೂ ಈ ಅಪವಾದವನ್ನು ಸಮರ್ಥಿಸುವಂತಹ ಗಂಭೀರವೂ ಸ್ಪಷ್ಟವೂ ಆದ ಎಷ್ಟೋ ಪ್ರಕರಣಗಳಿವೆ. ವ್ಯಕ್ತಿಯ ಬಾಹ್ಯ ಸಂಬಂಧಗಳಲ್ಲಿ ಸಂಬದ್ಧರೆಲ್ಲರಿಗೂ ಅವನು (ಅವಳು) ಕಾಯದೆಪ್ರಕಾರ ಹೊಣೆ – ಅವಶ್ಯವುಂಟಾದರೆ ಆತನ ರಕ್ಷಕ ಎನಿಸಿದ ಸಮಾಜಕ್ಕೂ ಉತ್ತರಕೊಡಲು ಆತ ಬಾಧ್ಯ. ಅಂಥ ಹೊಣೆಯನ್ನು ಅವನ ಮೇಲೆ ಹೊರಿಸದಿರಲು ಎಷ್ಟೋ ಸಲ ನ್ಯಾಯವಾದ ಕಾರಣಗಳಿರುವುದುಂಟು; ಅವುಗಳ ನ್ಯಾಯವು ಪ್ರಕರಣ ವೈಶಿಷ್ಟ್ಯದಿಂದ ಸಿದ್ಧ: ಎಂದರೆ – ಸಮಾಜಾಧೀನನಾದರೆ ನಡೆದುಕೊಳ್ಳುವುದಕ್ಕಿಂತ ಸ್ವಾಧೀನನಾಗಲು ಬಿಟ್ಟರೇ ಚೆನ್ನಾಗಿ ನಡೆದುಕೊಳ್ಳುತ್ತಾನೆ ಈತ–ಎಂಬಂತಹ ಪ್ರಕರಣ ಅದಾಗಿರಬೇಕು; ಅಥವಾ ಪ್ರಕರಣವನ್ನು ನಿಯಂತ್ರಿಸಹೋದರೆ ಆ ಪ್ರಕರಣವನ್ನು ನಿಯಂತ್ರಿಸದೆ ಹೋದರೆ ಉಂಟಾಗುತ್ತಿದ್ದ ಕೇಡಿಗಿಂತ ಹೆಚ್ಚಿನ ಕೇಡು ಉಂಟಾಗುವ ಸಂಭವವಿರಬೇಕು. ಇಂಥ ಕಾರಣಗಳು ಜವಾಬುದಾರಿಯನ್ನು ವ್ಯಕ್ತಿಯೊಬ್ಬನ ಮೇಲೆ ಹೊರಿಸಲು ಅಡ್ಡನಿಂತಾಗ ಕರ್ತನಾದ ವ್ಯಕ್ತಿಯ ಆತ್ಮಸಾಕ್ಷಿಯು ಮುಂದೆ ಬಂದು ಹೊರರಕ್ಷಣೆಯಿಲ್ಲದ ಅನ್ಯ ಹಿತಾರ್ಥಗಳನ್ನು ರಕ್ಷಿಸಬೇಕು. ಆಗ ಆತ ತನ್ನನ್ನು ತಾನೇ ಉಗ್ರವಾಗಿ ವಿಮರ್ಶಿಸಿಕೊಳ್ಳಬೇಕು; ಏಕೆಂದರೆ ಉಕ್ತ ಪ್ರಕರಣವು ಅವನ ಸಹಜೀವಿಗಳ ತೀರ್ಪಿಗೆ ಗುರಿಯಾಗದೆ ಹೊರಗುಳಿದಿರುತ್ತದೆ.

ಇಷ್ಟಲ್ಲದೆ, ಸಮಾಜದ ಅಪ್ರತ್ಯಕ್ಷ ಹಿತಾರ್ಥವುಳ್ಳ ಕಾರ್ಯಕ್ಷೇತ್ರವೂ ಇದೆ ಎಂಬುದು ಗಮನಾರ್ಹ: ತನಗೊಬ್ಬನಿಗೇ ಲಾಭಾಲಾಭಕರವಾದ ವ್ಯಕ್ತಿಜೀವನ ಹಾಗೂ ವರ್ತನೆಗಳ ಭಾಗ ಮತ್ತು ಅದು ಅನ್ಯರಿಗೂ ಸಂಬಂಧಿಸುವುದಾದರೆ ಅವರ ಅನಿರ್ಬದ್ಧವೂ ಸ್ವಯಂಸ್ಫೂರ್ತವೂ ನಿರ್ವಂಚಕವೂ ಆದ ಒಪ್ಪಿಗೆ ಹಾಗೂ ಪಾಲುಗಾರಿಕೆಗಳಿಂದೊಡಗೂಡಿದ್ದು. 'ತನಗೊಬ್ಬನಿಗೇ' ಎಂದರೆ ಮೊಟ್ಟಮೊದಲು

ಮತ್ತು ನೇರವಾಗಿ ವ್ಯಕ್ತಿಗಷ್ಟೇ ಸಂಬಂಧಿಸಿದ್ದು ಎಂದರ್ಥ. ಏಕೆಂದರೆ ಅವನಿಗೆ ಲಾಭಾಲಾಭಕರವಾದುದು ಅವನ ಮೂಲಕ ಅನ್ಯರ ಲಾಭ–ಹಾನಿಗಳಿಗೂ ಕಾರಣವಾಗಬಹುದು. ಈ ಅಂಶವನ್ನೆಣಿಸಿ ಎದುರಿಡುವ ಪ್ರತಿವಾದವನ್ನು ಅನಂತರ ಪರಾಂಬರಿಸೋಣ. ಎಂದಮೇಲೆ ಇದೇ ಮಾನವ ಸ್ವಾತಂತ್ರ್ಯದ ಉಚಿತ ಪ್ರದೇಶ, ನ್ಯಾಯವಾದ ಕ್ಷೇತ್ರ: ಅತ್ಯಂತ ವ್ಯಾಪಕಾರ್ಥವುಳ್ಳ ಆತ್ಮಸಾಕ್ಷಿ ಸ್ವಾತಂತ್ರ್ಯವನ್ನು ಬೇಡುವುದನ್ನೊಳಗೊಂಡ ಮಾನವ್ಯ ಪ್ರಜ್ಞೆಯ ಅಂತಾರಾಜ್ಯ, ಅಂತಃಕರಣರಾಜ್ಯ– ವಿಚಾರ ಹಾಗೂ ಭಾವನೆಗಳ ಸ್ವಾತಂತ್ರ್ಯ – ಆಚರಣೀಯ, ವಿಚಾರಣೀಯ, ವೈಜ್ಞಾನಿಕ, ನೈತಿಕ ಅಥವಾ ದೈವಿಕ ಮುಂತಾದ ಎಲ್ಲ ವಿಷಯಗಳ ಮೇಲೂ ಸ್ವತಂತ್ರಾಭಿಪ್ರಾಯ ಮತ್ತು ಸ್ವತಂತ್ರರಸ ಇಟ್ಟುಕೊಳ್ಳುವುದು. ಅಭಿಪ್ರಾಯಗಳನ್ನು ಹೇಳುವ ಹಾಗೂ ಪ್ರಕಟಿಸುವ ಸ್ವಾತಂತ್ರ್ಯವು ಮತ್ತೊಂದು ಸೂತ್ರಕ್ಕೆ ಸೇರಿದ್ದೆಂದು ತೋರಬಹುದು. ಏಕೆಂದರೆ ಇದು ವ್ಯಕ್ತಿವರ್ತನೆಯ ಪರಾಪೇಕ್ಷೆ ಭಾಗಕ್ಕೆ ಸಂಬಂಧಿಸಿದ್ದು; ಆದರೆ ಇದಾದರೂ ವಿಚಾರಸ್ವಾತಂತ್ರ್ಯದಷ್ಟೇ ಪ್ರಧಾನವಾಗಿರುವುದರಿಂದ ಮತ್ತು ಬಹಳ ಮಟ್ಟಿಗೆ ಮೊದಲನೆಯದರ ಕಾರಣಗಳನ್ನೇ ಆಧರಿಸಿ ನಿಂತಿರುವುದರಿಂದ ವ್ಯಾವಹಾರಿಕವಾಗಿ ಮೊದಲನೆಯದರಿಂದ ಪ್ರತ್ಯೇಕಿಸಲು ಬರುವುದಿಲ್ಲ; ಅದೂ ಇದೂ ಅವಿನಾಭಾವಿಗಳೆಂದೇ ಹೇಳಬಹುದು. ಎರಡನೆಯದಾಗಿ ಉಕ್ತ ಸೂತ್ರಾನುಸಾರವಾಗಿ ಅಭಿರುಚಿ– ಅನುಸಂಧಾನಗಳ ಹಾಗೂ ನಮ್ಮ ಚಾರಿತ್ರಾನುಗುಣವಾಗಿ ಜೀವನವನ್ನು ಯೋಜಿಸಿಕೊಂಬ, ನಮಗೆ ಬೇಕಾದಂತೆ ಮಾಡುವ ಮತ್ತು ಹಾಗೆ ಮಾಡಿ ಅದರ ಫಲವನನುಣ್ಣುವ ಸ್ವಾತಂತ್ರ್ಯವೂ ಸಿದ್ಧ – ಎಂದರೆ, ಅನ್ಯರಿಗೆ ಅದರಿಂದ ಹಾನಿಯಾಗದಿರುವಾಗ ಅವರಿಂದ ಯಾವ ಅಡ್ಡಿಯನ್ನೂ ಎದುರಿಸದೆ, ಅವರ ದೃಷ್ಟಿಯಲ್ಲಿ ನಾವು ಮಾಡುವುದು ಹುಚ್ಚು, ಮೂರ್ಖತನ ಇಲ್ಲವೆ ತಪ್ಪು ಎನಿಸಿದಾಗಲೂ ನಮಗೆ ಬೇಕಾದ ಹಾಗೆ ನಡೆದುಕೊಂಬ ಸ್ವಾತಂತ್ರ್ಯ ಎಂದರ್ಥ. ಮೂರನೆಯದಾಗಿ, ಪ್ರತಿಯೊಬ್ಬ ವ್ಯಕ್ತಿಯ ಈ ಸ್ವಾತಂತ್ರ್ಯದಿಂದಲೇ ಅಷ್ಟೇ ಅಳತೆಯೊಳಗೆ ಸಂಘಗಳ ಸ್ವಾತಂತ್ರ್ಯವೂ ಸಿದ್ಧವಾಗುತ್ತದೆ– ಪರಹಾನಿಕರವಾಗದಂತೆ ಯಾವುದಾದರೊಂದು ಉದ್ದೇಶಕ್ಕಾಗಿ ವ್ಯಕ್ತಿಗಳು ಒಟ್ಟಾಗಬಲ್ಲ ಸ್ವಾತಂತ್ರ್ಯವೇ ಸಂಘ–ಸ್ವಾತಂತ್ರ್ಯ. ಹಾಗೆ ಕೂಡುವವರು ಪ್ರೌಢ ವಯಸ್ಕರೂ ಬಲಾತ್ಕಾರ ವಂಚನೆಗಳಿಗೊಳಗಾಗದವರೂ ಆಗಿರಬೇಕೆಂಬುದು ಗೃಹೀತ.

ಮೇಲೆ ಹೇಳಿದ ಸ್ವಾತಂತ್ರ್ಯತ್ರಯವನ್ನು, ತ್ರಿವಿಧ ಸ್ವಾತಂತ್ರ್ಯವನ್ನು ಗೌರವಿಸದ ಯಾವ ಸಮಾಜವೂ ಸ್ವತಂತ್ರ ಸಮಾಜವಲ್ಲ– ಆದರೆ ಸರಕಾರದ ರೂಪ ಯಾವುದಿದ್ದರೂ ಅಷ್ಟೆ– ಅದೆಂದೂ ಸ್ವತಂತ್ರ, ಸ್ವಾಧೀನ ಎನ್ನಿಸಲಾರದು. ಈ ತ್ರಿವಿಧ ಸ್ವಾತಂತ್ರ್ಯವು ಅಪ್ರಮಿತವೂ ಅಕುಂಠಿತವೂ ಆಗಿ ಇಲ್ಲದಲ್ಲಿ ಯಾವನೂ ಸಂಪೂರ್ಣ ಸ್ವತಂತ್ರನಲ್ಲ. ನಮಗೆ ಕಂಡ ರೀತಿಯಲ್ಲಿ ನಮ್ಮ ಒಳ್ಳೆಯದನ್ನು ನಾವು ಅನ್ಯರ ಒಳಿತಿಗೆ ಭಂಗ ತರದೆ, ಅಂಥ ಒಳಿತನ್ನು ಸಾಧಿಸಿಕೊಳ್ಳುವ ಅವರ ಯತ್ನಕ್ಕೆ ಅಡ್ಡಿಯೊಡ್ಡದೆ,

ಸಾಧಿಸಿಕೊಳ್ಳುವ ಸ್ವಾತಂತ್ರ್ಯವೊಂದೇ ಸಾರ್ಥಕ ಸ್ವಾತಂತ್ರ್ಯ. ಪ್ರತಿಯೊಬ್ಬನೂ ಅವನವನ ದೇಹ–ಮನ–ಆತ್ಮಗಳ ಯೋಗ್ಯ ಆರೋಗ್ಯಪಾಲಕ. ತಮತಮಗೆ ಸರಿದೋರಿದಂತೆ ಬದುಕಲು ಪರಸ್ಪರರನ್ನು ಬಿಟ್ಟುಕೊಡುವುದರಿಂದ ಮನುಷ್ಯರಿಗೆ ಆಗುವಷ್ಟು ಲಾಭವು ಮಿಕ್ಕವರಿಗೆ ಒಳ್ಳೆಯದೆಂದು ತೋರುವಂತೆ ಪ್ರತಿಯೊಬ್ಬನನ್ನೂ ಒತ್ತಾಯಿಸುವುದರಿಂದ ಆಗಲಾರದು.

ಈ ತತ್ವವೇನೂ ಹೊಸದಲ್ಲ. ಕೆಲವರಿಗಂತೂ ಇದೊಂದು ದಿನಬಳಕೆಯ ಸಂಗತಿಯೆಂದು ಕೂಡ ತೋರಿತು. ಆದರೆ ಮತ್ತಾವ ತತ್ವವೂ ವರ್ತಮಾನ ಆಚಾರ–ವಿಚಾರಗಳ ಸಾಮಾನ್ಯ ಪ್ರವೃತ್ತಿಗೆ ಇದರಷ್ಟು ವಿರುದ್ಧವೆನಿಸಿಲ್ಲ. ಸಾಮಾಜಿಕ ಹಾಗೂ ವೈಯಕ್ತಿಕ ಸುಗುಣಗಳ ತನ್ನ ಕಲ್ಪನೆಯಂತೆಯೇ ಜನರು ನಡೆಯುವಂತೆ ಒತ್ತಾಯ ಮಾಡುವುದರಲ್ಲಿ ಸಮಾಜವು ಸಾಕಷ್ಟು ಶ್ರಮಿಸಿದೆ. ತನ್ನ ಪ್ರತಿಯೊಬ್ಬ ಪ್ರಜೆಯ ಮೈ–ಮನಗಳ ಶಿಸ್ತು–ಸಂಯಮಗಳಲ್ಲಿ ರಾಜ್ಯಕ್ಕೆ ಗಂಭೀರವಾದ ಆಸಕ್ತಿ ಇದೆಯೆಂದು ಹೇಳಿ ಹಳೆಯ ಕಾಲದ ರಾಜ್ಯವು ಸಾರ್ವಜನಿಕ ಪ್ರಾಧಿಕಾರದ ಮೂಲಕ ವ್ಯಕ್ತಿಯ ಖಾಸಗಿ ನಡತೆಯ ಪ್ರತ್ಯಂಶವನ್ನೂ ನಿಯಂತ್ರಿಸುತ್ತಿತ್ತು. ಇದನ್ನು ಅಂದಿನ ತಾತ್ವಿಕರೂ ಎತ್ತಿ ಹಿಡಿಯುತ್ತಿದ್ದರು. ಇಂಥ ವಿಚಾರಮಾರ್ಗವು ಬಲಿಷ್ಠ ಶತ್ರುಗಳಿಂದ ಆವೃತವಾದ, ಅಂತರ್–ಬಹಿರ್–ಯುದ್ಧಗಳಿಗೆ ಪದೇ ಪದೇ ಗುರಿಯಾಗಿ ಉಧ್ವಸ್ತವಾಗುವ ಅಪಾಯಕ್ಕೀಡಾದ, ಸ್ವಾತಂತ್ರ್ಯದ ಸ್ಥಿರವಾದ ಸುಫಲ ಬರುವವರೆಗೆ ಕಾಯ್ದುಕೊಂಡಿರಲು ಪುರುಸೊತ್ತಿಲ್ಲದ, ಒಂದು ಗಳಿಗೆ ಸ್ವಾಯತ್ತ ವಿರಾಮವನ್ನನುಭವಿಸಲು ಕುಳಿತರೆ ಸರ್ವನಾಶವಾದೀತೆಂಬ ಭಯಕ್ಕೆ ತುತ್ತಾಗಿರುವ ಚಿಕ್ಕ ಗಣರಾಜ್ಯಕ್ಕೆ ಮಾತ್ರ ಶೋಭಿಸೀತು. ಆಧುನಿಕ ಪ್ರಪಂಚದಲ್ಲಿ ರಾಜಕೀಯ ಸಮುದಾಯಗಳ ಗಾತ್ರ ವೃದ್ಧಿಯೂ ಆಧ್ಯಾತ್ಮಿಕ ಹಾಗೂ ಲೌಕಿಕ ಪ್ರಾಧಿಕಾರದ ಪ್ರತ್ಯೇಕತೆಯೂ ಖಾಸಗಿ ಜೀವನದಲ್ಲಿ ಕಾಯದೆ ಮಾಡುವ ಹೆಚ್ಚಿನ ಹಸ್ತಕ್ಷೇಪಕ್ಕೆ ತಡೆಹಾಕಿದವು. ಉಕ್ತಪ್ರಾಧಿಕಾರದ ಪ್ರತ್ಯೇಕತೆಯಿಲ್ಲದಾಗ ಜನರ ಆತ್ಮಸಾಕ್ಷಿಗಳೆಲ್ಲಾ ಲೌಕಿಕೇತರ ಪ್ರಾಧಿಕಾರವಿಭಾಗಕ್ಕೆ ಅಧೀನವಾಗಿರುತ್ತಿದ್ದವು. ಆದರೆ ನೈತಿಕ ದಮನಯಂತ್ರಗಳನ್ನು ಸಾಮಾಜಿಕ ಸಂಗತಿಗಳಲ್ಲಿಗಿಂತ ಹೆಚ್ಚಾಗಿ ಸ್ವಾಭಿಮಾನದ ಬಗ್ಗೆ ಇರುವ ಇಂದಿನ ಅಭಿಪ್ರಾಯವನ್ನು ಬಿಟ್ಟುಕೊಡುವುದರ ವಿರುದ್ಧವಾಗಿ ಚೆನ್ನಾಗಿ ಬಳಸಲಾಗುತ್ತಿದೆ. ನೈತಿಕ ಭಾವನೆಯನ್ನು ರೂಪಿಸುವುದರಲ್ಲಿ ಅತಿ ಸಮರ್ಥವೆನಿಸದ ಧರ್ಮವು (Religion) ಯಾವಾಗಲೂ ಮಾನವರ ನಡತೆಯ ಎಲ್ಲ ಕ್ಷೇತ್ರಗಳ ಮೇಲೂ ನಿಯಂತ್ರಣವನ್ನು ಬಯಸುವ ಅಧಿಕಾರಿಶ್ರೇಣಿಯ ಮಹತ್ವಾಕಾಂಕ್ಷೆಯಿಂದ ಅಥವಾ (ಪವಿತ್ರವಾದಿ ಭಾವನೆ ಇಲ್ಲವೆ) ಆರ್ಷ ಜೀವನದೃಷ್ಟಿಯಿಂದ ಆಳುವವರ ಕೈಗೇ ಸಿಕ್ಕಿತ್ತು. ಹಳೆಯ ಕಾಲದ ಧರ್ಮಗಳನ್ನು ಬಲವಾಗಿ ಎದುರಿಸಿ ನಿಂತ ಇಂದಿನ ಎಷ್ಟೋ ಸುಧಾರಕರು ಚರ್ಚುಗಳಿಗೂ ಪಂಥಗಳಿಗೂ ಹಿಂದೆ ಬೀಳದಷ್ಟು ಮಟ್ಟಿಗೆ ಆಧ್ಯಾತ್ಮಿಕ ಪ್ರಭುತ್ವವನ್ನು ಎತ್ತಿಹಿಡಿದು ವಾದಿಸುತ್ತಾರೆ. ಎಂ.ಕಮ್ತೆ ತನ್ನ ಪುಸ್ತಕವಾದ (Systeme de Politique Positive)

ಎಂಬುದರಲ್ಲಿ ಹಳೆಯ ಕಾಲದ ಯಾವ ಅತ್ಯುಗ್ರ ಶಿಸ್ತಿನ ಪ್ರತಿಪಾದಕನಾದ ರಾಜಕೀಯ ತತ್ವಜ್ಞಾನಿಯೂ ಹೇಳಿರದಷ್ಟು ಸಮಾಜದ ನೈತಿಕಾಧಿಕಾರವನ್ನು ಪ್ರತಿಪಾದಿಸುವುದು ಇದಕ್ಕೆ ನಿದರ್ಶನ.

ಬಿಡಿ ಚಿಂತಕರ ವಿಲಕ್ಷಣ ತತ್ವಾಖ್ಯಾನಗಳನ್ನು ಬಿಟ್ಟರೂ ಜಗತ್ತಿನ ಅನೇಕ ಕಡೆಗಳಲ್ಲಿ ಅಭಿಪ್ರಾಯಬಲ–ಕಾಯದೆಬಲಗಳೆರಡರಿಂದಲೂ ಸಮಾಜದ ಅಧಿಕಾರವನ್ನು ವ್ಯಕ್ತಿಯ ಮೇಲೆ ಮತ್ತಷ್ಟು ವಿಸ್ತರಿಸುವ ಪ್ರವೃತ್ತಿ ಕಂಡುಬರುತ್ತಿದೆ. ಜಗತ್ತಿನಲ್ಲಿ ಆಗುತ್ತಿರುವ ಬದಲಾವಣೆಗಳೆಲ್ಲವುಗಳ ಪ್ರವೃತ್ತಿಯೂ ವ್ಯಕ್ತಿಯ ಸ್ವಾತಂತ್ರ್ಯವನ್ನು ಕುಗ್ಗಿಸಿ ಸಮಾಜದ ಅಧಿಕಾರವನ್ನು ಹಿಗ್ಗಿಸುವ ಕಡೆಗೇ ಹರಿಯುತ್ತಿದೆ. ಈ ಆಕ್ರಮಣವು ತನ್ನಷ್ಟಕ್ಕೇ ಆರಿಹೋಗತಕ್ಕ ಬೆಂಕಿಯ ಕಿಡಿಯಾಗಿಲ್ಲ: ಇದೀಗ ದಿನೇದಿನೇ ಏರುತ್ತಿರುವ ಜ್ವಾಲಾಮಾಲೆಯಾಗಿದೆ. ಇದನ್ನು ನಂದಿಸುವುದು ಕಷ್ಟ ಎನಿಸುತ್ತಿದೆ. ಮಾನವರ ಮನಃಪ್ರವೃತ್ತಿಯು– ಅವರು ಶಾಸಕರಾಗಿರಲಿ ಸಹಜೀವಿಗಳಾಗಿರಲಿ– ಇನ್ನೊಬ್ಬರ ಮೇಲೆ ತಮ್ಮ ಅಭಿಪ್ರಾಯ–ಒಲವುಗಳನ್ನು ನಡತೆಯ ನಿಯಮಗಳೆಂದು ಹೇರುವತ್ತ ಹರಿದಿರುವುದನ್ನು ಮನುಷ್ಯ ಸ್ವಭಾವದೊಡನೆ ಬಂದ ಕೆಲ ಅತ್ಯುತ್ತಮ ಹಾಗೂ ಕೆಲ ಅತ್ಯಧಮ ಭಾವನಾಂಶಗಳಿಗೊಳಗಾಗಿ ಉತ್ಸಾಹಯುತವಾಗಿ ಬೆಂಬಲಿಸಲಾಗುತ್ತಿದೆ. ಹೀಗೆ ಬೆಂಬಲಿಸುವ ಪ್ರವೃತ್ತಿಯು ಶಕ್ತಿಯಿಲ್ಲದೆ ಸುಮ್ಮನಾಗಿದೆಯಲ್ಲದೆ ವಿವೇಕದಿಂದಲ್ಲ; ಶಕ್ತಿಯಿದ್ದಿದ್ದರೆ ಇಂದೇ ಅಂಥ ಸಮಾಜಸರ್ವಾಧಿಕಾರ ಅಥವಾ ಸ್ವಸರ್ವಾಧಿಕಾರವನ್ನು ಇತರ ವ್ಯಕ್ತಿ–ವ್ಯಕ್ತಿ ಸಮೂಹಗಳ ಮೇಲೆ ಹೇರಿಯೇ ಬಿಡುತ್ತಿತ್ತು! ಆದರೆ ಅದರ ಶಕ್ತಿ ಕ್ರಮೇಣ ವೃದ್ಧಿಯಾಗುತ್ತಿದೆ. ಕುಂದುತ್ತಿಲ್ಲ. ಆದುದರಿಂದ ಬಲವಾದ ನೈತಿಕ ಶ್ರದ್ಧೆಯ ಅಡ್ಡಗೋಡೆಯನ್ನು ಅವರೆದುರು ಕಟ್ಟಿ ನಿಲ್ಲಿಸುವವರೆಗೆ ಇಂದಿನ ಪರಿಸ್ಥಿತಿಯಲ್ಲಿ ಅದು ಹಿಂಗುವುದು ಅಸಂಭವ.*

---

* ಮಿಲ್ ಮಹಾಶಯನು ಇಲ್ಲಿಕೊಟ್ಟ ಪ್ರಬಂಧ ಮೂಲವು ಪ್ರಬುದ್ಧರು ಬಹುಸಂಖ್ಯರಾಗಿರುವ ರಾಷ್ಟ್ರ ಅಥವಾ ಸಮಾಜ ಮೆಚ್ಚಬಹುದಾದ ಆಧಾರಧರ್ಮ, ಆಚರಣೆಯಲ್ಲಿ ಇಟ್ಟುಕೊಳ್ಳಲು ಆಶಿಸಬಹುದಾದ ಮೂಲಧರ್ಮ ಎಂಬುದನ್ನು ಓದುಗರು ನೆನಪಿಟ್ಟುಕೊಳ್ಳುವುದು ಅಗತ್ಯ.

## ಅಧ್ಯಾಯ ಎರಡು

# ವಿಚಾರ ಹಾಗೂ ಚರ್ಚಾಸ್ವಾತಂತ್ರ್ಯ

ದುಃಶಾಸಕ ಹಾಗೂ ವಂಚಕ ಸರಕಾರದ ವಿರುದ್ಧವಾಗಿ ಪತ್ರಿಕಾ ಸ್ವಾತಂತ್ರ್ಯವನ್ನು ರಕ್ಷಣಾದುರ್ಗಗಳಲ್ಲೊಂದೆಂದು ಕಾಯ್ದುಕೊಳ್ಳುವ ಕಾಲ ಆಗಲೇ ಮುಗಿದು ಹೋಯಿತೆನ್ನಲಡ್ಡಿಯಿಲ್ಲ. ಒಂದು ಶಾಸಕ ಸಭೆ ಅಥವಾ ಕಾರ್ಯಪಾಲಿಕೆಯ ಸಭೆ ಜನಹಿತವನ್ನು ಸ್ವಹಿತವೆಂದು ತಿಳಿದುಕೊಳ್ಳದೆ, ನಿಮ್ಮ ಮತ (ಇಲ್ಲವೆ ಅಭಿಪ್ರಾಯ) ಹೀಗಿರಬೇಕೆಂದು ಹೇಳುವುದೂ ನೀವು ಇಂಥ ತತ್ವ ಅಥವಾ ವಾದಗಳಷ್ಟನ್ನೇ ಕೇಳತಕ್ಕದ್ದು ಎಂದು ಆದೇಶಿಸುವುದೂ ಅಯೋಗ್ಯ ಎಂಬ ಬಗ್ಗೆ ಈಗ ಯಾವ ತರ್ಕವಾದವೂ ಬೇಕಾಗಿಲ್ಲ ಎಂದು ನಂಬಬಹುದು. ಸಮಸ್ಯೆಯ ಈ ಮುಖವನ್ನು ಯಶಸ್ವಿಯಾಗಿ ಎಷ್ಟೋ ಸಲ ಹಿಂದಿನ ಲೇಖಕರು ಪ್ರತಿಪಾದಿಸಿರುವುದರಿಂದ ಇಲ್ಲಿ ವಿಶೇಷವಾಗಿ ಸಮರ್ಥಿಸುವ ಕಾರಣವಿಲ್ಲ. ಯಾವುದಾದರೊಂದು ತಾತ್ಕಾಲಿಕ ಗಾಬರಿಯಿಂದಾಗಿ, ದಂಗೆಯುಂಟಾಗುವ ಹೆದರಿಕೆ ಮಂತ್ರಿಗಳನ್ನೂ ನ್ಯಾಯಾಧೀಶರನ್ನೂ ಔಚಿತ್ಯದ ಗೆರೆಯನ್ನು ದಾಟಲು ಚೋದಿಸಿದ ಅವಧಿಯೊಂದನ್ನುಳಿದು ಮಿಕ್ಕ ಅವಧಿಗಳಲ್ಲಿ ಟ್ಯೂಡರರ ಕಾಲದಿಂದ ಇಂದಿನವರೆಗೆ ಆಂಗ್ಲ ಸರಕಾರದ ಪತ್ರಿಕಾಕಾಯದೆ ಗುಲಾಮಗಿರಿಯದೇ ಆಗಿರುವುದಾದರೂ ರಾಜಕೀಯ ಚರ್ಚೆಯ ವಿರುದ್ಧವಾಗಿ ಅದನ್ನು ಜಾರಿಗೆ ತರಲಾದೀತೆಂಬ ಭಯ ಇಂದು ಉಳಿದಿಲ್ಲ. ಸಾರ್ವಜನಿಕರ ಸರ್ವಸಾಧಾರಣ ಅಸಹನೆಯ ರೂಪ ತಾಳಿದಲ್ಲದೆ ಯಾವುದಾದರೊಂದು ಅಭಿಪ್ರಾಯದ ಪ್ರಕಟನೆಯನ್ನು ಸಾಂವಿಧಾನಿಕ (Constitutional) ದೇಶಗಳಲ್ಲಿ ಸಂಪೂರ್ಣ ಹೊಣೆಗಾರವಾಗಿರುವ ಅಥವಾ ಇಲ್ಲದ ಯಾವ ಸರಕಾರವಾದರೂ ತನ್ನ ನಿಯಂತ್ರಣದಲ್ಲಿಟ್ಟುಕೊಂಡೀತೆಂದು ನಾವು ಭಯಪಡುವ ಕಾರಣವಿಲ್ಲ; ಜನರಿಗೇ ಅಂಥ ಅಭಿಪ್ರಾಯನಿಯಂತ್ರಣ ಬೇಕಾದಾಗ ಸರಕಾರ ಅಂಥ ಆದೇಶವನ್ನು ಕೊಟ್ಟೀತು– ಅಷ್ಟೆ; ಅವರ ಇಷ್ಟವನ್ನು ವಿರೋಧಿಸಿ ಅದೆಂದೂ ಅಂಥ ಆಜ್ಞೆಯನ್ನು ಹೊರಡಿಸದು. ಆದುದರಿಂದ ಸರಕಾರ–ಜನತೆಗಳಲ್ಲಿ ಅಭೇದವಿದೆ. ಜನಾಭಿಪ್ರಾಯಕ್ಕೆ ಅನುಗುಣವಾಗಿದೆ ಎಂದು ತಿಳಿದ ಹೊರತು ಸರಕಾರವೆಂದೂ ಬಲಾತ್ಕಾರಮಾಡದು ಎಂದು ಭಾವಿಸೋಣ. ಆದರೆ ಅಂಥ ಬಲಾತ್ಕಾರವನ್ನು ತಾವೇ ಆಗಲಿ ತಮ್ಮ ಸರಕಾರದ ಮೂಲಕವಾಗಲಿ ಅಮಲಿಗೆ ತರಲು ಜನತೆಗೆ ಹಕ್ಕಿಲ್ಲ ಎನ್ನುತ್ತೇನೆ. ಅಂಥ ಅಧಿಕಾರವೇ ನ್ಯಾಯವಾದುದಲ್ಲ, ಅತ್ಯಧಮ ಸರಕಾರಕ್ಕೆ ಹೇಗೊ ಹಾಗೇ ಅತ್ಯುತ್ತಮ ಸರಕಾರಕ್ಕೂ ಅಂಥ ಹಕ್ಕಿಲ್ಲ.

ಜನಾಭಿಪ್ರಾಯಕ್ಕೆ ವಿರುದ್ಧವಾಗಿ ಸರಕಾರ ಅಂಥ ಬಲಾತ್ಕಾರವನ್ನು ಜಾರಿಗೆ ತರುವುದಕ್ಕಿಂತಲೂ ಜನಮತಾನುಕೂಲವಾಗಿ ಹಾಗೆ ಬಲಾತ್ಕಾರ ಹೇರುವುದು ಹೆಚ್ಚು ಅಸಾಧು ಮನುಷ್ಯರಾಶಿಯಲ್ಲಿ ಒಬ್ಬನೇ ಒಬ್ಬ ಭಿನ್ನಮತದವನಿದ್ದರೂ ಆ ಒಬ್ಬನಿಗೆ ಅಧಿಕಾರವಿದ್ದಿದ್ದರೆ ಅವರ ಮತಪ್ರಕಟನೆಯನ್ನು ಅವನು ನಿರ್ಬಂಧಕ್ಕೀಡು ಮಾಡುವುದು ಎಷ್ಟು ಅನ್ಯಾಯವಾಗುತ್ತಿತ್ತೋ ಈ ಮಹಾಭಾಗ ಆ ಒಬ್ಬನ ಅಭಿಪ್ರಾಯ ಪ್ರಕಟನೆಯನ್ನು ನಿರ್ಬಂಧಿಸಿದರೂ ಅಷ್ಟೇ ಅನ್ಯಾಯವಾಗುತ್ತದೆ. ಅಭಿಪ್ರಾಯವೆಂಬುದು ಅದರ ಕರ್ತನಿಗಷ್ಟೇ ಬೆಲೆಯುಳ್ಳ ಆಸ್ತಿಯೆಂದೆನಿಸಿದಾಗ ಅದನ್ನವನು ಅನುಭವಿಸಬಾರದೆಂಬುದು ಖಾಸಗಿ ತರಹದ ಹಿಂಸೆ; ಸ್ವಲ್ಪ ಜನರಿಗೆ ಅಂಥ ಹಿಂಸೆಕೊಡುವುದಕ್ಕೂ ಬಹಳ ಜನರಿಗೆ ಕೊಡುವುದಕ್ಕೂ ಕೆಲ ಮಟ್ಟಿನ ಅಂತರವಿದೆ. ಆದರೆ ಒಂದು ಮತದ ಪ್ರಕಟನೆಯನ್ನು ಪ್ರತಿಬಂಧಿಸುವುದೆಂದರೆ ಇಡಿ ಮನುಕುಲದ ಒಂದು ಆಸ್ತಿಯನ್ನೇ ಕದ್ದಹಾಗೆ– ಇಂದಿನ ಹಾಗೂ ಮುಂದಿನ ತಲೆಮಾರುಗಳನ್ನು ವಂಚಿಸಿದಂತೆ; ಆ ಅಭಿಪ್ರಾಯವುಳ್ಳವರನ್ನು ವಂಚಿಸಿದ್ದಕ್ಕಿಂತ ಹೆಚ್ಚಾಗಿ ಅದರ ವಿರೋಧಿಗಳನ್ನು ವಂಚಿಸಿದಂತೆ ಆಗುತ್ತದೆ. ಆ ಅಭಿಪ್ರಾಯ ಸರಿಯಾದುದಾಗಿದ್ದರೆ ಅಸತ್ಯಕ್ಕೆ ಬದಲಾಗಿ ಸತ್ಯವನ್ನು ಗ್ರಹಿಸುವ ಅವಕಾಶ ಅವರಿಗಿಲ್ಲವಾಗುತ್ತದೆ; ಹಾಗಲ್ಲದೆ ಅದು ತಪ್ಪಾಗಿದ್ದರೆ ಅಸತ್ಯದೊಡನೆ ಸತ್ಯದ ಸಂಘರ್ಷವೊದಗಿ ಆ ಮೂಲಕ ಸತ್ಯದ ಆಹ್ಲಾದಕರವಾದ ಹಾಗೂ ಸ್ಪಷ್ಟತರವಾದ ಸಾಕ್ಷಾತ್ಕಾರ ಪಡೆಯುವ ದೊಡ್ಡಲಾಭ ಅವರಿಗೆ ಸಿಗದಾಗುತ್ತದೆ.

ಮೇಲೆ ಹೇಳಿದ ಎರಡೂ ಪ್ರಮೇಯಗಳನ್ನು ಪ್ರತ್ಯೇಕವಾಗಿ ಪರಾಮರ್ಶಿಸುವುದಗತ್ಯ; ಅವೆರಡು ನಮ್ಮ ತರ್ಕವಾದದ ಎರಡು ಪ್ರತ್ಯೇಕ ಮುಖಗಳು. ನಾವು ದಮಿಸಲು ಯತ್ನಿಸುವ ಮತ ಅಸತ್ಯವಾದುದೆಂದು ನಾವು ಎಂದೂ ಖಾತ್ರಿಯಾಗಿ ಹೇಳಲಾರೆವು; ಹಾಗಲ್ಲದೆ ಅದು ಅಸತ್ಯ ಎಂದು ನಮಗೊಮ್ಮೆ ಖಾತ್ರಿಯೇ ಆಗಿದ್ದರಂತೂ ಅದನ್ನು ದಮಿಸುವುದು ಮತ್ತಷ್ಟು ಕೆಡಕು.

ಮೊದಲನೆಯದಾಗಿ, ಅಧಿಕಾರಬಲದಿಂದ ದಮಿಸಲು ಯತ್ನಿಸಿದ ಮತವು ಒಮ್ಮೆ ನಿಜವಾಗಿದ್ದರೂ ಇರಬಹುದು. ಅದನ್ನು ಹತ್ತಿಕ್ಕಬೇಕೆಂಬುವರು ಅದು ಅಸದಭಿಪ್ರಾಯ ಎನ್ನುವುದು ಸಹಜ; ಆದರೆ ಅವರು ಅಭೇದ್ಯ ಸತ್ಯವಾದಿಗಳಲ್ಲ, ಅವರ ಮಾತು ಸುಳ್ಳಾಗಬಾರದೆಂದಿಲ್ಲ. ಇಡಿ ಮನುಕುಲದ ಪ್ರತಿನಿಧಿಗಳೆಂದುಕೊಂಡು, ಮಿಕ್ಕ ಎಲ್ಲವರನ್ನೂ ನಿರ್ಣಯಾಧಿಕಾರದಿಂದ ಹೊರಗಿಟ್ಟು ತೀರ್ಪುಕೊಡಲು ಅವರಿಗೆ ಯಾವ ಅಧಿಕಾರವೂ ಇಲ್ಲ. ತಮಗೆ ನಿಶ್ಚಿತವಾಗಿಯೂ ಒಂದು ವಿಷಯ ಸುಳ್ಳೆಂದು ಗೊತ್ತಿದೆ ಎಂದು ಮಿಕ್ಕವರು ಹೇಳುವುದನ್ನು ಕೇಳದಿದ್ದರೆ ಅವರು ತಮ್ಮ ತಿಳಿವಳಿಕೆ ಆತ್ಯಂತಿಕವಾಗಿ, ಸಂಪೂರ್ಣವಾಗಿ ನಿಶ್ಚಿತ ಎಂದು ಭಾವಿಸಿಕೊಂಡಂತಾಗುತ್ತದೆ. ಚರ್ಚಾದಮನಕ್ಕೆಲ್ಲಾ ಅಭೇಧ್ಯತಾ ನಿಶ್ಚಯದ ಆರೋಪ ಹಿನ್ನೆಲೆಯಾಗಿರುತ್ತದೆ. ಚರ್ಚಾದಮನ ತಪ್ಪೆಂಬುದನ್ನು ಎಲ್ಲರೂ ಹೇಳುತ್ತಾರೆ. ಆದ್ದರಿಂದ ಅದು ಮಹತ್ವದ್ದಲ್ಲ ಎನ್ನಲು ಬರದು. ಎಲ್ಲರೂ ಹೇಳಿದಕೂಡಲೆ ಒಂದು ವಾದ ಕೀಳ್ಮಟ್ಟದ್ದೆನಿಸದು.

ಮನುಷ್ಯಜಾತಿಯ ಸದ್ಬುದ್ಧಿಗೊದಗಿದ ದುರ್ದೈವದ ದೆಸೆಯಿಂದ ತತ್ವಶಃ ಎಲ್ಲರೂ ತಮ್ಮ ವಾದ ಸಂದೇಹಾಸ್ಪದವಾಗುವ ಸಂಭವವನ್ನು ಒಪ್ಪಿಕೊಳ್ಳುತ್ತಾರೆ; ಆದರೆ ಕಾರ್ಯಕಾಲದಲ್ಲಿ ಈ ಅಂಶವನ್ನು ಯಾರೂ ಗಮನಿಸರು. ಪ್ರತಿಯೊಬ್ಬನೂ ತನ್ನ ಜ್ಞಾನದ ಭೇದ್ಯತೆಯನ್ನು (Fallibility) ಬಲ್ಲನಾದರೂ ಆ ದೌರ್ಬಲ್ಯದ ವಿರುದ್ಧವಾಗಿ ಜಾಗ್ರತೆವಹಿಸಬೇಕೆದು ಯಾರೂ ಎಣಿಸರು– ತಮ್ಮ ಸುಭೇದ್ಯತೆಯನ್ನೊಪ್ಪಿಕೊಂಡ ಅವರು ತಾವು ಬಹಳ ನಿಶ್ಚಿತ ಎಂದು ತಿಳಿದುಕೊಂಡ ಯಾವುದಾದರೊಂದು ಮತವು ತಪ್ಪಿನ ಒಂದು ಉದಾಹರಣೆಯಾಗಬಹುದು ಎಂಬುದನ್ನು ಎಂದೂ ಒಪ್ಪರು. ನಿರಂಕುಶಪ್ರಭುಗಳಾದ ರಾಜಮಹಾರಾಜರೂ ಅಮಿತ ದಾಕ್ಷಿಣ್ಯವನ್ನು ನಿತ್ಯವೂ ಅನ್ಯರಿಂದ ಪಡೆದು ಮೈಯಿಂಡುಹೋದವರೂ ಎಲ್ಲ ವಿಷಯಗಳ ಮೇಲೂ ಇಂಥ ಸಂಪೂರ್ಣ ಆತ್ಮವಿಶ್ವಾಸವನ್ನು ಹೊಂದಿರುತ್ತಾರೆ. ಅವರಿಗಿಂತ ಸ್ವಲ್ಪ ಹೆಚ್ಚು ಸ್ವಸ್ಥವಾಗಿ ಬಾಳುತ್ತಿರುವ ಹಾಗೂ ಕೆಲವೊಮ್ಮೆ ಅಭಿಪ್ರಾಯ ಟೀಕಾಸ್ಪದವಾದುದನ್ನು ಕೇಳಿದ ಜನರು ತಾವು ತಪ್ಪಿದಾಗ ತಿದ್ದಿಕೊಳ್ಳುವುದಕ್ಕೆ ಸಂಪೂರ್ಣ ಹೊಸಬರಾಗಿರುವುದಿಲ್ಲ. ಅವರು ತಮ್ಮ ಸುತ್ತುಮುತ್ತಲಿನ ಜನರು ತಮ್ಮ ಯಾವ ಅಭಿಪ್ರಾಯವನ್ನು ಉಳ್ಳವರಾಗಿದ್ದಾರೋ ಅದೆಂದನ್ನಷ್ಟೇ ನಿಃಸಂದಿಗ್ಧವೆಂದು ಆಧರಿಸುತ್ತಾರೆ. ಅಥವಾ ಯಾರಿಗೆ ದಾಕ್ಷಿಣ್ಯವೃತ್ತಿಯಿಂದ ತಾವು ನಡೆದುಕೊಳ್ಳುವರೋ ಅವರೂ ತಮ್ಮ ಆ ಈ ಅಭಿಪ್ರಾಯವನ್ನು ಉಳ್ಳವರಾಗಿದ್ದರೆ, ಅದನ್ನು ಮಾತ್ರ ಹಿಂದುಮುಂದು ನೋಡದೆ ಅವಲಂಬನೀಯ ಎಂದು ಸ್ವೀಕರಿಸುತ್ತಾರೆ. ಏಕೆಂದರೆ ತನ್ನೊಬ್ಬನದೇ ತೀರ್ಪಿನಲ್ಲಿ ಒಬ್ಬನಿಗೆ ಇರುವ ವಿಶ್ವಾಸಾಭಾವದ ಪ್ರಮಾಣಕ್ಕೆ ತಕ್ಕಂತೆ ಆತನು "ಸಾಮಾನ್ಯ ಜಗತ್ತಿನ" ಅಭೇದ್ಯತೆಯನ್ನು (Infallibility) ಸಾಮಾನ್ಯವಾಗಿ ಮುಗ್ಧವಾಗಿ ನಂಬಿಬಿಡುತ್ತಾನೆ. ಅವನವನ ಜಗತ್ತೆಂದರೆ ಅವನವನ ಸಂಪರ್ಕಕ್ಕೆ ಸಿಕ್ಕಿದ ಆಯಾ ಜಗದ್ಭಾಗ, ಮನುಷ್ಯ ಗಣ– ಅವನ ಪಕ್ಷ, ಪಂಥ, ಚರ್ಚು, ಸಾಮಾಜಿಕ ವರ್ಗ. ತನ್ನ ದೇಶ, ತನ್ನ ಕಾಲ ಎಂದು ಭಾವಿಸುವ ವಿಶಾಲ ದೃಷ್ಟಿಯುಳ್ಳವನು ನಿಜವಾಗಿಯೂ ಸ್ವಲ್ಪ ಉದಾರ ಧೋರಣದವ, ವ್ಯಾಪಕ ಬುದ್ಧಿಸಂಪನ್ನ ಎನ್ನಬಹುದು; ಅಂಥವನಿಗಾದರೂ ಬೇರೆ ಕಾಲ, ದೇಶ, ಪಂಥ, ಚರ್ಚು ವರ್ಗ ಮತ್ತು ಪಕ್ಷಗಳು ಹಿಂದೆ (ಹಾಗೂ ಈಗ ಸಹ ತನ್ನ ಮತಕ್ಕೆ ವಿರುದ್ಧವಾದ ಮತವನ್ನೇ ತಾಳಿವೆ ಎಂಬುದನ್ನರಿತರೂ ಉಕ್ತ ಸಾಮೂಹಿಕ ಮತಾಧಾರದಲ್ಲಿಯ ಶ್ರದ್ಧೆ ಸಡಿಲವಾಗದು. ಮಿಕ್ಕವರ ಜಗತ್ತುಗಳಿಗೆ ವಿರುದ್ಧವಾಗಿ ತನ್ನ ಜಗತ್ತು ನ್ಯಾಯವಾದ ಅಭಿಪ್ರಾಯವುಳ್ಳದ್ದಾಗಿರಬೇಕು ಎಂಬ ಹೊಣೆಯನ್ನು ಅದರ ಮೇಲೆ ಅವನು ಹೊರಿಸುತ್ತಾನೆ. ತಾನು ಆಧರಿಸಲು ದೊರಕಿದ ಜಗತ್ತು ಆಕಸ್ಮಿಕವಾಗಿ ತನಗೆ ಸಿಕ್ಕಿದ್ದು, ಅಂಥ ಬೇರೆ ಜಗತ್ತುಗಳು ಎಷ್ಟೋ ಇವೆ; ಮತ್ತು ಲಂಡನ್ನಿನಲ್ಲಿ ಅವನನ್ನು ಚರ್ಚ್‌ಭಕ್ತನನ್ನಾಗಿ ಮಾಡಿದ ಕಾರಣಗಳೇ ಪೀಕಿಂಗಿನಲ್ಲಿ ಅವನಿದ್ದಿದ್ದರೆ ಅವನನ್ನು ಬೌದ್ಧನನ್ನಾಗಿಯೋ ಕನ್‌ಫ್ಯೂಶಿಯನ್ನನನ್ನಾಗಿಯೋ ಮಾಡಿಬಿಡುತ್ತಿದ್ದವು ಎಂಬ ವಿಚಾರಗಳೆಂದೂ ಅವನನ್ನು ಬಾಧಿಸವು. ಹೀಗಿದ್ದರೂ ವ್ಯಕ್ತಿಗಳೆಷ್ಟು ಸುಭೇದ್ಯರೋ

ಕಾಲಗಳೂ ಅಷ್ಟೇ ಸುಭೇದ್ಯ– ಒಂದು ಕಾಲದ ಅಭಿಪ್ರಾಯಗಳನ್ನು ಇನ್ನೊಂದು ಕಾಲ ಸುಳ್ಳು, ಹಾಸ್ಯಾಸ್ಪದ ಎಂದು ತಿಳಿದದ್ದುಂಟು. ಇಂದಿನ ಅನೇಕ ಸಾಮಾನ್ಯ ಅಭಿಪ್ರಾಯಗಳನ್ನು ಮುಂದಿನ ಕಾಲಗಳು ತ್ಯಜಿಸಿ ಬಿಡಬಹುದು. ಹಳೆಯ ಎಷ್ಟೋ ಸಾಮಾನ್ಯಾಭಿಪ್ರಾಯಗಳನ್ನು ನಾವೀಗ ಬಿಟ್ಟುಬಿಟ್ಟಿಲ್ಲವೇ?

ಈ ವಾದದ ಪೂರ್ವಪಕ್ಷ ಇಂತಿರಬಹುದು: ತನ್ನದೇ ನಿರ್ಣಯ ಹಾಗೂ ಹೊಣೆಗಳಿಂದ ಸಾರ್ವಜನಿಕ ಪ್ರಾಧಿಕಾರ (Public Authority) ಇನ್ನಾವುದಾದರೂ ಕೆಲಸ ಮಾಡುವುದಿಲ್ಲವೋ? ಅದಕ್ಕೂ ಹೆಚ್ಚಿನ ಅಭೇದ್ಯತೆಯುನ್ನದು ಈ ಅಸತ್ಯಾಭಿಪ್ರಾಯದ ಮನದಲ್ಲಿ ವಹಿಸಿದಂತಾಗುವುದಿಲ್ಲ– ಎಂದು ಬಳಸಲೆಂದೇ ಜನರಿಗೆ ನಿರ್ಣಯಾಧಿಕಾರವಿರುವುದು. ಅವರದನ್ನು ತಪ್ಪಾಗಿ ಉಪಯೋಗಿಸಬಿಟ್ಟಾರೆಂದು ಅದನ್ನು ಉಪಯೋಗಿಸಿಕೂಡದೆಂದು ಹೇಳಿ ಬಿಡುವುದೇ? ಇನ್ನೊಬ್ಬರ ಯಾವುದಾದರೊಂದು ಮತ ಕೆಟ್ಟದ್ದೆಂದು ಅದರ ಪ್ರಕಟನೆಯನ್ನು ನಿರ್ಬಂಧಿಸುವುದು ತಪ್ಪಾಗುವ ಸಾಮಾನ್ಯ ಸಂಭವಕ್ಕೆ ಅಪವಾದವೆಂಬ ಹಕ್ಕನ್ನು ಸ್ಥಾಪಿಸಲಾದೀತೇ? ಎಂದೂ ಇಲ್ಲ– ಆದರೆ ಸುಭೇದ್ಯವಾಗಿದ್ದರೂ ತಮ್ಮ ಕರ್ತವ್ಯವೆಂದು ಪ್ರಾಧಿಕಾರಿಗಳು ಹಾಗೆ ಜನಾಭಿಪ್ರಾಯುವನ್ನು ನಿರ್ಬಂಧಿಸುತ್ತಾರೆ. ತಮ್ಮ ಆತ್ಮಸಾಕ್ಷಿಪುಷ್ಟವಾದ ನಿರ್ಣಯದಿಂದ ಬುದ್ಧಿಪೂರ್ವಕವಾಗಿ ದಮಿಸುತ್ತಾರೆ. ನಾವೆಂದೂ ನಮ್ಮ ಮತಾನುಸಾರ ನಡೆದುಕೊಳ್ಳದೆ ಇರಲಾದೀತೇ? ನಮ್ಮ ಮತ ತಪ್ಪಾಗಿರಬಹುದೆಂದು ಯಾವಾಗಲೂ ನಿಷ್ಕ್ರಿಯರಾಗಿರಲಾದೀತೇ? ನಮ್ಮೆಲ್ಲಾ ಹಿತಾರ್ಥಗಳನ್ನು ಅಲಕ್ಷಿಸಿ ನಮ್ಮೆಲ್ಲಾ ಕರ್ತವ್ಯಗಳನ್ನು ಮಾಡದೆ ಬಿಡಲಾದೀತೇ? ಎಲ್ಲ ವರ್ತನೆಗೂ ಅನ್ವಯಿಸುವ ಒಂದು ಪ್ರತಿವಾದವು ಯಾವುದಾದರೊಂದು ವಿಶಿಷ್ಟ ವರ್ತನೆಗೂ ನ್ಯಾಯುವಾದ ಪ್ರತಿವಾದವಾದೀತೆಂಬುದು ಸಮಂಜಸವಲ್ಲ. ತಮಗೆ ಸಾಧ್ಯವಾದಷ್ಟು ಮಟ್ಟಿಗೆ ಸತ್ಯತಮವಾದ ಅಭಿಪ್ರಾಯಗಳನ್ನು ರೂಪಿಸಿಕೊಂಬುದು ಸರಕಾರ ಹಾಗೂ ವ್ಯಕ್ತಿಗಳ ಕರ್ತವ್ಯ. ಅವನ್ನು ಎಚ್ಚರಿಕೆಯಿಂದ ರೂಪಿಸಿಕೊಳ್ಳುವುದೂ ಹಾಗೆ ರೂಪಿಸಿಕೊಂಡು ಅನ್ಯರ ಮೇಲೆ ಹೇರದಿರುವುದೂ ಅವರ ಧರ್ಮ. ಆದರೆ ಅವರು ಅವು ಖಾತ್ರಿಯಾಗಿ ಸರಿಯಾದವೆಂಬುದನ್ನು ಸರಿಯಾಗಿ ಖಾತ್ರಿಮಾಡಿಕೊಂಡಮೇಲೂ ಸರಿಯೆಂದು ತೋರಿದ ಆ ಪ್ರಕಾರ ನಡೆಯದಿರುವುದು ಷಂಢತನವಾದೀತಲ್ಲದೆ ಬುದ್ಧಿಪೂರ್ವಕವಾದ ಎಚ್ಚರಿಕೆ ಎನಿಸದು; ಇಂದಿನ ಅಥವಾ ಮುಂದಿನ ಜನ್ಮದಲ್ಲಿ ಮನುಕುಲದ ಕ್ಷೇಮಕ್ಕೆ ಅಪಾಯಕರವೆಂದು ಪ್ರಾಮಾಣಿಕವಾಗಿ ತೋರುವ ಅಭಿಪ್ರಾಯದ ಅಥವಾ ತತ್ವದ ಪ್ರಚಾರವನ್ನು ತಡೆಯದಿರಲಾದೀತೇ? ಅಷ್ಟು ಪ್ರಬುದ್ಧವಲ್ಲದ ಹಿಂದಿನ ಕಾಲದಲ್ಲಿ ಈಗ ಸತ್ಯವೆಂದು ನಂಬಿದ ಅಭಿಪ್ರಾಯಗಳ ಬಗ್ಗೆ ಮಂದಿಗೆ ತ್ರಾಸ ಕೊಟ್ಟದ್ದು ಸರಿಯಲ್ಲವೆಂದು ಈಗಲೂ ಅಸದಭಿಪ್ರಾಯಗಳನ್ನು ನಾವು ನಿರ್ಬಂಧಿಸಿಡಬೇಕೇ? ಅಂದಿನವರು ಮಾಡಿದ ತಪ್ಪನ್ನು ನಾವಿಂದು ಮಾಡುವುದು ಸರಿಯಲ್ಲವೆನ್ನೋಣವೇ? ಆದರೆ ಅಧಿಕಾರ ಚಲಾಯಿಸಲು ಅನರ್ಹವಾದ ಇತರ ವಿಷಯಗಳಲ್ಲೂ ಸರಕಾರಗಳೂ

ರಾಷ್ಟ್ರಗಳೂ ತಪ್ಪಾಗಿ ನಡೆದುಕೊಂಡದ್ದುಂಟು: ಅವು ಆಯುಕ್ತ ಕರ ಹೇರಿವೆ, ಅನ್ಯಾಯದ ಯುದ್ಧಗಳನ್ನು ಮಾಡಿವೆ ಎಂದು ತಿಳಿದ ನಾವು ತೆರಿಗೆಗಳನ್ನೇ ಹಾಕಬಾರದೆ? ಎಂಥ ಉದ್ವೇಜಕ ಪರಿಸ್ಥಿತಿಯಲ್ಲೂ ಯುದ್ಧಮಾಡಬಾರದೇ? ಜನರೂ ಸರಕಾರಗಳೂ ತಮಗೆ ಶಕ್ತಿಯಿದ್ದಷ್ಟು ಮಟ್ಟಿಗೆ ಚೆನ್ನಾಗಿ ವರ್ತಿಸಬೇಕು. ಆತ್ಯಂತಿಕ ನಿಶ್ಚಯವೆಂಬ ವಸ್ತುವೆಲ್ಲೂ ಇಲ್ಲ; ಆದರೆ ಮಾನವನ ಬಾಳಿಗೆ ಆವಶ್ಯಕವೆನಿಸುವಷ್ಟು ಆಶ್ವಾಸನ ಜಗತ್ತಿನಲ್ಲಿದೆ. ಆದುದರಿಂದ ನಮ್ಮ ನಡತೆಗೆ ಮಾರ್ಗದರ್ಶಕವಾಗುವಷ್ಟು ಸತ್ಯತೆ ನಮ್ಮ ಅಭಿಪ್ರಾಯಕ್ಕಿದೆ ಎಂದು ನಾವು ಭಾವಿಸುವುದು ಅಗತ್ಯ; ನಮಗೆ ಅಸತ್ಯ, ಹಾನಿಕರ ಎನಿಸಿದ ಮತಗಳನ್ನು ಕೇಡಿಗಳು ಪ್ರಚುರಪಡಿಸಿ ಸಮಾಜದ ತಲೆಕೆಡಿಸುವುದನ್ನು ತಡೆಯುವುದು ನಮ್ಮ ಮೇಲೆ ಅಷ್ಟು ಹೆಚ್ಚಿನ ಅಭೇದ್ಯತೆಯನ್ನು ಆರೋಪಿಸಿಕೊಂಡಂತಲ್ಲ.

ಈ ಪೂರ್ವಪಕ್ಷದ ವಾದಿಗಳು ಅಷ್ಟಲ್ಲ–ಅದಕ್ಕೂ ಹೆಚ್ಚು ತಮ್ಮಲ್ಲಿ ಆರೋಪಿಸಿಕೊಳ್ಳುತ್ತಾರೆ ಎನ್ನುತ್ತೇನೆ. ಅನೇಕ ಸಲ ಖಂಡಿಸಲ್ಪಡದಿದ್ದ ಕಾರಣ ಯಾವುದಾದರೊಂದು ಮತವನ್ನು ಸತ್ಯವೆಂದು ಗ್ರಹಿಸುವುದಕ್ಕೂ ಅದರ ಖಂಡನೆಗೆ ಅವಕಾಶಕೊಡದಿರಲು ಅದರ ಸತ್ಯತೆಯನ್ನು ನಂಬುವುದಕ್ಕೂ ಬಹು ದೊಡ್ಡ ವ್ಯತ್ಯಾಸವಿದೆ. ನಮ್ಮ ಮತವನ್ನು ಖಂಡಿಸುವ ಹಾಗೂ ತಪ್ಪೆಂದು ನಿರ್ಣಯಿಸುವ ಸಂಪೂರ್ಣ ಸ್ವಾತಂತ್ರ್ಯವೇ ಅದರ ಸತ್ಯತೆಯನ್ನು ಕಾರ್ಯಾರ್ಥವಾಗಿ ಗ್ರಹಿಸುವುದನ್ನು ಸಮರ್ಥಿಸಲು ಬೇಕಾದ ಶರ್ತ. ಇನ್ನಾವ ಕಾರಣದಿಂದಲೂ ಮನುಷ್ಯಶಕ್ತಿಗಳುಳ್ಳ ವ್ಯಕ್ತಿಗೆ ನ್ಯಾಯವಾಗಿ ನಡೆದುಕೊಳ್ಳುತ್ತೇನೆನ್ನನಲು ವಿಚಾರಬದ್ಧವಾದ ಆಶ್ವಾಸನವಿಲ್ಲ.

ಮಾನವಜೀವನದ ಸಾಮಾನ್ಯ ನಡತೆಯ ಅಥವಾ ಮತದ ಇತಿಹಾಸವನ್ನು ನಾವು ಗಮನಿಸಿದಾಗ, ಆ ಈ ಮತವು ಇದ್ದುದಕ್ಕಿಂತ ಕನಿಷ್ಠವಲ್ಲ ಎನ್ನಲು ಮಾನದಂಡವಾವುದು? ಮಾನವನ ತಿಳಿವಳಿಕೆಯ ಸ್ವಾಭಾವಿಕ ಶಕ್ತಿಯಂತೂ ಅಂಥ ಮಾನದಂಡವಾಗಲಾರದು. ಸ್ವತಃ ಸಿದ್ಧವಲ್ಲದ ವಿಷಯದಲ್ಲಿ ನೂರರಲ್ಲಿ ಕೇವಲ ಒಬ್ಬ ಎಲ್ಲಾದರೂ ನಿರ್ಣಯಕೊಟ್ಟಾನು, ಒಬ್ಬನಿಗೆ ನಿಜವಾಗಿ ಅಂಥ ಶಕ್ತಿಯಿರಬಲ್ಲುದು. ಆ ನೂರನೆಯ ಮನುಷ್ಯನ ನಿರ್ಣಯಶಕ್ತಿಯಾದರೂ ಸಾಪೇಕ್ಷ, ತುಲನಾಧೀನ. ಪ್ರತಿಯೊಂದು ಹಳೆಯ ತಲೆಮಾರಿನ ಗಣ್ಯರು ಈಗ ತಪ್ಪೆಂದು ಗೊತ್ತಾಗಿರುವ ಅನೇಕ ಅಭಿಪ್ರಾಯಗಳನ್ನಿಟ್ಟುಕೊಂಡಿದ್ದರು; ಈಗ ಯಾರೂ ನ್ಯಾಯವೆನ್ನದ ಎಷ್ಟೋ ಸಂಗತಿಗಳನ್ನು ಅವರು ಮಾಡಿದ್ದರು. ಅಥವಾ ಅವುಗಳಿಗೆ ತಮ್ಮ ಅನುಮತಿಯನ್ನಿತ್ತಿದ್ದರು. ಹಾಗಾದರೆ ಮನುವಿನ ಮಕ್ಕಳಲ್ಲಿ ಒಟ್ಟಿನ ಮೇಲೆ ವಿಚಾರಶುದ್ಧ ಅಭಿಪ್ರಾಯಗಳೂ ತರ್ಕಶುದ್ಧ ವರ್ತನೆಯೂ ಹೇಗೆ ಗಣ್ಯವಾಗಿ ಉಳಿದುಕೊಂಡಿವೆ? ಮನುಷ್ಯ ವ್ಯವಹಾರವು ಅತಿ ನಿರಾಶಾದಾಯಕ ಅವಸ್ಥೆಗಿಳಿಯದಿರುವ ಎಲ್ಲ ಕಾಲದಲ್ಲೂ ಹೀಗೆ ಅವುಗಳ ವಿಚಾರಬದ್ಧತೆಯ ಗಣ್ಯತೆಯುಳಿದುಕೊಂಡು ಬರಲು ಮಾನವಮನದ ಒಂದೇ ಒಂದು ಗುಣ ಕಾರಣವಾಗಿದೆ. ಬುದ್ಧಿಪ್ರಧಾನನಿರಲಿ, ನೀತಿಪ್ರಧಾನನಿರಲಿ, ಆ

ಗುಣವೊಂದೇ ಮಾನವನ ಗೌರವಾರ್ಹತೆಯ ಅಧಿಷ್ಠಾನ. ಅದೆಂದರೆ ಅವನ ತಪ್ಪುಗಳು ತಿದ್ದಲು ಶಕ್ಯವಾಗಿರುವುದು. ಚರ್ಚೆ–ಅನುಭವಗಳಿಂದ ಆತನು ತನ್ನ ದೋಷಗಳನ್ನು ತಿದ್ದಿಕೊಳ್ಳಬಲ್ಲ. ಅನುಭವದಿಂದಷ್ಟೇ ಅಲ್ಲ, ಅನುಭವವನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂಬ ಬಗ್ಗೆ ಚರ್ಚೆಮಾಡಬೇಕಾದುದಗತ್ಯ. ಅಯುಕ್ತ ಆಚಾರ–ವಿಚಾರಗಳು ಕ್ರಮೇಣ ವಸ್ತುಸ್ಥಿತಿ ಹಾಗೂ ತರ್ಕವಾದಗಳೆದುರು ಸೋತುಹೋಗುತ್ತವೆ. ಆದರೆ ವಾಸ್ತವಿಕ ಸಂಗತಿಯೂ ತರ್ಕವಾದಗಳೂ ಮನಸ್ಸಿನ ಮೇಲೆ ಏನಾದರೂ ಪರಿಣಾಮ ಮಾಡಬೇಕಾದರೆ ಅವನ್ನೆದುರೆದುರು ತರಬೇಕು. ತಮ್ಮ ಅರ್ಥಾಭಿವ್ಯಕ್ತಿಯನ್ನು ವ್ಯಾಖ್ಯೆಯಿಲ್ಲದೆ ಮಾಡಿಕೊಡಬಲ್ಲ ಸಂಗತಿಗಳು (Facts) ತೀರ ಕಡಿಮೆ. ತಪ್ಪಾದಾಗ ತಿದ್ದಬಹುದೆಂಬ ಒಂದೇ ಗುಣದ ಮೇಲೆ ಮಾನವ್ಯ ನಿರ್ಣಯಶಕ್ತಿಯ ದಾರ್ಢ್ಯ ಹಾಗೂ ಮೌಲ್ಯಗಳು ಅವಲಂಬಿಸಿವೆ. ಆದರೆ ಅದನ್ನು ತಿದ್ದುವ ಸಾಧನವನ್ನು ಸದಾ ಸಿದ್ಧಗೊಳಿಸಿಟ್ಟುಕೊಂಡಿರುವಾಗ ಮಾತ್ರ ಅದನ್ನು ನಾವು ಅವಲಂಬಿಸಬಹುದು. ಯಾವನಾದರೊಬ್ಬನ ನಿರ್ಣಯಶಕ್ತಿ ವಿಶ್ವಾಸಾರ್ಹವೆನಿಸಿತೆಂದುಕೊಳ್ಳಿ. ಅದು ಹಾಗಾದುದು ಹೇಗೆ? ತನ್ನ ಅಭಿಪ್ರಾಯವನ್ನೂ ವರ್ತನೆಯನ್ನೂ ವಿಮರ್ಶೆಗೆಂದು ತನ್ನ ಮನವನ್ನು ತೆರೆದಿಟ್ಟದ್ದರಿಂದ; ತನ್ನ ವಿರುದ್ಧವಾಗಿ ಹೇಳಿದ್ದೆಲ್ಲವನ್ನೂ ಕೇಳುವ ಅಭ್ಯಾಸವನ್ನವ ಇಟ್ಟುಕೊಂಡುದರಿಂದ– ಅದರಲ್ಲಿ ನ್ಯಾಯುವಾದುದಷ್ಟರ ಪ್ರಯೋಜನವನ್ನು ಪಡೆದುಕೊಂಡು ಅನ್ಯಾಯವಾದುದನ್ನು ತನ್ನಲ್ಲಿ ಹಾಗೂ ಅನುಕೂಲ ಸಂದರ್ಭಗಳಲ್ಲಿ ಪರರೆದುರು ಅನ್ಯಾಯವೆಂದು ಮಂಡಿಸುತ್ತ ಹೋದುದರಿಂದ ಯಾವುದಾದರೊಂದು ವಿಷಯದ ಇಡಿಯನ್ನು ತಿಳಿಯಲು ಏನಾದರೊಂದು ಪ್ರಯತ್ನ ಮಾಡಬೇಕಾದರೆ ಮನುಷ್ಯನು ಆ ಬಗ್ಗೆ ಇರುವ ಅಭಿಪ್ರಾಯ ಭೇದಗಳೆಲ್ಲವನ್ನೂ ಕೇಳಿಕೊಂಡು ಬೇರೆಬೇರೆ ಮನಸ್ಸುಗಳದನ್ನು ನೋಡಬಹುದಾದ ಎಲ್ಲ ದೃಷ್ಟಿಕೋನಗಳನ್ನು ಅಭ್ಯಸಿಸಬೇಕು. ಯಾವ ವಿವೇಕಿಯೂ ಇನ್ನೊಂದು ಮಾರ್ಗದಿಂದ ತನ್ನ ವಿವೇಕವನ್ನು ಸಂಪಾದಿಸಲಾರ, ಇನ್ನಾವುದಾದರೂ ರೀತಿಯಿಂದ ವಿವೇಕಿಯಾಗುವ ಸ್ವಭಾವ ಮನುಷ್ಯಬುದ್ಧಿಗಿಲ್ಲ. ಆಚರಣೆಗೆ ತರುವಲ್ಲಿ ಸಂಶಯ–ಹಿಂಬಗೆತನಗಳು ಬರುವುದು ನಿಲ್ಲುವತನಕ ಅನ್ಯರ ಅಭಿಪ್ರಾಯಗಳನ್ನು ತನ್ನದರೊಡನಿಟ್ಟು ತೂಗಿ ಅದನ್ನು ತಿದ್ದುತ್ತ, ಪರಿಪೂರ್ಣಗೊಳಿಸಿಕೊಳ್ಳುತ್ತ ಹೋಗುವ ಸತತಾಭ್ಯಾಸವೊಂದೇ ನ್ಯಾಯವಾಗಿ ಅದನ್ನವಲಂಬಿಸಲಿರುವ ಸ್ತಿಮಿತಸ್ವರೂಪದ ನೆಲಗಟ್ಟು. ಏಕೆಂದರೆ, ಎದುರಾಯೆದುರು ಮಂಡಿಸಬಹುದಾದ ಪೂರ್ವಪಕ್ಷಗಳೆಲ್ಲವನ್ನೂ ಅರಿತು, ವಿಪಕ್ಷಗಳೆಲ್ಲವುಗಳನ್ನೆದುರಿಸಿ ನಿಂತು, ಪ್ರತಿವಾದ–ಪ್ರತ್ಯವಾಯಗಳಿಂದ ನುಣುಚಿಕೊಂಡು ಹೋಗಲು ಯತ್ನಿಸದೆ ಅವನ್ನೆದುರಿಸಲು ತಾನು ಹೊರಟದ್ದನ್ನು ತಿಳಿದು, ಪ್ರತಿಪಾದ್ಯ ವಿಷಯುದ ಬಗ್ಗೆತಿಳಿದುಕೊಂಡ ಮನುಷ್ಯನಿಗೆ ಉಕ್ತಪ್ರಕ್ರಿಯೆಯಲ್ಲಿ ಹಾದು ಹೋಗದೆ ಇರುವ ಇತರ ವ್ಯಕ್ತಿ ಅಥವಾ ಗುಂಪಿನ ನಿರ್ಣಯಕ್ಕಿಂತ ತನ್ನ ನಿರ್ಣಯ ಉತ್ತಮವೆಂದು ಗ್ರಹಿಸುವ ಅಧಿಕಾರವಿದೆ.

ಮನುಕುಲದ ಮಹಾವಿವೇಕಿಗಳೆಂದುಕೊಳ್ಳುವ ಆತ್ಮನಿರ್ಣಯವನ್ನವಲಂಬಿಸಲು ಅತ್ಯರ್ಹತೆಯುಳ್ಳ, ಅದನ್ನೇ ನಂಬಿ ನಡೆಯುವ ಅವಶ್ಯಕತೆಯನ್ನು ಕಂಡ ಮನುಷ್ಯರು ಕೂಡ ಸ್ವಾಭಿಪ್ರಾಯವನ್ನು ಕೆಲ ವಿವೇಕಿಗಳಿಂದ ಮತ್ತು ಹಲ ಅವಿವೇಕಿಗಳಿಂದ ಕೂಡಿದ ಸಾರ್ವಜನಿಕರೆಂಬ ಸಂಮಿಶ್ರ ಸಮಾಹಾರದೆದುರಿಡುವುದು ಅಗತ್ಯವೆಂದು ಹೇಳಿದರೆ ಹೆಚ್ಚಾಗದು. ಅತ್ಯಂತ ಅಸಹಿಷ್ಣುವಾದ ರೋಮನ್ ಕ್ಯಾಥೋಲಿಕ್ ಚರ್ಚು ಸಹ ಒಬ್ಬನಿಗೆ ಋಷಿ ಪದವನ್ನು ದಯಪಾಲಿಸುವಾಗ ಸಹನೆಯಿಂದ "ಸೈತಾನ ವಕೀಲ"ನ ಪ್ರತಿವಾದವನ್ನು ಆಲಿಸುತ್ತದೆ; ದೆವ್ವ ಹೇಳುವುದೆಲ್ಲವನ್ನೂ ತಿಳಿದು ತೂಗಿ ನೋಡಿದಲ್ಲದೆ ಎಂಥ ಪವಿತ್ರತಮ ಮನುಷ್ಯನಿಗಾದರೂ ಮರಣೋತ್ತರ ಬಹುಮಾನವನ್ನು ಸಲ್ಲಿಸಲು ಬರಲಾರದು ಎಂದು ಹೇಳಿಕೆಯಿದೆ. ನ್ಯೂಟನ್ನನ ತತ್ವಜ್ಞಾನವು ಪ್ರಶ್ನೆಬಾಹಿರ ಎಂದು ಮಾಡಿದ್ದರೆ ಜನರು ಅದರ ಸತ್ಯತೆಯ ಬಗ್ಗೆ ಸಾಕಷ್ಟು ಸಮಾಧಾನ ಹೊಂದುತ್ತಿರಲಿಲ್ಲ. ಬುಡವಿಲ್ಲವೆಂದು ಸಿದ್ಧಮಾಡಿ ತೋರಿಸಲು ಇಡಿ ಜಗತ್ತಿಗೇ ನಿತ್ಯಾಮಂತ್ರಣ ಕೊಡುವುದೊಂದರ ಮೇಲೆ ನಾವು ಇಟ್ಟುಕೊಂಡ ಅತ್ಯಧಿಕೃತ ನಂಬಿಗೆಗಳ ಭದ್ರತೆ ನಿಂತಿದೆ. ಈ ಆಹ್ವಾನವನ್ನದು ಸ್ವೀಕರಿಸದೆ ಹೋದರೆ ಅಥವಾ ಸ್ವೀಕರಿಸಿ ಆ ಪ್ರಯತ್ನದಲ್ಲದು ಸೋತರೆ ಕೂಡ ನಾವು ನಿಶ್ಚಿತತೆಯಿಂದ ಬಹಳ ದೂರದಲ್ಲೇ ಇದ್ದೇವೆಂದು ತಿಳಿದುಕೊಳ್ಳಬೇಕು– ಆದರೆ ಅದರಿಂದ ನಾವು ಸದ್ಯದಲ್ಲಿ ಮನುಷ್ಯನ ವಿಚಾರ ಶಕ್ತಿಗೆ ಒಪ್ಪುವಂಥ ಕ್ರಮವನ್ನು ತೆಗೆದುಕೊಂಡಿದ್ದೇವೆ ಎಂದು ಸಮಾಧಾನ ಪಡಬಹುದು. ಆಗ ನಮ್ಮನ್ನು ಮುಟ್ಟಲು ಸತ್ಯಕ್ಕೆ ಅವಕಾಶ ಕೊಡಬಹುದಾದ ಯಾವ ಒಂದು ಅಂಶವನ್ನೂ ನಾವು ಅಲಕ್ಷಿಸಿದಂತಾಗುವುದಿಲ್ಲ. ಅಂಥ ಅಂಶಗಳ ಪಟ್ಟಿಗಳನ್ನು ತೆರೆದೇ ಇಟ್ಟರೆ, ಆಗ ಹೆಚ್ಚಿನ ಸತ್ಯವೇನಾದರೂ ಇದ್ದರೆ ಮಾನವಮನ ಅದನ್ನು ಗ್ರಹಿಸಲು ಶಕ್ತವಾದಾಗ ಅದು ಲಭ್ಯವಾದೀತೆಂದು ನಾವು ಪ್ರತ್ಯಾಶಿಸಬಹುದು. ಆ ನಡುವೆ ನಮ್ಮ ದಿನಮಾನದಲ್ಲಿ ಸಾಧ್ಯವಿರುವಷ್ಟರ ಮಟ್ಟಿನ ಸತ್ಯಾಭಿಮುಖತೆಯನ್ನು ಸಾಧಿಸಿದ್ದೇವೆಂದು ನಂಬಿ ಆ ಪ್ರಕಾರ ನಾವು ನಡೆದುಕೊಳ್ಳಬಹುದು. ಪ್ರಮಾದಶೀಲ ಅಥವಾ ಸ್ಖಲಜ್ಜಂತುವು ಸಾಧಿಸಬಹುದಾದ ನಿಶ್ಚಯದ ಪ್ರಮಾಣ ಇಷ್ಟೇ; ಮತ್ತು ಇದೇ ಅದನ್ನು ಸಾಧಿಸುವ ಏಕಮೇವ ಮಾರ್ಗ.

ಅನಿರ್ಬದ್ಧ ಚರ್ಚೆಗೆ ಅವಕಾಶವಿರಬೇಕೆಂಬ ವಿಚಾರದ ಬಗ್ಗೆ ಇರುವ ಸಮರ್ಥನೆಗಳ ತರ್ಕಶುದ್ಧತೆಯನ್ನು ಒಪ್ಪಿದರೂ ಅವನ್ನು ಅತಿ ಮಟ್ಟಕ್ಕೊಯ್ಯುವುದನ್ನು ಜನರು ಆಕ್ಷೇಪಿಸುವುದು ಆಶ್ಚರ್ಯಕರ. ಅತಿ ಪ್ರಕರಣಗಳಿಗಾಗದ ಸಮರ್ಥನೆ ಯಾವ ಪ್ರಕರಣಕ್ಕೂ ಆಗದು ಎಂಬುದನ್ನವರರಿಯರು. ಸಂಶಯಾಸ್ಪದವಾದ ವಿಷಯಗಳೆಲ್ಲದಕ್ಕೂ ಅನಿರ್ಬದ್ಧ ಚರ್ಚಾವಕಾಶವಿರಬೇಕೆಂದು ಒಪ್ಪಿಕೊಳ್ಳುವ ಜನರು ಮರುಕ್ಷಣದಲ್ಲಿ 'ಇದು ಅತ್ಯಂತ ನಿಶ್ಚಿತ– ಅಂದರೆ ಇದು ನಿಶ್ಚಿತವೆಂದು ತಾವು ನಿಶ್ಚಯಿಸಿದ್ದೇವೆ' ಎಂದು ಆ ಈ ತತ್ವ ಅಥವಾ ಸಿದ್ಧಾಂತವೊಂದನನು ಪ್ರಶ್ನಬಾಹಿರಗೊಳಿಸಬೇಕೆಂದು ಭಾವಿಸುತ್ತಾ, ಹಾಗೆ ಭಾವಿಸುವುದರಲ್ಲಿ ತಾವು ಅಭೇದ್ಯತೆಯನ್ನು (Infallibility)

ಆಧರಿಸಿಲ್ಲ ಎಂದು ತರ್ಕಿಸುವುದು ಆಶ್ಚರ್ಯಕರ! ಪ್ರತಿವಾದಕ್ಕೆ ಅವಕಾಶ ಕೊಟ್ಟರೆ ಪ್ರತಿವಾದ ಮಾಡುವೆನೆಂಬವನೊಬ್ಬನಿರುವಾಗ ಅವನಿಗೆ ಅವಕಾಶ ಕೊಡದೆ ಪ್ರಮೇಯವೊಂದನ್ನು ಪ್ರಮಿತಿಯೆಂದು (Judgment) ಹೇಳುವುದೆಂದರೆ ಪ್ರತಿಪಕ್ಷದ ವಾದವನ್ನು ಕೇಳದೆ ನಾವೂ ನಮ್ಮ ಪಕ್ಷದವರೂ ನಿಶ್ಚಿತತೆಯ ನಿರ್ಣಾಯಕರೆಂದು ತಿಳಿದುಕೊಳ್ಳುವುದೊಂದೇ ಆಗುತ್ತದೆ.

ಈಗಿನ ಕಾಲ "ಶ್ರದ್ಧಾಹೀನ, ಆದರೆ ಸಂಶಯಶೀಲದ ಬಗ್ಗೆ ಭಯಗ್ರಸ್ತವಾದುದು" ಎಂದು ಹೇಳುವುದುಂಟು. ಅಂದರೆ, ಜನರಿಗಿಂದು ತಮ್ಮ ಅಭಿಪ್ರಾಯಗಳ ಸತ್ಯತೆಯ ಬಗ್ಗೆ ಅಷ್ಟೇನೂ ಖಾತ್ರಿಯಿಲ್ಲವಾದರೂ ಅವುಗಳಿಲ್ಲವಾದರೆ ತಮಗೇನನ್ನು ಮಾಡಲೂ ಸಾಧ್ಯವಾಗಬಾರದೆನ್ನಿಸುತ್ತದೆ– ಅರ್ಥಾತ್ ಸಾರ್ವಜನಿಕರ ವಿಮರ್ಶೆಗೆ ಗುರಿಪಡಿಸದೆ ತನ್ನನ್ನು ಕಾಯಬೇಕೆಂಬ ಹಕ್ಕನ್ನು ಪ್ರತಿಪಾದಿಸುವ ಅಭಿಪ್ರಾಯವಿಂದು ತನ್ನ ಆ ಹಕ್ಕಿಗೆ ತನ್ನ ಸತ್ಯತೆಯನ್ನು ಆಧಾರವಾಗಿ ಕೊಡಲು ಅಷ್ಟೇನೂ ಮುಂದಾಗದೆ, ಸಮಾಜಕ್ಕೆ ತಾನು ಅಗತ್ಯ, ಗಣ್ಯ ಎಂಬುದನ್ನೇ ಮೊದಲು ಮುಂದಿಡುತ್ತದೆ. ಕೆಲ ನಂಬಿಗೆಗಳಿವೆಯಂತೆ, ಅವು ಒಳ್ಳಾಳಿಗೆ ಅತ್ಯಂತ ಅನಿವಾರ್ಯ, ಉಪಯೋಗಕರ. ಆದುದರಿಂದ ಸಮಾಜದ ಇತರ ಹಿತಾರ್ಥಗಳನ್ನು ಕಾಯುವಂತೆಯೇ ಅವನ್ನು ಎತ್ತಿ ಹಿಡಿಯುವುದೂ ಸರಕಾರಗಳ ಕರ್ತವ್ಯವಂತೆ. ಅಂಥ ಅವಶ್ಯವಿದ್ದಲ್ಲಿ, ಅದು ಕರ್ತವ್ಯವೆನಿಸಿದಲ್ಲಿ ಒಂದು ಅಭಿಪ್ರಾಯವು ಸ್ವಲ್ಪ ಮಟ್ಟಿಗೆ ದೂಷಣಾರ್ಹ, ಪ್ರಮಾದಾವಹ ಎನಿಸಿದ್ದರೂ ಅಡ್ಡಿಯಿಲ್ಲ– ಅದು ಮನುಕುಲದ ಸಾಮಾನ್ಯಾಭಿಪ್ರಾಯದಿಂದ ಪುಷ್ಟವಾಗಿದ್ದರೆ ಸರಿ– ಆಗ ಸರಕಾರಗಳಿಗೆ ಅಂಥ ಅಭಿಮತದ ಪ್ರಕಾರ ಕ್ರಮವನ್ನು ಕೈಕೊಳ್ಳುವ ಅಧಿಕಾರವಿದೆಯಷ್ಟೇ ಅಲ್ಲ, ಕೈಕೊಳ್ಳಲೇಬೇಕು ಎಂಬ ಕರ್ತವ್ಯವೂ ಸನ್ನಿಹಿತ ಎಂದು ಹೇಳುವುದುಂಟು. ಅಲ್ಲದೆ, ಈ ಶುಭಶ್ರದ್ಧೆಗಳನ್ನು ಸಜ್ಜನರೆಂದೂ ದುರ್ಬಲಗೊಳಿಸಲು ಬಯಸರು; ದುರ್ಜನರನ್ನು ತಡೆಹಿಡಿಯುವದರಲ್ಲೂ ಅವರಷ್ಟೇ ಮಾಡಲಪೇಕ್ಷಿಸುವುದನ್ನು ಬಹಿಷ್ಕರಿಸುವುದರಲ್ಲೂ ಯಾವ ತಪ್ಪೂ ಇಲ್ಲ– ಎನ್ನುವವರಿದ್ದಾರೆ. ಈ ತರಹದ ವಿಚಾರಧಾರೆಯನ್ನು ಹಿಡಿದು ಹೊರಟರೆ ಅದು ಅಭಿಪ್ರಾಯದ ಚರ್ಚೆಯನ್ನು (ಅದರ ಸತ್ಯಾಸತ್ಯತೆಯ ಪ್ರಶ್ನೆಯನ್ನು ಹೊರಗಿಟ್ಟು) ಪ್ರಯೋಜನೈಕ ದೃಷ್ಟಿಯಿಂದ ನಿರ್ಬಂಧಿಸುವುದನ್ನು ಸಮರ್ಥಿಸುತ್ತದೆ – ಆ ಮೂಲಕ ಅಭಿಪ್ರಾಯಗಳ ಅಭೇದ್ಯ ನಿರ್ಣಾಯಕ (Infallible Judge)ತಾನೆಂಬ ಹೊಣೆಯಿಂದ ಅದು ತನ್ನನ್ನು ಮುಕ್ತಗೊಳಿಸಿಕೊಳ್ಳುತ್ತದೆ. ಆದರೆ ಹೀಗೆ ಸಮಾಧಾನ ತಾಳುವವರು ಅದರಲ್ಲಿ ಅಪ್ರಮಾದಶೀಲತೆಯ ಅಹಂಕಾರವನ್ನು ಬರಿದೆ ಒಂದಂಶದಿಂದ ಇನ್ನೊಂದಕ್ಕೆ ವರ್ಗಾಯಿಸಿದಂತಾಯಿತು ಎಂಬುದನ್ನು ಕಾಣರು. ಒಂದು ಅಭಿಪ್ರಾಯದ ಉಪಯುಕ್ತತೆಯೆಂಬುದು ಸ್ವತಃ ಅದರ ಸತ್ಯಾಸತ್ಯತೆಯಷ್ಟೇ ಚರ್ಚಾರ್ಹ, ವಿವೇಚನೀಯ, ಪಕ್ಷಾಂತರಕಲ್ಪನಾರ್ಹ. ನಿಂದಿತಾಭಿಪ್ರಾಯವೊಂದಕ್ಕೆ ಆತ್ಮ ಸಮರ್ಥನಾವಕಾಶವನ್ನು ಸಂಪೂರ್ಣವಾಗಿ ಒದಗಿಸಿಕೊಡದಿರುವಾಗ ಅದನ್ನು ಸುಳ್ಳೆಂದು ಸಿದ್ಧಮಾಡಲು

ಎಂಥ ಅಪ್ರಮಾದಶೀಲನಾದ ಮಧ್ಯಸ್ಥ ಅವಶ್ಯಕವೋ ಅಂಥವನೇ ಸತ್ಯತೆಯನ್ನು ಸಮರ್ಥಿಸಲು ನಾಸ್ತಿಕ (ಅಥವಾ ಪಾಖಂಡಿ) ನೊಬ್ಬನಿಗೆ ಬಿಡದೆ ಇರುವಾಗ, ಅದರ ಪ್ರಯೋಜನ–ನಿಷ್ಪ್ರಯೋಜನ (ಇಲ್ಲವೆ ಹಾನಿಕಾರಕತೆ)ಗಳ ಬಗ್ಗೆ ಪ್ರತಿಪಾದಿಸಲು ಬಿಡಬಹುದು ಎಂದರಾಗದು. ಅಭಿಪ್ರಾಯದ ಸತ್ಯತೆಯೆಂಬುದು ಅದರ ಉಪಯುಕ್ತತೆಯ ಒಂದು ಅವಿಭಾಜ್ಯ ಅಂಗ. ಒಂದು ಪ್ರಮೇಯವನ್ನು (Proposition) ನಂಬುವುದು ಅಪೇಕ್ಷಣೀಯವೋ ಅಲ್ಲವೋ ಎಂಬುದನ್ನು ನಾವು ತಿಳಿಯಲು ಹೊರಟಾಗ, ಅದು ಸತ್ಯವೋ ಸುಳ್ಳೋ ಎಂದು ವಿವೇಚಿಸುವುದನ್ನು ದೂರವಿಡಲಾದೀತೇ? ಶ್ರೇಷ್ಠರ ಮತದ ಪ್ರಕಾರ – ಕನಿಷ್ಠರ ಮತದ ಪ್ರಕಾರವಲ್ಲ – ಸತ್ಯಕ್ಕೆ ವಿರುದ್ಧವಾದ ಯಾವ ಅಭಿಪ್ರಾಯವೂ ಪ್ರಯೋಜನಕ್ಕೆ ಬರುವುದಲ್ಲ. ಹೀಗಿರುವಾಗ, 'ಇದು ಪ್ರಯೋಜನಕರ' ಎಂದು ನೀವು ಅವರಿಗೆ ಹೇಳಿದ ಒಂದು ಅಭಿಪ್ರಾಯವನ್ನವರು ಅಸತ್ಯವೆಂದು ನಂಬಿ ಹಾಗೆ ಪ್ರತಿಪಾದಿಸಿದರೆ, ಅದು ತಪ್ಪೆಂದು ಆಗ ನೀವು ಅವರ ಮೇಲೆ ಆರೋಪ ಹೊರಿಸಿದರೆ– ಅಂಥ ಸಂದರ್ಭದಲ್ಲದವರು ಮೇಲೆ ಹೇಳಿದ ವಾದವನ್ನು ನಿಮ್ಮ ಮುಂದಿರಿಸಿದರೆ, ಅದನ್ನೆಂತು ನೀವು ತಡೆಯಬಲ್ಲಿರಿ? ಸ್ವೀಕೃತಾಭಿಪ್ರಾಯಗಳ ಕಡೆಯಿಂದ ಮಾತಾಡುವವರು ಈ ವಾದದ ಪ್ರಯೋಜನವನ್ನು ಪೂರ್ಣವಾಗಿ ಪಡೆಯದೆ ಎಂದೂ ಸುಮ್ಮನಿರರು. ಸತ್ಯದಿಂದ ಸಾಮರ್ಥ್ಯದ ಪ್ರಶ್ನೆಯನ್ನು ಸೂಕ್ಷ್ಮವಾಗಿ ಬೇರ್ಪಡಿಸಿ ಅವರು ಮಾತಾಡರು. ತದ್ವಿರುದ್ಧವಾಗಿ, ನಮ್ಮ ತತ್ವವೇ ಸತ್ಯ, ಅದರ ಜ್ಞಾನ ಅಥವಾ ನಂಬಿಗೆಯು ಅನಿವಾರ್ಯ ಎಂದೇ ಅವರು ಮಾತಾಡುತ್ತಾರೆ. ಒಂದು ಪಕ್ಷವು ಇಂಥ ಗಣ್ಯ ವ್ಯವಸ್ಥೆಯನ್ನು ಮಾಡಿಕೊಂಡಿರುವಾಗ ಅಭಿಪ್ರಾಯವೊಂದರ ಪ್ರಯೋಜನದ ಬಗ್ಗೆ ನ್ಯಾಯವಾದ ಚರ್ಚೆ ಎಂದೂ ನಡೆಯಲಾರದು. ವಾಸ್ತವಿಕವಾಗಿ ನೋಡಿದರೆ, ಕಾಯಿದೆ ಅಥವಾ ಜನಭಾವನೆಯು ಅಭಿಪ್ರಾಯವೊಂದರ ಸತ್ಯದ ಬಗ್ಗೆ ಚರ್ಚಿಸಗೊಡದಾಗ ಅದರ ಉಪಯೋಗಖಂಡನದ ಬಗ್ಗೆ ಅವು ಅಷ್ಟೇ ಅಸಹಿಷ್ಣುಗಳಾಗುತ್ತವೆ. ಹೆಚ್ಚೆಂದರೆ, ಅವು ಅದರ ಅಗತ್ಯದ ಡಿಗ್ರಿಯನ್ನು ಇಳಿಸಬಹುದು ಅಥವಾ ಅದರ ಪರಿತ್ಯಾಗದಿಂದ ಬರಬಹುದಾದ ತಪ್ಪಿನ ಪರಿಮಾಣವನ್ನು ಕಡಿಮೆಮಾಡಬಹುದು.

ನಮ್ಮ ನಿರ್ಣಯದ ಪ್ರಕಾರ ನಿಂದ್ಯವೆಂದು ನಾವು ತಿಳಿದ ಅಭಿಪ್ರಾಯಗಳ ಪರವಾದ ಹೇಳಿಕೆಗಳನ್ನು ಕೇಳುವುದಿಲ್ಲ ಎಂದು ನಾವು ಹಟತೊಡುವುದರಿಂದ ಸಂಭವಿಸುವ ಕುಚೋದ್ಯದ ಬಗ್ಗೆ ಒಂದು ನಿದರ್ಶನವನ್ನು ಕೊಡುವುದು ಅವಶ್ಯಕ. ನನಗೆ ಅತ್ಯನನುಕೂಲವಾದ ನಿದರ್ಶನವನ್ನೇ ನಾನೀಗ ಎತ್ತಿಕೊಳ್ಳುತ್ತೇನೆ; ಸತ್ಯತೆ–ಉಪಯುಕ್ತತೆಗಳನ್ನಾಧರಿಸಿದ, ಅಭಿಪ್ರಾಯ ಸ್ವಾತಂತ್ರ್ಯವನ್ನು ವಿರೋಧಿಸುವ ವಾದವು ಅಂಥ ಒಂದು ನಿದರ್ಶನ. ದೈವ ಶ್ರದ್ಧೆ, ಪುನರ್ಜನ್ಮ ಅಥವಾ ಇನ್ನಾವುದಾದರೂ ಒಂದು ಸಾಮಾನ್ಯರಿಂದ ಸ್ವೀಕೃತವಾದ ನೀತಿತತ್ವವನ್ನು ವಿವಾದ ವಸ್ತುವೆಂದಿಟ್ಟುಕೊಳ್ಳೋಣ. ಅಂಥ ಕಾರಣಕ್ಕಾಗಿ ಹೋರಾಡುವಲ್ಲಿ ಅನ್ಯಾಯಿಯಾದ ವಿರೋಧಿಗೆ ಬಹಳ ಅನುಕೂಲ

ದೊರಕುತ್ತದೆ. ನ್ಯಾಯಿಗಳು ಒಳಗೊಳಗೆ ಅಂದುಕೊಳ್ಳಬಹುದಾದ, ಅನ್ಯಾಯಿ ಹೊರಗೆ ಕೇಳಬಹುದಾದ ಪ್ರಶ್ನೆಯೆಂದರೆ– ಕಾಯಿದೆಯ ರಕ್ಷಣೆಗೆ ಒಳಪಡಿಸುವಷ್ಟರಮಟ್ಟಿನ ನಿಶ್ಚಿತತೆಯ ತತ್ವಗಳೇನಿವು? ದೇವರಲ್ಲಿ ನಂಬಿಗೆಯಿಡುವುದೆಂಬುದು ತಮ್ಮ ನಿಶ್ಚಿತತೆಯ ಬಗ್ಗೆ ಅಪ್ರಮಾದ್ಯತೆಯನ್ನು ಆಧರಿಸಬೇಕಾದ ಅಭಿಪ್ರಾಯಗಳ ಪಂಕ್ತಿಗೆ ಸೇರಿದ್ದೇನು? ಆದರೆ ನೋಡಿ– ಯಾವುದಾದರೂ ಒಂದು ತತ್ವವು ಖಾತ್ರಿಯಾದದ್ದು ಎಂದು ಭಾವಿಸುವುದು ಅಪ್ರಮಾದ್ಯತೆಯ ಅಹಂಕಾರವೆಂದು ನಾನು ಹೇಳುವುದಿಲ್ಲ; ಅನ್ಯರು ಹಾಗೆ ಭಾವಿಸಬೇಕು ಅಥವಾ ಬಾರದು ಎಂದು (ವಿಪಕ್ಷ ವಾದವನ್ನು ಕೇಳಲೊಪ್ಪದೆ) ಪ್ರಶ್ನೆಯನ್ನು ಇತ್ಯರ್ಥಪಡಿಸ ಹೊರಡುವುದರಲ್ಲಿ ಅಂಥ ಅಹಂಕಾರವಿದೆ, ದುರಹಂಮದವಿದೆ. ಅಹಂಬ್ರಹ್ಮವಾದವಿದೆ, ನಿರಂಕುಶ ಅಧಿಕಾರದ ಪ್ರಯೋಗವಿದೆ. ಇಂಥ ಅಹಂವ್ಯಾಜವು ನನ್ನ ಸ್ವಂತದ ದೃಢಾಭಿಪ್ರಾಯಗಳಿಗೆ ಬೆಂಬಲ ನೀಡಬಂದರೂ ಸರಿಯೆ– ನಾನದನ್ನು ಅಯೋಗ್ಯವೆಂದು ಸಾರುತ್ತೇನೆ. ಒಂದು ಮತದ ಅನೈತಿಕತೆ, ಅಪಾವಿತ್ರ್ಯ ಮತ್ತು ಅದರ ಸ್ವೀಕಾರದಿಂದ ಆಗಬಹುದಾದ ದುಷ್ಪರಿಣಾಮ ಹಾಗೂ ಆ ಮತದ ಅಸತ್ಯತೆ ಎಷ್ಟೇ ಇರಲಿ – ಯಾರೋ ಬಹಳ ಒತ್ತಾಯದಿಂದ ಹೇಳಿದರೆಂದು, ಅಂಥ ಒತ್ತಾಯದ ಹೇಳಿಕೆಗೆ ತನ್ನ ಸಮಕಾಲೀನರ ಅಥವಾ ತನ್ನ ದೇಶದ ಬೆಂಬಲವಿದೆಯೆಂದು ಉಕ್ತಮತದ ಮಂಡನವನ್ನು ಯಾವನಾದರೂ ತಡೆದರೆ, ಆತ ಆಗ ಅಪಮಾದ್ಯತೆಯ ಅಹಮ್ಮನ್ನು ತೋರಿಸಿದಂತಾಗುತ್ತದೆ. ಈ ಸಂದರ್ಭದಲ್ಲಿ ಅಂದರೆ ಅಪವಿತ್ರ, ಅನೀತಿಕರ ಅಭಿಪ್ರಾಯದ ಮಂಡನವನ್ನು ತಡೆಯುವುದರಲ್ಲಿ – ಅಪ್ರಮಾದ್ಯತಾಹಂಕಾರ ತಾಳುವುದು ಬಹಳ ತಪ್ಪು ಇಲ್ಲವೆ ಹಾನಿಕರ ಆಗದು ಎಂದೊಮ್ಮೆ ಹೇಳಬಹುದು; ಆದರೆ ಇಂಥ ಅಭಿಪ್ರಾಯ ಮಂಡನಕ್ಕಷ್ಟೇ ಅಲ್ಲ, ಎಂಥ ಅಭಿಪ್ರಾಯವನ್ನು ಮಂಡಿಸುವುದರಲ್ಲೂ ಈ ಬಗೆಯ ಅಹಂಕಾರಿ ಇದಕ್ಕೂ ಹೆಚ್ಚು ಹಾನಿಕರ ಪರಿಣಾಮ ಉಂಟಾಗುವಂತೆ ತನ್ನ ಅಪ್ರಮಾದ್ಯತೆಯನ್ನು ತಾನೇ ಸಾರಿ ಪರಾಭಿಪ್ರಾಯದ ಪ್ರತಿಪಾದನೆಯನ್ನು ಪ್ರತಿಬಂಧಿಸುತ್ತಾನೆ. ಒಬ್ಬನಿಗೆ ಒಂದು ಅಪವಿತ್ರ, ಅನೈತಿಕ ಎಂದು ಕಂಡರೆ ಇನ್ನೊಬ್ಬನಿಗೆ ಇನ್ನೊಂದು ಮತ ಹಾಗೆ ಕಂಡೀತು. ಒಂದು ಕಾಲದಲ್ಲಿ ಹಾಗೆನಿಸಿದ ಸಂಗತಿ ಮತ್ತೊಂದು ಕಾಲದಲ್ಲಿ ಅಷ್ಟು ಅಪ್ರಶಸ್ತ ಎನ್ನಿಸದು. ಆದುದರಿಂದ ಇತಿಹಾಸದಲ್ಲಿ ಒಮ್ಮೊಮ್ಮೆ ಹಿಂದಿನವರು ಮಾಡಿದ ಯಾವುದಾದರೂ ಭಯಂಕರ ಅಪರಾಧವು ಮುಂದಿನವರಿಗೆ ಭಯ–ಆಶ್ಚರ್ಯಗಳನ್ನುಂಟುಮಾಡುತ್ತವೆ. ದೇಶದ ಪುರುಷೋತ್ತಮರನ್ನೂ ಉದಾತ್ತತಮ ತತ್ವಗಳನ್ನೂ ಮೂಲೋತ್ಪಾಟನ ಮಾಡಲು ಕಾಯದೆಯ ಕೈಯನ್ನು ಬಳಸಿದ ಐತಿಹಾಸಿಕ ಪ್ರಕರಣಗಳು ಅಂಥ ಅಪರಾಧವರ್ಗಕ್ಕೆ ಸೇರತಕ್ಕವು. ಹಾಗೆ ಮೂಲೋತ್ಪಾಟನ ಮಾಡ ಹೊರಟವರು ಉತ್ತಮರ ವಿರುದ್ಧವಾಗಿ ಪಡೆದ ಜಯವು ಅಧಮವೆನಿಸಿತು. ಅವರು ಹತ್ತಿಕ್ಕಲೆಳಸಿದ ಉನ್ನತ ತತ್ವಗಳಲ್ಲಿ ಕೆಲವು ತಮ್ಮನ್ನು ತಾವೇ ಅಣಕಿಸುವುವೋ ಎಂಬಂತೆ ಅವರ ಅಭಿಪ್ರಾಯಕ್ಕೆ ಭಾಗದವರ ಅಥವಾ ತಾವು ಗ್ರಹಿಸಿದ ಅದರ ಅರ್ಥವಿವರಣಕ್ಕೆ ಕುರಿತ ಅಂಥ ನಡತೆಯನ್ನು ಸಮರ್ಥಿಸುವುದರಲ್ಲಿ ನಿಯಂತ್ರಿತವಾಗಿವೆ.

ಸಾಕ್ರೆಟೀಸನೆಂಬೊಬ್ಬ ಮನುಷ್ಯನಿದ್ದನೆಂಬುದನ್ನೂ ಅವನಿಗೂ ಸಾರ್ವಜನಿಕ ಅಭಿಪ್ರಾಯ ಮತ್ತು ಕಾಯಿದೆಖಾತೆಯ ಅಧಿಕಾರಿಗಳಿಗೂ ವಿರೋಧವುಂಟಾದುದನ್ನೂ ಜನರಿಗೆ ಮತ್ತೆ ಮತ್ತೆ ನೆನಪು ಮಾಡಿ ಕೊಡುವುದು ಅಗತ್ಯವಿಲ್ಲವೆಂದು ತೋರುತ್ತದೆ. ಅವನಿದ್ದುದು ದೊಡ್ಡ ದೊಡ್ಡ ವ್ಯಕ್ತಿಗಳಿದ್ದ ಕಾಲ, ದೇಶ ಅವನನ್ನು ಬಲ್ಲವರ ಪರಂಪರೆಯಿಂದ ಅವನಂದು ಪುರುಷೋತ್ತಮನಾಗಿದ್ದನೆಂದು ತಿಳಿದುಬರುತ್ತದೆ. ಪ್ಲೇಟೋವಿಗೆ ಅವನು ಸ್ಫೂರ್ತಿದಾತ; ಅರಿಸ್ಟಾಟಲನಿಗೂ ಹಾಗೇ. ಪ್ಲೇಟೋ–ಅರಿಸ್ಟಾಟಲರು ನೀತ್ಯಾದಿ ಸರ್ವ ತತ್ವಶಾಸ್ತ್ರಗಳ ಆದಿಗುರುಗಳೆಂಬುದು (ಯುರೋಪಿಯನ್ನರಲ್ಲಿ) ಎಲ್ಲರಿಗೂ ತಿಳಿದ ಸಂಗತಿ. ಅರಿಸ್ಟಾಟಲನಂತೂ ವಿವೇಕಿಯಾದ ಪ್ರಯೋಜನವಾದಿಯಾಗಿದ್ದ. ಇಲ್ಲಿಯ ವರೆಗಿನ (ಯುರೋಪಿಯನ್) ಚಿಂತಕರೆಲ್ಲರಿಗೂ ಪರಮಾಚಾರ್ಯನೆನಿಸಿದ ಸಾಕ್ರೆಟೀಸನನ್ನು ಅವನ ದೇಶದವರು ಅಧಾರ್ಮಿಕ ಹಾಗೂ ಅನೈತಿಕ ಕಾರ್ಯವನ್ನೆಸಗಿದ ಅಪರಾಧಿ ಎಂದು ಕೋರ್ಟಿನ ಮೂಲಕ ನಿರ್ಣಯಿಸಿ ಮರಣ ದಂಡನೆಗೆ ಗುರಿಪಡಿಸಿದರು. ಸರಕಾರವು ಮನ್ನಣೆಯಿತ್ತ ದೇವತೆಗಳ ಅಸ್ತಿತ್ವವನ್ನು ಅಲ್ಲಗಳೆದದ್ದು ಅಧರ್ಮ; ಸಾಕ್ರೆಟೀಸನಿಗೆ ದೇವರೆಂಬ ಜಾತಿಯಲ್ಲೇ ನಂಬಿಗೆಯಿಲ್ಲವೆಂದು ಅವನ ಮೇಲೆ ಆರೋಪ ಹೊರಿಸಲಾಯಿತು. ತನ್ನ ತತ್ವ–ಉಪದೇಶಗಳಿಂದ ಜವ್ವನಿಗರನ್ನು ಅಡ್ಡದಾರಿಗೆಳೆದ ಅನೀತಿಕಾರ್ಯವನ್ನವ ಮಾಡಿದನೆನ್ನಲಾಯಿತು. ನ್ಯಾಯಮಂಡಲವು ಪ್ರಾಮಾಣಿಕವಾಗಿ ಸರಿಯಾದ ಕಾರಣಗಳ ಮೇಲಿಂದ ಆ ಪುರುಷೋತ್ತಮನನ್ನು ಘಾತಕನೆಂದು ಸಿದ್ಧ ಮಾಡಿತೆಂದು ನಾವು ನಂಬಬಹುದಾಗಿದೆ.

ಎರಡನೆಯದು ಕ್ರಿಸ್ತನ ಮರಣದಂಡನೆಯ ವೃತ್ತಾಂತ. ಮೂರ್ತಿ ಮತ್ತಾಗಿ ನಿಂತ ದೇವರೆಂದು ಅನಂತರ ಪೂಜಿಸಲ್ಪಟ್ಟ ಆ ಮಹನೀಯನನ್ನು ಧರ್ಮದ್ರೋಹಿ ಎಂದು ನ್ಯಾಯಮಂಡಲ ಅಂದು ತೀರ್ಮಾನಿಸಿ ಅವನಿಗೆ ಮರಣದಂಡನೆಯನ್ನು ವಿಧಿಸಿದ್ದು ಅನ್ಯಾದೃಶ. ಅಂಥ ಅಮರನನ್ನು ಕಲ್ಲಿಟ್ಟು ಕೊಂದ ಅಂದಿನ ಜನರು ರಾಕ್ಷಸಶೀಲರೆಂದು ಇಂದಿನ ಸನಾತನ ಕ್ರೈಸ್ತರು ತಿಳಿದುಕೊಳ್ಳಬೇಕಾಗಿಲ್ಲ. ಅವರೂ ಇವರಷ್ಟೇ ತಿಳಿವಳಿಕೆಯುಳ್ಳವರಾಗಿದ್ದರೆಂಬುದನ್ನು ಮರೆಯಲಾಗದು. ಕ್ರೈಸ್ತ ಪ್ರಕರಣದಲ್ಲಿ ಸಂತ ಪಾಲನೂ ಒಬ್ಬ (Saint Paul) ಸರಕಾರಿ ವಕೀಲನಾಗಿದ್ದನೆಂಬುದನ್ನು ಗಮನಿಸಬೇಕು.

ಕ್ರೈಸ್ತರನ್ನು ಶೋಷಣೆಗೆ ಗುರಿಪಡಿಸಿದ ಸುಪ್ರಸಿದ್ಧ ಚಕ್ರವರ್ತಿ ಮಾರ್ಕಸ್ ಅರೀಲಿಯಸ್ಸನಿಗೂ ಕ್ರೈಸ್ತಧರ್ಮ ಜಗತ್ತಿಗೆ ಅಹಿತಕಾರಿಯಲ್ಲ ಎಂಬುದು ಗೊತ್ತಾಗಲಿಲ್ಲ. ಅರೀಲಿಯಸ್ ಮಹಾನೀತಿವಂತನಾದ ಪ್ರಾಜ್ಞ; ಪ್ರಾಚೀನ ನಾಗರಿಕತೆಯ ಶ್ರೇಷ್ಠ ಹೂ. ಅಂಥವನಿಗೆ ಸಹ ಸಮಾಜದಲ್ಲಿ ಕ್ರೈಸ್ತಧರ್ಮ ಒಡಕನ್ನುಂಟುಮಾಡುವುದೆಂದೆನಿಸಿ ಅದನ್ನು ಬಗ್ಗುಬಡಿಯಲು ಅವನು ನಿರ್ಧರಿಸಿದನು. ಅವನೂ ಅವನ ಸಂಗಡಿಗರಾದ ತತ್ವಜ್ಞಾನಿಗಳೂ ಬಹಳ ಮೃದುಸ್ವಭಾದವರಾಗಿದ್ದರು. ಕ್ರೈಸ್ತಧರ್ಮದವರಂತೆಯೇ ಅವರೂ

ನಾಸ್ತಿಕ್ಯವಿರೋಧಿಗಳಾಗಿದ್ದರು. ಹೀಗಿದ್ದೂ ಕ್ರೈಸ್ತಧರ್ಮವು ನಾಸ್ತಿಕ್ಯ ಬೋಧಕ ಎಂದು ಆ ವಿದ್ವಾಂಸರು ತಿಳಿಯಬೇಕಾದರೆ – ಕ್ರೈಸ್ತರಿಗಿಂತ ತಾವೇ ಹೆಚ್ಚು ಬುದ್ಧಿವಂತರು ಎಂದು ಭಾವಿಸಿದ್ದೊಂದೇ ಕಾರಣ. ನಿಜವಾಗಿ ಅವರು ಬುದ್ಧಿವಂತರಾಗಿದ್ದರು. ಆದರೆ ಆ ಬುದ್ಧಿವಂತಿಕೆಯಲ್ಲಿ ಅಹಂಕಾರ ಬೆರೆದಿತ್ತು. ಅದರಿಂದಲೇ ಅವರು ಎದುರುವಾದಿಗಳ ವಾದದಲ್ಲಿಯ ಗ್ರಾಹ್ಯಾಂಶವನ್ನು ಕಾಣಲಾರದಾದರು.

ಇನ್ನು ಡಾಕ್ಟರ್ ಜಾನ್‌ಸನ್ನರಂಥವರ ಪ್ರಕಾರ ಸತ್ಯವು ದಂಡನೆಯಂತಹ ಅಗ್ನಿಪರೀಕ್ಷೆಗೆ ಗುರಿಯಾಗುವುದು ನ್ಯಾಯ; ಅದರಿಂದ ಅದರೊಡನೆ ಯಾವುದಾದರೂ ಕಿಡಿಗೇಡಿತನ ಸೇರಿದ್ದರೆ ಅದು ದಗ್ಧವಾಗಿ ಶುದ್ಧ ಸತ್ಯವು ಹೊರಬೀಳುವುದು. ಈ ಬಗೆಯ ವಾದವನ್ನು ಧಾರ್ಮಿಕ ಅಸಹಿಷ್ಣುತೆಯನ್ನು ಸಮರ್ಥಿಸಲು ಬಳಸುವುದನ್ನು ಗಮನಿಸದಿರಲಾಗದು. ಈ ವಾದಸರಣಿಯನ್ನು ಒಪ್ಪಿಕೊಳ್ಳುವವರಿಗೆ ಸತ್ಯ ಬಹಳ ಉಪಯುಕ್ತ ಎಂದು ತೋರುವುದಿಲ್ಲ. ಅವರಿಗೆ– ಹಿಂದೆ ಹೊಸ ಸತ್ಯಗಳು ಬಹಳ ಉಪಯುಕ್ತವಾಗಿರಬಹುದು; ನಾವೀಗ ಅಂಥ ಸತ್ಯಗಳನ್ನು ಬಹಳ ಕಂಡದ್ದಾಯಿತು. ಇನ್ನವುಬೇಡ– ಎಂದೆನಿಸುವುದುಂಟು. ಆದುದರಿಂದ ಹೊಸ ಸತ್ಯದ ಶೋಧಕನಿಂದ ಮಾನವಕೋಟಿಗಾಗುವ ಪ್ರಯೋಜನವು ಅವರಿಗೆ ಮಹತ್ವದ್ದೆನಿಸುವುದಿಲ್ಲ. ಅದಕ್ಕೇ ಅವರು ಶೋಧಕನನ್ನು ಅಗ್ನಿಗಾಹುತಿಕೊಡುವ ಪುರಸ್ಕಾರವನ್ನು ಗ್ರಾಹ್ಯವೆನ್ನುತ್ತಾರೆ.

ದಮನದಿಂದ ಸತ್ಯವು ಸ್ಥಗಿತವಾದುದಕ್ಕೆ ಇತಿಹಾಸವು ಅನೇಕದ ಉದಾಹರಣೆಗಳನ್ನು ಕೊಡಬಲ್ಲುದು; ಒಮ್ಮೆ ಅದು ಸ್ಥಗಿತವಾಗಿ ಹೋಗದಿದ್ದರೂ ಬಹಳ ಕಾಲ ನಿಷ್ಪ್ರಭವಾಗಿ ಉಳಿದದ್ದು ನಿಜ. ಲೂಥರನಿಗಿಂತ ಹಿಂದೆ ಕಡಿಮೆಯೆಂದರೆ ೨೦ ಸಲ ಸುಧಾರಣಾಚಳವಳ ಎದ್ದಿತ್ತು; ಆದರೆ ಅಷ್ಟೂಸಲ ಅದನ್ನು ದಮನಮಾಡಲಾಯಿತು. ಲೂಥರನ ನಂತರ ಕೂಡ ಎಷ್ಟೋಸಲ ದಮನವು ಯಶಸ್ವಿಯಾದದ್ದುಂಟು. ಧರ್ಮದ್ರೋಹಿಗಳೆನಿಸಿಕೊಂಡವರು ಬಹಳ ಬಲಿಷ್ಠರಾಗಿದ್ದಲ್ಲಿ ಮಾತ್ರ ದಮನ ಜಯ ಹೊಂದದು. ರೋಮನ್ ಸಾಮ್ರಾಜ್ಯದಲ್ಲೇ ಕ್ರೈಸ್ತಧರ್ಮವು ನಾಶವಾಗಿ ಹೋಗುತ್ತಿತ್ತು. ಅದು ಬದುಕಿ ಉಳಿಯಲು ದಮನ ಪ್ರಯತ್ನಗಳು ಅಲ್ಪಕಾಲಿಕ ಮತ್ತು ದೀರ್ಘ ಕಾಲಾಂತರಿತಗಳಾದದ್ದೇ ಕಾರಣ. ಸತ್ಯ ಸುಳ್ಳುಗಳಲ್ಲಿ ಶಕ್ತಿಭೇದವಿಲ್ಲ ದಂಡ ಹಾಕಿ ಯಾವುದರ ಪ್ರಚಾರವನ್ನು ನಿಲ್ಲಿಸಬಹುದು. ಆದರೆ ಸತ್ಯದಲ್ಲಿ ಒಂದೇ ಒಂದು ವಿಶೇಷವಿದೆ. ಅದು ಎಷ್ಟು ಸಲ ದಮನಕ್ಕೊಳಪಟ್ಟರೂ ಸಾವಿರಾರು ವರ್ಷಗಳ ಮೇಲಾದರೂ ಅನುಕೂಲ ಆವರಣ ಸಿಕ್ಕಾಗ ಪುನಃ ಆವಿರ್ಭಸಿಯೇ ತೀರುವುದು; ಅದರ ಪುನಃಶೋಧ – ಪುನಃಪ್ರಸಾರ ಮಾಡುವ ಮನುಷ್ಯರು ಹುಟ್ಟಿಯೇ ಹುಟ್ಟುವರು!

'ಹೊಸ ಅಭಿಪ್ರಾಯಗಳ ಮಂಡನಕಾರರನ್ನು ನೀವಿಂದು ಮರಣ ದಂಡನೆಗೆ ಗುರಿಪಡಿಸುವುದಿಲ್ಲ; ಹಳಬರಂತೆ ನಾವೀಗ ಪ್ರವಾದಿಗಳನ್ನು ಸಂಹರಿಸುವುದಿಲ್ಲ. ಅವರಿಗೆ ನಾವು ಸ್ಮಾರಕಗಳನ್ನು ಕಟ್ಟಿ ನಿಲ್ಲಿಸುತ್ತೇವೆ' – ಎಂದು ಯಾರಾದರೂ ಅಂದಾರು.

ಅದು ನಿಜ. ಆದರೆ ಅಭಿಪ್ರಾಯವನ್ನು ಪ್ರಕಟಿಸಿದ್ದಕ್ಕೆ ಕಾಯದೆಯ ಪ್ರಕಾರ ದಂಡ ವಿಧಿಸುವುದನ್ನು ನಾವಿನ್ನೂ ಬಿಟ್ಟಿಲ್ಲ. ಇದು ಧರ್ಮದ್ರೋಹದ ಆರೋಪಮಾಡಿ ಮನುಷ್ಯರನ್ನು ಶಿಕ್ಷಿಸುವ ಮನೋಧರ್ಮದ ಒಂದು ಅವಶೇಷವೇ ಎನ್ನಬೇಕು.

ಈ ಯುಗದಲ್ಲಿ ಎಷ್ಟೋ ವೇಳೆ ಹೊಸ ಲಾಭಗಳನ್ನು ಪಡೆಯಲು ಜನ ಜೀವನದ ಪ್ರಶಾಂತ ಆವರಣವನ್ನು ಕಲಕುವಂತೆಯೇ ಹಳೆಯ ದುಷ್ಕರ್ಮಗಳನ್ನು ಪುನರುಜ್ಜೀವಿಸಲೂ ಕಲಕುವುದುಂಟು. ಒಂದು ಧರ್ಮದ ಪುನರುದ್ಧಾರದ ಮಾತಾಡುವವರ ಮನಃಪ್ರಣಾಲಿಯು ಧರ್ಮಾಂಧ ಮನೋಭಾವವನ್ನು ಹೋಲುವಂಥದೇ, ಧರ್ಮಪುನರುತ್ಥಾನ ಎಂದರೆ ಧರ್ಮಾಂಧತೆಯ ಪುನರುದಯ ಎನ್ನಲೇನೂ ಅಡ್ಡಿಯಿಲ್ಲ. ಇಂಗ್ಲೆಂಡಿನ ಮಧ್ಯವರ್ಗೀಯರಲ್ಲಿ ಪರಮತದ ಅಸಹಿಷ್ಣುತೆಯು ಯಾವಾಗಲೂ ಗುಪ್ತಗಾಮಿನಿಯಾಗಿ ಹರಿಯುತ್ತಲೇ ಇರುತ್ತದೆ. ಅದರಿಂದ ಈ ದೇಶವು ಮಾನಸಿಕ ಸ್ವಾತಂತ್ರ್ಯದ ನಾಡೆಂದು ಹೇಳಲು ಬರದು. ಹಿಂದೆ ಬಹಳ ಕಾಲದವರೆಗೆ ಕಾಯಿದೆ ವಿಧಿಸುವ ದಂಡವೆಂಬುದು ಸಾಮಾಜಿಕ ಕಲಂಕವನ್ನು ದೃಢೀಕರಿಸುವಂಥದಾಗಿತ್ತು. ಈ ಕಲಂಕಭಯ ಇಲ್ಲಿ ಅತ್ಯುತ್ಕಟ. ಆದರೆ ಈ ಕಾಯಿದೆಯ ವ್ಯವಹಾರದ ಫಲವಾಗಿ ಬೇರೆಯ ದೇಶಗಳಲ್ಲಿಗಿಂತ ಇಲ್ಲಿ ಸಾಮಾಜಿಕ ಬಹಿಷ್ಕಾರದ ಭಯದ ದೆಸೆಯಿಂದ ಅಡಗಿ ಉಳಿಯುವ ಅಭಿಪ್ರಾಯಗಳು ಕಡಿಮೆಯಾಗಿ ತೋರುವಂತಾಗಿತ್ತು. ನ್ಯಾಯಬದ್ಧ ಶಿಕ್ಷೆಗಳ ಭಯವೇ ಪ್ರಧಾನವಾಯಿತು. ಜನರ ಸದಿಚ್ಛೆಯ ಹಂಗಿಗೆ ಒಳಪಡದ ಶ್ರೀಮಂತರನ್ನುಳಿದು ಮಿಕ್ಕವರೆಲ್ಲರೂ ಕಾಯಿದೆಯಷ್ಟೇ ಸಾಮಾಜಿಕ ಅಭಿಪ್ರಾಯಕ್ಕೆ ಬದ್ಧರು. ಜನರನ್ನು ಉದರ ಭರಣಸಾಧನವಾದ ವೃತ್ತಿಕ್ಷೇತ್ರದಿಂದ ಹೊರಗಿಡುವುದೂ ಒಂದೇ. ಕಾಯಿದೆಯ ಪ್ರಕಾರ ಜೈಲಿಗೆ ಹಾಕುವುದೂ ಒಂದೇ ಅಲ್ಲವೇ? ವೃತ್ತಿಯು ಸುರಕ್ಷಿತವಾಗಿರುವ, ಅಧಿಕಾರಿಗಳಿಂದ ಯಾವ ಅನುಗ್ರಹವನ್ನೂ ಪಡೆಯುವ ಅಗತ್ಯವಿಲ್ಲದ ಜನರು ಪರರು ತಮ್ಮ ಬಗ್ಗೆ ಅಪಕಲ್ಪನೆ ಮಾಡಿಕೊಳ್ಳದಂಥ ಅಥವಾ ಅಪಪ್ರಚಾರ ಕೈಕೊಳ್ಳದಂಥ ಪರಿಸ್ಥಿತಿಯಲ್ಲಿ ಯಾವುದಾದರೂ ಅಭಿಪ್ರಾಯವನ್ನು ತಮ್ಮದೆಂದು ಒಪ್ಪಿಕೊಳ್ಳುವುದರಲ್ಲಿ ಯಾವ ಭಯವೂ ಇಲ್ಲವಲ್ಲವೇ? ಹೀಗೆ ಮಾಡಲು ಅವರಿಗೇನೂ ವಿಶೇಷ ಧೈರ್ಯ–ಶೌರ್ಯ ಅಗತ್ಯವಿಲ್ಲವಷ್ಟೆ! ಅಂಥವರ ಪರವಾಗಿ ಯಾರೂ ದಯಾಯಾಚನೆಮಾಡುವ ಪ್ರಸಂಗವೇ ಇಲ್ಲ. ನಾವೇನೂ ಈಗ ಭಿನ್ನಾಭಿಪ್ರಾಯ ತಾಳುವವರಿಗೆ ಅಂಥ ತೊಂದರೆಯನ್ನು ಕೊಡುವುದಿಲ್ಲವೆಂಬುದು ನಿಜ. ಆದರೆ ಅವರನ್ನು ನಡೆಸಿಕೊಳ್ಳುವ ಈ ಬಗೆಯಿಂದ ನಾವು ನಮಗೇ ಅಂಥ ತೊಂದರೆಯನ್ನು (ಹಾನಿಯನ್ನು ಮಾಡಿಕೊಳ್ಳುತ್ತಿರುವೆವೋ ಏನೋ! ಸಾಕ್ರೆಟೀಸನನ್ನೇನೋ ಸಾವಿಗೆ ತುತ್ತು ಮಾಡಲಾಯ್ತು; ಆದರೆ ಬಾನಿನಲ್ಲಿ ನೇಸರುರಿಯುವಂತೆ ಅವನ ತತ್ವಜ್ಞಾನವು ಬೆಳಗಲಾರಂಭಿಸಿ ಇಡಿ ಬೌದ್ಧಿಕ ಅಂತರಿಕ್ಷದ ಮೇಲೆಲ್ಲಾ ತನ್ನ ಪ್ರಭೆಯನ್ನು ಬೀರುವಂತಾಯ್ತು. ಕ್ರೈಸ್ತರನ್ನು ಸಿಂಹಗಳ ಬಾಯಿಗೆ ಎಸೆಯಲಾಯಿತು; ಆದರೆ ಕ್ರೈಸ್ತಚರ್ಚು ಇತರ ಹಳೆಯ ಚರ್ಚುಗಳೆಂಬ ಗಿಡಮರಗಳ ಬೆಳವಣಿಗೆಯನ್ನು ತನ್ನ

ನೆರಳಿಂದ ಪಡೆಯುವಂಥ ದೊಡ್ಡ ವಟವೃಕ್ಷವಾಗಿ ಬೆಳೆದು ನಿಂತಿತು. ನಮ್ಮ ಸಾಮಾಜಿಕ ಅಸಹಿಷ್ಣುತೆಯೊಂದೇ ಯಾರನ್ನೂ ಕೊಲ್ಲುವುದಿಲ್ಲ, ಯಾವ ಅಭಿಪ್ರಾಯವನ್ನೂ ಬೇರುಸಹಿತ ಕಿತ್ತು ಹಾಕುವುದಿಲ್ಲ; ಆದರೆ ಅದು ಜನರು ತಮ್ಮ ಅಭಿಪ್ರಾಯಗಳನ್ನು ವೇಷಾಂತರಗೊಳಿಸುವಂತೆ ಅಥವಾ ಅವುಗಳನ್ನು ಪ್ರಸರಿಸಲು ವಿಶೇಷ ಪ್ರಯತ್ನ ಮಾಡದಂತೆ ಪ್ರಭಾವ ಬೀರುತ್ತದೆ. ಪ್ರತಿಯೊಂದು ತಲೆಮಾರಿನಲ್ಲೂ ನಮ್ಮಲ್ಲಿ ನಾಸ್ತಿಕಾಭಿಪ್ರಾಯಗಳು (ಅಸನಾತನ ಅಭಿಪ್ರಾಯಗಳು) ಗೆಲ್ಲುವುದೂ ಇಲ್ಲ, ಸೋಲುವುದೂ ಅಷ್ಟಿಲ್ಲ; ಅವು ಎಂದೂ ಕಿಚ್ಚೆದ್ದು ಅಗಲಕ್ಕೆ ಹಬ್ಬುವುದೂ ಇಲ್ಲ– ಕೆಲವೇ ವಿಚಾರವಂತರಲ್ಲಷ್ಟೇ ಹೊಗೆಯುತ್ತಿರುತ್ತವೆ. ಅಭ್ಯಾಸಪರರ ತಲೆಯಲ್ಲಷ್ಟೇ ಸುಯ್ಗುಡುತ್ತಿರುವುದಲ್ಲದೆ, ಜನರ ಸಾಮಾನ್ಯ ವ್ಯವಹಾರದ ಮೇಲೆ ಅದು ನಿಜವಾದ ಬೆಳಕನ್ನೂ ಬೀರುವುದಿಲ್ಲ, ಆಭಾಸಿಕ (ತೋರಿಕೆಯ) ಬೆಳಕನ್ನೂ ಬೀರುವುದಿಲ್ಲ. ಹೀಗೆ ಕೆಲವರಿಗೆ ಸಮಾಧಾನಕರವೆನ್ನಿಸುವಂತಹ ಪರಿಸ್ಥಿತಿ ಯಾವಾಗಲೂ ಉಳಿದಿರುತ್ತದೆ. ಏಕೆಂದರೆ, ಇದರಿಂದ ಯಾರನ್ನಾದರೂ ಜೈಲಿಗೆ ಕಳಿಸುವ ಅಥವಾ ದಂಡ ತೆರುವಂತೆ ಮಾಡುವ ಅಪ್ರಿಯ ಸಂದರ್ಭವೊದಗುವುದಿಲ್ಲ; ವರ್ತಮಾನ ಕಾಲದ ಯಾವ ಅಭಿಪ್ರಾಯದ ಸುದ್ದಿಗೂ ಹೋಗದೆ ಇರಲು ಬರುತ್ತದೆ: ಅಲ್ಲದೆ ಭಿನ್ನಾಭಿಪ್ರಾಯವುಳ್ಳ ವಿಚಾರರೋಗಗ್ರಸ್ತರು ತರ್ಕಪ್ರಯೋಗ ಮಾಡಹೊರಟರೆ ಅದರಲ್ಲಿ ಕೈ ಹಾಕುವ ಗೊಡವೆಯೂ ಇಲ್ಲ. ಇದು ಬೌದ್ಧಿಕರ ಮಂಡಲಗಳಲ್ಲಿ ಶಾಂತ ವಾತಾವರಣ ಉಳಿಸಲು ಅನುಕೂಲವಾದ ಯೋಜನೆ– ಇದರ ಪ್ರಕಾರ ಮೊದಲಿನಂತೆಯೇ ಅಲ್ಲಿಯ ವ್ಯವಹಾರಗಳೆಲ್ಲಾ ನಡೆಯುವಂತೆ ಇಡಲೂ ಬರುತ್ತದೆ. ಆದರೆ ಈ ಬಗೆಯ ಶಾಂತಿಯನ್ನು ಬೌದ್ಧಿಕರ ವೃತ್ತಗಳಲ್ಲಿ ಪ್ರಸ್ಥಾಪಿಸುವುದಕ್ಕೆ ತೆರುವ ದಂಡವೆಷ್ಟು? ಮನುಷ್ಯನ ಮನಸ್ಸಿನ ಇಡೀ ಧೈರ್ಯವನ್ನು ತ್ಯಾಗಮಾಡಿಸುವುದೇ ಇದರ ಘೋರ ಪರಿಣಾಮ! ಇಂಥ ಸಪ್ಪೆ ಆವರಣದಲ್ಲಿ ಅತ್ಯಂತ ಚುರುಕಿನ ಶೋಧಕ ಮೇಧಾವಿಗಳು ಕೂಡ ತಮ್ಮ ಅಭಿಪ್ರಾಯದ ಅಡಿಪಾಯರೂಪದ ಸಾಮಾನ್ಯಸಿದ್ಧಾಂತಗಳನ್ನೂ ಆಧಾರಗಳನ್ನೂ ತಮ್ಮಲ್ಲೇ ಬಚ್ಚಿಟ್ಟುಕೊಂಡು, ಜನರೆದುರು ಮಾತಾಡುವಾಗ ತಾವು ಆಂತರಿಕವಾಗಿ ತಿರಸ್ಕರಿಸಿದ ಪ್ರಮಾಣ–ಸಿದ್ಧಾಂತಗಳಲ್ಲಿ ಶಕ್ಯವಿದ್ದಷ್ಟು ತಮ್ಮ ನಿಗಮನವನ್ನು (Conclusions) (ನಿರ್ಣಯಗಳನ್ನು) ಅಳವಡಿಸುವುದು ಸೂಕ್ತವೆಂದು ಭಾವಿಸುತ್ತಾರೆ; ಅವರು ತಮ್ಮ ಸಮರ್ಥನೆಯನ್ನು ಸ್ಪಷ್ಟವಾಗಿ ಎಲ್ಲರೆದುರಿಡಲಾರರು: ಹಿಂದನ ವಿದಗ್ಧರಂತೆ ನಿರ್ಭಯವಾಗಿ ತಮ್ಮ ತರ್ಕ ಶುದ್ಧವಾದ ಹಾಗೂ ಸುಸಂಬದ್ಧವಾದ ವಾದವನ್ನು ಬಯಲುಮಾಡಲಾರರು. ಇವರ ಅಂತರಂಗವನ್ನು ಅವರ ವಾಗ್ಜಾಲದ ಪೊರೆ ಹರಿದು ನೋಡಬೇಕು. ಸರ್ವಸಾಧಾರಣ ರೀತಿಗಳನ್ನು ಅನುಸರಿಸಿ ದಿನ ತೆಗೆಯುವ ಸಂಪ್ರದಾಯ ಇವರದು; ಅಥವಾ ಇವರು ಸತ್ಯದ ಸಮಯಸಾಧಕ ಸೇವಕರು– ಕೇಳುವವರ ಸಭೆಗೆ ತಕ್ಕಂತೆ ಇವರು ಮಹಾವಿಷಯಗಳ ಸಮರ್ಥನೆ ಮಾಡುವರಲ್ಲದೆ, ತಮಗೆ ಒಪ್ಪಿಗೆಯಾದ ರೀತಿಯಿಂದಲ್ಲ. ಇವರ ಪೈಕಿ ಈ ಮಾರ್ಗ ಹಿಡಿದವರು ಮಾತಾಡ ಹೊರಟಾಗ–ತತ್ವ ಪ್ರಪಂಚದಲ್ಲಿ ಗೊಂದಲವೇಳದಂತೆ ಜಾಗರೂಕತೆ ವಹಿಸಿ

ತಮ್ಮ ವಿಚಾರಗಳನ್ನೂ ಹಿತಾರ್ಥಗಳನ್ನೂ ಹ್ರಸ್ವಗೊಳಿಸಿಬಿಡುತ್ತಾರೆ; ತಮ್ಮಷ್ಟಕ್ಕೇ ಸರಿಯಾಗಿ ಹೊರಬರುವ ಚಿಲ್ಲರೆ ವ್ಯಾವಹಾರಿಕ ಸಂಗತಿಗಳಷ್ಟಕ್ಕೇ ತಮ್ಮ ವಿಚಾರವನ್ನು ಪರಿಸೀಮಿತಗೊಳಿಸಿ ಬಿಡುತ್ತಾರೆ– ಅಂದರೆ ಯಾರಾದರೂ ಸ್ವಲ್ಪ ತಲೆ ಖರ್ಚು ಮಾಡಿದರೆ ಹೊಳೆಯಬಹುದಾದ ಸಂಗತಿಗಳವು; ಅವನ್ನಾದರೂ ಜನರಿಗೇ ಮನವರಿಕೆಯಾಗುವ ಕಾಲ ಬರುವವರೆಗೆ ಪರಿಣಾಮಕರವಾಗಿ ಸಮರ್ಥಿಸಹೋಗುವುದಿಲ್ಲ; ಮನುಷ್ಯರ ಮನಸ್ಸನ್ನು ವ್ಯಾಪಕಗೊಳಿಸುವ ಮತ್ತು ದೃಢಗೊಳಿಸುವ ಸ್ವತಂತ್ರವೂ ಶೌರ್ಯಸಂಪನ್ನವೂ ಆದ ಉದಾತ್ತ ವಿಚಾರಗಳನ್ನಿವರು ಬಿಟ್ಟೇಬಿಡುತ್ತಾರೆ.

ಪಾಖಂಡಿಗಳ ಈ ಅರೆಮೌನವು ಹಾನಿಕರವಲ್ಲ ಎಂದು ಭಾವಿಸುವವರು ತಿಳಿಯಬೇಕಾದ ಸಂಗತಿಯೊಂದಿದೆ: ಮೊದಲನೆಯದಾಗಿ, ಆ ಭಾವನೆಯ ಫಲವಾಗಿ ಪಾಖಂಡಿಗಳ (ಅಸನಾತನಿಗಳ, ಧರ್ಮಲಂಡರ) ಅಭಿಪ್ರಾಯಗಳ ನ್ಯಾಯವೂ ಸಂಪೂರ್ಣವೂ ಆದ ಚರ್ಚೆ ಎಂದೂ ಆಗುವುದೇ ಇಲ್ಲ; ಮತ್ತು ಅಂಥ ಚರ್ಚೆಯನ್ನು ಎದುರಿಸಬಲ್ಲವರು ತಮ್ಮ ಅಭಿಪ್ರಾಯವನ್ನು ಮಂಡಿಸಲಾರರಾದರೂ ಅವರು ಅಲ್ಲೇ ಉಳಿಯುತ್ತಾರೆ– ಎಲ್ಲಿಗೂ ಹೋಗುವುದಿಲ್ಲ. ಸನಾತನ ಮತಗಳ ಸಂಸ್ಥಾಪನೆಯಲ್ಲಿ ಕೊನೆಗೊಳ್ಳದ ಸರ್ವ ಚರ್ಚಾ ಬಹಿಷ್ಕಾರದಿಂದ ಅತಿಹೀನದಶೆಗಿಳಿಯುವುದು ಪಾಖಂಡಿಗಳ ಮನಸ್ಸಲ್ಲ; ಅದರಿಂದ ಅತ್ಯಂತ ಹಾನಿಯುಂಟಾಗುವುದು ಸನಾತನಿಗಳಿಗೇ– ಅವರ ಇಡೀ ಮಾನಸಿಕ ಬೆಳವಣಿಗೆ ಸ್ಥಗಿತಹೊಂದುವುದಲ್ಲದೆ ಮತದ್ರೋಹದ ಭಯದಿಂದ ಅವರ ವಿಚಾರಶಕ್ತಿಯು ಮಿಣ್ಣಗಾಗಿ ಹೋಗುವುದು. ಪ್ರವರ್ಧಮಾನ ಮೇಧಾಶಕ್ತಿಯುಳ್ಳ ದುರ್ಬಲಾತ್ಮರು ಧೀರ, ಸ್ವತಂತ್ರ, ಚೈತನ್ಯಪೂರ್ಣ ವಿಚಾರಧಾರೆಯನ್ನು ಅನುಸರಿಸಲಾರದೆ– ಅಧಾರ್ಮಿಕ, ಅನೈತಿಕ ಎಂದು ಮಂದಿ ಎಲ್ಲಿ ಹೇಳಿಯಾರೋ ಎಂಬ ಭಯದಿಂದ ಉಳಿಯುವಂತಾಗುವುದರಿಂದ ಜಗತ್ತಿಗೆಷ್ಟು ನಷ್ಟವಾದೀತೆಂಬುದನ್ನು ಯಾರಿಗೆ ಲೆಕ್ಕಮಾಡಲು ಸಾಧ್ಯ? ಅಂಥವರ ನಡುವೆ ಗಂಭೀರಚೇತನನೂ ಸೂಕ್ಷ್ಮ– ನಿಶಿತ ಗ್ರಹಣಶಕ್ತಿಯುಳ್ಳವನೂ ಇರಲು ಶಕ್ಯ. ಅಂಥವನೂ ತನ್ನ ಬುದ್ಧಿಯನ್ನು ತಣ್ಣಗೆ ಕುಳ್ಳಿರಿಸಲಾರದೆ, ಇಡೀ ಜೀವಮಾನ ಅದನ್ನು ಔಪಚಾರಿಕ ಪರಿಷ್ಕರಣಕ್ರೀಡು ಮಾಡುತ್ತ ಕುಳಿತು, ತನ್ನ ಸಾಕ್ಷಿಯ ಪ್ರೇರಣೆಗಳನ್ನೂ ವಿಚಾರ ಶಕ್ತಿಯನ್ನೂ ಸನಾತನ ಮತಪ್ರಣಾಲಿಯೊಡನೆ ಹೊಂದಿಸಲು ವ್ಯರ್ಥಪ್ರಯತ್ನ ಮಾಡುತ್ತ ಉಳಿಯಬೇಕಾದೀತು. "ವಿಚಾರವಾದಿಯಾದ ತಾನು ಆ ಈ ನಿರ್ಣಯಕ್ಕೊಯ್ದೀತೆಂಬ ಭಯವನ್ನು ಬಿಟ್ಟು– ತನ್ನ ಬುದ್ಧಿ ಕರೆದೊಯ್ದತ್ತ ಹೋಗುವುದು ತನ್ನ ಪ್ರಥಮ ಕರ್ತವ್ಯ" ಎಂದು ಭಾವಿಸದ ಯಾವನೂ ಮಹಾಚಿಂತಕನಾಗಲಾರನು. ಅಭ್ಯಾಸಶೀಲನೂ ಜ್ಞಾನಸಂಗ್ರಹಪರನೂ ಆಗಿ ಸ್ವತಂತ್ರ ವಿಚಾರಮಾಡುವವನ ತಪ್ಪುಗಳಿಂದ ಸಹ ಸತ್ಯಕ್ಕೆ ಲಾಭವುಂಟಾದೀತು; ಹಾಗಲ್ಲದೆ, ಚಿಂತನವಿಮುಖರಾದವರು ಸತ್ಯಾಭಿಪ್ರಾಯ ಹೊಂದಿದ್ದರೂ ಅದಕ್ಕೆ ಲಾಭ ಅಷ್ಟಕ್ಕಷ್ಟೇ. ವಿಚಾರ (ಚಿಂತನ) ಸ್ವಾತಂತ್ರ್ಯಬೇಕೆಂದು

ಹೇಳುವುದು ಮಹಾವಿಚಾರಿಗಳನ್ನು ರೂಪಿಸಲೆಂದೇ ಅಲ್ಲ; ಅದಕ್ಕೂ ಹೆಚ್ಚಾಗಿ ಸಾಮಾನ್ಯ ಜನರಿಗೆ ತಾವು ಮುಟ್ಟಬಹುದಾದ ಮಾನಸಿಕ ಎತ್ತರವನ್ನು ಮುಟ್ಟಲು ಸಾಧ್ಯಮಾಡಿಕೊಡುವುದಕ್ಕೇ ಅಂಥ ಸ್ವಾತಂತ್ರ್ಯ ಅಗತ್ಯ. ಮಾನಸಿಕ ದಾಸ್ಯದ ಸಾಮಾನ್ಯ ಆವರಣದಲ್ಲಿ ಹಿಂದೆ ಎಷ್ಟೋ ಮಹಾವಿಚಾರಿಗಳಾಗಿ ಹೋದದ್ದುಂಟು, ಮತ್ತೂ ಅಂಥವರು ಹುಟ್ಟುವ ಸಂಭವವಿದೆ; ಆದರೆ ಅಂಥ ಪರಿಸ್ಥಿತಿಯಲ್ಲಿ ಬೌದ್ಧಿಕವಾಗಿ ಕರ್ಮಶೀಲವಾದ ಜನತೆಯೆಂದೂ ಹಿಂದಾಗಲಿಲ್ಲ– ಮುಂದಾಗಲಾರದು! ಅಂಥ ಬೌದ್ಧಿಕ ಸಕ್ರಿಯತೆಯತ್ತ ಎಲ್ಲಾದರೂ ಜನತೆ ತಾತ್ಕಾಲಿಕವಾಗಿ ಉನ್ಮುಖವಾದದ್ದಿದ್ದರೆ ಅದು ಅಲ್ಪ ಕಾಲವಾದರೂ ಅಸನಾತನ ವಿಚಾರದ ಭಯವಿಲ್ಲವಾದಾಗ; ತತ್ವಗಳನ್ನು ಪ್ರಶ್ನಿಸಬಾರದು, ಇಡಿ ಜನಲೋಕವೇ ಆಸಕ್ತವಾಗಬಹುದಾದಷ್ಟು ದೊಡ್ಡ ಪ್ರಶ್ನೆಗಳ ಚರ್ಚೆ ಮುಗಿದೇಹೋಗಿದೆ ಎಂದು ಭಾವಿಸುವ ಆವರಣದಲ್ಲಿ ಇತಿಹಾಸದ ಕೆಲ ಅವಧಿಗಳನ್ನು ಗಣ್ಯತೆಗೊಯ್ದಂತಹ ಉನ್ನತ ಮಟ್ಟದ ಮಾನಸಿಕ ಚಟುವಟಿಕೆ ಉಂಟಾದೀತೆಂದು ನಾವು ಸಾಮಾನ್ಯವಾಗಿ ಆಶಿಸುವಂತಿಲ್ಲ. ಉತ್ಸಾಹವನ್ನು ಉದ್ರೇಕಿಸುವಷ್ಟು ದೊಡ್ಡ ವಿಷಯಗಳ ಚರ್ಚೆಯನ್ನು ಆಗಗೊಡದಂತೆ ಮಾಡಿದಾಗ ಎಂದೂ ಜನತೆಯ ಹೃದಯವು ತಳದಿಂದ ಕಲಕಿ ಏಳುವಂತಾದದ್ದಿಲ್ಲ– ಅತ್ಯಂತ ಸಾಮಾನ್ಯರ ಬುದ್ಧಿಗೆ ಚಿಂತಕಬುದ್ಧಿಯ ಮಟ್ಟಕ್ಕೇರುವ ಪ್ರಚೋದನೆ ದೊರಕಿದ್ದಿಲ್ಲ. ಕ್ರೈಸ್ತಧರ್ಮದ ಸುಧಾರಣಾಯುಗದ ಮುಂದಿನ ಅವಧಿಯ ಯುರೋಪಿಯನ್ ಪರಿಸ್ಥಿತಿ ಅಂಥ ಅಧೀರ ಯುಗಕ್ಕೊಂದು ಉದಾಹರಣೆ.*

೧೮ನೆಯ ಶತಮಾನದ ಉತ್ತರಾರ್ಧದಲ್ಲೂ ಯುರೋಪ್ ಅಂಥ ಗತಿ ಗಿಳಿಯಿತು; ಗಯಟೆಯ ಕಾಲದ ಜರ್ಮನಿಯೂ ಅದೇ ಗತಿಯನ್ನು ಕಂಡಿತು ಪ್ರಬಲಿಸಗೊಟ್ಟ ಅಭಿಮತಗಳಲ್ಲಿ ಈ ಮೂರು ಅವಧಿಗಳು ಬೇರೆಬೇರೆಯಾಗಿದ್ದವು; ಆದರೆ ಈ ಮೂರು ಅವಧಿಗಳಲ್ಲಿ ಪ್ರಶಾಸನದ (Authority) ನೊಗವನ್ನು ಮುರಿದೊಗೆಯಲಾಯಿತು; ಮಾನಸಿಕ ನಿರಂಕುಶಪ್ರಭುತ್ವವನ್ನ ಕಿತ್ತೊಗೆಯಲಾಯಿತು; ಆದರೆ ಅದರ ಸ್ಥಳದಲ್ಲಿ ಮತ್ತೆ ಯಾವುದನ್ನೂ ನಿಲ್ಲಿಸಲಿಲ್ಲ. ಈ ಮೂರು ಅವಧಿಗಳಲ್ಲಿ ದೊರೆತ ಪ್ರಚೋದನೆಯೇ ಯುರೋಪಿನ ಇಂದಿನ ಪರಿಸ್ಥಿತಿಯ ಜನಕ. ಮಾನವ ಮನದಲ್ಲಾಗಲಿ, ಸಂಸ್ಥೆಗಳಲ್ಲಾಗಲಿ ಉಂಟಾದ ಪ್ರತಿಯೊಂದು ಸುಧಾರಣೆಯ ಮೂಲವನ್ನೂ ಉಕ್ತ ಅವಧಿಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಇಷ್ಟರೊಳಗೇ ಆ ಮೂರು ಪ್ರಚೋದನೆಗಳ ಶಕ್ತಿಯು ವೆಚ್ಚವಾಗಿ ಹೋಗಿರುವಂತೆ ತೋರುತ್ತದೆ. ಪುನಃ ನಮ್ಮ ಮನಃಸ್ವಾತಂತ್ರ್ಯವನ್ನು ಸಿದ್ಧಪಡಿಸಿದ ಹೊರತು ಗತಿಯಿಲ್ಲ; ಹೊಸ ಪ್ರಚೋದನೆಯೊಂದೂ ತೋರುವುದಿಲ್ಲ.

---

* ೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಕಾಲಿಟ್ಟ ಭಾರತದ ಪರಿಸ್ಥಿತಿಯನ್ನೂ ಅದಕ್ಕೆ ಹೋಲಿಸಬಹುದು.

ನಾವೀಗ ವಾದದ ಎರಡನೆಯ ವಿಭಾಗಕ್ಕೆ ತೆರಳೋಣ. ಆ ಪ್ರಕಾರ ನಮಗೆ ತಿಳಿದುಬರುವ ಅಭಿಪ್ರಾಯಗಳು ಸತ್ಯವೆಂದು ನಂಬಿ ಮುನ್ನಡೆಯೋಣ. ಅವುಗಳ ಸತ್ಯವನ್ನು ಮುಕ್ತವಾಗಿಯೂ ಪ್ರಕಟವಾಗಿಯೂ ಪ್ರಚಾರಮಾಡದಿರುವ ಕಾಲದಲ್ಲಿ ಅವನ್ನು ಯಾವ ರೀತಿಯಲ್ಲಿ ಜನರು ತಾಳಿರುತ್ತಾರೆ– ಅಂಥ ಅಭಿಪ್ರಾಯಧಾರಣೆಯ ಬೆಲೆಯೆಷ್ಟು ಎಂಬುದನ್ನು ಪರಿಶೀಲಿಸೋಣ. ತನ್ನ ಅಭಿಪ್ರಾಯ ತಪ್ಪಾಗಿರುವುದು ಸಂಭವ ಎಂಬುದನ್ನು ಒಬ್ಬ ಎಷ್ಟೇ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಳ್ಳಲಿ– ಅದು ಎಷ್ಟೇ ಸತ್ಯವಾಗಿರಲಿ, ಅದನ್ನು ಇಡಿಯಾಗಿ, ಪದೇ ಪದೇ ನಿರ್ಭಯವಾಗಿ ಚರ್ಚಿಸದೆ ಹೋದಾಗ ಅದೊಂದು ಮೃತ ಅಂಧ ಶ್ರದ್ಧೆಯಾಗಿ ಉಳಿದೀತಲ್ಲದೆ, ಸಚೇತನ ಸತ್ಯವಾಗಿ ಉಳಿಯಲಾರದು– ಎಂಬ ತಿಳಿವಳಿಕೆಯಿಂದಾದರೂ ಆತ ಅದರ ಚರ್ಚೆಯನ್ನು ಸ್ವಾಗತಿಸಬೇಕು.

ಕೆಲವರಿರುತ್ತಾರೆ– ಅವರಿಗೆ ತಾವು ಹೇಳಿದ್ದನ್ನು ಸಂಶಯ ವ್ಯಕ್ತಪಡಿಸದೆ ಯಾರಾದರೂ ಒಪ್ಪಿಕೊಂಡುಬಿಟ್ಟರೆ ಅಷ್ಟೇ ಸಾಕು; ಆ ಅಭಿಪ್ರಾಯಕ್ಕಿರುವ ಸಮರ್ಥನೆಯನ್ನು ಅಂಥ ಸ್ವೀಕರ್ತರು ಅರಿಯದೆ ಇದ್ದರೂ ಸರಿಯೆ ಅತಿ ಚಿಲ್ಲರೆ ಪ್ರತಿವಾದ ಬಂದರೂ ಅದಕ್ಕುತ್ತರ ಕೊಟ್ಟು ಗೃಹೀತ ಅಭಿಪ್ರಾಯವನ್ನು ಅವರು ಸಂರಕ್ಷಿಸಿಕೊಳ್ಳಲಾರದಿದ್ದರೂ ಸರಿಯೆ– ಅವರು ಒಪ್ಪಿಕೊಂಡಷ್ಟಕ್ಕೇ ಕೆಲವರಿಗೆ ತೃಪ್ತಿ! ಒಮ್ಮೆ ಅಧಿಕಾರಬಲದಿಂದ ತಮ್ಮ ಮತ ಸ್ವೀಕೃತವಾಯಿತೆಂದರೆ, ಅಂಥವರು ಸ್ವಾಭಾವಿಕವಾಗಿ, ಅದನ್ನು ಪ್ರಶ್ನಿಸಲು ಬಿಟ್ಟರೆ ಒಳ್ಳೆಯದೇನೂ ಆಗದು– ಸ್ವಲ್ಪ ಕೇಡೇ ಆದೀತು ಎಂದು ಭಾವಿಸುತ್ತಾರೆ. ಆ ಯಜಮಾನರ ಅಭಿಪ್ರಾಯಗಳನ್ನು ಅವಿಚಾರದಿಂದಲೂ ಅಜ್ಞಾನದಿಂದಲೂ ಯಾರಾದರೂ ತ್ಯಜಿಸಬಹುದು; ಆದರೆ ಅವರ ಪ್ರಭಾವವಿದ್ದೆಡೆ ಎಲ್ಲಿಯೂ ಅದನ್ನು ವಿವೇಕದಿಂದಲೂ ವಿಚಾರದಿಂದಲೂ ವಿಮರ್ಶಿಸಿ ತ್ಯಜಿಸಲು ಸಾಧ್ಯವೇ ಆಗದಷ್ಟು ಅವರು ನೋಡಿಕೊಳ್ಳುತ್ತಾರೆ. ಸಂಪೂರ್ಣವಾಗಿ ಚರ್ಚೆಯನ್ನೇ ನಿಲ್ಲಿಸಿಬಿಡುವುದು ಅಸಾಧ್ಯವೆನ್ನಿ. ಆದ್ದರಿಂದ ಒಮ್ಮೆ ತರ್ಕಬದ್ಧ ಸಮಂಜಸತೆಯನ್ನಾಧರಿಸದಿರುವ ಆ ಅಭಿಪ್ರಾಯಗಳು ಎಲ್ಲಾದರೂ ವಾದದ ಅಥವಾ ಅದರ ಆಭಾಸದ ಬಿಸಿ ಸ್ವಲ್ಪ ಹತ್ತಿತ್ತೆಂದರೆ ಬುಡ ಕಳಚಿ ಬೀಳುವುವು! ಈ ಸಂಭವವನ್ನೀಗ ಬೇಕಾದರೆ ಇಲ್ಲವೆಂದಿಟ್ಟುಕೊಳ್ಳೋಣ. ಸತ್ಯಾಭಿಪ್ರಾಯವೆನಿಸಿದ್ದೊಂದು ಜನರ ಮನಸ್ಸಿನಲ್ಲಿ ಬೇರೂರುತ್ತದೆ ಎನ್ನಿ. ಆದರೆ ಚರ್ಚೆಯಲ್ಲಿ ಹೊಕ್ಕು ಪಾರಾಗದ ಅದು ಉಳಿಯುವುದು ಒಂದು ಪೂರ್ವಗ್ರಹರೂಪದಲ್ಲಿಯೇ; ಅದು ವಾದಮುಕ್ತವಾಗಿ ವಾದವಿಮುಖವಾಗಿ ಉಳಿಯುತ್ತದೆ. ವಿಚಾರಪರಜೀವಿ ಸತ್ಯಧಾರಣೆ ಮಾಡುವ ಬಗೆ ಇದಲ್ಲ. ಇದು ಸತ್ಯವನ್ನು ತಿಳಿದುಕೊಳ್ಳುವ ರೀತಿಯೇ ಅಲ್ಲ. ಈ ಪ್ರಕಾರ ಗ್ರಹಿಸಿದ ಸತ್ಯವೂ ಒಂದು ಅಂಧ ಶ್ರದ್ಧೆಯೇ– ಇರುವವುಗಳ ಜೊತೆಗೆ ಮತ್ತೊಂದು; ಅದನ್ನು ಹೇಳುವ ಪದಗಳಿಗೆ ಅಕಸ್ಮಾತ್ತಾಗಿ ನೇತು ಬಿದ್ದಿರುವ ಒಂದು ಕುರುಡುನಂಬಿಗೆಯಷ್ಟೇ ಅದು!

ಮನುಷ್ಯಜಾತಿಯ ಬುದ್ಧಿಶಕ್ತಿ ಹಾಗೂ ನಿರ್ಣಯಶಕ್ತಿಗಳು ಬೆಳೆಯಬೇಕಾದರೆ– ಯಾರೇ ಆಗಲಿ, ಯಾವವುಗಳ ಬಗ್ಗೆ ತಾವು ಅಭಿಪ್ರಾಯ ತಾಳುವುದು ಅಗತ್ಯವೆನಿಸುವುದೋ ಅಂತಹ ನಿಕಟ ಸಂಬಂಧವುಳ್ಳ ವಸ್ತುಗಳ ಬಗ್ಗಲ್ಲದೆ ಇನ್ನಾವುದರ ಬಗ್ಗೆ ಅವರು ಉಕ್ತಶಕ್ತಿಗಳನ್ನು ಹೆಚ್ಚು ಉಚಿತವಾಗಿ ಬಳಸಬೇಕು? ಗ್ರಹಣಶಕ್ತಿಯನ್ನು ಬೆಳೆಯಿಸಿಕೊಳ್ಳುವುದರಲ್ಲಿ 'ಇಂಥ ಮಾರ್ಗಕ್ಕಿಂತ ಇನ್ನೊಂದು ಉತ್ತಮ' ಎಂಬ ವಿವೇಕವನ್ನು ಒಪ್ಪುವುದಾದರೆ, ತನ್ನ ಅಭಿಪ್ರಾಯಗಳನ್ನಾಧರಿಸುವ ಹಿನ್ನೆಲೆಯನ್ನು ಅಭ್ಯಸಿಸುವುದೇ ಅತ್ಯುತ್ತಮ ಮಾರ್ಗವಲ್ಲವೇ? ಯಾವ ವಿಷಯಗಳ ಬಗ್ಗೆ ನ್ಯಾಯವಾಗಿ ನಂಬಿಗೆಯಿಟ್ಟುಕೊಳ್ಳುವುದು ಅತಿಮುಖ್ಯವೋ ಆ ವಿಷಯಗಳ ಬಗ್ಗೆ ಜನರು ತಾಳುವ ಅಭಿಪ್ರಾಯಗಳನ್ನು ಅವರು ಸಾಮಾನ್ಯವಾದ ಪ್ರತಿವಾದಗಳಿಂದಾದರೂ ಕಾಯ್ದುಕೊಳ್ಳಬಲ್ಲವರಾಗಿರಬೇಕು. ಆದರೆ ಯಾರಾದರೂ ಹೀಗೆ ಬಾಯಿಹಾಕಿ ಯಾರು– "ಅವರ ಅಭಿಪ್ರಾಯಗಳ ಆಧಾರಭೂತ ಸಮರ್ಥನೆಗಳನ್ನು ಅವರಿಗೆ ಬೇಕಾದರೆ ಯಾರಾದರೂ ಕಲಿಯಲಿ. ಯಾವಾಗಲೂ ಯಾರೂ ಪ್ರತಿವಾದಕ್ಕೀಡು ಮಾಡಿದ್ದನ್ನು ಕೇಳಿಲ್ಲ ಎಂಬಷ್ಟೇ ಕಾರಣದಿಂದ ಅಭಿಪ್ರಾಯಗಳನ್ನು ಗಿಳಿಪಾಠ ಮಾಡಿಬಿಡಬೇಕೆಂದಿಲ್ಲ. ಜ್ಯಾಮಿತಿಯ ಅಭ್ಯಾಸಿಗಳು ಅದರ ತತ್ವಸೂತ್ರಗಳಷ್ಟನ್ನೇ ಉರುಹೊಡೆಯುವುದಿಲ್ಲ. ಅವುಗಳ ಪ್ರತ್ಯಕ್ಷವಾದ ಪ್ರಾಯೋಗಿಕ ಉದಾಹರಣೆಗಳನ್ನೂ ಕಲಿತು ತಿಳಿದುಕೊಳ್ಳುತ್ತಾರೆ. ಯಾರೂ ಅವನ್ನು ತಪ್ಪೆಂದು ವಾದಿಸಲು ಬಂದಿಲ್ಲವೆಂಬಷ್ಟೇ ಕಾರಣದಿಂದ ಅವುಗಳ ಆಧಾರಕರ್ತವನ್ನವರರಿಯರು ಎಂದು ಕೇಳಲು ಬಂದೀತೇ?– ಎಂದು ಸವಾಲು ಹಾಕಿ ಯಾರು ಬರಾಬ್ಬರಿ; ಅಂಥ ಶಿಕ್ಷಣವು ಗಣಿತದಂಥ ಶಾಸ್ತ್ರಗಳಿಗೆ ಸಾಕಾಗುತ್ತದೆ. ಏಕೆಂದರೆ ಅಲ್ಲಿ ಪ್ರಶ್ನೆಯ ವಾಮಪಕ್ಷದ ಬಗ್ಗೆ (wrong side) ಏನನ್ನೂ ಹೇಳಬೇಕಾಗಿಲ್ಲ. ಎಲ್ಲ ಸಮರ್ಥನೆಯೂ ಒಂದೇ ಮಗ್ಗುಲಿಗಿರುವುದೇ ಗಣಿತ ಸತ್ಯಗಳ ವೈಶಿಷ್ಟ್ಯ. ಅದರಲ್ಲಿ ಪ್ರತಿಪಕ್ಷವೂ ಇಲ್ಲ; ಪ್ರತಿಪಕ್ಷ ಖಂಡನವೂ ಇಲ್ಲ. ಆದರೆ ನ್ಯಾಯವಾದ ಭಿನ್ನಾಭಿಪ್ರಾಯಗಳ ನಡುವೆ ಸಿಕ್ಕುವ ಪ್ರತಿಯೊಂದು ವಿಷಯದಲ್ಲಿಯೂ ಸತ್ಯವೆಂಬುದು ಉಭಯ ಪಕ್ಷಗಳ ಮಧ್ಯಸ್ಥ ಸಮತೋಲವನ್ನಾಶ್ರಯಿಸಿರುತ್ತದೆ. ಪ್ರಕೃತಿವಾದದಲ್ಲಿ (Natural Philosophy) ಕೂಡ ಒಂದೇ ತರದ ಸಂಗತಿಗಳಿಗೇ ಇನ್ನೊಂದು ತರದ ವಿವರಣೆ ಕೊಡುವುದು ಯಾವಾಗಲೂ ಸಾಧ್ಯ; ಸೌರಮೂಲದ ಬದಲು ಭೂಮೂಲ ಸಿದ್ಧಾಂತ ಹಿಡಿದು ವಿವರಿಸಬಹುದು; ಆಮ್ಲಜನಕದ ಬದಲು ಅಗ್ನಿತತ್ವ (Principle of Inflammability) ಅಥವಾ ಜ್ವಲನೀಯತೆಯನ್ನಾಧರಿಸಿ ಸಮರ್ಥನೆ ಮಾಡಬಹುದು. ಈ ಸಂದರ್ಭದಲ್ಲಿ ಮತ್ತೊಂದು ಸಿದ್ಧಾಂತ ಏಕೆ ಅಸತ್ಯ? ಎಂಬುದನ್ನು ತೋರಿಸಬೇಕಾಗುತ್ತದೆ; ಮತ್ತು ಇದನ್ನು ತೋರಿಸುವ ವರೆಗೆ, ಇದನ್ನು ಹೇಗೆ ತೋರಿಸುತ್ತಾರೆ ಎಂಬುದನ್ನು ತಿಳಿಯುವವರೆಗೆ ನಮಗೆ ನಮ್ಮ ಅಭಿಪ್ರಾಯದ ಆಧಾರ ಅರಿಯದು. ಆದರೆ ಅದಕ್ಕೂ ಬಹಳ ಜಟಿಲವಾದ ನೀತಿ, ರಾಜನೀತಿ, ಧರ್ಮ, ಸಮಾಜಸಂಬಂಧ, ವ್ಯಾಪಾರ–ವ್ಯವಹಾರಗಳತ್ತ ತಿರುಗಿದರೆ, ಪ್ರತಿಯೊಂದು ಚರ್ಚಾಸ್ಪದ

ಅಭಿಪ್ರಾಯವನ್ನು ಸಮರ್ಥಿಸುವಾಗಲೂ ಆ ಸಮರ್ಥನೆಯ ಮುಕ್ಕಾಲಂಶವು ಭಿನ್ನಾಭಿಪ್ರಾಯಕ್ಕನುಕೂಲವಾದ ಆಭಾಸಗಳ ಪರಿಹಾರ ಮಾಡುವ ರೂಪದ್ದಾಗಿರುತ್ತದೆ. ಮಹಾವಾಗ್ಮಿ ಯಾವಾಗಲೂ ಸ್ವಪಕ್ಷಕ್ಕೆ ಹಾಕುವದಕ್ಕಿಂತ ಹೆಚ್ಚಲ್ಲವೆಂದು ಒಮ್ಮೆ ಒಪ್ಪಿಕೊಂಡರೂ ಅಷ್ಟೇ ಪ್ರಮಾಣ ಲಕ್ಷ್ಯವನ್ನಾದರೂ ಪರಪಕ್ಷವನ್ನು ಅಭ್ಯಸಿಸಲು ಹಾಕದೆ ಇರಲಾರ. ಸತ್ಯಲಾಭದ ಆಸೆಯಿಂದ ಯಾವುದಾದರೊಂದು ವಿಷಯವನ್ನು ಕಲಿಯಹೋದ ಯಾರೇ ಆಗಲಿ– ವಾದವಿಜಯಸಾಧನ ಎಂದು ಸಿಸಿರೋ ಅವಲಂಬಿಸಿದ್ದನ್ನು ಅವಲಂಬಿಸಲೇ ಬೇಕು. ಸ್ವಪಕ್ಷವನ್ನಷ್ಟೇ ತಿಳಿದವನು ಸ್ವಪಕ್ಷವನ್ನು ತಿಳಿದದ್ದು ಅಲ್ಪ ಎನ್ನಬೇಕಾಗುತ್ತದೆ. ಅವನು ಕೊಡುವ ಕಾರಣಗಳು ಒಳ್ಳೆಯವಾಗಿರಬಹುದು. ಅವನ್ನು ಖಂಡಿಸಲು ಯಾರಿಗೂ ಶಕ್ಯವಾಗದೆ ಇರಬಹುದು. ಆದರೆ ಪ್ರತಿಪಕ್ಷದ ಕಾರಣಗಳನ್ನು ಖಂಡಿಸುವುದರಲ್ಲಿ ಅವನು ಹಾಗೇ ಅಸಮರ್ಥನಾದರೆ, ಅವರ ವಾದವು ಎಂಥದೆಂಬಷ್ಟನ್ನೂ ಅರಿಯಲಾರದೆ ಹೋದರೆ ಅವನಿಗೆ ಸ್ವಪಕ್ಷ–ಪರಪಕ್ಷಗಳ ಅಭಿಪ್ರಾಯಗಳಲ್ಲಿ 'ಇದು ಆಗಬಹುದು' ಎಂದು ಆರಿಸಿಕೊಳ್ಳಲು ಕಾರಣಬಲ ಉಳಿಯುವುದಿಲ್ಲ. ನಿರ್ಣಯವನ್ನು ತಡೆಹಿಡಿದುಕೊಂಡಿರುವುದೊಂದೇ ಅವನು ತಳೆಯಬೇಕಾದ ತರ್ಕಬದ್ಧ ನಿಲುಮೆ. ಅಷ್ಟರಿಂದ ಅವನು ತೃಪ್ತನಾಗಿ ಉಳಿದರೆ ಸರಿ– ಇಲ್ಲವಾದರೆ ಅವನನ್ನನುಸರಿಸುವುದು ಪ್ರಾಧಿಕಾರದ (Authority)ಮಾರ್ಗವನ್ನು ಅಥವಾ ಸಾಮಾನ್ಯ ಜನರಂತೆ ತನ್ನ ಮನವೊಲೆದತ್ತ ತಿರುಗುವುದನ್ನು ಪೂರ್ವಪಕ್ಷ(=ಪರಪಕ್ಷ, ಪ್ರತಿಪಕ್ಷ, ವಿಪಕ್ಷ) ಉತ್ತರ ಪಕ್ಷ (=ಸ್ವಪಕ್ಷ, ಸಪಕ್ಷ, ಸಿದ್ಧಾಂತ ಪಕ್ಷ) ಗಳೆರಡನ್ನೂ ಉಪಾಧ್ಯಾಯರಿಂದ ಅವನು ಕಲಿತುಕೊಂಡರೆ ಸಾಲದು. ವಾದಗಳಿಗೆ ನ್ಯಾಯವನ್ನು ತೋರಿಸುವ ಮಾರ್ಗವೂ ಅದಲ್ಲ, ತನ್ನ ಮನಸ್ಸಿಗೆ ನೇರವಾಗಿ ಅವನ್ನು ಪರಿಚಯ ಮಾಡಿಕೊಳ್ಳುವ ಕ್ರಮವೂ ಅದಲ್ಲ. ಅವನು ಆ ಪಕ್ಷೀಯರ ಬಾಯಿಂದಲೇ ಅವರ ವಾದಗಳನ್ನು ಕೇಳಬೇಕು. ಆ ಪಕ್ಷವನ್ನು ನಂಬಿ, ಬೆಂಬಲಿಸಿ, ಕೈಯಲ್ಲಾದ ಎಲ್ಲ ಪ್ರಯತ್ನಮಾಡಿ ಸಮರ್ಥಿಸಿಕೊಳ್ಳುವವರ ಮುಖತಃ ಅವು ಬಂದರೇ ಬಂದಹಾಗೆ! ಆಗ ಮಾತ್ರ ಅವುಗಳ ಮನಂಬುಗುವ ರೂಪ ಪರಿಚಿತವಾಗುತ್ತದೆ. ವಿಷಯದ ನಿಜವಾದ ದೃಷ್ಟಿಯಿಂದ ಎದುರಿಸಿ ಪರಿಹರಿಸಿಕೊಳ್ಳಬೇಕಾದ ತೊಂದರೆ ಏನೆಂಬುದು ಅವನ ಅನುಭವಕ್ಕೆ ಬರಬೇಕು. ಇಲ್ಲವಾದರೆ ಆ ತೊಂದರೆಯನ್ನೆದುರಿಸಿ ಪರಿಹರಿಸುವ ಉಕ್ತ ಸತ್ಯಾಂಶದಿಂದ ಅವನು ವಂಚಿತನಾದಂತಾಗುತ್ತದೆ. ನೂರರಲ್ಲಿ ತೊಂಬತ್ತೊಂಬತ್ತು ವಿದ್ಯಾವಂತರು ಈ ವಂಚಿತ ಸ್ಥಿತಿಯಲ್ಲಿರುತ್ತಾರೆ. ತಮ್ಮ ಅಭಿಪ್ರಾಯವನ್ನು ಸಮರ್ಥಿಸಲು ನಿರರ್ಗಳವಾಗಿ ವಾದ ಮಾಡಬಲ್ಲವರು ಕೂಡ ಎಷ್ಟೋ ವೇಳೆ ಹಾಗೇ ಇರುತ್ತಾರೆ. ಅವರ ನಿಗಮನ (Conclusion) ಸರಿಯಾಗಿರಬಹುದು; ಆದರೆ ಅದು ಅವರಿಗೆ ಗೊತ್ತಿದ್ದ ಅಂಶಮಾತ್ರದ ದೃಷ್ಟಿಯಿಂದ ಸುಳ್ಳಾಗಿರಲೂಬಹುದು. ಅವರೆಂದೂ ವಿಪಕ್ಷೀಯ ಮಾನಸಿಕ ಸ್ಥಾನದಲ್ಲಿ ನಿಂತು ನೋಡಿರುವುದಿಲ್ಲ; ವಿಪಕ್ಷೀಯರೇನೆಂದಾರೆಂಬುದನ್ನು ಅಲ್ಲಿಂದ ಬುದ್ಧಿಗತ ಮಾಡಿಕೊಂಡಿರುವುದಿಲ್ಲ. ಆದುದರಿಂದ ಅವರು ತಾವು ಹಿಡಿದಿರುವ

ತತ್ವಪ್ರಣಾಲಿಯನ್ನೇ ಸಾರ್ಥಕವಾದ ರೀತಿಯಲ್ಲಿ ತಿಳಿದಿಲ್ಲ ಎನ್ನಬೇಕು. ಆಭಾಸಿಕವಾಗಿ ಒಂದು ಸಂಗತಿ ಇನ್ನೊಂದರೊಡನೆ ವಿರೋಧ ಸಂಬಂಧವುಳ್ಳದ್ದಾಗಿದ್ದರೆ ಅದನ್ನು ಸಮನ್ವಯ ಮಾಡಬಹುದು– ಆಭಾಸಿಕ ಸಮಬಲಸಂಪನ್ನವಾದ ಎರಡು ಕಾರಣಗಳಲ್ಲಿ ಈ ಒಂದು ಗ್ರಾಹ್ಯ– ಎಂಬಂತಹ ವಿಷಯಾರ್ಥವನ್ನು ವಿವರಿಸಿ ಸಮರ್ಥಿಸುವ ವಿಷಯಭಾಗಗಳು ಅವರಿಗೆ ಗೊತ್ತಿರುವುದೇ ಇಲ್ಲ. ವಿಷಯ ಸಂಗ್ರಹವನ್ನು ಪೂರ್ಣವಾಗಿ ಮಾಡಿಕೊಂಡ ಜನರ ತೀರ್ಪನ್ನು, ಅಳತೆ ಬದಲು ಮಾಡಿ, ನಿರ್ಣಯಿಸಬಲ್ಲ ಸತ್ಯಾಂಶ (ಸತ್ಯದ ಭಾಗ) ಅವರಿಗೆ ತೀರ ಅಪರಿಚಿತವಾಗಿರುತ್ತದೆ. ಆ ಸತ್ಯಾಂಶ ತಿಳಿದಿರುವುದು ಎರಡೂ ಪಕ್ಷಗಳ ಹೇಳಿಕೆಗಳನ್ನು ಸಮವಾಗಿ, ನಿಷ್ಪಕ್ಷಪಾತವಾಗಿ ಕೇಳಿಕೊಂಡು ಅವು ಕೊಟ್ಟ ಕಾರಣಬಂಧಗಳನ್ನು ಅವವುಗಳ ಸುಭದ್ರಸ್ಥಳಗಳಲ್ಲಿ– ಸುಪ್ರಕಾಶಾವಸ್ಥೆಯಲ್ಲಿ ಕಾಣಲು ಪ್ರಯತ್ನಿಸಿದವರಿಗಷ್ಟೇ. ನೈತಿಕ ಹಾಗೂ ಮಾನವೀಯ ವಿಷಯಗಳ ನಿಜವಾದ ತಿಳಿವಳಿಕೆಯನ್ನು ಮಾಡಿಕೊಳ್ಳಬೇಕಾದರೆ ಈ ಶಾಸ್ತ್ರವಿಧಿ (Discipline) ಅತ್ಯಂತ ಮುಖ್ಯ. ಆದುದರಿಂದ ಒಮ್ಮೆ ಸರ್ವತೋಮುಖವಾದ ಸತ್ಯಗಳಿಗೆ ವಿರೋಧಿಗಳಿಲ್ಲದಾಗಲೂ ಅಂಥವರಿದ್ದಾರೆ ಎಂದು ಕಲ್ಪಿಸಿಕೊಂಡು, ಅತಿ ಚತುರ ಪಿಶಾಚವಕೀಲ ಮುಂದಿಡಬಹುದಾದ ಬಲಿಷ್ಠ ತರ್ಕಸಮರ್ಥನೆಗಳನ್ನು ಆ ಕಲ್ಪಿತವಿರೋಧಗಳಿಗೆ ಒದಗಿಸಿಕೊಡುವುದು ಆತ್ಯನಿವಾರ್ಯ.

ಈ ವಿವೇಚನೆಗಳ ಬಲವನ್ನು ಇಳಿಸಲು ಸ್ವತಂತ್ರ ಚರ್ಚಾನೀತಿಯ ವಿರೋಧಿಯು– ತತ್ವಜ್ಞಾನಿ ಹಾಗೂ ದೈವಜ್ಞರ (Theologians) ಅಭಿಪ್ರಾಯಗಳಿಗೆ ಇರುವ ಎಲ್ಲಾ ಅನುಕೂಲ–ಪ್ರತಿಕೂಲ ತರ್ಕವಾದಗಳನ್ನು ಸಾಮಾನ್ಯ ಜನರೆಲ್ಲಾ ಅರಿತು ಅರಗಿಸಿಕೊಳ್ಳಬೇಕಾಗಿಲ್ಲ– ಎನ್ನಬಹುದು. ಒಬ್ಬ ಚತುರ ಪ್ರತಿಪಕ್ಷೀಯನ ಎಲ್ಲ ಅಪವಾದ–ಹೇತ್ವಾಭಾಸಗಳನ್ನೂ ಬಯಲಿಗೆಳೆವ ಶಕ್ತಿಯು ಸಾಮಾನ್ಯನಿಗಿರಬೇಕೆಂದಿಲ್ಲ; ಅವೆಲ್ಲವನ್ನೂ ಖಂಡಿಸುವ ಯಾವನಾದರೂ ಒಬ್ಬನಿದ್ದರೆ ಸಾಕು; ಆಗ ಆಜ್ಞರನ್ನು ಅಡ್ಡಹಾದಿಗೆಳೆವ ಯಾವುದೂ ಅಖಂಡಿತವಾಗಿ ಉಳಿಯದು. ಸರಳ ಮನುಷ್ಯರು ತಮಗೆ ಪಾಲಿಸಹೇಳಿದ ಸತ್ಯಗಳ ಸ್ಫುಟವಾದ ಆಧಾರಗಳಷ್ಟನ್ನು ಕಲಿತಿರುತ್ತಾರೆ; ಉಳಿದವುಗಳ ಬಗ್ಗೆ ಅವರು ಶಾಸ್ತ್ರದ ಪ್ರಾಧಿಕಾರವನ್ನು ಅವಲಂಬಿಸಿದರೆ ಸರಿ. ತಮಗೆ ಒಡ್ಡಬಹುದಾದ ಎಲ್ಲ ತೊಂದರೆ–ಆತಂಕ–ಪ್ರತಿವಾದಗಳನ್ನೂ ಪರಿಹರಿಸುವ ಜ್ಞಾನವಾಗಲಿ, ಪ್ರತಿಭೆಯಾಗಲಿ ಇಲ್ಲ ಎಂದು ಅರಿತ ಅವರು ಇತರರು ಒಡ್ಡಿದ ಅಥವಾ ಒಡ್ಡಬಹುದಾದ ಎಲ್ಲ ಆಕ್ಷೇಪಗಳಿಗೂ ತಜ್ಞರು ಉತ್ತರ ಕೊಟ್ಟಿದ್ದಾರೆ ಅಥವಾ ಕೊಡಬಲ್ಲರು ಎಂದು ಸುಮ್ಮನೆ ಕುಳಿತುಕೊಳ್ಳಬಹುದು.

ಈಗ ಮೇಲೆ ಕೊಟ್ಟ ದೃಷ್ಟಿಗೆ ಒಂದು ಸತ್ಯದ ಬಗ್ಗೆ ಇರುವ ನಂಬಿಗೆಯನ್ನು ಬೆಂಬಲಿಸಬೇಕಾದಷ್ಟು ತಿಳಿವಳಿಕೆಯಿಂದ ಸುಲಭವಾಗಿ ತೃಪ್ತರಾಗುವವರು ಬೇಡುವಷ್ಟು ಗೌರವವನ್ನು ಕೊಟ್ಟಮೇಲೂ ಸ್ವತಂತ್ರ ಚರ್ಚೆಯನ್ನು ಎತ್ತಿಹಿಡಿದ ವಾದದ ಬಲವು

ಸ್ವಲ್ಪವೂ ಕುಗ್ಗುವುದಿಲ್ಲ. ಏಕೆಂದರೆ ಈ ತತ್ವ ಪ್ರಣಾಲಿ ಕೂಡ ಎಲ್ಲ ಅಡ್ಡಿ ಆಕ್ಷೇಪಗಳೂ ತೃಪ್ತಿಕರವಾಗಿ ಉತ್ತರಿಸಲ್ಪಟ್ಟಿವೆ ಎಂಬ ವಿಚಾರಬದ್ಧವಾದ ಗ್ಯಾರಂಟಿಯು ಮನುಕುಲಕ್ಕೆ ಬೇಕು ಎಂಬುದನ್ನು ಮನ್ನಿಸುತ್ತದೆ. ಹೀಗಿರುವಾಗ ಆಕ್ಷೇಪಗಳನ್ನು ಯಾರೂ ಎತ್ತಿ ಆಡದಿದ್ದರೆ ಅವುಗಳನ್ನು ಉತ್ತರಿಸುವ ಬಗೆ ಹೇಗೆ? ಅಥವಾ ಒಮ್ಮೆ ಕಲ್ಪಿಸಿ ಉತ್ತರ ಕೊಟ್ಟರೂ ಆ ಉತ್ತರ ಅತೃಪ್ತಿಕರ ಎಂದು ತೋರಿಸಿಕೊಡಲು ಆಕ್ಷೇಪಕಾರರಿಗೆ ಅವಕಾಶವೇ ಇಲ್ಲದೆ ಹೋದರೆ? ಸಾಮಾನ್ಯ ಜನರಲ್ಲದೆ ಹೋದರೂ ಆಕ್ಷೇಪನಿರಾಸಕಾರರಾಗಬಲ್ಲ ತತ್ವಜ್ಞರೂ ದೈವಜ್ಞರೂ ಕೊನೆಯಪಕ್ಷ ಅಂಥ ಆಕ್ಷೇಪಗಳ ಅತ್ಯಂತ ಭ್ರಾಮಕ ಸ್ವರೂಪಗಳನ್ನರಿಯಬೇಡವೆ? ಇದು ಸಾಧ್ಯವಾಗಬೇಕಾದರೆ ಆ ಆಕ್ಷೇಪಗಳು ಸ್ವತಂತ್ರವಾಗಿ ಸಮರ್ಥ ರೀತಿಯಲ್ಲಿ ಹೊರಬೀಳಬೇಕು. ಈ ಫಜೀತಿಯ ಪ್ರಶ್ನೆಯನ್ನು ಕೆಥೊಲಿಕ್ ಚರ್ಚು ಬಗೆಹರಿಸುವ ಬಗೆಯೇ ಬೇರೆ. ಅದು ಮನಸ್ಸಮಾಧಾನವಾದರೆ ಮಾತ್ರ ತನ್ನ ಸಿದ್ಧಾಂತಗಳನ್ನು ಸ್ವೀಕರಿಸಬಹುದಾದ ವರ್ಗವೊಂದು ಬೇರೆ– ಕೇವಲ ನಂಬಿಗೆಯ ಮೇಲೆ ಅವನ್ನು ಒಪ್ಪಿಕೊಳ್ಳಬೇಕಾದ ವರ್ಗವೊಂದು ಬೇರೆ ಎಂದು ಜನರಲ್ಲಿ ಎರಡು ವಿಭಾಗಗಳನ್ನು ಸ್ಥೂಲವಾಗಿ ಮಾಡಿದೆ. ಯಾವುದನ್ನು ಸ್ವೀಕರಿಸಬೇಕೆಂಬುದರಲ್ಲಿ ಉಭಯ ವರ್ಗಗಳಿಗೂ ಸ್ವಾತಂತ್ರ್ಯವಿಲ್ಲ. ಆದರೆ ನಂಬಲರ್ಹರಾದ ಪಾದ್ರಿಗಳು ಮಾತ್ರ ಪಾಖಂಡಿಗಳ ತರ್ಕವಾದಗಳನ್ನು ಅರಿತುಕೊಳ್ಳಬಹುದು. ಪಾಖಂಡಿ ಪುಸ್ತಕಗಳನ್ನವರು ಓದದಿದ್ದರೆ ಅವರಿಗೆ ಪಾಖಂಡ ಆಕ್ಷೇಪಗಳನ್ನು ಖಂಡಿಸಲೇ ಬರದು! ಹಾಗೆ ಓದಲು ಸಾಮಾನ್ಯರಿಗೆ ಮೇಲಿನವರ ಸುದುರ್ಲಭವಾದ ಅನುಮತಿ ಬೇಕು! ಈ ಓರಣವು ಆಚಾರ್ಯರಿಗೆ ಹಗೆಗಳ ಪ್ರಕರಣದಲ್ಲಿ ಜ್ಞಾನವು ಲಾಭಕರ ಎಂಬುದನ್ನು ಒಪ್ಪುತ್ತದೆ. ಆದರೆ ಇದಕ್ಕನುಗುಣವಾಗಿ ಮಿಕ್ಕ ಜಗತ್ತಿಗೆ ಆ ಜ್ಞಾನಲಾಭ ಸಿಗದಂತೆ ಮಾಡುವ ಸಾಧನವನ್ನು ಹುಡುಕಿಕೊಂಡಿದೆ. ಇದರ ಪರಿಣಾಮವಾಗಿ ಮೇಲುವರ್ಗದವರಿಗೆ ಸಾಮಾನ್ಯರಿಗಿಂತ ಹೆಚ್ಚು ಮನಃಸ್ವಾತಂತ್ರ್ಯ ದೊರಕದಿದ್ದರೂ ಮನಃಸಂಸ್ಕಾರ ದೊರಕುವಂತಾಗಿದೆ. ಈ ಉಪಾಯದಿಂದ ಉಕ್ತ ಚರ್ಚು ತನ್ನ ಉದ್ದೇಶಗಳ ಸಾಧನೆಗೆ ಅಗತ್ಯವಾದ ಬಗೆಯ ಮಾನಸಿಕ ಮೇಲ್ಮೆ (Superiority) ಪಡೆಯುವುದರಲ್ಲಿ ಗೆದ್ದಿದೆ. ಸ್ವಾತಂತ್ರ್ಯರಹಿತವಾದ ಸಂಸ್ಕೃತಿ ಎಂದೂ ವಿಶಾಲೋದಾರ ಮನಸ್ಕತೆಯನ್ನು ಬೆಳೆಸಿದ್ದಿಲ್ಲ. ಆದರೆ ಅದರಿಂದ ಯಾವುದಾದರೊಂದು ಪ್ರಕರಣವನ್ನೆತ್ತಿ ಹಿಡಿಯುವ "ಪುಟ್ಟ ಲಾಯರುತನ" ಸಿದ್ಧಿಸುತ್ತಿದೆ. ಪ್ರೊಟೆಸ್ಟೆಂಟ್ ಧರ್ಮವು (ಸಿದ್ಧಾಂತದಲ್ಲಾದರೂ) ಧರ್ಮವರಣದ ಹೊಣೆಯನ್ನು ಆಯಾ ವ್ಯಕ್ತಿಯೇ ಹೊರಬೇಕಲ್ಲದೆ, ಅದನ್ನದು ಪಾದ್ರಿಗಳ ಹೆಗಲಿಗೇರಿಸುವಂತಿಲ್ಲ ಎಂದು ಸಾರುತ್ತದೆ. ಇದಲ್ಲದೆ ಆಧುನಿಕ ಪ್ರಪಂಚದಲ್ಲಿ ಉಪದಿಷ್ಟರೋದುವ ಬರಹಗಳನ್ನು ಅನುಪದಿಷ್ಟರೋದದಂತೆ ಬಚ್ಚಿಡುವುದು ಅಸಾಧ್ಯ. ಮಾನವಕುಲದ ಗುರುಗಳು ತಿಳಿಯಬೇಕಾದುದೆಲ್ಲವನ್ನೂ ತಿಳಿಯುವುದಗತ್ಯವಾದರೆ ಎಲ್ಲವನ್ನೂ ಬರೆದು ಪ್ರಕಟಿಸುವ ಸ್ವಾತಂತ್ರ್ಯವಿದ್ದೇ ಇರಬೇಕು.

ಹಾಗಲ್ಲದೇ, ಗೃಹೀತಾಭಿಪ್ರಾಯಗಳೊಮ್ಮೆ ಸತ್ಯವಾದ ಸಂದರ್ಭದಲ್ಲಿ– ಮುಕ್ತಚರ್ಚಾಭಾವದ (ಅನಿರ್ಬದ್ಧ ಚರ್ಚೆಗೆ ಅವಕಾಶವೀಯದ) ಕುಚೋದ್ಯವು ಜಾರಿಯಲ್ಲಿದ್ದರೆ, ಆ ಅಭಿಪ್ರಾಯಗಳು ಏತರ ಮೇಲೆ ನಿಂತಿವೆ ಎಂಬುದು ಜನರಿಗೆ ತಿಳಿಯುವುದಿಲ್ಲ. ಆಗ ಆ ಅಜ್ಞರು–ಇದು ಬರಿ ಬೌದ್ಧಿಕ, ಇದೇನೂ ನೈತಿಕ ಕೇಡಲ್ಲ, ಇದೇನೂ ಉಕ್ತಾಭಿಪ್ರಾಯಗಳ ಬೆಲೆಯ ಮೇಲೆ ಪರಿಣಾಮ ಮಾಡದು; ಈ ಚರ್ಚಾಭಾವವು ಅವುಗಳ ಸ್ವರೂಪವನ್ನೇನೂ ಬದಲಾಯಿಸದು– ಎಂದು ತಿಳಿಯುವ ಸಂಭವವುಂಟು. ಆಗ ಅವಿಮರ್ಶೆಯ ದೆಸೆಯಿಂದ ಅವುಗಳ ಆಧಾರತರ್ಕವೇ ಜನರಿಗೆ ಮರೆತು ಹೋಗುವ ಸಂಭವವುಂಟು; ಎಷ್ಟೋ ಸಲ ಅವುಗಳ ಅರ್ಥ ಕೂಡ ಜನರ ಮನಸ್ಸಿನಿಂದ ಜಾರಿಹೋದದ್ದುಂಟು. ಅಂಥ ಅಭಿಪ್ರಾಯಕ್ಕೆ ಕವಚವಾದ ಪದಪುಂಜವು ತನ್ನ ಕಲ್ಪನಾ ಸೂಚಕ ಶಕ್ತಿಯನ್ನು ಕಳೆದುಕೊಳ್ಳುತ್ತದೆ– ಇಲ್ಲವೆ ಮೂಲ ಕಲ್ಪನಾ ಮಾಲೆಯುಲ್ಲಿಯ (Chain of ideas) ಒಂದೆರಡನ್ನಷ್ಟೇ ಸೂಚಿಸಬಲ್ಲುದಾಗಿ ಉಳಿಯುತ್ತದೆ. ಸ್ಪಷ್ಟವಾದ ಕಲ್ಪನಾಚಿತ್ರ (Conception) ಮತ್ತು ಜೀವಂತ ನಂಬಿಗೆಗಳ ಬದಲು ಜಡಸ್ಮೃತಿಯ ರೂಪದಲ್ಲಿ ಒಂದೆರಡು ಪದ ಸಂಹತಿಗಳಷ್ಟೇ ಉಳಿಯುವುವು; ಅಥವಾ ಅರ್ಥದ ಹುರುಳುದುರಿ ಹೋದ ಹೊಟ್ಟಷ್ಟೇ ಮನಸ್ಸಿನಲ್ಲಿ ಉಳಿದೀತು. ಮಾನವೇತಿಹಾಸದಲ್ಲಿ ಈ ವಿಷಯವು ಆಕ್ರಮಿಸುವ ಮತ್ತು ತುಂಬಿಕೊಂಡಿರುವ ಈ ಮಹಾಪರಿಚ್ಛೇದವನ್ನು ಎಷ್ಟು ನಿಷ್ಠೆಯಿಂದ ಕಲಿತರೂ ಧ್ಯಾನಿಸಿದರೂ ಕಡಿಮೆಯೇ!

ನೂರಕ್ಕೆ ತೊಂಬತ್ತೊಂಬತ್ತು ನೈತಿಕ ಹಾಗೂ ಧಾರ್ಮಿಕ ಮತಗಳ (Creeds) ಅನುಭವವು ಮೇಲಿನ ಮಾತಿಗೆ ಉದಾಹರಣೆ. ಅವುಗಳ ಜನಕರಿಗೆ ಅವೆಲ್ಲವೂ ಅರ್ಥಪೂರ್ಣವೂ ಜೀವಭರಿತವೂ ಆಗಿದ್ದವು– ಅವರ ನೇರವಾದ ಶಿಷ್ಯರಿಗೂ ಅಷ್ಟೆ. ಉಳಿದ ಮತಗಳದಕ್ಕಿಂತ ಉನ್ನತವಾದ ಸ್ಥಾನವನ್ನು ಒಂದಕ್ಕೆ ಕೊಡಲು ಹೂಡಿದ ಹೋರಾಟವಿರುವಷ್ಟು ಕಾಲ ಅವುಗಳ ಅರ್ಥವು ಅನ್ಯೂನ ಬಲವುಳ್ಳದ್ದಾಗಿರುವುದಷ್ಟೇ ಅಲ್ಲದೆ, ಅದು ಜನರ ಮನಸ್ಸಿನಲ್ಲಿ ಎದ್ದು ಕಾಣುವಂತೆ ಬಿಂಬಿಸಲ್ಪಡುವ ಆವರಣವೂ ಉಳಿದಿರುತ್ತದೆ. ಕಟ್ಟ ಕಡೆಗೆ ಅದು ಉಳಿದ ಮತಗಳನ್ನು ಬಗ್ಗು ಬಡಿದು ಮೆರೆಯುತ್ತದೆ. ಹಾಗೂ ಸಾಮಾನ್ಯರೆಲ್ಲರ ಅಭಿಪ್ರಾಯವಾಗಿ ಮಾರ್ಪಡುತ್ತದೆ ಇಲ್ಲವೆ ಅದರ ಪ್ರಗತಿಯ ಇದಿರು ಪೂರ್ಣವಿರಾಮ ಚಿಹ್ನೆ ಬೀಳುತ್ತದೆ. ತಾನು ಗಳಿಸಿದಷ್ಟು ವ್ಯಾಪ್ತಿಯನ್ನದು ಉಳಿಸಿಕೊಳ್ಳುತ್ತದೆ; ಆದರೆ ಅದಕ್ಕೂ ಅಗಲಕ್ಕೆ ಅದು ಹರಿಯಲಾರದಾಗುತ್ತದೆ. ಈ ಎರಡರಲ್ಲೊಂದು ಗತಿಯು ಸನ್ನಿಹಿತವಾದಾಗ ಅದರ ಬಗ್ಗಾಗುವ ಚರ್ಚೆ ಕಡಿಮೆಯಾಗುತ್ತ ಹೋಗಿ ಕೊನೆಗೊಮ್ಮೆ ಸಂಪೂರ್ಣವಾಗಿ ಲೋಪ ಹೊಂದುವುದು. ಇಷ್ಟುಹೊತ್ತಿಗೆ ಉಕ್ತ ತತ್ವಸಿದ್ಧಾಂತವು ಸರ್ವಗ್ರಾಹ್ಯವೆನಿಸದಿದ್ದರೂ ಪಕ್ಷಗ್ರಾಹ್ಯ ಪಂಥವೆನ್ನಿಸಿಕೊಳ್ಳುವುದು; ಈಗ ಅದರ ಅನುಯಾಯಿಗಳು ಅದನ್ನು ಪಿತ್ರಾರ್ಜಿತರೀತಿಯಿಂದ ಪಡೆದವರಾಗುತ್ತಾರಲ್ಲದೆ, ತಾವೇ ಬುದ್ಧಿಪೂರ್ವಕ

ಆರಿಸಿಕೊಂಡಂಥವರಾಗರು. ಇಂಥ ಒಂದು ಸಿದ್ಧಾಂತದಿಂದ ಇನ್ನೊಂದಕ್ಕೆ ಮತಾಂತರ ಹೊಂದುವುದೀಗ ಬಹಳ ವಿರಳವಾಗುತ್ತ ಬಂದಿರುವುದರಿಂದ ಅದರ ಬಗ್ಗೆ ಆಯಾ ಪ್ರೊಫೆಸರರು ಗಮನ ಕೊಡುವುದು ಕಡಿಮೆ. ಅಂಥ ಮತ ಪಂಥದ ಗತಿ ಈಗ ಏನಾಗಿದೆ ಎನ್ನುತ್ತೀರಿ? ಮೊದಲಿನಂತೆ ಅದರ ಪ್ರಚಾರಕ್ಕಾಗಿ ಹೋರಾಡುವವರೂ ಇಲ್ಲ– ಜಗತ್ತಿನಲ್ಲಿ ಅದನ್ನೆದುರಿಸಬರುವವರ ಎದುರು ನಿಂತು ಸಮರ್ಥಿಸಿ ಅದನ್ನು ಸಂರಕ್ಷಿಸಿಕೊಂಬವರೂ ಇಲ್ಲ. ಅದರ ಅನುಯಾಯಿಗಳದನ್ನು ಒಪ್ಪಿ ಬಿಟ್ಟಿದ್ದಾರೆ. ಆದ್ದರಿಂದ ಅವರು ಅದನ್ನು ಎದುರಿಸುವವರ ತರ್ಕವಾದವನ್ನು ಕೇಳ ಹೋಗುವುದೂ ಇಲ್ಲ– ಅವರಿಗೆ ತಮ್ಮ ಮತವನ್ನು ಸಮರ್ಥಿಸುವ ವಾದವನ್ನೆತ್ತಿ ತೊಂದರೆ ಕೊಡುವುದೂ ಇಲ್ಲ. ಈ ಅವಧಿಯಿಂದ ಈ ತತ್ವಸಿದ್ಧಾಂತದ ಅಳಿಗಾಲ ಆರಂಭವಾಯಿತೆನ್ನಬಹುದು; ಅದು ನಿಶ್ಚೇತನವಾಗಲಾರಂಭಿಸಿತೆಂದು ಹೇಳಬಹುದು. ಎಷ್ಟೋ ಜನ ಗುರುಗಳು ಗೊಣಗುವುದನ್ನು ನಾವಿಂದು ಕೇಳಬಹುದು: ಅಯ್ಯೋ, ನಾವು ಹೇಳಿಕೊಟ್ಟ ಸತ್ಯದ ಸಚೇತನ ಗ್ರಹಿಕೆ ನಮ್ಮ ಶಿಷ್ಯವರ್ಗದಲ್ಲಿಲ್ಲವಾಗಿದೆ. ಅದು ನಾಮಕೇ ವಾಸ್ತೆ ಆ ಸತ್ಯವನ್ನು ಮನ್ನಿಸುತ್ತದೆ. ಅದರ ಹೃದಯವನ್ನು ಹೊಕ್ಕು ಅದು ಆ ವರ್ಗದವರ ನಡತೆಯ ಮೇಲೆ ಪ್ರಭುತ್ವವನ್ನು ಸ್ಥಾಪಿಸಲು ಶಕ್ತವಾಗಿಲ್ಲ ಇತ್ಯಾದಿ. ಒಂದು ಮತ ಪಂಥವು ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತಿರುವ ಅವಧಿಯಲ್ಲಿ ಇಂಥ ಗೊಣಗಾಟವಿರುವುದಿಲ್ಲ. ಅಂಥ ಹೋರಾಟದ ಕಾಲದಲ್ಲಿ ದುರ್ಬಲಯೋಧರಿಗೆ ಕೂಡ ತಾವು ಏತಕ್ಕಾಗಿ ಹೊಡೆದಾಡುತ್ತಿದ್ದೇವೆ ಎಂಬುದರ ಜ್ಞಾನವೂ ಭಾವನೆಯೂ ಇರುವುವಲ್ಲದೆ, ಅದಕ್ಕೂ ಮಿಕ್ಕವುಗಳಿಗೂ ಇರುವ ಭೇದವೂ ಚೆನ್ನಾಗಿ ಗೊತ್ತಿರುತ್ತದೆ. ಆ ಬಿಸಿ ಬಿಸಿ ಆವರಣದಲ್ಲಿ ಅನೇಕ ಅನುಯಾಯಿಗಳಿಗೆ ವಿಚಾರದ ವಿವಿಧ ರೂಪಗಳಲ್ಲೂ ತಮ್ಮ ಮತದ ಮೂಲತತ್ವವು ಅನುಭವಕ್ಕೆ ಬಂದಿರುತ್ತದೆ; ಅದನ್ನವರು ಅದು ಕೊಡಬಹುದಾದ ಎಲ್ಲ ಗಣ್ಯವಾದ ಅರ್ಥಗಳ ದೃಷ್ಟಿಯಿಂದಲೂ ತೂಗಿ ನೋಡಿರುತ್ತಾರೆ; ಮತ್ತು ಶ್ರದ್ಧಾವಂತ ಮನಸ್ಸಿನಲ್ಲಿ ತತ್ತನ್ಮತ ಉಂಟು ಮಾಡುವ ಚಾರಿತ್ರ ರೂಪಕ ಪರಿಣಾಮವನ್ನು ಅವರು ಸಂಪೂರ್ಣವಾಗಿ ಅನುಭವಿಸಿರುತ್ತಾರೆ. ಆದರೆ ಅದೊಂದು ಪರಂಪರಾಗತ (ಪಿತೃಕ್ರಮಾಗತ) ಮತವೆನಿಸಿ ನಿಷ್ಕ್ರಿಯಾ ಸ್ವರೂಪದಲ್ಲಿ (ಜಡವಾಗಿ) ಉಪದೇಶಿಸಲ್ಪಟ್ಟಾಗ – ಆದಿಯಲ್ಲಿ ಮನಸ್ಸಿಗೆ ಸಿಕ್ಕುತ್ತಿದ್ದ ಒತ್ತಾಯ ಈಗ ಸಿಕ್ಕದಿರುವುದರಿಂದ, ಅದನ್ನು ನಂಬಿದರುಂಟಾಗುವ ಪರಿಮಾಣಗಳನ್ನು ಚಿಂತಿಸಲು ತನ್ನ ಚೈತನ್ಯವೆಲ್ಲವನ್ನೂ ಬಳಸುವ ಅಗತ್ಯವುಂಟಾಗದುದರಿಂದ ಕ್ರಮಶಃ ಅದರ ಔಪಚಾರಗಳನ್ನಲ್ಲದೆ ಮಿಕ್ಕೆಲ್ಲ ಅಂಶವನ್ನೂ ಮರೆತು ಬಿಡುವ ಅಥವಾ ಆ ಮತೋಪದೇಶಕ್ಕೆ ಬೆಪ್ಪನಂತೆ ಹೂಂಗುಟ್ಟುವ ಪ್ರವೃತ್ತಿಯುಂಟಾಗುತ್ತದೆ. ಈ ವಿಧಾನದಲ್ಲಿ ಮನಸ್ಸುಕೊಟ್ಟು ಕೇಳಿ ಹೃದ್ಗತ ಮಾಡಿಕೊಳ್ಳುವ ಅವಶ್ಯಕತೆಗೆ ಬೆಲೆಯಿಲ್ಲ. ಅನುಭವದ ಒರೆಗಲ್ಲಿಗೆ ಹಚ್ಚಿನೋಡುವ ಲವಲವಿಕೆಯಿಲ್ಲ. ಆದುದರಿಂದ ಕಟ್ಟಕಡೆಗೆ ಆ ಮತಕ್ಕೂ ಅನುಯಾಯಿಯ ಆಂತರಿಕ ಜೀವನಕ್ಕೂ ಯಾವ ಸಂಬಂಧವೂ ಉಳಿಯುವುದಿಲ್ಲ.

ಅನಂತರ ಇಂದು ಜಗತ್ತಿನಲ್ಲಿ ಅನೇಕ ಕಡೆ ತೋರುವಂತೆ ಮತವು ತಲೆಯಲ್ಲಿ ಹೊಕ್ಕು ಪಾಚಿಯಾಗಿ ನಮ್ಮ ಸ್ವಭಾವದ ಉತ್ತಮ ಭಾಗಗಳನ್ನು ಮುಸುಕಿ, ತನ್ನ ಆತ್ಮವನ್ನು ತಲೆಯ ಹೊರಗೇ ಉಳಿಸಿಕೊಂಡು, ಮಿದುಳಿಡೀ ಮರ ಹಾದು ಹೋಗಿ, ಬೇರೆ ಯಾವ ಉನ್ನತ ವಿಚಾರಕ್ಕೂ ಪ್ರವೇಶ ಕೊಡದಂತೆ ಮಾಡಿ ಬಿಡುತ್ತದೆ. ಈ ರೂಪದ ಮತವೊಂದು ಭೂತ. ಅದು ಮತಾಂಧರ ಮನದಲ್ಲಿ ಹೊಸದಾದ ಯಾವ ಸಚೇತನ ಶ್ರದ್ಧೆಯೂ ಹೊಗದಂತೆ ಬಾಗಿಲಲ್ಲಿ ಕುಳಿತು ತಡೆಹಾಕುವುದಲ್ಲದೆ, ಅವರ ಮನಸ್ಸು ಖಾಲಿಯಾಗಿಯೇ ಉಳಿಯುವಂತೆ ಕಾಯುತ್ತಿರುತ್ತದೆ!

ಮಾನವನ ಮನದ ಮೇಲೆ ಅತ್ಯಂತ ಆಳವಾದ ಭಾವಬಿಂಬವನ್ನು ಮೂಡಿಸಲು ಅಂತಃಶಕ್ತಿಯನ್ನು ತುಂಬಿ ಉಪದೇಶಿಸಲಾದ ತತ್ವಸೂತ್ರಗಳು ಆ ಮನದಲ್ಲಿ ಹೆಣಗಳಾಗಿ ಬಿದ್ದು ಕಲ್ಪನಾಲೋಕ, ಭಾವನಾಕೋಶ, ಜ್ಞಾನಸ್ಥಲಗಳನ್ನು ಪ್ರವೇಶಿಸದೆ ಉಳಿದುದಕ್ಕೆ ಕ್ರೈಸ್ತಮತಾಲಂಬಿಗಳ ಬಹುಸಂಖ್ಯೆ ಬದುಕುವ ರೀತಿಯೇ ಸಾಕ್ಷಿ*. ಕ್ರೈಸ್ತಧರ್ಮವೆಂಬ ಪದಕ್ಕೆ ಎಲ್ಲ ಚರ್ಚು ಹಾಗೂ ಅದರ ಶಾಖೆಗಳು ಹೇಳುವ ಪ್ರಕಾರ ಹೊಸ ಒಡಂಬಡಿಕೆಯಲ್ಲಿರುವ ಗಾದೆ ಹಾಗೂ ಉಪದೇಶಗಳೆಂದೇ ನನ್ನ ಅರ್ಥ. ಕ್ರೈಸ್ತರೆಂದುಕೊಂಬ ಎಲ್ಲರೂ ಇವನ್ನು ಪವಿತ್ರವೆಂದೂ ಶಾಸನಸಮವೆಂದೂ ಒಪ್ಪುತ್ತಾರೆ. ಹೀಗಿದ್ದರೂ ಸಾವಿರದಲ್ಲಿ ಒಬ್ಬ ಕ್ರೈಸ್ತನಾದರೂ ತನ್ನ ವೈಯಕ್ತಿಕ ನಡತೆಯನ್ನು ಆ ವಿಧಿಗಳಿಗನುಗುಣವಾಗಿದೆಯೋ ಇಲ್ಲವೋ ಎಂಬುದನ್ನು ಪರಾಮರ್ಶಿಸುವುದಿಲ್ಲ, ಅವುಗಳನುಸಾರವಾಗಿ ತನ್ನ ವರ್ತನೆಯನ್ನು ನಿರ್ದೇಶಿಸಿಕೊಳ್ಳುವುದಿಲ್ಲ – ಎಂದರೆ ಅತಿಶಯೋಕ್ತಿಯಾಗಲಾರದು. ಆತ ಸರಿ ನೋಡುವುದಕ್ಕೆ ತೆಗೆದುಕೊಂಬ ಗಜಕಡ್ಡಿಯೆಂದರೆ ತನ್ನ ರಾಷ್ಟ್ರದ ರೂಢಿ, ತನ್ನ ವರ್ಗದವರ ಆಚಾರ, ತನ್ನ ಧಾರ್ಮಿಕ ಉದ್ಯೋಗಕ್ಕಿರುವ ಪದ್ಧತಿ. ಒತ್ತಟ್ಟಿಗೆ, ಅವನ ಹತ್ತಿರ ತನ್ನ ಆಡಳಿತದ ನಿಯಮಗಳೆಂದು ತನಗೆ ಅಖಂಡನೀಯ ವಿವೇಕ ಸಂಪನ್ನರಿತ್ತಂಥವೆಂಬುದಾಗಿ ತಾನು ನಂಬಿರುವ ನೀತಿ ಸೂತ್ರಸಂಗ್ರಹವೊಂದಿರುತ್ತದೆ: ಇನ್ನೊತ್ತಟ್ಟಿಗೆ, ಈ ಸೂತ್ರಗಳಲ್ಲಿ ಕೆಲವಕ್ಕೆ ಕೆಲಮಟ್ಟಿಗೆ ಸರಿಹೋದುವ ದೈನಂದಿನ ನಿರ್ಣಯಗಳೂ ವ್ಯವಹಾರಗಳೂ ಇರುತ್ತವೆ– ಇವು ಉಳಿದ ಕೆಲವಕ್ಕೆ ಬಹಳಮಟ್ಟಿಗೆ ಸರಿಹೋಗುವುದಿಲ್ಲ, ಇನ್ನು ಕೆಲವಕ್ಕೆ ಸರೀ ವಿರುದ್ಧವಾಗಿರುತ್ತವೆ; ಮತ್ತು ಒಟ್ಟಿನಲ್ಲಿ ಇವು ಕ್ರೈಸ್ತಮತಕ್ಕೂ ಐಹಿಕ ಜೀವನದ ಪ್ರೇರಣೆ–ಆಸಕ್ತಿಗಳಿಗೂ ಹಾವೇರಿ ಪಂಚಾಯಿತಿಯ ಒಪ್ಪಂದವಾದಂತಿರುತ್ತವೆ. ಮೊದಲನೆಯ ಮಾನದಂಡಕ್ಕವನು 'ನಮೋ' ಎನ್ನುತ್ತಾನೆ; ಎರಡನೆಯದಕ್ಕೆ ನಿಜವಾದ ಭಕ್ತನಾಗಿ ಅದರಂತೆ ನಡೆದುಕೊಳ್ಳುತ್ತಾನೆ. ದೀನರೂ ದರಿದ್ರರೂ ಶೋಷಿತರೂ ಭಾಗ್ಯಶಾಲಿಗಳು; ಒಂಟೆಯೊಮ್ಮೆ ಸೂಜಿಯ ತೂತಿನಲ್ಲಿ ಹೊಗುವುದು ಸುಲಭವಾದೀತು– ಆದರೆ ಶ್ರೀಮಂತನಿಗೆ ಸ್ವರ್ಗವನ್ನು ಹೊಗುವುದು ಅತ್ಯಂತ ಕಠಿಣ; ತಮ್ಮನ್ನು ನಿರ್ಣಯಿಸುವವನು ಮೇಲಿದ್ದಾನೆಂದು ತಿಳಿದು ಇನ್ನೊಬ್ಬರು ಹಾಗೆ ಹೀಗೆ ಎಂದು

ನಿರ್ಣಯಿಸುವವನು ಮೇಲಿದ್ದಾನೆಂದು ತಿಳಿದು ಇನ್ನೊಬ್ಬರು ಹಾಗೆ ಹೀಗೆ ಎಂದು

ನಿರ್ಣಯಿಸಲು ಯಾರೂ ಹೋಗಕೂಡದು; ಆಣೆಯನ್ನೆಂದೂ ಹಾಕಲೇಬಾರದು (ಶಪಥವನ್ನೆಂದೂ ತೊಡಬಾರದು); ನೆರೆಯವರನ್ನು ತಮ್ಮನ್ನೆಂತೋ ಅಂತೇ ಪ್ರೀತಿಸಬೇಕು; ಯಾರಾದರೂ ನಮ್ಮ ಬಟ್ಟೆಯನ್ನು ತೆಗೆದುಕೊಂಡರೆ ನಮ್ಮ ಕೋಟನ್ನೂ ತೆಗೆದುಕೊಂಡು ಹೋಗಿಬಿಡಿ– ಎಂದು ಕೊಟ್ಟುಬಿಡಬೇಕು; ನಾಳೆಗಾಗಿ ಚಿಂತಿಸುವ, ಸಂಚಯಿಸುವ ಬುದ್ಧಿ ಬೇಡ; ಪೂರ್ಣ ಮನುಷ್ಯರೆಂದೆನಿಸಿಕೊಳ್ಳಬೇಕಾದರೆ ನಮ್ಮಲ್ಲಿರುವ ಎಲ್ಲವನ್ನೂ ಮಾರಿ ಬಂದ ಹಣವನ್ನು ಬಡವರಿಗೆ ದಾನಮಾಡಿಬಿಡಬೇಕು– ಎಂದು ಎಲ್ಲ ಕ್ರೈಸ್ತರೂ ನಂಬುತ್ತಾರೆ. ತಾವೀ ತತ್ವಗಳನ್ನು ನಂಬುತ್ತೇವೆಂದಾಗ ಅವರು ಅಪ್ರಾಮಾಣಿಕರಾಗಿರುವುದಿಲ್ಲ. ಅವರವನ್ನು ನಂಬುವುದು ನಿಜವೇ. ಯಾವಾಗಲೂ ಕೇಳಿದ್ದನ್ನು, ಕೇಳಿ ಹೊಗಳಿದ್ದನ್ನು ಆದರೆ ಯಾವಾಗಲೂ ಚರ್ಚಿಸಲ್ಪಡದುದನ್ನು ಜನರು ನಂಬುವುದಿಲ್ಲವೆ? ಹಾಗೇ ಅವರು ಕ್ರೈಸ್ತತತ್ವಗಳನ್ನು ನಂಬಿದ್ದಾದರೂ! ಆದರೆ ವರ್ತನಾನಿಯಾಮಕವಾದ ಸಚೇತನ ಶ್ರದ್ಧೆ ಎಂಬ ಅರ್ಥದಲ್ಲವರು ರೂಢಿಯಲ್ಲಿ ಯಾವ ಮಟ್ಟದವರೆಗೆ ಅದರಂತೆ ಆಚರಿಸುವರೋ ಅಷ್ಟರವರೆಗೆ ಮಾತ್ರ ಅವರದನ್ನು ನಂಬಿರುತ್ತಾರೆ. ತಮ್ಮ ಪ್ರಾಮಾಣಿಕ ರೂಪದಲ್ಲಿ ಆ ತತ್ವಗಳು ವಿಪಕ್ಷೀಯರತ್ತ ಕಲ್ಲೆಸೆಯುವ ಪ್ರಯೋಜನಕ್ಕೆ ಬೀಳುತ್ತವೆ. ತಮಗೆ ಪ್ರಶಸ್ತವೆನಿಸಿದ್ದನ್ನು ಯಾರಾದರೂ ಮಾಡಿದಾಗ ತಾವು ಅವನ್ನು ಸಮರ್ಥನಕಾರಣಗಳನ್ನಾಗಿ ಮುಂದಿರಿಸಬೇಕೆಂಬುದೊಂದು ಅವರ ನಿತ್ಯಗ್ರಹಿಕೆ. ಆದರೆ ಅವರೆಂದೂ ಮಾಡಬೇಕೆಂದು ಎಣಿಸಿರದ ಎಷ್ಟೋ ಅಸಂಖ್ಯ ಸಂಗತಿಗಳ ಬೆಂಬಲವಿಲ್ಲದೆ ಅವರೆತ್ತಿದ ನೀತಿ ಸೂತ್ರಗಳು ಸಫಲವಾಗಲಾರವು ಎಂಬುದನ್ನು ಯಾರಾದರೂ ಅವರಿಗೆ ನೆನಪು ಮಾಡಿಕೊಟ್ಟರೆ ಅಂಥವರು ತಾವೇನೋ ಮಿಕ್ಕವರಿಗಿಂತ ಶ್ರೇಷ್ಠರೆಂದು ತೋರಿಸಿಕೊಳ್ಳಲು ಬಂದ ಅಪ್ರಿಯ ಮನುಷ್ಯರೆಂದು ವರ್ಗೀಕರಿಸಿಬಿಡುವುದು ಈ ಅಧರಸೇವಾಪರಾಯಣರ ಸಂಪ್ರದಾಯ. ಕ್ರೈಸ್ತತತ್ವಗಳಿಗೆ ಸಾಮಾನ್ಯ ಅನುಯಾಯಿಗಳ ಮೇಲೆ ಏನೂ ಪ್ರಭುತ್ವವಿಲ್ಲ, ಅವೆಂದೂ ಅವರ ಮನಸ್ಸಿನಲ್ಲಿ ಒಂದು ಚೈತನ್ಯಶಕ್ತಿಯಾಗಿ ನಿಂತಿಲ್ಲ. ಅವರು ಅಭ್ಯಾಸಬಲದಿಂದ ಆ ತತ್ವಗಳನ್ನು ಹೇಳುವ ಶಬ್ದ–ನಾದಗಳಷ್ಟನ್ನು ಗೌರವಿಸುತ್ತಾರೆ; ಆ ವಾಕ್ಯ ಸೂಚಿಸುವ ವಸ್ತುಗಳ ಕಡೆಗೆ ಅದರಿಂದ ಯಾವ ಭಾವನೆಯೂ ಹರಿದು ಮುಟ್ಟಿ, ಅವರ ಮನವನ್ನು ಅದೆಲ್ಲವನ್ನೂ ಅರಗಿಸಿಕೊಂಡು ಆ ಸೂತ್ರಕ್ಕೆ ಅನುಗುಣವಾಗಿ ನಡೆಯುವಂತೆ ಮಾಡುವುದಿಲ್ಲ. ಸಾಕ್ಷಾತ್ತಾಗಿ ಆಚರಿಸುವ ಪ್ರಸಂಗದಲ್ಲಿ ಅವರು ಯಾವಾಗಲೂ ಕ್ರಿಸ್ತನನ್ನು ಎಷ್ಟರವರೆಗೆ ಅನುಸರಿಸಬೇಕೆಂಬುದನ್ನು ನಿರ್ದೇಶಿಸಲು ಶ್ರೀಮಾನ್ ಕಲ್ಲಪ್ಪ ಮತ್ತು ಶ್ರೀಮಾನ್ ಗುಂಡಪ್ಪ ಇತ್ಯಾದಿಗಳ ಸುತ್ತಮುತ್ತ ದೃಷ್ಟಿಯನ್ನು ಹಾಕುತ್ತಾರೆ!

ಮೊದಲಿನ ಕ್ರೈಸ್ತರ ಆಚಾರ–ವಿಚಾರಗಳ ಸಂಬಂಧ ಹೀಗಿದ್ದಿದ್ದಿಲ್ಲ ಎಂದು ನಾವು ಖಾತ್ರಿಯಾಗಿ ನಂಬಬಹುದು. ಅದು ಹೀಗೇ ಇದ್ದದ್ದು. ಹೌದಾಗಿದ್ದರೆ ಅನಾಮಧೇಯರಾಗಿ ಮೂಲೆಗೆ ಬಿದ್ದಿದ್ದ ನಿಂದಿತ ಹಿಬ್ರೂಗಳ ಪಂಥವಾಗಿದ್ದ ಕ್ರೈಸ್ತಧರ್ಮವು ಎಂದೂ ರೋಮನ್ ಸಾಮ್ರಾಜ್ಯದ ಮಹಾಧರ್ಮವಾಗಿ ಹರಡುತ್ತಿದ್ದಿಲ್ಲ.

ಅವರ ಶತ್ರುಗಳು– "ನೋಡಿ, ಈ ಕ್ರೈಸ್ತರು ಹೇಗೆ ಪರಸ್ಪರ ಪ್ರೇಮವುಳ್ಳವರಾಗಿದ್ದಾರೆ" (ಈಗ ಯಾರೂ ಇಂಥ ಮಾತನ್ನಾಡಲಿಕ್ಕಿಲ್ಲ!)– ಎಂದು ಹೇಳಿದಾಗ ಖಂಡಿತವಾಗಿಯೂ ಅಂದಿನಿಂದ ಈವರೆಗಿನ ಮಿಕ್ಕ ಅವಧಿಗಳಲ್ಲಿ ಇದ್ದದ್ದಕ್ಕಿಂತ ಹೆಚ್ಚು ಸಚೇತನವಾದ ಮತಾರ್ಥಾನುಭವವು ಅವರಿಗಿದ್ದಿರಬೇಕು. ಕ್ರೈಸ್ತಧರ್ಮವೀಗ ತನ್ನ ಕ್ಷೇತ್ರವನ್ನು ವಿಸ್ತರಿಸುವುದರಲ್ಲಿ ಅತ್ಯಂತ ಮಂದಪ್ರಗತಿಯುಳ್ಳದ್ದಾಗಿರಲು ಮುಖ್ಯವಾಗಿ ಆಚಾರಕ್ಕೂ ಉಚ್ಚಾರಕ್ಕೂ ಅಂತರ ಹೆಚ್ಚಾಗುತ್ತ ಹೋದದ್ದೇ ಕಾರಣ; ೧೮ ಶತಮಾನಗಳಾದ ಮೇಲೆ ಕೂಡ ಅದಿನ್ನು ಸಾಮಾನ್ಯವಾಗಿ ಯುರೋಪಿಯನ್ನರಲ್ಲಿ ಮತ್ತು ಅವರ ವಂಶೀಯರಲ್ಲಿ ಮಾತ್ರ ಉಳಿದಿದೆ. ಸನಾತನ ಶ್ರದ್ಧಾವಂತರೆಂದುಕೊಂಬ ನಿಷ್ಠಾವಂತ ಕ್ರೈಸ್ತರ ಹೃದಯದಲ್ಲಿ ಕೂಡ ಜಾಗರಿತವಾಗಿರುವ ಭಾಗವೆಂದರೆ ಕಾಲ್ವಿನ್ ಮಾಡಿದ್ದೋ ನೋಕ್ಸ್ ಮಾಡಿದ್ದೋ ಅಥವಾ ಇನ್ನಾರಾದರೂ ತಮ್ಮಂತಹ ಜನರು ಮಾಡಿದ್ದೋ ಆಗಿದೆ. ಕ್ರಿಸ್ತೋಪದೇಶ ಅವರ ಮನದಲ್ಲಿ ಒಟ್ಟಿಗೇ ಇರುತ್ತದೆ; ಆದರದು ಎಷ್ಟರಮಟ್ಟಿನ ಪರಿಣಾಮ ಉಂಟು ಮಾಡುತ್ತದೆ? ಎಂದು ಕೇಳಿದರೆ– ಅದರ ಸುಂದರವೂ ಮಧುರವೂ ಆದ ಶಬ್ದ ಸಂಗೀತವನ್ನು ಕೇಳುವುದರಿಂದ ಆಗುವಷ್ಟರಮಟ್ಟಿಗೇ. ಎಲ್ಲ ಪಂಥಗಳಿಗೂ ಸಾಮಾನ್ಯವಾದ ತತ್ವಗಳಿಗಿಂತ ಹೆಚ್ಚಾಗಿ ಆ ಈ ಪಂಥದ ವಿಶಿಷ್ಟ ತತ್ವಗಳು ತಮ್ಮ ಚೈತನ್ಯವನ್ನು ಉಳಿಸಿಕೊಂಡಿರಲು ನಿಃಸಂದೇಹವಾಗಿ ಅನೇಕ ಕಾರಣಗಳಿವೆ. ಹಾಗೇ ಅಂಥ ವಿಶಿಷ್ಟ ತತ್ವಗಳ ಅರ್ಥವನ್ನು ಜೀವಂತವಾಗಿಡಲು ಗುರುಗಳು ಹೆಚ್ಚು ಶ್ರಮವಹಿಸುವುದಕ್ಕೂ ಬಹಳ ಕಾರಣಗಳಿರಬಹುದು. ಆದರೆ– ಆ ವಿಶಿಷ್ಟ ತತ್ವಗಳ ಸತ್ಯವನ್ನು ಹೆಚ್ಚಾಗಿ ಪ್ರಶ್ನಿಸಲಾಗುತ್ತದೆ. ಹಾಗೂ ಅವನ್ನು ಪ್ರತಿವಾದಿಗಳ ಆಘಾತದಿಂದ ಹೆಚ್ಚು ಸಾರಿ ಕಾಯ್ದುಕೊಳ್ಳಬೇಕಾಗುತ್ತದೆ ಎಂಬುದಂತೂ ನಿಶ್ಚಿತವಾದ ಒಂದು ಕಾರಣ ಎನ್ನಲಡ್ಡಿಯಿಲ್ಲ. ರಣರಂಗದಲ್ಲಿ ಯಾವ ರಿಪುವೂ ಇಲ್ಲವೆಂದಾದಾಗ ಗುರುಗಳೂ ಶಿಷ್ಯರೂ ತಮ್ಮತಮ್ಮ ಕಟ್ಟಿದ ಗೂಟದ ಹತ್ತಿರ ಮಲಗಿ ನಿದ್ದೆ ಹೊಡೆಯುತ್ತಾರೆ!

ಪರಂಪರಾಗತವಾದ ಎಲ್ಲ ತತ್ವಸಿದ್ಧಾಂತಗಳ ಹಣೆಯಬರಹವೂ ಇಷ್ಟೇ. ಅದರಲ್ಲೂ ಜೀವನದ ಜ್ಞಾನ ಮತ್ತು ಯುಕ್ತಾಯುಕ್ತ ವಿವೇಕ ಹಾಗೂ ಧರ್ಮ ಹೇಳುವ ನೀತಿವಿಚಾರಗಳ ಗತಿಯಂತೂ ರೂಪಾಯಿಯಲ್ಲಿ ಹದಿನಾರಾಣೆ ಹೀಗೇ. ಜೀವನ ಹೇಗಿದೆ, ಅದರಲ್ಲಿ ನಾವು ಹೇಗೆ ನಡೆದುಕೊಳ್ಳಬೇಕು ಎಂಬ ಬಗ್ಗೆ ಎಲ್ಲ ಭಾಷೆ–ಸಾಹಿತ್ಯಗಳಲ್ಲೂ ಎಲ್ಲರಿಗೂ ತಿಳಿದ ಹಲವಾರು ಅರ್ಥಾಂತರನ್ಯಾಸ–ಸಾಮಾನ್ಯಸಿದ್ಧಾಂತಗಳ ಉಲ್ಲೇಖವಿರುತ್ತದೆ ಎಲ್ಲರೂ ಅವನ್ನು ಪುನರುಚ್ಚರಿಸುತ್ತಾರೆ, ಕೇಳಿ ಒಪ್ಪುತ್ತಾರೆ, ಒಪ್ಪಿ ಕೇಳುತ್ತಾರೆ–ಸಿದ್ಧಸತ್ಯಗಳೆಂದು ಎಲ್ಲರೂ ಅವನ್ನು ಗಣಿಸುತ್ತಾರೆ–ಹೀಗಿದ್ದರೂ ಎಷ್ಟೋ ಜನರು ಅನುಭವಕ್ಕೆ ಬಂದಾಗಲೇ ಅವುಗಳ ಅರ್ಥವನ್ನು ಕಷ್ಟಪಟ್ಟು ಕಲಿತುಕೊಳ್ಳುತ್ತಾರೆ. ಎಷ್ಟುಸಲ ಅನಿರೀಕ್ಷಿತ ದೌರ್ಭಾಗ್ಯ ಇಲ್ಲವೆ ನಿರಾಶೆಯಲ್ಲಿ ಸಿಕ್ಕಿ ಬಿದ್ದಾಗ ಒಬ್ಬ ತನ್ನ ಬಾಳಿನ ತುಂಬ ತನಗೆ ಚಿರಪರಿಚಿತವಾಗಿದ್ದ ಸಾಮಾನ್ಯ ಜಾಣ್ನುಡಿಯನ್ನೋ ನಾಣ್ನುಡಿಯನ್ನೋ ನೆನಪು ಮಾಡಿಕೊಳ್ಳುವುದಿಲ್ಲ! ಆಗಿನಂತೆ

ಅದಕ್ಕೆ ಹಿಂದೆ ಅವನು ಅದರ ಅರ್ಥವನ್ನು ಭಾವಿಸಿಕೊಂಡಿದ್ದರೆ ಅಂಥ ದುರ್ಗತಿಯಿಂದ ಅದು ಅವನನ್ನು ಕಾಯದೆ ಉಳಿಯುತ್ತಿತ್ತೆ? ಇದಕ್ಕೆ ಚರ್ಚೆಯ ಅಭಾವವಲ್ಲದೆ ಇತರ ಕಾರಣಗಳೂ ಇವೆ ಎಂಬುದು ನಿಜ; ಎಷ್ಟೋ ಸತ್ಯಗಳು ಸ್ವಾನುಭವ ಉಂಟಾಗದೆ ಅರಗಲಾರವು. ಆದರೆ ಅವನ್ನು ನ್ಯಾಯವಾಗಿ ತಿಳಿದವರು ಪಕ್ಷ–ವಿಪಕ್ಷ ಸ್ಥಾನಗಳಲ್ಲಿ ನಿಂತು ವಾದಿಸುವುದನ್ನು ಕೇಳುವ ರೂಢಿ ಅವನಿಗಿದ್ದಿದ್ದರೆ ಅವುಗಳ ಅರ್ಥ ಮತ್ತಷ್ಟು ತಿಳಿದು ಇನ್ನಷ್ಟು ಆಳವಾಗಿ ಅವನ ಹೃದಯದ ಮೇಲೆ ಅಚ್ಚಾಗಿ ಕುಳಿತುಕೊಳ್ಳುತ್ತಿತ್ತು. ನಿಃಸಂದಿಗ್ಧವೆಂದು ತೋರಿದ ಕೂಡಲೇ ಯಾವುದಾದರೊಂದು ತತ್ವ ಅಥವಾ ನೀತಿಯ ಬಗ್ಗೆ ವಿಚಾರ ಮಾಡುವುದನ್ನು ಬಿಟ್ಟುಕೊಡುವ ಮಾರಕಪ್ರವೃತ್ತಿಯೇ ಮನುಷ್ಯರು ಮಾಡುವ ತಪ್ಪುಗಳಲ್ಲಿ ಅರ್ಧಾಂಶಕ್ಕೆ ಕಾರಣ. "ನಿರ್ಣೀತ ಅಭಿಪ್ರಾಯದ ಸುಷುಪ್ತಿ"ಯ ಬಗ್ಗೆ ಒಬ್ಬ ಬಹಳ ಚೆನ್ನಾಗಿ ಬರೆದಿದ್ದಾನೆ.

ಆದರೆ ಯಾರಾದರೂ ಕೇಳಬಹುದು– ನಿಜಜ್ಞಾನಕ್ಕೆ ಐಕಮತ್ಯದ ಅಭಾವವೇ ನಿಕಷವೇನು? ಯಾವನಿಗಾದರೂ ಸತ್ಯ ಸಾಕ್ಷಾತ್ಕಾರವಾಗಬೇಕಾದರೆ ಮನುಷ್ಯ ಸಮಾಜದ ಯಾವುದಾದರೂ ಒಂದು ಭಾಗ ತಪ್ಪು ಮಾಡುತ್ತಲೇ ಹೋಗುತ್ತಿರಬೇಕೆ? ಎಲ್ಲರೂ ಸಾಮಾನ್ಯವಾಗಿ ಒಪ್ಪಿಕೊಂಡರೆಂದ ಕೂಡಲೆ ಯಾವುದಾದರೊಂದು ನಂಬಿಗೆ ತನ್ನ ಸತ್ಯತೆಯನ್ನೂ ಸಜೀವತೆಯನ್ನೂ ಕಳೆದುಕೊಂಡು ಬಿಡುವುದೇ? ಏನಾದರೊಂದು ಸಂಶಯ ಉಳಿದ ಹೊರತು ಯಾವ ಪ್ರಮೇಯವೇ ಆಗಲಿ, ಜನರಿಂದ ಚೆನ್ನಾಗಿ ಅರ್ಥಮಾಡಿಕೊಳ್ಳಲ್ಪಟ್ಟಿಲ್ಲ– ಅನುಭವಕ್ಕೆ ತಂದುಕೊಳ್ಳಲ್ಪಟ್ಟಿಲ್ಲ ಎನ್ನಬೇಕೆ? ಯಾವುದಾದರೊಂದು ಸತ್ಯವನ್ನು ಮನುವಂಶವು ಏಕಮತದಿಂದ ಸ್ವೀಕರಿಸಿಬಿಟ್ಟಿತೆಂದರೆ ಆ ಸತ್ಯವು ಅವರಲ್ಲೇ ಸತ್ತುಹೋಗಿಬಿಡುವುದೇ? ಸರ್ವ ಪ್ರಮುಖ ಸತ್ಯಗಳನ್ನು ಮನ್ನಿಸುವುದರಲ್ಲಿ ಹೆಚ್ಚುಹೆಚ್ಚಾಗಿ ಮನುಷ್ಯರನ್ನು ಒಂದುಗೂಡಿಸುವುದೇ ಅತ್ಯುನ್ನತ ಧ್ಯೇಯ, ಸುಧಾರಿಸಿದ ಬುದ್ಧಿಯ ಪರಿಣಾಮ– ಎಂದು ಈ ವರೆಗೆ ತಿಳಿದುಕೊಂಡು ಬರಲಾಗಿದೆ; ತನ್ನ ಗುರಿಯನ್ನು ಮುಟ್ಟದೆ ಇರುವ ವರೆಗೆ ಮಾತ್ರ ಬುದ್ಧಿ (ಮೇಧಾಶಕ್ತಿ) ಉಳಿದಿರುವುದೇನು? ವಿಜಯದ ಫಲಗಳು ಅದರ ಪರಿಪೂರ್ಣತೆಯ ಫಲವಾಗಿಯೇ ನಾಶಹೊಂದುವುದೇನು?

ಅಂಥ ಯಾವುದನ್ನೂ ನಾನು ಎತ್ತಿ ಹಿಡಿಯುವವನಲ್ಲ. ಮನುಷ್ಯಕುಲ ಸುಧಾರಿಸುತ್ತ ಹೋದಹಾಗೆ ಸಂದೇಹ– ಭಿನ್ನಾಭಿಪ್ರಾಯಗಳಿಗೆಡೆಗೊಡದ ತತ್ವಗಳ ಸಂಖ್ಯೆ ಸತತವಾಗಿ ಹೆಚ್ಚುತ್ತಹೋಗುವುದು. ಮತ್ತು ಮನುಷ್ಯಕುಲದ ಸುಖಜೀವನವನ್ನು ಚರ್ಚಾಸ್ಪದತೆಗೆಡೆಗೊಡದ ಮಟ್ಟವನ್ನು ಮುಟ್ಟಿದ ಸತ್ಯಗಳ ಸಂಖ್ಯೆ ಹಾಗೂ ಗಾಂಭೀರ್ಯಗಳ ಮೇಲಿಂದ ಅಳೆಯಬಹುದೆಂದರೆ ತಪ್ಪಾಗದು. ಒಂದರ ಮೇಲೊಂದರಂತೆ ಪ್ರಶ್ನೆಗಳು ಗಂಭೀರಚರ್ಚೆಯಿಂದ ಮುಕ್ತವಾಗುತ್ತ ಹೋಗುವುದು, ಅಭಿಪ್ರಾಯಸಮನ್ವಯದ ಅನಿವಾರ್ಯ ಫಲಗಳಲ್ಲೊಂದು. ಅಂಥ ಘನಸಮನ್ವಯವು ಅಸದಭಿಮತವಿದ್ದಾಗ ಎಷ್ಟು ಹಾನಿಕರವೋ ಸದಭಿಪ್ರಾಯವಿದ್ದಾಗ ಅಷ್ಟೇ ಲಾಭಕರ ಆದರೆ ಕ್ರಮಶಃ ಈ ಅಭಿಪ್ರಾಯ

ವೈವಿಧ್ಯದ ಗಡಿಗಳು ಕಿರಿದಾಗುತ್ತ ಹೋಗುವುದು ಪದದ ಎರಡೂ ಅರ್ಥಗಳಲ್ಲಿ ಅವಶ್ಯವಾದರೂ ಅದು ಏಕಕಾಲದಲ್ಲಿ ಅನಿವಾರ್ಯವೂ ಅಪರಿಹಾರ್ಯವೂ ಆಗಿರುವುದರಿಂದ ಅದರ ಪರಿಣಾಮಗಳೆಲ್ಲವೂ ಹಿತಕರ ಎಂದು ನಿಗಮನಿಸಬೇಕೆಂಬ ಒತ್ತಾಯವೇನೂ ಇಲ್ಲ. ವಿವರಣೆಯ ಆವಶ್ಯಕತೆ, ವಿರೋಧಿಗಳೆದುರು ವಾದಿಸಿ ಕಾಯ್ದುಕೊಳ್ಳಬೇಕಾದ ಅಗತ್ಯ– ಇವು ಹೆಚ್ಚು ತೂಕದವಾಗದೆನಿಸಿದರೂ ಸತ್ಯದ ಬುದ್ಧಿಯುಕ್ತವೂ ಸಚೇತನವೂ ಆದ ಗ್ರಹಣಕ್ಕೆ ಅಷ್ಟು ಮುಖ್ಯ ಸಹಾಯಕವೆನಿಸಿದ ಇಂಥ ಸಾಧನಗಳ ನಷ್ಟವು ಅದರ ಸಾರ್ವತ್ರಿಕ ಮನ್ನಣೆಯಲಾಭದೆದುರು ಚಿಕ್ಕಪುಟ್ಟ ಕೊರತೆಯೇನೂ ಅಲ್ಲ. ಈ ಅನುಕೂಲವಿಲ್ಲದಲ್ಲಿ ಅದಕ್ಕೊಂದು ಆದೇಶಾನುಕೂಲವನ್ನು (Substitute) ಮಾನವರ ಗುರುಗಳು ಹೇಗೆ ಒದಗಿಸಲು ಪ್ರಯತ್ನಿಸುವರೆಂಬುದನ್ನು ನಾನಿನ್ನು ನೋಡಬೇಕಾಗಿದೆ ಎಂದು ಒಪ್ಪಿಕೊಳ್ಳುತ್ತೇನೆ. ತನ್ನನ್ನು ಮತಾಂತರಗೊಳಿಸಲು ಲವಲವಿಕೆಯುಳ್ಳ ವಿಪಕ್ಷಧುರೀಣನು ಯಾವನಾದರೊಬ್ಬನ ಮೇಲೆ ಹೇರಬಂದರೆ ಹೇಗೋ ಹಾಗೆ ಕಲಿವವನ ಪ್ರಜ್ಞೆಯೆದುರು ಪ್ರಶ್ನೆಯೊಂದರ ಕಾಠಿನ್ಯಗಳು ಬಂದು ನಿಲ್ಲುವಂತೆ ಯಾವ ಸಾಧನವನ್ನವರು ಕಲ್ಪಿಸಿಕೊಡುವರೆಂಬುದನ್ನು ನಿರೀಕ್ಷಿಸಬೇಕಾಗಿದೆ.

ಆದರೆ ಈ ಉದ್ದೇಶಕ್ಕಾಗಿ ಉಪಾಯ ಯಂತ್ರವನ್ನು ಹುಡುಕುವುದರ ಬದಲು ಮೊದಲಿದ್ದ ಉಪಾಯಗಳನ್ನೇ ಅವರು ಕಳೆದುಕೊಂಡು ಬಿಟ್ಟಿದ್ದಾರೆ ಎನ್ನುತ್ತೇನೆ ನಾನು. ಪ್ಲೇಟೋವಿನ ಸಂವಾದಗಳಲ್ಲಿ ಅಷ್ಟು ವೈಭವಯುಕ್ತವಾಗಿ ಉದಾಹರಿಸಿದ ಸಾಕ್ರೆಟೀಸ್ ವಾದಪದ್ಧತಿಯು ಅಂಥ ಒಂದು ಸಾಧನ. ಮುಖ್ಯವಾಗಿ ಆ ಸಂವಾದಗಳು ತತ್ವಜ್ಞಾನ ಮತ್ತು ಜೀವನಗಳಿಗೆ ಸಂಬಂಧಿಸಿದ ಬೃಹತ್‌ಪ್ರಶ್ನೆಗಳ ನಿಷೇಧಾತ್ಮಕ ಚರ್ಚೆಯ ರೂಪದವು– ನೀತಿವಾದಗಳು. ವಿಷಯಜ್ಞಾನವಿಲ್ಲದೆ, ತಾನು ಸ್ವೀಕರಿಸಿದ ತತ್ವಗಳನ್ನರಿಯದೆ ಗೃಹೀತಾಭಿಪ್ರಾಯಗಳಲ್ಲಿಯ ಸರ್ವಸಾಧಾರಣವಾದವುಗಳನ್ನು ಬರಿದೆ ತೆಗೆದುಕೊಂಡವನಿಗೆ ತತ್ವಾರ್ಥವನ್ನು ಮನಗಾಣಿಸಿಕೊಡಲು ಸಂಪೂರ್ಣ ಚಮತ್ಕಾರದಿಂದ ಹೂಡಿದ ತರ್ಕಬಾಣಗಳವು! ತಾನು ನಂಬಿದ್ದೇನೆಂಬ ತತ್ವಗಳ ಸರಿಯಾದ ಅರ್ಥವನ್ನೇ ಅರಿಯದ ಅಂಥ ರೋಗಿಗೆ ಆ ವಿಧವಾದ ವೈದ್ಯಗಿರಿ ಅಗತ್ಯ. ಆಗ ಅವನಿಗೆ ತನ್ನ ಅಜ್ಞಾನದ ಬಗ್ಗೆ ಜ್ಞಾನವುಂಟಾಗಿ ತಾನು ಸ್ವೀಕರಿಸಿದ ತತ್ವಗಳ ಅರ್ಥದ ಹಾಗೂ ಅವುಗಳ ಆಧಾರತರ್ಕ ಮತ್ತು ಸಾಕ್ಷಿಗಳನ್ನು ಆಧರಿಸಿದ ಸ್ಥಿರ ಶ್ರದ್ಧೆಯನ್ನು ರೂಪಿಸಿಕೊಳ್ಳುವ ಮಾರ್ಗಕ್ಕೊಯ್ದು ಅವನನ್ನು ಬಿಟ್ಟಂತಾಗುತ್ತದೆ. ಮಧ್ಯಯುಗದ ಮತವಾದಗಳು (School disputations) ಅಂಥವೇ ಆಗಿದ್ದವೆನ್ನಬಹುದು– ಗುರಿಯ ದೃಷ್ಟಿಯಿಂದ. ಅವುಗಳಿಂದ ಶಿಷ್ಯನು ತನ್ನ ಅಭಿಪ್ರಾಯವನ್ನರಿತು, ವಿರುದ್ಧಾಭಿಪ್ರಾಯವನ್ನು ಅರ್ಥ ಮಾಡಿಕೊಂಡು, ತನ್ನದರ ಸಮರ್ಥನೆ ಮತ್ತು ವಿರುದ್ಧ ಮತದ ಖಂಡನೆಗಳನ್ನು ಮಾಡಲು ಶಕ್ತನಾಗುತ್ತಿದ್ದನು ಎಂದು ಭಾವಿಸಲಾಗುತ್ತಿತ್ತು. ಈ ಚರ್ಚಾಸ್ಪರ್ಧೆಗಳಲ್ಲಿ ಒಂದೇ ಒಂದು ಗುಣಪಡಿಸಲಾರದ ನ್ಯೂನತೆಯಿತ್ತು: ಅದೆಂದರೆ ಎಲ್ಲ ಚರ್ಚೆಯಲ್ಲೂ ಶಾಸ್ತ್ರಪ್ರಾಧಿಕಾರವೇ ಪ್ರಮಾಣ–

ಪರಮ ಪ್ರಮಾಣ ಎಂದು ನಂಬಲಾಗುತ್ತಿತ್ತಲ್ಲದೆ, ಅನುಮಾನ (Inference) ಪರಮಪ್ರಮಾಣ ಎಂದಲ್ಲ. ಆದುದರಿಂದ ಸಾಕ್ರೆಟೀಸೀಯನ ಮನಸ್ಸಿಗೆ ದೊರಕುವ ಆ ಸಮರ್ಥ ತರ್ಕವಾದಗಳ ಸಂಸ್ಕಾರ ಈ ಮತಶಿಷ್ಯನಿಗೆ ದೊರಕುತ್ತಿದ್ದಿಲ್ಲ. ಆದರೆ ಆಧುನಿಕರಾದ ನಮ್ಮ ಮನಸ್ಸಿನ ಸಂಸ್ಕಾರವು ಈ ಎರಡೂ ಪದ್ಧತಿಗಳಿಂದ ಲಬ್ಧವಾದದ್ದು– ಬಹಳಮಟ್ಟಿಗೆ. ಇಂದಿನ ಶಿಕ್ಷಣಪದ್ಧತಿಯಲ್ಲೋ ಈ ಎರಡೂ ಪದ್ಧತಿಯ ಯಾವ ಅಂಶವೂ ಇಲ್ಲ!*

ಶಿಕ್ಷಕ ಅಥವಾ ಪುಸ್ತಕಗಳಿಂದಷ್ಟೇ ಪಾಠ ಕಲಿಯುವ ಮನುಷ್ಯ (ಉರುಹೊಡೆದು ಪಾಸಾಗುವ ಸುಲಭೋಪಾಯದ ಆಮಿಷಕ್ಕೆ ಬಲಿಬೀಳದೆ ಇದ್ದಾಗಲೂ ಉಭಯಪಕ್ಷಗಳ ವಾದಗಳನ್ನು ಕೇಳುವ ಒತ್ತಾಯಕ್ಕೊಳಪಡುವುದಿಲ್ಲ. ತತ್ಫಲವಾಗಿ ಈಗ ಚಿಂತಕರಲ್ಲಿ ಕೂಡ ಅನೇಕರು ಉಭಯಪಕ್ಷಜ್ಞರಾಗಿರುವುದಿಲ್ಲ. **ತನ್ನ ಅಭಿಪ್ರಾಯದ ಸಮರ್ಥನೆಗಾಗಿ ಒಬ್ಬ ಹೇಳುವ ಅತ್ಯಂತ ದುರ್ಬಲ ಭಾಗವು ಆತ ಎದುರುವಾದಿಗೆ ಕೊಡುವ ಉತ್ತರವೆಂದು ಬಯಸಿರುವ ಅಂಶವಾಗಿರುತ್ತದೆ.** ವಿಧಾಯಕವಾದ (Positive) ಯಾವ ಸತ್ಯಗಳನ್ನೂ ಸಂಸ್ಥಾಪಿಸದೆ ವಿಚಾರದ ದೌರ್ಬಲ್ಯವನ್ನಾಗಲಿ, ಆಚಾರದ ತಪ್ಪು–ತಡೆಗಳನ್ನಾಗಲಿ ತೋರಿಸಿಕೊಡುವ ನಿಷೇಧಕ (Negative)ವಾದ ವಿತಂಡವನ್ನು ಹೀಗಳೆಯುವುದು ಇಂದು ಫ್ಯಾಶನ್ನಾಗಿಬಿಟ್ಟಿದೆ ಆತ್ಯಂತಿಕ ಪರಿಣಾಮ ಸ್ಥಾಪನೆಯ ದೃಷ್ಟಿಯಲ್ಲಿ ಅಂಥ ನೇತಿವಾದ (Negetive Criticism) ದುರ್ಬಲವೆಂಬುದೇನೋ ನಿಜ; ಆದರೆ ವಿಧಾಯಕವಾದ ಯಾವುದಾದರೂ ಒಂದು ನಿಜವಾದ ಜ್ಞಾನವನ್ನೋ ವಿಚಾರಬದ್ಧಶ್ರದ್ಧೆಯನ್ನೋ (Conviction) ಮುಟ್ಟುವ ಸಾಧನದ ರೂಪದಲ್ಲಿ ಅದಕ್ಕಿರುವ ಬೆಲೆ ಅಷ್ಟಿಷ್ಟಲ್ಲ. ಈ ವಾದದಲ್ಲಿ ಕ್ರಮಬದ್ಧವಾಗಿ ಪುನಃ ಜನರು ತರಬೇತು ಪಡೆಯದೆ ಹೋದರೆ–ಗಣಿತ–ಭೌತಶಾಸ್ತ್ರಗಳನ್ನು ಬಿಟ್ಟರೆ– ಮಿಕ್ಕ ಜ್ಞಾನಕ್ಷೇತ್ರಗಳಲ್ಲಿ ಅತಿ ಸ್ವಲ್ಪ ಚಿಂತಕರುಳಿದಾರು ಮತ್ತು ಸಾಮಾನ್ಯವಾಗಿ ಕೆಳಮಟ್ಟದ ಬುದ್ಧಿ ಮತ್ತೆ ಎಲ್ಲೆಲ್ಲೂ ಕಂಡುಬರುವಂತಾದೀತು. ಬಲಾತ್ಕಾರದಿಂದಲಾದರೂ ವಾದ ಶಕ್ತಿಯನ್ನು ಕಲಿತು ಬೆಳೆಸಿಕೊಂಡಿರುವವರನ್ನುಳಿದು, ಮಿಕ್ಕವರು ವಿವಿಧ ವಿಷಯಗಳ ಬಗ್ಗೆ ತಾಳಿರುವ ಅಭಿಪ್ರಾಯಗಳನ್ನೂ 'ಜ್ಞಾನ' ಎಂದು ಕರೆಯಲು ಸಾಧ್ಯವಿಲ್ಲ. ಆದುದರಿಂದ ತಾನೇ ತಾನಾಗಿ ನಮ್ಮೆದುರು ದೊರೆವಾಗ– ಯಾವುದು ತನ್ನ ಅಭಾವದಶೆಯಲ್ಲಿ ನಮಗೆ ಅಪರಿಹಾರ್ಯವೆನಿಸುವುದೋ ಯಾವುದನ್ನು ನಿರ್ಮಿಸಲು ಅತ್ಯಂತ ಕಠಿನವೆನಿಸುವುದೋ ಅಂಥ ವಿತಂಡಕಲೆಯನ್ನು ಪರಿತ್ಯಜಿಸುವುದು ಹಾಸ್ಯಾಸ್ಪದ. ಗೃಹೀತಾಭಿಪ್ರಾಯವೊಂದನ್ನು ಪ್ರಶ್ನಿಸುವವರಿದ್ದರೆ, ಕಾಯದೆ ಹಾಗೂ ಲೋಕಮತಗಳ ಅನುಮತಿಯಿದ್ದಾಗಲಾದರೂ ಹಾಗೆ ಸವಾಲು ಮಾಡುವವರಿದ್ದರೆ– ಅದಕ್ಕಾಗಿ ನಾವವರನ್ನು ಅಭಿನಂದಿಸೋಣ. ಅವರೆನ್ನುವುದನ್ನು ಲಕ್ಷ್ಯಗೊಟ್ಟು ಕೇಳಲು ಮನಸ್ಸನ್ನು ತೆರೆಯೋಣ; ನಾನೇ

---

* ಇಂದೂ ಭಾರತದಲ್ಲೂ ಈ ಮಾತು ಸತ್ಯ – ಅನುವಾದಕ

ಮಾಡಬೇಕಾಗಿದ್ದುದನ್ನು ಇವರಾದರೂ ನಮಗಾಗಿ ಮಾಡಿಕೊಡುತ್ತಿದ್ದಾರಲ್ಲಾ ಎಂದು ಸಂತೋಷಪಡೋಣ. ಏಕೆಂದರೆ, ಇವರ ವಿರೋಧ ಬಂದರಲ್ಲವೆ ನಮ್ಮ ಸತ್ಯಶ್ರದ್ಧೆಗಳ (Conviction) ನಿಶ್ಚಿತತೆ ಹಾಗೂ ಪ್ರಮುಖತೆಗಳು ಸುಪರೀಕ್ಷಿತವಾಗಿ, ಅವನ್ನು ಸುದೃಢಗೊಳಿಸಲು ನಮಗೆ ಶ್ರಮಿಸುವ ಪ್ರೇರಣೆ ದೊರಕುವುದು?

ಅಭಿಪ್ರಾಯವೈವಿಧ್ಯವು ಲಾಭಕರ ಎಂಬ ವಿಷಯದಲ್ಲಿ ಇನ್ನೂ ಒಂದು ಕಾರಣವನ್ನು ಕೊಡಬೇಕಾಗಿದೆ. ಮನುಕುಲವಿನ್ನೂ ಬೌದ್ಧಿಕ ಸುಧಾರಣೆಯ ಆದರ್ಶಮಟ್ಟಕ್ಕೆ ಬಹಳ ದೂರದಲ್ಲಿದೆ. ಆ ಎತ್ತರವನ್ನು ಮುಟ್ಟುವವರೆಗೂ ಮತಭೇದವು (ಆ ಸಿದ್ಧಿಯ ಸಾಧನೆಯಲ್ಲಿ) ಉಪಕಾರಿಯಾಗಿಯೇ ಉಳಿಯುವುದು. ಈವರೆಗೆ ನಾವು ಎರಡೇ ಸಾಧ್ಯತೆಗಳನ್ನು ಪರಾಂಬರಿಸಿದೆವು. ಗೃಹೀತ ಅಥವಾ ಸ್ವೀಕೃತ ಅಭಿಪ್ರಾಯವೊಂದು ಸುಳ್ಳಾಗಿರಬಹುದು, ತತ್ಫಲವಾಗಿ ಇನ್ನಾವುದಾದರೊಂದು ಅಭಿಪ್ರಾಯವು ಸತ್ಯವಾಗಿರಬಹುದು; ಅಥವಾ ಗೃಹೀತಾಭಿಪ್ರಾಯವೊಂದು ಸತ್ಯವಾಗಿರಬಹುದು– ಆಗಲೂ ತದ್ವಿರುದ್ಧವಾಗಿ ನಿಲ್ಲುವ ಅಸತ್ಯಾಭಿಪ್ರಾಯದೊಡನೆ ಹೋರಾಡುವುದು ಅದರ ಸ್ಫುಟಗ್ರಹಣ ಮತ್ತು ಅದರ ಸಾರ ಗಂಭೀರ ಭಾವನೆಗಳನ್ನು ಮಾಡಿಕೊಳ್ಳಲು ಅತ್ಯಗತ್ಯ. ಆದರೆ ಎರಡಕ್ಕೂ ಮೀರಿದ ಸಾಮಾನ್ಯತರವಾದ ಪ್ರಕರಣ ಇನ್ನೊಂದಿದೆ: ವಿರುದ್ಧ ತತ್ವಗಳಲ್ಲಿ ಒಂದು ಸತ್ಯ ಇನ್ನೊಂದು ಸುಳ್ಳು ಎಂಬ ಪರಿಸ್ಥಿತಿಗೆ ಬದಲು ಅವೆರಡರಲ್ಲೂ ಸತ್ಯವು ಹೋಳಾಗಿ ಹೋಗಿದೆ ಎಂದಿಟ್ಟುಕೊಳ್ಳಿ. ಆಗ ಅರೆನನ್ನಿವೆತ್ತ ಗೃಹೀತಾಭಿಪ್ರಾಯಕ್ಕೆ ಮಿಕ್ಕ ಅರೆವಾಸಿ ನನ್ನಿಯನ್ನು ತುಂಬಿಕೊಡಲು ವಿರುದ್ಧಾಭಿಪ್ರಾಯವು ಬೇಕೇ ಬೇಕಲ್ಲವೆ? ಪ್ರತ್ಯಕ್ಷ ಗೋಚರವಲ್ಲದ ವಿಷಯಗಳ ಮೇಲಿನ ಜನಜನಿತ ಅಭಿಪ್ರಾಯಗಳು ಎಷ್ಟೋ ವೇಳೆ ಋತವಾಗಿರುತ್ತವೆ; ಆದರೆ ಅವೆಂದೂ ಪೂರ್ಣ ಸತ್ಯಗಳಾಗಿರುವುದು ಇಲ್ಲವೇ ಇಲ್ಲ ಎನ್ನಬಹುದು. ಅವು ಸತ್ಯಾಂಶಗಳು– ಕೆಲವೆಡೆ ದೊಡ್ಡ ಅಂಶವಾಗಿದ್ದರೆ ಬೇರೆಯ ಕಡೆ ಸಣ್ಣ ಅಂಶವಾಗಿರುತ್ತವೆ. ಆದರವನ್ನು ಅತಿಶಯಿಸಿ, ವಿಕೃತಗೊಳಿಸಿದ್ದಲ್ಲದೆ, ಅವಕ್ಕೆ ಉಪಾಧಾತಕಗಳಾಗಿ (Limiting Ajuncts) ಹಿಂಬಾಲಿಸಬೇಕಾದ ಸತ್ಯಗಳಿಂದ ವಿಯುಕ್ತಗೊಳಿಸಿ ಹೇಳಲಾಗಿರುತ್ತದೆ. ಇದಕ್ಕೆ ಪ್ರತಿಯಾಗಿ– ಪಾಖಂಡಿ ಅಥವಾ ಧರ್ಮದ್ರೋಹಿಗಳ ಅಭಿಪ್ರಾಯಗಳೆಂದರೆ ಸಾಮಾನ್ಯವಾಗಿ ದಮಿತ ಮತ್ತು ಅಲಕ್ಷಿತವಾಗಿ ಉಳಿದಿರುವ ಈ ಉಪಾಧಿಸತ್ಯಗಳೇ: ಇವು ಕೆಲವೊಮ್ಮೆ ತಮ್ಮನ್ನು ಬಂಧಿಸಿಟ್ಟ ಉಪಾಧಿಬಂಧವನ್ನು ಹರಿದೊಗೆಯಲು ಯತ್ನಿಸುತ್ತಿರುತ್ತವೆ; ಮತ್ತೆ ಕೆಲವೊಮ್ಮೆ ಸಾಮಾನ್ಯಾಭಿಪ್ರಾಯದಲ್ಲಿ ಗರ್ಭಿತವಾದ ಸತ್ಯದೊಡನೆ ಹೊಂದಿಕೊಳ್ಳಲು ಬಯಸುತ್ತಿರುತ್ತವೆ; ಇನ್ನು ಕೆಲವೊಮ್ಮೆ ವೈರಿಗಳಂತೆ ಅದನ್ನು ಪ್ರತಿಭಟಿಸುತ್ತಿರುತ್ತವೆ– ಹಾಗೂ ಅದರಷ್ಟೇ ಪ್ರತ್ಯೇಕತಾ ಭಾವದಿಂದ ತಾವೇ ಪೂರ್ಣ ಸತ್ಯವೆಂದು ಅದರಿಂದ ದೂರ ಸಿಡಿದು ನಿಂತಿರುತ್ತವೆ. ಮೇಲಿನ ಮಾತಿನ ಉತ್ತರಾರ್ಧವನ್ನು ನಾವು ಜಗತ್ತಿನಲ್ಲಿ ಪದೇ ಪದೇ ನೋಡಬಹುದು: ಮನುಷ್ಯನ ಮನಸ್ಸು ಏಕಮುಖವಾಗಿ ಹರಿಯುವುದು ಉತ್ಸರ್ಗ; ಬಹುಮುಖವಾಗಿ ಅದು

ಹರಿಯುವುದು ಅಪವಾದ! ಆದುದರಿಂದ ಅಭಿಪ್ರಾಯದ ಕ್ರಾಂತಿಯಲ್ಲಿ (Revolution) ಕೂಡ ಸತ್ಯದ ಒಂದುಭಾಗ ಅಸ್ತವಾಗುತ್ತದೆ, ಮತ್ತೊಂದು ಉದಯವಾಗುತ್ತದೆ. ಪ್ರಗತಿ ಸಹ (ಅದು ಇದ್ದದ್ದಕ್ಕೆ ಹೊಸದನ್ನು ಸೇರಿಸುವ ಕಾರ್ಯವನ್ನು ಮಾಡಬೇಕಾಗಿದ್ದರೂ) ಬಹಳ ಸಲ ಒಂದು ಅರೆನನ್ನಿಗೆ ಬದಲಾಗಿ ಇನ್ನೊಂದು ಅರೆನನ್ನಿಯನ್ನು ತಂದಿಡುತ್ತದೆ ಇಲ್ಲಿ ಆಗುವ ಲಾಭದ ಸ್ವರೂಪವೇನಂದರೆ, ಹೊಸದಾಗಿ ತಂದಿಟ್ಟ ಸತ್ಯಭಾಗವು ತತ್ಕಾಲಕ್ಕೆ ಹೆಚ್ಚು ಅಪೇಕ್ಷಿತ, ಹೆಚ್ಚು ಯುಕ್ತ; ಆದ್ದರಿಂದ ಅದು ಹಳೆಯ ಸತ್ಯ ಭಾಗವನ್ನು ಓಡಿಸಿದ್ದು ಉಪಕಾರವಾಗಿ ತೋರುತ್ತದೆ. ಪ್ರಚಲಿತ ಅಭಿಪ್ರಾಯಗಳ ಲಕ್ಷಣವು ಹೀಗೆ ಪಾಕ್ಷಿಕ (Partial) ಎನಿಸಿರುವಾಗ – ಒಮ್ಮೆ ಸತ್ಯವಾದ ತಳಹದಿಯ ಮೇಲೆ ನಿಂತಿದ್ದರೂ ಜನಜನಿತಾಭಿಪ್ರಾಯವು ಬಿಟ್ಟುಕೊಟ್ಟಿರುವ ಸತ್ಯಾಂಶವನ್ನು ಸಾಮಾನ್ಯ ರೂಪದಲ್ಲಿ ಬಿಂಬಿಸುವ ಪ್ರತಿಯೊಂದು ಅಭಿಪ್ರಾಯವೂ (ಅದೆಷ್ಟೇ ಸದೋಷವೂ ಗೊಂದಲವುಂಟುವಮಾಡುವಂಥದೂ ಆಗಿದ್ದರೂ) ಅಮೂಲ್ಯವಾದುದೆಂದು ತಿಳಿಯಬೇಕು. ಅವರಿಲ್ಲದಿದ್ದರೆ ನಾವು ಅಲಕ್ಷಿಸುತ್ತಿದ್ದ ಸತ್ಯಗಳನ್ನು ನಮ್ಮೆದುರು ಆಗ್ರಹದಿಂದ ತೂರುವ ಜನರು ನಾವು ಕಂಡ ಕೆಲವನ್ನು ಅಲಕ್ಷಿಸುತ್ತಾರೆಂದು ಅವರ ಮೇಲೆ ಮಾನವ ವ್ಯವಹಾರದ ಯೋಗ್ಯತೆಯನ್ನಳೆಯಲು ನಿಂತ ಯಾವ ವಿವೇಕಿಯೂ ಸಿಟ್ಟಾಗಲಾರ. ಅದಕ್ಕೆ ಬದಲಾಗಿ, ಲೋಕಮತವೆಂಬುದು ಏಕಪಕ್ಷೀಯ ಸ್ವರೂಪದ್ದಾಗಿರುವ ತನಕ ('ನಿಂದಕರಿರಬೇಕಿರಬೇಕು' ಎಂದು ಪುರಂದರದಾಸರೆಂದಂತೆ) ವಿರುದ್ಧ ಪಕ್ಷವನ್ನು ಮಂಡಿಸುವವರು ಇಲ್ಲದೆ ಇರುವುದಕ್ಕಿಂತ ಇರುವುದೇ ಲೇಸು; ಜನಪ್ರಿಯ ಅಭಿಪ್ರಾಯಕ್ಕೆ ಏಕಪಕ್ಷೀಯ ಪ್ರತಿಪಾದಕರಷ್ಟೇ ಇದ್ದು ಪ್ರತಿಪಕ್ಷೀಯರಿಲ್ಲದೆ ಹೋದರೆ ಲೋಕಮತೀಯರು ಒಲ್ಲದವರನ್ನು ಸಹ ಸಮರ್ಥರೀತಿಯಿಂದ ಒತ್ತಾಯ ತಂದು ಉನ್ಮುಖಗೊಳಿಸಿ, ಅವರೆದುರು ತಮ್ಮ ಕಡ್ಡಿಯಷ್ಟು ಸತ್ಯವನ್ನು ಗುಡ್ಡವನ್ನಾಗಿ ಮಾಡಿ ಹೇಳದೆ ಉಳಿಯಲಾರರು– ಎಂದು ಅಂಥ ವಿವೇಕಿಯು ತಿಳಿಯುವುದು ಸಹಜ.

ಹೀಗೆ ಹದಿನೆಂಟನೆಯ ಶತಮಾನದಲ್ಲಿ ಶಿಕ್ಷಿತರೂ ಅವರ ಅನುಯಾಯಿಗಳಾದ ಅಶಿಕ್ಷಿತರೂ ಸೇರಿ 'ನಾಗರಿಕತೆ' ಎಂದು ಕರೆಯಲ್ಪಡುವ ಪದಾರ್ಥವನ್ನೂ ಆಧುನಿಕ ವಿಜ್ಞಾನ–ಸಾಹಿತ್ಯ–ತತ್ವಜ್ಞಾನಗಳ ಅದ್ಭುತಸಿದ್ಧಿಗಳನ್ನೂ ಮನವಾರೆ ಮೆಚ್ಚಿ, ಹಳಬರಿಗೂ ಹೊಸಬರಿಗೂ ಇರುವ ಅಲ್ಪ ಅಂತರವನ್ನು ಮಹತ್ತೆಂದು ಭಾವಿಸಿ, ಆ ಎಲ್ಲ ಅಂತರವೂ ತಮ್ಮ ಯೋಗ್ಯತೆಯನ್ನು ಹೆಚ್ಚಿಸಲು ಅನುಕೂಲವಾಗಿದೆ ಎಂದು ನಂಬಿಬಿಟ್ಟರು!* ರೂಸೋವಿನ ವಿರೋಧಾಭಾಸಗಳು ಎಂಥ ಶುಭೋತ್ಕಂಪದೊಡನೆ ಬಾಂಬಿನಂತೆ ನಡುವೆ ಸಿಡಿದು, ಏಕಪಕ್ಷೀಯ ಅಭಿಪ್ರಾಯದ ಘನೀಭೂತ ಮಹಾರಾಶಿಯನ್ನು ದಿಕ್ಕಾಪಾಲಾಗಿ ಚದುರಿಸಿ, ವಿಶೇಷ ಸಾಮಗ್ರಿಗಳನ್ನು ಸೇರಿಸಿಕೊಂಡು ಅದು ತನ್ನ ಅಂಶಗಳನ್ನು ಇನ್ನೂ ಉತ್ತಮ ರೀತಿಯಿಂದ ಕೂಡಿಸಿಕೊಳ್ಳುವಂತೆ ಬಲವಂತ

---

* ಇಂಥ ಚಿತ್ರವನ್ನಿಂದು ಭಾರತದಲ್ಲೂ ಕಾಣಬಹುದು. – ಅನುವಾದಕ

ಮಾಡುತ್ತದೆ! ಹೀಗೆಂದ ಕೂಡಲೆ ಪ್ರಚಲಿತಾಭಿಪ್ರಾಯಗಳೆಲ್ಲಾ ಒಟ್ಟಿನಲ್ಲಿ ರೂಸೋವಿನ ಅಭಿಪ್ರಾಯಗಳಿಗಿಂತ ಬಹಳ ಮಟ್ಟಿಗೆ ಸತ್ಯದಿಂದ ದೂರವಾಗಿವೆ ಎಂದು ಯಾರೂ ತಿಳಿದುಕೊಳ್ಳಕೂಡದು. ಅದಕ್ಕೆ ಪ್ರತಿಯಾಗಿ ಅವು ಸತ್ಯಕ್ಕೆ ಸಮೀಪವಾಗಿಯೇ ಇವೆ; ಅವುಗಳಲ್ಲಿ ತಪ್ಪುಗಳಿಗಿಂತ ಹೆಚ್ಚಾಗಿ ವಿಧಾಯಕ ಸತ್ಯಾಂಶಗಳೇ ತುಂಬಿವೆ. ಹೀಗಿದ್ದರೂ ರೂಸೋವಿನ ತತ್ವ ಸಿದ್ಧಾಂತದಲ್ಲಿಯೂ ಅವನ ಅನುಯಾಯಿಗಳ ಮಾತಿನಲ್ಲಿಯೂ ಜನಾಭಿಪ್ರಾಯವು ತುಂಬಿಕೊಳ್ಳಬೇಕಾದ ಕೆಲ ಸತ್ಯಗಳಿದ್ದವು; ಆ ಪಕ್ಷದವರ ಅಭಿಪ್ರಾಯದ ಮಹಾಪ್ರವಾಹವು ಸಮಪ್ರವಾಹದ ಮಟ್ಟಕ್ಕಿಳಿದ ಬಳಿಕ ಉಳಿದ ತವ ನಿಧಿಗಳಿವು. ರೂಸೋ ತನ್ನ ಸಿದ್ಧಾಂತವನ್ನು ಬರೆದಂದಿನಿಂದ ಇಂದಿನವರೆಗೂ ನರವನ್ನು ನೀರುಮಾಡುವ, ನೀತಿಪತನಹೇತುವಾದ ಕೃತಕಸಮಾಜದ ಜಟಿಲಜಾಲ ಮತ್ತು ಕಪಟನಾಟಕಗಳಿಗಿಂತ ಸರಳ ಜೀವನವೇ ಉತ್ತಮ ಎಂಬ ಕಲ್ಪನೆಯು ಸಂಸ್ಕೃತರ ಮನಸ್ಸನ್ನು ಬಿಟ್ಟು ಹೋಗಿಲ್ಲ. ಇಂಥ ಕಲ್ಪನೆಗಳು ತಕ್ಕ ಕಾಲ ಬಂದಾಗ ಯುಕ್ತ ಪರಿಣಾಮವನ್ನು ಉಂಟುಮಾಡಿಯೇ ತೀರುವುವು– ಈಗೇನೋ ಅಂದಿನಂತೆಯೇ ಕಾರ್ಯರೂಪದಲ್ಲಿ ಸಾರಿ ಸಾರಿ ಹೇಳಬೇಕಾಗಿದೆ; ಏಕೆಂದರೆ ಈ ವಿಷಯವನ್ನು ವಿವರಿಸಹೊರಟ ಮಾತುಗಳಿಂದು ಸೋತು, ಸುಸ್ತಾಗಿ, ನಿರ್ವೀರ್ಯತೆಗಿಳಿದಿವೆ.

ಮತ್ತೆ ನೋಡಹೋದರೆ– ರಾಜಕೀಯರಂಗದಲ್ಲಿ ಗತಿಸ್ಥಾಪಕ ಪಕ್ಷ (A party of order and stability) ಮತ್ತು ಪ್ರಗತಿಶೀಲ ಇಲ್ಲವೆ ಸುಧಾರಕಪಕ್ಷ ಎಂದು ಇಬ್ಬಗೆಯಿರುವುದಿಂದು ಅತ್ಯಂತ ಸಾಮಾನ್ಯವಾಗಿ ಬಿಟ್ಟಿದೆ. ರಾಜಕೀಯ ಜೀವನವು ಅರೋಗವಾಗಿರಬೇಕಾದರೆ ಈ ಇಬ್ಬಣಗಳೂ ಅಗತ್ಯ– ಆದರೆ ಈ ಎರಡರಲ್ಲೊಂದು ತನ್ನ ಮಾನಸವ್ಯಾಪ್ತಿಯನ್ನು ಬಹಳವಾಗಿ ಬೆಳೆಸಿಕೊಂಡು, 'ಇದು ಉಳಿಸಿಕೊಳ್ಳತಕ್ಕದ್ದು. ಇದು ಅಳಿಸಿಬಿಡತಕ್ಕದ್ದು' ಎಂಬೀ ನಿತ್ಯಾನಿತ್ಯವಸ್ತುವಿವೇಕದಿಂದೊಡಗೂಡಿ, ಗತಿ–ಪ್ರಗತಿಗಳೆರಡನ್ನೂ (Order and Progress) ನಡೆಸಿಕೊಂಡು ಹೋಗುವ ಯೋಗ್ಯತೆಗೇರಿದಾಗ ಮಾತ್ರ ಎರಡು ಪಕ್ಷಗಳು ಅಗತ್ಯವಿಲ್ಲ, ಅಂಥ ಯೋಗ್ಯತಾಸಂಪನ್ನವಾದ ಒಂದೇ ಪಕ್ಷವಿದ್ದರೆ ಸಾಕು. ಈ ಎರಡು ವಿಚಾರಸರಣಿಗಳಲ್ಲಿ ಪ್ರತಿಯೊಂದೂ ಇನ್ನೊಂದರ ಕೊರತೆಗಳಿಂದ ತನ್ನ ಉಪಯುಕ್ತತೆಯನ್ನು ಪಡೆಯುತ್ತದೆ; ಆದರೆ ಬಹಳ ಮಟ್ಟಿಗೆ ಒಂದರ ವಿರೋಧವೇ ಇನ್ನೊಂದನ್ನು ವಿಚಾರ ಮತ್ತು ವಿವೇಕಗಳ ಗಡಿಯಿಂದ ಹೊರಗೆ ಹೋಗದಂತೆ ನೋಡಿಕೊಳ್ಳುತ್ತದೆ. ಪ್ರಜಾಪ್ರಭುತ್ವ–ಕುಬೇರ ಸತ್ತೆ, ಆಸ್ತಿವಂತಿಕೆ–ಸಮತೆ (Equality), ಸಹಕಾರ–ಸ್ಪರ್ಧೆ, ರಾಜವೈಭವ ಜೀವನ–ತಾಪಸವೃತ್ತಿ, ಸಾಮಾಜಿಕತೆ (Sociality) – ವೈಯಕ್ತಿಕತೆ (Individuality), ಸ್ವಾತಂತ್ರ್ಯ–ಶಿಸ್ತು (Liberty and discipline) ಮತ್ತು ಇತರ ಎಲ್ಲಾ ವ್ಯಾವಹಾರಿಕ ವಿರುದ್ಧ ಧರ್ಮಗಳಿಗೆ ಅನುಕೂಲವಾದ ಅಭಿಪ್ರಾಯಗಳು ಸಮಪ್ರಮಾಣದ ಅನಿರ್ಬಂಧದಿಂದ ಪ್ರಕಟವಾಗದೆ, ಸಮಪ್ರಮಾಣದ ಪ್ರತಿಭೆ–ಸಾಮರ್ಥ್ಯಗಳಿಂದ ಜಾರಿಗೆ ತರದೆ ಮತ್ತು ವಾದಬಲದಿಂದ ರಕ್ಷಿತವಾಗದೆ ಉಳಿದರೆ ಈ ಎರಡೂ ಅಂಶಗಳಿಗೆ

ತಕ್ಕ ನ್ಯಾಯ ದೊರಕುವ ಅವಕಾಶ ಎಂದೂ ಬರಲಾರದು; ಒಂದು ತಟ್ಟೆ ಏರಿದರೆ ತಕ್ಕಡಿಯ ಇನ್ನೊಂದು ತಟ್ಟೆ ಇಳಿಯುವ ಸಂದರ್ಭ ಉಂಟಾಗದೆ ಎಂದೂ ಉಳಿಯಲಾರದು. ಬಾಳಿನ ವ್ಯವಹಾರದ ಮಹಾಕ್ಷೇತ್ರಗಳಲ್ಲಿ ಸತ್ಯವಿರುವುದು ವಿರುದ್ಧಗಳ ಸಮನ್ವಯದಲ್ಲೇ (Reconciling and combining of opposites). ಈ ಹೊಂದಿಕೆಯನ್ನು ಆದಷ್ಟು ಮಟ್ಟಿಗೆ ಸರಿಯಾಗಿ ಸಾಧಿಸಲು ಬೇಕಾದ ಸಾಮರ್ಥ್ಯವಾಗಲಿ, ನಿಷ್ಪಕ್ಷಪಾತಶೀಲವಾಗಲಿ ಕಂಡು ಬರುವುದು ಬಹಳ ಸ್ವಲ್ಪ ಜನರಲ್ಲಿ. ಅಂಥ ಸಿದ್ಧಿಯನ್ನು ಪಡೆಯಬೇಕಾದರೆ ವಿರುದ್ಧ ಧ್ವಜಗಳ ಆಶ್ರಯದಲ್ಲಿ ಯುದ್ಧ ಮಾಡುವ ಯೋಧರ ಹೋರಾಟ ರೂಪದ ಒರಟು ಕೆಲಸ ಮಾಡಬೇಕು! ಮೇಲೆ ಹೇಳಿದ ದ್ವಂದ್ವದ ಯಾವ ಅಂಗವನ್ನು ಸಹನೆಯಿಂದ ನೋಡಬೇಕು, ಪ್ರೋತ್ಸಾಹಿಸಬೇಕು, ಸ್ಯಾಂಕ್ಷನ್ ಮಾಡಬೇಕು ಎಂದು ಕೇಳಿದರೆ– ಯಾವ ಕಾಲದಲ್ಲಿ, ಯಾವ ದೇಶದಲ್ಲಿ ಅವೆರಡರಲ್ಲಿ ಯಾವುದು ಅಲ್ಪಮತವಾಗಿರುತ್ತದೆಯೋ ಅದನ್ನು ಎನ್ನುತ್ತೇನೆ. ಅಲಕ್ಷಿತ ಹಿತಾರ್ಥಗಳನ್ನು ಪ್ರತಿನಿಧಿಸುವ ತಾತ್ಕಾಲಿಕ ಅಭಿಪ್ರಾಯ ಇದೇ; ತನ್ನ ಪಾತ್ರತೆಗಿಂತ ಕಡಿಮೆ ನ್ಯಾಯವನ್ನು ಪಡೆಯುತ್ತಿರುವ ಮಾನವ್ಯ ಯೋಗಕ್ಷೇಮದ ಮಗ್ಗುಲನ್ನು ಎತ್ತಿ ಹಿಡಿಯುವ ನೀತಿ ಇದೇ. ಉಕ್ತ ವಿಷಯಗಳಲ್ಲಿ ಹೆಚ್ಚಿನವುಗಳ ಮೇಲೆ ಭಿನ್ನಾಭಿಪ್ರಾಯಾಸಹಿಷ್ಣುತೆ ಈ ದೇಶದಲ್ಲಿಲ್ಲ ಎಂಬುದನ್ನು ನಾನು ಬಲ್ಲೆ. ಮಾನವನ ಮೇಧಾಶಕ್ತಿಯ ಇಂದಿನ ಮಟ್ಟದಲ್ಲಿ ಅಭಿಪ್ರಾಯವೈವಿಧ್ಯದ ಮೂಲಕ ಮಾತ್ರ ಸತ್ಯದ ಎಲ್ಲ ಮುಖಗಳಿಗೂ ನ್ಯಾಯವನ್ನು ದೊರಕಿಸಿಕೊಡಲು ಸಾಧ್ಯ ಎಂಬ ವಸ್ತುಸ್ಥಿತಿಯ ವಿಶ್ವವ್ಯಾಪಕತೆಯನ್ನು ಅನುಮತವೂ ಗುಣಿತವೂ ಆದ ಉದಾಹರಣೆಗಳೊಡನೆ ತೋರಿಸಿಕೊಡಲೆಂದು ಆ ವಿಷಯಗಳನ್ನು ಎತ್ತಿ ಹೇಳಿದ್ದು. ಯಾವುದಾದರೂ ಒಂದು ವಿಷಯದ ಬಗ್ಗೆ ಇಡಿ ಜಗತ್ತೇ ಏಕಾಭಿಪ್ರಾಯವುಳ್ಳದ್ದಾಗಿದೆ ಎಂದು ತೋರುತ್ತಿರುವಾಗಲೂ ಅದರ ಆ ಅಭಿಪ್ರಾಯವು ನ್ಯಾಯವಾದದ್ದೇ ಆಗಿರುವಾಗಲೂ ಒಮ್ಮೆ ಅಪವಾದಾತ್ಮಕವಾಗಿ ಕೆಲವರು ವಿರುದ್ಧಾಭಿಪ್ರಾಯವನ್ನು ತಾಳಿರುವುದು ಕಂಡುಬಂದರೆ, ಅಂಥ ಪ್ರತಿಮತಸ್ಥರ ಹತ್ತಿರ ಕೇಳಲು ಯೋಗ್ಯವಾದ ಏನಾದರೂ ಒಂದಂಶವಿದೆ, ಅವರು ಸುಮ್ಮನಿದ್ದರೆ ಸತ್ಯ ಏನನ್ನೋ ಕಳೆದುಕೊಳ್ಳುತ್ತದೆ–ಎಂಬುದನ್ನು ನಾವಿಂದು ಮನಗಾಣಬೇಕು.

ಇದಕ್ಕೊಂದು ಆಕ್ಷೇಪವೇಳಬಹುದು: **"ಅತ್ಯುನ್ನತವೂ ಅತಿ ಮುಖ್ಯವೂ ಆದ ಕೆಲವು ಗೃಹೀತ ತತ್ವಗಳು ಅರೆನನ್ನಿಗಳಿಗಿಂತ ಎಷ್ಟೋ ಪಟ್ಟು ಮೇಲ್ತರಗತಿಯವಾಗಿರುತ್ತವೆ. ಉದಾಹರಿಸಲು ಕ್ರೈಸ್ತ ನೀತಿಶಾಸ್ತ್ರವನ್ನು ತೆಗೆದುಕೊಳ್ಳಬಹುದು. ಅದು ನೀತಿಯ ಪೂರ್ಣಸತ್ಯವನ್ನು ಸಾರುತ್ತದೆ. ಅದು ಹೇಳಿದ್ದಕ್ಕೆ ಭಿನ್ನವಾದ ನೀತಿಯನ್ನು ಯಾರು ಬೋಧಿಸಿದರೂ ತಪ್ಪು."** ಇಂಥ ಎಷ್ಟೋ ಪ್ರಕರಣಗಳಿವೆ. ಆದರಿದು ಅವುಗಳಿಗೆಲ್ಲಾ ಒಂದು ಮಾದರಿಯಾಗಿದೆ. ಕ್ರೈಸ್ತ ನೀತಿಶಾಸ್ತ್ರವೆಂದರೆ ಹೊಸ ಒಡಂಬಡಿಕೆ ಎಂದಾದರೆ ಅದೇ ಪುಸ್ತಕ ಓದು ಅದರ ಜ್ಞಾನವನ್ನು ಪಡೆದ ಯಾವನೇ ಆಗಲಿ ಅದೊಂದ್ದು ಸಂಪೂರ್ಣ ನೀತಿತತ್ವಸಿದ್ಧಾಂತವಾಗಬೇಕು ಎಂಬ ಬಯಕೆಯಿಂದ ಬರೆದದ್ದು

ಎಂಬುದನ್ನು ಊಹಿಸಬಲ್ಲ. ಅದು ಯಾವಾಗಲೂ ಹಿಂದಿದ್ದ ನೀತಿಶಾಸ್ತ್ರದ ಹೆಸರೆತ್ತುತ್ತದಲ್ಲದೆ, ತನ್ನ ಉಪದೇಶಗಳನ್ನು ಯಾವ ನೀತಿವಿವರಗಳನ್ನು ತಾನು ತಿದ್ದಬೇಕಾಗಿದೆಯೋ ಅದಕ್ಕಷ್ಟೇ ಪರಿಮಿತಗೊಳಿಸುತ್ತದೆ; ಯಾವುವನ್ನು ಮೀರಬೇಕೋ ಮೀರಿ ಅವುಗಳ ಬದಲು ಅವಕ್ಕೂ ಎತ್ತರ, ಅಗಲ ಎನಿಸಿದವನ್ನು ಸಾಮಾನ್ಯ ಪರಿಭಾಷೆಯಲ್ಲಿ ಹೇಳುವುದಕ್ಕಷ್ಟೇ ಪರಿಸೀಮಿತಗೊಳಿಸುತ್ತದೆ. ಎಷ್ಟೋ ವೇಳೆ ಅದರ ಉಪದೇಶಗಳನ್ನು ಅಕ್ಷರಶಃ ಅರ್ಥಮಾಡಲು ಆಗುವುದೇ ಇಲ್ಲ; ಕಾಯದೆಯ ತರ್ಕಪರಿಷ್ಕಾರವಿಲ್ಲದೆ ಅದು ಅನೇಕ ಕಡೆ ಪದ್ಯದ ಅಥವಾ ವಾಕ್‌ಚಾತುರ್ಯದ ಆಕರ್ಷಕತೆಯನ್ನು ಹೊಂದಿದ ಉಪದೇಶ ಶೈಲಿಯಲ್ಲಿ ಸಾಗುತ್ತದೆ. ಹಳೆಯ ಒಡಂಬಡಿಕೆಯ ಸಹಾಯವಿಲ್ಲದೆ ಹೊಸದರಿಂದ ಒಂದು ನೀತಿತತ್ವನಿಕಾಯವನ್ನು ಹೊರಡಿಸುವುದು ಇಂದಿಗೂ ಅಸಾಧ್ಯವಾಗಿದೆ. ಹಳೆಯ ಒಡಂಬಡಿಕೆಯೇನೋ ವಿಸ್ತಾರವಾಗಿದೆ; ಆದರದು ಅನೇಕ ದೃಷ್ಟಿಗಳಿಂದ ಅನಾಗರಿಕವಾಗಿದೆ– ಅನಾಗರಿಕವಾಗಿಯೇ ರಚಿಸಲ್ಪಟ್ಟದ್ದು. ಈ ಜೂಡಾರೀತಿಯ ಅರ್ಥನಿರ್ಣಯದ ಸ್ಪಷ್ಟಶತ್ರುವಾದ ಸಂತ ಪಾಲ ಸಹ ಗ್ರೀಕ್ ಮತ್ತು ರೋಮನ್ ಜನರ ನೀತಿಶಾಸ್ತ್ರ ಹಿಂದಿತ್ತೆಂಬುದನ್ನು ಗೃಹೀತವನ್ನಾಗಿ ತೆಗೆದುಕೊಳ್ಳುತ್ತಾನೆ. ಆ ಹಿಂದಿನ ನೀತಿಪದ್ಧತಿಯೊಡನೆ ಸಂಧಾನ ಮಾಡಿಕೊಂಬ ದೃಷ್ಟಿಯಿಂದ ಅವನು ತೋರಿಕೆಗೆ ಗುಲಾಮಗಿರಿಯನ್ನು ಸಾಧುವೆಂಬವರೆಗೂ ಹೋಗಿದ್ದಾನೆ. ಕ್ರಿಸ್ತನದೆಂದು ಕರೆಯಲ್ಪಡುವ ನೀತಿಶಾಸ್ತ್ರವು ಅವನ ಕಾಲದ್ದಲ್ಲ. ಅವನಾದನಂತರದ ಐದು ಶತಮಾನಗಳಲ್ಲಿ ಕ್ರಮೇಣ ಬೆಳೆದು ಬಂದದ್ದು. ಮನುಕುಲವೂ ಈ ಅದು ಗುರುಗಳುಸಿರಿದ ನೀತಿಶಾಸ್ತ್ರಕ್ಕೆ ಬಹಳ ಮಟ್ಟಿಗೆ ಋಣಿಯಾಗಿದೆ ಎಂಬುದನ್ನು ಒಪ್ಪಿಕೊಂಡರೂ ಅನೇಕ ವಿಷಯಗಳಲ್ಲದು ಅಪೂರ್ಣ, ಏಕಮುಖ. ಅದು ಒಪ್ಪದ ಹಲವಾರು ಕಲ್ಪನೆ–ಭಾವನೆಗಳನ್ನು ಸೇರಿಸಿಕೊಳ್ಳದಿದ್ದರೆ ಯುರೋಪಿನ ಜೀವನವೂ ವ್ಯವಹಾರವೂ ಈಗಿನ ರೂಪವನ್ನು ತಾಳುತ್ತಿರಲಿಲ್ಲ; ಇದಕ್ಕೂ ಕನಿಷ್ಠಸ್ಥಿತಿಗಿಳಿದು ಹೋಗುತ್ತಿದ್ದವು. ಕ್ರೈಸ್ತನೀತಿಯು ಪ್ರತೀಕಾರದ ಲಕ್ಷಣವುಳ್ಳದ್ದಾಗಿದೆ. ಬಹಳ ಮಟ್ಟಿಗದು ಅಬೋಧವಾದದ (Paganism) ಪ್ರತಿಭಟನೆಯ ಸ್ವರೂಪದ್ದಾಗಿದೆ. ಅದರ ಆದರ್ಶವು ವಿಧಾಯಕವಲ್ಲ, ನಿಷೇಧಕ; ಸಕ್ರಿಯವೆಂಬುದಕ್ಕಿಂತ ಹೆಚ್ಚಾಗಿ ನಿಷ್ಕ್ರಿಯ; ಮುಗ್ಧವಲ್ಲದೆ ಉದಾರವಲ್ಲ; ಕೆಟ್ಟದ್ದರಿಂದ ದೂರವಿರುವ ಪ್ರವೃತ್ತಿಯದಲ್ಲದೆ, ವಿಧಾಯಕವಾದ ಒಳ್ಳೆಯತನವನ್ನು ಹೇಳುವ ಪ್ರವೃತ್ತಿಯದಲ್ಲ. 'ನೀನು ಮಾಡದಿರು' ಎಂಬ ಅದರ ಉಪದೇಶವು 'ನೀನು ಮಾಡು' ಎಂಬುದನ್ನು ಮೆಟ್ಟಿ ನಿಲ್ಲುವಷ್ಟು ಗುರುತರವಾಗಿದೆ. ಒಟ್ಟಿನಲ್ಲಿ ಅದೊಂದು ಹೇಳಿದಂತೆ ಕೇಳಿಕೊಂಡು ಬಿದ್ದಿರುವ ನೀತಿಯನ್ನು ಬೋಧಿಸುವ ಧರ್ಮ–ನಿಷ್ಕ್ರಿಯ ಪ್ರತೀಕಾರವೇ ಅದರ ಸಾರ.

ಹೀಗೆ ಕ್ರೈಸ್ತ ನೀತಿಶಾಸ್ತ್ರ ಹೇಳುವುದು ಪಾಕ್ಷಿಕ ಸತ್ಯಗಳನ್ನು. ಸರ್ವಾಂಗಪರಿಪೂರ್ಣವಾದ ಒಂದು ಮಾನವನೀತಿ ಸಿದ್ಧಾಂತವನ್ನಲ್ಲ. ಆದುದರಿಂದ

ಇತರ ಧರ್ಮಶಾಸ್ತ್ರಗಳನ್ನು ನೀಚವೆನ್ನಲು ಅದಕ್ಕೆ ಹಕ್ಕಿಲ್ಲ. ಆದರೆ ಮನಸ್ಸಿಗೆ ಬಂದದ್ದೆಲ್ಲವನ್ನು ಹೇಳುವ ಸ್ವಾತಂತ್ರ್ಯವಿದ್ದ ಮಾತ್ರಕ್ಕೆ ಧಾರ್ಮಿಕ ಅಥವಾ ತತ್ವಶಾಸ್ತ್ರೀಯ ಪಂಥ–ಪಂಗಡಗಳಿಂದುಂಟಾಗುವ ಕೇಡು ನಿಂತು ಹೋಗುತ್ತದೆ ಎಂದು ನಾನು ಹೇಳುವವನಲ್ಲ. ಅಲ್ಪಶಕ್ತರು ನಿಷ್ಠೆಯಿಂದ ಒತ್ತಿ ಹೇಳುವ ಸತ್ಯವನ್ನು ಜನರೇ ಆಡುತ್ತಾರೆ ಮತ್ತು ಹಾಗೆ ಮಾಡಿಯೂ ಮಾಡುತ್ತಾರೆ– ಜಗತ್ತಿನಲ್ಲಿ ಇನ್ನೊಂದು ಸತ್ಯ ಇಲ್ಲವೇ ಇಲ್ಲ ಎಂದು ಭಾವಿಸಿ; ಅಥವಾ ಇನ್ನೆಲ್ಲಾದರೂ ಮತ್ತೊಂದಿದ್ದರೆ ಅದೆಂದೂ ಇದರ ವ್ಯಾಪ್ತಿಯನ್ನು ಕಡಿಮೆಮಾಡಲಾರದು, ಇದನ್ನು ಸಂಕುಚಿತಗೊಳಿಸಲಾರದು ಎಂದು ಭಾವಿಸಿ! ಅತ್ಯಂತ ಅನಿರ್ಬದ್ಧ ಚರ್ಚೆಗೆ ಅವಕಾಶವಿದ್ದಾಗಲೂ ಅಭಿಪ್ರಾಯಗಳು ಮತ–ಪಂಥ–ಪಕ್ಷ–ಪಂಗಡಗಳಾಗಿ ಸಂಕುಚಿತರೂಪ ತಾಳುವ ತಮ್ಮ ಪ್ರವೃತ್ತಿ ಬಿಟ್ಟು ಕೊಟ್ಟಾವೆಂದು ನಾನೇನೂ ಹೇಳುವುದಿಲ್ಲ. ಹಾಗೆ ನೋಡಿದರೆ ಅಂಥ ಸ್ವಚ್ಛಂದ ಆವರಣದಲ್ಲಿ ಆ ಪ್ರವೃತ್ತಿ ಇನ್ನಷ್ಟು ಉತ್ತೇಜನ ಪಡೆದೀತು. ಅಲ್ಲದೆ, ಆಗ ವಿರೋಧಿಗಳು ಹೇಳಿದ, ಸತ್ಯವೆಂದು ನೋಡಬೇಕಾದ ಒಂದು ಸತ್ಯವನ್ನು ಜನ ಮತ್ತಷ್ಟು ಆವೇಶದಿಂದ ತ್ಯಜಿಸಿ ಬಿಟ್ಟರೂ ಬಿಟ್ಟಾರು! ಆದರೆ ಈ ಅಭಿಪ್ರಾಯ ಘರ್ಷಣದ ಸತ್ಪರಿಣಾಮವಾಗುವುದು ಆವೇಶವಶನಾದ ಪಕ್ಷಕಾರನ ಮೇಲಲ್ಲ– ಶಾಂತನಾಗಿಯೂ ಅನಾಸಕ್ತನಾಗಿಯೂ ಹತ್ತಿರ ನಿಂತು ನೋಡುವಾತನ ಮೇಲೆ! ಒಂದು ಸತ್ಯದ ಇಬ್ಭಾಗಗಳಲ್ಲಿ ಜೋರಾಗಿ ನಡೆಯುವ ಹೋರಾಟ ಅಷ್ಟೇನು ಕೇಡಲ್ಲ– ಅದರ ಒಂದರ್ಧವನ್ನು ಮೆಲ್ಲಗೆ ಒಳಗಿಂದೊಳಗೇ ಹತ್ತಿಕ್ಕುವುದು ಹೆಚ್ಚಿನ ಕೇಡು. ಇಬ್ಬಣಗಳ ಹೇಳಿಕೆಗಳನ್ನೂ ಕೇಳುವ ಒತ್ತಾಯ ಜನರ ಮೇಲೆ ಬಂದಾಗ ಸ್ವಲ್ಪ ಪ್ರತ್ಯಾಶೆಯನ್ನಿಟ್ಟುಕೊಳ್ಳಬಹುದು; ಹಾಗಲ್ಲದೆ ಒಂದರ ಹೇಳಿಯಷ್ಟನ್ನೇ ಅವರು ಕೇಳಿದ ಸಂದರ್ಭದಲ್ಲಿ ತಪ್ಪುಗಳು ಅವರ ಮನದಲ್ಲಿ ಪೂರ್ವಗ್ರಹಗಳಾಗಿ ಪರಿಣಮಿಸುವುದಲ್ಲದೆ, ಸುಳ್ಳಾಗಿ ಅತಿಶಯಿಸಿದ್ದರ ಫಲವಾಗಿ ಸತ್ಯವೇ ಸತ್ಯದ ಪರಿಣಾಮಕತೆಯನ್ನು ಕಳೆದುಕೊಳ್ಳುತ್ತದೆ; ಮತ್ತು ಒಂದು ಪ್ರಶ್ನೆಯ ಎರಡೂ ಪಕ್ಷಗಳನ್ನು ಕೇಳಿಕೊಂಡು ಅದರ ಮೇಲೆ ನ್ಯಾಯವಾದ ತೀರ್ಮಾನಕೊಡುವ ಮನೋವಿಶೇಷಣವು ಜನರಲ್ಲಿ ಬಹಳ ಕಡಿಮೆ; ಹೀಗಿರುವಾಗ ಅಂಥ ಮನಃಶಕ್ತಿಯಿದ್ದಲ್ಲೂ ಎರಡರಲ್ಲಿ ಒಂದೇ ಪಕ್ಷವನ್ನು ಅದರೆದುರಿಟ್ಟು ಪ್ರತಿಪಾದಿಸಿದಾಗ ಪೂರ್ಣಸತ್ಯ ಫಲಿಸಲು ಅಲ್ಲಿ ಅವಕಾಶವೇ ಇಲ್ಲ–ಆ ಪಕ್ಷದ ಪ್ರತಿಪಾದನೆಯಲ್ಲಿ ತಿಳಿದುಬಂದ ಅಭಿಪ್ರಾಯಗಳಿಗೆ ತಕ್ಕ ಅಳತೆಯಲ್ಲಷ್ಟೇ ಸತ್ಯ ನಿಲ್ಲುತ್ತದೆ.

ಮನುಷ್ಯನಿಗೆ ತನ್ನ ಮಾನಸಿಕ ಆರೋಗ್ಯದ ಸಲುವಾಗಿ ಅಭಿಪ್ರಾಯ ಸ್ವಾತಂತ್ರ್ಯ ಮತ್ತು ಅಭಿಪ್ರಾಯ ಪ್ರಕಟನ ಸ್ವಾತಂತ್ರ್ಯಗಳು ಬೇಕೆಂಬುದಕ್ಕೆ ನಾಲ್ಕು ಪ್ರತ್ಯೇಕ ಆಧಾರಗಳು ಕೊಡಲ್ಪಟ್ಟಿದೆ. ಮಿಕ್ಕೆಲ್ಲ ತರದ ಆರೋಗ್ಯಕ್ಕೆ ಅಡಿಗಲ್ಲಾದ ಈ ಮಾನಸಿಕ ಆರೋಗ್ಯಕ್ಕೆ ಅಗತ್ಯವಾದ ಸ್ವಾತಂತ್ರ್ಯಕ್ಕೆ ಕೊಟ್ಟ ನಾಲ್ಕು ಆಧಾರಗಳು ಹೀಗಿವೆ:

೧. ಯಾವುದಾದರೊಂದು ಅಭಿಪ್ರಾಯವನ್ನು ದಮನಗೊಳಿಸಿದರೆ ಒಮ್ಮೆ ನಮಗೆ ಗೊತ್ತಾಗಲು ಶಕ್ಯವಾಗುವಂತೆ ಅದು ಸತ್ಯವಾಗಿರುವ ಸಂಭವವಿದೆ.

ಇದು ಸರಿಯಲ್ಲವೆಂಬವರು ತಾವೆಂದೂ ತಪ್ಪುವವರಲ್ಲ ಎಂದುಕೊಂಬ ಸೊಕ್ಕಿನವರೆನಿಸುತ್ತಾರೆ.

೨. ದಮಿತಾಭಿಪ್ರಾಯವೊಮ್ಮೆ ತಪ್ಪಾಗಿರಬಹುದಾದರೂ ಅದರಲ್ಲಿ ಸತ್ಯದ ಒಂದು ಅಂಶವಾದರೂ ಇರುವುದು ಸಂಭವ; ಸಾಮಾನ್ಯವಾಗಿ ಇದ್ದೇ ಇರುತ್ತದೆ ಎನ್ನಬಹುದು; ಮತ್ತು ಯಾವುದಾದರೊಂದು ವಿಷಯದ ಮೇಲಿನ ಜನಾಭಿಪ್ರಾಯವು ಹೆಚ್ಚಾಗಿ ಅಥವಾ ಎಂದೂ ಪೂರ್ಣಸತ್ಯವಾಗಿರುವುದಿಲ್ಲವಾದ್ದರಿಂದ ವಿರುದ್ಧಾಭಿಪ್ರಾಯಗಳ ಘರ್ಷಣವೊಂದೇ ಸತ್ಯದ ಮಿಕ್ಕ ಅಂಶವನ್ನು ಒದಗಿಸಿಕೊಳ್ಳಲು ಅವಕಾಶ ಕೊಟ್ಟೀತು.

೩. ಗೃಹೀತಾಭಿಪ್ರಾಯವು ಒಮ್ಮೆ ಸತ್ಯವಷ್ಟೇ ಅಲ್ಲ– ಪೂರ್ಣಸತ್ಯವೇ ಆಗಿತ್ತೆನ್ನಿ. ಆದರೂ ಅದನ್ನು ಉತ್ಸಾಹಪೂರ್ಣ ಮತ್ತು ನಿಷ್ಠಾಪೂರ್ಣ ಚರ್ಚೆಗೆ ಒಳಪಡಿಸದೆ ಹೋದರೆ ಅದರ ಗ್ರಾಹಕರು (Holders) ಅದನ್ನಾಗಲಿ, ಅದರ ವಿಚಾರಬದ್ಧ ಆಧಾರವನ್ನಾಗಲಿ ಚೆನ್ನಾಗಿ ತಿಳಿದುಕೊಳ್ಳದೆ, ಭಾವಿಸಿಕೊಳ್ಳದೆ–ಅದನ್ನೊಂದು ಪೂರ್ವಗ್ರಹರೂಪದಲ್ಲಿಯೇ ಇಟ್ಟುಕೊಂಡಿರುತ್ತಾರೆ.

೪. ಆಗ ತತ್ವಸಿದ್ಧಾಂತದ (Doctrine) ಅರ್ಥವೇ ದುರ್ಬಲವಾಗಿಯೋ ಕಳೆದೋ ಹೋಗುವ ಸಂಭವವುಂಟು; ಮತ್ತು ಅದರ ಪರಿಣಾಮವು ಚಾರಿತ್ರ (Character) ಮತ್ತು ನಡತೆ (Conduct)ಗಳ ಮೇಲೆ ಆಗದೆ ಹೋಗುವ ಅಪಾಯವೂ ಇದೆ. ಆಗ ಅಂಥ ಅಭಿಪ್ರಾಯವೊಂದು ಅಂಧಶ್ರದ್ಧೆಯ ರೂಪ ತಾಳಿ, ಔಪಚಾರಿಕ ನಟನೆಯಾಗಿ ಪರಿಣಮಿಸಿ, ಒಳಿತಾಗುವುದಕ್ಕೂ ಚೋದಕವಾಗದೆ, ಮನದ ತಳದಲ್ಲಿ ಕಲ್ಲಾಗಿ ಕುಳಿತು ವಿಚಾರ ಇಲ್ಲವೆ ಸ್ವಾನುಭವಗಳಿಂದ ಲಭಿಸುವ ಎಲ್ಲ ಹೃನ್ಮಯ ಶ್ರದ್ಧೆಯ ಸಂವರ್ಧನೆಗೂ ಕುಠಾರವಾದೀತು.

ಈ ಸಂದರ್ಭದಲ್ಲಿ ಕೆಲವರು ಹೀಗೂ ಹೇಳಬಹುದು: "ಎಲ್ಲ ಅಭಿಪ್ರಾಯಗಳನ್ನೂ ಅನಿರ್ಬಂಧವಾಗಿ ಹೇಳಬಹುದು, ಆದರೆ ಅವನ್ನು ಹೇಳುವ ರೀತಿಯು ಸಮಧ್ವನಿಯದಾಗಿರಬೇಕು–ಅದೆಂದೂ ನ್ಯಾಯವಾದ ಚರ್ಚೆಯ ಎಲ್ಲೆಯನ್ನು ಮೀರಬಾರದು." ಈ ಮಾತೇನೋ ನ್ಯಾಯ; ಆದರೆ ಆ ಎಲ್ಲೆಯನ್ನು ನಿರ್ದಿಷ್ಟಪಡಿಸುವುದರ ಅಶಕ್ಯತೆಯ ಬಗೆಗೂ ಬಹಳ ಹೇಳಬಹುದು. ಏಕೆಂದರೆ, ಒಮ್ಮೆ ಈ ಪರೀಕ್ಷೆಯೇ ಖಂಡನೆಗೆ ಗುರಿಮಾಡಲಾದ ಅಭಿಪ್ರಾಯವುಳ್ಳವರಿಗೊಂದು ಅಪಚಾರವೆನ್ನಿಸುವುದಾದರೆ– ಖಂಡನೆಯು ಖಂಡಿತವೂ ಬಲಿಷ್ಠವೂ ಆದಾಗಲೆಲ್ಲಾ ಈ ಅಪಚಾರವನ್ನು ನಡೆಯಿಸುವುದು ಅನುಭವಸಿದ್ಧ; ತಮ್ಮನ್ನು ತರ್ಕದಲ್ಲಿ ಜೋರಾಗಿ

ನೂಕಿದ ಮತ್ತು ತಮಗೆ ಉತ್ತರಿಸಲು ಕಷ್ಟ ಎನಿಸುವ ಸವಾಲನ್ನು ಹಾಕಿದ ಪ್ರತಿಯೊಬ್ಬ ವಿರೋಧಿಯೂ ಅವನೇನಾದರೂ ವಿಷಯವನ್ನು ಜೋರಾಗಿ ಎತ್ತಿಹಿಡಿದರೆ, ಅವರಿಗೆ ಸಮಾಧಾನಿಯಲ್ಲದ ವಿರೋಧಿಯಾಗಿ ಕಾಣುತ್ತಾನೆ. ಆದರಿದು ವ್ಯಾವಹಾರಿಕ ದೃಷ್ಟಿಯಿಂದ ಬಹಳ ಮುಖ್ಯವಾದ ವಿವೇಚನೆಯೆನಿಸಿದರೂ ಇನ್ನೊಂದು ಹೆಚ್ಚು ಮೂಲಭೂತವಾದ ಆಕ್ಷೇಪದಲ್ಲಿ ಅಡಕವಾಗಿರುತ್ತದೆ. ನಿಃಸಂದೇಹವಾಗಿಯೂ ಒಂದು ಅಭಿಪ್ರಾಯವನ್ನು ಮಂಡಿಸುವ ರೀತಿಯು– ಆ ಅಭಿಪ್ರಾಯ ನಿಜವಾದದ್ದೇ ಆಗಿದ್ದರೂ– ಎಷ್ಟೋ ವೇಳೆ ಬಹಳ ಆಕ್ಷೇಪಾರ್ಹವಾಗಿರಬಹುದು. ಮತ್ತು ಆ ಕಾರಣದಿಂದ ನ್ಯಾಯತಃ ಉಗ್ರವಾಗಿ ನಿಂದಿಸಲ್ಪಡಬಹುದು. ಆದರೆ ಆ ತರದ ಮುಖ್ಯ ಆಕ್ಷೇಪಗಳನ್ನು ಆಕ್ಷೇಪಕರು ತಮ್ಮನ್ನೇ ತಾವು ಕೆಲವೊಮ್ಮೆ ಬಯಲಿಗೆಳೆದುಕೊಳ್ಳದೆ ಮನದಟ್ಟಾಗುವಂತೆ ಎತ್ತಿ ಹೇಳುವುದು ಸಾಧ್ಯ. ಅಂಥವುಗಳಲ್ಲಿ ಶುಷ್ಕತರ್ಕ ಹೂಡುವುದು ಅತ್ಯಂತ ಗುರುತಮವಾದದ್ದು. ವಸ್ತುಸ್ಥಿತಿಯನ್ನು ಮರೆಮಾಡಲು ಅಥವಾ ತರ್ಕವಾದವನ್ನು ಮರೆಯಿಸಲು, ಪ್ರಕರಣದ ಅಂಗಗಳನ್ನು ಅಪಲಪಿಸಲು ಅಥವಾ ವಿಪಕ್ಷಾಭಿಪ್ರಾಯವನ್ನು ತಪ್ಪು ವರದಿಮಾಡಲು ಕೆಲವರು ಅಂಥ ಶುಷ್ಕ ವಾದ ಹಿಡಿಯುತ್ತಾರೆ. ಈ ಎಲ್ಲವನ್ನೂ ಒಬ್ಬ ಒಮ್ಮೆ ಅತಿರೇಕಕ್ಕೆ ಮುಟ್ಟಿಸಿದಾಗಲೂ ಇದನ್ನು ನೈತಿಕವಾಗಿ ನಿಂದ್ಯವೆನ್ನಲು ಬರದು; ಇದೊಂದು ಚರ್ಚಾಸ್ಪದವಾದ ದುರ್ನಡತೆಯಾಗಿರುವುದರಿಂದ ಕಾಯದೆಯಂತೂ ಎಂದೂ ಇದರಲ್ಲಿ ಕೈಹಾಕಲಾರದು. ಏಕೆಂದರೆ, ಇಂಥ ಸಂಗತಿ ನಿತ್ಯವೂ ನಡೆಯುತ್ತಿರುತ್ತದೆ; ಅದರಲ್ಲೂ ಎದುರಿನವರಲ್ಲಿ ಸಂಪೂರ್ಣ ವಿಶ್ವಾಸವಿಟ್ಟೇ ಎಷ್ಟೋ ಜನ ಯೋಗ್ಯರಾದವರು ಆಗೀಗ ಹೀಗೆ ಛಲ ಹಿಡಿಯುವುದುಂಟು; ಅಷ್ಟುಮಾತ್ರಕ್ಕೆ ಅವರು ಅಜ್ಞರು, ಅನರ್ಹರು ಎಂದು ಎಣಿಸಲಿಕ್ಕೆ ಬರಲಾರದು. ಆದರೆ ಸಾಮಾನ್ಯವಾಗಿ ಅಸಮಾಧಾನಕರ ಚರ್ಚಾರೀತಿಯೆನಿಸುವ ಬಯ್ಗುಳ, ಮರ್ಮಘಾತ, ವ್ಯಕ್ತಿನಿಂದೆ ಮುಂತಾದ್ದನ್ನು ಯಾವ ಪಕ್ಷದವರು ಹಿಡಿದರೂ ಖಂಡನೀಯವೇ. ಜನರು ಆ ರೀತಿಯ ಚರ್ಚೆ ಯೋಗ್ಯವೆನ್ನಲಾರಂಭಿಸಿದಾಗ ಮಾತ್ರ ನಾವದರ ವಿರುದ್ಧವಾಗಿ ನಿಲ್ಲಬೇಕು. ಅದರಲ್ಲೂ ಪ್ರಚಲಿತಾಭಿಪ್ರಾಯಗಳ ವಿರುದ್ಧವಾಗಿ ಅಂಥ ದುರ್ಮಾರ್ಗದ ಚರ್ಚೆ ಸುರುವಾದರೆ ಎಲ್ಲರೂ ಪ್ರತಿಭಟಿಸುತ್ತಾರೆ. ಹಾಗಲ್ಲದೆ, ಒಮ್ಮೆ ಅಪ್ರಚಲಿತಾಭಿಪ್ರಾಯದ ವಿರುದ್ಧವಾಗಿ ಯಾರಾದರೂ ಆ ಮಾರ್ಗ ಹಿಡಿದರೆ ಅವರಿಗೆ ಜನರ ಹೊಗಳಿಕೆಯೂ ಧರ್ಮ್ಯಕ್ರೋಧದ (Righteous Indignation) ಬೆಂಬಲವೂ ದೊರಕೀತು! ಹೀಗಿದ್ದರೂ ಸ್ವಲ್ಪ ನಿರಾಯುಧರ ಸ್ಥಾನದಲ್ಲಿರುವವರಮೇಲೆ ಆ ದುಷ್ಕಲೆಯನ್ನು ಪ್ರಯೋಗಿಸಿದಾಗ ಅದರಿಂದಾಗುವ ಕುಚೋದ್ಯ ಅತ್ಯಂತ ಹೆಚ್ಚಾಗುತ್ತದೆ. ದುರ್ವೈಖರಿಯಿಂದ ಯಾವ ಅಭಿಪ್ರಾಯವು ಎಷ್ಟೇ ದುರ್ಲಾಭ ಪಡೆದರೂ ಅದು ಅಖಂಡವಾಗಿ ದೊರಕುವುದು ಗೃಹೀತಾಭಿಪ್ರಾಯಗಳಿಗೇ (Received opinions). ವಿರುದ್ಧಾಭಿಪ್ರಾಯದವರು ಕೆಟ್ಟವರು, ಅನೀತಿವಂತರು, ಎಂದು ನಿಂದಿಸುವುದು ದುರ್ಮಾರ್ಗದ ಚರ್ಚೆಯಲ್ಲಿ ಅತ್ಯಧಮ ಮಟ್ಟ. ಸಾಮಾನ್ಯವಾಗಿ ಅಪ್ರಿಯವೆನಿಸಿದ

ಯಾವುದಾದರೂ ಅಭಿಪ್ರಾಯವನ್ನು ಹಿಡಿದವರು ಮೊದಲು ಈ ಬಗೆಯ ದುರಾಘಾತಕ್ಕೆ ಗುರಿಯಾಗುತ್ತಾರೆ. ಏಕೆಂದರೆ, ಅಂಥವರು ಸಾಮಾನ್ಯವಾಗಿ ಸ್ವಲ್ಪ ಜನರು, ಅಪ್ರಭಾವಿಗಳು ಮತ್ತು ಅವರನ್ನು ಬಿಟ್ಟರೆ ಇನ್ನಾರೂ ಆ ಅಭಿಪ್ರಾಯಗಳಿಗೆ ನ್ಯಾಯ ದೊರಕಿದರೆ ಸಂತೋಷಪಡರು. ಈ ಅಸ್ತ್ರವು ಪ್ರಚಲಿತಾಭಿಪ್ರಾಯವನ್ನು ವಿರೋಧಿಸುವವರಿಗಿಲ್ಲ; ಅವರು ಇದನ್ನು ಹಿಡಿದರೆ ಸುರಕ್ಷಿತವಾಗಿ ಉಳಿಯಲಾರರು. ಅಷ್ಟಕ್ಕೂ ಮಿಕ್ಕಿ ಅವರೇನಾದರೂ ಈ ಬಯ್ಗುಳದ ಅಸ್ತ್ರವನ್ನು ಪ್ರಯೋಗಿಸಿದ್ದೇ ಆದರೆ ಅದು ಅವರ ಉದ್ದೇಶಕ್ಕೆ ಹಾನಿಯನ್ನು ತಂದೊಡ್ಡೀತು. ಸಾಮಾನ್ಯವಾಗಿ ಅಪ್ರಚಲಿತಾಭಿಪ್ರಾಯದ ಪ್ರತಿಪಾದಕರು ತೀಕ್ಷ್ಣ ಭಾಷೆಯನ್ನು ಬಳಸಬಾರದು, ಅನವಶ್ಯಕವಾಗಿ ಮಂದಿಯ ಮನಸ್ಸನ್ನು ನೋಯಿಸಬಾರದು– ಹಾಗೆ ಮಾಡಿದರೇನೇ ಅವರ ವಾದವನ್ನು ಯಾರಾದರೂ ಕೇಳಿಯಾರು. ಪ್ರಚಲಿತಾಭಿಪ್ರಾಯವನ್ನು ಎತ್ತಿ ಹಿಡಿಯುವಾಗಲಾದರೋ ಅಳತೆಗೆಟ್ಟ ಅಪಶಬ್ದ ಪ್ರಯೋಗವು ಜನರು ವಿರುದ್ಧಾಭಿಪ್ರಾಯವನ್ನು ತಾಳದಂತೆ ಮಾಡುತ್ತದೆ. ಸತ್ಯ–ನ್ಯಾಯಗಳ ಹಿತದ ದೃಷ್ಟಿಯಿಂದ ಈ ದುರ್ಮಾರ್ಗದಿಂದ ದೂರವಿರುವುದೇ ಲೇಸು; ಬಯ್ಗುಳವನ್ನು ಬಂದು ಮಾಡುವುದು ಅತ್ಯಂತ ಮುಖ್ಯವಾದದ್ದು. ಇದಕ್ಕೆ ಉದಾಹರಣೆ ಬೇಕೋ? ಕೇಳಿ; ಧರ್ಮದ ವಿರುದ್ಧವಾಗಿ ಕೆಟ್ಟಮಾತುಗಳನ್ನಾಡುವುದನ್ನು ನಿಲ್ಲಿಸುವುದಕ್ಕಿಂತ ಹೆಚ್ಚಾಗಿ ಧರ್ಮಶ್ರದ್ಧೆಯಿಲ್ಲದವರ ವಿರುದ್ಧವಾಗಿ ದುರ್ವಾಕ್ಯಗಳನ್ನಾಡುವುದನ್ನು ನಿಲ್ಲಿಸಬೇಕಾಗಿದೆ. ಪ್ರತಿಯೊಂದು ಪ್ರಸಂಗದಲ್ಲೂ ಅಭಿಪ್ರಾಯವು ಪ್ರಕರಣಾನುಸಾರ ತನ್ನ ನ್ಯಾಯವನ್ನು ತಾನು ಪಡೆಯಬೇಕಲ್ಲದೆ ಕಾನೂನು ಹಾಗೂ ಪ್ರಾಧಿಕಾರಗಳಿಗಿಲ್ಲಿ ಕೈ ಹಾಕಲು ಯಾವ ಅಗತ್ಯವೂ ಇಲ್ಲ. ಯಾರಲ್ಲಿ ಅನಾರ್ಜವ, ದ್ವೇಷ, ಮತಾಂಧತೆ ಅಥವಾ ಅಸಹನೆ ಕಂಡು ಬರುವುದೋ ಆ ವಾದಿ ಅಥವಾ ಪ್ರತಿವಾದಿಗಳನ್ನು ನಾವು ಖಂಡಿಸಬೇಕು. ಆದರೆ ನಮಗೆ ಅಪ್ರಿಯವಾದ ಪಕ್ಷವನ್ನು ಹಿಡಿದ ಮಾತ್ರದಿಂದ ಇಂಥವರು ಉಕ್ತ ದುರ್ಭಾವನೆಗಳನ್ನು ತಮ್ಮ ವಾದದಲ್ಲಿ ವ್ಯಕ್ತಮಾಡಿದ್ದಾರೆ ಎಂದು ಮಾತ್ರ ಹೇಳಬಾರದು. ನಾವು ಗೌರವಿಸಬೇಕಾದವರೆಂದರೆ–ಯಾವ ಅಭಿಪ್ರಾಯವನ್ನು ಪ್ರತಿಪಾದನೆ ಮಾಡಹೊರಟವರಾದರೂ ಸರಿಯೆ, ಅವರು ಶಾಂತ ನಿರೀಕ್ಷಕರೂ ತಮ್ಮ ವಿರೋಧಿಗಳನ್ನು ಇದ್ದಂತೆಯೇ ವರದಿ ಮಾಡುವವರೂ ಅವರ ವಿರುದ್ಧವಾಗಿ ಏನನ್ನೂ ಅತಿಶಯಿಸಿ ಹೇಳದವರೂ ತಮ್ಮ ಪಕ್ಷಸಮರ್ಥನೆಗೆ ನ್ಯಾಯವಾದ ಎಲ್ಲ ಕಾರಣಗಳನ್ನೂ ಮಂಡಿಸುವವರೂ ಆಗಿದ್ದರೆ ಸರಿ. ಇದೇ ಸಾರ್ವಜನಿಕ ಚರ್ಚೆಯಾಗಿರುತ್ತದೆ.

## ಅಧ್ಯಾಯ ಮೂರು

# ವ್ಯಕ್ತಿ ವೈಶಿಷ್ಟ್ಯ : ಸಮ್ಯಗ್ಜೀವನದ ಒಂದು ಅಂಗ

ಅಭಿಪ್ರಾಯ ಮಾಡಿಕೊಳ್ಳಲೂ ಹಾಗೆ ಮಾಡಿಕೊಂಡ ಅಭಿಪ್ರಾಯಗಳನ್ನು ಸ್ಪಷ್ಟವಾಗಿ ಹೇಳಲೂ ಮನುಷ್ಯರಿಗೆ ಸ್ವಾತಂತ್ರ್ಯವಿರಬೇಕು ಎಂಬುದಕ್ಕೆ ಕಾರಣಗಳನ್ನು ಕೊಟ್ಟದ್ದಾಯ್ತು; ಈ ಸ್ವಾತಂತ್ರ್ಯವಿದ್ದರೆ ಅಥವಾ ಇಲ್ಲದಾಗ ಅದರ ಪ್ರತಿಬಂಧವನ್ನು ಲೆಕ್ಕಿಸದೆ ಈ ಸ್ವಾತಂತ್ರ್ಯವನ್ನು ವಹಿಸಿದರೆ, ಮನುಷ್ಯನ ಬುದ್ಧಿಸ್ವಭಾವಕ್ಕೂ ಆ ಮೂಲಕ ನೈತಿಕ ಸ್ವಭಾವಕ್ಕೂ ದೊರಕುವ ಪ್ರಯೋಜನಗಳನ್ನೂ ಹೇಳಿದ್ದಾಯ್ತು. ಇನ್ನು ಮುಂದೆ ಅವೇ ಕಾರಣಗಳ ಬಲದಿಂದ ತಮ್ಮ ಅಭಿಪ್ರಾಯಕ್ಕೆ ಅನುಗುಣವಾಗಿ ನಡೆದುಕೊಳ್ಳಲು ಅಡ್ಡಿಯಿಲ್ಲದೆ ಅದನ್ನು ಜೀವನದಲ್ಲಿ ಅನುಸರಿಸಲು, ಸಹಜೀವಿಗಳಿಂದ ಭೌತಿಕ ಇಲ್ಲವೆ ನೈತಿಕ ಪ್ರತಿಬಂಧವಿಲ್ಲದೆ ಸ್ವಮತದಂತೆ ನಡೆಯಲು, ಅದರ ಪರಿಣಾಮಗಳಿಗೆ ತಾವು ಬಾಧ್ಯರಾಗಿ ಅದನ್ನಾಚರಿಸುವ ಅಗತ್ಯವೂ ಸಿದ್ಧವಾಗುವುದೋ ಇಲ್ಲವೋ ಎಂಬುದನ್ನು ಪರಾಮರ್ಶಿಸೋಣ. ಇದರಲ್ಲಿ ಕೊನೆಯ ಕರಾರು ಅಪರಿಹಾರ್ಯ. ಕಾರ್ಯಗಳು ಅಭಿಪ್ರಾಯಗಳಷ್ಟೇ ಸ್ವತಂತ್ರವಾಗಿರಬೇಕೆಂದು ಯಾರೂ ಹೇಳುವ ನಟನೆ ಮಾಡಲಾರರು. ಅದಕ್ಕೆ ಪ್ರತಿಯಾಗಿ, ಅಭಿಪ್ರಾಯಗಳ ವ್ಯಂಜನೆಯನ್ನಾದರೂ ವಿಲಕ್ಷಣ ಪರಿಸ್ಥಿತಿಯಲ್ಲಿ ಮಾಡಿದ್ದೇ ಆದರೆ ಅದೊಂದು ಕುರಿತಾದ ಕುಚೋದ್ಯಕ್ಕೆ ಪ್ರೇರಕವಾದೀತು. 'ಧಾನ್ಯವರ್ತಕರು ಬಡವರ ಶೋಷಕರು' ಅಥವಾ 'ಖಾಸಗಿ ಆಸ್ತಿವಂತಿಕೆ ಎಂಬುದು ದರೋಡೆ' ಎಂಬಂತಹ ಅಭಿಪ್ರಾಯವು ಪತ್ರಿಕೆಯಲ್ಲಿ ಪ್ರಕಟವಾದರೆ ಅದಕ್ಕಾಗಿ ಯಾರೂ ಯಾವ ಕ್ರಮವನ್ನೂ ತೆಗೆದುಕೊಳ್ಳಬೇಕಾಗಿಲ್ಲ. ಆದರೆ ಅದನ್ನೇ ಧಾನ್ಯ ವರ್ತಕನೊಬ್ಬನ ಮನೆಯೆದುರು ಸೇರಿದ ಒಂದು ಕ್ಷುಬ್ಧ ಜನರ ಗುಂಪಿನೆದುರೆಂದರೆ ಇಲ್ಲವೆ ಅದನ್ನು ಪಟ ಬರೆದು ಆ ಜನರಲ್ಲಿ ಹಂಚಿದರೆ ಅಂಥ ಕೆಲಸಕ್ಕೆ ನ್ಯಾಯವಾಗಿ ಶಿಕ್ಷೆ ವಿಧಿಸಬೇಕಾಗುತ್ತದೆ. ನ್ಯಾಯವಾದ ಕಾರಣಗಳಿಲ್ಲದೆ ಪರರಿಗೆ ಹಾನಿಯನ್ನೆಡರಿಸುವ ಕಾರ್ಯಗಳನ್ನು ಅನನುಕೂಲಭಾವನೆಗಳಿಂದ ನಿಯಂತ್ರಿಸಬಹುದು– ಮತ್ತು ಪ್ರಮುಖ ಪ್ರಕರಣಗಳಲ್ಲಿ ನಿಯಂತ್ರಿಸಲೇಬೇಕಾಗಬಹುದು, ಅಗತ್ಯಬಿದ್ದರೆ ಸಾಕ್ಷಾತ್ತಾಗಿ ಜನರು ಸಕ್ರಿಯ ನಿಯಂತ್ರಣವನ್ನೂ ಕರ್ತರ ಮೇಲೆ ಹೇರಬೇಕಾದೀತು. ವ್ಯಕ್ತಿಯ ಸ್ವಾತಂತ್ರ್ಯವು ಇಷ್ಟಕ್ಕೆ ಪರಿಮಿತವಾಗಿರಬೇಕು; ಅವನು ಮಿಕ್ಕವರಿಗೆ ಪೀಡಕನಾಗಿರಬಾರದು. ಆದರೆ ಪರಪೀಡಕನಾಗದೆ ಅರ್ಥಾತ್ ಅವನು ಅನ್ಯರ ಕೆಲಸದಲ್ಲಿ ಕೈಹಾಕದೆ ಇದ್ದರೆ ತನ್ನದೇ ಆದ ಕೆಲಸಗಳಲ್ಲಿ ತನ್ನ ಜವಾಬುದಾರಿಯಿಂದ ತನ್ನ ಅಭಿಪ್ರಾಯದ ಪ್ರಕಟನೆಗೆ ಬೆಂಬಲವಿತ್ತ ಕಾರಣಗಳೇ ಸಿದ್ಧಮಾಡುತ್ತವೆ. ಮನುಷ್ಯಕುಲವು ಬುದ್ಧಿಯಲ್ಲಿ ಅಭೇದ್ಯವಲ್ಲ,

ಪರಿಪೂರ್ಣವಲ್ಲ. ಅದು ಹೇಳುವ ಸತ್ಯಗಳೆಲ್ಲಾ ಹೆಚ್ಚಾಗಿ ಅರೆನನ್ನಿಗಳು. ವಿರುದ್ಧಾಭಿಪ್ರಾಯಗಳ ಸಂಪೂರ್ಣವೂ ಅತ್ಯಂತ ಸ್ವತಂತ್ರವೂ ಆದ ಹೋಲಿಕೆಗೆಡೆಗೊಡದೆ ಉಂಟಾಗುವ ಏಕಮತವೆಂಬುದು ಅನಪೇಕ್ಷಣೀಯ. ಮನುಷ್ಯಕುಲವು ತಮ್ಮ ಅಭಿಪ್ರಾಯಗಳಿಗೆಷ್ಟೋ ಅಷ್ಟೇ ಪ್ರಮಾಣದಲ್ಲಿ ತಮ್ಮ ಕಾರ್ಯಗಳಿಗೂ ಅನ್ವಯಿಸುವ ತತ್ವ ಅಥವಾ ಸತ್ಯಗಳ ಎಲ್ಲ ಮುಖ ಅಥವಾ ಮಗ್ಗಲುಗಳನ್ನೂ ಮನ್ನಿಸುವುದರಲ್ಲಿ ಈಗಿನಕಿಂತ ಹೆಚ್ಚು ಸಮರ್ಥವಾಗುವಲ್ಲಿಯವರೆಗೆ ಅಭಿಪ್ರಾಯವೈವಿಧ್ಯವೆಂಬುದು ಕೇಡಲ್ಲ, ಒಳಿತು. ಮನುಷ್ಯರು ಅಪೂರ್ಣರಾಗಿರುವಾಗ ಅಭಿಪ್ರಾಯಭೇದವಿರುವುದು ಹೇಗೆ ಲೇಸೋ ಹಾಗೇ ಅವರ ಬಾಳುವೆಯಲ್ಲೂ ಪ್ರಯೋಗ–ಪರೀಕ್ಷೆಗಳಾಗುತ್ತಿರುವುದು ಒಳ್ಳೆಯದು. ಪರರಿಗೆ ಹಾನಿಯಾಗದಿರುವವರೆಗೆ ಭಿನ್ನ ಭಿನ್ನ ಚಾರಿತ್ರಗಳಿಗೆ ಅನಿರ್ಬದ್ಧ ಅವಕಾಶವನ್ನು ಕೊಡಬೇಕು. ಯಾರಿಗಾದರೂ ಆಚರಿಸಿ ನೋಡಬೇಕೆನಿಸಿದಾಗ ಬೇರೆ ಬೇರೆ ಬಗೆಯ ಜೀವನಕ್ರಮಗಳ ಬೆಲೆಯನ್ನು ಬೇರೆ ಬೇರೆ ರೀತಿಯಿಂದ ಬದುಕಿ ಅಳೆಯಲು ಅನುವು ದೊರಕಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ, ಅನ್ಯರಿಗೆ ಮೂಲತಃ ಸಂಬಂಧಿಸದ ಸಂಗತಿಗಳಲ್ಲೆಲ್ಲಾ ವ್ಯಕ್ತಿವೈಶಿಷ್ಟ್ಯವು (Individuality, ವೈಯಕ್ತಿಕತೆ) ಕಾರ್ಯರಂಗಕ್ಕಿಳಿಯಬೇಕು. ವ್ಯಕ್ತಿಯ ಸ್ವಂತ ಚಾರಿತ್ರಕ್ಕವಕಾಶವಿಲ್ಲದೆ ಮಿಕ್ಕವರ ಪರಂಪರೆ–ಸಂಪ್ರದಾಯಗಳೇ ವ್ಯಕ್ತಿಯ ಚಾರಿತ್ರಕ್ಕೆ ನಿಯಾಮಕಗಳಾದರೆ ಮಾನವ್ಯಸುಖದ ಮುಖ್ಯ ತತ್ವಗಳಲ್ಲಿ ಒಂದು ಲೋಪವಾಗುತ್ತದೆ– ಆ ತತ್ವವಾದರೋ ವೈಯಕ್ತಿಕ ಹಾಗೂ ಸಾಮಾಜಿಕ ಪ್ರಗತಿಯ ಅತಿ ಮುಖ್ಯ ಸಾಮಗ್ರಿ!

ಈ ತತ್ವಗಳನ್ನು ಎತ್ತಿ ಹಿಡಿಯುವುದರಲ್ಲಿ ಎದುರಿಸಬೇಕಾದ ಅತಿ ದೊಡ್ಡ ತೊಂದರೆಯಿರುವುದು ಪ್ರಸಿದ್ಧ ಪುರುಷಾರ್ಥದ ಸಾಧನವನ್ನು ಪುರಸ್ಕರಿಸುವುದರಲ್ಲಲ್ಲ– ಅದಿರುವುದು ಆ ಪುರುಷಾರ್ಥದ ಬಗೆಗೇ ಸಾಮಾನ್ಯವಾಗಿ ವ್ಯಕ್ತಿಗಳೆಲ್ಲಾ ಉದಾಸೀನರಾಗಿರುವುದರಲ್ಲಿ. ವ್ಯಕ್ತಿವೈಶಿಷ್ಟ್ಯದ ಅನಿರ್ಬದ್ಧ ಅಭಿವೃದ್ಧಿಯೆಂಬುದು ಸಮ್ಯಗ್‌ಜೀವನದ ಮುಖ್ಯಾಂಗಗಳಲ್ಲಿ ಒಂದು ಎಂದು ಎಲ್ಲರೂ ಭಾವಿಸಿದರೆ– ಅದು ನಾಗರಿಕತೆ, ಉಪದೇಶ, ಶಿಕ್ಷಣ, ಸಂಸ್ಕೃತಿ ಎಂಬೀ ಪದಗಳಿಂದ ನಿರ್ವಚಿಸಲಾಗುವ ಅರ್ಥಕ್ಕೆ ಸಮಸ್ಥಾನವುಳ್ಳದ್ದೆಂದು ಜನರು ಎಣಿಸಿದರೆ– ಅದೇ ಸ್ವತಃ ಆ ಎಲ್ಲವುಗಳ ಅವಿಭಾಜ್ಯ ಭಾಗ ಮತ್ತು ಉಪಾಧಿ ಎಂಬುದನ್ನರಿತರೆ, ಸ್ವಾತಂತ್ರ್ಯದ ಬೆಲೆ ಇಳಿಯುವ ಭಯವಿಲ್ಲ; ಮತ್ತು ಅದಕ್ಕೂ ಸಾಮಾಜಿಕ ನಿಯಂತ್ರಣಕ್ಕೂ ನಡುವಿನ ಗಡಿಯನ್ನು ಹೊಂದಿಸುವುದು ಅಂಥ ಅಸಾಧಾರಣವಾದ ಕೆಲಸವಲ್ಲ. ಆದರೆ ವ್ಯಕ್ತಿಯ ಸ್ವಯಂಸ್ಫೂರ್ತಿಗೆ ಏನಾದರೂ ಅದರದೇ ಆದ ಬೆಲೆಯಿದೆ, ಅದಕ್ಕೇ ಒಂದು ಗೌರವಾರ್ಹತೆಯಿದೆ ಎಂಬುದು ಸಾಮಾನ್ಯರ ವಿಚಾರ ಕಕ್ಷೆಯಲ್ಲಿ ಬರುವುದೇ ಇಲ್ಲ– ಎಂಬಂತಾಗಿರುವುದೇ ನಿಜವಾದ ಕೇಡು. ಈಗಿರುವಂತಹ ಮಾನವ್ಯ ವ್ಯವಹಾರ ಮಾರ್ಗಗಳಿಂದ ತೃಪ್ತಿಪಡೆದ ಬಹುಮತೀಯರು (ಏಕೆಂದರೆ, ಅವರೇ ಅವುಗಳ ಸ್ವರೂಪವನ್ನು ರೂಪಿಸಿದವರು!) ಪ್ರತಿಯೊಬ್ಬನಿಗೂ ಅವೇಕೆ ಯೋಗ್ಯವೆನಿಸವೆಂಬುದನ್ನು

ಗ್ರಹಿಸಲಾರರು. ಇದಕ್ಕೂ ಹೆಚ್ಚಿನ ಸಂಗತಿಯೆಂದರೆ, ಸ್ವಯಂಸ್ಫೂರ್ತಿಯೆಂಬುದು (Spontaneity) ಬಹು ಸಂಖ್ಯ ಸಾಮಾಜಿಕ ಹಾಗೂ ನೈತಿಕ ಸುಧಾರಕರ ಆದರ್ಶದ ಅಂಗವೇ ಆಗಿಲ್ಲ; ತದ್ವಿರುದ್ಧವಾಗಿ, ತಾವು ಮನುಕುಲಕ್ಕೆ ಅತ್ಯಂತ ಯೋಗ್ಯವೆಂದು ತಿಳಿದುಕೊಂಡದ್ದರ ಸಾಮಾನ್ಯ ಸ್ವೀಕಾರಕ್ಕೆ ಅದೊಂದು ಪ್ರತಿಭಟನಾತ್ಮಕ ಪ್ರತಿಬಂಧ, ತೊಂದರೆ ಎಂದು ಭಾವಿಸಿ ಅದನ್ನು ಮತ್ಸರಗ್ರಸ್ತ ದೃಷ್ಟಿಯಿಂದಲೇ ಅವರು ನೋಡುತ್ತಾರೆ. ಜರ್ಮನಿಯ ಹಂಬೋಲ್ಟ್ ಹೇಳಿದ: "ಮಾನವನ ಗುರಿ ಇರುವುದು ಅಜರಾಮರವೂ ಅಕ್ಷರವೂ ಆದ ವಿಚಾರಶಕ್ತಿ ಹೇಳುವುದರಲ್ಲಿ; ಅಸ್ಪಷ್ಟವೂ ತಾತ್ಕಾಲಿಕವೂ ಆದ ಬಯಕೆಗಳ ಸೂಚನೆಯಲ್ಲಲ್ಲ. ಮಾನವನು ತನ್ನ ಸುಸಂಗತವೂ ಪರಿಪೂರ್ಣವೂ ಆದ ಇಡಿತನವನ್ನು ಉನ್ನತವಾಗಿಯೂ ಸಮನ್ವಿತವಾಗಿಯೂ ಬೆಳೆವ ಸ್ವಶಕ್ತಿಗಳ ಮೂಲಕ ಮುಟ್ಟುವುದೇ ಆ ಗುರಿ. ಆದುದರಿಂದ ಎಲ್ಲರೂ–ಅದರಲ್ಲೂ ಹೆಚ್ಚಾಗಿ ತಮ್ಮ ಸಹಜೀವಿಗಳ ಮೇಲೆ ಪ್ರಭಾವ ಬೀರಬೇಕೆಂಬವರು– ಶಕ್ತಿ ಮತ್ತು ಅಭಿವೃದ್ಧಿಯ ವ್ಯಕ್ತಿವೈಶಿಷ್ಟ್ಯವನ್ನು ಉಪಾಸಿಸಬೇಕು– ಅದರ ಸಿದ್ಧಿಗಾಗಿ ಹಗಲಿರುಳೂ ಹೆಣಗಬೇಕು– ಸದಾ ಅಲ್ಲೇ ಏಕಾಗ್ರಚಿತ್ತರಾಗಿರಬೇಕು. ಸ್ವಾತಂತ್ರ್ಯ ಮತ್ತು ಸನ್ನಿವೇಶ ವೈವಿಧ್ಯಗಳ ಸಂಯೋಗದಿಂದ ವ್ಯಕ್ತಿತೇಜ ಮತ್ತು ಗುಣಿತ ಸಂಖ್ಯೆಯ ವೈವಿಧ್ಯ ಉದ್ಭವಿಸುತ್ತವೆ; ಹಾಗೇ ಈ ಎರಡೂ ಸಂಯುಕ್ತವಾದಾಗ ಅಭೂತಪೂರ್ವತೆಯಾಗಿ (Originality) ಪ್ರಕಟವಾಗುತ್ತವೆ" ಈ ಮಾತನ್ನು ಜರ್ಮನಿಯ ಹೊರಗೆ ಬಹಳ ಜನರು ಅರ್ಥಮಾಡಿಕೊಂಡಿಲ್ಲ.

ಮೇಲೆ ಹೇಳಿದಂಥ ತತ್ವವು ಬಹಳ ಅರೂಢ; ವ್ಯಕ್ತಿವೈಶಿಷ್ಟ್ಯಕ್ಕೆ ಅಷ್ಟು ಬೆಲೆ ಕೊಟ್ಟದ್ದು ಬಹಳ ಜನರಿಗೆ ಆಶ್ಚರ್ಯಕರವಾದೀತು. ಆದರೂ ನಾವೀಗ ವಿಚಾರ ಮಾಡಬೇಕಾಗಿರುವುದು ಅದರ ಪರಿಮಾಣವನ್ನು. ಜನರು ತಮ್ಮ ನಡತೆಯಲ್ಲಿ ಒಬ್ಬರನ್ನೊಬ್ಬರು ಅನುಕರಿಸಬೇಕು, ಇದೇ ನಡತೆಯ ಅತ್ಯುತ್ತಮ ಬಗೆ– ಎಂದು ಯಾರೂ ಹೇಳಲಾರರು. ತಮ್ಮದೇ ಆದ ನಿರ್ಣಯವನ್ನೂ ತಮ್ಮ ವ್ಯಕ್ತಿವಿಶಿಷ್ಟ ಲಕ್ಷಣವನ್ನೂ ತಮಗೆ ಸಂಬಂಧಿಸಿದ ವ್ಯವಹಾರಗಳಲ್ಲಿ ಬಳಸಬಾರದು, ತಮ್ಮ ಜೀವನದಲ್ಲವನ್ನು ತರಬಾರದು, ತಮ್ಮ ನಡತೆಯಲ್ಲಿ ಅವು ಬರಬಾರದು– ಎಂದು ಯಾರೂ ಸಾರರು. ತಾವು ಹುಟ್ಟುವುದಕ್ಕೆ ಮೊದಲು ಮನುಷ್ಯಜಾತಿಗೆ ಏನೇನೂ ಗೊತ್ತಿದ್ದಿಲ್ಲ ಎಂದು ತಿಳಿದು ಬದುಕಬೇಕು ಎನ್ನುವುದೂ ಹುಚ್ಚು. ಇನ್ನೂ ಅನುಭವವು ಒಂದಕ್ಕಿಂತ ಇನ್ನೊಂದು ಬಗೆಯ ನಡತೆ ಹೆಚ್ಚು ಗ್ರಾಹ್ಯ ಎಂದು ತೋರಿಸಿಕೊಟ್ಟಿಲ್ಲ ಎನ್ನುವುದೂ ಅಲ್ಲದ ಸಲ್ಲದ ಮಾತೇ ಸರಿ. ಮಾನವಜಾತಿಯ ಅನುಭವವು ನಿರ್ಣಯಿಸಿದ ಫಲಿತಾಂಶಗಳನ್ನು ತಿಳಿದು ಲಾಭ ಪಡೆಯುವಂತೆ ತರುಣ–ತರುಣಿಯರಿಗೆ ಶಿಕ್ಷಣ ಕೊಡಬೇಕೆಂಬುದನ್ನು ಯಾರೂ ಅಲ್ಲಗಳೆಯಲಾರರು. ಆದರೆ ತನ್ನ ಶಕ್ತಿಗಳೆಲ್ಲ ಪಕ್ವದಶೆಯನ್ನು ಮುಟ್ಟಿದ ಮನುಷ್ಯನಿಗೆ ಅನುಭವವನ್ನು ತನ್ನದೇ ಆದ ರೀತಿಯಲ್ಲಿ ಅರ್ಥಮಾಡಿಕೊಳ್ಳುವುದೂ ಬಳಸುವುದೂ ಒಂದು ಹಕ್ಕು ಮತ್ತು ಮನುಷ್ಯತ್ವದ ಒಂದು ನ್ಯಾಯವಾದ ಶರ್ತ. ತನ್ನ ಚಾರಿತ್ರ ಹಾಗೂ ಪರಿಸ್ಥಿತಿಗಳಿಗೆ ಅನುಭವದ

ಯಾವ ಭಾಗವು ಉಚಿತವಾಗಿ ಅನ್ವಯಿಸುತ್ತದೆ ಎಂಬುದನ್ನು ಕಂಡುಕೊಳ್ಳುವುದು ಅವನಿಗೆ ಸೇರಿದ್ದು. ಇತರರ ಸಂಪ್ರದಾಯ – ಪರಂಪರೆಗಳು ಕೆಲಮಟ್ಟಿಗೆ ಅವರು ಅನುಭವದಿಂದ ಕಲಿತುದಕ್ಕೆ ಸಾಕ್ಷಿಗಳಾಗಿವೆ. ಆ ಸಾಕ್ಷಿಗಳು ಅರ್ಥಾಪತ್ತಿಯ (Presumption) ರೂಪದವಾಗಿರುವುದರಿಂದ ಅವನ್ನವನು ಗೌರವದಿಂದ ಕಾಣುತ್ತಾನೆ. ಆದರೆ ಅನುಭವವು ಬಹಳ ಕಿರಿದಾಗಿರಬಹುದು. ಇಲ್ಲವೆ ಅವನು ಅದರ ವ್ಯಾಖ್ಯೆಯನ್ನು ತಪ್ಪಾಗಿ ಮಾಡಿಕೊಂಡಿರಬಹುದು. ಎರಡನೆಯದಾಗಿ, ಅವನ ಅನುಭವವ್ಯಾಖ್ಯೆ ಸರಿಯಾದದ್ದೇ ಆಗಿರಬಹುದು. ಆದರೆ ಅವರಿಗದು ಅನುಚಿತ–ಅನನುಕೂಲ–ಅನರ್ಹ ಎನಿಸಬಹುದು. ಸಾಂಪ್ರದಾಯಿಕ ಪರಿಸ್ಥಿತಿಗಳಿಗೂ ಸಾಂಪ್ರದಾಯಿಕ–ಪಾತ್ರಗಳಿಗೂ (Characters) ಉಪಯುಕ್ತವಾಗಲೆಂದೇ ಸಂಪ್ರದಾಯಗಳು ರೂಢವಾದದ್ದು; ಹೀಗಿರುವಾಗ ಅವನ ಚಾರಿತ್ರವೂ ಪರಿಸ್ಥಿತಿಗಳೂ ಅಸಾಂಪ್ರದಾಯಿಕವಾಗಿರಬಹುದು. ಮೂರನೆಯದಾಗಿ, ಸಂಪ್ರದಾಯಗಳೊಮ್ಮೆ ಒಳ್ಳೆಯವೂ ಆಗಿರಬಹುದು, ಅವನಿಗೆ ಉಚಿತವೆನಿಸಿಯೂ ಇರಬಹುದು–ಆದರೆ ಸಂಪ್ರದಾಯವನ್ನು ಕೇವಲ ಸಂಪ್ರದಾಯವೆಂದು ಅನುಸರಿಸುವುದರಿಂದ ಮನುಷ್ಯಪ್ರಶಸ್ತವಾದ ಯಾವ ಗುಣವೂ ಅವನಲ್ಲಿ ಉದಯಿಸದು, ಅಂಥ ಗುಣವರ್ಧಕವಾದ ಯಾವ ವಿದ್ಯಾಸಂಸ್ಕಾರವೂ ಅವನಿಗಾಗದು. ಪ್ರತ್ಯಕ್ಷದರ್ಶನ, ನಿರ್ಣಯನ, ಭಾವನಾವಿವೇಕ, ಮಾನಸಿಕ ಚಟುವಟಿಕೆ ಮತ್ತು ನೈತಿಕ ಗ್ರಾಹ್ಯತಾಸಿದ್ಧಾಂತಗಳೇ ಮೊದಲಾದ ಮಾನವ್ಯಶಕ್ತಿಗಳೆಲ್ಲವೂ ಉಪಯುಕ್ತವಾಗುವುದು ಕೇವಲ ಆಯ್ಕೆ (ವರಣ) ಮಾಡುವುದರಲ್ಲಿ ಮಾತ್ರ. ಸಂಪ್ರದಾಯವಿದೆ ಎಂದಷ್ಟೇ ಅದನ್ನನುಸರಿಸುವವನು ಆಯ್ಕೆ ಮಾಡುವುದೇ ಇಲ್ಲ. ಉತ್ತಮವಾದುದನ್ನೇ ಬಯಸುವ ಹಾಗೂ ಸೂಕ್ಷ್ಮವಾಗಿ ಪರಿಶೀಲಿಸಿನೋಡುವ ಅಭ್ಯಾಸ ಅಂಥವನಿಗಾಗುವುದಿಲ್ಲ. ಮಾಂಸಶಕ್ತಿಯಂತೆಯೇ ಮಾನಸಿಕ ಹಾಗೂ ನೈತಿಕಶಕ್ತಿಗಳಾದರೂ ಬಳಕೆಯಿಂದಲೇ ಸುಧಾರಿಸುತ್ತವೆ. ಇನ್ನೊಬ್ಬರು ಮಾಡುತ್ತಾರೆ ಎಂಬಷ್ಟೇ ಕಾರಣದಿಂದ ಹಾಗೆ ಮಾಡುತ್ತ ಹೋಗುವ ಅನುಕರಣಶೀಲರು ಮಾಡುವುದೂ ಒಂದೇ, ಅನ್ಯರು ನಂಬಿದ್ದಾರೆ ಎಂದು ಯಾವುದನ್ನೋ ನಂಬಿಕೊಳ್ಳುವುದೂ ಒಂದೇ. ಒಂದು ಅಭಿಪ್ರಾಯದ ಆಧಾರತರ್ಕವು ಒಬ್ಬನ ವಿಚಾರಕ್ಕೆ ನಿರ್ಣಾಯಕವಾಗದಾದಾಗ ಅವನ ವಿಚಾರಶಕ್ತಿ ಬಲಗೊಳ್ಳಲಾರದು. ಅದು ದುರ್ಬಲವಾಗುತ್ತ ಹೋಗುವ ಸಂಭವವೇ ಹೆಚ್ಚು– ಏಕೆ? ಅಂಥ ಅಸಮಾಧಾನಕರವಾದ ಅಭಿಪ್ರಾಯವನ್ನವನು ಸ್ವೀಕರಿಸುವುದರಿಂದ. ಒಬ್ಬನನ್ನು ಒಂದು ಕೆಲಸಕ್ಕೆ ಹಚ್ಚಲು ಕೊಟ್ಟ ಒತ್ತಾಸೆಗಳು ಅವನ ಭಾವನಾಂಶಗಳಿಗೆ ಅನುಗುಣವಾಗಿರದೆ ಹೋದರೆ (ಸ್ವಂತದ ವಾತ್ಸಲ್ಯ–ಭಕ್ತಿ ಅಥವಾ ಇನ್ನೊಬ್ಬರ ಹಕ್ಕು–ಅಧಿಕಾರಿಗಳಿಗೆ ಸಂಬಂಧಿಸದ ಪ್ರಕರಣಗಳಲ್ಲಿ) ಅದರಿಂದ ಆತನ ಭಾವನೆ ಹಾಗೂ ಚಾರಿತ್ರಗಳು ನಿಶ್ಚೇತನ, ಜಡ, ಮಂಕು, ಮರವಟ್ಟವುಗಳಾಗುವುವು.

ಜಗತ್ತನ್ನಾಗಲಿ, ತನಗೆ ಸೇರಿದ ಅದರ ಒಂದು ಅಂಶವನ್ನಾಗಲಿ– ತನ್ನ ಜೀವನಯೋಜನೆಯನ್ನು ತನಗಾಗಿ ಮಾಡಿಕೊಡಲು ಬಿಡುವಾತನಿಗೆ ಮಂಗನಿಗಿರುವ

ಅನುಕರಣಶೀಲವೊಂದಿದ್ದರೆ ಸಾಕು– ಮತ್ತೇನೂ ಬೇಕಾಗದು. ತನ್ನ ಜೀವನಯೋಜನೆಯನ್ನು ತಾನೇ ಆರಿಸಿಕೊಂಬಾತನು ತನ್ನ ಎಲ್ಲ ಶಕ್ತಿಗಳನ್ನು ಬಳಸುತ್ತಾನೆ. ಆತನು ನೋಡಲು ತನ್ನ ನಿರೀಕ್ಷಣಶಕ್ತಿಯನ್ನು, ಮುನ್ನೋಡಲು ವಿಚಾರ ಹಾಗೂ ನಿರ್ಣಯಶಕ್ತಿಯನ್ನು, ನಿರ್ಣಯಕ್ಕೆ ಬರಲು ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸಲು ಚಟುವಟಿಕೆಯನ್ನು, ನಿರ್ಣಯಿಸಲು ವಸ್ತು ವಿವೇಕವನ್ನು ಮತ್ತು ನಿರ್ಣಯಿಸಿದ ನಂತರ ತನ್ನ ಇಷ್ಟನಿರ್ಣಯಕ್ಕಂಟಿಕೊಳ್ಳಲು ಸ್ಥೈರ್ಯ–ಆತ್ಮಸಂಯಮ ಶಕ್ತಿಗಳನ್ನು ಬಳಸಬೇಕಾಗುತ್ತದೆ. ಹೀಗೆ ತನಗೆ ಅಗತ್ಯವಾದ ಹಾಗೂ ತಾನು ಬಳಸುವ ಈ ಗುಣಗಳು ತನ್ನ ಭಾವನಾಂಶ ಹಾಗೂ ನಿರ್ಣಯಗಳಿಗನುಸಾರವಾಗಿ ತಾನು ನಿರ್ಧರಿಸುವ ತನ್ನ ನಡತೆಯ ಅಂಗಕ್ಕೆ ತಕ್ಕ ಪ್ರಮಾಣದಲ್ಲಿರುವುದು ಬಹಳ ಹೆಚ್ಚು– ಅದರ ವ್ಯಾಪ್ತಿ ಬಲುದೊಡ್ಡದು. ಸಂಪ್ರದಾಯ ಬಲದಿಂದ ಒಬ್ಬನನ್ನು ಒಂದು ಸನ್ಮಾರ್ಗಕ್ಕೆ ಹಚ್ಚಿ, ಇಂಥ ಯಾವ ಶಕ್ತಿವಿಕಾಸಕ್ಕೂ ಅವಕಾಶಕೊಡದೆ, ನಿರುಪದ್ರವಿಯನ್ನಾಗಿ ಮಾಡಿಡಬಹುದು. ಆದರೆ ಮನುಷ್ಯ ಎನ್ನುವ ದೃಷ್ಟಿಯಿಂದ ಅವನ ತುಲನಾತ್ಮಕ ಬೆಲೆಯೆಷ್ಟು? ಮನುಷ್ಯರು ಏನು ಮಾಡುತ್ತಾರೆ ಎಂಬುದೆಷ್ಟು ಮುಖ್ಯವೋ ಹಾಗೆ ಮಾಡುವ ಮನುಷ್ಯರು ಯಾವ ರೀತಿಯವರೆಂಬುದೂ ಅಷ್ಟೇ ಮುಖ್ಯ. ಪೂರ್ಣಗೊಳಿಸಿ ಸುಂದರಿಸಲು ಮನುಷ್ಯನು ತನ್ನ ಜೀವನವನ್ನು ನ್ಯಾಯವಾಗಿ ಬಳಸುವ ತನ್ನ ಕೃತಿಗಳಲ್ಲೆಲ್ಲಾ ಸ್ವತಃ ಮನುಷ್ಯನೇ ಅಗ್ರಗಣ್ಯ. ಯಂತ್ರಬಲದಿಂದ ಮನೆಗಳನ್ನು ಕಟ್ಟಿಸಬಹುದು, ಧಾನ್ಯವನ್ನು ಬೆಳೆಯಿಸಬಹುದು, ಯುದ್ಧವನ್ನು ಮಾಡಿಸಬಹುದು, ಹೇತುಗಳನ್ನು (Causes) ಪ್ರತಿಪಾದಿಸಬಹುದು, ಚರ್ಚುಗಳನ್ನು ಸಹ ಕಟ್ಟಿಸಿ ಪ್ರಾರ್ಥನೆಗಳನ್ನು ಮಾಡಿಸಬಹುದು– ಎಂದಿಟ್ಟುಕೊಳ್ಳೋಣ; ಅದನ್ನೆಲ್ಲಾ ಯಂತ್ರಮಾನವರಿಂದ (Automatons) ಮಾಡಿಸಬಹುದೆಂದಿಟ್ಟುಕೊಳ್ಳಿ. ಆದರೆ ಈಗ ಹೆಚ್ಚು ನಾಗರಿಕವೆನಿಸಿದ ಜಾಗತಿಕ ಪ್ರದೇಶಗಳಲ್ಲಿ ವಾಸಿಸುವ, ನಿಸರ್ಗ ತಯಾರಿಸಬಲ್ಲ ಹಾಗೂ ತಯಾರಿಸಿಯೇ ತೀರುವ ಕ್ಷಾಮಮುಖ ಜನರನ್ನು ಕೂಡ ಕೊಟ್ಟು ಈ ಯಂತ್ರನರರನ್ನು ಕೊಂಡರೆ ಬಹಳ ನಷ್ಟವೇ ಆದೀತು. ಮಾನವಸ್ವಭಾವವೊಂದು ಯಂತ್ರವಲ್ಲ; ಅದನ್ನು ಮಾದರಿಯನ್ನೆದುರಿಟ್ಟುಕೊಂಡು ರಚಿಸಲು ಬರದು; ಅದರಿಂದ ಹೇಳಿದ್ದನ್ನೆಲ್ಲಾ ಯಂತ್ರದಂತೆ ಮಾಡಿಸಲು ಸಾಧ್ಯವಿಲ್ಲ. ಅದೊಂದು ಮರ; ತನ್ನನ್ನು ಜೀವತ್ ಪದಾರ್ಥವನ್ನಾಗಿ ಮಾಡಿದ ಅಂತಃಶಕ್ತಿಗಳ ಪ್ರವೃತ್ತಿಗನುಗುಣವಾಗಿ ಅದು ಸುತ್ತಲೂ ಬೆಳೆದು ನಿಲ್ಲುವುದು ಅದಕ್ಕಗತ್ಯ.

ಜನ ತನ್ನ ಗ್ರಹಣಶಕ್ತಿಯನ್ನು ಬಳಸಬೇಕು, ಬುದ್ಧಿಯುಕ್ತವಾಗಿ ಸಂಪ್ರದಾಯವನ್ನು ಪಾಲಿಸಬೇಕು; ಕೆಲವೊಮ್ಮೆ ಅದು ಬುದ್ಧಿಯುಕ್ತವಾಗಿ ಸಂಪ್ರದಾಯವನ್ನು ಬಿಡಬೇಕು; ಅಂಧ–ಯಾಂತ್ರಿಕ ಸಂಪ್ರದಾಯಶೀಲತೆಗಿಂತ ಇದೇ ಉತ್ತಮ– ಎಂಬುದನ್ನು ಎಲ್ಲರೂ ಒಪ್ಪುವುದು ಸಂಭವ. ಕೆಲಮಟ್ಟಿಗೆ ನಮ್ಮ ಗ್ರಹಣಶಕ್ತಿ ನಮ್ಮದಾಗಿರಬೇಕೆಂಬುದನ್ನು ಜನ ಒಪ್ಪುತ್ತದೆ. ಆದರೆ ಅದೇ ಮೇರೆಗೆ ನಮ್ಮ ಬಯಕೆಗಳೂ ಚೋದನೆಗಳೂ

ನಮ್ಮವೇ ಆಗಿರಬೇಕೆಂಬುದನ್ನು ಅಷ್ಟೇ ಒಲವಿನಿಂದ ಜನರು ಒಪ್ಪುವುದಿಲ್ಲ; ಅಥವಾ ಎಷ್ಟಾದರೂ ಅಳತೆಯ ಕಸುವುಳ್ಳ ನಮ್ಮವೇ ಆದ ಚೋದನೆಗಳನ್ನು ನಾವಿಟ್ಟುಕೊಳ್ಳುವುದು ಅಪಾಯಕರ ಎಂಬುದನ್ನೂ ಅವರಂಗೀಕರಿಸರು. ಹೀಗಿದ್ದರೂ ಬಯಕೆಗಳೂ ಚೋದನೆಗಳೂ, ಪೂರ್ಣಪ್ರಜ್ಞನಿಗೆ, ನಂಬಿಗೆಗಳೂ ಸಂಯಮಗಳೂ ಎಷ್ಟರಮಟ್ಟಿಗೆ ಅಂಗಗಳೋ ಅಷ್ಟೇ ಮಟ್ಟಿನ ಅಂಗಗಳೆನಿಸುತ್ತವೆ. ಸಮತೋಲವನ್ನು ಕಾಯ್ದುಕೊಳ್ಳದಾಗ– ಒಂದು ರೀತಿಯ ಗುರಿಗಳೂ ಒಲವುಗಳೂ ದೃಢವಾಗಿ ಬೆಳೆದು ನಿಂತು, ಜೊತೆಗಿರಬೇಕಾದ ಮತ್ತೊಂದು ರೀತಿಯವು ದುರ್ಬಲವೂ ನಿಷ್ಕ್ರಿಯವೂ ಆದಾಗ– ಬಲಿಷ್ಠ ಚೋದನೆಗಳು ಕೇವಲ ಅಪಾಯಕರ ಎನಿಸುತ್ತವೆ. ಮನುಷ್ಯರು ಕೆಟ್ಟ ಕೆಲಸ ಮಾಡುವುದು ಅವರ ಬಯಕೆಗಳು ಗಟ್ಟಿಯಾಗಿರುವುವೆಂದಲ್ಲ; ಅವರ ಆತ್ಮ ಸಾಕ್ಷಿಗಳು ಅಶಕ್ತವಾಗಿರುವುದರಿಂದ. ಬಲಿಷ್ಠ ಚೋದನೆಗಳಿಗೂ ದುರ್ಬಲ ಸಾಕ್ಷಿಚೇತನೆಗೂ ನೈಸರ್ಗಿಕ ಸಂಬಂಧವೇನೂ ಇಲ್ಲ. ನೈಸರ್ಗಿಕ ಸಂಬಂಧವಿರುವುದು ಇನ್ನೊಂದು ರೂಪದಲ್ಲಿ. ಒಬ್ಬನಿಗಿಂತ ಇನ್ನೊಬ್ಬನ ಬಯಕೆಗಳೂ ಭಾವನಾಂಶಗಳೂ ಬಲಿಷ್ಠ ಹಾಗೂ ಹೆಚ್ಚು ವಿವಿಧ ಎಂದರೆ ಅವನಲ್ಲಿ ಮಾನವ ಸ್ವಭಾವದ ಕಚ್ಚಾಮಾಲುಗಳು ಹೆಚ್ಚಾಗಿವೆ, ಆದುದರಿಂದ ಅವನು ಬಹುಶಃ ಕೇಡನ್ನು, ಖಂಡಿತವಾಗಿ ಒಳಿತನ್ನು ಮತ್ತೊಬ್ಬನಿಗಿಂತ ಹೆಚ್ಚು ಪ್ರಮಾಣದಲ್ಲಿ ಮಾಡಬಲ್ಲನು ಎಂದರ್ಥ. ಬಲಿಷ್ಠ ಅಂತಃಚೋದನೆಗಳೆಂಬುದು ಶಕ್ತಿ ಎಂಬುದರ ಇನ್ನೊಂದು ಹೆಸರು. ಶಕ್ತಿಯನ್ನು (Energy) ದುರುಪಯೋಗ ಮಾಡಬಹುದು– ಆದರೆ ಯಾವಾಗಲೂ ಅಲಸ–ನಿರ್ಭಾವಕ ಸ್ವಭಾವದವರಿಂದಾಗುವುದಕ್ಕಿಂತ ಶಕ್ತ, ಉತ್ಸಾಹಪೂರ್ಣ ಸ್ವಭಾವದರಿಂದ ಹೆಚ್ಚು ಒಳಿತು ಸಂಭವಿಸಬಹುದು. ಸ್ವಾಭಾವಿಕ ಭಾವನಾಬಲವುಳ್ಳವರೇ ಯಾವಾಗಲೂ ಸಂಸ್ಕೃತ ಭಾವನಾಬಲ ಸಂಪನ್ನತೆಯಲ್ಲಿ ಬಲಿಷ್ಠರಾಗಿ ಮಾರ್ಪಡಬಹುದು– ಅಂಥ ಸಂಸ್ಕಾರವನ್ನವರಿಗೆ ಕೊಡಬಹುದು. ವೈಯಕ್ತಿಕ ಅಂತಃಚೋದನೆಗಳನ್ನು ಸ್ಫುಟಗೊಳಿಸಿ ಶಕ್ತವನ್ನಾಗಿ ಮಾಡುವ ಬಲಿಷ್ಠ ಸಂವೇದನಾಗ್ರಾಹಕತೆಯೇ ಅತ್ಯಂತ ಆವೇಶ ನಿರ್ಭರವಾದ ಸದ್ಗುಣಪ್ರೇಮ ಮತ್ತು ಅತ್ಯುಗ್ರ ಆತ್ಮಸಂಯಮಗಳ ಜನಕ. ಈ ವೇದನಾಶಕ್ತಿಯ ಸಂಸ್ಕರಣ–ಅಭ್ಯಾಸಸಾಧ್ಯ ಸಂವರ್ಧನಗಳಿಂದಲೇ ಸಮಾಜವು ತನ್ನ ಕರ್ತವ್ಯವನ್ನೂ ಮಾಡಬಲ್ಲುದು, ತನ್ನ ಹಿತಾರ್ಥಗಳನ್ನೂ ಕಾಯ್ದುಕೊಳ್ಳಬಲ್ಲುದು. ಸಂವೇದನಾಗ್ರಹಣದ ಅಧಿಕ ಶಕ್ತಿಯಿಂದಲೇ ನರರು ನರಸಿಂಹರಾಗುವುದು, ಧೀರೋದಾತ್ತ ನಾಯಕರಾಗುವುದು! ಸಮಾಜವು ಅಂಥ ಶಕ್ತಿಯನ್ನು ನಿರ್ಮಿಸಲರಿಯದು. ಆದುದರಿಂದ ಅದನ್ನದು ಪರಿತ್ಯಜಿಸುವುದು ಒಳ್ಳೆಯದಲ್ಲ. ಚಾರಿತ್ರವಂತರೆಂದರೆ ಯಾರು ಗೊತ್ತೇ? ಯಾರ ಆಂತರಿಕ ಚೋದನೆಗಳು ಬಯಕೆಗಳೂ ಅವನವೇ ಆಗಿವೆಯೋ ಯಾರಲ್ಲಿ ಅವು ಸ್ವಭಾವದ ಪ್ರಕಾಶವಾಗಿವೆಯೋ ಯಾರು ಅವನ್ನು ತಿದ್ದಿ ಬೆಳೆಸಿಕೊಂಡಿರುವರೋ ಅವರೇ! ಯಾರ ಬಯಕೆಗಳೂ ಅಂತಃಚೋದನೆಗಳೂ (Impulses) ಅವರವಾಗಿಲ್ಲವೋ ಅವರಿಗೆ ಚಾರಿತ್ರ (Character) ಇಲ್ಲ. ಅವರಿಗಿರುವ ಚರಿತ್ರವೂ ಒಂದೇ, ಸ್ಟೀಂ ಎಂಜಿನ್ನಿಗಿರುವ ಚರಿತ್ರವೂ

ಒಂದೇ. ಚೋದನೆಗಳು ತನ್ನವೇ ಆಗಿರುವುದಷ್ಟೇ ಅಲ್ಲದೆ, ಅವು ಬಲಿಷ್ಠವೂ ಆಗಿದ್ದರೆ ಮತ್ತು ಅವು ಬಲಿಷ್ಠ ಇಚ್ಛಾಶಕ್ತಿಯ ನಿಯಂತ್ರಣಕ್ಕೊಳಪಟ್ಟಿದ್ದರೆ ಒಬ್ಬನು ಉತ್ಸಾಹಮಯ ಚರಿತ್ರನೆನ್ನಿಸಿಕೊಳ್ಳುತ್ತಾನೆ. ಬಯಕೆ–ಚೋದನೆಗಳ ವ್ಯಕ್ತಿ ವೈಶಿಷ್ಟ್ಯವನ್ನು ಪ್ರೋತ್ಸಾಹಿಸಬಾರದೆನ್ನುವ, ಅವುಗಳ ವಿಕಾಸವಾಗಕೂಡದೆನ್ನುವ ಯಾರೇ ಆಗಲಿ, ಅವರು ಸಮಾಜಕ್ಕೆ ಬಲಿಷ್ಠ ಸ್ವಭಾವದವರು ಬೇಕಾಗಿಲ್ಲ, ಚಾರಿತ್ರಸಮೃದ್ಧಿಯುಳ್ಳವರು ಹೆಚ್ಚಾಗಿರುವುದರಿಂದ ಸಮಾಜ ಉತ್ತಮತರವೆನಿಸುವುದಿಲ್ಲ ಮತ್ತು ಶಕ್ತಿಯ ಉನ್ನತವಾದ ಸರಾಸರಿ ಮಟ್ಟ ಅನಪೇಕ್ಷಣೀಯ ಎಂದು ಸಾಧಿಸಬೇಕಾಗುತ್ತದೆ.

ಸಮಾಜದ ಕೆಲ ಪ್ರಾಚೀನಾವಸ್ಥೆಗಳಲ್ಲಿ ಈ ಶಕ್ತಿಗಳು ಅವನ್ನು ವ್ಯವಸ್ಥೆಗೊಳಿಸಿ ನಿಯಂತ್ರಣದಲ್ಲಿಡಲು ಸಮಾಜಕ್ಕಿದ್ದ ಬಲವನ್ನು ಮೀರಿದ್ದವು. ಒಂದು ಕಾಲದಲ್ಲಿ ಸ್ವಯಂಸ್ಫೂರ್ತಿಯ (Spontaneity) ಮತ್ತು ವ್ಯಕ್ತಿವೈಶಿಷ್ಟ್ಯದ ಅಂಗವು ಅಧಿಕವಾಗಿತ್ತು; ಸಾಮಾಜಿಕ ತತ್ತ್ವವು ಅದರೊಡನೆ ಘೋರ ಹೋರಾಟ ಮಾಡಬೇಕಾಯಿತು. ಬಲಿಷ್ಠವಾದ ಶರೀರ ಅಥವಾ ಮನವುಳ್ಳ ಮನುಷ್ಯರನ್ನು ತಮ್ಮ ಒಳಚೋದನೆಗಳನ್ನು ನಿಯಂತ್ರಿಸಿಕೊಳ್ಳಬೇಕೆಂದು ಹೇಳುವ ನಿಯಮಗಳಿಗೆ ವಿಧೇಯರನ್ನಾಗಿ ಮಾಡಲು ಒತ್ತಾಸೆ ತರುವುದೇ ಅಂದಿನ ಕಷ್ಟವಾಗಿತ್ತು. ಈ ಕಷ್ಟದ ಪರಿಹಾರಕ್ಕಾಗಿ ಚಕ್ರವರ್ತಿಗಳ ವಿರುದ್ಧವಾಗಿ ಪೋಪರು ಗುದ್ದಾಡಿದಂತೆ– ಕಾಯಿದೆ ಹಾಗೂ ಶಿಸ್ತುಗಳು ಇಡೀ ಮನುಷ್ಯನ ಮೇಲೆ ತಮ್ಮ ಅಧಿಕಾರವಿದೆಯೆಂದು ಸಾರಿದವು. ಅವನ ಚಾರಿತ್ರ ನಿಯಂತ್ರಣದ ಸಲುವಾಗಿ ಅವು ಅವನ ಇಡೀ ಬಾಳನ್ನು ನಿಯಂತ್ರಿಸುವ ಹಕ್ಕು ತಮ್ಮದೆಂದವು. ಸಮಾಜಕ್ಕಾಗ ಮನುಷ್ಯರ ಭಾವನಾಭೂಯಿಷ್ಠತೆಯನ್ನು ನಿಯಂತ್ರಣದಲ್ಲಿಡುವ ಬೇರೆಯ ಸಾಧನ ಗೊತ್ತಿದ್ದಿಲ್ಲ. ಆದರೀಗ ಸಮಾಜವು ವ್ಯಕ್ತಿವೈಶಿಷ್ಟ್ಯವನ್ನು ಮೊದಲಿಗಿಂತ ತಕ್ಕಮಟ್ಟಿಗೆ ಹೆಚ್ಚು ಹತೋಟಿಯಲ್ಲಿಟ್ಟುಕೊಳ್ಳಬಲ್ಲುದಾಗಿದೆ. ಮನುಷ್ಯಸ್ವಭಾವಕ್ಕೆದುರಾದ ಅಪಾಯವಿಂದು ಅತಿ ಭಾವನೆಯದಲ್ಲ– ವೈಯಕ್ತಿಕ ಚೋದನೆ ಹಾಗೂ ಬೇಕುಗಳ ಉತ್ತಮಾಧಮಾದಿ ತಾರತಮ್ಯಗಳ ಕೊರತೆಯದು! ಹಿಂದೆ ಸತ್ವಶಾಲಿಗಳೂ ಸ್ಥಾನಬಲ ಸಂಪನ್ನರೂ ಕಾಯಿದೆ ಕಟ್ಟುಗಳ ವಿರುದ್ಧವಾಗಿ ದಂಗೆಯೇಳುವ ಅಭ್ಯಾಸದವರಾಗಿದ್ದರು. ಅವರನ್ನು ಬಿಗಿಯಾದ ಹಿಡಿತದಲ್ಲಿ ಇಡದಿದ್ದರೆ, ಸುರಕ್ಷಿತತೆಯ ಒಂದು ಕಣವನ್ನು ಅನುಭವಿಸುವುದೂ ಅವರ ಕಕ್ಷೆಯೊಳಗಿನ ಯಾರಿಗೂ ಸಾಧ್ಯವಾಗುತ್ತಿದ್ದಿಲ್ಲ. ಇಂದಿನ ಕಾಲದಲ್ಲಿ ಅತ್ಯುನ್ನತ ವರ್ಗದಿಂದ ಹಿಡಿದು ಅತ್ಯವನತ ವರ್ಗದವರೆಗೆ ಪ್ರತಿಯೊಬ್ಬನೂ ವೈರಿಯಂಥ ಭಯಂಕರ ಪ್ರತ್ಯವೇಕ್ಷಣ ದೃಷ್ಟಿಗೀಡಾದರೆ ಹೇಗೋ ಹಾಗೆ ಬದುಕುತ್ತಿದ್ದಾನೆ. ಮಿಕ್ಕವರಿಗೆ ಸಂಬಂಧಿಸಿದ ಸಂಗತಿಗಳಲ್ಲಷ್ಟೇ ಅಲ್ಲ ತನ್ನ ಅಥವಾ ತನ್ನ ಕುಟುಂಬದ ವ್ಯವಹಾರದಲ್ಲಿಯೂ "ನನಗೆ ಯಾವುದಕ್ಕಿಂತ ಯಾವುದು ಉತ್ತಮ? ಅಥವಾ ಯಾವುದು ತನ್ನ ಚಾರಿತ್ರಕ್ಕೂ ಮನಃಪ್ರವೃತ್ತಿಗೂ ಹೊಂದುತ್ತದೆ? ನನ್ನಲ್ಲಿರುವ ಯಾವ ಅತ್ಯುತ್ತಮ–ಅತ್ಯುನ್ನತ ಗುಣದ ವಿಕಾಸಕ್ಕೆ ಯಾವುದು ಅವಕಾಶವೀಯುತ್ತದೆ?"

ಎಂದು ಯಾರೂ ತಮ್ಮನ್ನು ತಾವೇ ಕೇಳಿಕೊಳ್ಳುವುದಿಲ್ಲ. ಅವರು ಕೇಳಿಕೊಳ್ಳುವುದು ಹೀಗೆ: "ನನ್ನ ಸ್ಥಾನಕ್ಕೆ ಯಾವುದು ಭೂಷಣ? ನನ್ನಂತಹ ಸ್ಥಾನ–ಮಾನ–ಧನ–ದೌಲತ್ತುಗಳುಳ್ಳವರು ಏನು ಮಾಡುತ್ತಿದ್ದಾರೆ? (ಅದಕ್ಕೂ ಕನಿಷ್ಠವೆಂದರೆ) ನನಗಿಂತ ಉನ್ನತ ಸ್ಥಾನ–ಮಾನ–ಧನಾದಿಗಳುಳ್ಳವರು ಏನು ಮಾಡುತ್ತಾರೆ?" ತಮಗೊಲವಿರುವುದನ್ನು ಬಿಟ್ಟು ಅವರು ರೂಢಿಯಲ್ಲಿರುವುದನ್ನು ಆಯ್ದುಕೊಳ್ಳುತ್ತಾರೆಂದಲ್ಲ ನಾನು ಹೇಳುವುದು. ರೂಢಿಯಲ್ಲಿದ್ದುದರ ಬಗೆಗಲ್ಲದೆ ಮಿಕ್ಕದ್ದಕ್ಕೆ ಏನಾದರೂ ಒಲವನ್ನಿಟ್ಟುಕೊಳ್ಳಬೇಕೆಂಬುದೇ ಅವರಿಗೆ ಹೊಳೆಯುವುದಿಲ್ಲ! ಹೀಗೆ ಮನವೇ ನೊಗಕ್ಕೆ ಕೊರಳು ಕೊಟ್ಟುಕೊಂಡಿರುತ್ತದೆ. ಖುಶಿಗಾಗಿ ಜನ ಮಾಡುವುದರಲ್ಲಿ ಸಹ ಸಂಪ್ರದಾಯಶರಣತೆಯನ್ನೇ ಮೊದಲು ಅವರು ಎಣಿಸುತ್ತಾರೆ. ಅವರಿಗೆ ಗುಂಪಿನಲ್ಲಿದ್ದು ಬಯಸುವುದು ಸೇರುತ್ತದೆ. ಸಾಮಾನ್ಯವಾಗಿ ಮಾಡುವವುಗಳಲ್ಲೇ ಅವರು ತಮ್ಮ ವರಣಶಕ್ತಿಯನ್ನು ಬಳಸುತ್ತಾರೆ. ಅಭಿರುಚಿಯ ವಿಲಕ್ಷಣತೆ, ನಡತೆಯ ವಿಚಿತ್ರತೆಗಳನ್ನು ಅವರು ಘೋರಾಪರಾಧವೆಂದು ತ್ಯಜಿಸಿಬಿಡುತ್ತಾರೆ. ಎಲ್ಲಿಯವರೆಗೆ ಅವರು ಹಾಗೇ ಬಿಡುತ್ತಾಹೋಗುತ್ತಾರೆ ಗೊತ್ತಿದೆಯೆ? ತಮ್ಮ ಸ್ವಭಾವದಂತೆ ನಡೆದುಕೊಳ್ಳದೆ ಇರುವ ಸಾಹಸದಲ್ಲಿ ಅವರಿಗೆ ಅನುಸರಿಸಲು ಸ್ವಭಾವವೆಂಬುದೇ ಉಳಿದಿರುವುದಿಲ್ಲ! ಅವರ ಮಾನುಷ ಶಕ್ತಿಗಳೆಲ್ಲ ಕ್ಷಾಮಪೀಡಿತವಾಗಿ ಒಣಗಿ ಉದುರಿಹೋಗುತ್ತವೆ. ಅವರಿಗೆ ಬಲವಾದ ಆಸೆಯೆಂಬುದೇ ಇರದು– ಸಹಜ ಸಂತೋಷವೆಂಬುದೇ ಉಳಿಯದು! ಮನೆತನದ ಬೆಳವಣಿಗೆಯ ಅಥವಾ ಉಚಿತ ರೀತಿಯಲ್ಲಿ ತಮ್ಮದೇ ಆದ ಅಭಿಪ್ರಾಯಗಳಾಗಲಿ, ಭಾವನಾಂಶಗಳಾಗಲಿ ಇರುವುದೇ ಇಲ್ಲ! ಇಂಥ ಒಂದು ಬಗೆಯ ಮನುಷ್ಯಪಿಂಡಗಳನ್ನು ಕಂಡಬಳಿಕ ಈಗ ಹೇಳಿರಿ. ಮನುಷ್ಯ ಸ್ವಭಾವದ ಅಪೇಕ್ಷಣೀಯ ಸ್ಥಿತಿ ಇದು ಹೌದೋ ಅಲ್ಲವೋ?

ಕಾಲ್ವಿನಿಸ್ಟಿಕ್ ಸಿದ್ಧಾಂತದ ಮೇರೆಗೆ ಇದೇ ಅಪೇಕ್ಷಣೀಯ ಸ್ಥಿತಿ. ಅದರ ಪ್ರಕಾರ ಸ್ವ–ಇಚ್ಛೆಯೇ ಮನುಷ್ಯನ ಮಹಾಪರಾಧ. ವಿಧೇಯತೆಯಲ್ಲಿಯೇ ಮನುಷ್ಯ ಸಮಾಜಕ್ಕೆ ಶಕ್ಯವಿರುವ ಎಲ್ಲಾ ಒಳಿತೂ ಅಡಗಿದೆ. ನಿಮಗೆ ಆಯ್ಕೆಯಿಲ್ಲ; ಹೀಗೆ ನೀವು ಮಾಡತಕ್ಕದ್ದು; ಹಾಗಲ್ಲ: "ಕರ್ತವ್ಯವಲ್ಲದುದೆಲ್ಲಾ ಪಾಪ." ಮನುಷ್ಯಸ್ವಭಾವವು ಮೂಲತಃ ಅಪವಿತ್ರವಾಗಿರುವುದರಿಂದ ಮನುಷ್ಯಸ್ವಭಾವವನ್ನು ಅಲ್ಲೇ ಕೊಂದ ಹೊರತು ಉದ್ಧಾರವಿಲ್ಲ. ಈ ಸಿದ್ಧಾಂತಿಗೆ ಮನುಷ್ಯನ ಯಾವ ಶಕ್ತಿಯನ್ನು ದಮನಮಾಡಿದರೂ ಪಾಪವೆನಿಸದು. ಮನುಷ್ಯನಿಗೆ ಯಾವ ಶಕ್ತಿಯೂ ಬೇಕಾಗಿಲ್ಲ– ದೇವರಿಗೆ ಶರಣಾಗತನಾದರೆ ಮುಗಿದು ಹೋಯಿತು– ಅವನಿಚ್ಛೆಗೆ ತನ್ನ ಆತ್ಮಾರ್ಪಣೆಮಾಡಿಕೊಂಡರಾಯಿತು. ದೈವೇಚ್ಛೆಯೆಂದು ತಾನು ತಿಳಿದುಕೊಂಡದ್ದನ್ನು ಹೆಚ್ಚು ಪರಿಣಾಮಕರವಾಗಿ ಮಾಡುವುದಕ್ಕಲ್ಲದೆ ಇನ್ನಾವುದನ್ನಾದರೂ ಮಾಡಲು ಅವನು ತನ್ನ ಶಕ್ತಿಗಳನ್ನು ಬಳಸುವುದೇ ಆದರೆ, ಮನುಷ್ಯನಿಗೆ ಅಂಥ ಶಕ್ತಿಗಳಿಲ್ಲದಿರುವುದೇ ಲೇಸು. ಇದೇ ಕಾಲ್ವಿನಿಸಂ ಎಂಬ ಸಿದ್ಧಾಂತ. ಕಾಲಿನಿಸ್ಟ್ ಎಂದು ತಮ್ಮನ್ನು ಕರೆದುಕೊಳ್ಳದ

ಹಲವಾರು ಈ ಸಿದ್ಧಾಂತವನ್ನು ಅದರ ಸೂಕ್ಷ್ಮರೂಪದಲ್ಲಿ ಒಪ್ಪಿಕೊಂಡಿರುತ್ತಾರೆ. ಅದರ ರೂಪವನ್ನು ಸೂಕ್ಷ್ಮ ಅಥವಾ ಹ್ರಸ್ವಗೊಳಿಸಿದ್ದು ಯಾವುದರಲ್ಲಿ? ದೈವೇಚ್ಛೆ ಎಂದು ತಿಳಿದುಕೊಂಡದ್ದಕ್ಕೆ ಸ್ವಲ್ಪ ಕಡಿಮೆ ಪ್ರಮಾಣದ ತಾಪಸವ್ಯಾಖ್ಯೆಯನ್ನು ಮಾಡುವುದರಲ್ಲಿ, ಮನುಷ್ಯ ಜಾತಿ ತನ್ನ ಕೆಲವು ಒಲವುಗಳನ್ನು ತೃಪ್ತಿಪಡಿಸಿಕೊಳ್ಳಬೇಕೆಂದು ದೈವೇಚ್ಛೆಯಿದೆ ಎಂದು ಸಾರುವುದರಲ್ಲಿ–ಅದಾದರೋ ತನಗೆ ಬೇಕಾದ ರೀತಿಯಲ್ಲಲ್ಲ, ವಿಧೇಯತೆಯ ರೂಪದಲ್ಲಿ; ಅಂದರೆ, ಪ್ರಾಧಿಕಾರ ಹೇಳಿದ ರೀತಿಯಲ್ಲಿ ಮತ್ತು ಆ ಕಾರಣದಿಂದ ಪ್ರಕರಣದ ಆವಶ್ಯಕ ಉಪಾಧಿಯ ಮೇರೆಗೆ–ಇದು ಎಲ್ಲರಿಗೂ ಒಂದೇ.

ಈಗ ಇಂಥ ದ್ರೋಹರೂಪದಲ್ಲಿದೆ– ಜೀವನದ ಈ ಸಂಕುಚಿತ ಸಿದ್ಧಾಂತಕ್ಕೆ ಉನ್ಮುಖವಾದ ಬಲಿಷ್ಠ ಪ್ರವೃತ್ತಿ. ಇದು ಪೋಷಿಸುವ ಮಾನವ ಚಾರಿತ್ರವು ಚಿವುಟಿ ಮಾಡಿದ, ಚರ್ಮದ ರಕ್ಷಾಕವಚವುಳ್ಳ ಬೊಂಬೆಯಂತಿದೆ. ಮರಗಳ ತಲೆಸವರಿ ಕೋಡುಗಳೆದ ಎತ್ತಿನ ಗುಡ್ಡದ ಬೋಳಿನಂತೆ ಅವುಗಳ ಮಂಡೆಯನ್ನು ಬೋಳು ಮಾಡಿದರೆ ಚೆಂದ; ಇಲ್ಲವೆ ಅವನ್ನು ಕತ್ತರಿಸಿ ಪ್ರಾಣಿ–ಪಕ್ಷಿಗಳ ರೂಪಕ್ಕೆ ತಿರುಗಿಸಿದರೆ ಸೊಗಸು; ನಿಸರ್ಗತ: ಅವು ಇದ್ದಹಾಗೆಯೇ ಇದ್ದರೆ ಲಾಯಖ್ ಅಲ್ಲ ಎಂದು ಬಹಳ ಜನ ಹೇಳುವುದುಂಟು. ಹಾಗೇ ಮೇಲೆ ಹೇಳಿದಂತೆ ಮಾನವರನ್ನು ಕುಗ್ಗಿಸಿ, ಬಗ್ಗಿಸಿ, ತಗ್ಗಿಸಿ ವಾಮನಾವತಾರಕ್ಕಿಳಿಸಿದರೆ ಸೃಷ್ಟಿಕರ್ತನ ಇಚ್ಛೆಯಂತೆ ಅವರನ್ನು ರೂಪಿಸಿದಂತಾಗುವುದೆಂದೂ ಬಹಳ ಜನ ತಿಳಿಯುತ್ತಾರೆ. ಈ ಕಾಲ್ವಿನಿಸಮ್ಮಿಗೆ ವಿರುದ್ಧವಾಗಿ– ಮನುಷ್ಯರನ್ನು ಹುಟ್ಟಿಸಿದವನೊಬ್ಬ ಒಳ್ಳೆಯ ದೇವರು; ಆತನು ಸಂಸ್ಕರಿಸಿ ಬೆಳೆಸಿಕೊಳ್ಳಲೆಂದು ಮನುಷ್ಯರಿಗೆ ವಿವಿಧ ಶಕ್ತಿಗಳನ್ನು ಕೊಟ್ಟಿದ್ದಾನಲ್ಲದೆ; ಕಿತ್ತೊಗೆಯಲೆಂದು ಮನುಷ್ಯರಿಗೆ ವಿವಿಧ ಶಕ್ತಿಗಳನ್ನು ಕೊಟ್ಟಿದ್ದಾನಲ್ಲದೆ, ಕಿತ್ತೊಗೆಯಲೆಂದಲ್ಲ, ನುಂಗಿ ನಿರ್ನಾಮ ಮಾಡಲೆಂದಲ್ಲ; ತನ್ನ ಸೃಷ್ಟಿಗಳು ಅವುಗಳಲ್ಲಿ ತಾನಡಗಿಸಿಟ್ಟ ಆದರ್ಶಕಲ್ಪನೆಗೆ ಹತ್ತಿರಹತ್ತಿರ ಹೋಗಲು ಯತ್ನಿಸಿದರೆ, ವಿಷಯಗ್ರಹಣ ಕಾರ್ಯಕರಣ– ಭೋಗಶಕ್ತಿಗಳಲ್ಲಿ ಮುನ್ನಡೆಯನ್ನು ಸಾಧಿಸಿದರೆ ಸಂತೋಷಪಡುತ್ತಾನೆ ಎಂದು ನಂಬುವ ಧರ್ಮವು ಒಳ್ಳೆಯದು. ಏಕೆಂದರೆ, ಇದರಲ್ಲಿ ಮಾನವಸ್ವಭಾವವು ಮಾನವನಿಗೆ ದೊರಕಿರುವುದು ನಷ್ಟಗೊಳಿಸಿಕೊಳ್ಳಲಿಕ್ಕಲ್ಲ– ಅದರ ಉದ್ದೇಶ ಬೇರೆ ಇದೆ ಎಂಬ ಸೂತ್ರವಿದೆ. ಭೌತಾರಾಧಕರ (Pagans) ಮಮಾಸ್ತಿವಾದ (Self-assertion), ಕ್ರೈಸ್ತರ ಮಮನಾಸ್ತಿವಾದ (Self-denial) ಮತ್ತು ಗ್ರೀಕರ ಆತ್ಮವಿಕಾಸವಾದ ಎಂಬವು ಮೂರು ಮಾನವ್ಯ ಮೌಲ್ಯದ ಕಲ್ಪನೆಗಳನ್ನು ಹೇಳುತ್ತವೆ. ಇವುಗಳಲ್ಲಿ ಮೂರನೆಯದರೊಡನೆ ಪ್ಲೇಟೋ–ಕ್ರೈಸ್ತ ಸ್ವಪ್ರಶಾಸನಾದರ್ಶವು (Ideal of self-government) ಸಮನ್ವಿತವಾಗುತ್ತದೆ; ಆದರೆ ಅದನ್ನು ಅದುಮಿ ಮೇಲೆ ನಿಲ್ಲುವುದಿಲ್ಲ. ಆಲ್ಸಿಬಿಯಾಡಿಸನಾಗುವುದಕ್ಕಿಂತ ಜಾನ್ ನಾಕ್ಸನಾಗುವುದು ಲೇಸು; ಅವರಿಬ್ಬರಂತಾಗುವುದಕ್ಕಿಂತಲೂ ಪೆರಿಕ್ಲೀಸನಂತಾಗುವುದು ಸರ್ವೋತ್ತಮ. ಈಗೇನಾದರೂ ಪೆರಿಕ್ಲೀಸನಂಥವನು ಸಿಕ್ಕಿದರೆ, ಅವನಲ್ಲಿ ಜಾನ್ ನಾಕ್ಸನಲ್ಲಿಯ ಸದ್ಗುಣಗಳಿದ್ದೇ ಇರುವುದು ಖಂಡಿತ.

ಪ್ರತಿಯೊಬ್ಬರಲ್ಲೂ ಇರುವ ವ್ಯಕ್ತಿವೈಶಿಷ್ಟ್ಯಗಳನ್ನು ಏಕರೂಪಕ್ಕಿಳಿಸಿ ಸವೆಯಿಸುವುದರಲ್ಲಲ್ಲ–ಅವನ್ನು ಸಂಸ್ಕರಿಸಿ, ಮಿಕ್ಕವರ ಹಕ್ಕು–ಹಿತಾರ್ಥಗಳು ಹೇರುವ ಗಡಿಮಿತಿಗಳೊಳಗೆ ಪ್ರಕಾಶ ಪಡಿಸುವುದರಲ್ಲೇ ಮನುಷ್ಯಜೀವಿಗಳು ಉದಾರ–ಸುಂದರ ಧ್ಯೇಯವಸ್ತುಗಳಾಗಿ ಪರಿಣಮಿಸುವುದು! ಕೃತಿಗಳಲ್ಲಿ ಕರ್ತನ ಗುಣ ಕಂಡು ಬರುವಂತೆ ಸಂಪನ್ನ, ವಿವಿಧ ಮತ್ತು ಸಂಜೀವಕ ಎನಿಸುವ ಮಾನವ ಜೀವನದಲ್ಲಿ ಅದರ ಕರ್ತನ ಗುಣವನ್ನು ಗುರುತಿಸಬಹುದು. ಇಂಥ ತುಂಬು ಬಾಳಿನಲ್ಲಿ ಉನ್ನತ ವಿಚಾರ–ಭಾವನೆಗಳ ಪ್ರಚೋದನೆ ಸಿಗುತ್ತದೆ; ಇದು ಮಾನವ ಕುಲಕ್ಕೂ ವ್ಯಕ್ತಿಗೂ ಇರುವ ಸಂಬಂಧವನ್ನು ದೃಢಪಡಿಸುತ್ತದೆ. ಆಗ ನಾವು ಮಾನವ ಕುಲಕ್ಕೆ ಸೇರಿದ್ದು ಮತ್ತಷ್ಟು ಸಾರ್ಥಕ ಎನಿಸುತ್ತದೆ. ಒಬ್ಬನ ವ್ಯಕ್ತಿವೈಶಿಷ್ಟ್ಯವು ಎಷ್ಟೆಷ್ಟು ಬೆಳೆಯುವುದೋ ಅಷ್ಟಷ್ಟೂ ಅವನು ಅವನಿಗೇ ಹೆಚ್ಚು ಬೆಲೆ ಬಾಳುವವನಾಗುತ್ತಾನೆ; ಆ ಮೂಲಕ ಇತರರಿಗೂ ಅವನು ಬೆಲೆಗೆ ಬರುವ ಮನುಷ್ಯನಾಗುತ್ತಾನೆ. ಅವನ ಇರವಿನಲ್ಲೇ ಹೆಚ್ಚಿನ ಪೂರ್ಣತೆ ಇರುತ್ತದೆ, ಚೈತನ್ಯಮಯತೆ ಇರುತ್ತದೆ. ಅಂಥ ಸಚೇತನ ಪೂರ್ಣತರ ವ್ಯಷ್ಟಿ ಅಧಿಕ ಸಂಖ್ಯೆವಾಗುತ್ತ ಹೋದಹಾಗೆ, ಸಮಷ್ಟಿಯೂ ಅಧಿಕತರ ಚೇತನಾಸಂಪನ್ನವಾಗುತ್ತ ಹೋಗುತ್ತದೆ. ಆದರೆ ಬಲಿಷ್ಠರು ದುರ್ಬಲರ ಹಕ್ಕುಗಳನ್ನು ಕಸಿದುಕೊಳ್ಳುವುದನ್ನು ತಡೆಯಲು ಬೇಕಾದಷ್ಟು ನಿಯಮವನ್ನು (Compression) ಇಟ್ಟುಕೊಂಡಿರುವುದು ಅಪರಿಹಾರ್ಯ. ಇಷ್ಟನ್ನು ಹೊರತುಪಡಿಸಿ, ಮಿಕ್ಕ ಭಾಗದಲ್ಲಿ ವ್ಯಕ್ತಿಗೆ ವ್ಯವಹಾರ ಸ್ವಾತಂತ್ರ್ಯವು ಅಕುಂಠಿತವಾಗಿದ್ದರೆ, ಹಾಗೆ ಅವನಿಗಿತ್ತ ಅವಕಾಶಕ್ಕೆ ಮಾನವ್ಯ ವಿಕಾಸದ ದೃಷ್ಟಿಯಿಂದ ಹೇರಳ ಪರಿಹಾರ (ಪ್ರತಿಲಾಭ) ಉಂಟು. ಪರರಿಗೆ ಹಾನಿಯಾಗುವಂತೆ ತನ್ನೊಲವುಗಳನ್ನು ತೃಪ್ತಿಪಡಿಸಿಕೊಳ್ಳುವುದನ್ನು ತಡೆಯುವುದರಿಂದ ವ್ಯಕ್ತಿಯು ಕಳೆದುಕೊಳ್ಳುವ ಸಾಧನಗಳೆಲ್ಲವೂ ಮುಖ್ಯವಾಗಿ ಅನ್ಯರ ಅಭಿವೃದ್ಧಿಗೆ ಅಡ್ಡಿಯೊಡ್ಡಿಯೇ ಪಡೆದಂಥವಾಗಿರುತ್ತವೆ. ಅವನು ಪಡಿವ ನಷ್ಟಕ್ಕೂ ಪ್ರತಿಯಾಗಿ ತನ್ನ ಸ್ವಭಾವದ ಸಾಮಾಜಿಕಾಂಶದ ಉತ್ತಮತರ ಬೆಳವಣಿಗೆಯು ಅವನಿಗೆ ಲಭಿಸುತ್ತದೆ; ಅದರ ಸ್ವಾರ್ಥಮುಖವನ್ನು ನಿಯಂತ್ರಿಸುವುದರಿಂದ ಅಂಥ ಅಭಿವೃದ್ಧಿ ಅವನಿಗೆ ಸಾಧ್ಯವಾಗುತ್ತದೆ. ಅನ್ಯರಿಗಾಗಿ ನ್ಯಾಯಸಾರಥಿಯ ಬಿಗಿಯಾದ ಲಗಾಮುಗಳಿಗೆ ಒಳಪಟ್ಟಿರುವುದು ಪರೋಪಕಾರಸಾಧಕವಾದ ಶಕ್ತಿ–ಭಾವನೆಗಳನ್ನು ವ್ಯಕ್ತಿಯಲ್ಲಿ ಬೆಳೆಸುತ್ತದೆ. ಆದರೆ ಪರರ ಒಳಿತಿಗೆ ಸಂಬಂಧಿಸದ ವಿಷಯಗಳಲ್ಲಿ ಪರರ ಅಸಂತೋಷ ಮಾತ್ರದಿಂದ ನಿಯಂತ್ರಿತವಾಗಿರುವುದರಿಂದ ವ್ಯಕ್ತಿಯಲ್ಲಿ ಬೆಲೆಗೆ ಬರುವ ಯಾವುದೂ ಬೆಳೆದು ನಿಲ್ಲದು– ಒಮ್ಮೆ ಏನಾದರೂ ಬೆಳೆದರೆ, ಅಂಥ ಪ್ರತಿಬಂಧವನ್ನು ಪ್ರತಿಭಟಿಸುವುದರಲ್ಲಿ ಪ್ರಕಟವಾಗಬಹುದಾದ ಚಾರಿತ್ರಶಕ್ತಿಯೊಂದೇ ಬೆಳೆದೀತು; ಆ ನಿಯಂತ್ರಣವನ್ನು ಸ್ವೀಕರಿಸಿ ಉಳಿದುದೇ ಆದರೆ, ಅದು ಮನುಷ್ಯನ ಇಡೀ ಸ್ವಭಾವವನ್ನು ಮಂಕುಗೊಳಿಸಿ ಬೊಡ್ಡು ಮಾಡಿ ಒಗೆಯುತ್ತದೆ. ಪ್ರತಿಯೊಬ್ಬನ ಸ್ವಭಾವಕ್ಕೂ ನ್ಯಾಯವಾದ ವಿಕಾಸಾವಕಾಶವನ್ನು ಕೊಡಬೇಕೆನ್ನುವುದಾದರೆ, ಬೇರೆಬೇರೆಯವರಿಗೆ ಬೇರೆಬೇರೆ ರೀತಿಯಲ್ಲಿ ಬದುಕಲು ಬಿಡಬೇಕಾಗುವುದು ಅತಿ ಮುಖ್ಯ. ಇತಿಹಾಸಾವಧಿಗಳಲ್ಲಿ ಈ

ಔದಾರ್ಯವನ್ನು ಯಾವಾಗ ಎಷ್ಟು ಪ್ರಮಾಣದಲ್ಲಿ ಕಾರ್ಯತಃ ತೋರಿಸಲಾಗಿದೆಯೋ ಆಗ ಅಷ್ಟೇ ಪ್ರಮಾಣದಲ್ಲಿ ಆ ಅವಧಿಯು ಮುಂದಿನ ತಲೆಮಾರಿನವರಿಗೆ ಪ್ರಶಸ್ತ, ಸ್ತುತ್ಯ, ಗಣ್ಯ ಎನಿಸಿದೆ. ವ್ಯಕ್ತಿವೈಶಿಷ್ಟ್ಯಗಳು ಉಳಿದುಕೊಂಡಿರುವವರೆಗೆ ನಿರಂಕುಶಪ್ರಭುತ್ವ ಕೂಡ ಬಹಳ ಕೇಡೆನ್ನಿಸದು. ಯಾವಯಾವದು ವ್ಯಕ್ತಿ ವೈಶಿಷ್ಟ್ಯವನ್ನು ದಮಿಸುವುದೋ ಅದೆಲ್ಲಾ ನಿರಂಕುಶ ಪ್ರಭುತ್ವ. ಅಂಥ ನಿರಂಕುಶ ಪ್ರಶಾಸನವು ತಾನು ಈಶ್ವರೇಚ್ಛೆಯನ್ನು ಜಾರಿಗೆ ತರುತ್ತೇನೆ ಎಂದರೂ ಒಂದೇ, ಜನಾದೇಶವನ್ನು ಅಮಲಿಗೆ ತರುತ್ತೇನೆ ಎಂದರೂ ಒಂದೇ–ಅದರ ಬಣ್ಣವೇನೂ ಬದಲಾಗದು.

ವ್ಯಕ್ತಿವೈಶಿಷ್ಟ್ಯದ ಬೆಳವಣಿಗೆಯೇ ನಿಜವಾದ ಬೆಳವಣಿಗೆ, ಅದರ ಸಂಸ್ಕರಣಾಭ್ಯಾಸವು ಸಂಪುಷ್ಟ ಮನುಷ್ಯರನ್ನು ತಯಾರಿಸುತ್ತದೆ ಅತವಾ ತಯಾರಿಸಬಲ್ಲುದು– ಎಂದು ಹೇಳಿದ ಮೇಲೆ ಎಲ್ಲಾ ಮಾತು ಮುಗಿಯಬೇಕು. ಏಕೆಂದರೆ, ಯಾವ ಸನ್ನಿವೇಶ ಅಥವಾ ಮಾನವ–ವ್ಯವಹಾರ–ಪರಿಸ್ಥಿತಿಯು ಮಾನವನನ್ನು ಅವನಿಗೆ ಶಕ್ಯವಿರುವಷ್ಟು ಮಟ್ಟದ ಉತ್ತಮಿಕೆಗೆ ಒಯ್ದು ಮುಟ್ಟಿಸುವುದೋ ಅಂಥವರ ಬಗ್ಗೆ ಹೆಚ್ಚೇನನ್ನು ಹೇಳಲಾದೀತು? ಅಥವಾ ಇದನ್ನು ತಡೆಯುವ ವಿಘ್ನಕ್ಕಿಂತ ಕಟುತರವಾದ ಹಿತಾರ್ಥಭಂಗ ಇನ್ನಾವುದೆಂದು ಹೇಳಲು ಬಂದೀತು? ಹೀಗಿದ್ದರೂ ಯಾರಿಗೆ ನಾವು ಮನಗಾಣಿಸಬೇಕಾದದ್ದು ಅತ್ಯಗತ್ಯವೋ ಅವರಿಗೆ ಈ ವಿವೇಚನೆಗಳು ಸಾಕಾಗಲಾರವು. ಈ ಪ್ರವೃದ್ಧ ಮಾನವಜೀವಿಗಳು ಅಪ್ರವೃದ್ಧರಿಗೆ ಉಪಯೋಗಕ್ಕೆ ಬೀಳುತ್ತಾರೆ ಎಂದು ಒಂದು ಹೆಜ್ಜೆ ಮುಂದೆ ಹೋಗಿ ಅವರಿಗೆ ತಿಳಿಸಬೇಕಾಗುತ್ತದೆ. ಸ್ವಾತಂತ್ರ್ಯಬೇಡ ಎಂದು ಅದನ್ನು ಕೊಟ್ಟರೂ ಬಳಸದವರಿಗೆ ಅವರದನ್ನು ಮಂದಿಗಾದರೂ ಕೊಟ್ಟರೆ ಏನಾದರೊಂದು ಗೊತ್ತಾಗುವ ರೂಪದಲ್ಲಿ ಲಾಭವಾಗುತ್ತದೆ ಎಂಬುದನ್ನು ತೋರಿಸಿ ಕೊಡಬೇಕಾಗಿದೆ.

ಮೊದಲನೆಯದಾಗಿ, ಪ್ರವೃದ್ಧರಿಂದ ಅಪ್ರವೃದ್ಧರು ಏನನ್ನಾದರೂ ಕಲಿತುಕೊಳ್ಳುವುದು ಸಾಧ್ಯ. ಮನುಷ್ಯನ ವ್ಯವಹಾರದಲ್ಲಿ ಅಭೂತಪೂರ್ವತೆಯೆಂಬುದೊಂದು ಬೆಲೆಬಾಳುವ ಅಂಗ ಎಂಬುದನ್ನಾದರೂ ಅಲ್ಲಗಳೆಯಲಾರರು. ಹೊಸ ಸತ್ಯಗಳನ್ನು ಶೋಧಿಸಿ ತೆಗೆಯಲು, ಹಳೆಯ ಸತ್ಯಗಳೀಗ ಅನೃತಗಳಾಗಿದ್ದರೆ ಅವನ್ನೆತ್ತಿ ಹಾಗೆಂದು ತೋರಿಸಲು, ಹೊಸ ಆಚಾರಗಳನ್ನು ಆರಂಭಿಸಲು ಮತ್ತು ಮಾನವಜೀವನದಲ್ಲಿ ಹೆಚ್ಚು ಪ್ರಬುದ್ಧವಾದ ನಡತೆ, ಉತ್ತಮತರ ಅಭಿರುಚಿ ಹಾಗೂ ಬುದ್ಧಿಗಳ ಉದಾಹರಣೆಗಳನ್ನು ಹಾಕಿಕೊಡಲು ತಕ್ಕ ಜನರು ಯಾವಾಗಲೂ ಬೇಕೇಬೇಕು. ಜಗತ್ತು ಆಗಲೇ ತನ್ನ ಎಲ್ಲ ವಿಚಾರ–ಆಚಾರ–ರೀತಿ–ನೀತಿಗಳಲ್ಲಿ ಪೂರ್ಣತೆಯನ್ನು ಮುಟ್ಟಿದೆ ಎಂಬುದರಲ್ಲಿ ನಂಬಿಗೆಯಿಡದ ಯಾವನೂ ಇದಕ್ಕಿದಿರಾಡಲಾರ. ಎಲ್ಲರೂ ಈ ಕೆಲಸವನ್ನು ಮಾಡಲಾರರೆಂಬುದು ನಿಜ–ರೂಢ ಆಚಾರಗಳನ್ನು ಸುಧಾರಿಸಬಲ್ಲ ಹೊಸ ಪ್ರಯೋಗಗಳನ್ನು ಮಾಡಿ ತೋರಿಸಬಲ್ಲ ಜನರು ಅತ್ಯಲ್ಪಸಂಖ್ಯರೆಂಬುದು ಸತ್ಯ. ಆದರೆ ಈ ಅಲ್ಪ ಸಂಖ್ಯರೇ ಜಗತ್ತಿನ ಉಪ್ಪು. ಅವರಿಲ್ಲದೆ ಹೋದರೆ ಮಾನವ ಜೀವನವೊಂದು

ಕೊಳಹೊಂಡವಾಗುತ್ತದೆ. ಹಿಂದೆ ಇದ್ದಿರದ ಒಳ್ಳೆಯವನ್ನು ಹೊಸದಾಗಿ ತಂದು ಕೊಡುವವರೂ ಅವರೇ; ಅಲ್ಲದೆ, ಆಗಲೇ ಇರುವವುಗಳನ್ನು ಜೀವಂತವಾಗಿ ಇರುವಂತೆ ನೋಡಿಕೊಳ್ಳುವವರೂ ಅವರೇ! ಹೊಸದೇನನ್ನೂ ಮಾಡಬೇಕಾದ ಅಗತ್ಯ ನಿಜವಾಗಿ ಇಲ್ಲವೆನ್ನುವುದಾದರೆ, ಮನುಷ್ಯನಿಗೆ ಬುದ್ಧಿಶಕ್ತಿಯಿರುವುದು ಅನವಶ್ಯಕ ಎನ್ನಬೇಕಾದೀತು. ಹಳೆಯ ಆಚಾರಗಳನ್ನೇ ಅನುಸರಿಸುತ್ತ ಬಂದವರು ಆ ಆಚಾರಗಳ ಹಿಂದಿನ ಏಕೆಗಳೆಲ್ಲವನ್ನೂ ಮರೆತು ಮತ್ತೆ ಮತ್ತೆ ಹಾಗೇ ಮಾಡುತ್ತ ಹೋಗುವುದು ಪಶು ಲಕ್ಷಣವಲ್ಲದೆ ಮನುಷ್ಯಲಕ್ಷಣವಾದೀತೇ? ಅತ್ಯುತ್ತಮ ಶ್ರದ್ಧೆ ಹಾಗೂ ಆಚಾರಗಳಲ್ಲಿ ಯಾಂತ್ರಿಕತೆಗಿಳಿವ ಪತನಪ್ರವೃತ್ತಿ ಅತ್ಯಂತ ಹೆಚ್ಚು. ಅಂಥ ಪ್ರವೃತ್ತಿ ತಲೆದೋರದೆ ಇರಬೇಕಾದರೆ ಮೇಲಿಂದ ಮೇಲೆ ಆ ಶ್ರದ್ಧೆಗಳ ಆಧಾರತರ್ಕಗಳೂ ಆಚಾರಗಳೂ ಕೇವಲ ಜಡಪರಂಪರೆಯವಾಗದಂತೆ ತಡೆವ ಪ್ರತಿಭಾವಂತರು (ನವೋನ್ಮೇಷಶಾಲಿಗಳು, ಅಭೂತಪೂರ್ವಕಲ್ಪನಾಕೋವಿದರು) ಹುಟ್ಟಿಬರಬೇಕು. ಜಡಪರಂಪರೆಯು ಜೀವಂತವಾದ ಒಂದು ಪುಟ್ಟ ಉತ್ಕ್ಷೇಪ–ಉತ್ಕಂಪವನ್ನೂ ಸಹಿಸಲಾರದು; ಹಾಗಾದಾಗ ಇಡೀ ನಾಗರಿಕತೆಯೇ ನಾಶವಾದರೆ ಯಾರೂ ಅಚ್ಚರಿಪಡಬೇಕಾಗಿಲ್ಲ. ಬೈಸಾಂಟೈನ್ ನಾಗರಿಕತೆ ಹಾಳಾದದ್ದು ಹಾಗೇ–ಅದರ ಇತಿಶ್ರೀಯನ್ನು ಬರೆದದ್ದು ಇಂಥ "ಅಂಧೇನೈವ ನೀಯ ಮಾನಾ ಯಥಾಂಧಾಃ" ಎಂಬ ಬಗೆಯವರೇ! ಸುಪ್ರತಿಭರು ಯಾವಾಗಲೂ ಅಲ್ಪಸಂಖ್ಯರೇ. ಅಂಥವರು ಬೇಕು ಎನ್ನುವುದಾದರೆ ಅವರು ಬೆಳೆಯಲು ತಕ್ಕ ನೆಲವನ್ನು ನಾವು ಹದಗೊಳಿಸಿ ಇಟ್ಟುಕೊಳ್ಳಬೇಕಾಗುತ್ತದೆ. ಸ್ವಾತಂತ್ರ್ಯದ ಆವರಣವಿದ್ದರೇನೇ ಅಂಥ ಕಲ್ಪನಾನವ್ಯರು ಸ್ವತಂತ್ರವಾಗಿ ಉಸಿರಾಡಿಸಿಯಾರು. ಪ್ರತಿಭಾನೇತ್ರರು ಮಿಕ್ಕವರಿಗಿಂತ ಹೆಚ್ಚು ವ್ಯಕ್ತಿ ವೈಶಿಷ್ಟ್ಯವುಳ್ಳವರು. ಆದುದರಿಂದ ತಮ್ಮ ತಮ್ಮ ಚಾರಿತ್ರವನ್ನು ಪ್ರತ್ಯೇಕವಾಗಿ ರೂಪಿಸಿಕೊಳ್ಳಬೇಕಾದ ಕಷ್ಟದಿಂದ ತನ್ನ ಸದಸ್ಯರನ್ನು ಮುಕ್ತಮಾಡಲೆಂದು ಸಮಾಜವು ಒದಗಿಸಿದ ಚಿಕ್ಕ ಅಚ್ಚುಗಳಲ್ಲಿ ನೋವಾಗುವಂತೆ ಕುಗ್ಗದೆ ಪ್ರತಿಭಾಯುತರು ಹೋಗಲಾರರು–ಅವರವುಗಳಲ್ಲಿ ಹಿಡಿಸರು; ಅವರಿಗೆ ತಕ್ಕ ಅಚ್ಚು ದೊಡ್ಡದು. ಭೀರುತನದಿಂದ ಈ ಉಕ್ಕಿನ ವಾಮನ ಕವಚಗಳನ್ನವರು ಧರಿಸಲೊಪ್ಪಿದರೆ, ಅವುಗಳ ಇಕ್ಕಟ್ಟಿನಲ್ಲಿ ಸಿಕ್ಕಿ, ಹಿಗ್ಗಬೇಕಾದ ಅವರ ಭಾಗಗಳು ಕುಗ್ಗಿ, ಅವರ ಪ್ರತಿಭೆಯಿಂದ ಸಮಾಜಕ್ಕೆ ಯಾವ ಪ್ರಯೋಜನವೂ ಸಿಗದಂತಾಗುತ್ತದೆ. ಅವರೇನಾದರೂ ಬಲಿಷ್ಠ ಚಾರಿತ್ರವುಳ್ಳವರಾದರೆ ಸಮಾಜ ತೊಡಿಸಿದ ಕುಬ್ಜ ಕವಚಗಳನ್ನು ಒಡೆದು ಪುಡಿ ಪುಡಿಮಾಡಿ ತಮಗೆ ಬೇಕಾದ ಕವಚಗಳನ್ನನವರು ತಾವೇ ಮಾಡಿಕೊಂಡು ಹಾಕಿಕೊಳ್ಳುತ್ತಾರೆ. ಆಗ ಸಮಾಜವು ಅವರನ್ನು ಅಸಭ್ಯರು, ಅಪಶೀಲರು ಎಂದು ಮುಂತಾಗಿ ಕರೆಯುತ್ತದೆ. ಅವರನ್ನದು ಹಾಗೆ ಕರೆಯುವುದೂ ಒಂದೇ–ಡಚ್‌ಕಾಲುವೆಯ ಹಾಗೆ ನಯಾಗರಾ ನದಿಯು ತನ್ನ ದಂಡೆಗಳ ನಡುವೆಯೇ ಹರಿಯುತ್ತ ಉಳಿಯದಿರುವುದು ತಪ್ಪು ಎನ್ನುವುದೂ ಒಂದೇ!

ಸುಪ್ರತಿಭರು ಸಮಾಜಕ್ಕೆ ಅಗತ್ಯವೆಂಬುದನ್ನು ಎಲ್ಲರೂ ಮಾತಿನಲ್ಲಿ ಒಪ್ಪಿಕೊಳ್ಳುತ್ತಾರೆ. ಆದರೆ ಕಾರ್ಯದಲ್ಲಿ ಯಾರೂ ಅವರನ್ನು ಲಕ್ಷಿಸರು ಎಂಬುದನ್ನು ಚೆನ್ನಾಗಿ ಅರಿತೇ ನಾನು ಅಭೂತಪೂರ್ವ–ನಿರ್ಮಾಣ–ಕುಶಲರ ಪ್ರಾಧಾನ್ಯವನ್ನೂ ವಿಚಾರ–ಆಚಾರಗಳಲ್ಲಿ ಅವರ ಪ್ರತಿಭಾ ವಿಕಾಸಕ್ಕೆ ಮುಕ್ತದ್ವಾರ ಮಾಡಿಡುವುದನ್ನೂ ಹೀಗೆ ಆಗ್ರಹಿಸುತ್ತಿದ್ದೇನೆ. ಪ್ರತಿಭೆ ಒಬ್ಬನಿಗೆ ಒಂದು ಭಾವೋದ್ರೇಚಕ ಪದ್ಯವನ್ನು ಬರೆಯಗೊಟ್ಟರೆ ಇಲ್ಲವೆ ಒಂದು ಬಣ್ಣದ ಚಿತ್ರವನ್ನು ಬಳಿಯಗೊಟ್ಟರೆ ಸಾಕು– ಅದು ಬಹಳ ಒಳ್ಳೆಯ ಪದಾರ್ಥ ಎಂದು ಜನ ಭಾವಿಸುತ್ತದೆ. ಆದರೆ ಪ್ರತಿಭೆಯ ನಿಜವಾದ ಅರ್ಥವಿರುವುದು ವಿಚಾರ ಆಚಾರಗಳ ಅಭೂತಪೂರ್ವತೆಯಲ್ಲೇ. ಇದು ಪ್ರಶಂಸನೀಯವಲ್ಲವೆಂದು ಬಾಯಲ್ಲಿ ಯಾರೂ ಹೇಳದಿದ್ದರೂ ಹೃದಯದಲ್ಲಿ ಪ್ರತಿಯೊಬ್ಬನೂ ಪ್ರತಿಭೆ ಎಂಬ ವಸ್ತುವಿಲ್ಲದೆ ಹೋದರೂ ತಾವು ತಮ್ಮ ಕೆಲಸ ಸಾಗಿಸಿಕೊಂಡು ಹೋಗಬಹುದು ಎಂದೇ ತಿಳಿಯುತ್ತಾನೆ. ದುರ್ದೈವವಶಾತ್ ಈ ಪರಿಸ್ಥಿತಿಯು ಅತ್ಯಂತ ನೈಸರ್ಗಿಕವಾಗಿರುವುದರಿಂದ ಇದರ ಬಗ್ಗೆ ಆಶ್ಚರ್ಯಪಡುವಂತಿಲ್ಲ. ನವಕಲ್ಪಕತೆಯಿಲ್ಲದ ಮನುಷ್ಯರಿಗೆ ಅದೊಂದರ ಪ್ರಯೋಜನವನ್ನು ಭಾವಿಸಿಕೊಳ್ಳಲಾಗುವುದಿಲ್ಲ; ತಮಗದರಿಂದೇನು ದೊರಕುತ್ತದೆ ಎಂಬುದನ್ನವರರಿಯಲಾರರು. ಅವರರಿಯುವುದಾದರೂ ಹೇಗೆ ಎನ್ನುತ್ತೀರಿ? ಅದರಿಂದ ತಮಗೇನು ಉಪಯೋಗವೆಂಬುದನ್ನು ಅವರು ಅರಿತರೆಂದರೆ ಅದು ಅಪೂರ್ವ ಎಂದೆನಿಸದು! ಪ್ರತಿಭೆ ಮೊಟ್ಟ ಮೊದಲು ಮಾಡತಕ್ಕ ಉಪಕಾರವೆಂದರೆ ಅಪ್ರತಿಭರ ಕಣ್ಣು ತೆರೆಯಿಸುವುದು. ಒಂದು ಸಲ ಅವರ ಕಣ್ಣುಗಳು ತೆರೆದವೆಂದರೆ ಅವರೇ ಆಗ ಸುಪ್ರತಿಭರಾಗಿ ಬಿಡುತ್ತಾರೆ. ಈ ನಡುವೆ ಯಾವನೋ ಒಬ್ಬನು ಮೊದಲು ಮಾಡದೆ ಯಾವುದನ್ನೂ ಯಾರೂ ಮಾಡಲಾರಂಭಿಸಿಲ್ಲ– ಈಗ ಇರುವ ಎಲ್ಲ ಒಳಿತುಗಳೂ ಅಭೂತಪೂರ್ವವನ್ನು ಕಲ್ಪಿಸಬಲ್ಲ ಪ್ರತಿಭೆಯ ಫಲಗಳೇ ಎಂಬುದನ್ನು ನೆನೆದು, ಆ ಶಕ್ತಿ ಮಾಡತಕ್ಕದ್ದು ಇನ್ನಷ್ಟಿದೆ ಎಂಬುದನ್ನು ನಮ್ರರಾಗಿ ನಂಬಿ, ಅದರ ಅಗತ್ಯದ ಜ್ಞಾನ ತಮಗೆ ಕಡಿಮೆಯಿದ್ದಷ್ಟೂ ಅದರ ಅಗತ್ಯ ಹೆಚ್ಚಾಗಿದೆ ಎಂಬುದನ್ನು ಅವರು ತಮಗೆ ತಾವೇ ಖಾತ್ರಿ ಮಾಡಿಕೊಳ್ಳಬೇಕು.

ಸಮಾಧಾನಸ್ಥಿತಿಯಲ್ಲಿರುವಾಗ ನಿಜವಾದ ಅಥವಾ ತೋರಿಕೆಯ ಮಾನಸಿಕ ಮೇಲ್ಮೆಗೆ ಎಲ್ಲರೂ ಗೌರವ ಕೊಡಬೇಕೆಂದಾರು– ಕೊಟ್ಟೂ ಕೊಟ್ಟಾರು. ಆದರೆ ಜಗತ್ತಿನ ಆದ್ಯಂತವಾಗಿ ಎಲ್ಲರೂ ವ್ಯವಹಾರದಲ್ಲಿ ಸಾಮಾನ್ಯತೆಯೇ ಮೇಲುಗೈಯಾಗುವಂತೆ ಮಾಡುತ್ತಾರೆ. ಪ್ರಾಚೀನ ಹಾಗೂ ಮಧ್ಯಯುಗಗಳಲ್ಲಿಯೂ ಹಾಗೇ ಸ್ವಲ್ಪ ಸ್ವಲ್ಪ ಕಡಿಮೆಯಾಗುತ್ತ ಬಂದ ಪ್ರಮಾಣದಲ್ಲಿ ಆ ಮೇಲಿಂದ ಇಂದಿನವರೆಗೆ ನಡೆದು ಬಂದ ಒಡೆತನದ ತತ್ವ ಸಿದ್ಧಾಂತದ (Feudality) ಪರಿವರ್ತನಾವಧಿಯಲ್ಲಿಯೂ ವ್ಯಕ್ತಿಯು ತನ್ನಲ್ಲೇ ಒಂದು ಶಕ್ತಿಯಾಗಿದ್ದ. ಅವನಿಗೆ ದೊಡ್ಡ ನೈಪುಣ್ಯ ಅಥವಾ ಸಾಮಾಜಿಕ ಸ್ಥಾನವಿದ್ದರೆ ಸಾಕು–ಅವನೊಬ್ಬ ತಕ್ಕಮಟ್ಟಿನ ಶಕ್ತಿಕೇಂದ್ರವೆನಿಸುತ್ತಿದ್ದ.

ಈಗ ವ್ಯಷ್ಟಿಯು ಸಮಷ್ಟಿಯಲ್ಲಿ ಲುಪ್ತ. ರಾಜಕಾರಣದಲ್ಲಿ ಸಾರ್ವಜನಿಕ ಅಭಿಪ್ರಾಯವು ಈಗ ಜಗತ್ತನ್ನು ಆಳುತ್ತಿದೆ ಎಂಬುದು ಬಹಳ ಸಣ್ಣಮಾತಾಗಿದೆ. ಈಗ ಸಾರ್ಥಕವಾದ ಒಂದೇ ಒಂದು ಶಕ್ತಿಯೆಂದರೆ ಭೂರಿಜನದ ಹಾಗೂ ಅದರ ಪ್ರವೃತ್ತಿ–ಮೂಲಪ್ರವೃತ್ತಿಗಳ ಪ್ರಕಟನಸಾಧನವಾದ ಸರಕಾರಗಳದೇ. ಈ ಮಾತು ಖಾಸಗಿ ಬಾಳಿನ ಸಾಮಾಜಿಕ ಹಾಗೂ ನೈತಿಕ ಸಂಬಂಧಗಳಲ್ಲಿ ಹೇಗೋ ಹಾಗೇ ಸಾರ್ವಜನಿಕ ವ್ಯವಹಾರಗಳಲ್ಲೂ ಸತ್ಯವಾಗಿದೆ. ಸಾರ್ವಜನಿಕ ಅಭಿಪ್ರಾಯವೆಂದು ಯಾರದನ್ನು ಕರೆಯಲಾಗುತ್ತದೆಯೋ ಅವರು ಯಾವಾಗಲೂ ಒಂದೇ ಬಗೆಯ ಸಾರ್ವಜನಿಕರಾಗಿರುವುದಿಲ್ಲ. ಅಮೇರಿಕದಲ್ಲಿ ಅವರು ಇಡೀ ಬಿಳಿಯ ಜನಾಂಗ; ಇಂಗ್ಲೆಂಡಿನಲ್ಲಿ ಮುಖ್ಯವಾಗಿ ಮಧ್ಯಮ ವರ್ಗದವರು. ಆದರೆ ಅವರು ಯಾವಾಗಲೂ ಭೂರಿಜನರೇ ಅರ್ಥಾತ್ ಸಾಮೂಹಿಕ ಸಾಮಾನ್ಯರು (Mediocrity); ಹತ್ತರೊಡನೆ ಹನ್ನೊಂದು; ಸೆಗಣಿಯೊಳಗಿನ ಸಾವಿರ ಎಂಬಂಥವರು. ಅದರಲ್ಲೂ ಒಂದು ಹೊಸತನವೆಂದರೆ–ಈಗ ಭೂರಿಜನರು (Masses) ಚರ್ಚು, ರಾಜ್ಯದ ಅಧಿಕಾರಿಗಳು, ಎದ್ದುಕಾಣುವ ಮುಖಂಡರು, ಗ್ರಂಥಗಳು ಮುಂತಾದ ಆಕರಗಳಿಂದ ತಮ್ಮ ಅಭಿಪ್ರಾಯವನ್ನು ಎತ್ತಿಕೊಳ್ಳುವುದಿಲ್ಲ; ಅವರಂಥವರೇ ಅವರ ಪಾಲಿನ ವಿಚಾರವನ್ನು ಮಾಡಿಕೊಡುವವರು. ಈ ವಿಚಾರದ ಕಾರಖಾನೆಗಳು ಅವರನ್ನುದ್ದೇಶಿಸಿ ಅಥವಾ ಅವರನ್ನು ಪ್ರತಿನಿಧಿಸಿ ಮಾತನಾಡುತ್ತವೆ ಇಲ್ಲವೆ ಹೊತ್ತಿಗೆ ಸರಿಯಾಗಿ ಸಮಯಸ್ಫೂರ್ತಿಯಿಂದ ವೃತ್ತಪತ್ರಿಕೆಗಳಲ್ಲಿ ಬರೆಯುತ್ತವೆ. ಇದೆಲ್ಲಾ ತಪ್ಪೆಂದು ನಾನು ದೂರಿಕೊಳ್ಳುವುದಿಲ್ಲ. ಇದಕ್ಕಿಂತ ಉತ್ತಮವಾದದ್ದೇನಾದರೂ ಹೊಂದಿಕೆಯಾಗುವುದೆಂದು ನಾನು ಪ್ರತಿಪಾದಿಸುವುದಿಲ್ಲ. ಇಂದಿನ ಕಾಲದ ಮಾನವಮನದ ಕೀಳ್ಮಟ್ಟಕ್ಕೆ ಇದೇ ಸಾಮಾನ್ಯನೀತಿ ಎಂಬುದನ್ನು ನಾನು ಬಲ್ಲೆ. ಆದರೆ ಈ ಮಾತನ್ನೊಪ್ಪಿಕೊಂಡ ಮಾತ್ರಕ್ಕೆ ಸಾಮಾನ್ಯ ಸಂತೆಯ ಸರಕಾರದ ಸಾಮಾನ್ಯತೆಯೇನೂ ಅಳಿಸಿಹೋಗುವುದಿಲ್ಲ; ಅಷ್ಟೆ. ಪ್ರಜಾಸತ್ತೆಯ ಅಥವಾ ಬಹುಸಂಖ್ಯರ ಕುಬೇರಪ್ರಭುತ್ವದ ಯಾವ ಸರಕಾರವೇ ಆಗಲಿ– ತನ್ನ ರಾಜಕೀಯ ಕಾರ್ಯ, ಅಭಿಪ್ರಾಯ, ಗುಣ ಮತ್ತು ತಾನು ಬೆಳೆಯಿಸುವ ಮನಃಪ್ರವೃತ್ತಿಗಳಲ್ಲಿ ಸಾಮಾನ್ಯತೆಯ ಮಟ್ಟದಿಂದ ಮೇಲಕ್ಕೇರುವುದು ವಿರಳ. ಅವುಗಳ ಅತ್ಯುತ್ತಮ ದಶೆಯಲ್ಲಿ ಕೆಲಸಲ ಮಾತ್ರ ಸಮ್ರಾಟ್‌ಶಕ್ತಿಸಂಪನ್ನರಾದ ಬಹುಸಂಖ್ಯರು ಹೆಚ್ಚಿನ ಪ್ರತಿಭಾವಂತನೊಬ್ಬನ ಅಥವಾ ಕೆಲವರ ಸಲಹೆ ಕೇಳಿ, ಪ್ರಭಾವಕ್ಕೊಳಗಾಗಿ ಸಾಮಾನ್ಯ ಮಟ್ಟದಿಂದ ಮೇಲಕ್ಕೇರಿದ ನಿದರ್ಶನಗಳು ಅಪವಾದಾತ್ಮಕ. ವಿವೇಕಪೂರ್ಣ ಅಥವಾ ಉದಾರ ಎನಿಸಿದ ಯಾವುದರ ಆರಂಭವಾದರೂ ವ್ಯಕ್ತಿಗಳಿಂದಲೇ ಆಗಬೇಕು. ಸಾಮಾನ್ಯವಾಗಿ ಮೊಟ್ಟಮೊದಲು ಯಾವನೋ ಒಬ್ಬ ಅಂಥದನ್ನು ಆರಂಭಿಸುತ್ತಾನೆ. ಆ ಆರಂಭವನ್ನು ಅನುಸರಿಸುವ ಶಕ್ತಿಯಿರುವುದೇ ಸಾಮಾನ್ಯನ ಗೌರವಾಸ್ಪದ ಗುಣ, ವೈಭವಪೂರ್ಣ ಮತಿ. ಆಂತರಿಕವಾಗಿ ವಿವೇಕಸಂಪನ್ನವೂ ಉದಾರವೂ ಆದ ನೀತಿಗೆ ಅನುಕೂಲ ಅನುಕ್ರಿಯೆಯನ್ನು ತೋರಿ, ಕಣ್ದೆರೆದು ಆ ದಿಸೆಯಲ್ಲಿ ಒಯ್ಯಲ್ಪಡುವುದೇ ಅವನಿಗೆ ಹೆಚ್ಚಿನದು. ನಾನಿಲ್ಲಿ

ಸರಕಾರವನ್ನು ಬಲಾತ್ಕಾರದಿಂದ ಕಸಿದುಕೊಂಡು ಅದನ್ನು ತಾನು ಹೇಳಿದಂತೆ ಕೇಳುವ ಹಾಗೆ ಮಾಡುವ ಪ್ರತಿಭಾ-ಸಂಪನ್ನದ ಪಾದಪೂಜೆ ಮಾಡಬೇಕೆಂಬ ವೀರಾರಾಧನೆಯನ್ನು (Hero worship) ಬೆಂಬಲಿಸುತ್ತಿಲ್ಲ. ಮಾರ್ಗದರ್ಶನ ಮಾಡುವ ಸ್ವಾತಂತ್ರ್ಯವಷ್ಟೆ ಅಂಥ ಪ್ರತಿಭಾನ್ವಿತನಿಗಿರುವ ಹಕ್ಕು. ಮಿಕ್ಕವರನ್ನು ತನ್ನತ್ತ ಎಳೆದು ಕೊಂಬ ಅಧಿಕಾರ ಅಥವಾ ಶಕ್ತಿಯು ಅವರ ಸ್ವಾತಂತ್ರ್ಯ ಹಾಗೂ ಅಭಿವೃದ್ಧಿಗಳಿಗೆ ಅಸಂಗತವಷ್ಟೇ ಅಲ್ಲದೆ, ಬಲಿಷ್ಠನಾದ ಅವನಿಗೇ ಅನೀತಿಕರವೆನಿಸುವಂಥದು-ಅವನನ್ನೇ ಕೆಡಿಸುವಂಥದು. ಹೀಗಿರುವಾಗ ಕೇವಲ ಸರಾಸರಿ ಮಟ್ಟದ ಮನುಷ್ಯರ ಭೂರಿಸ್ತೋಮದ ಅಭಿಪ್ರಾಯಗಳು ಎಲ್ಲೆಲ್ಲೂ ಮೇಲುಗೈಯಾಗುವಾಗ-ಅಂಥ ಪ್ರವೃತ್ತಿಗೆ ತಡೆ ಹಾಕಲು, ಅದನ್ನು ತಿದ್ದಲು ವಿಚಾರದುರ್ಗದ ಉನ್ನತತರ ಗೋಪುರಗಳಲ್ಲಿ ನಿಂತವರ ವ್ಯಕ್ತಿವೈಶಿಷ್ಟ್ಯವು ಮತ್ತಷ್ಟು ಸ್ಫುಟವಾಗಿ ಎದುರು ನಿಲ್ಲಬೇಕು ಎಂದೆನಿಸುವುದು ಸಹಜ. ಇಂಥ ಪರಿಸ್ಥಿತಿಯಲ್ಲಿ ವಿಶೇಷತಃ ಅಪವಾದಾತ್ಮಕ ವ್ಯಕ್ತಿಗಳಿಗೆ ಹತ್ತು ಸಮಸ್ತರ ಮಾರ್ಗವನ್ನು ಬಿಟ್ಟು ಹೋಗುವುದರಲ್ಲಿ ಪ್ರೋತ್ಸಾಹಿಸಬೇಕಲ್ಲದೆ, ಅವರ ಆ ಆರಂಭವನ್ನು ತಡೆಯಲು ಹೋಗಬಾರದು. ಇತರ ಪರಿಸ್ಥಿತಿಗಳಲ್ಲಿ ಅಪವಾದಮಾರ್ಗಿಗಳು ಉತ್ಸರ್ಗಮಾರ್ಗಿಗಳಿಂದ ಬರಿದೆ ಭಿನ್ನರೀತಿಯಲ್ಲಿ ನಡೆದುಕೊಳ್ಳದೆ ಉತ್ತಮತರ ರೀತಿಯಲ್ಲಿ ನಡೆದುಕೊಳ್ಳದೆ ಹೋದರೆ, ಅವರು ಹಾಗೆ ಮಾಡುವುದರಿಂದ ಏನೂ ಪ್ರಯೋಜನವಾಗುತ್ತಿದ್ದಿಲ್ಲ. ಈ ಯುಗದಲ್ಲಿ ಸಂಪ್ರದಾಯಕ್ಕೆ ತಲೆಬಾಗದಿರುವಷ್ಟರಿಂದಲೇ ಒಬ್ಬನು ಜನರಿಗೆ ಉಪಕಾರಮಾಡಿದಂತಾಗುತ್ತದೆ. ಏಕೆಂದರೆ, ಇಂದಿನ ಅಭಿಪ್ರಾಯಾಸುರನ ದಬ್ಬಾಳಿಕೆಯು ಒಬ್ಬನ ವಿಲಕ್ಷತೆಯನ್ನು ನಿಂದಾರ್ಹವೆಂದು ಮಾಡಬಲ್ಲುದಾಗಿದೆ. ಈ ದಬ್ಬಾಳಿಕೆಯನ್ನು ಖಂಡಿಸಲು ಜನರು ಸದ್ಯಃ ವಿಲಕ್ಷಣರಾಗಬೇಕಾಗಿದೆ. ಚಾರಿತ್ರಬಲ ಅಪಾರವಾಗಿದ್ದಾಗಲೆಲ್ಲಾ ವಿಲಕ್ಷಣತೆ (Eccentricity) ಬೇಕಾದಷ್ಟು ಪ್ರಚುರವಾಗಿತ್ತು. ಸಾಮಾನ್ಯವಾಗಿ ಸಮಾಜದಲ್ಲಿಯ ವೈಲಕ್ಷಣ್ಯವು ಅದರಲ್ಲಿರುವ ಪ್ರತಿಭೆ, ಮಾನಸತೇಜ ಮತ್ತು ನೈತಿಕ ಧೈರ್ಯಗಳ ಪರಿಮಾಣಕ್ಕೆ ತಕ್ಕ ಪ್ರಮಾಣದಲ್ಲಿರುತ್ತದೆ. ವಿಲಕ್ಷಣರಾಗಲು ಮುಂದೆ ಬರುವವರು ಅತ್ಯಲ್ಪರಾಗುತ್ತ ಬಂದಿರುವುದೀಗ ಅತ್ಯಂತ ಅಪಾಯಕರ.

ಅಸಾಂಪ್ರದಾಯಿಕ ವಿಧಾನಗಳಿಗೆ ಸಂಪೂರ್ಣ, ಅನಿರ್ಬಂಧ ಅವಕಾಶ ಕೊಡಬೇಕೆನ್ನುತ್ತೇನೆ ನಾನು. ಏಕೆ? ಹಾಗೆ ಕೊಟ್ಟರೆ ಕಾಲಕ್ರಮದಲ್ಲಿ ಅವುಗಳಲ್ಲಿ ಯಾವುದು ಸಂಪ್ರದಾಯವಾಗಿ ಉಳಿಯಲು ಅರ್ಹ, ಎಂಬುದು ಜನರಿಗೆ ತಿಳಿದು ಬರುತ್ತದೆ. ಆದರೆ ಸಂಪ್ರದಾಯತಿರಸ್ಕಾರ ಮತ್ತು ಕಾರ್ಯಸ್ವಾತಂತ್ರ್ಯಗಳು ಉತ್ತಮತರ ಕಾರ್ಯವಿಧಾನ ಹಾಗೂ ಹೆಚ್ಚು ಸರ್ವಗ್ರಾಹ್ಯ ಸಂಪ್ರದಾಯಗಳನ್ನು ರೂಢಿಸಿಕೊಳ್ಳುವ ಅವಕಾಶವನ್ನು ಒದಗಿಸಿಕೊಡುವವೆಂಬಷ್ಟೇ ಕಾರಣದಿಂದ ಪ್ರೋತ್ಸಾಹಾರ್ಹವಲ್ಲ. ನಿಶ್ಚಿತ ಮಾನಸ ಮೇಲ್ಮೆಯವರಿಗಷ್ಟೇ ತಮ್ಮ ಬಾಳನ್ನು ತಮಗೆ ಸರಿಕಂಡಂತೆ ಸಾಗಿಸಿಕೊಂಡು ಹೋಗಲು ನ್ಯಾಯವಾದ ಹಕ್ಕಿದೆ ಎಂದಲ್ಲ. ಯಾವುದೋ ಒಂದು ಅಥವಾ ಕೆಲವೇ

ಮಾದರಿಗಳಿಗನುಗುಣವಾಗಿ ಮನುಷ್ಯರೆಲ್ಲರ ಬಾಳು ನಡೆಯಬೇಕು ಎಂಬುದಕ್ಕೆ ಆಧಾರವಿಲ್ಲ. ಒಬ್ಬನಿಗೆ ತಕ್ಕಮಟ್ಟಿನ ವಿವೇಕವೂ ಅನುಭವವೂ ಇದ್ದರೆ ಅವನು ತನ್ನದೇ ಆದ ರೀತಿಯಲ್ಲಿ ಜೀವನವನ್ನು ಯೋಜಿಸಿಕೊಳ್ಳುವುದು ಅತ್ಯುತ್ತಮ. ಎಲ್ಲ ರೀತಿಗಳಲ್ಲಿ ಅದೇ ಉತ್ತಮ ರೀತಿಯೆಂದಲ್ಲ– ಅವನ ಮಟ್ಟಿಗೆ ಅವನ ರೀತಿಯೇ ಉತ್ತಮ ಎಂಬುದು ಇಲ್ಲಿಯ ನ್ಯಾಯ. ಮಾನವರೆಲ್ಲರೂ ಮೇಷರಾಶಿಗೆ ಸೇರಿಲ್ಲ. ಕುರಿಗಳು ಸಹ ವಿಂಗಡಿಸಲಾರದಷ್ಟು ಸಮಾನ ರೂಪದವಾಗಿಲ್ಲ. ಒಬ್ಬನಿಗೆ ಒಂದು ಜೊತೆ ಮೆಟ್ಟು ಬೇಕಾದರೆ ಅವನು ತನ್ನ ಪಾದಗಳ ಅಳತೆ ಕೊಟ್ಟು ಮಾಡಿಸಬೇಕು ಇಲ್ಲವೆ ಬೇರೆ ಬೇರೆ ಅಳತೆಯ ಅನೇಕ ಕಾಲ್ಮರೆಗಳುಳ್ಳ ಒಂದು ಅಂಗಡಿಗೆ ಹೋಗಬೇಕು– ತನಗೆ ತಕ್ಕದ್ದನ್ನು ಆರಿಸಿಕೊಳ್ಳಲು. ಒಬ್ಬನಿಗೆ ಅಂಗಿ ತೊಡಿಸುವುದಕ್ಕಿಂತ ಸುಲಭವೇನು ಜೀವನವನ್ನು ತೊಡಿಸುವುದು? ತಮ್ಮ ಪಾದಗಳಿಗಿಂತ ಹೆಚ್ಚಾಗಿ ಮನುಷ್ಯರು ತಮ್ಮ ಭೌತಿಕ (ಶಾರೀರಿಕ ಮತ್ತು ಆಧ್ಯಾತ್ಮಿಕ ಸ್ವರೂಪಗಳಲ್ಲಿ ಏಕರೂಪತೆಯುಳ್ಳವರಾಗಿದ್ದಾರೆಯೆ?) 'ಅಭಿರುಚಿ ಭೇದವಿದೆ ಎಂಬುದಾದರೆ ಅಷ್ಟೇ ಸಾಕು–ಮನುಷ್ಯರೆಲ್ಲರನ್ನೂ ಏಕಪ್ರಕಾರವಾಗಿ ರೂಪಿಸದಿರಲು ಕಾರಣ' ಎನ್ನುತ್ತೀರಾ? ಅಷ್ಟೇ ಅಲ್ಲ. ಬೇರೆ ಬೇರೆಯವರ ಆಧ್ಯಾತ್ಮಿಕ ಅಭಿವೃದ್ಧಿಗೆ ಬೇರೆ ಬೇರೆ ಸನ್ನಿವೇಶಗಳು ಬೇಕು. ಒಂದೇ ಬಗೆಯ ಹವೆ ಹಾಗೂ ಭೌತಿಕ ಆವರಣದಲ್ಲಿ ವಿವಿಧ ಸಸ್ಯಗಳು ಹೇಗೆ ಆರೋಗ್ಯದಿಂದಿರಲಾರವೋ ಹಾಗೇ ವಿವಿಧ ನರರು ಏಕನೀತಿ ಹಿಡಿದು ಆರೋಗ್ಯವಾಗಿ ಬದುಕಲಾರರು. ತನ್ನ ಸ್ವಭಾವದ ಉನ್ನತಾಂಶಗಳ ಬೆಳವಣಿಗೆಗೆ ಒಬ್ಬನಿಗೆ ಅನುಕೂಲವಾದಂಥವು ಇನ್ನೊಬ್ಬನಿಗೆ ಪ್ರತಿಕೂಲವಾದಾವು. ಒಂದು ವಿಧದ ಜೀವನವು ಒಬ್ಬನಿಗೆ ಆರೋಗ್ಯಕರವಾದ ಹೃದಯೋಲ್ಲಾಸವನ್ನು ಮಾಡೀತು, ಅವನ ಎಲ್ಲ ಚಟುವಟಿಕೆಯ ಶಕ್ತಿಗಳನ್ನೂ ಭೋಗಶಕ್ತಿಗಳನ್ನೂ ಅವವುಗಳ ಅತ್ಯುತ್ತಮ ಮಟ್ಟದ ವ್ಯವಸ್ಥೆಯಲ್ಲಿಟ್ಟೀತು ಅದೇ ಇನ್ನೊಬ್ಬನಿಗೆ ಉನ್ಮುಖತಾಭಂಗಕರವಾದ ಭಾರವೆನಿಸಿ ಅವನ ಎಲ್ಲ ಒಳಬಾಳನ್ನೂ ತಾತ್ಕಾಲಿಕವಾಗಿ ತಡೆದು ನಿಲ್ಲಿಸೀತು ಇಲ್ಲವೆ ಸಂಪೂರ್ಣವಾಗಿ ದಮನಮಾಡೀತು! ಮನುಷ್ಯರ ಸಂತೋಷದ ಆಕರಗಳಲ್ಲಿ, ಅಸಂತೋಷದ ವೇಧನೀಯತೆಯಲ್ಲಿ (Susceptibility) ಮತ್ತು ಬೇರೆ ಬೇರೆ ಭೌತಿಕ ಹಾಗೂ ನೈತಿಕ ಕಾರಕಗಳು ಅವುಗಳ ಮೇಲೆ ಮಾಡುವ ಕಾರ್ಯಗಳಲ್ಲಿ ವ್ಯತ್ಯಾಸಗಳಿವೆ. ಅವಕ್ಕೆ ತಕ್ಕಂತೆ ಅವರ ಜೀವನದಲ್ಲಿ ವೈವಿಧ್ಯವಿಲ್ಲದೆ ಹೋದಲ್ಲಿ ಮನುಷ್ಯನು ಅವಕ್ಕೆ ಯುಕ್ತಪ್ರಮಾಣದ ಸುಖವನ್ನು ಪಡೆಯಲಾರ ಮತ್ತು ಅವುಗಳಿಗನುಗುಣವಾದ ಯುಕ್ತ ಅಳತೆಯ ಮಾನಸಿಕ, ನೈತಿಕ ಹಾಗೂ ರಸಾತ್ಮಕ ಎತ್ತರವನ್ನವನು ಮುಟ್ಟಲಾರ. ಹೀಗಿರುವಾಗ ಸಾರ್ವಜನಿಕ ರಸವು (Sentiment) ತನ್ನ ಸಹಿಷ್ಣುತೆಯನ್ನು ಜನ ಕಸಿದುಕೊಳ್ಳುವ ಅಭಿರುಚಿ ಹಾಗೂ ಜೀವನ ವಿಧಗಳಿಗಷ್ಟೇ ಏಕೆ ಪ್ರಸರಿಸಬೇಕು? ಕೆಲಮಠಗಳನ್ನುಳಿದರೆ ಮತ್ತೆಲ್ಲೂ ಅಭಿರುಚಿ ಭೇದವು ಸಂಪೂರ್ಣವಾಗಿ ಮನ್ನಿಸಲ್ಪಡದೆ ಇದ್ದದ್ದಿಲ್ಲ. ಯಾವ ದೂರಿಗೂ ಒಳಪಡದೆ ಒಬ್ಬನು ದೋಣಿ ನಡೆಸುವುದನ್ನು, ಬೀಡಿ

ಸೇದುವದನ್ನು, ಸಂಗೀತ ಹೇಳುವದನ್ನು, ಕುಸ್ತಿ ಮಾಡುವುದನ್ನು, ಚದುರಂಗ ಆಡುವುದನನು ಅಥವಾ ಪುಸ್ತಕ ಓದುವುದನ್ನು ಮೆಚ್ಚಬಹುದು ಅಥವಾ ಮೆಚ್ಚದೆ ಇರಬಹುದು. ಏಕೆಂದರೆ, ಅವನ್ನು ಮೆಚ್ಚುವವರೂ ಬಹಳ ಇದ್ದಾರೆ, ಮೆಚ್ಚದಿರುವವರೂ ಬಹಳ ಇದ್ದಾರೆ; ಅವರನ್ನು ಬಗ್ಗು ಬಡಿಯುವುದಸಾಧ್ಯ. ಆದರೆ ಯಾರೂ ಮಾಡದಿದ್ದುದನ್ನು ಮಾಡುವ ಅಥವಾ ಎಲ್ಲರೂ ಮಾಡುವುದನ್ನು ಮಾಡದಿರುವ ವ್ಯಕ್ತಿಯನ್ನು ಜನರು ಏನೋ ಒಂದು ಅನೈತಿಕ ಕೆಲಸ ಮಾಡಿದವನೊ ಎನ್ನುವಂತೆ ಹೀಗಳೆಯುತ್ತಾರೆ. ತಮ್ಮ ಬೆಲೆಯನ್ನು ಕಳೆದುಕೊಳ್ಳದೆ ಕೆಲಮಟ್ಟಿಗೆ ಮನಬಂದಂತೆ ಮಾಡಲು ಮನುಷ್ಯನಿಗೆ ಒಂದು ಬಿರುದು, ಬಾವಲಿ ಅಥವಾ ಸ್ಥಾನ, ಮಾನ, ಅಧಿಕಾರ ಇರಬೇಕಾಗುತ್ತದೆ. ಅವನು ಹೆಚ್ಚು ಹೆಚ್ಚಾಗಿ ಎಲ್ಲದರಲ್ಲೂ ಹಾಗೆ ಮಾಡುತ್ತ ಹೋದರೆ ಹುಚ್ಚನೆನಿಸಿ ತನ್ನ ಆಸ್ತಿಪಾಸ್ತಿಗಳೆಲ್ಲ ತನ್ನಿಂದ ಕಸಿದುಕೊಳ್ಳಲ್ಪಟ್ಟ ತನ್ನ ಬಾಂಧವರಲ್ಲಿ ಹಂಚಲ್ಪಡುವುದನ್ನು ಕಾಣಬೇಕಾದೀತು!

ಯಾವುದಾದರೊಂದು ಎದ್ದುಕಾಣುವ ವ್ಯಕ್ತಿವೈಶಿಷ್ಟ್ಯದ ಪ್ರದರ್ಶನವನ್ನು ಸಹಿಸದಿರುವಂತೆ ಸಾರ್ವಜನಿಕ ಅಭಿಪ್ರಾಯವನ್ನು ತಿರುಹುವ ಒಂದು ಪ್ರತ್ಯೇಕ ಲಕ್ಷಣ ಇಂದು ಕಂಡು ಬರುತ್ತದೆ. ಸಾಮಾನ್ಯ ಸರಾಸರಿ ಮನುಷ್ಯರು ಬುದ್ಧಿಯಲ್ಲಷ್ಟೇ ಅಲ್ಲದೆ, ಒಲವುಗಳಲ್ಲೂ ಬಹಳ ಸಾಧಾರಣ ಮಟ್ಟದಲ್ಲಿರುತ್ತಾರೆ. ಏನಾದರೂ ಅರೂಢವಾದುದನ್ನು ಮಾಡಲು ಅವರನ್ನು ಹಚ್ಚುವಂಥ ಯಾವ ರುಚಿ ಅಥವಾ ಬಯಕೆಯೂ ಅವರಲ್ಲಿ ಬಲಿಷ್ಠವಾಗಿರುವುದಿಲ್ಲ. ಆದುದರಿಂದ ಅಂಥದ್ದಿರುವ ಜನರ ಅರ್ಥವೇ ಅವರಿಗಾಗುವುದಿಲ್ಲ; ಈ ವಿಲಕ್ಷಣರನ್ನವರು ಅನಾಗರಿಕರೆಂದೂ ಅಸಂಯಮಿಗಳೆಂದೂ ಅತಿರೇಕಿಗಳೆಂದೂ ತಾವು ಕೀಳುಗಳೆಯುವವರ ಸಾಲಿಗೆ ಸೇರಿಸಿ ಬಿಡುತ್ತಾರೆ. ಈ ಸಾಮಾನ್ಯ ವಿಷಯದ ಜೊತೆಗೆ ನೀತಿಸುಧಾರಣೆಯ ಬಗ್ಗೆ ಒಂದು ಬಲಿಷ್ಠ ಚಳವಳಿವೆದ್ದಿದೆ ಎಂದಿಟ್ಟುಕೊಳ್ಳೋಣ. ಆಗ ಆ ಚಳವಳವು ಯಾವುದನ್ನೂ ಬಲವಾಗಿ ಆಶಿಸಬಾರದು ಎಂದಿತೆಂದು ಭಾವಿಸೋಣ. ಎದ್ದುಕಾಣದೆ ಇರುವ ಚಾರಿತ್ರವೇ ಅದು ಹೇಳುವ ಆದರ್ಶಚಾರಿತ್ರವೆಂದೆನ್ನೋಣ. ಅದರ ಪ್ರಕಾರ ಚೀನೀ ಸ್ತ್ರೀಯರ ಪಾದಗಳನ್ನು ಕುಗ್ಗಿಸುವಂತೆ, ಎದ್ದುಕಾಣುವ ಮನುಜಚಾರಿತ್ರಾಂಶವನ್ನೆಲ್ಲಾ ಅದು ಮೊಟಕು ಮಾಡದೆ ಬಿಟ್ಟೀತೆ? ಬಾಕಿಯವರಿಗಿಂತ ಬಹಳ ಭಿನ್ನನಾಗಿ ತೋರುವವನನ್ನು ಸರ್ವಸಾಧಾರಣ ಮಟ್ಟಕ್ಕೆ ಇಳಿಸದೆ ಉಳಿದೀತೆ?

ಅಪೇಕ್ಷಣೀಯವಾದುದರ ಒಂದರ್ಧವನ್ನು ಬಹಿಷ್ಕರಿಸುವ ಆದರ್ಶ ಮೇಲಿನದು. ಅದು ಮತ್ತೊಂದರ್ಧದ ಅಸಮರ್ಪಕ ಅನುಕರಣವನ್ನಷ್ಟೇ ಜನರಿಂದ ಮಾಡಿಸೀತು. ಅಂಥ ಸಂದರ್ಭದಲ್ಲಿ ಕರ್ತವ್ಯೋನ್ಮುಖವಾದ ಇಚ್ಛಾ ಬಲನಿಯಂತ್ರಿತವಾದ ಬಲಿಷ್ಠಭಾವನೆ ಹಾಗೂ ಓಜಸ್ವಿ ವಿಚಾರಗಳಿಂದ ಕಾರ್ಯಪರರಾಗುವ ಮಹೋತ್ಸಾಹಿಗಳು ಉಳಿಯರು; ಆಗ ದುರ್ಬಲ ಭಾವನೆ ಉತ್ಸಾಹಗಳುಳ್ಳ ಇಚ್ಛಾಶಕ್ತಿ-ವಿಚಾರಶಕ್ತಿಗಳಾವುದರ ನೆರವೂ ಇಲ್ಲದೆ ನಿಯಮಗಳಿಗೆ ಮೇಲಿಂದ ಮೇಲೆ

ಹೊಂದಿಕೊಂಡು ಹೋಗುವ ಸಾಮಾನ್ಯರೇ ಹೆಚ್ಚುತ್ತಾರೆ. ಆಗಲೇ ಉತ್ಸಾಹವಂತ ಚಾರಿತ್ರಸಂಪನ್ನರು ಹೆಚ್ಚಾದಾಗಲೆಲ್ಲಾ ಬರಿ ಸಾಂಪ್ರದಾಯಿಕರಾಗುತ್ತಿದ್ದಾರೆ. ಆಗಲೇ ಈ ದೇಶದಲ್ಲಿ (ಇಂಗ್ಲೆಂಡಿನಲ್ಲಿ) ವ್ಯಾಪಾರವೊಂದನ್ನು ಬಿಟ್ಟರೆ ಉತ್ಸಾಹಕ್ಕೆ ಪ್ರವೇಶಿಸಲು ಬೇರೆ ಎಡೆಯಿಲ್ಲವಾಗಿದೆ. ವ್ಯಾಪಾರದಲ್ಲಿ ವ್ಯಯುವಾಗುವ ಉತ್ಸಾಹಶಕ್ತಿ ತಕ್ಕಮಟ್ಟಿನದೆನ್ನಬಹುದು. ಉಳಿದ ಅಂಶವು ಉಪಯುಕ್ತ ಅಥವಾ ಉಪಕಾರಕ ಎನಿಸುವ ವಿರಾಮೋದ್ಯೋಗದಲ್ಲಿ (Hobby) ಖರ್ಚಾಗುತ್ತದೆ. ಆ ವಿರಾಮೋದ್ಯೋಗವಾದರೋ ಸಾಮಾನ್ಯವಾಗಿ ಒಂದೇ ಒಂದು ಮತ್ತು ಬಹಳ ಚಿಕ್ಕಪ್ರಮಾಣದ್ದಾಗಿರುವಂಥದು. ಇಂಗ್ಲೆಂಡಿನ ದೊಡ್ಡಸ್ತಿಕೆ ಇಂದು ಸಾಮೂಹಿಕ, ವೈಯಕ್ತಿಕವಾಗಿ ವಾಮನರಾಗಿರುವ ನಾವು ನಮ್ಮ ಒಗ್ಗಟ್ಟಿನಿಂದ ಮಾತ್ರ ಏನಾದರೂ ತ್ರಿವಿಕ್ರಮವನ್ನು ಸಾಧಿಸಿಯೇವು–ಅಷ್ಟೆ. ಇಷ್ಟಕ್ಕೆ ನಮ್ಮ ನೈತಿಕ ಹಾಗೂ ಧಾರ್ಮಿಕ ಪರೋಪಕಾರವಾದಿಗಳು (Philanthropists) ಸಂಪೂರ್ಣ ತೃಪ್ತರಾಗಿ ಬಿಟ್ಟಿದ್ದಾರೆ. ಆದರೆ ಇಂಗ್ಲೆಂಡನ್ನು ಈಗಿನ ಸ್ಥಿತಿಗೆ ತಂದು ಮುಟ್ಟಿಸಿದವರು ಬೇರೆ ಚಾರಿತ್ರ ಮುದ್ರಿಕೆಯುಳ್ಳವರು. ಈ ದೇಶದ ಅವನತಿಯನ್ನು ತಡೆಗಟ್ಟಲಾದರೂ ಬೇರೆ ಬಗೆಯ ವ್ಯಕ್ತಿತ್ವವುಳ್ಳವರೇ ಬೇಕು!

ಸಂಪ್ರದಾಯದ ನಿರಂಕುಶಾಧಿಕಾರವೇ ಎಲ್ಲೆಲ್ಲೂ ಮಾನವ್ಯ ಅಭಿವೃದ್ಧಿಗೆ ವಿಘ್ನವಾಗಿ ನಿಂತಿದೆ. ಅದು ಸಂಪ್ರದಾಯಕ್ಕಿಂತ ಉತ್ತಮವಾಗಬೇಕೆಂಬ ಮನಃಪ್ರವೃತ್ತಿಗೆ ಎಡೆಬಿಡದೆ ವಿರೋಧವನ್ನೊಡ್ಡುತ್ತದೆ. ಸುಧಾರಿಸಬೇಕೆಂಬ ಭಾವೋದಯವು ಸ್ವಾತಂತ್ರ್ಯದ ಭಾವೋದಯಕ್ಕಿಂತ ಭಿನ್ನ ಸ್ವರೂಪದ್ದು. ಸುಧಾರಕರು ಒಲ್ಲದ ಜನರ ಮೇಲೆ ಒಮ್ಮೆ ಸುಧಾರಣೆಯನ್ನು ಹೇರಹೋದಾರು ಆಗ ಸ್ವತಂತ್ರರು ಅದನ್ನು ಪ್ರತಿಭಟಿಸಲೆದ್ದಾರು. ಆದರೆ ಎಂದೂ ನಿಷ್ಫಲವಾಗದ ಚಿರಸ್ಥಾಯಿಯಾದ ಸುಧಾರಣೆಯ ಆಕರವೆಂದರೆ ಸ್ವಾತಂತ್ರ್ಯವೇ. ಏಕೆಂದರೆ ಅದರಿಂದ ವ್ಯಕ್ತಿಗಳಿದ್ದಷ್ಟು ಸ್ವತಂತ್ರ ಸುಧಾರಣಾ ಕೇಂದ್ರಗಳಿರುವಂತಾಗುತ್ತದೆ. ಹೀಗಿದ್ದರೂ ಅವೆರಡಕ್ಕೂ ಸಾಧಾರಣವಾದ ಪ್ರಗತಿಶೀಲ ತತ್ವವು ಸಂಪ್ರದಾಯದ ನೋಗವಜ್ಜೆಯಿಂದ ಮುಕ್ತಿ ಪಡೆವ ಮಟ್ಟಿಗಾದರೂ ಸಂಪ್ರದಾಯ ವಿರುದ್ಧವಾಗಿರುತ್ತದೆ. ಈ ಪುರಾಣಪ್ರಿಯತೆ ಹಾಗೂ ನವ್ಯತಾಪ್ರಿಯತೆಗಳ ನಡುವಣ ಸ್ಪರ್ಧೆಯೇ ಮನುಷ್ಯೇತಿಹಾಸದಲ್ಲಿ ಮುಖ್ಯ ಆಕರ್ಷಕ ವಸ್ತು. ನಿಜವಾದ ಅರ್ಥದಲ್ಲಿ ಜಗತ್ತಿನ ಬಹುಭಾಗಕ್ಕೆ ಇತಿಹಾಸವೆಂಬುದೇ ಇಲ್ಲ; ಏಕೆಂದರೆ ಅಲ್ಲಿ ಸಂಪ್ರದಾಯದ ನಿರಂಕುಶಾಧಿಪತ್ಯ ಪೂರ್ಣತೆಯನ್ನು ಮುಟ್ಟಿದೆ. ಪೌರಸ್ತ್ಯ ಜಗತ್ತಿನಲ್ಲೆಲ್ಲಾ ಹೀಗೇ. ಅಲ್ಲಿ ಸಂಪ್ರದಾಯ ಅಥವಾ ಸದಾಚಾರವೇ ಪರಮಪ್ರಮಾಣ. ಸಂಪ್ರದಾಯ ಶರಣತೆಯೇ ಹಕ್ಕು, ಅದೇ ನ್ಯಾಯ. ಅಧಿಕಾರಮತ್ತನಾದ (ದುಃಶಾಸನ ಅಸುರ) ನಲ್ಲದೆ (Tyrant) ಮತ್ತಾರೂ ಅನೂಚಾನ ಪದ್ಧತಿಯ ಆಧಾರವನ್ನು ಮುರಿಯುವ ವಿಚಾರ ಮಾಡರು. ಇದರ ಫಲ ಸ್ಪಷ್ಟ. ಆ ರಾಷ್ಟ್ರಗಳಲ್ಲಿ ಒಮ್ಮೆ ಅಭೂತಪೂರ್ವನಿರ್ಮಾಣದ ಶಕ್ತಿಯಿತ್ತು. ಅವು ಅಂದು ನೆಲಬಿಟ್ಟು ಹೊರಡಲಿಲ್ಲ; ಜನಬಹುಲ, ಸಾಕ್ಷರ, ಕಲಾಕುಶಲ ಎನಿಸಿದ್ದವು.

ಆದುದರಿಂದ ಆಗ ಅವು ಜಗತ್ತಿನ ಅತ್ಯಂತ ಬಲಿಷ್ಠ ಮಹಾರಾಷ್ಟ್ರಗಳಾಗಿ ಮೆರೆದವು. ಈಗ ಅವುಗಳ ಗತಿ? ಅವುಗಳೀಗ ತಾವು ಅತ್ಯುನ್ನತ ಮಟ್ಟದ ನಾಗರಿಕತೆಯಲ್ಲಿದ್ದಾಗ ಕಾಡಾಡಿಗಳಾಗಿದ್ದವರ ಸಂತಾನದ ದಾಸಾನುದಾಸ ಎನಿಸಿವೆ; ಹೀಗಾಗಲು ಅವುಗಳ ಮೇಲೆ ಸ್ವಾತಂತ್ರ್ಯ–ಪ್ರಗತಿಗಳ ವಿಭಕ್ತನಿಯಮವನ್ನು ಸಂಪ್ರದಾಯವು ನಡೆಸಿದ್ದೇ ಕಾರಣ–ಅಲ್ಪಸಂಖ್ಯ ಸ್ವತಂತ್ರರೂ ಪ್ರಗತಿಪರರೂ ಬಹುಸಂಖ್ಯರ ಮೇಲೆ ಸಂಪ್ರದಾಯವನ್ನು ಅತ್ಯುಗ್ರವಾಗಿ ಹೇರಿದ್ದೇ ಕಾರಣ. ವ್ಯಕ್ತಿವೈಶಿಷ್ಟ್ಯಕ್ಕೆ ಸ್ಥಾನ ಕೊಟ್ಟುಕೊಂಡು ಇರುವವರೆಗೆ ಒಂದು ಜನ ಪ್ರಗತಿಪರವಾಗಿರುತ್ತದೆ; ಹಾಗೆ ಸ್ಥಾನಕೊಡುವುದನ್ನು ನಿಲ್ಲಿಸಿದಾಕ್ಷಣ ಅದರ ಪ್ರಗತಿಯೆದುದು ಪೂರ್ಣವಿರಾಮದ ಗುರುತು ಕಾಣತೊಡಗುತ್ತದೆ. ಯುರೋಪಿನ ರಾಷ್ಟ್ರಗಳಲ್ಲಿ ಅಂಥ ಬದಲಾವಣೆಯುಂಟಾಗುವುದಾದರೆ ಅದು ಸಂಪೂರ್ಣ ತತ್ಸದೃಶವಾಗದು. ಈ ರಾಷ್ಟ್ರಗಳನ್ನು ಹೆದರಿಸುತ್ತಿರುವ ಸಂಪ್ರದಾಯ ನಿರಂಕುಶತೆ ನಿಶ್ಚಲತೆಯ ರೂಪದ್ದಲ್ಲ, ನಿಂತಲ್ಲೇ ನಿಲ್ಲುವ ರೋಗವಾಗಿಲ್ಲ. ವ್ಯಕ್ತಿವೈಶಿಷ್ಟ್ಯವನ್ನದು ಬಹಿಷ್ಕರಿಸಿದರೂ ಬದಲಾವಣೆಯನ್ನು ಬಹಿಷ್ಕರಿಸದು–ಆದರೆ ಬದಲಾಯಿಸುವುದಾದರೆ ಎಲ್ಲರೂ ಒಂದೇ ಸಲ ಒಟ್ಟಿಗೆ ಬದಲಾಯಿಸಬೇಕು ಎಂಬುದದರ ಶರ್ತ. ನಾವು (ಯುರೋಪಿಯನ್ನರು) ನಮ್ಮ ಹಿರಿಯರ ವೇಷ–ಭೂಷಣಗಳನ್ನು ಬಿಟ್ಟಿದ್ದೇವೆ; ಈಗಲೂ ನಮ್ಮಲ್ಲಿ ಪ್ರತಿಯೊಬ್ಬರೂ ಇತರರಂತೆಯೇ ಬಟ್ಟೆಯುಡಬೇಕು; ಉಡುಗೆಯ ರೀತಿ ವರ್ಷ– ಎರಡು ವರ್ಷಗಳಿಗೊನ್ನೆ ಬದಲಾದೀತು. ಈ ಪ್ರಕಾರ ಬದಲಾವಣೆಯಾಗುವ ಕಾಲದಲ್ಲೆಲ್ಲಾ ಅದು ಬದಲಾವಣೆಗಾಗಿಯೇ ಬದಲಾವಣೆ ಎನಿಸುವಂತೆ ನಾವು ಜಾಗ್ರತೆ ತೆಗೆದುಕೊಳ್ಳುತ್ತೇವೆ; ಅದರಲ್ಲಿ ಸೌಂದರ್ಯದ ದೃಷ್ಟಿಯೂ ಇಲ್ಲ, ಸೌಕರ್ಯದ ದೃಷ್ಟಿಯೂ ಇಲ್ಲ! ಹೇಗೆಂದರೆ, ಸೌಂದರ್ಯ ಅಥವಾ ಸೌಕರ್ಯದ ಆ ದೃಷ್ಟಿಯೂ ಏಕ ಕಾಲದಲ್ಲಿ ಎಲ್ಲ ಜಗಕ್ಕೂ ಹೊಳೆಯದು; ಇನ್ನೊಂದು ಕಾಲದಲ್ಲಿ ಒಮ್ಮೆಲೇ ಇಡೀ ಜಗತ್ತು ಅದನ್ನು ಕಿತ್ತೆಸೆಯಲೂ ಹೊರಡದು. ಆದರೆ ನಾವು ಪ್ರಗತಿಶೀಲರೂ ಆಗಿದ್ದೇವೆ, ಪರಿವರ್ತನಪರರೂ ಆಗಿದ್ದೇವೆ. ನಾವು ಸತತವೂ ಯಾಂತ್ರಿಕ ವಸ್ತುಗಳಲ್ಲಿ ಹೊಸ ಹೊಸತನ್ನು ತಯಾರಿಸುತ್ತಿದ್ದೇವೆ. ಬೇರೆ ಯಂತ್ರೋಪಕರಣಗಳು ಬರುವವರೆಗಷ್ಟೇ ಹಳೆಯವನ್ನು ಇಟ್ಟುಕೊಂಡಿರುತ್ತೇವೆ. ರಾಜಕಾರಣ, ಶಿಕ್ಷಣ ಮತ್ತು ನೀತಿಗಳಲ್ಲಿ ಸಹ ನಾವು ಸುಧಾರಣೆ ಮಾಡಲು ಆತುರರಾಗಿದ್ದೇವೆ. ಆದರೆ ನೀತಿಯಲ್ಲಿ– 'ನೀವು ನಮ್ಮಷ್ಟು ಒಳ್ಳೆಯವರಾದರೆ ಸಾಕು' ಎಂದು ಅನ್ಯರನ್ನು ಒತ್ತಾಯಿಸುವುದು ಅಥವಾ ಪುಸಲಾಯಿಸುವುದು ಎಂಬಷ್ಟಕ್ಕೇ ನಮ್ಮ ಸುಧಾರಣೆ ಪರಿಸೀಮಿತ. ನಾವು ಬೇಡವೆಂಬುದು ಪ್ರಗತಿಯನ್ನಲ್ಲ; ತದ್ವಿರುದ್ಧವಾಗಿ, ನಮ್ಮಷ್ಟು ಪ್ರಗತಿಶೀಲ ಜನರೇ ಮತ್ತೆಲ್ಲೂ ಇಲ್ಲ ಎಂದು ನಾವು ಜಂಭಕೊಚ್ಚಿಕೊಳ್ಳುತ್ತೇವೆ. ನಾವು ಕಾಳೆಗ ಹೂಡಿರುವುದು ವ್ಯಕ್ತಿವೈಶಿಷ್ಟ್ಯದ ವಿರುದ್ಧವಾಗಿ. ನಾವೆಲ್ಲ ನಮ್ಮನ್ನು ಸದೃಶರನ್ನಾಗಿ ಮಾಡಿಕೊಂಡು ಬಿಟ್ಟೆವೆಂದರೆ ಅದೇ ಅದ್ಭುತ ಸಾಹಸ ಎಂದು ತಿಳಿದು ಬಿಡುತ್ತೇವೆ; ನಮ್ಮ ಲಕ್ಷ್ಯವನ್ನು ಮೊಟ್ಟಮೊದಲು ನಮ್ಮ ನ್ಯೂನತೆ ಮತ್ತು ಅನ್ಯರ ಮೇಲ್ಮೆಗಳತ್ತ ಅಥವಾ ಇಬ್ಬರ

ಆಧಿಕ್ಯವನ್ನು ಕೂಡಿಸಿ ಅವೆರಕ್ಕೂ ಮಿಗಿಲಾದ ಮತ್ತೊಂದನ್ನು ತಯಾರಿಸುವ ಸಂಭವದತ್ತ ಸೆಳೆಯುವ ಗುಣವೆಂದರೆ ಆಸಾದೃಶ್ಯವೇ. ಈ ಸಂದರ್ಭದಲ್ಲಿ ಚೀನದಿಂದ ನಾವು ಬುದ್ಧಿಕಲಿತುಕೊಳ್ಳಬೇಕಾಗಿದೆ. ಅಲ್ಲಿ ಪ್ರಾವಿಣ್ಯವಿತ್ತು, ವಿವೇಕವಿತ್ತು, ಆದಿಕಾಲದಲ್ಲೇ ಸತ್ಸಂಪ್ರದಾಯಗಳು ಬೆಳೆದವು; ತವಸಿಗಳು–ತತ್ವಜ್ಞಾನಿಗಳು ಎಂದು ನಾವು ತಕ್ಕಮಟ್ಟಿಗೆ ಎಣಿಸಬಹುದಾದ ಮಹಾನುಭಾವರು ಅಲ್ಲಿ ಆಗಿಹೋದರು. ತಮ್ಮ ಅತ್ಯುತ್ತಮ ವಿವೇಕವನ್ನು ತಮ್ಮ ಸಮಾಜದ ಪ್ರತಿಯೊಬ್ಬ ಸದಸ್ಯನ ಮೇಲೂ ಅಚ್ಚೊತ್ತಬಲ್ಲ ಸಾಧನವನ್ನೂ ಚೀನೀಯರು ಬಲ್ಲವರಾಗಿದ್ದಾರೆ; ಅಂಥ ಸಾಧನ ಸಂಪನ್ನರು ಅಲ್ಲಿ ಗೌರವಾಧಿಕಾರಗಳ ಸ್ಥಾನಗಳನ್ನೂ ಪಡೆಯುತ್ತಾರೆ. ಆದುದರಿಂದ ಇಂಥ ಜನರು ಮನುಷ್ಯರ ಪ್ರಗತಿಶೀಲತೆಯ ಗುಟ್ಟನ್ನು ಕಂಡವರೆನ್ನಬೇಕು. ಹೀಗಾಗಿ ಇವರು ಜಗತ್ತಿನ ಚಟುವಟಿಕೆಯಲ್ಲಿ ಸ್ತಿಮಿತಗತಿಯಿಂದ ನೇತೃಸ್ಥಾನದಲ್ಲಿರಬೇಕಾಗಿತ್ತು. ಆದರೆ ತದ್ವಿರುದ್ಧವಾಗಿ, ಇವರು ನಿಶ್ಚಲ (Stationary)ರಾಗಿ ಬಿಟ್ಟಿದ್ದಾರೆ! ಸಾವಿರಾರು ವರ್ಷಗಳಿಂದ ಇದ್ದಲ್ಲೇ ಇದ್ದುಕೊಂಡಿದ್ದಾರೆ! ಇವರೇನಾದರೂ ಸುಧಾರಿಸಬೇಕಾದರೆ ವಿದೇಶದವರೇ ಬರಬೇಕು; ಇವರ ಕೈಯಿಂದ ಎಂದೂ ಅದಾಗದು. ಆಂಗ್ಲ ಉಪಕಾರ ಸಿದ್ಧಾಂತಿಗಳಾಶಿಸುವಂತೆ ಇವರು ಎಲ್ಲ ಪ್ರಜೆಗಳನ್ನೂ ಸಮರೂಪಗೊಳಿಸುವದರಲ್ಲಿ, ಒಂದೇ ಗಾದೆ–ಸೂತ್ರ–ನಿಯಮಗಳಿಂದ ಎಲ್ಲರ ಆಚಾರ–ವಿಚಾರಗಳನ್ನು ನಿಯಂತ್ರಿಸುವುದರಲ್ಲಿ ಈ ಜನರು ಜಯಶಾಲಿಗಳಾಗಿ ಹೋಗಿದ್ದಾರೆ– ಇನ್ನು ಇವರು ಬದಲಾದಾರೆಂಬ ಪ್ರತ್ಯಾಶೆಯೇ ಇಲ್ಲ. ತತ್ಫಲವಾಗಿಯೇ ಇಂಥ "ಕೋಲ್ಡ್ ಸ್ಟೋರೇಜಿಗೆ" ಹಾಕಿಟ್ಟಂಥ ಸ್ಥಿತಿ ಇವರಿಗೆ! ಅಸಂಘಟಿತ ರೂಪದಲ್ಲಿರುವ ಆಧುನಿಕ ಸಾರ್ವಜನಿಕ ಅಭಿಪ್ರಾಯದ ರಾಜ್ಯಭಾರ ಅಥವಾ ಸತ್ತೆಯು ಸಂಘಟಿತರೂಪದಲ್ಲಿರುವ ಚೀನೀಯ ಶೈಕ್ಷಣಿಕ–ರಾಜಕೀಯ ಪದ್ಧತಿಗಳಿಗೆ ಸರಿಸಮಾನವಾಗಿದೆ. ಈ ಕೊರಳೇರಿದ ನೊಗದ ವಿರುದ್ಧ ಯಶಸ್ವಿಯಾಗಿ ವ್ಯಕ್ತಿವೈಶಿಷ್ಟ್ಯವು ಹೋರಾಡಿ ತಲೆ ಎತ್ತಿ ನಿಲ್ಲದ ಹೊರತು ಯುರೋಪು–ಉದಾತ್ತ ಕೃತಿಗಳ ಪರಂಪರೆ ಹಾಗೂ ಅದು ಹೇಳಿಕೊಳ್ಳುವ ಕ್ರೈಸ್ತಧರ್ಮದ ಬಲ ಎಷ್ಟೇ ಇದ್ದರೂ ಇನ್ನೊಂದು ಚೀನವಾಗಲು ಪ್ರವರ್ತಿಸುವುದು ಖಂಡಿತ.

ಚೀನದಂಥ ಪರಿಸ್ಥಿತಿ ಬಾರದಂತೆ ಯುರೋಪನ್ನು ಕಾಯ್ದುದ್ದಾವುದು? ಯುರೋಪಿನ ರಾಷ್ಟ್ರಗಳ ಕುಟುಂಬವು ಅಚಲ– ಅಚೇತನವಾಗದೆ ಮಾನವ ಜಾತಿಯ ಸುಧಾರಣಶೀಲ ಅಂಗವಾಗಿ ಉಳಿಯುವಂತೆ ಮಾಡಿದ್ದಾವುದು? ಅವುಗಳಲ್ಲಿರುವ ಹೆಚ್ಚಿನ ಗುಣಗಳೆನ್ನುತ್ತೀರಾ? ಅಲ್ಲವೇ ಅಲ್ಲ. ಅಂಥ ಗುಣಗಳು ಒಂದು ಕಾಲದಲ್ಲಿ ಇದ್ದರೂ ಅವು ಇದ್ದದ್ದು ಕಾರಣರೂಪದಲ್ಲಲ್ಲ– ಕಾರ್ಯ ರೂಪದಲ್ಲಿ. ಈ ರಾಷ್ಟ್ರಗಳ ರಕ್ಷಕತ್ವ ವಹಿಸಿ ನಿಂತದ್ದು ಚಾರಿತ್ರ ಮತ್ತು ಸಂಸ್ಕೃತಿಗಳ ವೈವಿಧ್ಯವೇ! ವ್ಯಕ್ತಿಗಳೂ ವರ್ಗಗಳೂ ರಾಷ್ಟ್ರಗಳೂ ಯಾವಾಗಲೂ ಒಂದಕ್ಕಿಂತ ಇನ್ನೊಂದು ಅತ್ಯಂತ ಭಿನ್ನವಾಗಿಯೇ ಇರುವಂಥವು. ಇವು ವಿವಿಧ ಪಥಗಳನ್ನು ನಿರ್ಮಿಸಿಕೊಂಡಿವೆ; ಆ ಒಂದೊಂದು ಪಥವೂ ಬೆಲೆ ಬಾಳುವ ಒಂದೊಂದು ಪುರುಷಾರ್ಥಗಳತ್ತ

ಒಯ್ಯುವಂಥವು. ಪ್ರತಿಯೊಂದು ಐತಿಹಾಸಿಕ ಅವಧಿಯಲ್ಲೂ ವಿವಿಧ ಮಾರ್ಗಗಳಲ್ಲಿ ಹೋಗುವವರು ಇತರ ಮಾರ್ಗಸ್ಥರನ್ನು ಸಹಿಸುತ್ತಿದ್ದಿಲ್ಲವಾದರೂ ಪ್ರತಿ ಪಥಿಕಪುಂಜವೂ ಮಿಕ್ಕೆಲ್ಲರನ್ನೂ ತನ್ನ ಹಾದಿಯಲ್ಲೇ ಹೋಗುವಂತೆ ಒತ್ತಾಯಿಸಿದ್ದರೆ ಸಂತೋಷಪಡುತ್ತಿತ್ತೆನ್ನಬಹುದಾದರೂ ಪರಸ್ಪರರ ಅಭಿವೃದ್ಧಿಗೆ ಆತಂಕವನ್ನೊಡ್ಡಲು ಇವು ಮಾಡಿದ ಪ್ರಯತ್ನಗಳೆಲ್ಲಾ ಯಶಸ್ವಿಯಾದದ್ದು ವಿರಳ–ಕಾಯಂ ಗೆಲುವನ್ನು ಸಂಪಾದಿಸಿದ್ದು ತೀರ ಅಪರೂಪ; ಮತ್ತು ಈ ಪ್ರತಿಯೊಂದೂ ಮಿಕ್ಕವು ಕೊಟ್ಟ ಒಳಿತನ್ನು ಸ್ವೀಕರಿಸಲು ಉಳಿದುಕೊಂಡಿದ್ದವು. ನನ್ನ ತಿಳಿವಳಿಕೆಯ ಪ್ರಕಾರ ಯುರೋಪು ತನ್ನ ಪ್ರಗತಿಪರ ಮತ್ತು ಬಹುಮುಖ ಅಭಿವೃದ್ಧಿಗಾಗಿ ಈ ಪಥಬಾಹುಲ್ಯಕ್ಕೇ ಸಂಪೂರ್ಣ ಋಣಿಯಾಗಿದೆ. ಆದರೆ ಇದು ಈಗಾಗಲೇ ಈ ಲಾಭವನ್ನು ತಕ್ಕಮಟ್ಟಿಗೆ ಕಳೆದುಕೊಳ್ಳುತ್ತ ನಡೆದಿದೆ. ಖಂಡಿತವಾಗಿಯೂ ಇದೀಗ ಎಲ್ಲರನ್ನೂ ಸಮರೂಪತೆಗಿಳಿಸುವ ಚೀನೀಯ ಧ್ಯೇಯದತ್ತಸಾಗುತ್ತಿದೆ. ಈ ದೇಶದಲ್ಲಿ ಸನ್ನಿವೇಶ ವೈವಿಧ್ಯವು ದಿನೇ ದಿನೇ ಅಳಿಯುತ್ತ ಹೋಗಿದೆ. ಬೇರೆ ಬೇರೆ ವರ್ಗ ಹಾಗೂ ವ್ಯಕ್ತಿಗಳ ಸುತ್ತಲಿದ್ದ ಅವುಗಳ ಚಾರಿತ್ರಗಳನ್ನು ರೂಪಿಸುವ ಪರಿಸ್ಥಿತಿಗಳಿಂದು ನಿತ್ಯವೂ ಜೀರ್ಣವಾಗುತ್ತ ಹೋಗಿವೆ. ಮೊದಲು ಭಿನ್ನ ವರ್ಗದವರು, ಭಿನ್ನ ನೆರೆಯವರು, ಭಿನ್ನ ವ್ಯಾಪಾರಿಗಳು ಹಾಗೂ ಉದ್ಯೋಗಿಗಳು ವಿವಿಧವಾದ ತಮ್ಮ ತಮ್ಮ ಪ್ರಪಂಚಗಳಲ್ಲಿರುತ್ತಿದ್ದರು. ಈಗಲಾದರೋ ಬಹಳ ಮಟ್ಟಿಗೆ ಅವರೆಲ್ಲಾ ಒಂದೇ ಪ್ರಪಂಚದಲ್ಲಿರುತ್ತಾರೆ. ತುಲನಾತ್ಮಕವಾಗಿ ನೋಡಿದರೆ ಅವರೆಲ್ಲರೂ ಇಂದು ನೋಡುವುದು ಒಂದನ್ನೇ ಓದುವುದು ಒಂದನ್ನೇ, ಕೇಳುವುದು ಒಂದನ್ನೇ, ಹೋಗುವುದು ಎಲ್ಲರಿಗೂ ಸಾಧಾರಣವಾದ ಸ್ಥಳಗಳಿಗೇ; ಒಂದೇ ಬಗೆಯ ವಿಷಯಗಳತ್ತ ಅವರ ಭಯ–ಪ್ರತ್ಯಾಶೆಗಳನ್ನು ಹರಿಯಿಸಲಾಗುತ್ತದೆ: ಎಲ್ಲರಿಗೂ ಒಂದೇ ರೀತಿಯ ಹಕ್ಕು–ಸ್ವಾತಂತ್ರ್ಯಗಳು–ಅವನ್ನು ಸ್ಥಾಪಿಸಲಿರುವ ಸಾಧನ ಸಾಮಗ್ರಿಗಳೂ ಏಕರೂಪವೇ, ಎಲ್ಲರಿಗೂ ಒಂದೇ. ಉಳಿದಿರುವ ಸ್ಥಾನತಾರತಮ್ಯವು ದೊಡ್ಡದಾಗಿಯೇ ಇದೆ; ಆದರೆ ನಷ್ಟವಾಗಿ ಹೋದ ಸ್ಥಾನಗಳಿಗೆ ಅದರಿಂದೇನೂ ಪ್ರಯೋಜನವಿಲ್ಲ. ಈ ಆವರಣಭೇದದ ಉಚ್ಚಾಟನೆ ಮುನ್ನಡೆಯಿಡುತ್ತಲೇ ಸಾಗಿದೆ. ಈ ಯುಗದ ರಾಜಕೀಯ ಬದಲಾವಣೆಗಳೆಲ್ಲವೂ ಅದನ್ನು ಮುನ್ನಡೆಯಿಸಿಕೊಂಡು ಹೋಗುತ್ತವೆ. ಏಕೆ ಗೊತ್ತೆ? ಅದು ಕೀಳು ಜನರನ್ನು ಮೇಲಕ್ಕೇರಿಸಿ ಮೇಲು ಜನರನ್ನು ಕೆಳಕ್ಕಿಳಿಸುತ್ತದೆ. ಶಿಕ್ಷಣಕ್ಷೇತ್ರ ವಿಸ್ತರಿಸುತ್ತ ಹೋದ ಹಾಗೆ ಈ ಪ್ರಯೋಗವೂ ಹೆಚ್ಚುತ್ತ ಹೋಗುತ್ತದೆ. ಏಕೆಂದರೆ, ವಿದ್ಯೆಯು ಜನರನ್ನು ಸರ್ವಸಾಧಾರಣ ಪ್ರಭಾವಗಳಿಗೊಳಪಡಿಸುತ್ತದೆ, ಸರ್ವರ ಸ್ವತ್ತಾಗಿರುವ ವಾಸ್ತವಿಕ ಸಂಗತಿ ಮತ್ತು ಭಾವರಸಗಳನ್ನು ಅವರಿಗೆ ಒದಗಿಸುತ್ತದೆ. ಸಂಪರ್ಕಸಾಧನ ಸುಧಾರಿಸಿದ ಹಾಗೆ ಅದು ದೂರದೂರದ ಜನರ ಸಂಪರ್ಕವನ್ನುಂಟುಮಾಡಿ ಮತ್ತು ತ್ವರಿತಗತಿಯಿಂದ ಅವರ ವಾಸಸ್ಥಳಗಳಲ್ಲಿ ಬದಲಾವಣೆಯನ್ನು ಸಾಧಿಸಿ, ಅವರಲ್ಲಿ ಸದೃಶೀಕರಣವನ್ನು ಹೆಚ್ಚಿಸುತ್ತದೆ. ವಾಣಿಜ್ಯ–ಉತ್ಪಾದನಗಳು ಸೌಲಭ್ಯದ ಸನ್ನಿವೇಶಗಳ ಸೌಕರ್ಯ ಅಥವಾ ಲಾಭದಾಯಕತೆಯನ್ನು ಹೆಚ್ಚು ಬಿತ್ತರಿಸಿ, ಉತ್ತಮ–ಮಧ್ಯಮ ಎಂಬ ಭೇದವಿಲ್ಲದೆ ಎಲ್ಲ ಮಹತ್ವಾಕಾಂಕ್ಷೆಯ ವಿಷಯಗಳನ್ನೂ ಸಾರ್ವಸ್ಪರ್ಧೆಗೆ

ಗುರಿಪಡಿಸಿ, ಒಂದು ಪ್ರತ್ಯೇಕವರ್ಗದ ಬದಲು ಎಲ್ಲ ವರ್ಗಗಳೂ ಮೇಲೇರಬೇಕೆಂಬ ಲಕ್ಷಣವನ್ನು ಹೊಂದುವಂತೆ ಮಾಡುವುದರ ಮೂಲಕ ಅದೇ ತುಲ್ಯತಾಸಿದ್ಧಿಗೆ ಕಾರಣಗಳಾಗುತ್ತವೆ. ಈ ಎಲ್ಲವುಗಳಿಗಿಂತಲೂ ಹೆಚ್ಚು ಸಮರ್ಥವಾದ ಸಾದೃಶ್ಯಕಾರಕವೆಂದರೆ: ಈ ದೇಶ ಹಾಗೂ ಇತರ ಸ್ವತಂತ್ರ ದೇಶಗಳಲ್ಲಿ ಕಂಡುಬರುವಂತೆ ರಾಜ್ಯದಲ್ಲಿ ಸಾರ್ವಜನಿಕ ಅಭಿಪ್ರಾಯದ ಮೇಲುಗೈಯನ್ನು ಸಂಪೂರ್ಣವಾಗಿ ಸಂಸ್ಥಾಪಿಸಿರುವುದು. ಸ್ತೋಮದ (Multitude) ಅಭಿಪ್ರಾಯವನ್ನು ಅಲಕ್ಷಿಸುವ ಸಾಮರ್ಥ್ಯವನ್ನಿತ್ತ ಸಾಮಾಜಿಕ ಸ್ಥಾನ–ಮಾನಗಳು ಕ್ರಮೇಣ ತಮ್ಮ ತಾರತಮ್ಯವನ್ನು ಸಮತಟ್ಟಿಗಿಳಿಸುತ್ತ ಹೋದ ಹಾಗೆ; ಸಾರ್ವಜನಿಕರಿಗೊಂದು ಇಚ್ಛೆ, ಸಂಕಲ್ಪ (Will) ಇದೆ ಎಂಬುದು ವಿಧಾಯಕವಾಗಿ ಗೊತ್ತಾಗಿ, ಅದನ್ನು ಪ್ರತಿಭಟಿಸುವ ಕಲ್ಪನೆಯು ವ್ಯಾವಹಾರಿಕ ರಾಜಕಾರಣಿಗಳ ಮನಸ್ಸಿನಿಂದ ಹೆಚ್ಚುಹೆಚ್ಚಾಗಿ ಮಾಯವಾಗುತ್ತ ಹೋದಹಾಗೆ– ಪರಂಪರಾವಿರೋಧಿಗಳ ಪಂಗಡವನ್ನು ಬೆಂಬಲಿಸುವ ಸಮಾಜಪ್ರವೃತ್ತಿ ನ್ಯೂನವಾಗುತ್ತ ಹೋಗುತ್ತದೆ, ನಿಂತೇ ಹೋಗುತ್ತದೆ; ಸಮಾಜದ ಸ್ಥಿರಶಕ್ತಿ ಮಂಡಲವು ಬರಿ ಸಂಖ್ಯಾಬಲದ ಮೇಲುಗೈಯನ್ನು ವಿರೋಧಿಸುವ ಪ್ರವೃತ್ತಿಯುಳ್ಳದ್ದಾದರೂ ಸಾರ್ವಜನಿಕ ಅಭಿಪ್ರಾಯಕ್ಕೆ ವಿರುದ್ಧವಾದ ಮತಗಳಿಗೆ ಆಶ್ರಯ ಕೊಡುವುದು ನಿಂತು ಹೋಗುತ್ತದೆ.

ಈ ಎಲ್ಲ ಕಾರಣಗಳ ರಾಶಿ ಬಹಳ ದೊಡ್ಡದಾಗುತ್ತದೆ. ಆ ರಾಶಿಪ್ರಭಾವವು ವ್ಯಕ್ತಿವೈಶಿಷ್ಟ್ಯಕ್ಕೆ ಎದುರಾಗಿ ನಿಂತರೆ ಅದೆಂತು ವ್ಯಕ್ತಿವೈಶಿಷ್ಟ್ಯ ಉಳಿದುಕೊಂಡೀತು? ಸಾರ್ವಜನಿಕರಲ್ಲಿಯ ಬುದ್ಧಿವಂತರು ಅದರ ಬೆಲೆಯನ್ನು ಅರಿಯುವಂತೆ ಮಾಡಬೇಕು; ಉತ್ತಮತರ ಸ್ಥಿತಿಯನ್ನು ತರುವಂತಿಲ್ಲದಾಗಲೂ ಒಮ್ಮೆ ಅಧಮತರ ಸ್ಥಿತಿಯನ್ನೇ ತರುವಂತಿದ್ದರೂ ಅಭಿಪ್ರಾಯಭೇದವಿರುವುದೊಳಿತು ಎಂಬುದನ್ನು ಅಂಥವರಾದರೂ ಅರಿತುಕೊಳ್ಳುವಂತೆ ಮಾಡಬೇಕು. ಇಲ್ಲವಾದರೆ ವ್ಯಕ್ತಿವೈಶಿಷ್ಟ್ಯವು ಉಳಿಯುವುದು ಕಷ್ಟತರವಾಗುತ್ತ ಹೋದೀತು. ಜಾರಿಗೆ ತರಲಾದ ಜೀರ್ಣೀಕರಣ ಅಥವಾ ಸದೃಶೀಕರಣವಿನ್ನೂ ಅಸಂಪೂರ್ಣ ದಶೆಯಲ್ಲೇ ಇರುವುದರಿಂದ ಈಗಲೇ ವ್ಯಕ್ತಿವೈಶಿಷ್ಟ್ಯದ ಉಳಿಯುವ ಹಕ್ಕನ್ನು ಘಂಟಾಘೋಷವಾಗಿ ಮಂಡಿಸಬೇಕು. ಈ ಪ್ರಾರಂಭಾವಸ್ಥೆಯಲ್ಲೇ ಆಕ್ರಮಣದ ವಿರುದ್ಧ ನಿಂತು ಗೆಲ್ಲಲಾದೀತು. ಮಿಕ್ಕವರೆಲ್ಲರೂ ನಮ್ಮಂತೆಯೇ ಆಗಬೇಕು ಎಂಬ ಬೇಡಿಕೆ ಬೆಳೆಯುವುದು ತನ್ನ ಅನ್ನವನ್ನವಲಂಬಿಸಿ. ಜೀವನವಿಡೀ ಹೆಚ್ಚುಕಡಿಮೆ ಒಂದೇ ಒಂದು ಸಮರೂಪಕ್ಕಿಳಿದು ಹೋಗುವವರೆಗೆ ಪ್ರತಿಭಟನೆಯು ಸುಮ್ಮನೆ ಕಾಯ್ದು ಕುಳಿತರೆ, ಆ ಮಾದರಿಗೆ ಭಿನ್ನವಾದ ರೀತಿಗಳೆಲ್ಲಾ ಅಪವಿತ್ರ, ಅನೈತಿಕ (ಅಧಾರ್ಮಿಕ)–ಅಷ್ಟೇ ಅಲ್ಲ, ಅಸುರ್ಯ (Monstrous) ಮತ್ತು ಅಸ್ವಾಭಾವಿಕ ಎಂದು ಕೂಡಾ ಜನರು ಎಣಿಸುವ ಹೊತ್ತು ಬಂದೀತು. ಕೆಲಕಾಲದವರೆಗೆ ಭೇದ ಅಥವಾ ವೈವಿಧ್ಯವನ್ನು ಗುರುತಿಸುವ ಅಭ್ಯಾಸ ಮರೆತು ಹೋದಮೇಲೆ ವೈವಿಧ್ಯವನ್ನು ಕಲ್ಪಿಸಿಕೊಂಬ ಶಕ್ತಿಯನ್ನೇ ಮನುಕುಲವು ಬಹು ಬೇಗ ಕಳೆದುಕೊಳ್ಳುತ್ತದೆ.

## ಅಧ್ಯಾಯ ನಾಲ್ಕು

# ವ್ಯಕ್ತಿಯ ಮೇಲೆ ಸಮಾಜದ ಪ್ರಾಧಿಕಾರದ ಇತಿಮಿತಿಗಳನ್ನು ಕುರಿತು

ಹಾಗಾದರೆ ವ್ಯಕ್ತಿಗೆ ತನ್ನಮೇಲೆ ಇರುವ ಪ್ರಭುತ್ವಾಧಿಕಾರದ ಯೋಗ್ಯ ಮಿತಿ ಯಾವುದು? ಸಮಾಜದ ಪ್ರಾಧಿಕಾರವು ಎಲ್ಲಿ ಪ್ರಾರಂಭವಾಗುವುದು? ಮನುಷ್ಯಜೀವನದ ಎಷ್ಟು ಭಾಗವನ್ನು ವ್ಯಕ್ತಿವೈಶಿಷ್ಟ್ಯಕ್ಕೂ ಸಮಾಜಕ್ಕೂ ಒಳಪಡಿಸಬೇಕು?

ಹೆಚ್ಚಾಗಿ ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದುದನ್ನೇ ಹೊಂದಿದ್ದರೆ, ಎರಡೂ ಕ್ಷೇತ್ರಗಳೂ ತಮ್ಮ ತಮ್ಮ ಯೋಗ್ಯಭಾಗವನ್ನು ಕಂಡುಕೊಂಡರೆ, ಜೀವನದ ಯಾವ ಭಾಗದಲ್ಲಿ ವ್ಯಕ್ತಿಯೇ ಅಧಿಕವಾಗಿ ಆಸಕ್ತಿಗೊಂಡಿರುವನೋ ಆ ಭಾಗವು ವ್ಯಕ್ತಿವೈಶಿಷ್ಟ್ಯಕ್ಕೆ ಸೇರಬೇಕು; ಬಹುವಾಗಿ ಸಮಾಜವು ಆಸಕ್ತಿಗೊಳ್ಳುವ ಭಾಗವು ಸಮಾಜಕ್ಕೆ.

ಸಮಾಜವು ಯಾವ ಶರತ್ತಿನ ಮೇಲೂ ರಚಿಸಲ್ಪಟ್ಟಿಲ್ಲ ಎಂದು ಇಟ್ಟುಕೊಳ್ಳೋಣ. ಸಮಾಜದ ಋಣವನ್ನು ನಿಗಮಿಸುವುದರಲ್ಲಿ ಅಂತಹ ಶರತ್ತೊಂದನ್ನು ಕಲ್ಪಿಸಿಕೊಳ್ಳುವುದರಿಂದ ಯಾವ ಸದುದ್ದೇಶವನ್ನೂ ಸಾಧಿಸಿದಂತೆಯೇ ಆಗುವುದಿಲ್ಲ. ಹೀಗಿದ್ದರೂ ಸಮಾಜದ ರಕ್ಷಣೆಯ ಲಾಭವನ್ನು ಪಡೆಯುವ ಪ್ರತಿಯೊಬ್ಬನೂ ಅದಕ್ಕೆ ಪ್ರತ್ಯುಪಕಾರವನ್ನು ಮಾಡಲು ಬದ್ಧನಾಗಿರುವನು. ಮತ್ತು ಸಮಾಜದಲ್ಲಿ ಬಾಳುತ್ತಿರುವೆನೆಂಬ ವಿಷಯವೇ ಪ್ರತಿಯೊಬ್ಬನೂ ಇನ್ನಿತರರ ವಿಷಯದಲ್ಲಿ ಒಂದು ನಿರ್ದಿಷ್ಟ ನಡತೆಯನ್ನು ಅನುಸರಿಸಬೇಕೆಂಬ ಅಂಶವನ್ನು ಅನಿವಾರ್ಯಗೊಳಿಸುತ್ತದೆ. ಈ ನಡತೆಯೆಂದರೆ, ಮೊದಲನೆಯದಾಗಿ, ಪರಸ್ಪರರ ಹಿತಗಳನ್ನು ಘಾತಿಸದಿರುವುದು; ಅಥವಾ ಹೆಚ್ಚು ಉಚಿತವಾಗಿ ಹೇಳುವುದಾದರೆ ಪ್ರತ್ಯಕ್ಷ ಶಾಸನಗಳಿಂದಾಗಲಿ ಇಲ್ಲವೆ ಸಾಮಾನ್ಯ ತಿಳುವಳಿಕೆಯಿಂದಾಗಲಿ ಹಕ್ಕುಗಳೆಂದು ಪರಿಗಣಿಸಲ್ಪಡುವ ಹಿತಗಳನ್ನು ಹಾನಿಗೊಳಿಸದಿರುವುದು. ಎರಡನೆಯದಾಗಿ, ಸಮಾಜವನ್ನು ಮತ್ತು ಅದರ ಸದಸ್ಯರನ್ನು ಅಪಾಯ–ಅಪಮಾನಗಳಿಂದ ರಕ್ಷಿಸಲು ವೆಚ್ಚವಾಗುತ್ತ ಶ್ರಮ ಮತ್ತು ತ್ಯಾಗಗಳಲ್ಲಿ ಪ್ರತಿ ವ್ಯಕ್ತಿಯೂ ಯಾವುದಾದರೊಂದು ನ್ಯಾಯ ಸಮ್ಮತರೀತಿಯಲ್ಲಿ ನಿರ್ಧರಿಸಲ್ಪಡುವ ತನ್ನ ಭಾಗವನ್ನು ಹೊತ್ತುಕೊಳ್ಳುವುದು. ಈ ಎರಡೂ ಕೆಲಸಗಳನ್ನು ಮಾಡಲೊಲ್ಲದವರ ಮೇಲೆ ಸಮಾಜವು ಬಲಾತ್ಕಾರವನ್ನು ಹೇರುವುದು ನ್ಯಾಯಸಮ್ಮತವಿದೆ. ಇಷ್ಟೇ ಅಲ್ಲ, ಯಾವನೊಬ್ಬ ವ್ಯಕ್ತಿಯ ನಡೆವಳಿಕೆಯು ಮನ್ನಿಸಲ್ಪಟ್ಟ ಹಕ್ಕುಗಳನ್ನು ಉಲ್ಲಂಘಿಸುವಷ್ಟು ದೂರ ಹೊಗದಿದ್ದರೂ ಮತ್ತೊಬ್ಬರನ್ನು ನೋಯಿಸಬಹುದು, ಇಲ್ಲವೆ ಅವರ

ಯೋಗಕ್ಷೇಮದ ವಿಷಯದಲ್ಲಿ ಅವಶ್ಯಕ ಆಸಕ್ತಿಯನ್ನು ತಾಳದೆ ಇದ್ದೀತು. ಆಗ ತಪ್ಪಿತಸ್ಥನನ್ನು ಶಾಸನಿಕವಾಗಲ್ಲದಿದ್ದರೂ ಅಭಿಪ್ರಾಯಬಲದಿಂದ ನ್ಯಾಯವಾಗಿ ದಂಡಿಸಬಹುದು. ವ್ಯಕ್ತಿಯ ನಡೆ–ನುಡಿಯು ಇತರರ ಹಿತಗಳಿಗೆ ಕೆಡುಕನ್ನುಂಟು ಮಾಡುವಂತಾದರೆ ಆ ಕೂಡಲೆ ಅದು ಸಮಾಜದ ಅಧಿಕಾರ ಕಕ್ಷೆಯಲ್ಲಿ ಬರುವುದು. ಆದರೆ ಎಲ್ಲರ ಹಿತವು ಸಮಾಜದ ಪ್ರವೇಶದಿಂದ ಸಾಧಿಸಲ್ಪಡುವುದೆ ಅಥವಾ ಇಲ್ಲವೆ ಎಂಬ ಪ್ರಶ್ನೆಯು ಚರ್ಚೆಗೆ ವಸ್ತುವಾಗುವುದು. ವ್ಯಕ್ತಿಯ ನಡತೆಯು ಅವನ ಹಿತಕ್ಕಷ್ಟೇ ಸಂಬಂಧಿಸಿ ಬೇರೆ ಯಾರ ಹಿತಕ್ಕೂ ಸಂಬಂಧಿಸಿರದಿದ್ದರೆ ಅಂತಹ ಪ್ರಶ್ನೆಯನ್ನು ಮಾನ್ಯಮಾಡುವ ಅವಕಾಶವೇ ಇಲ್ಲವಾಗುವುದು. ಅಂತಹ ಎಲ್ಲ ಸನ್ನಿವೇಶಗಳಲ್ಲೂ ಕಾರ್ಯವನ್ನು ಮಾಡಲು ಮತ್ತು ಅದರ ಫಲವನ್ನನುಭವಿಸಲು ಸಂಪೂರ್ಣವಾದ ಶಾಸನಬದ್ಧ ಮತ್ತು ಸಾಮಾಜಿಕ ಸ್ವಾತಂತ್ರ್ಯವಿರಬೇಕು.

ಈ ನಡುವೆ ಒಂದು ತಪ್ಪು ತಿಳುವಳಿಕೆ ತಲೆ ಹಾಕಬಹುದು. ಅದೆಂದರೆ ತಮ್ಮದೇ ಹಿತಕ್ಕೆ ಸಂಬಂಧಿಸಿದಲ್ಲದೆ ಮನುಷ್ಯರು ಜೀವನದಲ್ಲಿ ಪರಸ್ಪರರ ನಡತೆಯಲ್ಲಿ ತಲೆಹಾಕುವುದು ಅರ್ಥವಿಲ್ಲ, ಮತ್ತು ಪರಸ್ಪರರ ಹಿತಸಾಧನೆಯ ವಿಷಯವಾಗಿ ಆಸಕ್ತರಾಗಬೇಕಾಗಿಲ್ಲ ಎಂದು ಭಾವಿಸಿಬಿಡುವುದು. ಅಂತಹ ಕೆಲ ಸಂದರ್ಭಗಳಲ್ಲಿ ಇತರರ ಹಿತಸಾಧನೆಯನ್ನು ಕೈಗೂಡಿಸಲು ಇನ್ನಷ್ಟು ನಿಃಸ್ವಾರ್ಥ ಆಸಕ್ತಿಯನ್ನು ವಹಿಸಬೇಕಾಗುತ್ತದೆ ಆದರೆ ಜನರಿಗೆ ಅದನ್ನು ತಿಳಿಸಿಕೊಡಲು ಬಲಾತ್ಕಾರದ ಕ್ರಮಗಳ ಬದಲು ಇನ್ನಿತರ ಉತ್ತಮ ವಿಧಾನಗಳನ್ನು ನಿಃಸ್ವಾರ್ಥ ಪರಹಿತಾಕರಣೆಯಿಂದ ಅರಿಯಬಹುದು. ಮನುಷ್ಯರು ತಮ್ಮ ತಮ್ಮ ಹಿತಗಳನ್ನು ಸಾಧಿಸಿಕೊಳ್ಳಬಾರದು ಎಂದು ನಾನು ಹೇಳುವುದಿಲ್ಲ. ಆದರೆ ಸಾಮಾಜಿಕ ಹಿತದೊಡನೆ ಅವುಗಳ ಸ್ಥಾನ ಗೌಣ. ಸಾಮಾಜಿಕ ಹಾಗೂ ವೈಯಕ್ತಿಕ ಕರ್ತವ್ಯಗಳನ್ನು ಮಾಡುವಂತೆ ತರಬೇತು ಕೊಡುವುದು ಶಿಕ್ಷಣದ ಕೆಲಸ. ಆದರೆ ಇಲ್ಲಿಯೂ ಸವಿಮಾತು–ಶ್ರದ್ಧೆಗಳಷ್ಟೇ ಅಲ್ಲದೆ ಬಲಾತ್ಕಾರವೂ ಬರುತ್ತದೆ. ಮತ್ತು ಶಿಕ್ಷಣದ ಅವಧಿಯು ಮುಗಿದ ನಂತರ ಸ್ವಹಿತ ಸಾಧಕ ಗುಣಗಳನ್ನು ಬೆಳೆಸುವುದು ಶ್ರದ್ಧೆ–ಸವಿಮಾತುಗಳಿಂದಲೇ. ಒಳಿತು ಕೆಡಕುಗಳನ್ನು ವಿಂಗಡಿಸಿಕೊಂಡು ದುರ್ಮಾರ್ಗವನ್ನು ಬಿಟ್ಟು ಸನ್ಮಾರ್ಗವನ್ನು ಹಿಡಿಯುವಲ್ಲಿ ಪರಸ್ಪರರ ನೆರವಾಗುವುದು ಮನುಷ್ಯಮಾತ್ರನ ಕರ್ತವ್ಯ. ಅಯೋಗ್ಯದ ಬದಲು ಯೋಗ್ಯವಾದ, ಹೀನವಾದುದರ ಬದಲು ಉತ್ಕೃಷ್ಟವಾದ ವಸ್ತು ಮತ್ತು ಚಿಂತನೆಗಳತ್ತ ಉದಾತ್ತಕ್ರಿಯಾಶಕ್ತಿಗಳನ್ನು ಅಧಿಕವಾಗಿ ಉಪಯೋಗಿಸುವಂತೆಯೂ, ಭಾವನೆಗಳನ್ನು ಹೆಚ್ಚು ಹರಿಸುವಂತೆಯೂ ಯಾವಾಗಲೂ ಅವರು ಪರಸ್ಪರರನ್ನು ಪ್ರೇರಿಸುತ್ತಿರಬೇಕು. ಆದರೆ ಒಬ್ಬನಾಗಲಿ ಇಲ್ಲವೇ ಎಷ್ಟೇ ಜನರಾಗಲಿ ಮತ್ತೊಬ್ಬ ವಯಸ್ಸಾದ ಮನುಷ್ಯನಿಗೆ ಅವನ ಸ್ವಂತ ಹಿತಕ್ಕಾಗಿ ಅವನು ಬಯಸಿದ ರೀತಿಯಲ್ಲಿ ಅವನ ಜೀವನವನ್ನು ರೂಪಿಸಿಕೊಳ್ಳಬಾರದೆಂದು ಹೇಳಲು ಬರುವುದಿಲ್ಲ. ತನ್ನ ಹಿತವನ್ನು ಅವನೇ ಚೆನ್ನಾಗಿ ಕಾಣಬಲ್ಲನು. ಅತ್ಯಾಪ್ತರನ್ನು ಬಿಟ್ಟರೆ ಮತ್ತೆ ಯಾವ ಮನುಷ್ಯನೂ ಮತ್ತೊಬ್ಬನ

ಹಿತದಲ್ಲಿ ಆಸಕ್ತಿಯನ್ನು ವಹಿಸುವುದು ಅಷ್ಟಕ್ಕಷ್ಟೇ ಅಲ್ಲವೇ! ಪ್ರತ್ಯೇಕವಾಗಿ ಅವನಲ್ಲಿ ಸಮಾಜವು ಇಡಬಹುದಾದ ಆಸಕ್ತಿಯು, ಇತರರಿಗೆ ಸಂಬಂಧಿಸಿದಂತೆ ಅವನ ನಡತೆಯನ್ನು ಹೊರತುಪಡಿಸಿದರೆ, ಅತ್ಯಲ್ಪ ಮತ್ತು ಸಂಪೂರ್ಣ ಅಪ್ರತ್ಯಕ್ಷ. ಏಕೆಂದರೆ ಆತನಿಗೆ ಭಾವನೆ ಮತ್ತು ಸನ್ನಿವೇಶಗಳ ಬಗ್ಗೆ ಇರಬಹುದಾದ ಜ್ಞಾನವು, ಆ ಬಗ್ಗೆ ಇತರರಿಗೆ ಇರುವುದಕ್ಕಿಂತಲೂ ಎಷ್ಟೋ ಪಾಲು ಹೆಚ್ಚಲ್ಲವೆ? ಅವನವನಿಗೇ ಸಂಬಂಧಿಸಿದ ವಿಷಯಗಳಲ್ಲಿ ಸಮಾಜವು ತೀರ್ಪು ಕೊಡುವುದು ಸಾಮಾನ್ಯ ಜ್ಞಾನದ ಮೇಲಿಂದ; ಆದ್ದರಿಂದ ಅದು ಎಷ್ಟೋ ಸಲ ತೀರ ತಪ್ಪಾಗಬಹುದು–ಅಥವಾ ಒಮ್ಮೆ ಸರಿಯೆ ಆದರೂ ಆ ತೀರ್ಪನ್ನು ಅವನಿಗಿಂತ ಚೆನ್ನಾಗಿ ಅವನ ಸನ್ನಿವೇಶಗಳನ್ನು ಅರಿಯದವರು ಅಷ್ಟು ಸಮರ್ಪಕವಾಗಿ ಅನ್ವಯಿಸುವುರೆಂದು ಹೇಳಲು ಬಾರದು. ಆ ಸಂದರ್ಭಗಳಲ್ಲಿ ಈ ಕ್ಷೇತ್ರದಲ್ಲಿ ವ್ಯಕ್ತಿವೈಶಿಷ್ಟ್ಯಕ್ಕೆ ಉಚಿತಸ್ಥಾನವಿದೆ. ಇನ್ನೊಬ್ಬರಿಂದ ಏನನ್ನು ನಿರೀಕ್ಷಿಸಬೇಕು ಎಂಬುದನ್ನು ಜನರು ತಿಳಿದಿರಬೇಕಾಗಿರುವುದರಿಂದ ಮನುಷ್ಯರೂ ಪರಸ್ಪರವಾಗಿ ನಡೆದುಕೊಳ್ಳಬೇಕಾದ ಸಂದರ್ಭಗಳಲ್ಲಿ ಹೆಚ್ಚು ಪಕ್ಷ ಸಾಮಾನ್ಯ ನಿಯಮಗಳನ್ನೇ ಅನುಸರಿಸಬೇಕು; ಆದರೆ ಸ್ವ–ವಿಷಯಗಳಲ್ಲಿ ವ್ಯಕ್ತಿಯ ಸ್ವಂತ ಇಚ್ಛೆಯೇ ಕಾರ್ಯಪರವಾಗತಕ್ಕದ್ದು ನ್ಯಾಯ. ಅವನು ನಿರ್ಣಯಕ್ಕೆ ಬರಬೇಕಾದರೆ ಇತರರು ನೆರವಾಗಬಹುದು; ತನ್ನ ಸಂಕಲ್ಪವನ್ನು ದೃಢಪಡಿಸಿಕೊಳ್ಳುವುದರಲ್ಲಿ ಅವನಿಗೆ ಉತ್ತೇಜನವನ್ನು ಕೊಡಬಹುದು. ಆದರೆ ಕೊನೆಯ ನಿರ್ಣಯ ಅವನದೆ. ಇತರರು ಕೊಟ್ಟ ಬುದ್ಧಿವಾದ ಮತ್ತು ಎಚ್ಚರಿಕೆಗಳನ್ನು ಮೀರಿ ಒಬ್ಬನು ಮಾಡಬಹುದಾದ ತಪ್ಪುಗಳ ತೂಕ ಕಡಿಮೆ ಅದರ ಬದಲು ಇತರರು ಅವನ ಮೇಲೆ ತಮಗೆ ಒಳಿತೆಂದು ಕಂಡದ್ದನ್ನು ಹೇರುವುದರಿಂದ ಆಗುವ ಅಪರಾಧದ ತೂಕ ಹೆಚ್ಚು. ಒಬ್ಬನಿಗೆ ತನ್ನ ಗುಣದೋಷಗಳ ಬಗ್ಗೆ ಇರುವ ಅಭಿಪ್ರಾಯದಿಂದ ಅವನ ಬಗ್ಗೆ ಇತರರು ತಾಳಿದ ಭಾವನೆ ಎಷ್ಟರ ಮಟ್ಟಿಗೂ ಪ್ರಭಾವಿತವಾಗಬಾರದೆಂದು ನಾನು ಹೇಳುತ್ತಿಲ್ಲ. ಇದರ ಸಾಧ್ಯವೂ ಅಲ್ಲ, ಇಷ್ಟವೂ ಅಲ್ಲ. ತನಗೆ ಹಿತಕಾರಿಯಾದ ಯಾವುದಾದರೂ ಒಂದು ಗುಣದಲ್ಲಿ ಅವನು ಪ್ರಖ್ಯಾತನೆನಿಸಿದ್ದರೆ ಅವನು ಆ ಮಟ್ಟಿಗೆ ಪ್ರಶಂಸಾರ್ಹನೇ. ಅಷ್ಟುಮಟ್ಟಿಗೆ ಅವನು ಮಾನವಸ್ವಭಾವದ ಪೂರ್ಣತೆಯ ಆದರ್ಶಕ್ಕೆ ಹತ್ತಿರವಾಗಿದ್ದಾನೆ ಎಂದು ಹೇಳಬಹುದು. ಅಂತಹ ಯಾವ ಗುಣವೂ ಅವನಲ್ಲಿ ಎಷ್ಟರಮಟ್ಟಿಗೂ ಇಲ್ಲದೆ ಹೋದಲ್ಲಿ ಅವನ ಬಗ್ಗೆ ಇತರರು ಅಪ್ರಶಸ್ತ ಭಾವನೆಯನ್ನು ತಾಳುವುದೂ ಸಹಜ. ಒಬ್ಬನಲ್ಲಿ ಒಮ್ಮೆ ಅವಿವೇಕ ಅಸದಭಿರುಚಿ ಅತಿರೇಕವಾದಾಗ ಇತರರು ಅವನನ್ನು ಮೆಚ್ಚದಿರಬಹುದು. ಅಥವಾ ತಿರಸ್ಕರಿಸಬಹುದು. ಏಕೆಂದರೆ ಪ್ರೇಮ–ದ್ವೇಷ, ನಿಂದೆ–ಸ್ತುತಿ ಮೊದಲಾದ ದ್ವಂದ್ವಗಳು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಯಾರಿಗೂ ಯಾವ ತಪ್ಪನ್ನು ಮಾಡದಿದ್ದರೂ ಒಬ್ಬನ ಕೇವಲ ನಡತೆಯೇ ಅವನೊಬ್ಬ ಮಂಕ, ಕೀಳು ತರದ ಮನುಷ್ಯ ಎಂದು ನಾವು ಭಾವಿಸುವಂತೆಯೂ, ನಿರ್ಣಯಿಸುವಂತೆಯೂ ನಮ್ಮ ಮೇಲೆ ಒತ್ತಾಯ ತರಬಹುದು. ಇಂತಹ ನಿರ್ಣಯಕ್ಕೆ

ನಾವು ಬರುವುದು ಮತ್ತು ಇಂತಹ ಭಾವನೆಗಳನ್ನು ತಾಳುವುದು ಅವನಿಗೆ ಬೇಡವಾಗಿರುವುದರಿಂದ 'ತಮ್ಮ, ನೀನು ಹೀಗೆ ಮಾಡುವುದು ನಿನಗೆ ಒಳ್ಳೆಯದನ್ನು ಉಂಟುಮಾಡದು' ಎಂದು ನಾವು ಮೊದಲೆ ಎಚ್ಚರಿಸುವುದು ಒಂದು ಉಪಕಾರವನ್ನು ಮಾಡಿದಂತಾಗುತ್ತದೆ. ಈಗ ನಮ್ಮ ಸಮಾಜದಲ್ಲಿ ರೂಢಿಯಲ್ಲಿರುವ ನಯ–ನಿಯಮ ಸಭ್ಯತೆಗಳ ಕಲ್ಪನೆಗಳನ್ನು ಬದಿಗಿಟ್ಟು ಇಂತಹ ಉಪಕಾರವನ್ನು ಪದೇ ಪದೇ ಮಾಡುತ್ತಿರಬೇಕು. ನಮ್ಮ ಹಿರಿತನವನ್ನು ತೋರಿಸದೆ, ಅಸಭ್ಯರೀತಿಯೆಂದು ಇತರರಿಗೆ ಎನಿಸಗೊಡದೆ ಮತ್ತೊಬ್ಬರ ತಪ್ಪನ್ನು ತೋರಿಸಿಕೊಡುವುದು ಅತ್ಯುತ್ತಮ ನೀತಿ. ಇನ್ನೊಬ್ಬನ ವ್ಯಕ್ತಿ ವೈಶಿಷ್ಟ್ಯವನ್ನು ಅದುಮದೆ ಅವನ ಬಗ್ಗೆ ನಮಗಿರುವ ಅನನುಕೂಲ ಅಭಿಪ್ರಾಯದಂತೆ ನಡೆದುಕೊಳ್ಳಲು ನಮಗೆ ಹಕ್ಕಿದೆ. ಉದಾಹರಣೆಗಾಗಿ ನಾವು ಅವನ್ನ ಸಹವಾಸವನ್ನು ಬಿಡಬಹುದು. ನಮಗೆ ಬೇಡವಾದವರ ಸಹವಾಸವನ್ನು ಬಿಡುವ ಹಕ್ಕು ನಮಗಿದೆ– ಅಂದರೆ ಅವರ ಸಹವಾಸವನ್ನು ಬಿಟ್ಟಿದ್ದೇವೆಂದು ಎಲ್ಲರೆದುರೂ ಸಾರುತ್ತ ಹೋಗುವುದಲ್ಲ. ಯಾಕೆಂದರೆ ನಮ್ಮಲ್ಲಿ ಪ್ರತಿಯೊಬ್ಬನಿಗೂ ತನಗೆ ಬಹಳ ಬೇಕಾದವನೊಡನೆ ಬದುಕುವ ಹಕ್ಕಿದೆ. ಒಬ್ಬ ದುಷ್ಟನ ಸಂಪರ್ಕದಲ್ಲಿರುವವರಿಗೆ ಅವನ ಸಹವಾಸವು ಹಾನಿಕರವೆಂದು ಕಂಡುಬಂದರೆ ಅವನ ನಡತೆಯ ಬಗ್ಗೆ ಅವನಿಗೆ ಎಚ್ಚರಿಕೆ ಕೊಡುವುದು ಹಕ್ಕೂ ಹೌದು, ಕರ್ತವ್ಯವೂ ಹೌದು. ಅವನ ಸುಧಾರಣೆಗೆ ಅಗತ್ಯವಾದುದಷ್ಟನ್ನು ಬಿಟ್ಟು ನಮ್ಮ ಇಷ್ಟದಂತೆ ನಾವು ಮಾಡಬಹುದಾದ ಉಪಕಾರಗಳನ್ನು ಅವನಿಗೆ ಮಾಡುವುದರ ಬದಲು ಇತರರಿಗೆ ನಾವು ಮಾಡಬಹುದು. ಈ ಪ್ರಕಾರ ತನಗಷ್ಟೇ ಸಂಬಂಧಿಸಿದ ಅಪವರ್ತನೆಗಳಲ್ಲಿ ಒಬ್ಬ ಮನುಷ್ಯನು, ಇತರರ ಕೈಯಲ್ಲಿ ಸಿಕ್ಕಿ ಅತಿಹೆಚ್ಚಿನ ದಂಡವನ್ನು ತೆರಬೇಕಾಗುವುದು; ಅಂತಹ ದಂಡಗಳನ್ನು ತೆರುವುದು ಕೇವಲ ಅವನ ತಪ್ಪು ನಡತೆಗಳ ಫಲ. ಅವನ್ನು ಯಾರೂ ಅವನ ಮೇಲೆ ಶಿಕ್ಷಿಸಬೇಕೆಂದು ಉದ್ದೇಶಪೂರ್ವಕವಾಗಿ ಹೇರಿದ್ದಲ್ಲ. ಅವಿವೇಕ–ಹಟಮಾರಿತನ–ಡಂಭಗಳನ್ನು ತೋರಿಸುವವನು, ಮಿತವ್ಯಯದಿಂದ ಬದುಕಲಾರದವನು, ಸ್ವಂತಕ್ಕೆ ಹಾನಿತರುವ ದುರಭ್ಯಾಸಗಳಿಂದ ದೂರ ಇರಲಾರದವನು, ಬುದ್ಧಿಭಾವನೆಗಳಿಗೆ ಹಿತವೆನಿಸುವ ಸುಖಗಳನ್ನು ಬಿಟ್ಟು ಕೇವಲ ವಿಷಯಲಂಪಟನಾಗಿರುವವನು ತನ್ನನ್ನು ಇತರರು ಕೀಳುಮಟ್ಟದವನೆಂದು ಭಾವಿಸಿರುವರೆಂಬುದನ್ನು ನಿರೀಕ್ಷಿಸತಕ್ಕದ್ದು. ಮತ್ತು ಅದರ ಫಲವಾಗಿ ಇತರರ ಅನುಕೂಲ ಭಾವನೆಗಳಿಗೆ ತಾನು ಕಡಿಮೆ ಪಾಲುಗಾರ ಎಂದು ತಿಳಿಯತಕದ್ದು. ಆದರೆ ಇದಕ್ಕಾಗಿ ಅವನಿಗೆ ಇತರರನ್ನು ಆಕ್ಷೇಪಿಸುವ ಹಕ್ಕಿಲ್ಲ. ಒಂದೊಮ್ಮೆ ಅವನು ತನ್ನ ಸಾಮಾಜಿಕ ನಡೆವಳಿಕೆಗಳಲ್ಲಿ ವಿಶಿಷ್ಟಗುಣವನ್ನು ತೋರಿಸಿ ಇತರರ ಅನುಗ್ರಹಕ್ಕೆ ಪಾತ್ರನಾಗಿದ್ದರೆ ಮತ್ತು ಹಾಗೆ ಅವರ ಉಪಕಾರಕ್ಕೆ ಅರ್ಹನಾಗಿದ್ದರೆ–ಅದೂ ಅವನ ಆತ್ಮಘಾತಕ ದುರಭ್ಯಾಸಗಳಿಂದ ಕಲುಷಿತವಾಗದಿದ್ದಲ್ಲಿ– ಹಾಗೆ ದೂರಿಕೊಳ್ಳಬಹುದು.

ಒಟ್ಟು ನನ್ನ ತಾತ್ಪರ್ಯವೇನೆಂದರೆ ಒಬ್ಬನ ಚಾರಿತ್ರ್ಯ ಮತ್ತು ವರ್ತನೆಗಳಲ್ಲಿ ಎಷ್ಟು ಅಂಶವು ಅವನ ಹಿತಕ್ಕಷ್ಟೇ ಸಂಬಂಧಿಸಿದುದೋ ಅಷ್ಟರಮಟ್ಟಿಗೆ ಅವನ ತೊಂದರೆ–ತಾಪತ್ರಯ ಮತ್ತು ಇತರರು ಅವನ ಬಗ್ಗೆ ತಾಳಿದ ಅನನುಕೂಲ ನಿರ್ಣಯಗಳಲ್ಲಿ ಅವಿನಾಭಾವ ಸಂಬಂಧವಿರಬೇಕು. ಇತರರಿಗೆ ಹಾನಿಕರವಾದ ಕೃತ್ಯಗಳ ಮಾತೇ ಬೇರೆ– ಇತರರ ಹಕ್ಕುಗಳನ್ನು ಕಸಿದುಕೊಳ್ಳುವುದು, ತನ್ನ ಹಕ್ಕಿಗೆ ಮೀರಿದಂತೆ ಅವರಿಗೆ ಏನಾದರೊಂದು ನಷ್ಟವನ್ನು ಮಾಡುವುದು, ಅವರೊಡನೆ ವಂಚನೆಯಿಂದ ವ್ಯವಹರಿಸುವುದು, ಯಾವುದರಲ್ಲಾದರೂ ತನ್ನದು ಮೇಲುಗೈ ಇದ್ದರೆ ಅದನ್ನು ತನ್ನ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸಿಕೊಳ್ಳುವುದು, ಇತರರಿಗೆ ಏನಾದರೂ ಅಪಾಯವೊದಗಿದಾಗ ತನ್ನ ಸ್ವಾರ್ಥರಕ್ಷಣೆಯ ದೃಷ್ಟಿಯಿಂದ ಅವರ ರಕ್ಷಣೆಗೆ ಮುಂದಾಗದಿರುವುದು–ಇವಿಷ್ಟೂ ನೈತಿಕವಾಗಿ ಖಂಡಿಸಬೇಕಾದ ಕೃತ್ಯಗಳು. ಅಷ್ಟೇ ಅಲ್ಲ, ಇಂತಹ ದುಷ್ಕೃತ್ಯಗಳಿಗೆ ಒಯ್ಯುವ ಮನಃಪ್ರವೃತ್ತಿ ಕೂಡಾ ನೀತಿಬಾಹಿರವಾದುದು. ಮತ್ತು ಅಂಜಿ ದೂರ ಸರಿಯುವಷ್ಟರ ಮಟ್ಟಿಗೆ ತಿರಸ್ಕಾರಾರ್ಹವಾದುದು. ಕ್ರೂರ ಮನಃಪ್ರವೃತ್ತಿ, ಕೇಡು ಹಾರೈಸುವ ಬುದ್ಧಿ ಮತ್ತು ದುಷ್ಟ ಸ್ವಭಾವ, ಅತ್ಯಂತ ದ್ವೇಷ್ಯವೂ ಸಮಾಜ ಕಂಟಕವೂ ಎನಿಸಿದ ಮಾತ್ಸರ್ಯ ಮತ್ತು ಅಪ್ರಮಾಣಿಕತೆ, ಅಕಾರಣಕೋಪನಶೀಲ, ರೇಗಿಸಿದ್ದಕ್ಕೆ ಮತ್ತು ಸರಿತೂಕದಲ್ಲಿಲ್ಲದ ಪ್ರತಿಭಟನೆ, ದರ್ಪ, ಲೋಭ, ಪರರನ್ನು ಸೋಲಿಗೆ ಸಿಲುಕಿಸಿ ತೃಪ್ತಿಕಾಣುವುದು, ಸ್ವಾರ್ಥಪರಾಯಣತೆ, ಮತ್ತು ಅನುಕೂಲ ಸಿಂಧುನ್ಯಾಯವನ್ನು ಅನುಸರಿಸುವುದು ಇವೆಲ್ಲಾ ನೈತಿಕ ದುರಾವರ್ತನೆಗಳು. ಇವುಗಳಿಂದೆಲ್ಲಾ ದುಷ್ಪಾತ್ರನಿರ್ಮಾಣವಾಗುತ್ತದೆ. ಪರರಿಗೆ ಹಾನಿಯನ್ನು ತರದೆ ತನ್ನ ಕಾಲ ಮೇಲೆ ತಾನೆ ಕೊಡಲಿ ಹಾಕಿಕೊಳ್ಳುವುದು ದೋಷವೆನಿಸುತ್ತದೆ. ಅವು ಮೇರೆ ತಪ್ಪಿಹರಿದರೂ ದುಷ್ಟತನವೆನಿಸಲಾರದು. ದುಷ್ಟತನವು ಪರಹಾನಿಕಾರಕ. ದುರ್ಬಲ ಸ್ವಭಾವದವನು ತನ್ನ ದೌರ್ಬಲ್ಯಗಳ ದೆಸೆಯಿಂದ ತನ್ನ ಸ್ವಾಭಿಮಾನವನ್ನು ಕಳೆದುಕೊಳ್ಳುವುದರಿಂದ ಕೇವಲ ನೈತಿಕ ನಿಂದೆಗಷ್ಟೇ ಪಾತ್ರನಾದಾನು. ಏಕೆಂದರೆ ಅವನು ತನ್ನ ಹಿತವನ್ನು ಕಾದುಕೊಳ್ಳದೆ ಹೋಗುವುದರ ಮೂಲಕ ತನ್ನ ಅವಲಂಬಿಗಳ ಬಗ್ಗೆ ಮಾಡತಕ್ಕ ಕರ್ತವ್ಯವನ್ನು ಮಾಡದಿರುವ ಅಪರಾಧವನ್ನಷ್ಟೇ ಮಾಡುತ್ತಾನೆ. ಪರಿಸ್ಥಿತಿಯು ಒತ್ತಾಯದಿಂದ ಏಕಕಾಲದಲ್ಲಿ ಪರರ ಬಗ್ಗೆ ನಾವು ಮಾಡತಕ್ಕ ಕರ್ತವ್ಯವಾಗಿಯೂ ಪರಿಣಮಿಸದಿದ್ದಲ್ಲಿ ನಮ್ಮ ಬಗ್ಗೆ ನಾವು ಮಾಡತಕ್ಕ ಕರ್ತವ್ಯವೆಂಬುದು ಸಾಮಾಜಿಕವಾಗಿ ಮಾಡಲೇಬೇಕಾದದ್ದು ಎನಿಸುವುದಿಲ್ಲ. ತನ್ನ ಬಗ್ಗೆ ಮಾಡಬೇಕಾದ ಕರ್ತವ್ಯವೆಂದರೆ ಮುಂಜಾಗ್ರತೆಯೆಂಬ ಅರ್ಥವನ್ನು ಮೀರಿದ ಆತ್ಮಗೌರವ ಅಥವಾ ಆತ್ಮಾಭಿವೃದ್ಧಿ ಎನಿಸುವುದು. ಈ ಯಾವುದರ ಬಗ್ಗೂ ಒಬ್ಬನು ಇನ್ನೊಬ್ಬರಿಗೆ ವಿವರಣೆ ಕೊಡಬೇಕಾಗಿಲ್ಲ. ಯಾಕೆಂದರೆ ಅದರಿಂದ ಮಾನವಕುಲಕ್ಕೆ ಯಾವ ಉಪಕಾರವೂ ಆಗಬೇಕಾದ್ದಿಲ್ಲ.

ತನ್ನ ವಿವೇಕದಲ್ಲಿಯ ಅಥವಾ ವೈಯಕ್ತಿಕ ಗಾಂಭೀರ್ಯದಲ್ಲಿಯ ನ್ಯೂನತೆಯ ದೆಸೆಯಿಂದ ಅನಾದರಣೆಗೆ ಈಡಾಗುವುದು, ಒಬ್ಬನು ಇತರರ ಹಕ್ಕುಗಳ ವಿಷಯದಲ್ಲಿ ತಪ್ಪಾಗಿ ನಡೆದುಕೊಂಡು ನಿಂದೆಗೆ ಪಾತ್ರನಾಗುವುದು– ಈ ಎರಡರ ವ್ಯತ್ಯಾಸವು ಕೇವಲ ಕ್ಷುಲ್ಲಕವಲ್ಲ. ಆತನು ನಮಗೊಳಪಟ್ಟ ವಿಷಯದಲ್ಲಿ ಕೈಹಾಕಿ ನಮಗೆ ಒಳಪಡದುದರಲ್ಲಿ ತಲೆಹಾಕಿ ನಮಗೆ ಬೇಸರವನ್ನುಂಟು ಮಾಡಲಿ– ಏನೇ ಆದರೂ ಅಂತಹ ಸಂದರ್ಭದಲ್ಲಿ ಅವನ ಬಗ್ಗೆ ನಮಗೆ ಉಂಟಾಗುವ ಮನೋಭಾವನೆಗಳಲ್ಲಿ ಬಹಳ ವ್ಯತ್ಯಾಸವಿದೆ. ಅವನು ನಮ್ಮನ್ನು ಅಸಂತೋಷಗೊಳಿಸಿದರೆ ಅದು ನಮಗೆ ಸೇರುವುದಿಲ್ಲವೆಂದು ಹೇಳಬಹುದು. ಮತ್ತು ನಾವು ನಮ್ಮನ್ನು ಅಸಂತೋಷಗೊಳಿಸಿದ ವ್ಯಕ್ತಿ ಅಥವಾ ವಸ್ತುವಿನಿಂದ ದೂರ ಉಳಿಯಬಹುದು. ಆದರೆ ಆ ಕಾರಣಕ್ಕಾಗಿ ಅವನಿಗೆ ಅಸುಖವುಂಟಾಗುವಂತೆ ಮಾಡಬಾರದು. ಅವನ ತಪ್ಪಿಗೆ ತಕ್ಕ ಎಲ್ಲ ದಂಡವನ್ನೂ ತೆತ್ತಿದ್ದಾನೆ ಅಥವಾ ತೆರುತ್ತಾನೆ ಎಂದು ನಾವು ಭಾವಿಸಬೇಕು. ತನ್ನ ಅವ್ಯವಸ್ಥೆಯಿಂದ ಅವನು ತನ್ನ ಬಾಳನ್ನು ಹಾಳು ಮಾಡಿಕೊಂಡರೆ ಅದನ್ನು ಮತ್ತೂ ಅಷ್ಟು ಹಾಳುಮಾಡಬೇಕೆಂದು ಬಯಸಲಾಗದು. ಅವನನ್ನು ದಂಡಿಸುವ ಬದಲು ಅದನ್ನು ತಿದ್ದಿಕೊಳ್ಳುವುದು ಹೇಗೆಂಬುದನ್ನು ತಿಳಿಸಿ ಅವನು ಅನುಭವಿಸುತ್ತಿರುವ ಹಾನಿರೂಪದ ಶಿಕ್ಷೆಯನ್ನು ಕಡಿಮೆ ಮಾಡಬೇಕು, ಅವನು ಒಮ್ಮೆ ನಮ್ಮ ದಯೆಗೆ ಅಥವಾ ಬೇಸರಕ್ಕೆ ಪಾತ್ರನಾಗಬಹುದು. ಆದರೆ ಅವನು ನಮ್ಮ ಸಿಟ್ಟಿಗೆ ಅಥವಾ ತಿರಸ್ಕಾರಕ್ಕೆ ಅರ್ಹನಲ್ಲ. ಅವನನ್ನು ಸಮಾಜದ ಕಂಟಕನೆಂದು ನಾನು ಭಾವಿಸುವುದಿಲ್ಲ. ಹೆಚ್ಚೆಂದರೆ ಅವನನ್ನು ಅವನ ಪಾಡಿಗೆ ಬಿಡುತ್ತೇನೆ; ಅವನಿಗೆ ಯಾವ ಅನುಕೂಲವನ್ನೂ ಮಾಡಿಕೊಡುವುದಿಲ್ಲ. ತನ್ನ ಸಹಜೀವಿಗಳ ರಕ್ಷಣೆಗೆ ಅವಶ್ಯಕವಾದ ನಿಯಮಗಳನ್ನು ಏಕಾಕಿಯಾಗಿ ಅವನು ಉಲ್ಲಂಘಿಸಿದರೆ ಆ ಮಾತೇ ಬೇರೆ. ಅಂತಹ ಸಂದರ್ಭದಲ್ಲಿ ಅವನ ಕೃತ್ಯಗಳ ದುಷ್ಪರಿಣಾಮಗಳ ಹೊರೆ ಅವನ ಮೇಲಷ್ಟೇ ಅಲ್ಲ, ಇತರರ ಮೇಲೂ ಬೀಳುತ್ತದೆ. ಆಗ ತನ್ನ ಎಲ್ಲ ಸದಸ್ಯರ ರಕ್ಷಣೆಯ ಭಾರವನ್ನು ಹೊತ್ತಿರುವ ಸಮಾಜವು ಅವನ ಮೇಲೆ ಪ್ರತಿಕಾರವನ್ನೆಸಗಬೇಕು, ಅವನನ್ನು ದಂಡಿಸಲೆಂದೇ ಅವನಿಗೆ ನೋವನ್ನುಂಟು ಮಾಡಬೇಕು ಮತ್ತು ಅಂತಹ ಶಿಕ್ಷೆಯು ಸಾಕಷ್ಟು ಉಗ್ರವಾಗಿರುವಂತೆಯೂ ನೋಡಿಕೊಳ್ಳಬೇಕು. ಮೊದಲಿನ ಪ್ರಕರಣದಲ್ಲಿ ಅವಿವೇಕಕ್ಕಾಗಿ ಒಬ್ಬನನ್ನು ದಂಡಿಸಹೊರಡುವುದು. ನಮ್ಮ ಕರ್ತವ್ಯವಲ್ಲ. ಇದರಿಂದ ನಮ್ಮ ಕೆಲಸದಲ್ಲಿ ನಾವು ತೆಗೆದುಕೊಳ್ಳಬಹುದಾದ ಸ್ವಾತಂತ್ರ್ಯವನ್ನೇ ಅವನಿಗೂ ಕೊಟ್ಟಂತಾಗುವುದು. ಹಾಗಲ್ಲದೆ ಎರಡನೆ ಪ್ರಕರಣದಲ್ಲಿ ಅಪರಾಧಿಯು ಶುದ್ಧ ಅಪರಾಧಿ. ನಾವು ಅವನು ತಪ್ಪಿತಸ್ಥನೆಂದು ನಿರ್ಣಯಮಾಡುವವರಾಗುವರಲ್ಲದೆ ಅವನನ್ನು ಶಿಕ್ಷಿಸುವ ಅಧಿಕಾರಿಗಳೂ ಆಗುತ್ತೇವೆ.

ಸ್ವಕಾರ್ಯ–ಪರಕಾರ್ಯಗಳಲ್ಲಿ ಒಬ್ಬನು ಮಾಡಬಹುದಾದ ತಪ್ಪುಗಳಲ್ಲಿ ಕಲ್ಪಿಸಿದ ಭೇದವನ್ನು ಅನೇಕರು ಒಪ್ಪಲಾರರು. ಒಬ್ಬನ ಸಾಮಾಜಿಕ ನಡೆವಳಿಕೆಗಳ ಬಗ್ಗೆ

ಉಪೇಕ್ಷಿಸುವುದಾದರೂ ಹೇಗೆ ಎಂದು ಯಾರಾದರೂ ಕೇಳಬಹುದು. ಯಾವ ಮನುಷ್ಯನೂ ಸಂಪೂರ್ಣವಾಗಿ ಪ್ರತ್ಯೇಕನಲ್ಲ. ತನ್ನ ನಿಕಟವರ್ತಿಗಳಿಗೆ ಅಥವಾ ಕೆಲವೊಮ್ಮೆ ಅದಕ್ಕೂ ದೂರ ಸಂಬಂಧಿಸಿದವರಿಗೆ ಉಪದ್ವ್ಯಾಪವು ಹರಿಯದೆ ತನಗಷ್ಟೇ ಅದು ಹಾನಿಕರವಾಗುವಂತೆ ತಪ್ಪು ಮಾಡುವುದು ಯಾರಿಗೂ ಸಾಧ್ಯವಿಲ್ಲ. ಅವನು ತನ್ನ ಆಸ್ತಿಯನ್ನು ಹಾಳು ಮಾಡಿಕೊಂಡರೆ ಅವನ ಕುಟುಂಬದವರು ಹಾನಿಗೊಳಗಾಗುತ್ತಾರೆ. ಆ ಮೂಲಕವಾಗಿ ಅವನು ತನ್ನ ಸಮಾಜದ ಸಮಷ್ಟಿಸಂಪತ್ತಿಗೆ ಕೆಲಮಟ್ಟಿಗೆ ಧಕ್ಕೆ ಮಾಡಿದಂತಾಗುತ್ತದೆ. ಹಾಗಲ್ಲದೆ ಅವನು ತನ್ನ ದೈಹಿಕ ಇಲ್ಲವೆ ಮಾನಸಿಕ ಶಕ್ತಿಗಳಿಗೆ ಧಕ್ಕೆ ಮಾಡಿಕೊಂಡರೆ ತನ್ನ ಅವಲಂಬಿಗಳಿಗೆ ಕೇಡನ್ನುಂಟು ಮಾಡುವುದಲ್ಲದೆ ತನ್ನ ಸಹಜೀವಿಗಳಿಗೆ ಮಾಡಬೇಕಾದ ಕರ್ತವ್ಯಗಳನ್ನು ಮಾಡಲು ಅನರ್ಹವಾಗಿ ಅವರಿಗೇ ಒಂದು ಹೊರೆಯಾಗುತ್ತಾನೆ; ಅಂತಹ ವರ್ತನೆಯನ್ನು ಒಬ್ಬನು ಪದೇ ಪದೇ ಮಾಡಿದರೆ ಸಮಷ್ಟಿಯ ಹಿತಕ್ಕೆ ಅದಕ್ಕಿಂತ ಯಾವುದೂ ಹೆಚ್ಚು ಹಾನಿಯನ್ನು ಮಾಡಲಾರದು. ಕೊನೆಯದಾಗಿ ಒಬ್ಬ ವ್ಯಕ್ತಿಯು ತನ್ನ ತಪ್ಪುಗಳಿಂದ ನೇರವಾಗಿ ಬೇರೆಯವರಿಗೆ ಯಾವ ಹಾನಿಯನ್ನೂ ಮಾಡದಿದ್ದರೂ ತನ್ನ ಉದಾಹರಣೆಯಿಂದ ಅವನು ಇತರರನ್ನು ದುರ್ಮಾರ್ಗಕ್ಕೆ ಎಳೆಯುತ್ತಾನೆ; ಆದ್ದರಿಂದ ಅವನು ಅಂತಹ ತಪ್ಪನ್ನು ಪ್ರಕಟವಾಗಿ ಮಾಡದಂತೆ ನಿಯಂತ್ರಿಸುವುದು ಅಗತ್ಯವೆಂದು ಹೇಳಬಹುದು.

ಇಷ್ಟೂ ಅಲ್ಲದೆ ಇನ್ನೊಂದು ಮಾತನ್ನೂ ಯಾರಾದರೂ ಆಡಿಯಾರು; ಒಬ್ಬ ಅವಿವೇಕಿಯು ಮಾಡಿದ್ದನ್ನು ಅವನೇ ಅನುಭವಿಸಬೇಕು ಎಂದು ಕಟ್ಟು ಮಾಡುವುದು ಸಾಕೇ? ಅವನು ಹಾಳಾಗಿ ಹೋಗಲಿ ಎಂದು ಸಮಾಜವು ಅವನ ಪಾಡಿಗೆ ಅವನನ್ನು ಬಿಡಬೇಕೇ? ಬಾಲಕರಿಗೂ ಅಪ್ರೌಢರಿಗೂ ರಕ್ಷಣೆ ಕೊಡುವುದು ನ್ಯಾಯವಾದರೆ ತಮ್ಮನ್ನು ಹಿಡಿತದಲ್ಲಿ ಇಟ್ಟುಕೊಳ್ಳಲಾರದ ವಯಸ್ಕರಿಗೆ ಸಮಾಜವು ರಕ್ಷಣೆ ಕೊಡಬಾರದೇ? ಜೂಜಾಡುವುದು, ಕುಡಿಯುವುದು, ಸೋಮಾರಿಯಾಗಿರುವುದು, ಶ್ವಪಚನಾಗಿರುವುದು ಮುಂತಾದವು ಸುಖಕ್ಕೆ ವಿಘ್ನಗಳು, ಸುಧಾರಣೆಗೆ ಅಡೆತಡೆಗಳು ಎಂದು ಕಾಯದೆಯು ನಿಯಂತ್ರಿಸಬಹುದಾದರೆ ಸಾಮಾಜಿಕ ಅನುಕೂಲ ಮತ್ತು ವ್ಯಾವಹಾರಿಕ ದೃಷ್ಟಿಯಿಂದ ಇಂತಹ ಅಯೋಗ್ಯರನ್ನು ಮತ್ತು ಅವಿವೇಕಿಗಳನ್ನು ಯಾಕೆ ಹಿಡಿತದಲ್ಲಿಡಬಾರದು? ಕಾಯಕದಲ್ಲಿರಬಹುದಾದ ಅನಿವಾರ್ಯ ನ್ಯೂನತೆಗಳ ಪರಿಹಾರರೂಪವೆಂದು ದುರ್ವ್ಯಸನವನ್ನು ತಡೆಗಟ್ಟಲು ಸಾಮಾಜಿಕ ಅಭಿಪ್ರಾಯವನ್ನು ರೂಪಿಸಬೇಡವೇ? ಸಾಮಾಜಿಕ ದಂಡನೆಯನ್ನು ಹೇರಬೇಡವೇ? ಇಂತಹ ಸಂದರ್ಭಗಳಿಗೆ ವ್ಯಕ್ತಿವೈಶಿಷ್ಟ್ಯವನ್ನು ಪ್ರತಿಬಂಧಿಸುವ, ಜೀವನದಲ್ಲಿ ಹೊಸಪ್ರಯೋಗ ಮಾಡುವುದನ್ನು ತಡೆಯುವ ಪ್ರಶ್ನೆಯು ಸೇರುವುದಿಲ್ಲ. ಜಗತ್ತಿನ ಪ್ರಾರಂಭದಿಂದ ಈವರೆಗೆ ಪ್ರಯೋಗ–ಪರೀಕ್ಷೆಗಳಿಗೆ ಒಳಪಡಿಸಿ ನಿಂದ್ಯವೆಂದು ಸಿದ್ಧವಾದ ಸಂಗತಿಗಳನ್ನಷ್ಟೆ ತಡೆಯುವ ಸಂದರ್ಭವಿದೆ. ಯಾವನ ವ್ಯಕ್ತಿವೈಶಿಷ್ಟ್ಯಕ್ಕೂ ಅಂತಹ ದುರ್ವ್ಯಸನಗಳು ಪೋಷಕವಾಗಲಾರವೆಂಬುದು ಎಂದೋ

ಸಿದ್ಧವಾದ ಸಂಗತಿಯು. ನೀತಿಯ ಅಥವಾ ವಿವೇಕದ ಸಿದ್ಧಾಂತವು ಸತ್ಯವೆಂದು ನೆಲೆನಿಲ್ಲಬೇಕಾದರೆ ಕೆಲಕಾಲ ಕಳೆಯಬೇಕು; ಅನುಭವದಿಂದ ಪರೀಕ್ಷಿತವಾಗಬೇಕು. ಆದ್ದರಿಂದ ತಲೆಮಾರಿನಿಂದ ತಪ್ಪೆಂದು ಗೊತ್ತಾದ ಸಂಗತಿಗಳನ್ನು ಪುನಃ ಪುನಃ ಮಾಡಿ ಹಾನಿಹೊಂದುವುದನ್ನು ನಿಲ್ಲಿಸುವುದು ಸಮಾಜದ ಕರ್ತವ್ಯವಲ್ಲವೇ?

ಒಬ್ಬನು ತನಗೆ ಮಾಡಿಕೊಳ್ಳುವ ಕೇಡಿನಿಂದ ತನ್ನವರಿಗೆ ಹೆಚ್ಚಾಗಿಯೂ, ಇತರರಿಗೆ ಸ್ವಲ್ಪ ಕಡಿಮೆ ಪ್ರಮಾಣದಲ್ಲಿಯೂ ಹಾನಿ ಸಂಭವಿಸುತ್ತದೆ ಎಂಬುದನ್ನು ಒಪ್ಪುತ್ತೇನೆ. ಈ ತರಹದ ನಡತೆಯಿಂದ ಒಬ್ಬನು ಇತರರಿಗೆ ತಾನು ಮಾಡಬೇಕಾದ ಕರ್ತವ್ಯದಿಂದ ಚ್ಯುತನಾದರೆ ಆಗ ಅಂತಹ ಪ್ರಕರಣವು ಸ್ವಹಿತೈಕಪರಾಯಣತೆಯಿಂದಾಗುವ ತಪ್ಪಿನ ವರ್ಗದಿಂದ ಮುಕ್ತವಾಗಿ ನೈತಿಕ ಬಹಿಷ್ಕಾರಕ್ಕೆ ಯೋಗ್ಯವಾದ ತಪ್ಪಿನ ವರ್ಗಕ್ಕೆ ಸೇರುತ್ತದೆ. ಉದಾಹರಣೆಗಾಗಿ ಒಬ್ಬ ದುಂದುಗಾರ ತೀರಿಸಲಾರದಷ್ಟು ಸಾಲಮಾಡುತ್ತಾನೆಂದು ತಿಳಿಯುವಾ. ಅಕಾರಣದಿಂದ ತನ್ನ ಕುಟುಂಬವನ್ನು ಹೊರೆಯಲಾರದೆ ಹೋದ, ತನ್ನ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕೊಡಲಾರದೆ ಹೋದ ಮನುಷ್ಯನಿಗೆ ನ್ಯಾಯವಾಗಿ ಶಿಕ್ಷೆಯನ್ನು ವಿಧಿಸಲೇಬೇಕು. ಆದರೆ ಹಾಗೆ ಅವನನ್ನು ಶಿಕ್ಷಿಸುವುದು ಅವನ ದುಂದುಗಾರಿಕೆಗಾಗಿ ಅಲ್ಲ. ಅವನು ತನ್ನ ಕುಟುಂಬ ಮತ್ತು ಸಾಲಗಾರರಿಗೆ ಮಾಡಬೇಕಾದ ಕರ್ತವ್ಯದಿಂದ ಚ್ಯುತನಾಗಿದ್ದಕ್ಕೆ. ಅವರಿಗೆ ಸಲ್ಲಿಸಬೇಕಾಗಿದ್ದ ಮೊತ್ತವನ್ನು ಆತನು ಇನ್ನಾವುದೊ ಹೆಚ್ಚು ಉಪಯುಕ್ತ ಕೆಲಸಕ್ಕೆ ವಿನಿಯೋಗಿಸಿದಾಗಲೂ ಅವನು ಉಕ್ತ ದೋಷದಿಂದ ಮುಕ್ತನಾಗಲಾರ. ಜಾರ್ಜ ಎಂಬಾತ ತನ್ನ ಸಾಲದ ದುಡ್ಡು ಕೊಡಲು ತನ್ನ ಮಾವನನ್ನು ಕೊಂದನೆಂದು ಭಾವಿಸೋಣ. ಹಾಗಲ್ಲದೆ ಅವನು ವ್ಯಾಪಾರ ಪ್ರಾರಂಭಿಸಲೆಂದು ಅಂತಹ ಕೆಲಸ ಮಾಡಿದ ಎಂದು ತಿರುಗಿಸಿಕೊಳ್ಳೋಣ. ಈ ಎರಡೂ ಸಂದರ್ಭಗಳಲ್ಲಿಯೂ ಅವನಿಗೆ ಮರಣದಂಡನೆ ತಪ್ಪಿದ್ದಲ್ಲ. ಮತ್ತೊಂದು ಉದಾಹರಣೆ: ಒಬ್ಬನು ತನ್ನ ದುರ್ವ್ಯಸನಗಳಿಂದ ತನ್ನ ಕುಟುಂಬಕ್ಕೆ ವ್ಯಸನವನ್ನುಂಟುಮಾಡಿದ ಎನ್ನೋಣ. ಆಗ ಅವನು ತನ್ನ ನಿರ್ದಯತೆಗಾಗಿ ಅಥವಾ ಕೃತಘ್ನತೆಗಾಗಿ ನಿಂದ್ಯನಾಗುತ್ತಾನೆ. ಹೀಗೆ ಒಬ್ಬ ಮನುಷ್ಯನು ಕೆಟ್ಟದೆನಿಸಿದ ಅಭ್ಯಾಸಗಳನ್ನು ತಿಳಿದೂ ಸಹ ಆ ಮೂಲಕ ತನ್ನ ಅವಲಂಬಿಗಳಿಗೆ ಕಷ್ಟನಷ್ಟಗಳನ್ನು ತಂದುಹಾಕಬಹುದು.

ಇದಕ್ಕೂ ಹೆಚ್ಚಿನ ಕರ್ತವ್ಯಗಳಿಗೆ ಒಳಗಾಗದಿದ್ದಾಗ ಅಥವಾ ನ್ಯಾಯವಾದ ವೈಯಕ್ತಿಕ ಇಚ್ಛೆಯೆಂದು ಪರಿಗಣಿಸಲ್ಪಡಲು ಬಾರದಿದ್ದಾಗ ಯಾರಾದರೂ ತನ್ನ ಅವಲಂಬಿಗಳಿಗೆ ಮಾಡಬೇಕಾದ ಕರ್ತವ್ಯಗಳನ್ನು ಮಾಡದಿದ್ದರೆ ಅದಕ್ಕಾಗಿ ಅವರು ನೈತಿಕ ಬಹಿಷ್ಕಾರಕ್ಕೆ ಅರ್ಹರಾಗುವುದು ಸಹಜ. ಆದರೆ ಅವರು ಹಾಗೆ ಬಹಿಷ್ಕಾರಾರ್ಹರಾಗುವುದು ಆ ಕಾರಣಕ್ಕಾಗಿ ಅಲ್ಲ, ಆ ತಪ್ಪುಗಳಿಗಾಗಿಯೂ ಅಲ್ಲ ಏಕೆಂದರೆ ಕಾರಣ ವೈಯಕ್ತಿಕವಿರಬಹುದು, ಅಂತಹ ತಪ್ಪನ್ನು ಮಾಡಲು ಇದು ಅಪ್ರತ್ಯಕ್ಷ ಸಂಬಂಧಿಸಿರಬಹುದು. ಇದೇ ಪ್ರಕಾರ ಯಾವನೊಬ್ಬನು ಸ್ವಹಿತೈಕಪ್ರವೃತ್ತಿಯ

ದೆಸೆಯಿಂದ ಸಾರ್ವಜನಿಕ ಕಾರ್ಯವನ್ನು ಮಾಡಲಾರದ ಸ್ಥಿತಿಯನ್ನು ತಂದುಕೊಂಡರೆ ಅವನು ಒಂದು ಸಾರ್ವಜನಿಕ ಅಪರಾಧವನ್ನು ಮಾಡಿದಂತಾಗುತ್ತದೆ. ಕೇವಲ ಕುಡಿದನೆಂದು ಯಾರನ್ನೂ ಶಿಕ್ಷಿಸಬಾರದು. ಆದರೆ ಕರ್ತವ್ಯನಿರತನಾಗಿರುವಾಗ ಒಬ್ಬ ಪೋಲೀಸ ಅಥವಾ ಸಿಪಾಯಿ ದಂಡನಾರ್ಹ. ಸ್ವಲ್ಪದರಲ್ಲಿ ಹೇಳುವುದಾದರೆ ಯಾರಿಗಾದರೂ ಏನಾದರೂ ಹಾನಿ ತಟ್ಟುತ್ತದೆಂಬುದು ಖಚಿತವಿರುವ ಸಂದರ್ಭದಲ್ಲಿ ಒಬ್ಬನು ಮಾಡುವ ತಪ್ಪು ಕೆಲಸವು ವ್ಯಕ್ತಿಸ್ವಾತಂತ್ರ್ಯದ ಗೆರೆಯನ್ನು ಮೀರಿ ಕಾಯ್ದೆಯ ಅಥವಾ ನೀತಿಯ ಕಕ್ಷೆಯಲ್ಲಿ ಸೇರುತ್ತದೆ.

ಆದರೆ ಸಾರ್ವಜನಿಕರ ಬಗ್ಗೆ ಮಾಡಬೇಕಾದ ಯಾವ ವಿಶಿಷ್ಟ ಕರ್ತವ್ಯಕ್ಕೂ ಭಂಗ ತರದ ಸಂದರ್ಭದಲ್ಲೂ, ತನಗಲ್ಲದೆ ಮತ್ತಾರಿಗೂ ಯಾವ ಹಾನಿಯೂ ಉಂಟಾಗದಿರುವಾಗಲೂ, ಫಲಿತ ಅನಾನುಕೂಲವನ್ನು ಹೆಚ್ಚಿನ ಲಾಭಕ್ಕಾಗಿ ಸಹಿಸಿಕೊಳ್ಳಲು ಬರುವಂತಿರುವಾಗ ಒಬ್ಬನು ಸಮಾಜಕ್ಕೆ ಒಂದು ಅನಿವಾರ್ಯ ಅಪರಾಧವನ್ನೆಸಗಿದ್ದರೆ ಅದು ರಚನಾತ್ಮಕ ಹಿಂಸೆಯೆನಿಸುತ್ತದೆ. ತಮ್ಮನ್ನು ತಾವು ಸರಿಯಾಗಿ ನೋಡಿಕೊಳ್ಳದ್ದಕ್ಕಾಗಿ ವಯಸ್ಕರನ್ನು ಶಿಕ್ಷಿಸುವುದಾದರೆ ಅದು ಅವರ ಹಿತಕ್ಕಾಗಿಯಲ್ಲದೆ ಅವರು ಕಳಕೊಳ್ಳಬಹುದಾದ ಸ್ವಶಕ್ತಿಯನ್ನು ಉಳಿಸಲು ಎಂಬ ಅಥವಾ ತನಗೆ ಹಕ್ಕಿದೆ ಎಂದು ಸಮಾಜವು ನಟಿಸದಿರುವಾಗಲೂ ಅವರಿಗೇನೋ ಉಪಕಾರ ಮಾಡುತ್ತೇನೆ ಎಂಬ ಸೋಗಿನಿಂದ ಅಲ್ಲ. ಮನುಷ್ಯರು ಯಾವುದಾದರೂ ಅನಾಚಾರವನ್ನು ಮಾಡುವವರೆಗೆ ಸುಮ್ಮನೆ ಕುಳಿತು ಮಾಡಿದ ನಂತರ ಅದಕ್ಕಾಗಿ ಅವರನ್ನು ನೈತಿಕವಾಗಿಯೂ, ವೈಧಿಕವಾಗಿಯೂ ಶಿಕ್ಷಿಸುವುದನ್ನು ಬಿಟ್ಟರೆ ಸಮಾಜಕ್ಕೆ ತನ್ನ ದುರ್ಬಲ ಸದಸ್ಯರನ್ನು ಸರ್ವಸಾಧಾರಣವಾದ ವಿಚಾರಬದ್ಧ ವರ್ತನೆಗೆ ತಂದು ಮುಟ್ಟಿಸಲು ಬೇರೆ ಯಾವ ಮಾರ್ಗವೂ ಇಲ್ಲ ಎಂದು ಭಾವಿಸಿ ವಾದಿಸಲು ನಾನು ಒಪ್ಪಲಾರೆ. ಯಾವ ಕಾಲದ ವಯಸ್ಕರ ಮೇಲೆ ಆಗಲಿ ಅವರು ಚಿಕ್ಕವರಾಗಿದ್ದಾಗ ಅವರನ್ನು ನಿಯಂತ್ರಿಸಲು ಸಂಪೂರ್ಣ ಅಧಿಕಾರವಿರುತ್ತದೆ. ಜೀವನದಲ್ಲಿ ವಿವೇಕಿಗಳಾಗಿ ಅವರು ವರ್ತಿಸುವಂತೆ ಮಾಡುವುದು ಆಗುವುದೋ ಇಲ್ಲವೊ ಎಂಬುದನ್ನು ನೋಡಲು ಸಮಾಜಕ್ಕೆ ಅವರ ಇಡೀ ವಿದ್ಯಾರ್ಥಿದೆಶೆಯೇ ಸಾಕು. ಬರುವ ತಲೆಮಾರಿನ ತರಬೇತು ಮತ್ತು ಜೀವನ ಸನ್ನಿವೇಶಗಳನ್ನು ರೂಪಿಸುವ ಪೂರ್ಣಾಧಿಕಾರವು ಇಂದಿನ ತಲೆಮಾರಿಗೆ ಇದೆ; ಇದು ಅದನ್ನು ಸಂಪೂರ್ಣ ವಿಚಾರಶೀಲವನ್ನಾಗಿಯೂ ಒಳ್ಳೆ ಸ್ವಭಾವದವರನ್ನಾಗಿಯೂ ಮಾಡಲಾರದು. ಏಕೆಂದರೆ ಸ್ವತಃ ಇದೇ ದುರ್ದೈವದಿಂದ ಅಷ್ಟು ವಿವೇಕಿಯಾಗಿಯೂ ಇಲ್ಲ, ಒಳ್ಳೆಯದಾಗಿಯೂ ಇಲ್ಲ. ಇಷ್ಟೇ ಅಲ್ಲ, ಇದು ಶಕ್ತಿಮೀರಿ ಮಾಡಿದ ಪ್ರಯತ್ನವೂ ಸಹ ಕೆಲ ವ್ಯಕ್ತಿಗಳ ವಿಷಯದಲ್ಲಿ ಯಾವಾಗಲೂ ಪರಿಪೂರ್ಣ ಯಶಸ್ವಿ ಆಗುತ್ತದೆ ಎಂದು ಹೇಳಲು ಬಾರದು. ಆದರೆ ಇದು ಸಾಮಾನ್ಯವಾಗಿ ಒಟ್ಟು ಮುಂದಿನ ತಲೆಮಾರನ್ನು ಕಿಂಚಿತ್ತಾದರೂ ತನಗಿಂತ ಉತ್ತಮವನ್ನಾಗಿ ತಯಾರು ಮಾಡಬಹುದು. ಸಮಾಜವು ಒಮ್ಮೆ ತನ್ನ ಸದಸ್ಯರಲ್ಲಿಯ

ಗಣ್ಯಸಂಖ್ಯೆಯನ್ನು ಕೇವಲ ಹುಡುಗಾಟಿಕೆಯ ಬುದ್ಧಿಯಲ್ಲೇ ಉಳಿದು ವಿಚಾರಶಕ್ತಿಗೆ ಹೊಳೆವ ದೂರೋದ್ದೇಶಗಳನ್ನು ಅರಿತು ನಡೆದುಕೊಳ್ಳದಂತೆ ಇಟ್ಟರೆ ಅದರಿಂದಾಗುವ ಮಹಾಹಾನಿಗಳಿಗೆ ಅದೇ ಹೊಣೆ.

ಸಮಾಜಕ್ಕೆ ಶೈಕ್ಷಣಿಕ ಅಧಿಕಾರಗಳಷ್ಟೇ ಅಲ್ಲದೆ, ಅಜ್ಞಾನಿಗಳ ಮೇಲೆ ಗ್ರಹೀತಾಭಿಪ್ರಾಯವನ್ನು ಹೇರುವ ಅಧಿಕಾರವೂ ಇದೆ. ಅದು ಹಾಗೆ ಹೇರಿ ತನ್ನ ಅಪ್ರಿಯತೆಗೂ ತಿರಸ್ಕಾರಕ್ಕೂ ಪಾತ್ರರಾದವರ ಮೇಲೆ ಸ್ವಾಭಾವಿಕವಾದ ದಂಡನೆಯನ್ನು ವಿಧಿಸಬಲ್ಲದು. ಇಷ್ಟೆಲ್ಲ ಇರುವಾಗ ತಾವು ಮಾಡಿದ್ದನ್ನು ತಾವೇ ಅನುಭವಿಸುತ್ತಾರೆ ಎಂದು ತಕ್ಕ ವೈಯಕ್ತಿಕ ಸಂದರ್ಭಗಳಲ್ಲಿಯೂ ಜನಗಳ ಮೇಲೆ ಆಜ್ಞೆ ವಿಧಿಸುವ ಅಧಿಕಾರ ತನಗೆ ಬೇಕು ಎಂದು ಹೇಳುವುದು ತರವಲ್ಲ. ಈ ಮೇರೆಯನ್ನು ಮೀರಿ ಸಮಾಜವು ವರ್ತಿಸಿದರೆ ಜನಗಳ ನಡತೆಯನ್ನು ತಿದ್ದುವ ಉತ್ತಮ ದ್ವಾರಗಳೆಲ್ಲವನ್ನೂ ಮುಚ್ಚಿದಂತಾಗುತ್ತದೆ. ಒಂದು ವೇಳೆ ಸಮಾಜವು, ಚಾರಿತ್ರಸಂಪನ್ನರಾದ ಸ್ವಾಭಿಮಾನಿಗಳ ಹಾಗೂ ಶೂರರ ಮೇಲೆ ಉಚಿತಜ್ಞತೆಯ ಹಾಗೂ ಸಂಯಮಶೀಲತೆಯ ಬಗ್ಗೆ ಒತ್ತಾಯವನ್ನು ತಂದರೆ ಅಂತಹವರು ಅದರ ವಿರುದ್ಧವಾಗಿ ಖಂಡಿತವಾಗಿ ದಂಗೆ ಏಳುವರು. ಅಂತಹ ಜನರು ತಮಗೇ ಸಂಬಂಧಿಸಿದ ವಿಷಯಗಳಲ್ಲಿ ಬೇರೊಬ್ಬರಿಗೆ ಕೈಹಾಕಲು ಹಕ್ಕಿದೆ ಎಂಬುದನ್ನು ಒಪ್ಪಲಾರರು. ಸಮಾಜವು ಆ ರೀತಿಯ ಒತ್ತಾಯವನ್ನು ತಂದದ್ದೇ ಆದರೆ ಅಂತಹ ಅಧಿಕಾರಾಪಹಾರವನ್ನು ಪ್ರತಿಭಟಿಸುವುದೇ ಒಂದು ಶೌರ್ಯ ಎಂದು ತಿಳಿದು ಸ್ವತಂತ್ರಶೀಲರು ಸಮಾಜದ ಅಭಿಪ್ರಾಯಕ್ಕೆ ವಿರುದ್ಧವಾದುದನ್ನೇ ಆಡಂಬರದಿಂದ ಆಚರಿಸುವರು. ಧಾರ್ಮಿಕ ಹಟವಾದಿಗಳಾದ ಪ್ಯೂರ್‌ಟನ್ನರು ಇಂಗ್ಲಂಡಿನಲ್ಲಿ ತಂದ ಸುಧಾರಣೆಗಳನ್ನು ಎರಡನೆಯ ಚಾರ್ಲಸನ ಕಾಲದಲ್ಲಿ ತೀರ ಒರಟುತನದಲ್ಲಿ ಕೊಡಹಿ ಹಾಕಿದುದು ಇದಕ್ಕೆ ಉದಾಹರಣೆ. ಮತ್ತೊಬ್ಬರಿಗೆ ಕೇಡನ್ನು ಮಾಡಿ ತಾನು ಯಾವ ದಂಡನೆಗೂ ಒಳಗಾಗದಿರುವ ಸನ್ನಿವೇಶವು ನಿಜವಾಗಿಯೂ ಅಲಕ್ಷಿಸತಕ್ಕುದಲ್ಲ. ಆದರೆ ಈಗ ನಾವು ಚರ್ಚಿಸುತ್ತಿರುವುದು ಇನ್ನೊಬ್ಬರಿಗೆ ಯಾವ ಹಾನಿಯನ್ನೂ ತಾರದೆ ವ್ಯಕ್ತಿಗಷ್ಟೇ ಹಾನಿಯನ್ನುಂಟು ಮಾಡುವ ನಡತೆಯ ವಿಷಯ. ಸಮಾಜವು ಅವನಿಗೆ ದಂಡನೆ ವಿಧಿಸಿ ಅದನ್ನು ಅವನು ಅನುಭವಿಸುವುದನ್ನು ಕಂಡು ಕಲಿತುಕೊಳ್ಳುವುದಕ್ಕಿಂತ ತನಗಷ್ಟೇ ಸಂಬಂಧಿಸಿದ ವಿಷಯಗಳಲ್ಲಿ ಒಬ್ಬನು ತಪ್ಪಿ ನಡೆದರೆ ಅದರಿಂದ ಉಂಟಾಗುವ ದುಷ್ಪರಿಣಾಮಗಳನ್ನು ಅನುಭವಿಸುವುದನ್ನು ಕಂಡು ಜನರು ತಿಳುವಳಿಕೆ ಪಡೆಯುವುದು ಹೆಚ್ಚು ಹಿತವಲ್ಲವೆ?

ಕೇವಲ ಸ್ವಂತ ವಿಷಯಗಳಲ್ಲಿ ಸಮಾಜವು ಕೈ ಹಾಕುವುದು ಶುದ್ಧ ತಪ್ಪು. ಯಾಕೆಂದರೆ ಅಂತಹ ಸಂದರ್ಭಗಳಲ್ಲಿ ಆ ಸ್ಥಾನದಲ್ಲಿ ಮತ್ತು ಅನ್ಯಾಯವಾಗಿ ಅದು ಕೈ ಹಾಕುವ ಸಂಭವವೇ ಹೆಚ್ಚು. ತಾನಿಟ್ಟುಕೊಳ್ಳಬೇಕಾದ ಸಾಮಾಜಿಕ ನೀತಿಮಾರ್ಗ, ಇತರರಿಗೆ ಮಾಡಬೇಕಾದ ಕರ್ತವ್ಯ, ಜನರ ಅಭಿಪ್ರಾಯ–ಇವುಗಳ ಬಗ್ಗೆ ವ್ಯಕ್ತಿಯು ತಳೆದಿರುವ ಅಭಿಪ್ರಾಯವು ಎಷ್ಟೋ ವೇಳೆ ತಪ್ಪಾಗಿದ್ದರೂ ಅದಕ್ಕೂ ಹೆಚ್ಚು ಸಲ

ಸರಿಯಾಗಿರುವ ಸಂಭವವೇ ಅಧಿಕ. ಯಾಕೆಂದರೆ ಅಂತಹ ಸನ್ನಿವೇಶಗಳಲ್ಲಿ ವ್ಯಕ್ತಿಯು ಗಣಿಸತಕ್ಕದ್ದು ತನ್ನ ಹಿತವನ್ನಷ್ಟನ್ನೇ. ಅವನ ಪಾಡಿಗೆ ಅವನನ್ನು ಬಿಟ್ಟರೆ ಅವನ ನಡತೆಯು ಅವನ ಮೇಲಷ್ಟೇ ಪರಿಣಾಮ ಮಾಡುತ್ತದೆ. ಆದರೆ ಸ್ವಹಿತಕ್ಕೆ ಸಂಬಂಧಿಸಿದ ಪ್ರಶ್ನೆಗಳಲ್ಲಿ ಅಲ್ಪಸಂಖ್ಯರ ನಡತೆಯ ಮೇಲೆ ಬಹುಸಂಖ್ಯರು ಒಂದು ಕಾಯದೆಯಂತೆ ತಮ್ಮ ಅಭಿಪ್ರಾಯವನ್ನು ಹೇರಿದರೆ ಅದು ಸರಿಯಾಗುವ ಸಂಭವದಷ್ಟೇ ತಪ್ಪಾಗುವ ಸಂಭವವೂ ಇದೆ. ಇಂತಹ ಪ್ರಕರಣಗಳಲ್ಲಿ ಸಾರ್ವಜನಿಕ ಅಭಿಪ್ರಾಯವೆಂದರೆ ಇನ್ನೊಬ್ಬರಿಗೆ ಇದು ಒಳಿತು ಇದು ಕೇಡು ಎಂದು ಇನ್ನಾರೋ ತಾಳುವ ಅಭಿಪ್ರಾಯವಾಗಿರುತ್ತದೆ. ಕೆಲವೊಮ್ಮೆ ಅದು ಇನ್ನೂ ಕನಿಷ್ಠವಾಗಿರುತ್ತದೆ. ಸಂಪೂರ್ಣ ಅನಾಸಕ್ತಿಯಿಂದ ತಮಗೆ ನಿಂದ್ಯರೆನಿಸಿದವರ ಮೇಲೆ ಕೇವಲ ತಮ್ಮ ಇಷ್ಟಗಳನ್ನು ಹೇರುವುದೂ ಉಂಟು. ತಮಗೆ ರುಚಿಸದ ಯಾವುದಾದರೂ ನಡತೆಯನ್ನು ನೋಡಿದರೆ ಅದು ತಮಗೆ ಹಾನಿಕರವೆಂದು, ತಮ್ಮ ಮನಸ್ಸನ್ನು ನೋಯಿಸುವುದೆಂದು ಅದನ್ನು ಪ್ರತಿಭಟಿಸುತ್ತಾರೆ. ಒಬ್ಬ ಧರ್ಮಾಂಧನಿದ್ದಾನೆಂದು ತಿಳಿಯೋಣ. "ನೀನು ನಿನ್ನ ಧರ್ಮಾಂಧತೆಯಿಂದ ಇತರರ ಮನಸ್ಸನ್ನು ನೋಯಿಸಿದಿ" ಎಂದು ಹೇಳಿದರೆ, ಕೂಡಲೆ ಅವನು "ನೀವು ನಿಮ್ಮ ಅಸಹ್ಯ ಪೂಜೆ–ಪುನಸ್ಕಾರಗಳಿಂದ ನನ್ನ ಮನಸ್ಸನ್ನು ನೋಯಿಸುತ್ತಿದ್ದೀರಿ" ಎಂದು ಉತ್ತರ ಕೊಡುತ್ತಾನೆ. ಆದರೆ ಒಬ್ಬನು ತನ್ನ ಅಭಿಪ್ರಾಯವನ್ನು ತಾನಿಟ್ಟುಕೊಂಡಿರುವುದಕ್ಕೂ ಅವನು ಹಾಗೆ ಇಟ್ಟುಕೊಂಡಿದ್ದರಿಂದ ಇನ್ನೊಬ್ಬನು ಬೇಸರಪಡುವುದಕ್ಕೂ ಇರುವ ಹೋಲಿಕೆಯು ಒಂದೇ, ಒಬ್ಬನು ತನ್ನ ಹಣವನ್ನು ತಾನು ಇಟ್ಟುಕೊಳ್ಳಬೇಕೆಂದು ಬಯಸುವುದಕ್ಕೂ ಅದನ್ನು ಕದಿಯಬೇಕೆಂಬ ಕಳ್ಳನ ಬಯಕೆಗೂ ಇರುವ ಹೋಲಿಕೆಯು ಒಂದೇ. ಅಲ್ಲದೆ ಒಬ್ಬನ ಅಭಿರುಚಿಯು ಅವನ ಅಭಿಪ್ರಾಯ ಅಥವಾ ಹಣದಂತೆ ಅವನ ಸ್ವಂತಕ್ಕೆ ಸೇರಿದ್ದು. ಅನಿಶ್ಚಿತ ಪ್ರಸಂಗಗಳಲ್ಲೆಲ್ಲಾ ತಮಗೆ ತಿಳಿದಂತೆ ಮಾಡಬಹುದೆಂದು ವ್ಯಕ್ತಿಗಳನ್ನು ಬಿಟ್ಟು ಸರ್ವಾನುಭವದಿಂದ ನಿಂದ್ಯವೆನಿಸಿದ ವರ್ತನೆಯ ಬಗೆಗಳಿಂದ ಅವರು ದೂರವಿರಬೇಕೆಂದಷ್ಟೇ ಬಯಸುವ ಆದರ್ಶ–ಸಾರ್ವಜನಿಕರನ್ನು ಯಾರಾದರೂ ಸುಲಭವಾಗಿ ಕಲ್ಪಿಸಿಕೊಳ್ಳಬಹುದು. ಆದರೆ ತನ್ನ ಪ್ರತಿಬಂಧಾಧಿಕಾರಕ್ಕೆ ಅಂತಹ ಇತಿ–ಮಿತಿಗಳನ್ನು ಹಾಕಿಕೊಂಡ ಸಾರ್ವಜನಿಕರನ್ನೂ ಸಮಾಜವನ್ನೂ ಯಾರಾದರೂ ಕಂಡಿದ್ದಿದೆಯೇ? ಅಥವಾ ಎಲ್ಲರಿಗೂ ಆಗುವ ಅನುಭವದ ಬಗ್ಗೆ ಸಾರ್ವಜನಿಕರು ಎಂದಾದರೂ ವಿಚಾರಿಸಿದ್ದು ಉಂಟೇ? ಒಬ್ಬ ವ್ಯಕ್ತಿಯು ತನಗಿಂತ ಬಹಳ ಭಿನ್ನವಾಗಿ ಭಾವಿಸುತ್ತಾನೆ, ನಡೆದುಕೊಳ್ಳುತ್ತಾನೆ ಎಂಬ ಒಂದೇ ಕಾರಣದಿಂದ ಸಾರ್ವಜನಿಕರು ವ್ಯಕ್ತಿಯ ವಿಷಯಗಳಲ್ಲಿ ಕೈಹಾಕುತ್ತಾರೆ. ಮನುಷ್ಯರ ವರ್ತನೆಯನ್ನು ನಿರ್ಣಯಿಸುವ ಈ ಮಾನದಂಡವನ್ನು ಧರ್ಮ ಮತ್ತು ತತ್ವಜ್ಞಾನಗಳ ಮುಸುಕಿನಲ್ಲಿಟ್ಟು ಸಮರ್ಥಿಸುವವರೇ ಜಗತ್ತಿನಲ್ಲಿ ನೂರಕ್ಕೆ ತೊಂಬತ್ತು ಮಂದಿ. "ಅವು ಸರಿಯಾಗಿವೆ – ನಮಗೆ ಅವು ಸರಿ ಎಂದು ತೋರುತ್ತದೆ" ಎಂದು ಬೋಧಿಸುತ್ತಾರೆ. ನಾವೂ ಇತರರೂ ಮಾಡಬೇಕಾದ ಕರ್ತವ್ಯ ನಿಯಮಗಳ ಬಗ್ಗೆ ನಮ್ಮ ನಮ್ಮ ಹೃದಯವನ್ನೇ

ಶೋಧಿಸಿ ನೋಡಿಕೊಳ್ಳಬೇಕೆಂದು ನಮಗೆ ಇವರೆಲ್ಲರೂ ಹೇಳುತ್ತಾರೆ. ಹೀಗಿರುವಾಗ ಜನರು ತಮ್ಮ ಸತ್‌ಕಲ್ಪನೆಗಳಿಗೆ ಈ ಬೋಧೆಯನ್ನೇ ಅನ್ವಯಿಸಿ ತಮ್ಮಲ್ಲಿ ಸಾಕಷ್ಟು ಐಕ್ಯಮತ್ಯವಿದ್ದಾಗ ಜಗತ್ತೆಲ್ಲಾ ಅದರಂತೆಯೇ ನಡೆದುಕೊಳ್ಳಬೇಕೆಂದು ಹೇಳದೆ ಮತ್ತೇನು ಮಾಡಿಯಾರು?

ಇಲ್ಲಿ ಕಾಣಿಸಲಾಗಿರುವ ದೋಷವು ಕೇವಲ ತಾತ್ವಿಕ ಹಿನ್ನೆಲೆಯಲ್ಲಿ ಮಾತ್ರವಲ್ಲ, ಈ ದೇಶದ ಆಧುನಿಕ ಜನರು ನೈತಿಕ ನಿಯಮಗಳ ಸ್ವರೂಪದ ಬಗ್ಗೆ ಆಯುಕ್ತವಾಗಿ ತಮ್ಮವೇ ಆದ ತಾರತಮ್ಯ ನೀತಿಯನ್ನಿಟ್ಟುಕೊಂಡಿರುವುದರ ಉದಾಹರಣೆಗಳನ್ನು ನಾನು ಇಲ್ಲಿ ಎತ್ತಿತೋರಿಸಬೇಕೆಂದು ನಿರೀಕ್ಷಿಸಬಹುದು. ಇಂದಿನ ನೀತಿಭಾವನೆಯ ವಿಕ್ಷೇಪಗಳ ಬಗ್ಗೆ ನಾನೀಗ ಪ್ರಬಂಧವೊಂದನ್ನು ಬರೆಯಲು ಹೊರಟಿಲ್ಲ. ಅದು ಅನುಷಂಗಿಕವಾಗಿ ಚರ್ಚಿಸುವಷ್ಟು ಲಘುವಿಷಯವಲ್ಲ. ಆದರೂ ನಾನು ಪ್ರತಿಪಾದಿಸುವ ತತ್ವವು ಗಂಭೀರವಾದ ವ್ಯಾವಹಾರಿಕ ಸ್ವರೂಪದ್ದಲ್ಲದೆ, ಕಾಲ್ಪನಿಕ ದುಷ್ಪರಿಣಾಮಗಳಿಂದ ತಪ್ಪಿಸಿಕೊಳ್ಳಲು ಕೋಟಿಕಟ್ಟಲು ತಪ್ಪಿಸಿಕೊಳ್ಳುತ್ತಿಲ್ಲ. ವ್ಯಕ್ತಿಯ ಶತಸಿದ್ಧವಾದ ಸ್ವಾತಂತ್ರ್ಯದ ಮೇಲೆ ಗದಾಪ್ರಹಾರ ಮಾಡಲು ಹೋಗುವವರೆಗೆ ನೈತಿಕ ನಿಯಂತ್ರಣದ ಎಲ್ಲೆಯನ್ನು ವಿಸ್ತರಿಸುವುದು ಮನುಷ್ಯನ ಪ್ರವೃತ್ತಿಗೆ ಸಹಜ ಎಂಬುದನ್ನು ತೋರಿಸಿಕೊಡಲು ಕಷ್ಟವಲ್ಲ.

ಮತಾಚಾರಗಳ ಬಗ್ಗೆ ಭಿನ್ನಾಭಿಪ್ರಾಯವುಳ್ಳವರು ತಾವು ಮಾಡುವ ವ್ರತ–ನಿಯಮ–ಉಪವಾಸಗಳನ್ನು ಮಾಡುವುದಿಲ್ಲವೆಂದು ಕೆಲವರು ಅವರನ್ನು ಹಗೆಗಳೆಂದು ತಿಳಿಯುತ್ತಾರೆ. ಮಹಮ್ಮದೀಯರು ಹಂದಿಮಾಂಸವನ್ನು ತಿನ್ನುವ ಕ್ರಿಶ್ಚಿಯನ್ನರನ್ನು ಈ ಕಾರಣದಿಂದಾಗಿ ದ್ವೇಷಿಸುವರು. ಇದಕ್ಕೆ ಉದಾಹರಣವಾಗಿ ಮುಸಲ್ಮಾನರಲ್ಲಿಯ ಯಾವ ಆಚಾರವೂ ಕ್ರಿಶ್ಚಿಯನ್ನರಿಗೆ ಹಾಗೂ ಯುರೋಪಿಯನ್ನರಿಗೆ ಅಷ್ಟು ದ್ವೇಷಕ್ಕೆ ಕಾರಣವಾಗಿಲ್ಲ. ಹಂದಿಮಾಂಸವನ್ನು ತಿನ್ನುವುದು ಮೊದಲನೆಯದಾಗಿ ಅವರ ಧರ್ಮಕ್ಕೆ ಮಾಡಿದ ದ್ರೋಹ. ಆದರೆ ಈ ಸಂಗತಿಯು ಅದರಿಂದ ಅವರಿಗೆ ಉಂಟಾಗುವ ಕೋಪದ ಅಥವಾ ಸಿಟ್ಟಿನ ಪರಿಮಾಣವನ್ನಾಗಲಿ ಪ್ರಕಾರವನ್ನಾಗಲಿ ಸಮರ್ಥಿಸಲಾರದು– ಏಕೆಂದರೆ ಮದ್ಯಪಾನವು ಕೂಡಾ ಕುರಾನಿನ ಪ್ರಕಾರ ಹೇಯ; ಮಹಮ್ಮದೀಯರು ಅದನ್ನು ತಪ್ಪೆಂದು ಎಣಿಸುವರೇ ವಿನಾ ಅತ್ಯಸಹ್ಯ ಎಂದು ಭಾವಿಸುವುದಿಲ್ಲ. ಆ ಅಪವಿತ್ರ ಪ್ರಾಣಿಯ ಮಾಂಸವನ್ನು ಅವರು ನಿಷೇಧಿಸುವುದು ಒಂದು ವಿಲಕ್ಷಣ ಸಂಪ್ರದಾಯ– ಅವರಿಗೆ ಅದರಲ್ಲಿ ಒಂದು ತರಹದ ಮೂಲದ್ವೇಷವಿದೆ. ಆ ಪ್ರಾಣಿಯು ಅಪವಿತ್ರವೆನ್ನುವುದು ಅವರ ಭಾವನೆಯ ಪಾತಾಳಕ್ಕೆ ಅಂಟಿಕೊಂಡಿದೆ. ಹಿಂದೂಗಳಲ್ಲಿಯ 'ಮಡಿ'ಯ ಕಲ್ಪನೆಯೂ ಇದೇ ರೀತಿಯದು. ಬೇರೆ ಮತದವನು ಎಷ್ಟು ಶುಚಿ–ರುಚಿಗಳ ನಿಯಮಗಳನ್ನು ಪಾಲಿಸುತ್ತಿದ್ದರೂ ಅವನನ್ನು ಅವರು ಜಾತ್ಯಾ ಅಪವಿತ್ರನು ಎಂದು ತಿಳಿಯುತ್ತಾರೆ. ಒಂದು ದೇಶದಲ್ಲಿ ಮಹಾಭಾಗರು ಮುಸಲ್ಮಾನರು ಎಂದು ಇಟ್ಟುಕೊಳ್ಳೋಣ; ಅವರು ಆ ದೇಶದ ಗಡಿಯಲ್ಲಿ ಯಾರೂ ಹಂದಿಮಾಂಸ ತಿನ್ನಬಾರದೆಂದು ವಿಧಿಸಿದರೆಂದು ಇಟ್ಟುಕೊಳ್ಳೋಣ. ಮಹಮ್ಮದೀಯ ದೇಶದಲ್ಲಿ

ಹೀಗಿರುವಾಗ ಅಸಂಭವವೇನೂ ಅಲ್ಲ. ಹೀಗೆ ಹೇಳುವುದು ಸಾರ್ವಜನಿಕ ಅಭಿಪ್ರಾಯವು ನೈತಿಕ ಅಧಿಕಾರವನ್ನು ಸರಿಯಾಗಿ ಉಪಯೋಗಿಸಿದಂತೆ ಆದೀತೇ? ಹಾಗಾಗಲಿಲ್ಲವೆಂದರೆ ಏಕೆ? ಹಂದಿಮಾಂಸ ತಿನ್ನುವುದು ತೀರ ಕೆಟ್ಟದ್ದು ಎಂದು ಆ ಜನಕ್ಕೆ ಅನಿಸುತ್ತದೆ; ಅವರ ದೇವರಿಗೆ ಅದಾಗದು ಎಂದು ಪ್ರಾಮಾಣಿಕವಾಗಿ ಅವರು ನಂಬುತ್ತಾರೆ. ಇಂತಹ ನಿಷೇಧವನ್ನು ಮತೀಯ ದಬ್ಬಾಳಿಕೆ ಎಂದು ದೂರಲು ಬರದು. ಮೂಲದಲ್ಲಿ ಅದು ಮತಧರ್ಮಕ್ಕೆ ಸಂಬಂಧಿಸಿದ್ದಿರಬಹುದು. ಆದರೆ ಯಾವ ಮತಧರ್ಮವೂ ಹಂದಿಮಾಂಸವನ್ನು ತಿನ್ನುವುದು ಕರ್ತವ್ಯವೆಂದು ಬೋಧಿಸದಿರುವದರಿಂದ ಅದೊಂದು ಮತೀಯ ದಬ್ಬಾಳಿಕೆ ಎನ್ನಲಾಗುವುದಿಲ್ಲ. ಇದರ ನಿಷೇಧವು ತಪ್ಪೆನ್ನಲು ಸಾರ್ವಜನಿಕರಿಗೆ ವೈಯಕ್ತಿಕ ಅಭಿರುಚಿ, ಹಾಗೂ ಸ್ವಹಿತಸಾಧಕ ವಿಷಯಗಳಲ್ಲಿ ಕೈಹಾಕಲು ಬರುವುದಿಲ್ಲ ಎಂಬುದು ಒಂದೇ ಸಮರ್ಥನೆ.

ಈಗ ನಾವು ವ್ಯಕ್ತಿಸ್ವಾತಂತ್ರ್ಯಕ್ಕೆ ಅಡ್ಡಿಯೊಡ್ಡುವ ಉದಾಹರಣೆಯನ್ನು ಎತ್ತಿಕೊಳ್ಳುವಾ. ನ್ಯೂಇಂಗ್ಲೆಂಡಿನಲ್ಲಿ ಮತ್ತು ಬ್ರಿಟನ್ನಿನಲ್ಲಿ ಪ್ಯೂರ್‌ಟನ್‌ರು ಎಲ್ಲ ಬಗೆಯ ಸಾರ್ವಜನಿಕ ಹಾಗೂ ಖಾಸಗಿ ಮನರಂಜನೆಗಳನ್ನು ಕೆಲಮಟ್ಟಿಗೆ ಯಶಸ್ವಿಯಾಗಿ ಹತ್ತಿಕ್ಕಿದರು. ಇದರಿಂದ ಪ್ಯೂರ್‌ಟನ್‌ರಲ್ಲದವರ ಕಾರ್ಯ ಸ್ವಾತಂತ್ರ್ಯಕ್ಕೆ ಭಂಗ ಬಂದಿತು.*

ಇನ್ನೊಂದು ಸಂದರ್ಭ: ಪ್ರಜಾಪ್ರಭುತ್ವದ ಉಚ್ಚದೆಶೆಯಲ್ಲಿರುವ ಅಮೇರಿಕೆಯಲ್ಲಿ ಸುತ್ತುಮುತ್ತಲಿನವರಿಗೆ ಅಸಂತೋಷವಾಗುವಷ್ಟು ಶ್ರೀಮಂತ ಉಡಿಗೆ–ತೊಡಿಗೆಗಳನ್ನು ಯಾರೂ ಹಾಕಿಕೊಳ್ಳಬಾರದೆಂದು ಕಾಯಿದೆ ಮಾಡಿದರೆಂದು ಇಟ್ಟುಕೊಳ್ಳೋಣ. ಆಗ ನಿಜವಾದ ಶ್ರೀಮಂತರಿಗೆ ಜನನಿಂದೆಗೆ ಗುರಿಯಾಗದಂತೆ ತಮ್ಮ ಆದಾಯವನ್ನು ವೆಚ್ಚಮಾಡುವ ಮಾರ್ಗವೇ ಇಲ್ಲದಂತಾಗುವುದು. ಇಂಥ ಪ್ರಕರಣಗಳಲ್ಲಿ ಪ್ರಜಾಭಿಪ್ರಾಯಕ್ಕೆ ವ್ಯಕ್ತಿವಿಷಯಗಳ ಮೇಲೆ ನಿಯಂತ್ರಣಾಧಿಕಾರವಿರುವುದೆಂದು ಒಪ್ಪಿಕೊಳ್ಳುವುದಾದರೆ ನಾನು ತಪ್ಪೆಂದು ಹೇಳಲಾರೆ. ಮತ್ತು ಯಾವನೊಬ್ಬ ವ್ಯಕ್ತಿಯ ಸುತ್ತಲಿನ ಜನತೆಯು ಎಲ್ಲ ಜನರಿಗೆ ಸಾಮಾನ್ಯವಾಗಿ ಅನ್ವಯಿಸುವ ನಿಯಮಗಳನ್ನು ಆ ವ್ಯಕ್ತಿಯ ವರ್ತನೆಗೂ ಅನ್ವಯಿಸಿದರೆ ಅದನ್ನು ನಾನು ದೂರಲಾರೆ. ಆದರೆ ಈ ರೀತಿಯ ಊಹಾಪೋಹದ ವಿಷಯಗಳನ್ನು ಬಿಟ್ಟರೂ ನಮ್ಮ ಇಂದಿನ ವಾಸ್ತವಿಕ ಜೀವನದಲ್ಲಿ, ಖಾಸಗಿ ಚಟುವಟಿಕೆಗಳಲ್ಲಿ ಎಷ್ಟೋ ಸ್ವಾತಂತ್ರ್ಯ ಪಹಾರ ನಡೆದದ್ದು ಕಂಡುಬರುತ್ತದೆ. ತನಗೆ ತಪ್ಪೆನಿಸಿದ ಎಲ್ಲವನ್ನೂ ಕಾಯದೆಯಿಂದ ಪ್ರತಿಬಂಧಿಸುವುದಲ್ಲದೆ, ತನಗೆ ತಪ್ಪೆಂದು ಕಂಡು ಬಂದುದನ್ನು ತಿದ್ದಲು ಜನತೆಯು ತಾನು ನಿರ್ದುಷ್ಟವೆಂದು ಗಣಿಸಿರುವ ಆಚಾರಗಳನ್ನು ನಿಲ್ಲಿಸಿಬಿಡುತ್ತದೆ. ಪಾನಪ್ರತಿಬಂಧವೂ ಇಂತಹದೊಂದು ಉದಾಹರಣೆ. ಇದರ ಹಿನ್ನೆಲೆಯಲ್ಲಿ ಪರಸ್ಪರರ ನೈತಿಕ, ಭೌತಿಕ ಹಾಗೂ ಶಾರೀರಿಕ ಔನತ್ಯವನ್ನು ತನ್ನ ತನ್ನ ಅಳತೆಗೆ ಸರಿಯಾಗಿ ಲಕ್ಷಣಿಸುವ ಹಕ್ಕು ಅನ್ಯನಿಗೆ ಇದೆ ಎಂಬ ತತ್ವವು ಅಡಗಿದೆ. ವಾರಕ್ಕೊಂದು ದಿವಸ ಬಿಡುವು ಪಡೆಯುವುದು; ಒಬ್ಬಳಿಗಿಂತ ಹೆಚ್ಚು ಹೆಂಗಸರನ್ನು ಮದುವೆಯಾಗದಿರುವುದು ಮುಂತಾದುದರ ಬಗ್ಗೆ

ಪ್ರಜಾಪ್ರಭುತ್ವದಲ್ಲಿಯ ಆಳುವ ಪಕ್ಷವೊಂದು ಕಾಯದೆ ಮಾಡಿದರೆ ಅದೂ ಕೂಡಾ ಮೇಲಿನದರಂತೆಯೇ ವ್ಯಕ್ತಿಸ್ವಾತಂತ್ರ್ಯವನ್ನು ಕುಂಠಿತಗೊಳಿಸಿದಂತಾಗುತ್ತದೆ.

ಮದ್ಯಬಿಡುವುದು, ಏಕಪತ್ನೀವ್ರತ ಹಿಡಿಯುವುದು ಮುಂತಾದ ಪದ್ಧತಿಗಳು ಉಚ್ಚಮಟ್ಟದ ನಾಗರಿಕತೆಯ ಕುರುಹುಗಳೆಂದೆನಿಸಿದರೂ ಅಂತಹ ಯಾವ ಪದ್ಧತಿಯನ್ನೂ ಕಾಯದೆ ಮೂಲಕವಾಗಿ ಇನ್ನೊಂದರ ಮೇಲೆ ಹೇರ ಹೋಗಕೂಡದು. ಯಾವುದೊಂದು ನಾಗರಿಕ ಸಮಾಜಕ್ಕೂ ಇನ್ನೊಂದನ್ನು ನಾಗರಿಕ ಮಾಡುವ ಅಧಿಕಾರವಿಲ್ಲ. ಒಂದು ಸಮಾಜದ ಜನರು ತಮಗೆಲ್ಲರಿಗೂ ತೃಪ್ತಿಕರವಾಗಿದೆ ಎಂದು ಇಟ್ಟುಕೊಂಡ ಆಚಾರವೊಂದನ್ನು ಏನೂ ಸಂಬಂಧಿಸಿದ ಮತ್ತೊಂದು ಸಮಾಜದವರು ಹೇಳದೆ ಕೇಳದೆ ನಿಲ್ಲಿಸಹೋಗುವುದು ನನಗೆ ಸರಿತೋರುವುದಿಲ್ಲ. ಬೇಕೆಂದರೆ ಅವರು ಅಂತಹ ಆಚಾರದ ವಿರುದ್ಧ ಪ್ರಚಾರ ಮಾಡಲು ಮಿಷನರಿಗಳನ್ನು ಕೊಟ್ಟು ಕಳುಹಿಸಬಹುದು. ಉಪಾಧ್ಯಾಯರ ಉಪದೇಶಸ್ವಾತಂತ್ರ್ಯವನ್ನು ಹತ್ತಿಕ್ಕದೆ ನ್ಯಾಯವಾದ ಮಾರ್ಗಗಳಿಂದ ಅಂಥ ನಿಷಿದ್ಧ ತತ್ವಗಳ ಪ್ರಗತಿಯು ತಮ್ಮ ಜನರಲ್ಲೇ ಆಗುತ್ತಿರುವುದನ್ನು ವಿರೋಧಿಸಲಿ. ಜಗತ್ತಿನಲ್ಲಿ ಅನಾಗರಿಕತೆ ತುಂಬಿದ ಸ್ಥಿತಿಯನ್ನು ಮೀರಿ ನಾಗರಿಕತೆಯ ಕೈ ಮೇಲಾಗಿರುವುದು ನಿಜವಾದರೆ ಪುನಃ ಅನಾಗರಿಕತೆಯು ತಲೆ ಎತ್ತಿ ನಾಗರಿಕತೆಯನ್ನು ಗೆದ್ದೀತು ಎಂಬ ಭಯವು ತಲೆಬುಡವಿಲ್ಲದ್ದು. ತಾನೇ ಸೋಲಿಸಿದ ತನ್ನ ಶತ್ರುವಾದ ಅನಾಗರಿಕತೆಗೆ ನಾಗರಿಕತೆಯೊಂದು ಬಲಿಯಾಗುವ ಸಂದರ್ಭವಿದ್ದಲ್ಲಿ, ಅದು ಆ ನಾಗರಿಕತೆಯು ಎಷ್ಟು ಕೆಳಮಟ್ಟಕ್ಕೆ ಇಳಿದಿದೆ ಎಂಬುದನ್ನು ತೋರಿಸುತ್ತದೆ. ಆಗ ಅಂತಹ ನಾಗರಿಕತೆಯ ಬೆಂಬಲಿಗರಾದ ಗುರುಹಿರಿಯರಾಗಲಿ, ಪುರೋಹಿತರಾಗಲಿ ಅಥವಾ ಇನ್ನಾರೇ ಆಗಲಿ ಅದರ ನಾಶವನ್ನು ತಡೆಹಿಡಿಯಲಾರರು. ಇಷ್ಟು ದುರ್ದೆಶೆಗೆ ಇಳಿದ ಯಾವ ನಾಗರಿಕತೆಯಾಗಲಿ ಉಳಿಯಲರ್ಹವಲ್ಲ–ಅದಕ್ಕೆ ಆಚೆಗೆ ತೊಲಗೆಂದು ಅಪ್ಪಣೆ ಕೊಡುವುದು ಉತ್ತಮ. ಹಾಗೆ ಕೊಡದಿದ್ದಲ್ಲಿ ಆ ನಾಗರಿಕತೆಯು ಕ್ರಮೇಣ ಹೆಚ್ಚು ಹೆಚ್ಚು ವಿನಾಶೋನ್ಮುಖವಾಗಿ ಹೊರಟು ಅಂತ್ಯದಲ್ಲಿ ಶಕ್ತರಾದ ಅನಾಗರಿಕರ ಆಘಾತದಿಂದಲೆ ಪುನರುಜ್ಜೀವಿಸಲ್ಪಡುತ್ತದೆ.

# ಅಧ್ಯಾಯ ಐದು

# ಪ್ರಯೋಗಗಳು

ಈ ವರೆಗೆ ಪ್ರತಿಪಾದಿಸಿರುವ ತತ್ವಗಳನ್ನು ರಾಜ್ಯದ ಮತ್ತು ನೀತಿಯ ವಿವಿಧ ರಂಗಗಳಲ್ಲಿ ಲಾಭದಾಯಕವಾಗುವಂತೆ ಪ್ರಯೋಗಿಸುವ ಪೂರ್ವದಲ್ಲಿ ವಿವರಗಳನ್ನು ಚರ್ಚಿಸಲು ಈ ತತ್ವಗಳು ಸ್ವೀಕೃತವಾಗಬೇಕಾದುದು ಅಗತ್ಯ. ತತ್ವಗಳನ್ನು ಕೆಲವು ಸಂದರ್ಭಗಳಿಗೆ ಅನ್ವಯಿಸಿ ನೋಡಬಯಸುತ್ತೇನೆ.* ಆದರೆ ಅವುಗಳ ಎಲ್ಲ ಪರಿಣಾಮವನ್ನಲ್ಲ. ನಾನು ನೀಡುವುದು ಅಷ್ಟಾಗಿ ಪ್ರಯೋಗಗಳನ್ನಲ್ಲ. ಆದರೆ ಹೆಚ್ಚಾಗಿ ಪ್ರಯೋಗದ ಕೆಲವು ದೃಷ್ಟಾಂತಗಳನ್ನು. ಇವುಗಳು ಈ ಪ್ರಬಂಧದ ಇಡೀ ಸಿದ್ಧಾಂತದ ಎರಡು ಸೂತ್ರಗಳ ಅರ್ಥ ಮತ್ತು ವ್ಯಾಪ್ತಿಯನ್ನು ಹೆಚ್ಚು ಸ್ಪಷ್ಟಪಡಿಸಲು ಮತ್ತು ನಿರ್ಣಯಿಸಲು ಸಹಕರಿಸುತ್ತವೆ.

ಈ ಎರಡು ಸೂತ್ರಗಳೆಂದರೆ: ತನ್ನ ನಡತೆಯು ಯಾರ ಹಿತಕ್ಕೂ ಸಂಬಂಧಿಸಿದರೆ ತನ್ನ ಹಿತಕ್ಕಷ್ಟೇ ಸಂಬಂಧಿಸಿದ್ದರೆ ವ್ಯಕ್ತಿಯು ಸಮಾಜಕ್ಕೆ ಜವಾಬುದಾರನಲ್ಲ. ಇದು ಒಂದನೆಯದು. ಇತರರ ಹಿತಕ್ಕೆ ಬಾಧೆಯನ್ನು ತರುವ ನಡತೆಯಲ್ಲಿ ವ್ಯಕ್ತಿಯು ಜವಾಬುದಾರನಾಗಿರುವನಲ್ಲದೆ ಸಮಾಜವು ತನ್ನ ರಕ್ಷಣೆಗೆ ಅವಶ್ಯಕವೆಂದು ನಿರ್ಧರಿಸುವ ಮಟ್ಟಿಗೆ ಸಾಮಾಜಿಕ ಇಲ್ಲವೆ ಕಾಯದೆಬದ್ಧ ದಂಡನೆಗೆ ಅರ್ಹನು. ಮತ್ತೊಬ್ಬರ ಹಿತಗಳಿಗೆ ಧಕ್ಕೆ ತಗಲಿತೆಂಬ ಅಥವಾ ತಗಲಬಹುದೆಂಬ ಕಾರಣವೊಂದರಿಂದಲೆ ಸಮಾಜವು ಕೈಹಾಕಬಹುದಾದುದು ಸಮರ್ಥನೀಯವೆನಿಸಿದರೂ ಅಂತಹ ನಿಯಂತ್ರಣವು ಯಾವಾಗಲೂ ಅಗತ್ಯವೆಂಬುದನ್ನು ಯಾವ ಕಾರಣಕ್ಕೂ ತಿಳಿಯಬಾರದು. ಬಹುಸಂದರ್ಭಗಳಲ್ಲಿ ವ್ಯಕ್ತಿಯು ತನಗೆ ಉಚಿತವಾದ ಹಿತವನ್ನು ಸಾಧಿಸುವುದರಲ್ಲಿ ಅಷ್ಟೇ ಔಚಿತ್ಯಪೂರ್ಣವಾಗಿ ನೋವನ್ನೊ ಇಲ್ಲವೆ ಹಾನಿಯನ್ನೊ ಉಂಟುಮಾಡಬಹುದು; ಅಥವಾ ಅವರು ಬಹುಶಃ ಸಾಧಿಸಬಹುದಿದ್ದ ಹಿತಕ್ಕೆ ಅಡ್ಡಿ

---

* ಮಿಲ್ಲನು ಮೂಲಲೇಖನದಲ್ಲಿ ಅನೇಕ ದೃಷ್ಟಾಂತಗಳನ್ನು ಬಹುವಿವರವಾಗಿ ಚರ್ಚಿಸಿದ್ದಾನೆ. ಅವನು ಅಂದು ಎತ್ತಿ ತೋರಿಸಿದ ಕೆಲವು ಸಂದರ್ಭಗಳು ಇಂದು ಉಳಿದಿಲ್ಲವಾದುದರಿಂದಲೂ ಇದ್ದರೂ ಅವುಗಳ ಕಾವು ಉಡುಗಿಹೋಗಿರುವುದರಿಂದಲೂ ಅವುಗಳನ್ನು ಬಿಟ್ಟುಕೊಟ್ಟು, ಪ್ರಮುಖವೆಂದೆನಿಸಿದ ಹಾಗೂ ಇಂದಿಗೂ ವಿವಾದಾತ್ಮಕವಾಗಿಯೇ ಉಳಿದುಕೊಂಡಿರುವ ಕೆಲವು ಉದಾಹರಣೆಗಳ ಸಂಗ್ರಹಾನುವಾದ ಮಾಡಿದೆ.

–ಅನುವಾದಕರು

ಬರಬಹುದು. ವ್ಯಕ್ತಿಗಳ ಹಿತಗಳಲ್ಲಿ ಈ ರೀತಿಯ ವಿರೋಧವು ತೋರುವುದು. ಅಸಮರ್ಪಕ ಸಾಮಾಜಿಕ ಸಂಸ್ಥೆಗಳಿರುವುದರಿಂದ; ಕೆಲವು ಮಟ್ಟಿನ ವಿರೋಧವಂತೂ ಯಾವುದೇ ಸಂಘ–ಸಂಸ್ಥೆಗಳಲ್ಲಿಯೂ ತಪ್ಪಿದ್ದಲ್ಲ. ಯಾರೇ ಆಗಲಿ ಬಹುಜನರಿಂದ ವೃತ್ತಿಯೊಂದರಲ್ಲಿ ಮೇಲ್ಮೆಯನ್ನು ಸ್ಥಾಪಿಸುವರೋ ಇಲ್ಲವೆ ಪರೀಕ್ಷಾ ಸ್ಪರ್ಧೆಗಳಲ್ಲಿ ಯಶಸ್ವಿಗಳಾಗುವರೋ ಇಲ್ಲವೆ ಹಲವರು ಇಚ್ಛಿಸುವ ವಿಷಯದಲ್ಲಿ ಒಬ್ಬನನ್ನು ಮಾತ್ರ ಆರಿಸುವರೋ ಅವರು ಇತರರಿಗೆ ಹಾನಿ ನಿರಾಶೆಗಳು ಮತ್ತು ವ್ಯರ್ಥ ಶ್ರಮ ಆಗುವುದರಿಂದಲೆ ತಮ್ಮ ಹಿತವನ್ನು ಸಾಧಿಸಬಹುದು. ವ್ಯಕ್ತಿಗಳು ಅವರವರ ಹಿತಗಳನ್ನು ಈ ರೀತಿಯ ಪರಿಣಾಮಗಳಿಂದ ಧೃತಿಗೆಡದೆ ಸಾಧಿಸುವ ಕ್ರಮವು ಮನುಷ್ಯಕುಲದ ಶ್ರೇಯಸ್ಸಿಗೆ ಸಮ್ಮತವೆಂದು ಮಾನ್ಯತೆ ಪಡೆದಿದೆ. ಅಂದರೆ ಸಮಾಜವು ಈ ರೀತಿಯ ಹಾನಿಯುನ್ನು ಹೊಂದಿದ ಸ್ಪರ್ಧಾಳುಗಳಿಗೆ ಶಾಸನಿಕ ಅಥವಾ ನೈತಿಕ ಹಕ್ಕುಗಳಿವೆಯೆಂಬುದನ್ನು ಒಪ್ಪಿಕೊಳ್ಳಲಾರದು. ಎಲ್ಲಿ ಯಶಸ್ಸಿನ ಮಾರ್ಗವು ಸಾಮೂಹಿಕ ಹಿತಕ್ಕೆ ವಿರುದ್ಧವಿರುವದೋ (ಒಳಸಂಚು, ಬಲಾತ್ಕಾರ ಮತ್ತು ಕೃತ್ರಿಮಗಳೇ ಈ ವಿಧಾನಗಳು) ಅಂತಹ ಸನ್ನಿವೇಶಗಳಲ್ಲಿ ಸಮಾಜವು ಪ್ರವೇಶಿಸುವ ಅವಕಾಶವಿದೆ.

ಮತ್ತೊಂದು ಹೊಸ ಪ್ರಶ್ನೆ: ಅಪರಾಧವನ್ನಾಗಲಿ ಅಥವಾ ತಪ್ಪುಗಳನ್ನಾಗಲಿ ತಡೆಗಟ್ಟುವುದರಲ್ಲಿ ಎಷ್ಟರಮಟ್ಟಿಗೆ ವ್ಯಕ್ತಿಸ್ವಾತಂತ್ರ್ಯವನ್ನು ಸಮರ್ಪಕವಾಗಿ ಮೊಟಕುಮಾಡಬಹುದು? ಅಪರಾಧವನ್ನು ಎಸಗುವ ಪೂರ್ವದಲ್ಲಿಯೇ ಅದನ್ನು ತಡೆಯಲು ಬೇಕಾದ ಮುಂಜಾಗ್ರತೆಯ ಕ್ರಮಗಳನ್ನು ತೆಗೆದುಕೊಳ್ಳುವುದು ಸರಕಾರದ ಪ್ರಥಮ ಕರ್ತವ್ಯ. ಆದರೆ ಅನೇಕ ವೇಳೆ ಸ್ವಾತಂತ್ರ್ಯ ತತ್ವಕ್ಕೆ ಸರಕಾರದ ದಂಡವನ್ನು ವಿಧಿಸುವ ಕಾರ್ಯಗಳಿಗಿಂತ ತಡೆಗಟ್ಟುವ ಕಾರ್ಯವು ಹೆಚ್ಚು ಧಕ್ಕೆಯನ್ನುಂಟು ಮಾಡಬಹುದು. ಯಾಕಂದರೆ ಯಾವುದೇ ಒಂದು ರೀತಿಯು ಅಪರಾಧ ಹೆಚ್ಚುವುದಕ್ಕೆ ಅವಕಾಶವನ್ನೊದಗಿಸುವುದೆಂದು ವ್ಯಕ್ತಿಯ ಕ್ರಿಯಾಸ್ವಾತಂತ್ರ್ಯದ ಯಾವುದೇ ಭಾಗವನ್ನಾದರೂ ಸಮಂಜಸ ರೀತಿಯಲ್ಲಿ ಕೈಮಾಡಿ ತೋರಿಸಬಹುದು. ಇಷ್ಟಾದರೂ ಸರಕಾರವೊ ಖಾಸಗಿ ವ್ಯಕ್ತಿಯೊ ಯಾರಾದರೂ ಅಪರಾಧವನ್ನೆಸಗಲು ಸಿದ್ಧತೆ ನಡೆಸುತ್ತಿರುವುದನ್ನು ಕಂಡರೆ ಅಪರಾಧವು ನಡೆಯಲ್ಪಡುವವರೆಗೂ ತೆಪ್ಪಗೆ ನೋಡುತ್ತಿರಬೇಕಿಲ್ಲ; ಬದಲಾಗಿ ಅದನ್ನು ತಡೆಗಟ್ಟಲು ಮಧ್ಯೆ ಪ್ರವೇಶಿಸಬಹುದು. ಉಪಟಳದ ಹೆದರಿಕೆ ಮಾತ್ರ ಇರುವಲ್ಲಿ ಇಚ್ಛಿತ ಕೃತಿಯನ್ನು ಮಾಡುವ ಅಥವಾ ಬಿಡುವ ನಿರ್ಣಯವನ್ನು ಕೈಕೊಳ್ಳಲು ಸಂಬಂಧಿಸಿದ ವ್ಯಕ್ತಿಯೇ ಸಮರ್ಥನು; ಇಂತಹ ಸಂದರ್ಭಗಳಲ್ಲಿ (ಅವನು ಮಗುವೋ, ಹುಚ್ಚನೋ ಇಲ್ಲವೆ ಉದ್ರಿಕ್ತನೋ ಆಗಿರದಿದ್ದರೆ) ಮುಂಬರುವ ಅಪಾಯವನ್ನು ಸಂಬಂಧಿಸಿದ ವ್ಯಕ್ತಿಯ ಗಮನಕ್ಕೆ ತರಬೇಕು; ಆದರೆ ಅದಕ್ಕೆ ಎದುರಾಗದಂತೆ ಬಲಾತ್ಕಾರದಿಂದ ತಡೆಯಕೂಡದು.

ಪೂರ್ವಸೂಚನೆಗಳನ್ನೊ ಸಿದ್ಧತೆಗಳನ್ನೊ ಕೈಕೊಳ್ಳುವುದರ ಮೂಲಕ ತನ್ನ ವಿರುದ್ಧವಾಗಿರಬಹುದಾದ ಅಪರಾಧಗಳನ್ನು ನಿವಾರಿಸಿಕೊಳ್ಳಲು ಸಮಾಜಕ್ಕೆ ಸ್ವತಃಸಿದ್ಧಹಕ್ಕು

ಇದೆಯೆಂಬುದು ಕೇವಲ ಸ್ವಹಿತಾರ್ಥ ದುರ್ನಡತೆಯನ್ನು ತಡೆಗಟ್ಟುವುದರಿಂದ ಇಲ್ಲವೆ ದಂಡಿಸುವುದರಿಂದ ಯೋಗ್ಯವಾಗಿ ನಿಯಂತ್ರಿಸಲು ಸಾಧ್ಯವಿಲ್ಲವೆಂಬ ಸೂತ್ರದ ಅಲ್ಪವ್ಯಾಪ್ತಿಯನ್ನು ಎತ್ತಿತೋರಿಸುತ್ತದೆ. ಉದಾಹರಣೆಗಾಗಿ, ಸಾಮಾನ್ಯ ಪ್ರಕರಣಗಳಲ್ಲಿ ಮದ್ಯಪಾನ ಮಾಡಿ ಮತ್ತೇರುವುದು ಶಾಸನಿಕ ಕ್ರಮಗಳನ್ನು ಕೈಕೊಳ್ಳುವುದಕ್ಕೆ ಯೋಗ್ಯ ವಿಷಯವಲ್ಲ; ಆದರೆ ಸೆರೆಕುಡಿದ ಅಮಲಿನಲ್ಲಿರುವಾಗ ಯಾವನೊಬ್ಬನು ಒಮ್ಮೆ ಎಸಗಿದ ಹಿಂಸಾತ್ಮಕ ಕೃತ್ಯಗಳಿಗೆ ದಂಡಿಸಲ್ಪಟ್ಟಿದ್ದರೆ ಅಂತಹ ವ್ಯಕ್ತಿಯನ್ನು ಅವನಿಗೇ ಸಂಬಂಧಿಸಿದಂತೆ ವೈಧಿಕ ನಿಯಂತ್ರಣಗಳಿಗೊಳಪಡಿಸಬೇಕೆಂಬುದು ನನಗೆ ಯೋಗ್ಯವಾಗಿಯೆ ಕಾಣುತ್ತದೆ. ಕುಡಿಯುವುದು ಇತರರಿಗೆ ತೊಂದರೆಯನ್ನುಂಟು ಮಾಡಲು ಪ್ರೇರೇಪಿಸುವಂತಾದರೆ, ಅದು ಇತರರ ವಿರುದ್ಧ ಮಾಡಿದ ಅಪರಾಧವೇ ಸರಿ. ಅದರಂತೆ ಸಾರ್ವಜನಿಕರಿಂದ ನೆರವನ್ನು ಸ್ವೀಕರಿಸುತ್ತಿರುವ ಇಲ್ಲವೆ ಒಪ್ಪಂದವೊಂದಕ್ಕೆ ಭಂಗಬರಬಹುದಾದ ಸಂದರ್ಭವನ್ನು ಹೊರತುಪಡಿಸಿದರೆ ಆಲಸ್ಯವು ಕಾನೂನುಬದ್ಧವಾದ ಶಿಕ್ಷೆಗೆ ವಿಷಯವಾಗಲಾರದು. ಆದರೆ ಸೋಮಾರಿತನದಿಂದಾಗಲಿ ಅಥವಾ ಮತ್ಯಾವ ಅನಿವಾರ್ಯವಲ್ಲದ ಕಾರಕದಿಂದಾಗಲಿ ಒಬ್ಬನು ಮತ್ತೊಬ್ಬರಿಗೆ ನೆರವೇರಿಸಲೇಬೇಕಾದ ಕಾನೂನುಬದ್ಧ ಕರ್ತವ್ಯಗಳನ್ನು ಮಾಡುವುದರಲ್ಲಿ ಅಯಶಸ್ವಿಯಾದರೆ ಅವುಗಳನು ಒತ್ತಾಯದ ಶ್ರಮದ ಮೂಲಕ ನೆರವೇರಿಸುವಂತೆ ಮಾಡುವುದು ದಬ್ಬಾಳಿಕೆಯೇನೂ ಅಲ್ಲ.

ಮತ್ತೊಂದು ಪ್ರಶ್ನೆ: ನಿಂದ್ಯವಾದ ವೈಯಕ್ತಿಕ ನಡತೆ ಒಬ್ಬನಲ್ಲಿದೆ– ಎಂದುಕೊಳ್ಳಿ. ಅದರಿಂದ ಅವನ ಮೇಲೆ ಮಾತ್ರ ದುಷ್ಪರಿಣಾಮ ಉಂಟಾಗುತ್ತದೆ– ಎಂದಿಟ್ಟುಕೊಳ್ಳಿ. ಅಂಥ ಸಂದರ್ಭದಲ್ಲಿ ವ್ಯಕ್ತಿಸ್ವಾತಂತ್ರ್ಯವನ್ನು ಗೌರವಿಸುವ ದೃಷ್ಟಿಯಿಂದ ಸಮಾಜವು ಅದರಲ್ಲಿ ತಲೆಹಾಕಲಿಲ್ಲ– ಎಂದು ಭಾವಿಸಿಕೊಳ್ಳಿ. ಆಗ ಆ ವ್ಯಕ್ತಿ ಏನು ಮಾಡಲು ಸ್ವತಂತ್ರ? ಮಿಕ್ಕವರು ಅವನ ನಿಂದ್ಯವೆಂದು ತಿಳಿಯಲಾದ ವರ್ತನೆಯನ್ನು ಪ್ರೋತ್ಸಾಹಿಸಲು ಅಥವಾ ನಿರುತ್ಸಾಹಿಸಲು ಸ್ವತಂತ್ರರೇ?

ಮೇಲಿನ ಪ್ರಕರಣದಲ್ಲಿ ವ್ಯಕ್ತಿಯು ಅಂಥ ನಡತೆಯನ್ನು ಇಟ್ಟುಕೊಳ್ಳಲೂ ಸ್ವತಂತ್ರ, ಬಿಡಲೂ ಸ್ವತಂತ್ರ; ಮಿಕ್ಕವರು ಅದನ್ನು ಕುರಿತು ಹಾಗೆ ಅಥವಾ ಹೀಗೆ ಅವನಿಗೆ ಬುದ್ಧಿವಾದವನ್ನು ಕೊಡಲೂ ಸ್ವತಂತ್ರರು. ಆದರೆ ಸಮಾಜವೂ ರಾಜ್ಯವೂ ನಿಂದ್ಯವೆಂದು ತಿಳಿದ ಯಾವುದಾದರೊಂದು ನಡತೆಯನ್ನು ಇನ್ನೊಬ್ಬನಲ್ಲಿ ಪ್ರೋತ್ಸಾಹಿಸುವುದರಿಂದಲೇ ಜೀವನ ಮಾಡುವ ಮನುಷ್ಯನ ನಡತೆ ಅನಿರ್ಬದ್ಧವಾಗಿರಬೇಕೆಂಬುದು ಯಾವಾಗಲೂ ಸಮರ್ಥನೀಯವೆನಿಸದು. ಅಂಥ ಪ್ರಸಂಗದಲ್ಲಿ ಸಾರ್ವಜನಿಕವಾಗಿ ಅಂಥ ದಂಧೆ ನಡೆಸುವುದನ್ನು ಮಾತ್ರ ರಾಜ್ಯವು ಪ್ರತಿಬಂಧಿಸಬೇಕು.

ಒಂದು ರಾಜ್ಯವು ತೆರಿಗೆ ಹೇರುವುದು ಹಾಗೇ ಸಮರ್ಥನೀಯ ಎಲ್ಲಿಯವರೆಗೆ? ಆ ರಾಜ್ಯಕ್ಕೆ ಅಷ್ಟು ಹಣವು ಬೇಕಾದುದು ನಿಜವೇ ಆದರೆ ಮಾತ್ರ. ಸಾರ್ವಜನಿಕ

ಕಾರ್ಯ ಸ್ಥಳಗಳಲ್ಲೂ ಹಾಗೇ ಪೋಲೀಸು ನಿಯಂತ್ರಣ ಅವಶ್ಯಕವಾಗಿರುತ್ತದೆ. ಏಕೆಂದರೆ ಸಮಾಜಕ್ಕೆ ಹಾನಿಯನ್ನೊದಗಿಸುವ ಸಂಭವ ಅಲ್ಲಿ ಹೆಚ್ಚು.

ವ್ಯಕ್ತಿಗಷ್ಟೇ ಸಂಬಂಧಿಸಿದ್ದೆಂಬ ವ್ಯವಹಾರದಲ್ಲಿ ವ್ಯಕ್ತಿಯು ಹೇಗೆ ಸ್ವತಂತ್ರನೋ ಹಾಗೇ ಒಂದು ಗುಂಪಿಗಷ್ಟೇ ಸಂಬಂಧಿಸಿದ್ದೆಂಬ ವ್ಯವಹಾರದಲ್ಲೂ ಆ ಗುಂಪೂ ಸ್ವತಂತ್ರ– ಆ ಗುಂಪಿನ ಸದಸ್ಯರಲ್ಲಿ ಪರಸ್ಪರ ಒಪ್ಪಂದವಿದ್ದಾಗ. ಅಂಥ ಒಪ್ಪಂದವು ಹೇಳುವ ಕೃತ್ಯವಾದರೂ ಸರ್ವಾಪೇಕ್ಷಣೀಯ, ಸರ್ವಸಹನೀಯ, ಯೋಗ್ಯ ಎನ್ನಿಸದೆ ಹೋದರೆ ಅಂಥ ಒಪ್ಪಂದಕ್ಕೆ ತಡೆಹಾಕಬಹುದು. ತನ್ನನ್ನು ಅನ್ಯರಿಗೆ ಮಾರಿಕೊಳ್ಳುವ ಒಪ್ಪಂದ ಆ ಬಗೆಯದು; ಅದು ಸ್ವಾತಂತ್ರ್ಯದ ಮಾರಾಟ; ಹೋದ ಸ್ವಾತಂತ್ರ್ಯ ಮತ್ತೆಂದೂ ಅವನಿಗೆ ಬರದು. ಅಂಥಲ್ಲಿ ಸ್ವಾತಂತ್ರ್ಯಸಿದ್ಧಾಂತವೇ ಮೂಲೋತ್ಪಾಟನ ಹೊಂದುವುದು. ಮೂರನೆಯ ಪಕ್ಷ ತಲೆಹಾಕದಿರುವ ಪರಸ್ಪರ ಒಪ್ಪಂದದಲ್ಲೂ ನಿರುಪಾಧಿಕವಾದ ಅಪರಿಹಾರ್ಯತೆಯಿರಕೂಡದು; ಸೋಪಾಧಿಕವಾದ ಕರ್ತವ್ಯನಿರ್ವಹಣವೂ ಇರಬೇಕು. ಹಣ–ವಿವಾಹಗಳ ಪರಸ್ಪರ ಬದ್ಧತೆಗಳು ಸೋಪಾಧಿಕವಾಗಿರುವುದು ಸಹಜ. ಕಾಲಪರಿಣಾಮ–ಭಾವನಾವ್ಯತ್ಯಾಸಗಳು ಅಂಥ ಉಪಾಧಿಗಳಾಗಿರುವುದು ಲೋಕಪ್ರಸಿದ್ಧ. ಭವಿಷ್ಯರೂಪಕವಾದ ತರ್ಕ–ನಿರೀಕ್ಷೆಗಳಿಗೆ ಅವಕಾಶ ಉಂಟಾಗುವಂತೆ ಇಬ್ಬರನ್ನು ಒಂದು ಒಪ್ಪಂದದಲ್ಲಿ ಪ್ರೋತ್ಸಾಹಿಸುತ್ತ ಬಂದವರ ನೈತಿಕ ಬಾಧ್ಯತೆಯನ್ನೂ ಅಲ್ಲಗಳೆಯಲಾಗದು. ಮೂರನೆಯವರ ಮೇಲೆ ಪರಿಣಾಮ ಉಂಟುಮಾಡುವ ಅಂಥ ಅನ್ಯೋನ್ಯ ಒಪ್ಪಂದಕ್ಕೂ ನಿಯಂತ್ರವಿರಬೇಕಾಗುತ್ತದೆ. ತಾಯ್ತಂದೆಗಳಿಗೆ ಮಕ್ಕಳ ಮೇಲಿರುವ ಅಧಿಕಾರವಿದಕ್ಕೆ ದೃಷ್ಟಾಂತ. ಆಶ್ರಯದಾತರಿಗೆ ಆಶ್ರಿತರ ಮೇಲಿರುವ ಅಧಿಕಾರಕ್ಕಾದರೂ ಮೇಲಿನ ಔಪಾಧಿಕ ನಿಯಂತ್ರಣವಿದೆ ಎಂಬುದನ್ನು ನೆನೆದುಕೊಳ್ಳಬೇಕು.

ಸಾಮಾನ್ಯವಾಗಿ ವ್ಯಕ್ತಿಗೆ ಸ್ವಾತಂತ್ರ್ಯ ಕೊಡಬೇಕಾದಲ್ಲಿ ಕೊಡದಿರುವುದೂ ಕೊಡಬಾರದಲ್ಲಿ ಕೊಡುವುದೂ ನಿತ್ಯವೂ ನಡೆಯುತ್ತಿರುವ ತಪ್ಪು. ಅನ್ಯರ ವ್ಯವಹಾರವು ತನ್ನದೇ ಎಂದು ವ್ಯವಹರಿಸುವ ಸ್ವತಂತ್ರವೃತ್ತಿಯವರ ನಡತೆ ಖಂಡನೀಯ. ಅಂಥ ಅನಾಹೂತ ಆಶ್ರಯದಾತರ ನಟನೆಯು ನಿವಾರ್ಯ. ಪತ್ನೀ–ಪುತ್ರಾದಿ ಆಶ್ರಿತರು ಅಭಿವೃದ್ಧಿಯ ಸಮಾನಾವಕಾಶದಾನವನ್ನು ರಾಜ್ಯವು ಗ್ಯಾರಂಟಿ ಕೊಡದೆ ಹೋದಲ್ಲಿ ಅವರ ಆಶ್ರಯದಾತೃಗಳು ಆಶ್ರಿತರ ಹಕ್ಕುಗಳನ್ನು ಅಧಿಕಾರಬಲದಿಂದ ದಮಿಸುವ ಸಂಭವವಿದೆ. ವಿದ್ಯಾದಾನದಲ್ಲಿ ಸರ್ವರಿಗೂ ಸಮಾನಾವಕಾಶವನ್ನು (ಫೀ ಕೊಡಲಾರದ ಬಡವನಿಗೂ ವಿದ್ಯೆ ಲಭಿಸುವಂತೆಸಗುವುದು) ಒದಗಿಸುವುದು ರಾಜ್ಯದ ಕರ್ತವ್ಯ. ಆದರೆ ಆ ವಿದ್ಯೆ ಇಂಥದೇ ಇರಬೇಕು, ಅದನ್ನು ಹೀಗೇ ಕಲಿಸಬೇಕು ಎನ್ನುವುದು ಅದರ ಕರ್ತವ್ಯವಲ್ಲ. ವ್ಯಕ್ತಿವೈಶಿಷ್ಟ್ಯವು ಪುರಸ್ಕಾರ್ಯವಾದಂತೆಯೇ ವಿದ್ಯಾವೈಶಿಷ್ಟ್ಯವೂ ವಿದ್ಯಾದಾನಪದ್ಧತಿಯ ವೈಶಿಷ್ಟ್ಯವೂ ವಿವಿಧತೆಯ ಸಿದ್ಧಿಗೆ ಅತ್ಯವಶ್ಯವಾದುದರಿಂದ ಪುರಸ್ಕಾರ್ಯ. ಚಾರಿತ್ರದ ವಿಶೇಷವು ಅನಿರ್ಬಾಧ್ಯವಾಗಿರುವಂತೆಯೇ ವಿದ್ಯಾಬೋಧನಗಳ

ವಿಶೇಷಗಳೂ ಅನಿರ್ಬಾಧ್ಯವಾಗಿರುವುದು ಸ್ವತಂತ್ರಜೀವನದ ಪದ್ಧತಿ ಹಿಡಿದ ಸಮಾಜಕ್ಕೆ ಮಾನ್ಯ. ಅನ್ಯನ ಮನಸ್ಸಿನ ಮೇಲೆ ಸರ್ವಾಧಿಕಾರ ನಡೆಸುವುದು ಒಬ್ಬನ ಶರೀರದ ಮೇಲೆ ಇನ್ನೊಬ್ಬನು ಸರ್ವಾಧಿಕಾರ ನಡೆಸುವುದರ ಪೀಠಿಕೆ. ವಿದ್ಯೆಯ ಸ್ವರೂಪವನ್ನೂ ಪ್ರಸಾರಕ್ರಮವನ್ನೂ ಸರಕಾರವು ನಿಯಂತ್ರಿಸಹೋದರೆ ಉಕ್ತ ದುಷ್ಪರಿಣಾಮಕ್ಕೆ ಕಾರಣವಾಗುತ್ತದೆ. ಅತ್ಯಂತ ಹಿಂದುಳಿದ ಜನಗಳಿಂದ ತುಂಬಿದ ರಾಜ್ಯವೊಂದು ಈ ವಿದ್ಯಾ ಸ್ವಾತಂತ್ರ್ಯ ಸಿದ್ಧಾಂತಕ್ಕೆ ಕೆಲ ಕಾಲ ಅಪವಾದವೆನಿಸೀತು; ಸ್ವತಂತ್ರ ವಣಿಗ್ಜನರಿಲ್ಲದಲ್ಲಿ ಸಂಯುಕ್ತ ಸಂಗ್ರಹ ಕಂಪನಿಗಳಿಗೆ (Joint stock companies) ವ್ಯಾಪಾರೋದ್ಯಮಗಳನ್ನು ನಡೆಸಿಕೊಟ್ಟ ಹಾಗೆ!

ಚರ್ಚಾಸ್ಪದವಾದ ವಿದ್ಯೆಗಳ ಬಗ್ಗೆ ನಾಗರಿಕರು ಬರುವ ನಿಗಮನಗಳಲ್ಲಿ ಸರಕಾರವು ತನ್ನ ಪೂರ್ವಗ್ರಹವನ್ನು ಹೇರುವುದು ತಪ್ಪು. ಆದರೆ ಲಕ್ಷ್ಯ ಹಾಕಲು ಯೋಗ್ಯವಾದ ನಿಗಮನಗಳಿಗೆ ಬರಲು ತಕ್ಕ ಜ್ಞಾನ ಒಬ್ಬನಿಗಿದೆಯೋ ಇಲ್ಲವೋ ಎಂಬುದನ್ನು ನಿರ್ಧರಿಸಿ ಸಾರಲು ಅದು ಮುಂದೆ ಬರುವುದು ತಪ್ಪಲ್ಲ. ಆಸ್ತಿಕ ಮತಧರ್ಮಗಳಲ್ಲಿ ನಂಬಿಗೆಯಿಲ್ಲದೆಯೇ ಅವಕ್ಕೆ ಸಂಬಂಧಿಸಿದ ಪರೀಕ್ಷೆಗಳಲ್ಲಿ ಪಾಸಾಗಬಹುದು. ವಿದ್ಯೆಯ ಉಚ್ಚಮಟ್ಟದಲ್ಲಿ ಎಲ್ಲ ಪರೀಕ್ಷೆಗಳೂ ಐಚ್ಛಿಕವಾಗಿರುವುದೊಳ್ಳೆಯದು. ಡಿಗ್ರಿ–ಡಿಪ್ಲೊಮಾ ಪರೀಕ್ಷೆಗಳಿಗೆ ಯಾರಾರೂ ಕೂತುಕೊಳ್ಳುವಂತಿರಬೇಕು. ಅವೆಂದೂ ಉದ್ಯೋಗಾರ್ಹತೆಗಳೆಂದು ಸರಕಾರದ ಮನ್ನಣೆ ಪಡೆಯಕೂಡದು. ಆಗ ಮಾತ್ರ ನಿಗಮನಗಳಲ್ಲಿ ಪಾತ್ರಾಪಾತ್ರ ವಿವೇಕವನ್ನು ವಿವೇಕಿಗಳಾದರೂ ಪಾಲಿಸಲು ಸಾಧ್ಯವಾದೀತು.

ತಾವು ಮಿತಿಮೀರಿದ ಜನಸಂಖ್ಯೆಯುಳ್ಳ ಒಂದು ದೇಶದ ನಿವಾಸಿಗಳಾಗಿರುವಾಗ ಶ್ರಮಿಕರಲ್ಲಿ ಸ್ಪರ್ಧೆಯುಂಟಾಗಿ ಶ್ರಮದ ಬೆಲೆಯು (=ಪ್ರತಿಫಲವು) ಇಳಿದುಹೋಗುವ ಪರಿಣಾಮವುಂಟಾಗುತ್ತಿರುವಾಗ, ಯಾರು ಪರಿಮಿತ ಸಂತತಿಗಿಂತ ಹೆಚ್ಚಿನ ಸಂತತಿಗಳಿಗೆ ಕಾರಣರಾಗುವರೋ ಅವರು ಆಯಾ (ಶಾರೀರಿಕ–ಬೌದ್ಧಿಕ) ಶ್ರಮಾವಲಂಬಿಗಳಿಗೆ ಅನ್ಯಾಯವನ್ನುಂಟುಮಾಡಿದಂತೆಯೇ ಸರಿ. ಕುಟುಂಬ ನಿರ್ವಹಣ ಶಕ್ತಿಯಿಲ್ಲದವರಿಗೆ ಮದುವೆಯಾಗಲು ಬಿಡದಿರುವ ಕಾಯದೆ ಆಕ್ಷೇಪಾರ್ಹವಾಗದು; ಆದರೆ ಅದು ಅವ್ಯವಹಾರ್ಯವಾದರೆ ಆ ಮಾತು ಬೇರೆ.*

ವ್ಯಕ್ತಿಸ್ವಾತಂತ್ರ್ಯ–ಸಂಘಸ್ವಾತಂತ್ರ್ಯಗಳಿಗೆ ನೇರವಾಗಿ ಧಕ್ಕೆಯುಂಟಾಗದಿರುವ ಸಂದರ್ಭಗಳಲ್ಲೂ ಸರಕಾರ ತಲೆಹಾಕುವುದು ಆಯುಕ್ತವೆನಿಸುವ ಪ್ರಕರಣಗಳಿಂತಿವೆ:

---

೨ ಯಾವುದೇ ರೀತಿಯ ಸಮತಾವಾದೀ ಸಮಾಜವೂ ಈ ಬಗೆಯ ಸಿದ್ಧಾಂತವನ್ನು ಪುರಸ್ಕರಿಸದು. – ಅನುವಾದಕರು

ಸರಕಾರಕ್ಕಿಂತ ವ್ಯಕ್ತಿಗಳೇ ಚೆನ್ನಾಗಿ ನಿರ್ವಹಿಸಬಲ್ಲರು ಎಂದು ತೋರುವ ಕಾರ್ಯಗಳನ್ನು ಸರಕಾರ ಅಥವಾ ರಾಜ್ಯವು ವಹಿಸಿಕೊಳ್ಳುವುದು ಆಕ್ಷೇಪಾರ್ಹ. ವೈಯಕ್ತಿಕ ಆಸ್ಥೆಯು ಕಾರ್ಯವನ್ನು ನಿರ್ವಹಿಸುವಷ್ಟು ಚೆನ್ನಾಗಿ ಸಾಮೂಹಿಕ ಆಸ್ಥೆಯು ಕೆಲಕಾರ್ಯಗಳನ್ನು ನಿರ್ವಹಿಸಲಾರದು. ಆದರಿದು ರಾಜಕೀಯ ಅರ್ಥಶಾಸ್ತ್ರಜ್ಞರಿಗೆ ಸೇರಿದ ವಿಷಯ, ಇಲ್ಲಿ ಅಪ್ರಸ್ತುತ.

ವ್ಯಕ್ತಿಗಳ ಮಾನಸಿಕ ಶಿಕ್ಷಣದ ಉದ್ದೇಶದಿಂದ ವ್ಯಕ್ತಿಗಳು ಚೆನ್ನಾಗಿ ಮಾಡರೆಂದು ಕಂಡುಬಂದ ಕೆಲ ಸರಕಾರಿ ಕೆಲಸಗಳನ್ನು ಅವರಿಗೆ ಬಿಟ್ಟು ಕೊಡಬಾರದೆಂಬುದು ಅಯುಕ್ತವಾಗುತ್ತದೆ–ಎಂಬುದು ಎರಡನೆಯದು. ಸ್ವತಂತ್ರವೂ ಜನಪ್ರಿಯವೂ ಆದ ಸ್ಥಳೀಯ ಹಾಗೂ ನಗರಪಾಲನೆಯ ಸಂಸ್ಥೆಗಳ ಕಾರ್ಯಕ್ಷೇತ್ರ; ಸ್ವಯಂಸ್ಫೂರ್ತಿಯ ಔದ್ಯಮಿಕ ಹಾಗೂ ದಾನಧರ್ಮದ ಖಾಸಗಿಕ್ಷೇತ್ರ, ಇವು ನೇರವಾಗಿ ಸ್ವಾತಂತ್ರ್ಯದ ಪ್ರಶ್ನೆಗೆ ಸಂಬಂಧಿಸಿಲ್ಲ; ಪ್ರಧಾನತ; ಇವು ಅಭಿವೃದ್ಧಿಗೆ ಸಂಬಂಧಿಸಿವೆ. ಜನರಿಗಿವು ಕುಟುಂಬಸ್ವಾರ್ಥ ಹಾಗೂ ಅಸಹಕಾರಿ ಮನೋಭಾವಗಳನ್ನು ಬಿಡಲು ಕ್ರಮೇಣ ಕಲಿಸುವವು. ನಿಃಸ್ವಾರ್ಥ ಹಾಗೂ ಸಹಕಾರಗಳ ಅಭ್ಯಾಸ ಜನರಲ್ಲಿ ಬೆಳೆಯದೆ ಸ್ವತಂತ್ರ ಸಂವಿಧಾನವಾವುದೂ ರಕ್ಷಿತವಾಗದು, ಉಪಯುಕ್ತವಾಗದು. ಸ್ಥಳೀಯ ಸಹಕಾರ ಮತ್ತು ಸಾಂಘಿಕ ಪ್ರಯತ್ನಗಳಿಂದ ವ್ಯಾಪಾರೋದ್ಯಮಗಳು ನಡೆಯುವುದರಿಂದ ಅಭಿವೃದ್ಧಿಯ ವ್ಯಕ್ತಿವೈಶಿಷ್ಟ್ಯವೂ ಚಟುವಟಿಕೆಯ ಮಾದರಿಗಳ ವೈವಿಧ್ಯವೂ ಸಿದ್ಧಿಸುತ್ತವೆ. ಸರಕಾರದ ಕಾರ್ಯಗಳಲ್ಲಿ ವೈಶಿಷ್ಟ್ಯವಿರದು; ಅದು ಎಲ್ಲೆಡೆಯಲ್ಲೂ ಒಂದೇ ಮಾದರಿಯನ್ನು ನಿರ್ಮಿಸುತ್ತದೆ. ವಿವಿಧ ಪ್ರಯೋಗಗಳಲ್ಲಿ ಲಭ್ಯವಾಗುವ ಅನುಭವಗಳ ಪ್ರಸಾರಕೇಂದ್ರವಾಗುವ ಹೊಣೆ ರಾಜ್ಯದ್ದು. ಉಳಿದವರ ಪ್ರಯೋಗಗಳಿಗವಕಾಶಕೊಡದೆ ತನ್ನ ಪ್ರಯೋಗಗಳಷ್ಟನ್ನೇ ಮಾಡುತ್ತ ಹೋಗುವುದು ಸರಕಾರಕ್ಕೆ ಹೇಳಿಸಿದ್ದಲ್ಲ. ಅದು ಪ್ರತಿಯೊಬ್ಬ ಪ್ರಯೋಗಿಗೂ ಮಿಕ್ಕ ಪ್ರಯೋಗಿಗಳ ಅನುಭವದ ಲಾಭವನ್ನು ದೊರಕಿಸಿಕೊಡುವುದರಲ್ಲಿ ಸಾರ್ಥಕ್ಯ ಹೊಂದಬಲ್ಲುದು.

ತನ್ನ ಅಧಿಕಾರವ್ಯಾಪ್ತಿಯನ್ನು ಸರಕಾರವೊಂದು ಅನವಶ್ಯಕವಾಗಿ ಹೆಚ್ಚಿಸುತ್ತ ಹೋಗುವುದು ಅಯುಕ್ತ– ಎಂಬುದು ಮೂರನೆಯ ಅಂಶ. ಅದರಿಂದ ಜನರ ಮೇಲಿನ ಅದರ ಪ್ರಭಾವ ವಿಸ್ತಾರವಾಗುತ್ತ ಹೋಗಿ, ಅವರ ಅನೇಕಾನೇಕ ಆಶೆ–ಅಂಜಿಕೆಗಳ ಮೇಲೆ ಅದರ ನಿಯಂತ್ರಣ ಹಬ್ಬಿ, ಮಹತ್ವಾಕಾಂಕ್ಷಿಗಳಾದ ಪ್ರಜೆಗಳು ಸರಕಾರಕ್ಕೆ ಬೆಣ್ಣೆ ಹೊಸೆಯುವ ಪ್ರವೃತ್ತಿಯನ್ನು ಹೆಚ್ಚಿಸುತ್ತದೆ ಅಥವಾ ಅವರೇ ಸರಕಾರವಾಗಿ ತಮ್ಮನ್ನು ಮಾರ್ಪಡಿಸಿಕೊಳ್ಳಲು ಹವಣಿಸುವ ಪ್ರವೃತ್ತಿಯನ್ನು ಬೆಳೆಸುತ್ತದೆ. ರಸ್ತೆ, ರೈಲ್ವೆ, ಬ್ಯಾಂಕು, ವಿಮೆ, ಸಂಯುಕ್ತಸಂಗ್ರಹ ಕಂಪನಿ, ವಿಶ್ವವಿದ್ಯಾನಿಲಯ, ಸಾರ್ವಜನಿಕ ದಾನಧರ್ಮ, ನಗರಪಾಲನ, ಸ್ಥಳೀಯ ಸಂಘ ಮುಂತಾದವೆಲ್ಲಾ ಸರಕಾರಿ ಇಲಾಖೆಗಳಿಗೇ ಸೇರಿ ಹೋದರೆ, ಅವುಗಳ ನೌಕರರಿಗೆಲ್ಲಾ ಸಂಬಳ ಕೊಡುವ ಒಡೆಯ

ಸರಕಾರವೇ ಆದರೆ, ಜೀವನಮಟ್ಟ ಏರುವ ಪ್ರತಿಯೊಂದು ಅಂಶಕ್ಕಾಗಿಯೂ ಜನರು ಸರಕಾರದ ಮುಖವನ್ನೇ ನೋಡುತ್ತ ಕುಳಿತುಕೊಳ್ಳಬೇಕಾಗಿ ಬರುತ್ತದೆ. ಆಗ ಪತ್ರಿಕಾಸ್ವಾತಂತ್ರ್ಯದಿಂದಾಗಲಿ, ಜನಪ್ರಿಯ ಸಂವಿಧಾನದಿಂದಾಗಲಿ ಯಾವ ದೇಶವನ್ನೂ ನಿಜವಾಗಿ ಸ್ವತಂತ್ರ ರೂಪದಲ್ಲಿ ಉಳಿಸಬರದು. ಅಂಥ ದೇಶದ ಸ್ವಾತಂತ್ರ್ಯ ಕೇವಲ ನಾಮ್‌ಕೇ ವಾಸ್ತೇ. ಉಕ್ತ ಕರ್ತವ್ಯಗಳನ್ನು ಹೆಚ್ಚು ಹೆಚ್ಚು ದಕ್ಷತೆಯಿಂದ ಸರಕಾರವೊಂದು ನೆರವೇರಿಸುತ್ತ ಹೋದ ಹಾಗೂ ಜನರ ಹಸುಗೂಸುತನ ವೃದ್ಧಿಯಾಗುತ್ತ ಹೋಗುತ್ತದೆ. ದೇಶದ ಅತ್ಯುನ್ನತ ಮಟ್ಟದ ಪ್ರತಿಭಾವಂತರೆಲ್ಲರನ್ನೂ ಮೇಲೆ ಹೇಳಿದ ವಿಸ್ತೃತ ಕಾರ್ಯ ಶಾಖೆಗಳಲ್ಲಿ ಸರಕಾರವು ನಿಯೋಜಿಸಿಕೊಳ್ಳುತ್ತ ಹೋದರೆ, ಸಾಮಾಜಿಕ ಸಂಘಟನೆಯಿಂದಾಗಬೇಕಾದ ಮಹತ್ಕಾರ್ಯಗಳೆಲ್ಲವನ್ನೂ ಸರಕಾರವೇ ಕೈ ಕೊಂಡರೆ, ನೌಕರರ ಮಹಾಸಾಗರವೊಂದು ಉದ್ಭವಿಸುತ್ತದೆ; ಶುದ್ಧ ದಲಾಲಗಿರಿಯ ವ್ಯಾಪಾರೀ ತರ್ಕ (Speculation) ಬೇಕಾಗುವ ಕ್ಷೇತ್ರವೊಂದನ್ನುಳಿದು ಮಿಕ್ಕ ಎಲ್ಲಾ ಕ್ಷೇತ್ರಗಳಲ್ಲೂ ನೌಕರಶಾಹಿ ಮೆರೆದಾಡುತ್ತದೆ; ಆಗ ಸರಕಾರಿ ನೌಕರರಲ್ಲದ ಎಲ್ಲ ಪ್ರಜೆಗಳೂ ಎಲ್ಲವುದಕ್ಕೂ ನೌಕರರ ಕೈಬಾಯಿಗಳನ್ನು ಚಾತಕ ಪಕ್ಷಿಗಳಂತೆ ಹಾರಯಿಸುತ್ತ ಕುಳಿತುಕೊಳ್ಳುವ ಪರಿಸ್ಥಿತಿಯುಂಟಾಗುತ್ತದೆ. ನೌಕರಜಾತಿಯಲ್ಲಿ ಸೇರಿಕೊಂಡು ಮುಂದಕ್ಕೆ ಬರುವುದೊಂದೇ ಮಹತ್ವಾಕಾಂಕ್ಷಿಗಳ ಮಹತ್ವಾಕಾಂಕ್ಷೆಯಾಗಿ ಬಿಡುತ್ತದೆ. ಇಂಥ ಆಳ್ವಿಕೆಯಲ್ಲಿ ಸರಕಾರ ಮಾಡುವ ಯಾವ ಕಾರ್ಯಕ್ಕೂ ನೌಕರೇತರರು ಅಪಾತ್ರರೆನಿಸುವುದಲ್ಲದೆ, ಅನುಭವವಿಲ್ಲದುದರಿಂದ ಅದರ ಕಾರ್ಯವನ್ನು ವಿಮರ್ಶಿಸಲು ಹಾಗೂ ತಡೆಯಲು ಅವರೆಲ್ಲರೂ ಅಸಮರ್ಥರೆಂದಾಗುವುದು; ಮತ್ತು ಎಲ್ಲಾದರೂ ಒಮ್ಮೆ ಸಾರ್ವಜನಿಕ ಸಂಘಸಂಸ್ಥೆಗಳು ಉತ್ತಮ ಸುಧಾರಣೆಯೊಂದನ್ನು ಸೂಚಿಸುವ ಮಟ್ಟಕ್ಕೇರಿದಾಗಲೂ ಸುಧಾರಣಾಪರರಾದ ಆಳರಸನಾದರೂ ತನ್ನ ನೌಕರರಿಗದು ಬೇಡವೆಂದಾದರೆ ಅದನ್ನು ಅಮಲಿನಲ್ಲಿ ತರಲಾರರು. ರಶಿಯದ ಝಾರ್‌ಮಹಾಶಯನ ಸಾಮ್ರಾಜ್ಯವು ಈ ದುಃಸ್ಥಿತಿಗೆ ತಕ್ಕ ಉದಾಹರಣೆ.

ಆದುದರಿಂದ ಸರ್ವದಕ್ಷರ ಸಂಗ್ರಹವನ್ನು ಸರಕಾರವೇ ಮಾಡಿಟ್ಟುಕೊಳ್ಳ ಹೊರಟು, ತನ್ನ ಕಾರ್ಯಕ್ಷೇತ್ರವನ್ನು ಸರ್ವಗ್ರಹವನ್ನಾಗಿ ಮಾಡತೊಡಗಿದರೆ, ಪ್ರಜೆಗಳ ಮಾನಸಿಕ ಚಟುವಟಿಕೆಯೂ ಪ್ರಗತಿಶೀಲವೂ ಮಸುಳಿಸಿಹೋಗುತ್ತದೆ. ನೌಕರಯಂತ್ರವು ಉದಾಸೀನ ಗತಿಯಿಂದ ಚಕ್ರಾರಪಂಕ್ತಿಯಂತೆ ತಿರುಗಿ ಅದಕ್ಷರೀತಿಯಿಂದ ಕಾರ್ಯಮಾಡುತ್ತ ಹೋಗುತ್ತದೆ. ಆಗ ಅದಕ್ಕೆ ಸಮಬಲವಾಗಿ ನಿಂತು ಪ್ರಬುದ್ಧ ವಿಮರ್ಶೆಯ ಚಾಟಿಏಟು ಕೊಟ್ಟು ಚುರುಕು ಮಾಡಲು ಸಾರ್ವಜನಿಕ ವ್ಯಕ್ತಿ ಅಥವಾ ಗುಂಪುಗಳು ಉಳಿದೇ ಇರುವುದಿಲ್ಲ. ದೊಡ್ಡ ದೊಡ್ಡ ವ್ಯಾವಹಾರಿಕ ಆರಂಭಗಳನ್ನೆಸಗುವ, ಅವಕ್ಕೆ ಅವಕಾಶ ಒದಗಿಸುವ ಮತ್ತು ಅವನ್ನು ಸರಿಯಾಗಿ ಬೆಲೆ ಕಟ್ಟುವ ಸರಕಾರೇತರ ಸಾಧನಗಳು ಇರುವಂತೆ ನೋಡಿಕೊಳ್ಳುವುದು ನಾಗರಿಕತೆಯ ಪ್ರಗತಿಯ ದೃಷ್ಟಿಯಿಂದ ಅಗತ್ಯವಲ್ಲವೆ? ಈ ಅಗತ್ಯವನ್ನು ಪೂರೈಸದಿದ್ದರೆ ನೌಕರಶಾಹಿಯು ಪಂಡಿತಂಮನ್ಯರ ಪ್ರಭುತ್ವವಾಗಿ ಪರಿಣಮಿಸದೆ ಹೋಗದು.

ಮೇಲೆ ಹೇಳಿದಂಥ ದುಃಸ್ಥಿತಿಯಿಂದ ದೂರವಿರಬೇಕಾದರೆ ದಕ್ಷತೆಗೆ ಭಂಗಬರದಂತೆ ಅಧಿಕಾರದ ವಿಕೇಂದ್ರೀಕರಣವನ್ನು ಪರಮಾವಧಿಯವರೆಗೆ ಸಾಧಿಸಬೇಕು ಮತ್ತು ಸಮಾಚಾರಗಳ ಸಂಗ್ರಹವನ್ನೂ ಅವುಗಳ ವಿಸ್ತರಣವನ್ನೂ ಕೇಂದ್ರಸರಕಾರವು ಶಕ್ತಿಮೀರಿ ನಡೆಸಬೇಕು. ಪ್ರತಿಯೊಂದು ಸ್ಥಳೀಯ ವ್ಯವಹಾರಗಳ ಶಾಖೆಯಲ್ಲೂ ಕೇಂದ್ರದ ಮೇಲ್ವಿಚಾರಕ ವರ್ಗವೊಂದಿರಬೇಕು. ಕೇಂದ್ರದ ಈ ಮೇಲ್ವಿಚಾರಕ ಶಾಖೆಯು ಬೇರೆ ಬೇರೆ ಸ್ಥಳಗಳಲ್ಲಿ ಪಡೆದ ಕಾರ್ಯಪಾಲಿಕಾನುಭವಗಳನ್ನು ಮಿಕ್ಕವರಿಗೆ ಒದಗಿಸಿ ಕೊಡುವ ಕರ್ತವ್ಯವನ್ನು ನಿರ್ವಹಿಸಬೇಕು.

ವ್ಯಕ್ತಿಯ ಪ್ರಯಾಸ–ಪ್ರಯತ್ನಗಳನ್ನೂ ಅಭಿವೃದ್ಧಿಯನ್ನೂ ತಡೆಹಿಡಿಯದೆ, ಪ್ರಚೋದಿಸುವ ಹಾಗೂ ನೆರವಾಗುವಂತಹ ಕಾರ್ಯಗಳನ್ನು ಒಂದು ಸರಕಾರವು ಅತ್ಯಧಿಕ ಪ್ರಮಾಣದಲ್ಲಿ ನಡೆಸಲಾರದು. ವ್ಯಕ್ತಿ ಹಾಗೂ ಸಂಘಗಳ ಸ್ವಯಂಸ್ಫೂರ್ತ ಚಟುವಟಿಕೆಗಳನ್ನು ಬೆಳಕಿಗೆ ತರಲು ಸರಕಾರವು ಪ್ರಚೋದನೆ ಕೊಡಲಾರದು. ಅದರ ಬದಲು ಕೈದಿಗಳಂತೆ ಅವರಿಂದ ಕೆಲಸ ತೆಗೆದುಕೊಳ್ಳುತ್ತದೆ. ಏಕೆಂದರೆ ಅದಕ್ಕೆ ಸಲಹೆಕೊಡುವ ಮತ್ತು ಸಮಯ ಬಂದರೆ ವಿರುದ್ಧವಾಗಿ ಟೀಕಿಸುವ ಶಕ್ತಿಯಿಲ್ಲ. ಅದು ಕೆಲಸ ಮಾಡಿಸುವುದೆಂದರೆ ವ್ಯಕ್ತಿ–ಸಂಘಗಳಿಗೆ ಬದಲಾಗಿ ಅವರಿಂದ ತನ್ನ ಕೆಲಸವನ್ನದು ತಾನೇ ಮಾಡಿದಂತೆ ಮಾಡಿಸುವ ಸ್ವರೂಪದ್ದಾಗುತ್ತದೆ; ಅಥವಾ ಅವರೆಲ್ಲರನ್ನೂ ಮನಸಾ ಅಲಕ್ ಆಗಿ ನಿಲ್ಲಿಸಿ ತಾನೇ ಮಾಡಿದ ಸ್ವರೂಪದ್ದಾಗುತ್ತದೆ. ಕಾಲ ಕ್ರಮೇಣ ಒಂದು ರಾಜ್ಯದಲ್ಲಿರುವ (ಒಂದು ಸರಕಾರಕ್ಕೊಳಪಟ್ಟಿರುವ) ವ್ಯಕ್ತಿಗಳ (ಪ್ರಜೆಗಳ) ಯೋಗ್ಯತೆಯೇ ಆ ರಾಜ್ಯದ ಯೋಗ್ಯತೆಯೆನಿಸುತ್ತದೆ. ಒಂದು ಜನತೆಯ ಮಾನಸಿಕ ವಿಕಾಸವನ್ನೂ ಆಡಳಿತ ಕೌಶಲವನ್ನೂ ಸಂವರ್ಧಿಸುವ ಕಾರ್ಯವನ್ನು ಮುಂದೂಡುತ್ತ ಹೋಗುವ ಮತ್ತು ಜನರೆಲ್ಲರ ವ್ಯಕ್ತಿತ್ವಗಳನ್ನೂ* ಕುಬ್ಜಗೊಳಿಸುತ್ತ ಹೋಗಿ, ಅವರನ್ನು ಒಳ್ಳೆಯ ಕೆಲಸದಲ್ಲಿ ಕೂಡ ಕೇವಲ "ಮುಂದೆ ಹೋದರೆ ಹಾಯಲಾರೆ, ಹಿಂದೆ ಬಂದರೆ ಒದೆಯಲಾರೆ" ಎಂಬಂತಹ ತಬ್ಬಲಿ ತಮ್ಮಣ್ಣಗಳನ್ನಾಗಿ ಇಡುವ ರಾಜ್ಯವು– ಸಣ್ಣ ಜನರಿಂದ ದೊಡ್ಡ ಕೆಲಸಗಳನ್ನು ಮಾಡಿಸಲು ಸಾಧ್ಯವಾಗದು–

---

* ೨೦ನೆಯ ಶತಮಾನದಲ್ಲಿರುವ ಸ್ವತಂತ್ರಭಾರತದ ಖಾಸಗಿ ಮತ್ತು ಸಾರ್ವಜನಿಕ (Public) ಕ್ಷೇತ್ರಗಳಲ್ಲಿ ಅಭಿವೃದ್ಧಿಕಾರ್ಯಗಳನ್ನು ಯೋಜಿಸಿದಾಗ ಜನರಲ್ಲೂ ಅಧಿಕಾರಿಗಳಲ್ಲೂ Initiative ಆರಂಭೋತ್ಸಾಹ ಅನೇಕ ಕಡೆ ಕಂಡುಬರದಂತಾಗಲು, ಒಮ್ಮೆ ಕಂಡುಬಂದಲ್ಲೂ "ಆರಂಭಶೂರಾಃ ಖಲು ಭಾರತೀಯಾಃ" ಎಂಬ ಮಾತು ದುರ್ದೈವದಿಂದ ಸತ್ಯವಾಗಿ ಎದುರು ನಿಲ್ಲಲು ಭಾರತೀಯ ನಾಗರಿಕತೆಯ ಯಾವ ಅವಧಿಯ ಯಾವ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಪದ್ಧತಿಗಳು ಕಾರಣವಾದವು ಎಂಬುದನ್ನು ಸಾಮಾಜಿಕ ಮನಃಶಾಸ್ತ್ರದ ದೃಷ್ಟಿಯಿಂದ ಸೂಕ್ಷ್ಮವಾಗಿ ವಿಮರ್ಶಿಸಲು ಮಿಲ್‌ಮಹಾಶಯನ ಮೇಲಿನ ಮಾತುಗಳು ಪ್ರೇರಕವಾಗಿವೆ.

–ಅನುವಾದಕರು

ಎಂಬ ಅನುಭವವನ್ನು ಅಂತ್ಯದಲ್ಲಿ ಪಡೆದೇ ತೀರುತ್ತದೆ; ಆಡಳಿತ ಯಂತ್ರವನ್ನು ಪೂರ್ಣತೆಗೊಯ್ಯಲು ಮಿಕ್ಕ ಎಲ್ಲ ಗುರಿಗಳನ್ನೂ ತಾನು ಕಡೆಗಣಿಸಿದ್ದು ಶೂನ್ಯಸಂಪಾದನೆಗಾಗಿ–ಎಂಬ ಅರಿವು ಕೊನೆಗೆ ಉಂಟಾಗಿಯೇ ತೀರೀತು. ಅಂಥ ನರಯಂತ್ರನಿರ್ಮಾಪಕ ಆಡಳಿತ ಧೋರಣೆಯಿಂದ ಜನತೆಯ ಚೇತನಾಶಕ್ತಿ ಸಂಪೂರ್ಣವಾಗಿ ಉಡುಗಿ ಹೋಗುತ್ತದೆ; ಆ ಶಕ್ತಿಯನ್ನು ಓಡಿಸಿಯೇ ಅಂಥ (ದಕ್ಷವೋ–ಅದಕ್ಷವೋ?) ಮಾಯಾಯಂತ್ರಾರೂಢ ಮನುಷ್ಯ ಪುತ್ಥಳಿಗಳನ್ನು ಸಾಕಿಟ್ಟುಕೊಂಡ ಸರಕಾರಕ್ಕೆ ಅಗ್ನಿಪರೀಕ್ಷೆ ಎದುರಾದಾಗ ಮೋರೆ ತಗ್ಗಿಸುವ ಪ್ರಸಂಗ ಉಂಟಾಗುತ್ತದೆ.

## ಮಿಲ್ಲನನ್ನು ಕುರಿತ ಕೆಲವು ಉಪಯುಕ್ತ ಹೊತ್ತಗೆಗಳು


1. Life of John Stuart Mill.
   - W.L. Courtney
   London, 1889
2. John Stuart Mill
   - Karl Britton
   London, 1953
3. Life of John Stuart Mill
   - Michael St.John Packe
   London, 1954
4. The English Utilitarians and India
   - Eric Stokes
   Oxford, 1959
5. Political Thought in England
   - W.L. Davidson
   London, 1915

# ಮುನ್ನುಡಿ

ಮನುಷ್ಯರಿಗೆ ಮೇಲೆದ್ದು ಕಾಣುವಂಥ ಅಂತರ್ಜೀವನವಿಲ್ಲದಾಗ ಯಾರೂ ಆತ್ಮಚರಿತ್ರೆಯನ್ನು ಬರೆಯಲಾರರೆಂದು ಒಮ್ಮೆ ಶ್ರೀ ಅರವಿಂದರು ಹೇಳಿದ್ದುಂಟು. ಮಾತೃಶ್ರೀಯ ವಿಷಯದಲ್ಲಂತೂ ಇದು ಇನ್ನಷ್ಟು ಹೆಚ್ಚು ನಿಜ. ಏಕೆಂದರೆ. ಆಕೆ ಆಶ್ರಮದ ಅಧಿಷ್ಠಾತ್ರಿಯಾಗಿ, ಆಶ್ರಮದ ಒಳ ಆಡಳಿತದಲ್ಲಷ್ಟೇ ಅಲ್ಲದೆ, ಇತರ ಹೊರ ಚಟುವಟಿಕೆಗಳಲ್ಲೂ ಮಗ್ನೆಯಾಗಿದ್ದರೂ ಮತ್ತು ತಾನು ಯಾರ ಭೌತಿಕ ಹಾಗೂ ಆಧ್ಯಾತ್ಮಿಕ ಹೊರೆಯನ್ನು ಹೊತ್ತಿದ್ದಳೋ ಆ ಸಾಧಕದಲ್ಲಿ ಪ್ರತಿಯೊಬ್ಬರ ಜೀವನದಲ್ಲಿ ಮುಳುಗಿದ್ದರೂ ತನ್ನ ಭೌತಜೀವನದ ಬಗೆಗಾಗಲಿ, ತನ್ನ (ಬಾಳ) ಮೊದಲ ದಿನಗಳ ಬಗೆಗಾಗಲೀ, ಹೇಳಿದ್ದೇ ಇಲ್ಲವೆನ್ನಬಹುದು. ಈ ದಿಶೆಯ ಎಲ್ಲ ಶೋಧವನ್ನೂ ಆಕೆ ಕಡೆಗಣಿಸ ಹೇಳುತ್ತಿದ್ದಳು. ಈ ಅಸಹಾಯಕತೆಗಂಜದೆ ಶ್ರೀ ಪಶುಪತಿ ಭಟ್ಟಾಚಾರ್ಯರು ಮಹಾಮಾತೆಯ ಬರಹ ಹಾಗೂ ಮಾತುಗಳಿಂದ ಏನೆಲ್ಲವನ್ನೂ ಸಂಗ್ರಹಿಸಬಹುದೋ ಅದೆಲ್ಲವನ್ನೂ ಸಂಗ್ರಹಿಸಿ ಬಂಗಾಳೀಭಾಷೆಯಲ್ಲಿ "ಕೇಯೀಮಾ" ಎಂಬ ಗ್ರಂಥವನ್ನು ರಚಿಸಿದರು. ಆ ಗ್ರಂಥವು ಬಹಳ ಜನಪ್ರಿಯವಾಗಿ ಅನೇಕ ಬಾರಿ ಪುನರ್ಮುದ್ರಣವನ್ನು ಕಂಡಿತು. ಹೆಚ್ಚುತ್ತಿರುವ ಬೇಡಿಕೆಯನ್ನು ಕಂಡು ಗ್ರಂಥಕರ್ತರೇ ಸ್ವತಃ ಅದನ್ನು ಇಂಗ್ಲೀಷಿಗೆ ಭಾಷಾಂತರಿಸಿ "On The Mother Divine" ಎಂಬ ಅಂಕಿತದಲ್ಲಿ ಪ್ರಕಟಿಸಿದರು. ಆ ಆಂಗ್ಲ ಭಾಷಾಂತರಕ್ಕೆ ಆಗಿಂದಾಗ (ಎಲ್ಲ ಕಡೆಯಿಂದಲೂ) ಸ್ವಾಗತ ಸಿಕ್ಕಿತು.

ಈ ಔಚಿತ್ಯವನ್ನು ಮನಗಂಡೇ ನಮ್ಮ ಶಿವಮೊಗ್ಗದ ಮಿತ್ರರು ಉಕ್ತ ಜನಪ್ರಿಯ ಗ್ರಂಥದ ಕನ್ನಡ ಆವೃತ್ತಿಯನ್ನು ಹೊರತಂದಿದ್ದಾರೆ. ಈ ಪ್ರಕಟಣೆಯು ಮಾತೃಶ್ರೀಯ ೯೭ನೆಯ ವರ್ಧಂತಿಯ ಸ್ಮಾರಕವಾಗಿದೆ. ಕನ್ನಡಿಗರಿಗೆ ಹೊಸದಾಗಿ ಪರಿಚಯ ಮಾಡಿಕೊಡುವ ಅಗತ್ಯವಿಲ್ಲದ ವಿದಗ್ಧರಾದ ಪ್ರಾಚಾರ್ಯ ಬಿ.ಎಚ್. ಶ್ರೀಧರರಿಂದ ಗ್ರಂಥದ ಭಾಷಾಂತರವಾಗಿದೆ. ಅವರ ಭಕ್ತಿಯ ಶ್ರಮವು ಮೂಲಗ್ರಂಥಕ್ಕೆ ಹೆಚ್ಚು ನ್ಯಾಯವನ್ನು ತೋರಿದೆ; ಅದು ಮೂಲದಂತೆಯೇ ಇದೆ. ಹಾಗಿರುವುದು ಪ್ರಾಮಾಣಿಕ ಅನುವಾದದ ಮುಖ್ಯ ಲಕ್ಷಣ.

ಕಾಲೋಚಿತವಾದ ಈ (ಅನುವಾದ) ಗ್ರಂಥವನ್ನು ಕನ್ನಡಿಗರೆದುರಿಟ್ಟ ಪ್ರಾಚಾರ್ಯ ಶ್ರೀಧರರನ್ನೂ ಶಿವಮೊಗ್ಗದ ಶ್ರೀ ಅರವಿಂದ ಕೇಂದ್ರದವರನ್ನೂ ನಾನು ಅಭಿನಂದಿಸುತ್ತೇನೆ,

ಮತ್ತು ಅವರ (ಈ) ಪ್ರಯತ್ನವು ಸಾಮಾನ್ಯರಿಗೆ ಮತ್ತು ವಿಶೇಷತಃ ಮಾತೃಶ್ರೀಯ ಬಹು ಸಂಖ್ಯಾತ ಭಕ್ತರಿಗೆ ಒಂದು ಸ್ಫೂರ್ತಿಯ ಆಕರವನ್ನು ಒದಗಿಸುವ ಗ್ರಂಥವಾಗುವುದರ ಮೂಲಕ ಸಫಲವಾಗುವುದೆಂದು ನಾನು ದೃಢವಾಗಿ ನಂಬುತ್ತೇನೆ.

೮–೧೧–೧೯೭೪
**ಶ್ರೀ ಅರವಿಂದಾಶ್ರಮ,** **ಎಂ.ಪಿ.ಪಂಡಿತ**
ಪಾಂಡಿಚೇರಿ

# ೧. ಆಕೆ ಯಾರು?

ಅರವಿಂದಾಶ್ರಮದ ತಾಯಿಯ ಬಗೆಗಿನ ಈ ಪುಸ್ತಕ ಸುಮಾರು ಹತ್ತು ವರ್ಷಗಳ ಹಿಂದೆ ಬಂಗಾಳಿಯಲ್ಲಿ ಮೊದಲ ಬಾರಿಗೆ ಪ್ರಕಟವಾದಾಗ ನಾನಿನ್ನೂ ಆಕೆಯನ್ನು ನೋಡಿದ್ದಿಲ್ಲ. ಈ ನಡುವೆ ಈ ಪುಸ್ತಕವು ಮೂರು ಮುದ್ರಣಗಳನ್ನು ಕಂಡಿತು.

ಈ ಪಾಠವನ್ನು ತಯಾರಿಸಲು, ಆಂಗ್ಲಮುದ್ರಣ ಅಗತ್ಯವೆಂಬ ಅಂಶ, ಸ್ವಲ್ಪ ಹೆಚ್ಚಿನ ವಿವರಗಳಿಂದ ಕೂಡಿದ ಮುಕ್ತ ಭಾಷಾಂತರ ಬೇಕೆಂಬ ಅಂಶ, ಪ್ರೇರಕಗಳಾದವು. ನನಗೆ ಭಾಷಾಸಾಮರ್ಥ್ಯ ಸಾಕಷ್ಟಿಲ್ಲವಾದರೂ ಕೆಲಮಟ್ಟಿಗೆ ನನ್ನ ಈ ಆಂಗ್ಲಾನುವಾದ ಉಪಯುಕ್ತವಾದೀತೆಂದು ನನ್ನ ಪ್ರತ್ಯಾಶೆ. ಆಕೆಯನ್ನು ಪ್ರತ್ಯಕ್ಷ ನೋಡದೆಯೇ ನಾನು ಹೇಗೆ ಅಂಥ ಮಹಾವ್ಯಕ್ತಿಯ ಬಗೆಗೆ ಬರೆಯ ಬಲ್ಲೆ? ಪುಸ್ತಕ ಬರೆದು ಕೆಲ ವರ್ಷಗಳು ಕಳೆದ ಮೇಲೆ ನಾನು ಆಕೆಯನ್ನು ಭೇಟಿಯಾಗಿ ಹಲವಾರು ಸಲ ಆಕೆಯ ಆಶೀರ್ವಾದಗಳನ್ನು ಪಡೆದೆ. ಆದರೆ ಅದೆಲ್ಲಾ ಸಂಭವಿಸುವ ಮೊದಲು ನಾನು ಪುಸ್ತಕವನ್ನು ಹೇಗೆ ಬರೆಯಲು ಶಕ್ತನಾದೆ? ನಾನು ಅದನ್ನೆಲ್ಲಾ ಪೂರ್ತಿಯಾಗಿ ಏಕೆ, ಎಷ್ಟುಮಟ್ಟಿಗಾದರೂ ವಿವರಿಸಬಲ್ಲೆನೆ? ನನಗರಿಯದು.

ಚಿಕ್ಕಂದಿನಿಂದಲೂ ದೊಡ್ಡ ಅನುಭವಿಕ ರಾಜಕೀಯ ಮುಖಂಡರೆಂದು ನಾನು ಶ್ರೀ ಅರವಿಂದರನ್ನು ಬಲ್ಲೆ. ಅವರು ಆಮೇಲೆ ಪಾಂಡಿಚೇರಿಗೆ ಹೋಗಿ ಯೋಗದಲ್ಲಿ ಮುಳುಗಿದರೆಂಬುದೂ ನನಗೆ ಗೊತ್ತಿತ್ತು. ಅದರಲ್ಲಿ ನನಗೆ ಆಸಕ್ತಿ ಇದ್ದಿರಲಿಲ್ಲ. ಆದರೆ ಅವರ ಕಾರ್ಯದಲ್ಲಿ ಮಾರ್ಗದರ್ಶನವನ್ನೊಮ್ಮೆ ಮಾಡಲಿಲ್ಲವೆಂದರೂ ಆ ಯೋಗದಲ್ಲಿ ಭಾಗವಹಿಸುತ್ತಿದ್ದ ತಾಯಿ ಒಬ್ಬಳಿದ್ದಳೆಂಬುದು ನನಗೆ ಗೊತ್ತೇ ಇರಲಿಲ್ಲ.

ನನಗೆ ೫೦ ತುಂಬಿದ ಮೇಲೆ ನನ್ನ ಜೀವನ ಮಾರ್ಗದಲ್ಲೊಂದು ಆಕಸ್ಮಿಕ ಬದಲಾವಣೆಯುಂಟಾಯಿತು. ನನ್ನ ತಾಯಿಯೂ ಅಜ್ಜನೂ ತೀರಿಹೋದರು. ತೊಂದರೆಗಳು ಉದ್ಭವಿಸಿದವು. ಎಲ್ಲವೂ ಎದೆಗುದಿಗೀಡಾದವು. ನಾನು ಹೆದರಿದೆ, ನಿರಾಶನಾದೆ. ಕ್ಷುಬ್ಧನಾದೆ. ನನಗೆ ಮುಕ್ತಿಮಾರ್ಗವಿಲ್ಲವೆನಿಸಿತು. ಶಾಂತಿಸಿಗದೆಂದೆನಿಸಿತು. ಪರಿಸ್ಥಿತಿ ಮತ್ತಷ್ಟು ಕೆಡುವುದೆಂದು ತೋರಿತು.

ನನ್ನ ದುಃಖ–ಗಾಬರಿಗಳು ವಿಚಿತ್ರರೀತಿಯಿಂದ ಒಮ್ಮೆ ಕೊನೆಗೊಂಡವು. ಒಂದು ದಿನ ಮಧ್ಯಾಹ್ನ ರಸ್ತೆಯಂಚಿನಲ್ಲಿ ನಾನು ಒಂದು ಕಲ್ಲಿನ ಮೇಲೆ ಕುಳಿತು ಆಕಾಶದತ್ತ ನೋಡುತ್ತಿದ್ದಾಗ ಮೋಡಗಳ ಹಿಂದಿನಿಂದ ಅಪೂರ್ವವಾದ ಸೂರ್ಯಕಿರಣಗಳ ಬೆಳಕೊಂದು ನನ್ನತ್ತ ಸನ್ನೆ ಮಾಡುವಂತೆ ತೋರಿತು. ಕೆಲ ಕಾಲಾನಂತರ ಆ ಬೆಳಕು

ಮೇಘಗಳಲ್ಲಿ ಅದೃಶ್ಯವಾಯಿತು. ಈ ವಿಚಿತ್ರ ಘಟನೆಯು ಹೇಗೋ ನನ್ನ ಮನಸ್ಸನ್ನು ತಣಿಸಿತು.

ಘಟನೆಗಳು ಒಂದರ ಮೇಲೊಂದು ನಡೆದು ಹೋದವು. ನಾನು ದೈವಕೃಪೆಯ ಬಗೆಗೆ ಚಿಂತಿಸತೊಡಗಿದೆನು. ಕೆಲದಿನಗಳ ಅನಂತರ ರಾಮಕೃಷ್ಣಾಶ್ರಮದಿಂದ ಒಬ್ಬ ಸಾಧುವು ಯಾವುದೋ ಒಂದು ಕೆಲಸಕ್ಕಾಗಿ ನನ್ನ ಬಳಿಗೆ ಬಂದನು. ಆನುಷಂಗಿಕವಾಗಿ ನಾನವನನ್ನು ಕೇಳಿದೆ, "ನಿನಗೆ ದೇವರ ಬಗೆಗೆ ಏನಾದರೂ ಸ್ವಲ್ಪ ಗೊತ್ತಿದೆಯೇ?" ಎಂದು. ಆತ ಮುಗುಳ್ನಗೆ ನಕ್ಕು ಹೇಳಿದ, "ಅದನ್ನು ಅಷ್ಟು ಸುಲಭವಾಗಿ ಹೇಳಲಸಾಧ್ಯ; ಅದನ್ನು ಯಾವನಾದರೂ ತನ್ನೊಳಗೇ ಅನುಭವಿಸಬೇಕು; ನೀನು ಆಚಾರ್ಯ ಪುರುಷರಾದ ರಾಮಕೃಷ್ಣರು ವಿವೇಕಾನಂದರು ಬರೆದುದನ್ನು ಓದು; ಅದರಿಂದ ನಿನಗೆ ಅದರ ಕಲ್ಪನೆ ಕೆಲಮಟ್ಟಿಗೆ ಆಗಬಲ್ಲದು; ನಾನು ನಿನಗೆ ಕೆಲ ಪುಸ್ತಕಗಳನ್ನು ಕೊಡುವೆನು." ಆತ ನನಗೆ ಓದಲೆಂದು ಕೆಲ ಪುಸ್ತಕಗಳನ್ನು ಕೊಟ್ಟ.

ಅವುಗಳನ್ನೆಲ್ಲ ಓದಿದೆ; ಇನ್ನೂ ಎಷ್ಟೋ ಗ್ರಂಥಗಳನ್ನು ಓದಿ ಮುಗಿಸಿದೆ. ನನಗೆ ಆಸಕ್ತಿಯುಂಟಾಯ್ತು; ಆದರೆ ತೃಪ್ತಿ ಸಿಗಲಿಲ್ಲ. ನನ್ನ ಪ್ರಶ್ನೆಗಳಿಗೆ ಉತ್ತರಗಳು ದೊರಕಲಿಲ್ಲ. ರಾಮಕೃಷ್ಣರು ಹೇಳಿದ್ದು ನಿಜವಾಗಿಯೂ ಸರಳವೂ ಪ್ರಶಸ್ತವೂ ಆಗಿತ್ತು. "ನಾನು ದಿವ್ಯಮಾತೆ ಕಾಳಿಯನ್ನು ಕಂಡಿದ್ದೇನೆ. ನೀನೂ ನಿಜಭಕ್ತಿಯಿಂದ ಕರೆದರೆ ಅವಳನ್ನು ನೋಡಬಲ್ಲೆ." ರಾಮಕೃಷ್ಣ ಪರಮಹಂಸರು ನಿಜವಾಗಿಯೂ ಆಕೆಯನ್ನು ಕಂಡಿದ್ದರು; ಆದರೆ ಮಿಕ್ಕವರು ಹಾಗೆ ಕಂಡಿದ್ದೇವೆಂದು ಹೇಳಿದ್ದು ನನಗೆ ಖಾತ್ರಿಯೆನ್ನಿಸಲಿಲ್ಲ.

ಒಂದು ದಿನ ಪುಸ್ತಕದ ಅಂಗಡಿಯಲ್ಲಿ ನಾನೊಂದು ಹೊಸಹೊತ್ತಿಗೆಯನ್ನು ಕಂಡೆ. ಅದರ ಹೆಸರು, "ಅರವಿಂದರ ಓಲೆಗಳು–ಪ್ರಥಮಭಾಗ." ಆ ಓಲೆಗಳನ್ನವರು ತಮ್ಮ ಶಿಷ್ಯರಿಗೆಬರೆದದ್ದು. ಈ ಪುಸ್ತಕ ನನ್ನಲ್ಲಿ ಆಸಕ್ತಿಯನ್ನುಂಟು ಮಾಡಿತು; ನಾನದನ್ನು ಕೊಂಡುಕೊಂಡೆ.

ನನ್ನ ವಿರಾಮ ವೇಳೆಯಲ್ಲಿ ಈ ಪುಸ್ತಕವನ್ನು ಆಗೀಗ ಓದತೊಡಗಿದೆ. ಅದನ್ನು ತೆರೆದು ಎಲ್ಲಿಂದಾದರೂ ಶುರುಮಾಡಿ ನಾನು ಓದಲಾರಂಭಿಸಿದೆ. ಅದರಲ್ಲಿ ಬೆಳಗಿನಿಂದ ನನ್ನ ತಲೆಯನ್ನು ತಿನ್ನುತ್ತಿದ್ದ ಪ್ರಶ್ನೆಗೆ ತಕ್ಕ ಉತ್ತರ ಇತ್ತು; ನನ್ನ ಪ್ರಶ್ನೆಯನ್ನು ಉತ್ತರಿಸಲೆಂದು ಬರೆದ ಹಾಗಿತ್ತು ಆ ಕಾಗದ. ಮರುದಿನವೂ ಹಾಗೇ ಓದಿದೆ; ಅದರ ಮಾರನೆಯ ದಿನವೂ ಓದಿದೆ. ಪ್ರತಿ ದಿನವೂ ಅಂಥ ಕಾಕತಾಳೀಯ ಕೂಡಿಬಂತು. ಅದೇ ಪ್ರಕಾರ ಆ ಕಾಗದಗಳಲ್ಲಿ ನನ್ನ ಬೆಳಗಿನ ಒಂದೊಂದು ಪ್ರಶ್ನೆಗೂ ತಕ್ಕ ಉತ್ತರವನ್ನು ನಾನು ಕಂಡೆ. ಆ ಓಲೆಗಳಲ್ಲಿ ವಿವಿಧ ವಿಷಯಗಳ ವಿವೇಚನೆಗಳಿದ್ದವು; ಕೆಲವು ಆಧ್ಯಾತ್ಮಿಕ ಕೆಲವು ಮಾನದ ಶಾಸ್ತ್ರೀಯ. ಅವೆಲ್ಲವೂ ಶ್ರೀ ಅರವಿಂದರು ತಮ್ಮ ಶಿಷ್ಯರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಸರಳರೀತಿಯಿಂದ ಬರೆದವುಗಳಾಗಿದ್ದವು.

ನನಗೀಗ ತೃಪ್ತಿಯಾಯ್ತು. ಹಿಂದೆಂದೂ ದೊರಕದಿದ್ದ ಶಾಂತಿಯ ಅನುಭವ ನನಗಾಯಿತು. ಈ ಸಾಲುಗಳು, ವಿಶೇಷವಾಗಿ ನನಗೆ ಸಮಾಧಾನವನ್ನು ತಂದವು– “ಪ್ರತಿಯೊಂದೂ ಈ ಬಾಳಿನಲ್ಲಿ ಮನುಷ್ಯನನ್ನು ನಿರಾಶೆಗೊಳಿಸುತ್ತವೆ; ದೇವರೊಬ್ಬನು ಮಾತ್ರ ಹಾಗೆ ಮಾಡುವುದಿಲ್ಲ; ದೇವರ ಕಡೆಗೆ ಮನುಷ್ಯನು ಸಂಪೂರ್ಣವಾಗಿ ತಿರುಗಿದರೆ” ಇದು ಎಂಥ ಸಮಾಧಾನಕರವಾದ ತೇಜಃಪುಂಜವಾದ, ಧೀರ ಉದ್ಗಾರ!

ಈ ಓಲೆಗಳನ್ನು ಬಂಗಾಳಿಗೆ ಭಾಷಾಂತರಿಸಬೇಕೆಂಬ ಪ್ರಲೋಭನೆಗೆ ನಾನು ಒಳಗಾದೆ; ಇದಕ್ಕೆ ನನಗೆ ಅನುಜ್ಞೆ ಬೇಕಾಗಿತ್ತು. ಶ್ರೀ ಅರವಿಂದರನ್ನು ಕಾಣುವುದು ಹೇಗೆ? ಅವರ ಆಶ್ರಮದಲ್ಲಿ ನನ್ನ ಹಳೆಯ ಗೆಳೆಯ ನಲಿನೀಕಾಂತ ಸರಕಾರ ಉಳಿದುಕೊಂಡದ್ದು ನನಗೆ ನೆನಪಾಯಿತು. ಆದದ್ದೆಲ್ಲವನ್ನೂ ನಾನವನಿಗೆ ಬರೆದೆ; ನನ್ನ ಆಗಿನ ಮನಃಪ್ರಣಾಲಿಯನ್ನು ಅರುಹಿದೆ ಮತ್ತು ಈ ಕಾಗದವನ್ನು ಭಾಷಾಂತರಿಸಲು ಅನುಜ್ಞೆ ಬೇಕೆಂದು ಕೊನೆಯದಾಗಿ ಬೇಡಿದೆ.

ಉತ್ತರ ಸಾವಕಾಶವಾಗಿ ಬಂತು. ನಲಿನಿ ಬರೆದ, “ನಿನ್ನ ಕಾಗದವನ್ನು ಅರವಿಂದರಿಗೆ ಓದಿಹೇಳಲಾಯ್ತು. ಅವರು ಭಾಷಾಂತರಿಸಬಹುದೆಂಬ ಅನುಜ್ಞೆಯೊಡನೆ ನಿನಗೆ ಆಶೀರ್ವಾದಗಳನ್ನು ಕೊಟ್ಟಿದ್ದಾರೆ. ಆದರೆ ಇದರೊಟ್ಟಿಗೆ ಮನಃಪೂರ್ವಕವಾಗಿ ಕೊಟ್ಟ ಮಾತ್ರಾಶೀರ್ವಾದಗಳನ್ನೂ ನಾನು ನಿನಗೆ ಕಳಿಸುತ್ತಿದ್ದೇನೆ. ಇನ್ನೂ ನಿನಗೆ ಮಾತೆಯ ಪರಿಚಯವಾಗಿಲ್ಲ. ಆದರೆ ಆಮೇಲೆ ನಿನಗೆ ಆಕೆಯ ಗುರುತಾಗುವುದು. ಇಲ್ಲಿ ಎಲ್ಲೆಲ್ಲೂ ಆಕೆಯೇ–ಆಕೆಯೇ ಸೂತ್ರಚಾಲಿಕೆ. ವಾಸ್ತವಿಕವಾಗಿ ನೋಡಿದರೆ, ಶ್ರೀ ಅರವಿಂದರೂ ಮಾತೃಶ್ರೀಯೂ ಅವಿಭಾಜ್ಯರು–ಅವರಿಬ್ಬರೂ ಬೆಂಕಿ–ಹೊಗೆಗಳಂತೆ ಅವಿನಾಭಾವಿಗಳಾಗಿದ್ದಾರೆ.”

ನಾನೇನೋ ಬಹಳ ಸಂತೋಷಪಟ್ಟೆ. ಆದರೆ ಒಗಟಿನಲ್ಲಿ ಸಿಕ್ಕಿಕೊಂಡಂತಾದೆ. ಮಾತೃಶ್ರೀಯ ಆಶೀರ್ವಾದಗಳನ್ನು ನಾನು ಬೇಡದೆ ಪಡೆದಿದ್ದರೂ ಆಕೆ ಯಾರಾಗಿರಬಹುದೆಂಬ ಕಲ್ಪನೆ ನನಗಿರಲಿಲ್ಲ.

ನಾನು ಕೆಲ ಓಲೆಗಳನ್ನು ಭಾಷಾಂತರಿಸಿ ಪಾಂಡಿಚೇರಿಗೆ ಕಳಿಸಿದೆ. ಅವು ಸಮ್ಮತಿ ಪಡೆದವು ಮತ್ತು ಆಶ್ರಮದ “ಬಾರ್ತಿಕ” ಎಂಬ ನಿಯತಕಾಲಿಕವೊಂದರಲ್ಲಿ ಮುದ್ರಿತವಾದವು. ಇನ್ನೂ ಭಾಷಾಂತರಿಸೆಂದು ನನಗೆ ಪ್ರೋತ್ಸಾಹ ನೀಡಲಾಯ್ತು.

ಆದರೀಗ ನನಗದು ಅಪರ್ಯಾಪ್ತವಾಗಿ ಕಂಡಿತು; ಇನ್ನೂ ಆಳವಾದ ಅಭ್ಯಾಸಕ್ಕಿಳಿಯಬೇಕೆಂದು ನನಗನ್ನಿಸಿತು. ಆಧ್ಯಾತ್ಮ ಮಾರ್ಗದಲ್ಲಿ ಇನ್ನೂ ಹೆಚ್ಚಿನ ಮಾರ್ಗದರ್ಶನ ಬೇಕೆಂದು ನನ್ನಲ್ಲಿ ಲವಲವಿಕೆಯುಂಟಾಗಿದೆಯೆಂದು ನಾನು ನಲಿನಿಗೆ ಬರೆದೆ. ಅರವಿಂದರ ಕಾರ್ಯದರ್ಶಿ ಶ್ರೀ ನಲಿನೀ ಗುಪ್ತರಿಗೆ ಬರೆ ಎಂದು ನನಗವನು ಉತ್ತರ ಕೊಟ್ಟ. ಆ ಪ್ರಕಾರ ನಾನು ಅವರಿಗೆ ಬರೆದೆ. ಉತ್ತರವಾಗಿ ಅವರು ನನಗೆ

ಒಂದು ಸ್ವಾರಸ್ಯಕರ ಟಿಪ್ಪಣಿಯನ್ನು ಈ ಸಲಹೆಯೊಂದಿಗೆ ಕಳಿಸಿದರು: "ನಿನ್ನ ಈಗಿನ ಕಾಹಿಲೆಗೆ ಒಂದೇ ಒಂದು ಮದ್ದಿದೆ; ಅದೆಂದರೆ, ನಿಶ್ಚಿತವಾಗಿ ಹಾಗೂ ಕೊನೆಯದಾಗಿ ದೇವರನ್ನು ಪ್ರೀತಿಸತೊಡಗುವುದು. ದೇವರಿಗೊಲಿಯುವುದು ತುಂಬ ಕಷ್ಟ. ಆದರೆ ಶ್ರೀ ಅರವಿಂದರಿಗೆ ನೀನೊಲಿಯಬಹುದು, ಮಾತೃಶ್ರೀಯಲ್ಲಿ ಭಕ್ತಿಯನ್ನು ನೆಲೆ ನಿಲ್ಲಿಸಬಹುದು–ಆಗ ನೀನು ಉದ್ಧಾರವಾಗುವೆ. ಆ ಪ್ರಕಾರ ಉದ್ಧಾರವಾದವರನ್ನು ನಾವು ನೋಡಿದ್ದೇವೆ."

ಅಪೂರ್ವ ಬುದ್ಧಿವಾದ–ಒಲಿಯತೊಡಗುವುದು–ಅದರಲ್ಲೂ ಶ್ರೀ ಅರವಿಂದರಲ್ಲಿ! ಅವರಲ್ಲಿ ನಂಬಿಗೆ ನನಗಿದ್ದದ್ದರಿಂದ ಅದೊಮ್ಮೆ ಸಾಧ್ಯವಾದೀತೆಂದು ನಂಬಿದರೂ ನನಗೆ, ಏನೂ ಗೊತ್ತಿಲ್ಲದ ಮಾತೃಶ್ರೀಯಲ್ಲಿ ಭಕ್ತಿದೋರುವುದು ಹೇಗೆಂಬುದು ನನಗೆ ತೋರಲಿಲ್ಲ. ಅದೆಂದಾದರೂ ಸಾಧ್ಯವೇ? ಎಂಬ ಪ್ರಶ್ನೆ ನನ್ನನ್ನು ಕಾಡಿಸತೊಡಗಿತು.

ಶ್ರೀ ಅರವಿಂದರಲ್ಲಿ ನನ್ನ ಶ್ರದ್ಧೆಯನ್ನೂ ಅವಲಂಬನೆಯನ್ನೂ ಗಟ್ಟಿಮಾಡಿಕೊಂಡೆ. ಅವರ ಪುಸ್ತಕಗಳನ್ನೋದಿದೆ; ಅವರ ಉಪದೇಶಗಳನ್ನು ಅರಿತು ಆಚರಿಸಲು ಪ್ರಯತ್ನಿಸಿದೆ. ಆದರೆ ಒಂದು ವರ್ಷ ಮುಗಿಯುವುದರೊಳಗೇ ಅನಿರೀಕ್ಷಿತವಾಗಿ ಘಟನೆಯೊಂದು ನಡೆಯಿತು. ಶ್ರೀ ಅರವಿಂದರು ಇನ್ನಿಲ್ಲವಾದರು, ಅವರು ನಮ್ಮನ್ನೆಲ್ಲ ಬಿಟ್ಟು ಹೋದರು. ನನ್ನ ಬಲಿಷ್ಠ ಆಧಾರ ಅಡಗಿತು. ನನ್ನ ಪ್ರತ್ಯಾಶೆಗಳೆಲ್ಲ ಮಾಯವಾದವು.

ಕೆಲ ತಿಂಗಳುಗಳು ಕಳೆದವು. ನನ್ನ ಅಸಹಾಯಕ ಅವಸ್ಥೆಯ ಬಗೆಗೆ ಆಶ್ರಮದಲ್ಲಿದ್ದ ನನ್ನ ಗೆಳೆಯನಿಗೆ ಪತ್ರ ಬರೆಯದೆ ಉಳಿಯಲಾರದಾದೆ. ಅವನು ಉತ್ತರ ಬರೆದ; "ಅವರು ಹೋದರೆಂದು ಬಹಳ ಚಿಂತಿಸಬೇಡ; ಮಾತೃಶ್ರೀ ಇಲ್ಲಿ ಇದ್ದಾಳೆ. ಆಕೆಯ ಉಪಸ್ಥಿತಿಯೊಂದೇ ಸಮಾಧಾನದ ಸೂತ್ರ. ಆಕೆ ಅಘಟಿತ ಘಟನೆಗಳನ್ನು ನಡೆಸುತ್ತಿದ್ದಾಳೆ. ಇಲ್ಲಿ ಬಾ ಮತ್ತು ಹಾಗೆ ಬಂದು ನೀನೇ ನೋಡಿಕೊಂಡು ಹೋಗು."

ಆದರೆ ಆಗ ನನಗೆ ಅಲ್ಲಿಗೆ ಹೋಗಲು ಸಾಧ್ಯವಾಗಲಿಲ್ಲ. ಆದುದರಿಂದ ಆಶ್ರಮದ ಇನ್ನೊಬ್ಬ ಹಳೆಯ ಶಿಷ್ಯನಾಗಿದ್ದ ಅನಿಲ್‌ಬರನ್ ಅವರಿಗೆ ಬರೆದೆ. ದಯೆಯಿಟ್ಟು ಮಾತೃಶ್ರೀಯ ಪರಿಚಯ ಬರೆದು ಕಳಿಸಿರಿ ಮತ್ತು ಸಾಧ್ಯವಾದರೆ ಆಕೆಯ ಭಾವಚಿತ್ರವೊಂದನ್ನು ಕಳಿಸಿಕೊಡಿರಿ–ಎಂದು. ಅವರು ಭಾವಚಿತ್ರವನ್ನು ಕಳಿಸಿ ಹೀಗೆ ಬರೆದರು "ಶ್ರೀ ಅರವಿಂದರು ನಿನ್ನನ್ನು ಸ್ವೀಕರಿಸಿದ್ದರು. ಅವರು ನಿನ್ನ ಗುರುಗಳು. ಅವರೀಗ ಮಾತೃಶ್ರೀಯಲ್ಲಿದ್ದಾರೆ. ನಮಗೆಲ್ಲರಿಗೂ ಅರವಿಂದರೂ ಮಾತೆಯೂ ಒಂದೇ– ಒಬ್ಬರೇ–ಆಗಿದ್ದಾರೆ. ಆದ್ದರಿಂದ ಈಗ ಮಾತೃಶ್ರೀ ನಿನ್ನ ಗುರು. ಅವಳಿಂದ ನಿನಗೆ ಬೇಕಾದಾಗಲೆಲ್ಲ ಸಾಧ್ಯವಾದ ಎಲ್ಲ ಬಗೆಯ ನೆರವೂ ಸಿಕ್ಕುವುದು."

ನಾನು ಭಾವಚಿತ್ರವನ್ನು ನೋಡಿದೆ. ಅದು ಒಬ್ಬ ಯೂರೋಪೀಯ ಮಹಿಳೆಯ ಚಿತ್ರವಷ್ಟೇ ಆಗಿತ್ತು. ನನ್ನ ಪೂರ್ವಗ್ರಹಾವಿಷ್ಟ ಮನಸ್ಸಿಗೆ ಆಕೆಯನ್ನು ತಾಯಿಯೆಂದು ಸ್ವೀಕರಿಸಲು ಒಲ್ಲೆನೆಂದಿತು. ಮುಚ್ಚುಮರೆಯಿಲ್ಲದೆ ನಾನೀ ಸಂಗತಿಯನ್ನು ಅನಿಲ್‌ಬರನ್

ಅವರಿಗೆ ಬರೆದು ತಿಳಿಸಿದೆ.

ಅವರು ಉತ್ತರ ಬರೆದರು: "ದಿವ್ಯ ಮಾತೆಯ ಹೊರ ರೂಪವಷ್ಟನ್ನೇ ನೋಡಿ ಅವಳ ದಿವ್ಯತೆಯನ್ನು ಗುರುತಿಸಲು ನಿನಗೀಗ ಸಾಧ್ಯವಿಲ್ಲ. ನೀನೀಗ ನಂಬುವೆನೆಂಬ ಮನಃ ಸಂಕಲ್ಪವನ್ನು ಮಾಡಬೇಕು. ಶ್ರೀ ಅರವಿಂದರು ಆಕೆಯನ್ನು ದಿವ್ಯಮಾತೆಯೆಂದು ಸಾರಿದ್ದನ್ನು ಮೆಚ್ಚಬೇಕು. ಅವರು ಹೇಳಿದ ಮೇಲೆ ಅದು ಸತ್ಯವಾಗಿರಬೇಕು. ಅವರ ಕಂಠೋಕ್ತವಾದ ಹೇಳಿಕೆಯು ಪ್ರಮಾಣವೆನ್ನಿಸಲು ಸಾಕು. ಶ್ರೀ ಅರವಿಂದರ ಕೃಪೆಗೆ ಪಾತ್ರನಾಗಬೇಕೆಂದಿದ್ದರೆ ಮಾತೃಶ್ರೀಗೆ ಶರಣಾಗತನಾಗು–ಅದೊಂದೇ ಮಾರ್ಗ. ಇದನ್ನು ಆಚರಿಸಲು ಕಲಿ; ಎಲ್ಲಾ ಸರಿಯಾಗುತ್ತದೆ."

ಆಗ ಶ್ರೀ ಅರವಿಂದರೆಂದ ಈ ಮಾತು ನೆನಪಾಯ್ತು–ಮೇಲು ಮೇಲೆ ತೋರುವ ಸಂಗತಿಗಳಿಂದ ಗಡಿಬಿಡಿಯಲ್ಲಿ ಮಾಡಿದ ನಿರ್ಣಯಗಳನ್ನು ನಂಬದಿರುವುದನ್ನು ಪ್ರತಿಯೊಬ್ಬನೂ ಕಲಿಯಬೇಕು–ಇದು ನಿಜ ಜ್ಞಾನದ ಪ್ರಥಮ ನಿಕಷವಲ್ಲವೇ?" ನಾನೆಂಥ ದಡ್ಡತನದ ಅಪರಾಧವನ್ನೆಸಗಿಬಿಟ್ಟೆನೆಂಬುದೀಗ ನನಗೆ ಅರ್ಥವಾಯ್ತು. ನನಗೆ ಪದೇ ಪದೇ ಮಾತೃಶ್ರೀಯ ವಿಷಯವನ್ನು ತಿಳಿಸಲಾಗುತ್ತಿತ್ತು. ಆಕೆ ಕೃಪೆಮಾಡಿ, ಸ್ವತಃ ನಾನು ಬೇಡದಿದ್ದಾಗಲೂ, ತನ್ನ ಆಶೀರ್ವಾದಗಳನ್ನು ಕಳಿಸಿ ಕೊಟ್ಟಿದ್ದಳು. ಇಷ್ಟಾದರೂ ಬಾಹ್ಯರೂಪದಲ್ಲಾಕೆ ಯೂರೋಪೀಯ ಮಹಿಳೆ ಎಂಬಷ್ಟರಿಂದ ನಾನು ಆ ಯಾವುದನ್ನೂ ಗಮನಿಸದೆ ಹೋದೆ! ದಿವ್ಯಮಾತೆಗೆ ಯೂರೋಪಿಯ ಮಹಿಳೆಯ ಅವತಾರವನ್ನು ತಾಳುವುದು ಅಸಾಧ್ಯವೇನು? ಮಾತೃಶ್ರೀಯು ವಿಶ್ವವ್ಯಾಪಿಕೆ, ಆಕೆ ತನಗೆ ಇಷ್ಟವಾದ ಯಾವ ರೂಪವನ್ನೂ ತಾಳಬಲ್ಲಳು.

ನಾನು ನಂಬಲು ದೃಢಸಂಕಲ್ಪ ಮಾಡಿದೆ. ಹಾಗೆ ಮಾಡುವುದು ಅಷ್ಟೇನೂ ಸುಲಭವಾಗಲಿಲ್ಲ. ಅದು ನಿಧಾನವಾಗಿ ಬೆಳೆಯಿತು. ಮಾತೃಶ್ರೀಯೇ ಸ್ವತಃ ಹೇಳಿದ ಮತ್ತು ಬರೆದ ಸಂಗತಿಗಳನ್ನು ನಾನು ಶೋಧಿಸಿದೆ. "ಪ್ರಾರ್ಥನೆಗಳು ಮತ್ತು ಪ್ರಣಿಧಾನಗಳು" ಎಂಬ ಆಕೆ ಬರೆದ ಪುಸ್ತಕ ನನಗೆ ಸಿಕ್ಕಿತು. ಅದು ಆಕೆ ತನ್ನ ಜೀವನದ ವಿವಿಧ ಅವಧಿಗಳಲ್ಲಿ ಬರೆದ ಒಂದು ವಿಧದ ಆಂತರಿಕ ದಿನಚರಿಯಾಗಿತ್ತು. ಅದನ್ನೋದುತ್ತಿದ್ದ  ಹಾಗೆ ಆಕೆ ನನ್ನ ಚಿಕ್ಕಂದಿನಿಂದಲೂ ನಿಜವಾಗಿ ಎಲ್ಲರ ತಾಯಿಯಾಗಿದ್ದಳು ಎಂದು ನನಗೆನ್ನಿಸಿತು. ಇದಕ್ಕೆ ಆಧಾರವಾಗಿ ನಾನು ಆಕೆ ಭಾರತಕ್ಕೆ ಬರುವುದಕ್ಕೆ ಬಹಳ ಹಿಂದೆಯೇ ೧೭–೬–೧೯೧೩ ರಲ್ಲಿ ತನ್ನ ದಿನಚರಿ ಗ್ರಂಥದಲ್ಲಿ ಬರೆದಿಟ್ಟಿದ್ದ ಪಂಕ್ತಿಗಳನ್ನು ಉದ್ಧರಿಸುತ್ತೇನೆ:

"ಓ ದೇವರೇ. ನನ್ನನ್ನು ಬೆಳಕು ಬೀರುವ ಮತ್ತು ಬೆಚ್ಚಗೆ ಮಾಡುವ ಬೆಂಕಿಯಂತೆ, ಬಾಯಾರಿಕೆ ಪರಿಹರಿಸುವ ಬುಗ್ಗೆಯಂತೆ ನೆರಳೀಯುವ ಮತ್ತು ರಕ್ಷಣೆ ನೀಡುವ ಮರದಂತೆ ರೂಪಿಸು... ಜನರೆಲ್ಲಾ ಅಷ್ಟು ಅಸುಖಿಗಳು. ಅಷ್ಟು ಅಜ್ಞಾನಿಗಳು–

ಅವರಿಗೆ ಅಷ್ಟು ನೆರವು ಬೇಕು."

ಇಂಥ ಕಾರುಣ್ಯದ ಮಾತುಗಳನ್ನು ವಿಶ್ವವ್ಯಾಪಕವಾದ ಮಾತೃ ಹೃದಯವೊಂದೇ ಆಡಬಲ್ಲದು. ತನಗಾಗಿಯೇ ಅವಳು ದೇವರಿಂದ ಏನನ್ನೂ ಬೇಡಳು; ಜಗತ್ತಿನಲ್ಲಿರುವ ಮೂಢ ಮನುಷ್ಯರಿಗೆ ರಕ್ಷಣೆ ನೀಡುವ ಶಕ್ತಿಯನ್ನು ಕೊಡೆಂದು ದೇವರನ್ನು ಬೇಡುತ್ತಾಳೆ.

ಆಕೆಯ ಬಗೆಗೆ ಶ್ರೀ ಅರವಿಂದರು ಬರೆದುದೆಲ್ಲವನ್ನೂ ಓದಿದೆ. ಇಲ್ಲಿ ಅಂಥ ಒಂದು ವಾಕ್ಯವನ್ನು ಉದ್ಧರಿಸಿ ಬರೆಯುತ್ತೇನೆ:

"ಮಾತೃಶ್ರೀ ದೇಹಧಾರಣೆ ಮಾಡಿರುವುದು ಭೌತಿಕ ಸ್ವರೂಪದ (ಭೌತಿಕ ಪ್ರಪಂಚದಲ್ಲೊಂದು) ಬದಲಾವಣೆಯನ್ನು ಆಕೆ ಮಾಡಬೇಕಾಗಿರುವುದರಿಂದ."

ನನಗೆ ಕಟ್ಟ ಕಡೆಗೆ ಸಮಾಧಾನವಾಯಿತು. ಸಂಶಯ–ಪ್ರಶ್ನೆಗಳೆಲ್ಲವೂ ಕ್ರಮೇಣ ಅದೃಶ್ಯವಾದವು. ನನ್ನ ಮತ್ತು ಇತರರ ಮಾತೇಕೆ–ಶ್ರೀ ಅರವಿಂದರೇ ಸ್ವತಃ ಆಕೆ ದಿವ್ಯಮಾತೆಯೆಂದು ಪದೇ ಪದೇ ಸಮರ್ಥಿಸಿದ್ದರು.

ವಾಸ್ತವಿಕವಾಗಿ ಕಂಡರೆ, ಪ್ರತಿಯೊಂದು ಸಂಗತಿಯೂ ಆಕೆ ದಿವ್ಯ ಮಾತೆಯೆಂಬುದನ್ನು ದೃಢಪಡಿಸುತ್ತದೆ. ಕಷ್ಟದಲ್ಲಿದ್ದ ಜನರು ನೆರವಿಗಾಗಿ ಆಕೆಯನ್ನು ಪ್ರಾರ್ಥಿಸಿದಾಗ ಅವಳ ನೆರವು ಯಾವಾಗಲೂ ಅಲ್ಲಿ ಇದ್ದೇ ಇರುತ್ತದೆ. ಶ್ರೀ ನಳಿನೀಕಾಂತಗುಪ್ತರು ಸರಿಯಾಗಿ ಹೇಳಿದ ಹಾಗೆ, "ಆಕೆ ನಿಜವಾಗಿಯೂ ತಾಯಿ– ಆದರೆ ಎಂಥ ತಾಯಿ? ದೇವಲೋಕದ ತಾಯಿ! ಬಹಳ ದೂರದಲ್ಲಿ ತಾನೇತಾನಾಗಿ ತನ್ನಷ್ಟಕ್ಕೆ ಅತೀಂದ್ರಿಯ ಬ್ರಹ್ಮನಂತೆ ಉದಾಸೀನತೆಯಿಂದ ತಣ್ಣಗಿದ್ದಾಳೆ ಎಂಬ ಅರ್ಥದಲ್ಲಾಕೆ ದಿವ್ಯೆಯಲ್ಲ. ದಿವ್ಯಮಾತೆಯು ಮಾನವ ಮಾತೆಯರೆಲ್ಲರಿಗೂ ಮೀರಿದ ಮಾತೃತ್ವ ಉಳ್ಳವಳು." ಯಾವ ಮಾನವನೂ ಮುಕ್ತನಲ್ಲದ ಕಷ್ಟ ಕಾರ್ಪಣ್ಯಗಳಲ್ಲಿ ನಾನು ಸಿಲುಕಿದಾಗ ಈ ಮಾತನ್ನು ಸ್ವತಃ ಪರೀಕ್ಷಿಸಿ ಅದರ ಸತ್ಯವನ್ನು ಅರಿಯಬಹುದು. ಇತರರೂ ಹೀಗೇ ಅರಿತೆ.

ಆದರೆ ಮಾತೃಶ್ರೀಯು ಕೇವಲ ಸಹಾಯಿಕೆ, ರಕ್ಷಿಕೆ ಮಾತ್ರವಲ್ಲ; ನನಗೆ ಅರವಿಂದರು ಹೇಳಿದ್ದರ ಅರ್ಥವಾಗತೊಡಗಿತು.

"ಮಾತೃಶ್ರೀ ಸ್ವತಃ ಮುಕ್ತಿಧಾಮ; ಎಲ್ಲವೂ ಆಕೆಯಲ್ಲಿದೆ. ಅವಳನ್ನು ಸಾಕ್ಷಾತ್ಕರಿಸಿಕೊಂಡಾಗ ನಿಮಗೆ ಎಲ್ಲದರ ಸಾಕ್ಷಾತ್ಕಾರವೂ ಆಗುವುದು."

# ೨. ದಿವ್ಯ ಮಾತೆ ಎಂದರೇನು?

ಸುದೈವದಿಂದ ಶ್ರೀ ಅರವಿಂದರು ನಮಗಾಗಿ ಈ ಪ್ರಶ್ನೆಗೆ ಉತ್ತರ ಕೊಟ್ಟಿದ್ದಾರೆ. "ದಿವ್ಯ ಮಾತೆಯೆಂದರೆ ದೇವರ ಚೈತನ್ಯ ಮತ್ತು ಶಕ್ತಿ. ಅಥವಾ ಆಕೆ ದೇವರ ಚಿಚ್ಛಕ್ತಿ (ಚೈತನ್ಯಶಕ್ತಿ, ಪ್ರಜ್ಞಾಬಲ)" ಶ್ರೀ ಅರವಿಂದರನ್ನು ಪುನಃ ಪುನಃ ಮೂರು ಪ್ರಶ್ನೆಗಳನ್ನು ಕೇಳಲಾಗುತ್ತಿತ್ತು.

"ನಿಮ್ಮ 'ಮಹಾತಾಯಿ' ಎಂಬ ಪುಸ್ತಕದಲ್ಲಿ ನಮ್ಮ ಮಾತೃಶ್ರೀಯನ್ನು ಸೂಚಿಸಿಲ್ಲವೇ?" ಉತ್ತರ: "ಹೌದು" ಮತ್ತೆ ಅವರನ್ನು ಕೇಳಲಾಯ್ತು:

"ಅವಳೇ ಇರುವಿಕೆಯ ಉಭಯ ಮಾರ್ಗಗಳ ಶಕ್ತಿಯ ವೈಯಕ್ತಿಕ ಆವಿರ್ಭಾವ– ಅತೀಂದ್ರಿಯ ಮತ್ತು ವಿಶ್ವಜನೀನ ಅಲ್ಲವೇ? ಪುನರುತ್ತರ: "ಹೌದು"

ಕೊನೆಯದಾಗಿ, ಅವರನ್ನು ಕೇಳಲಾಗಿತ್ತು:

"ನಮ್ಮ ಮೇಲಿನ ಆಳವೂ ಹಿರಿಯದೂ ಆದ ಪ್ರೇಮದಿಂದ ಅವಳೇ (ನಮ್ಮ ನಡುವೆ) ಈ ಅಂಧಕಾರ, ಭ್ರಮೆ ಮತ್ತು ಮೃತ್ಯುಗಳ ಪ್ರಪಂಚದೊಳಗೆ ಅವತರಿಸಿ ಬಂದವಳಲ್ಲವೇ?"

ಅದೇ ಉತ್ತರ: "ಹೌದು."

ಆದರೆ ದಿವ್ಯ ಮಾತೆಯ ಮಾತೆತ್ತಿದಾಗ ಅವಳಿಂದ ಭಿನ್ನವಾದ ದಿವ್ಯಪಿತನೂ ಇದ್ದಾನೆ ಎಂದು ಸೂಚಿತವಾಗುವುದಿಲ್ಲವೇ? ಅಂಥ ಅನಿವಾರ್ಯತೆಯೇನೂ ಇಲ್ಲ. ಆಧ್ಯಾತ್ಮಿಕ ಅನುಭವದಲ್ಲಿ ಮತ್ತು ಅಭಿವ್ಯಕ್ತಿಯಲ್ಲಿ ಅವನು ಮತ್ತು ಅವಳು, ಸರ್ವೋಚ್ಚ ಅಸ್ತಿತ್ವ ಮತ್ತು ಸರ್ವಾಧಿಕಚಿಚ್ಛಕ್ತಿ, ಪುರುಷ ಮತ್ತು ಪ್ರಕೃತಿ, ಈಶ್ವರ ಮತ್ತು ಈಶ್ವರಿ, ಶಿವ ಮತ್ತು ಪಾರ್ವತಿ, ನಾರಾಯಣ ಮತ್ತು ಲಕ್ಷ್ಮಿ ಎಂಬ ಈ ದಂಪತಿಗಳು ಏಕಮೇವಾದ್ವಿತೀಯ ಬ್ರಹ್ಮದ ನಿಷ್ಕ್ರಿಯ ಮತ್ತು ಉತ್ಕ್ರಿಯ ಎಂಬ ಉಭಯ ಲಕ್ಷಣಗಳು. ನಿಷ್ಕ್ರಿಯವು ಅಕ್ರಿಯಾಶೀಲ. ಉತ್ಕ್ರಿಯವು ಕ್ರಿಯಾಶೀಲ ಅವೇ ದೇವರು ಮತ್ತು ಅವನ ಶಕ್ತಿ. ಶ್ರೀ ಅರವಿಂದರ ಪ್ರಕಾರ ಕೇವಲಿಯಾದ (ನಿರಪೇಕ್ಷನಾದ) ಪರಮಾತ್ಮನ (ಪರಬ್ರಹ್ಮದ) ಮಾತೃಲಕ್ಷಣವು ಅವನ ಇತರ ಲಕ್ಷಣಗಳ ಬೆಂಬಲವನ್ನಾಧರಿಸಿ ಈ ಎಲ್ಲ ಸೃಷ್ಟಿಯಲ್ಲಿಯೂ ಸಕ್ರಿಯವಾಗಿ ಅಭಿವ್ಯಕ್ತವಾಗಿದೆ. ಆದುದರಿಂದ ಅತ್ಯಂತಿಕ ಪರತತ್ವವನ್ನು ಪಡೆಯಲು ನೀವು ಮಾತೃಶ್ರೀಯ ಮೂಲಕವೇ ಹೋಗಬೇಕು. ಈ ಸಕ್ರಿಯ ಶಕ್ತಿದೇವತೆಯ ಕೃಪೆಯಿಂದಲೇ ನೀವು ನಿಮ್ಮ ಆತ್ಯಂತಿಕ ಪರಮಾರ್ಥವನ್ನು ತಲುಪಬಲ್ಲಿರಿ.

ಈ ಶಕ್ತಿಮಾತೆಗೆ ಅವಳದೇ ಆದ ಯಾವ ಆಕಾರವೂ ಇಲ್ಲ. ಆದರೂ ಆಕೆ ತನ್ನ ಅಭಿವ್ಯಕ್ತಿಗಾಗಿ ಅನೇಕ ವಿವಿಧ ರೂಪಗಳನ್ನು ಧರಿಸಬಲ್ಲಳು. ಶ್ರೀ ಅರವಿಂದರ ಪ್ರಕಾರ, ತನ್ನ ಉದ್ದೇಶ ಸಾಧನೆಗಾಗಿ ಅವಳು ನಾಲ್ಕು ವಿವಿಧ ಮುಖ್ಯ ಅವತಾರಗಳನ್ನು ತಾಳಿದ್ದಾಳೆ–ಅವು ಅನುಕ್ರಮವಾಗಿ, ಮಹೇಶ್ವರಿ, ಮಹಾಲಕ್ಷ್ಮಿ, ಮಹಾಕಾಲಿ ಮತ್ತು ಮಹಾಸರಸ್ವತಿ–ಎಂದು. ಈ ನಾಲ್ಕು ರೂಪಗಳಿಗೆ ಅವವುಗಳಿಗೇ ಪ್ರತ್ಯೇಕವಾದ ವ್ಯಕ್ತಿತ್ವಗಳೂ ವಿಶಿಷ್ಟ ಕರ್ತವ್ಯಗಳೂ ಇವೆ. "ಮಹಾತಾಯಿ" ಎಂಬ ಅವರ ಪುಟ್ಟ ಪ್ರಶಸ್ತ ಗ್ರಂಥದಲ್ಲಿ ಅವುಗಳ ಕರ್ತವ್ಯಗಳನ್ನು ವಿವರವಾಗಿ ವಿವೇಚಿಸಿದ್ದಾರೆ.

ಮಹೇಶ್ವರಿಯು ವಿವೇಕದ ಸಾಕಾರ ದೇವತೆ. ಅವಳು ನಾಲ್ಕರಲ್ಲಿ ಅತಿ ಹೆಚ್ಚಿನ ದೇವತೆ. ಅವಳು ನಾಲ್ಕು ದೇವತೆಗಳಲ್ಲೂ ಅತ್ಯುದಾತ್ತೆ "ಅವಳು ಬಲಿಷ್ಠೆ ಮತ್ತು ವಿವೇಕ ಸಂಪನ್ನೆ. ಅವಳು ನಮಗೆ ಅತಿಮಾನಸ (ಸುಪ್ರಮಾಣಸ) ಅಪ್ರಮೇಯತೆಗಳನ್ನೂ ವಿಶ್ವವಿಸ್ತಾರವನ್ನೂ ತೆರೆದಿಡುವವಳು... ಅವಳಿಗೆ ತಿಳಿಯಬೇಕೆನ್ನಿಸಿದ್ದೆಲ್ಲಾ ತಿಳಿಯುತ್ತದೆ; ಯಾವುದೂ ಅವಳ ಅರಿವಿನ ಹೊರಗಲ್ಲ; ಎಲ್ಲ ವಸ್ತುಗಳನ್ನೂ ಇರವುಗಳನ್ನೂ ಅವುಗಳ ಸ್ವಭಾವಗಳನ್ನೂ, ಯಾವುದು ಅವುಗಳನ್ನು ಪ್ರೇರಿಸುವುದೆಂಬುದನ್ನೂ ಜಗದ್ಧರ್ಮವನ್ನೂ ಅದರ ಕಾಲಾವಧಿಗಳನ್ನೂ ಎಲ್ಲವೂ ಹೇಗಿದ್ದವು–ಇವೆ ಇರಬೇಕು ಎಂಬುದನ್ನೂ ಅವಳು ಅರಿತಿರುವಳು. ಅವಳ ಹತ್ತಿರ ಒಂದು ಶಕ್ತಿಯಿದೆ. ಅದು ಪ್ರತಿಯೊಂದನ್ನೂ ಎದುರಿಸುತ್ತದೆ ಮತ್ತು ತನ್ನ ವಶಪಡಿಸಿಕೊಳ್ಳುತ್ತದೆ. ಅವಳ ವಿಸ್ತಾರವಾದ ಗೂಢ ವಿವೇಕ ಮತ್ತು ಶಾಂತ ಶಕ್ತಿಗಳನ್ನು ಕೊನೆಯದಾಗಿ ಯಾರೂ ಒತ್ತಾಯಕ್ಕೊಳಪಡಿಸಲಾರರು... ಅವಳು ಸರ್ವೋನ್ನತೆ– ಯಾವುದರಿಂದಲೂ ಬದ್ಧಳಲ್ಲ, ಜಗತ್ತಿನ ಯಾವುದಕ್ಕೂ ಅಂಟಿಕೊಂಡವಳಲ್ಲ. ಆದರೂ ಅವಳಿಗೆ ಎಲ್ಲರಿಗಿಂತಲೂ ಹೆಚ್ಚಿನ ವಿಶ್ವ ಮಾತೃತ್ವದ ಹೃದಯವಿದೆ. ಏಕೆಂದರೆ, ಅವಳ ಕಾರುಣ್ಯಕ್ಕೆ ಗಡಿಮಿತಿಯಿಲ್ಲ ಮತ್ತು ಅದು ಅಕ್ಷಯ್ಯ; ಅವಳ ದೃಷ್ಟಿಯಲ್ಲಿ ಎಲ್ಲರೂ ಮಕ್ಕಳು ಮತ್ತು ಆ ಏಕಮೇವಾದ್ವಿತೀಯ ಬ್ರಹ್ಮದ ಅಂಶಗಳು... ಆದರೆ ಅವಳ ದಯೆಯು ಅವಳ ವಿವೇಕದ ಕಣ್ಣನ್ನು ಕುರುಡು ಮಾಡದು ಅಥವಾ ಆಜ್ಞಪ್ತ ಮಾರ್ಗದಿಂದ ಅವಳ ಕಾರ್ಯವನ್ನು ಅಡ್ಡ ತಿರುಗಿಸದು."

ಮಹಾಕಾಲಿಯ ಸ್ವಭಾವವೇ ಬೇರೆ. ಅವಳ ಸ್ವಭಾವ ಅವಳದ್ದೇ. ಅವಳು ಪರಮಾವಧಿಕ ಶಕ್ತಿ ಹಾಗೂ ಕಾರ್ಯೋತ್ಸಾಹಗಳ ಮೂರ್ತಿ. "ಅವಳಲ್ಲಿ ಸರ್ವಾತಿರಿಕ್ತ ಪ್ರಣೋದವಿದೆ, ಕೆಲಸ ಸಾಧಿಸುವ ಬಲಿಷ್ಠ ಸಾಮರ್ಥ್ಯೋದ್ರೇಕವಿದೆ, ಪ್ರತಿಯೊಂದು ಗಡಿಯನ್ನೂ ಅಡ್ಡಿಯನ್ನೂ ಪುಡಿ ಪುಡಿ ಮಾಡುವ ಒಂದು ದಿವ್ಯ ಆಕ್ರಾಮಕತೆ ಅಥವಾ ಸರ್ವಭೇದಕ ಶಕ್ತಿ ಇದೆ–ಅವಳು ಯುದ್ಧದಿಂದ ಎಂದೂ ಹಿಂದಕ್ಕೆ ಓಡಿಬಾರದ ಜಾಗತಿಕ ಯೋಧೆ... ಅವಳೂ ದಿವ್ಯಮಾತೆಯೇ, ಮಹಾಮಾತೆಯೇ ಮತ್ತು ಅವಳ ಪ್ರೇಮವು ಅವಳ ಕ್ರೋಧದಷ್ಟೇ ನಿಬಿಡವಾದದ್ದು. ಅವಳಲ್ಲಿ ಆಳವೂ ಆವೇಶ ನಿರ್ಭರವೂ ಆದ ದಯೆಯಿದೆ... ಅವಳಿಲ್ಲದೆ ಹೋಗಿದ್ದರೆ ಒಂದು ದಿನದಲ್ಲಾದ ಕೆಲಸಕ್ಕೆ ಶತಮಾನಗಳು

ಬೇಕಾಗುತ್ತಿದ್ದವು... ದೇವರ ಜಯಶೀಲ ಶಕ್ತಿಯು ಅವಳ ಹತ್ತಿರ ಇದೆ: ಮತ್ತು ಅವಳ ತೇಜಸ್ಸಿನ ಆವೇಶದ ಮತ್ತು ವೇಗದ ದಯೆಯಿಂದಲೇ ಮುಂದಿಗಿಂತ ಇಂದೇ ಮಹತ್ಕಾರ್ಯ ಸಾಧನೆ ಸಾಧ್ಯವಾಗಬಲ್ಲದು.

ಮಹಾತಾಯಿಯ ದಿವ್ಯವಿವೇಕವನ್ನು ಮಹೇಶ್ವರಿಯೂ ದಿವ್ಯಶಕ್ತಿಯನ್ನು ಮಹಾಕಾಲಿಯೂ ಪ್ರತಿನಿಧಿಸುತ್ತಾರೆ. ಆದರೆ ಮಹಾಲಕ್ಷ್ಮಿಯು ಅವಳ ಸೌಂದರ್ಯವನ್ನು ಸಾಮಶ್ರುತ್ಯವನ್ನೂ ಪ್ರತಿನಿಧಿಸುತ್ತಾಳೆ. ಮಾತೃಶ್ರೀಯ ಈ ಲಕ್ಷಣವು ಮಾನವ ಜೀವಿಗಳಿಗೆ ಬಹು ಆಕರ್ಷಕವಾಗಿದೆ. "ಮಹೇಶ್ವರಿಯು ಬಹುಶಾಂತೆ. ಬಹೂನ್ನತೆ ಮತ್ತು ಬಹುದೂರಸ್ಥೆಯಾಗಿ ತೋರಿಯಾಳು; ಮಹಾಕಾಲಿಯು ಬಹುವೇಗವತಿಯೂ ಬಲಿಷ್ಠೆಯೂ ಆಗಿ ಕಾಣಿಸಿಯಾಳು ಆದರೆ ಎಲ್ಲರೂ ಹರ್ಷದಿಂದ ಮತ್ತು ಆಸಕ್ತಿಯಿಂದ ಮಹಾಲಕ್ಷ್ಮಿಯ ಕಡೆಗೆ ನೋಡುತ್ತಾರೆ... ಅವಳ ಸಮೀಪದಲ್ಲಿರುವುದು ಮಹಾಸುಖಕರ ಮತ್ತು ಹೃದಯದಲ್ಲಿ ಅನುಭವಿಸುವುದು ಎಂದರೆ ಇರವನ್ನೆ ಒಂದು ಆನಂದವನ್ನಾಗಿಯೂ ಅದ್ಭುತವನ್ನಾಗಿಯೂ ಮಾರ್ಪಡಿಸುವುದು; ಸೂರ್ಯನಿಂದ ಬೆಳಕು ಹರಿಯುವಂತೆ ಅವಳಿಂದ ಪ್ರಸಾದ, ಮೋಹಕತೆ ಮತ್ತು ಮಾರ್ದವಗಳು; ಹರಿದುಬರುತ್ತವೆ... ಆದರೆ ಕುರೂಪ, ಕೃಪಣ, ಕೀಳು, ದರಿದ್ರ, ಅನಾಗರಿಕ, ಕೊಳಕು, ಪಾಶವ ಮತ್ತು ಒರಟು ಎನ್ನಿಸಿದವುಗಳು ಅವಳ ಬರವನ್ನು ಪ್ರತಿಭಟಿಸುತ್ತವೆ. ಪ್ರೇಮ–ಸೌಂದರ್ಯಗಳಿಲ್ಲದಲ್ಲಿ ಅಥವಾ ಹುಟ್ಟಲು ಇಷ್ಟವಿಲ್ಲದವುಗಳಾಗಿರುವಲ್ಲಿ ಅವಳು ಬಾರಳು... ಅವಳಿಗೆ ತಾಪಸ ಅಕಿಂಚನತೆಯೂ ನಿರ್ದಯತೆಯೂ ಪ್ರಿಯವೆನ್ನಿಸವು–ಹಾಗೇ ಹೃದಯದಲ್ಲಿಯ ಗಂಭೀರ ಭಾವನೆಗಳನ್ನು ದಮಿಸುವುದೂ ಅವಳಿಗೆ ಸೇರದು... ಏಕೆಂದರೆ ಪ್ರೇಮ ಮತ್ತು ಸೌಂದರ್ಯಗಳ ಮೂಲಕ ಅವಳು ಮಾನವರ ಮೇಲೆ ದೇವರ ನೊಗವನ್ನು ಇಡುವಳು."

ನಾಲ್ಕು ಜನ ದೇವಿಯರಲ್ಲಿ ಮಹಾಸರಸ್ವತಿಯು ಚಿಕ್ಕವಳು. ಅವಳು ಕ್ರಮಬದ್ಧತೆ ಮತ್ತು ಪೂರ್ಣತೆಗಳ ಅವತಾರ, ಅವಳು ಕಸಬುದಾರಿಕೆಯಲ್ಲಿ ಅತ್ಯಂತ ಕುಶಲೆ. "ವಸ್ತುಗಳ (ತಯಾರಿಕೆಯ) ವಿಜ್ಞಾನ ಕಸುಬುದಾರಿಕೆ ಮತ್ತು ತಂತ್ರಗಳು ಮಹಾಸರಸ್ವತಿಯ ಕಾರ್ಯಕ್ಷೇತ್ರ... ಈ ಶಕ್ತಿಯು ಬಲಿಷ್ಠ, ನಿರಾಯಾಸ, ಎಚ್ಚರಿಕೆಯುಳ್ಳ ಮತ್ತು ದಕ್ಷನಿರ್ಮಾಪಕ, ಸಂಘಟಕ, ಆಡಳಿತಗಾರ, ತಾಂತ್ರಿಕ ಶಿಲ್ಪಿ ಮತ್ತು ಜಗತ್ತುಗಳ ವರ್ಗೀಕರಣಕಾರರಲ್ಲಿ ಇರುತ್ತದೆ. ಎಷ್ಟು ಚಿಕ್ಕದು ಅಥವಾ ನೋಡಲು ಕೆಲಸಕ್ಕೆ ಬಾರದುದು ಎನ್ನಿಸಿದ್ದೂ ಅವಳ ಲಕ್ಷ್ಯಕ್ಕೆ ಹೊರಗಲ್ಲ. ಕೈಗೆಸಿಕ್ಕದ ಅಥವಾ ರೂಪ ಮರೆಸಿಕೊಂಡ ಇಲ್ಲವೆ ಸುಪ್ತ ಎನ್ನಿಸಿದ ಯಾವವಸ್ತುವೂ ಅವಳ ಕಣ್ಣನ್ನು ತಪ್ಪಿಸಲಾರದು... ಮಹಾತಾಯಿಯ ಎಲ್ಲ ಶಕ್ತಿಗಳಲ್ಲಿ ಅವಳು ಮಾನವನ ಸಾವಿರಾರು ನ್ಯೂನತೆಗಳಲ್ಲಿ ಸಿಕ್ಕಿ ಅತಿ ಹೆಚ್ಚು ಕಾಲ ನರಳುವವಳು... ಅವಳು ನಮ್ಮ ಬೇಕುಗಳಿಗೆ ತಾಯಿ, ಕಷ್ಟಕಾಲದಲ್ಲಿ ನಮ್ಮ ಸ್ನೇಹಿತೆ, ಎಡೆಬಿಡದೆ ಶಾಂತವಾಗಿ ನಮಗೆ ಬುದ್ಧಿವಾದ

ಹೇಳುವವಳು ಮತ್ತು ಅನುಭವಸ್ಥ ಸಲಹೆಗಾರ್ತಿ... ನಮ್ಮ ಆಳವೂ ಸತತವೂ ಆದ, ಉಚ್ಚಸ್ವಭಾವದ ಸಾಮಗ್ರ್ಯದತ್ತ ಹೊರಟ, ಪ್ರವೃತ್ತಿ ಮತ್ತು ಪ್ರಣೋದಗಳಲ್ಲಿ ಅವಳು ತನ್ನ ಮಿಂಚುವ ಮುಗುಳ್ನಗೆಯಿಂದ ಖೇದಮೇಘಗಳನ್ನೂ ಸಾಫಲ್ಯ–ನಿರ್ವೇದಗಳನ್ನು ಓಡಿಸುತ್ತಾಳೆ; ಅಲ್ಲದೆ, ಸದಾ ಸಿದ್ಧವಾಗಿರುವ ತನ್ನ ನೆರವನ್ನು ಅವಳು ನಮ್ಮ ನೆನಪಿಗೆ ತಂದುಕೊಡುತ್ತಾಳೆ."

ಇವುಗಳಲ್ಲದೆ ಆ ಮಹಾತಾಯಿಗೆ (ಜಗನ್ಮಾತೆಗೆ), ಇನ್ನೂ ಅನೇಕ ಭಿನ್ನ ಭಿನ್ನ ಶಕ್ತಿಗಳೂ ವ್ಯಕ್ತಿತ್ವದ ಆಕೃತಿಗಳೂ ಇವೆ. ಆದರೆ ಅವಳು ನಮ್ಮೊಡನೆ ಹಾಗೂ ನಮ್ಮ ಪ್ರಪಂಚದೊಡನೆ ವ್ಯವಹರಿಸುವುದು ಮುಖ್ಯವಾಗಿ ಈ ನಾಲ್ಕು ರೂಪಗಳಿಂದ. ಅವಳ ಈ ನಾಲ್ಕು ಅವತಾರಗಳಲ್ಲಿ ಯಾವುದಾದರೂ ಒಂದನ್ನಾಗಲಿ, ಎಲ್ಲವನ್ನಾಗಲಿ– ಯಾರು ಬೇಕಾದರೂ ಆರಾಧಿಸಬಹುದು. ಅತಿಮಾನಸ ರಾಜ್ಯದಲ್ಲಿ ಈ ನಾಲ್ಕೂ ಒಂದಾಗಿರುತ್ತವೆ. ಅವಳೇ ಸರ್ವಾಶ್ಲೇಷಿಣಿಯಾದ ಮಹಾಶಕ್ತಿ ಅಥವಾ ಆದ್ಯಶಕ್ತಿ ಅಥವಾ ದಿವ್ಯಮಾತೆ.

ಸಂಕ್ಷಿಪ್ತವಾಗಿ ಮಹಾತಾಯಿಯ ತತ್ವದ ಬಗೆಗೆ ಇಷ್ಟನ್ನು ಹೇಳಬಹುದು. ಈಗ ನಾವು ಅವಳ ಮಾನವ್ಯ, ಸಕಾಯ ಲಕ್ಷಣದತ್ತ ತಿರುಗೋಣ.

# ೩. ಒಂದು ಸಂಕ್ಷಿಪ್ತ ಜೀವನ ಚಿತ್ರ

ಮಾತೃಶ್ರೀಯು ಪ್ಯಾರಿಸ್ಸಿನಲ್ಲಿ ೧೮೭೮ನೆಯ ಇಸವಿಯ ಫೆಬ್ರುವರಿ ತಿಂಗಳ ೨೧ನೆಯ ದಿನಾಂಕದಂದು ಹುಟ್ಟಿದಳು. ಅವಳು ಹುಟ್ಟಿದ್ದು ಒಂದು ಶ್ರೀಮಂತ ಕುಟುಂಬದಲ್ಲಿ. ಅವಳ ತಂದೆ ಪ್ಯಾರಿಸ್ಸಿನಲ್ಲೊಬ್ಬ ದ್ರವ್ಯವ್ಯವಹಾರಿ (ಬ್ಯಾಂಕರ್) ಯಾಗಿದ್ದ. ಮೂಲತಃ ಆ ಮನೆಯವರು ಫ್ರೆಂಚರಾಗಿದ್ದಿಲ್ಲ. ಐಗುಪ್ತ ದೇಶದ ಯಾವುದೋ ಒಂದು ಊರಿನಿಂದ ಈ ಕುಟುಂಬ ವಲಸೆ ಬಂದು ಪಾರಿಸ್ಸಿನಲ್ಲಿ ನೆಲಸಿತ್ತಂತೆ.

ಭಾರತಕ್ಕೆ ಬರುವ ಮೊದಲಿನ ಮಾತೃಶ್ರೀ ಚರಿತ್ರೆ ಅಲ್ಪಜ್ಞಾತ. ಆದರೆ ತರಗತಿಗಳಲ್ಲಿ ಆಕೆ ಕಾಲ ಕಾಲಕ್ಕೆ ಸ್ವೇಚ್ಛೆಯಿಂದ ತನ್ನ ಚಿಕ್ಕಂದಿನ ಅನುಭವದ ಕಥೆಗಳನ್ನು ಹೇಳುತ್ತಿದ್ದಳು. ಅವನ್ನು ಕೆಲ ವಿದ್ಯಾರ್ಥಿಗಳು ಬರೆದುಕೊಂಡಿದ್ದಾರೆ. ಕಾಲಾನುಕ್ರಮದಲ್ಲಲ್ಲದಿದ್ದರೂ ಕೆಲವನ್ನಿಲ್ಲಿ ಪುನಃ ಪಠನ ಮಾಡುತ್ತೇನೆ:

(೧) "ಏಳನೆಯ ವರ್ಷವಯಸ್ಸಿನಲ್ಲಿ ನನಗೆ ಓದು–ಬರೆಹ ಬರುತ್ತಿರಲಿಲ್ಲ, ಏಕೆಂದರೆ ನಾನು ಅದನ್ನು ಕಲಿತಿರಲಿಲ್ಲ. ಆದರೆ ನಾನು ನನ್ನ ೪ನೆಯ ವರ್ಷ ವಯಸ್ಸಿನಿಂದಲೇ ಯೋಗಾಭ್ಯಾಸವನ್ನು ಆರಂಭಿಸಿದ್ದೆ. ನನಗೊಂದು ಸಣ್ಣ ಕುರ್ಚಿಯಿತ್ತು. ಅದರಲ್ಲಿ ಶಾಂತವಾಗಿ ಕುಳಿತು ನಾನು ನನ್ನ ಧ್ಯಾನದಲ್ಲಿ ಮಗ್ನಳಾಗುತ್ತಿದ್ದೆ. ನನ್ನ ತಲೆಯ ಮೇಲೆ ಆಗ ಒಂದು ಉಜ್ವಲ ಬೆಳಕು ಬಂದು ಕುಳಿತು ಮಿದುಳಿನಲ್ಲಿ ಒಂದು ವಿಧದ ಗಲಿಬಿಲಿಯನ್ನುಂಟುಮಾಡುತ್ತಿತ್ತು. ನನಗೇನೂ ಗೊತ್ತಾಗುತ್ತಿರಲಿಲ್ಲವೆಂಬುದೇನೋ ನಿಜ. ಅದು ಅರ್ಥಮಾಡಿಕೊಳ್ಳುವ ವಯಸ್ಸಲ್ಲ. ಆದರೆ ಯಾರೂ ತಿಳಿದಿರದಂಥ ಒಂದು ಅದ್ಭುತವಾದ ಮಹತ್ಕಾರ್ಯವನ್ನು ನಾನು ಮಾಡಬೇಕಾಗುವುದೆಂದು ಕ್ರಮೇಣ ನನಗೆನ್ನಿಸತೊಡಗಿತು... ಆದರೆ ನನ್ನ ೭ನೆಯ ವರ್ಷ ವಯಸ್ಸಿನಲ್ಲಿ ನನ್ನ ಸೋದರನ ಜೊತೆಗೆ ಬೀದಿಯಲ್ಲಿ ಹೋಗುತ್ತಿದ್ದಾಗ ಲಿಖಿತಫಲಕವೊಂದು ಕಾಣಿಸಲು ಅದರಲ್ಲಿ ಏನು ಬರೆದಿದೆ ಎಂದು ಅವನನ್ನು ಕೇಳಿದೆನು. ಅವನು ಆಶ್ಚರ್ಯದಿಂದ ನೀನೇ ಅದನ್ನು ಓದಲಾರೆಯಾ? ಎಂದು ಕೇಳಿದನು. ನಾನು ಓದಲು ಕಲಿತಿಲ್ಲ, ಓದಲಾರೆ–ಎಂದೆ–ಇದಕ್ಕಾಗಿ ಅವನು ನನ್ನನ್ನು ಗೇಲಿಮಾಡಿದನು. ಮನೆಗೆ ಹಿಂದಿರುಗಿದೊಡನೆಯೇ ನಾನು ಅಕ್ಷರಾಭ್ಯಾಸ ಮಾಡಲಾರಂಭಿಸಿದೆ. ಅನಂತರ ನನ್ನನ್ನೊಂದು ಶಾಲೆಗೆ ಸೇರಿಸಲಾಯಿತು. ಪರೀಕ್ಷೆಗಳಲ್ಲಿ ನಾನು ಮೊದಲನೆಯವಳಾಗಿ ಉತ್ತೀರ್ಣೆಯಾಗುತ್ತಬಂದೆ; ನನಗೆ ಬಹುಮಾನಗಳೂ ದೊರೆತವು. ೧೪ನೆಯ ವರ್ಷದಲ್ಲಿ ವರ್ಣ ಹಾಗು ರೇಖಾಚಿತ್ರಕಲೆಗಳನ್ನು ಕಲಿಯಲು

ನಾನೊಂದು ಚಿತ್ರಶಾಲೆಗೆ ಹೋದೆ. ಆದರೆ ನಾನಾಗ ಬಹಳ ಗಂಭೀರೆಯಾಗಿದ್ದೆ; ಯಾರೊಡನೆಯೂ ಹೆಚ್ಚು ಮಾತಾಡುತ್ತಿರಲಿಲ್ಲ. ಜೊತೆಗಿದ್ದ ಅಭ್ಯಾಸಿಗಳು ನಾನು ನಿಷ್ಪಕ್ಷಪಾತಿನಿಯೆಂದು ಭಾವಿಸಿದನು. ಆದುದರಿಂದ ಅವರು ನಾನಾ ಕಲಹಗಳನ್ನು, ನಾನು ಮಧ್ಯಸ್ಥಿಕೆವಹಿಸಿ ನಿಷ್ಪಕ್ಷಪಾತ ನಿರ್ಣಯ ಕೊಡಬೇಕೆಂದು, ನನ್ನೆಡೆಗೆ ತರುತ್ತಿದ್ದರು."

(೨) ನನಗೆ ೧೨ ಆದಾಗ ಪ್ಯಾರಿಸ್ಸಿನ ಸನಿಹದಲ್ಲಿರುವ ಫೊಂಟೆನೆಬ್ಲು ಕಾಡಿಗೆ ಏಕಾಂತ ಪರ್ಯಟನಕ್ಕಾಗಿ ಹೋಗುತ್ತಿದ್ದೆ. ಅದೊಂದು ಬಹಳ ಹಳೆಯ ಅಡವಿಯಾಗಿತ್ತು. ಅದರಲ್ಲಿ ೨೦೦೦ ವರ್ಷ ವಯಸ್ಸಿನ ಮರಗಳೂ ಇದ್ದವು. ನಾನು ತೆಪ್ಪಗೆ ಒಂದು ಮರದ ಕೆಳಗೆ ಕುಳಿತುಕೊಳ್ಳುತ್ತಿದ್ದೆ ಮತ್ತು ಆಳವಾದ ಧ್ಯಾನದಲ್ಲಿ ಇಳಿದುಬಿಡುತ್ತಿದ್ದೆ. ನನಗೆ ಸಂತೋಷವನ್ನು ಉಂಟುಮಾಡಿದ ಆ ಮರಗಳಲ್ಲಿ ನನಗೆ ಬಹಳ ಆಪ್ತತೆಯುಂಟಾಯ್ತು. ನನ್ನ ಚೈತನ್ಯವು ಆ ಮರಗಳೊಂದಿಗೆ ಭಾವೈಕ್ಯವನ್ನು ತಳೆಯಿತು. ಆ ಮರಗಳಲ್ಲಿದ್ದ ಅಳಿಲುಗಳು ಮತ್ತು ಹಕ್ಕಿಗಳು ಕೂಡ ನಿರ್ಭಯವಾಗಿ ಸಮೀಪಿಸಿ (ಸಂತೋಷದಿಂದ) ಲೀಲಾಭಾವದಿಂದ ನನ್ನ ಸುತ್ತ ಓಡಾಡುತ್ತಿದ್ದವು. ಆ ಅಭ್ಯಾಸವನ್ನು ಹಿಡಿದರೆ ಅದೇ ತರಹದ ಅನುಭವ ನಿಮಗೂ ಉಂಟಾಗುವುದು. ಏಕಾಂತವಾಗಿ ಒಂದು ಮರದ ಕೆಳಗೆ ಸುಮ್ಮನೆ ಕುಳಿತು ಕೊಳ್ಳಿರಿ. ಅದರ ಕಾಂಡಕ್ಕೆ ಬೆನ್ನು ಚಾಚಿ ಶಾಂತವಾಗಿರಿ. ಆಗ ಕ್ರಮೇಣ ನಿಮಗೆ ಆ ಮರದ ಜೀವಸ್ಪಂದ ಮತ್ತು ಚೈತನ್ಯಗಳು ಅನುಭವಕ್ಕೆ ಬರುವುವು. ನಮ್ಮಂಥ ಮಾನವಜೀವಿಗಳೊಡನೆ ಸ್ನೇಹ ಬೆಳೆಯಿಸಬೇಕೆಂದು ಅವು ಬಯಸುತ್ತವೆ ಎಂಬುದೂ ನಿಮಗೆ ಗೊತ್ತಾಗುವುದು. ಅವಕ್ಕೂ ಪ್ರೀತಿ, ಸಹಾನುಭೂತಿಗಳಿವೆ; ನಮಗೆ ನೆರಳೀಯುವಷ್ಟು ನೇರ್ನಡೆ ಅವುಗಳಲ್ಲಿದೆ. ತಮ್ಮದೇ ಆದ ರೀತಿಯಲ್ಲಿ ಅವು ಅನುಭವ ಪಡೆದುಕೊಳ್ಳಬಲ್ಲವೆಂಬುದು ಸ್ಪಷ್ಟ. ಒಮ್ಮೆ ಒಂದು ಮುದಿಮರವನ್ನು ಕಡಿಯುವ ಮಾತುಕತೆ ನಡೆದಿತ್ತು. ನಾನದರ ಕೆಳಗೆಹೋದೆ. ಆ ಮರಕ್ಕೆ ತನಗೊದಗಲಿದ್ದ ಅಪಾಯದ ಅರಿವಾಗಿ ಅದು ಹೇಗಾದರೂ ಮಾಡಿ ಆ ಕ್ರೌರ್ಯದಿಂದ ತನ್ನನ್ನು ಮುಕ್ತಗೊಳಿಸೆಂದು ನನ್ನನ್ನು ಬೇಡುತ್ತಿತ್ತೆಂಬುದು ನನಗೆ ಸ್ಪಷ್ಟವಾಗಿ ತಿಳಿದುಬಂತು."

(೩) ಈ ಶತಮಾನದ ಆದಿಯಲ್ಲಿ ಉತ್ತರ ಆಫ್ರಿಕದಲ್ಲಿರುವ ಆಲ್ಜೀರಿಯದ ಕ್ಲೆಮ್ಸೆಲ್ ಎಂಬ ನಗರಕ್ಕೆ ಹೋದೆ. ಈ ನಗರದ ಉತ್ತರಕ್ಕೆ ಆಲ್ಜೀರಿಯದ ಗಡಿ ಶುರುವಾಗುತ್ತದೆ; ಇದರ ದಕ್ಷಿಣಕ್ಕೆ ಸಹರ ಮರುಭೂಮಿ, ಪಶ್ಚಿಮಕ್ಕೆ ಮೊರೊಕ್ಕೊ ಮತ್ತು ಪೂರ್ವಕ್ಕೆ ಟ್ಯೂನಿಸಿಯಗಳಿವೆ. ಬೇಸಿಗೆಯಲ್ಲಿ ಅಲ್ಲಿ ಹೆಚ್ಚುವ ಉಷ್ಣತೆಯನ್ನು ನೀವು ಊಹಿಸಲಾರಿರಿ. ಬಹುಶಃ ಪೋಲೆಂಡಿನ ಯಹೂದಿಯಾಗಿರಬಹುದಾದ ಮೊಂಜರ್ ಥಿಯೋನ್ ಎಂಬವನಲ್ಲಿಗೆ ನಾನು (ಮಾಟ) ಮೋಡಿವಿದ್ಯೆಯನ್ನು ಕಲಿಯಲೆಂದು ಹೋಗಿದ್ದೆ. ನಡುಹಗಲಿನ ಉರಿಯಲ್ಲಿ ನಾನು ಒಂದು ಆಲಿವ್ ಮರದಕೆಳಗೆ ಪ್ರತಿನಿದಿನವೂ ಧ್ಯಾನಕ್ಕಾಗಿ ಕುಳಿತುಕೊಳ್ಳುತ್ತಿದ್ದೆ. ಆ ಬಿಸಿಲ ಝಳವನ್ನು

ನಾನು ಸುಖವಾಗಿ ಸಹಿಸಬಲ್ಲವಳಾಗಿದ್ದೆ, ಒಂದು ದಿನ ಆಳವಾದ ಧ್ಯಾನದಲ್ಲಿದ್ದಾಗ ನನಗೆ ಒಮ್ಮಿಂದೊಮ್ಮೆ ತಳಮಳ ಆರಂಭವಾಯ್ತು; ಕಣ್ತೆರೆದಾಗ ನನ್ನಿದಿರು ೬–೭ ಅಡಿ ಉದ್ದದ ಒಂದು ನಾಗರಹಾವು ಬುಸ್ಸೆಂದು ಹೆಡೆಯೆತ್ತಿ ಅಲ್ಲಾಡಿಸುತ್ತಾ ನಿಂತಿತ್ತು. ಆ ಊರಲ್ಲಿ ಅಂಥ ಹಾವುಗಳನ್ನು ನಾಗಗಳೆಂದು ಕರೆಯುತ್ತಿದ್ದರು. ಅವುಗಳ ಮಾರಕವಿಷವು ಆಗಿಂದಾಗ ಕಚ್ಚಿದವರನ್ನು ಸಾಯಿಸಿ ಬಿಡುತ್ತದೆ. ನನ್ನ ಬಗೆಗೆ ಆ ಹಾವು ಅಷ್ಟೇಕೆ ಕೆರಳಿತೆಂಬುದು ನನಗೆ ಮೊಟ್ಟಮೊದಲು ಗೊತ್ತಾಗಲಿಲ್ಲ. ನಾನು ಅದರ ಬಿಲವನ್ನು ಮರೆಮಾಡಿ ಕುಳಿತಿರಬೇಕೆಂಬ ಆಲೋಚನೆ ಆಮೇಲೆ ಹೊಳೆಯಿತು. ನಾನು ಕುಳಿತಲ್ಲಿಂದ ಹಿಂದೆಯೇ ಆ ಮರದಲ್ಲಿ ಒಂದು ಪೊಟ್ಟರೆಯಿತ್ತು. ಆದರೆ ನಾನು ಈಗ ಏನುಮಾಡಲಿ? ನಾನು ಸ್ವಲ್ಪ ಹರಿದಾಡಿದರೆ ನನ್ನನ್ನದು ಕಚ್ಚಿಬಿಡುತ್ತದೆ. ನಾನು ಹರಿದಾಡದೆ ಕುಳಿತೆ; ಹೆದರಲೂ ಇಲ್ಲ. ಸ್ಥಿರವಾಗಿ ನಾನದನ್ನು ದಿಟ್ಟಿಸಿ ನನ್ನ ಇಚ್ಛಾಶಕ್ತಿಯನ್ನು ಬಲವಾಗಿ ಪ್ರಯೋಗಿಸಿದೆ. ಕೆಲಹೊತ್ತಾದಮೇಲೆ ಬುಸುಗುಟ್ಟುವುದು ನಿಂತಿತು. ಅದು ಸ್ವಲ್ಪ ಮೃದುವಾದಂತೆ ತೋರಿತು. ಆಗ ಅದರ ಮೇಲಿಟ್ಟ ನೆಟ್ಟದೃಷ್ಟಿಯನ್ನು ಚಲಿಸದೆಯೇ ಮತ್ತು ಇಚ್ಛಾಶಕ್ತಿಯನ್ನು ಪ್ರಯೋಗಿಸುತ್ತಲೇ ನಾನು ನನ್ನ ಕಾಲುಗಳನ್ನು ಒಂದಾದಮೇಲೊಂದರಂತೆ ದೂರಸರಿಸಿದೆ. ಕಟ್ಟ ಕಡೆಗೆ ಆ ದುಷ್ಟನಾಗ ಒಮ್ಮೆಲೇ ತನ್ನ ಹೆಡೆಯನ್ನು ತಗ್ಗಿಸಿ ಹಿಂದಿರುಗಿ ಹತ್ತಿರದಲ್ಲಿದ್ದ ಕೆರೆಯ ನೀರಿಗೆ ಹಾರಿತು. ಆ ಮೇಲೆ ನಾನು ಥಿಯೋನನನಿಗೆ ಈ ಘಟನೆಯನ್ನು ತಿಳಿಸಿದೆ. ಅವನು ಆ ಹಾವು ಆ ಮರದ ಪೊಟರೆಯಲ್ಲಿರುವುದು ನಮಗೆಲ್ಲ ಗೊತ್ತಿದ್ದ ಸಂಗತಿ. ಮರದ ಮೇಲೆ ಅದು ತನ್ನ ಬಿಲಕ್ಕೆ ಹೋಗಬೇಕೆಂದು ಬಯಸಿತು. ಆದರೆ ನೀನು ಅದರ ದಾರಿಯನ್ನು ಅಡ್ಡಗಟ್ಟಿದೆ. ಆದ್ದರಿಂದ ಅದು ನಿನ್ನ ಮೇಲೆ ಸಿಟ್ಟುಮಾಡಿತು. ಸ್ವಲ್ಪ ಹಾಲು ಕೊಟ್ಟರೆ ಅದು ಕೂಡಲೇ ನಿನ್ನ ಗೆಳೆಯನಾಗಿ ಬಿಡುತ್ತದೆ– ಎಂದು ಹೇಳಿದನು. ಅಂದಿನಿಂದ ನನಗೆ ಹಾವಿನಭಯ ಹೊರಟೇಹೋಯ್ತು. ಅದಕ್ಕಿಂತ ಮೊದಲು ಹಾವು ಬಂದರೆ ಹೆದರಿ ಮುರುಟಿ ಹೋಗುತ್ತಿದ್ದೆ; ನನ್ನ ಸಂಯಮವನ್ನು ಮೀರಿದ ತೀವ್ರ ದ್ವೇಷ ಹಾವುಗಳ ಬಗೆಗೆ ನನ್ನಲ್ಲಿತ್ತು. ಒಳಿತಿಗಾಗಿ ಅದು ನನ್ನನ್ನು ಬಿಟ್ಟು ಹೋಯ್ತು."

(೪) ಕ್ಲೆಮ್ಸಲ್ಲಿನಲ್ಲಿ ಮೊಂಜರ್‌ಥಿಯೋನನಿದ್ದ ಸ್ಥಳದಲ್ಲಿ ಒಂದು ಪಿಯಾನೋ ಇತ್ತು. ಅದನ್ನು ತಿಳಿದಿದ್ದ ನಾನು ನನ್ನ ಸಂಗೀತ ಸ್ವರಮೇಳದ ಪುಸ್ತಕವನ್ನು ಅನೇಕಬಾರಿ ಅಲ್ಲಿಗೆ ತೆಗೆದು ಕೊಂಡುಹೋಗಿ ಅದನ್ನು ಬಾರಿಸುತ್ತಿದ್ದೆ. ಒಂದು ದಿನ ಒಂದು ಇಡಿ ರಾಗವನ್ನು ಬಾರಿಸಿ ನಿಲ್ಲಿಸಿದೊಡನೆಯೇ ಅಕಸ್ಮಾತ್ತಾಗಿ 'ವಟರ್' ಎಂಬ ಸದ್ದು ನನಗೆ ಕೇಳಿಸಿತು. ಆ ಸದ್ದೆಲ್ಲಿಂದ ಬಂತು? ಸುತ್ತಲೂ ನೋಡಿದಾಗ ಬಾಗಿಲೆದುರು ವಿಲಕ್ಷಣನಾದ ಹೊಸ ಅತಿಥಿಯೊಬ್ಬ ಕಾಣಿಸಿದ–ಅವನಾರು ಗೊತ್ತೇ? ನನ್ನತ್ತ ಗುಂಬಳಗಣ್ಣಿಂದ ನೋಡುತ್ತ ಕುಳಿತಿದ್ದ ಒಂದು ಹೆಗ್ಗಪ್ಪೆ! ಅದರತ್ತ ನೋಡಿದಕೂಡಲೇ ಅದು ವಟಗುಟ್ಟಿತು.

ಆ ವಟಗುಟ್ಟುವಿಕೆಯ ಅರ್ಥ ನನಗೆ ಚೆನ್ನಾಗಿ ಗೊತ್ತಾಯ್ತು: 'ಹಾಗೆ ಪಿಯೋನವನ್ನು, ಬಾರಿಸು'– ಎಂಬುದೇ ಆ ಅರ್ಥ. ಆದ್ದರಿಂದ ಇನ್ನಷ್ಟು ಹೊತ್ತು ಪಿಯೋನವನ್ನು ಬಾರಿಸಿದೆ. ಅದು ಅಲ್ಲೇ ಕುಳಿತು ಮೈಮರೆತು ಕೇಳಿತು. ಆಮೇಲೆ ನಾನು ಪಿಯಾನೋವನ್ನು ಬಾರಿಸಿದಾಗಲೆಲ್ಲ ಎಲ್ಲಿಂದಲೋ ಆ ಕಪ್ಪೆ ಬಂದುಬಿಡುತ್ತಿತ್ತು. ಮತ್ತು ಹಾಗೆ ಬಂದು ತನ್ನ ಹೆಗ್ಗಣ್ಣುಗಳಿಂದ ನನ್ನನ್ನು ದಿಟ್ಟಿಸಿ ನೋಡುತ್ತ ಅದು ಸಂಗೀತವನ್ನು ಕೇಳುತ್ತಿತ್ತು; ಅಲ್ಲದೆ, ನಾನು ಬಾರಿಸುವುದನ್ನು ನಿಲ್ಲಿಸಿದಾಗ 'ವಟರ್' ಎನ್ನುತ್ತಿತ್ತು."

(೫) ನಾನು ಕ್ಲೆಮ್ಸಲ್ಲಿನಿಂದ ಎರಡನೆಯ ಸಲ ತಿರುಗಿ ಬರುತ್ತಿದ್ದಾಗ ಯೂರೋಪಿನ ಯಾತ್ರೆ ಮಾಡಲೆಂದು ಥಿಯೋನನು ನನ್ನೊಡನೆ ಬಂದನು. ಸಮುದ್ರದಲ್ಲಿ ನಾವಿದ್ದಾಗ ಒಂದು ದೊಡ್ಡ ಬಿರುಗಾಳಿ ನಮ್ಮನ್ನೆದುರುಸಿತು. ಕಡಲು ಬಹಳ ಒರಟೊರಟಾಯ್ತು. ಉತ್ತುಂಗ ತರಂಗಗಳು ನಮ್ಮ ಹಡಗನ್ನು ಮೇಲು ಕೆಳಗು ಮಾಡುತ್ತಿದ್ದವು. ಏನಾದರೊಂದು ಅಪಾಯ ಸಂಭವಿಸೀತೆಂದು ಎಲ್ಲರೂ ಭಾವಿಸಿದರು. ಹಡಗಿನಲ್ಲಿದ್ದ ಪಯಣಿಗರು ಭೀತರಾದರು; ಕೆಲವರು ಅತ್ತು ಕೂಗಲಾರಂಭಿಸಿದರು. ಹಡಗಿನ ಸಾರಥಿಯೇ ಸ್ವತಃ ಕಂಗಾಲಾಗಿ ಪಯಣಿಗರಿಗೆ ಅಪಾಯವುಂಟಾದೀತೆಂದು ಹೇಳಿದನು. ಥಿಯೋನನು ನನ್ನತ್ತ ನೋಡಿ 'ಹೋಗು ಅದನ್ನು ನಿಲ್ಲಿಸು' ಎಂದನು. ನೌಕಾಚೋದಕನು ಆಶ್ಚರ್ಯಪಟ್ಟ; ಅವನಿಗೆ ಅದೇನೆಂದು ಅರ್ಥವಾಗಲಿಲ್ಲ ನನಗಾಯ್ತು. ನಾನು ನನ್ನ ಕಿರುಮನೆಗೆ ಹೋಗಿ ಮಲಗಿದೆ. ನನ್ನ ದೇಹವನ್ನು ಅಲ್ಲಿ ಬಿಟ್ಟು ನಿರಾತಂಕವಾಗಿ ನಾನು ಕಡಲಲ್ಲಿಳಿದೆ. ಅಸಂಖ್ಯಾತ ನೀರೂಪ ಜೀವಿಗಳಲ್ಲಿ ನೀರಮೇಲೆ ಯದ್ವಾತದ್ವಾ ಹತ್ತಿ ಹಾರಿ ಗಲಾಟೆ ಮಾಡುತ್ತಿದ್ದವು. ಆಗ ಸಮೀಪಿಸಿ, "ಈ ಬಡವರನ್ನು ಚಿತ್ರಹಿಂಸಗೆ ಗುರಿಪಡಿಸಿದ್ದರಿಂದ ನಿಮಗೇನು ಸಿಗುತ್ತದೆ?" ಎಂದು ಕೇಳಿ ನಾನು ನಮ್ರತೆಯಿಂದ ಮಧುರವಾಗಿ ಆ ತುಂಟಾಟವನ್ನು ನಿಲ್ಲಿಸಲು ವಿನಂತಿಸಿದೆ. "ದಯೆಯಿಟ್ಟು ಶಾಂತರಾಗಿ ಇವರ ಜೀವಗಳನ್ನು ಉಳಿಸಿರಿ" ಎಂದೆ. ಅರ್ಧ ಗಂಟೆಯವರೆಗೆ ನಾನು ಅವುಗಳ ತುಂಟಾಟ ಸರಿಯಲ್ಲವೆಂದು ವಾದಿಸುತ್ತ ಮತ್ತು ಬೇಡಿಕೊಳ್ಳುತ್ತ ನಿಂತೆ. ಅನಂತರ ಅವು ತಮ್ಮ ಚಟುವಟಿಕೆಗಳನ್ನು ನಿಲ್ಲಿಸಿದವು. ಅಲ್ಲೋಲಕಲ್ಲೋಲವಾಗಿದ್ದ ಸಮುದ್ರವಾರಿ ಶಾಂತವಾಯ್ತು, ಆ ಮೇಲೆ ನಾನು ನನ್ನ ದೇಹವನ್ನು ಪುನಃ ಹೊಕ್ಕು ಕಿರಿಮನೆಯಿಂದ ಹೊರಬಂದೆ. ಹಡಗಿನ ಉಪ್ಪರಿಗೆಯನ್ನು ಹತ್ತಿನೋಡಿದಾಗ ಅಲ್ಲಿ ಎಲ್ಲರೂ ಸಂತೋಷದ ಮಾತುಗಳನ್ನಾಡುತ್ತ ಸುಖವಾಗಿದ್ದುದನ್ನು ಕಂಡೆ."

ಸಾಮಾನ್ಯವಾಗಿ ಮಾತೃಶ್ರೀಯು ತನ್ನ ಹಿಂದಿನ ಜೀವನದ ಬಗೆಗೆ ಏನನ್ನೂ ಹೇಳುವುದಿಲ್ಲ; ಯಾರಾದರೂ ಕೇಳಿದರೂ ಸುಮ್ಮನಿದ್ದು ಬಿಡುತ್ತಿದ್ದಳು. ಆದರೆ ೧೯೨೦ರಲ್ಲಿ ಯಾರೋ ಕೇಳಿದರು– 'ಹಿಂದುಸ್ಥಾನಕ್ಕೆ ಬಂದದ್ದೇಕೆ? ಅರವಿಂದರ ಪರಿಚಯ ಹೇಗಾಯಿತು? ಎಂದು. ಈ ಪ್ರಶ್ನೆಗಳಿಗಾಕೆ ಲಿಖಿತ ಉತ್ತರ ಕೊಟ್ಟಳು.

"ದೇವರ ವಿಶಿಷ್ಟ ಕಾರ್ಯದಲ್ಲಿ ಸೇವೆಸಲ್ಲಿಸಲೆಂದು ನಾನೀಲೋಕಕ್ಕೆ ಕಳಿಸಲ್ಪಟ್ಟಿದ್ದೇನೆ ಎಂದು ಯಾವಾಗ ನನಗೆ ಗೊತ್ತಾಯಿತು? ಮತ್ತು ಅರವಿಂದರು ನನಗೆ ಹೇಗೆ ಸಿಕ್ಕಿದರು? ಎಂಬ ಪ್ರಶ್ನೆಗಳಿಗೆ ನಾನು ನಿಮಗೆ ಸಂಕ್ಷೇಪವಾಗಿ ಉತ್ತರ ಕೊಡುತ್ತೇನೆ.

"ನನಗೆ ಮೊದಲೇ ಮೀಸಲಾಗಿದ್ದ ಕಾರ್ಯದ ಬಗೆಗಿನ ಎಚ್ಚರ ನನಗೆ ಇಂಥ ದಿನವೇ ಆಯಿತೆಂದು ಸರಿಯಾಗಿ ಹೇಳುವುದು ಕಷ್ಟ, ಬಹುಶಃ ಹುಟ್ಟುವಾಗಲೇ ನನಗೆ ಅಂಥ ಜಾಗರವಿತ್ತೆಂದು ತೋರುತ್ತದೆ; ಅದು ಮನಸ್ಸು–ಬುದ್ಧಿಗಳು ಬೆಳೆಯುತ್ತ ಬಂದ ಹಾಗೆ ಸ್ಪಷ್ಟ. ಸ್ಪಷ್ಟತರವಾಗುತ್ತ ಬಂದಿತೆಂದು ತೋರುತ್ತದೆ.

೧೧ ರಿಂದ ೧೩ ವರ್ಷ ವಯಸ್ಸಾಗುವುದರೊಳಗೆ ಬಹುಬೇಗ ಮೇಲಿಂದ ಮೇಲೆ ನನಗುಂಟಾದ ಆಧ್ಯಾತ್ಮಿಕ ಅನುಭವಗಳ ದೆಸೆಯಿಂದ ದೇವರು ಖಂಡಿತವಾಗಿ ಇದ್ದಾನೆ. ದೇವರಲ್ಲಿ ಐಕ್ಯಹೊಂದುವುದು ಮಾನವನಿಗೆ ಸಾಧ್ಯ. ಮನುಷ್ಯನ ಚೈತನ್ಯ ಹಾಗೂ ಕಾರ್ಯಗಳಲ್ಲಿ ಅವನ (ದೇವರ) ಅನುಭವವನ್ನು ಪಡೆಯುವುದು ಶಕ್ಯ ಮತ್ತು ಮಾನವನ ದಿವ್ಯಜೀವನದಲ್ಲಿ ದೇವರನ್ನು ಒಡಮೂಡಿಸುವುದು ಕೂಡ ಅಸಾಧ್ಯವಲ್ಲ– ಎಂಬುದು ನನಗೆ ಸ್ಪಷ್ಟವಾಯ್ತು. ಈ ಅನುಭವ ಮತ್ತು ಧ್ಯೇಯಗಳನ್ನು ಪಾರ್ಥಿವ ಜೀವನದಲ್ಲಿ ವಾಸ್ತವಿಕವಾಗಿ ಪ್ರಯೋಗಿಸುವ ಬಗೆ ಹೇಗೆ ಎಂಬ ಬಗೆಗೆ ನಿದ್ರಾವಸ್ಥೆಯಲ್ಲಿ ನನಗೆ ಅನೇಕ ಗುರುಗಳು ಒಂದು ಬಗೆಯ ತರಬೇತು ಕೊಡುತ್ತಿದ್ದರು. ಅನಂತರ ಈ ಗುರುಗಳಲ್ಲೆಷ್ಟೋ ಜನರು ಹೊರಜಗತ್ತಿನಲ್ಲಿ ನನಗೆ ಭೇಟಿಯಾದರು. ನಾನು ಸ್ವಲ್ಪ ಪ್ರಬುದ್ಧಾವಸ್ಥೆಗೆ ಬಂದ ಮೇಲೆ ಈ ಗುರುಗಳಲ್ಲೊಬ್ಬರು ನನಗೆ ಹೆಚ್ಚು ನಿಕಟ ಪರಿಚಯದವರಾದರು. ಅವರೊಡನೆ ನನಗೆ ಆಳವಾದ ಆಧ್ಯಾತ್ಮಿಕ ಸಂಬಂಧ ಉಂಟಾಯಿತು. ನನಗಾಗ ಭಾರತದ ತತ್ವಜ್ಞಾನ ಮತ್ತು ಮತಧರ್ಮಗಳ ತಿಳುವಳಿಕೆ ಅತ್ಯಲ್ಪವಾಗಿತ್ತು; ಆದರೆ ಈ ಗುರುಗಳನ್ನು ನಾನು ಕೃಷ್ಣನೆಂದು ಕರೆಯುತ್ತಿದ್ದೆ ಮತ್ತು ಇವರನ್ನು ಒಂದುದಿನ ಎಲ್ಲಾದರೂ ಭೇಟಿಮಾಡಬೇಕೆಂದು ಎನ್ನಿಸಿತು; ಅಲ್ಲದೆ ಇವರೊಂದಿಗೆ ಒಟ್ಟಾಗಿ ದೇವರ ಉದ್ದೇಶವನ್ನು ಪೂರೈಸಬೇಕೆಂದು ತೋರಿತು. ಭಾರತವನ್ನು ನನ್ನ ತಾಯಿನಾಡೆಂದೇ ತಿಳಿದು ನಾನು ಪ್ರೀತಿಸುತ್ತಿದ್ದೆ. ಅನಂತರ ೧೯೧೪ರಲ್ಲಿ ಈ ದೇಶಕ್ಕೆ ಬರುವ ಸುದೈವ ಒದಗಿ ಬಂತು. ಇಲ್ಲಿ ನನಗೆ ಶ್ರೀ ಅರವಿಂದರು ಕಂಡರು ಮತ್ತು ಆ ಕೂಡಲೇ ಇವರೇ ನನಗೆ ಹಿಂದೆ ನಿದ್ರಾವಸ್ಥೆಯಲ್ಲಿ ಕಾಣಿಸಿಕೊಂಡ ಗುರುಗಳೆಂದೂ ಇವರನ್ನೇ ನಾನು ಕೃಷ್ಣನೆಂದು ಕರೆದುದೆಂದೂ ಗುರುತಿಸಿದೆ. ಈ ಸಾಲುಗಳಿಂದ ಇಲ್ಲಿಯೇ ನನಗೆ ಕೆಲಸದ ಸ್ಥಳವಿದೆ ಮತ್ತು ಇವರೊಟ್ಟಿಗೇ ನಾನು ಕೆಲಸಮಾಡಬೇಕು ಎಂಬುದನ್ನು ನಾನು ಹೇಗೆ ದೃಢಪಡಿಸಿಕೊಂಡೆ ಎಂಬುದು ನಿಮಗೆ ಗೊತ್ತಾಗುತ್ತದೆ."

ಅನಂತರವೂ ಶ್ರೀ ಅರವಿಂದರಿಗೆ ಆಕೆ ಮನುಷ್ಯೆಯಾಗಿದ್ದಳು. ಆದರೀಗ ದಿವ್ಯಮಾತೆಯ ಸ್ವರೂಪವನ್ನು ತಾಳಿದ್ದಾಳೆ ಎಂಬಂಥ ಪ್ರಶ್ನೆಯನ್ನು ಯಾರೋ

ಹಾಕಿದರು. ಇದಕ್ಕೆ ಶ್ರೀ ಅರವಿಂದರು ತಮ್ಮ ಸತತ ದಾರ್ಢ್ಯ ಸಂಪನ್ನ ಉತ್ತರವನ್ನು ಹೀಗೆ ಕೊಟ್ಟರು. ದೇವರು ಮಾನವ ರೂಪ (ಆಭಾಸ)ವನ್ನು ತಾಳುತ್ತಾನೆ ದಾರಿನಡೆದು ಮನುಷ್ಯರಿಗೆ ತೋರಿಸಲೆಂದು ಆತನು ಹೊರಪ್ರಕೃತಿಯ ಸ್ವರೂಪವನ್ನು ತಾಳುತ್ತಾನೆ ಆದರವನೆಂದೂ  ತನ್ನ ದೇವತ್ವವನ್ನು ಕಳೆದುಕೊಳ್ಳುವುದಿಲ್ಲ. ಇಲ್ಲಿ ಆಗುವುದೊಂದು ಅವತಾರ ಬೆಳೆಯುತ್ತಿರುವ ದೇವಪ್ರಜ್ಞೆಯ ಅವತಾರ; ಹಾಗಲ್ಲದೆ ಇದು ಮಾನವ್ಯವು ದಿವ್ಯವಾಗುವುದಲ್ಲ. ಬಾಲ್ಯದಲ್ಲಿಯೇ ಮಹಾತಾಯಿಯು ಒಳಗಿಂದೊಳಗೆ ಅತಿಮಾನವತೆಯ ಮಟ್ಟದಲ್ಲಿದ್ದಳು: ಆದುದರಿಂದ ಅವಳು ಮೊದಲು ಮಾನವಿಯಾಗಿದ್ದು ಆಮೇಲೆ ದೇವಿಯಾದಳೆಂಬ ಬಹುಜನರ ಅಭಿಮತವು ತಪ್ಪು.

# ೪. ಮಹಾಮಾತೆಯ ಸಾಧನೆ

ಮಹಾಮಾತೆ (ಮಾತೃಶ್ರೀ) ದೇವೀಪ್ರಜ್ಞೆಯೊಂದಿಗೆ ಹುಟ್ಟಿದವಳು. ಅವಳು ಮಾಡಬೇಕಾಗಿದ್ದ ಸಾಧನೆಯೆಲ್ಲವೂ ಆ ಪ್ರಜ್ಞೆಯನ್ನು (ಚೈತನ್ಯವನ್ನು) ಪೂರ್ಣತೆಗೊಯ್ದು ಮುಟ್ಟಿಸುವುದಕ್ಕಾಗಿಯೇ. ಸಾಮಾನ್ಯವಾಗಿ ಆಧ್ಯಾತ್ಮಿಕ ಜೀವನವನ್ನು ಹೊಕ್ಕವರೆಲ್ಲರೂ ಕಠಿನವೂ ಕ್ಲೇಶಕರವೂ ಆದ ಒಂದು ಅವಧಿಯನ್ನು ಕಳೆಯ ಬೇಕಾಗುತ್ತದೆ–ಕೆಲವು ಸಲ ಗುರುವಿನ ಅಂಕೆಯಲ್ಲಿ, ಕೆಲ ಬಾರಿ ಗುರುಗಳಿಲ್ಲದೆ. ಇದು ಮಹಾಚಾರ್ಯರ ಹಾಗೂ ಅವತಾರ ಪುರುಷರ ಜೀವನದಲ್ಲಿ ಕೂಡ ತಪ್ಪಿದ್ದಲ್ಲ. ಬುದ್ಧನಂತೆಯೇ ಚೈತನ್ಯ. ರಾಮಕೃಷ್ಣ, ವಿವೇಕಾನಂದ, ಅರವಿಂದರೆಲ್ಲರೂ ತಪಸ್ಸುಮಾಡಿದರು. ಆದರೆ ಮಾತೃಶ್ರೀಯು ಯಾರಿಂದಲೂ ಯಾವ ಉಪ ಶಿಕ್ಷಣವನ್ನೂ ಪಡೆಯಲಿಲ್ಲ– ಧ್ಯಾನ ಹೇಗೆ ಮಾಡಬೇಕೆಂಬುದರ ಬಗೆಗೆ ಕೂಡ. ಶೈಶವದಿಂದ ಅವಳೇ ಸ್ವತಃ ಅದನ್ನು ಮಾಡುತ್ತಿದ್ದಳು. ಆ ಬಗೆಗೆ ಶ್ರೀ ನೀರದ್‌ಬರನ್ ಬರೆದಿದ್ದಾರೆ:

"ಮಾತೃಶ್ರೀ ಹೇಳಿದ ಅಲ್ಪಸಲ್ಪ ಸಂಗತಿಗಳಿಂದಲೇ ನನಗೆ ದೃಢವಾಗಿ ಗೊತ್ತಾಯಿತು– ನಮ್ಮಂತೆ ಈಕೆ ಪಾರ್ಥಿವ ಪುತ್ರಿಯಲ್ಲ–ಎಂದು. ಮಕ್ಕಳಾಟಿಕೆಯ ಕಾಲದಿಂದಲೇ ಅವಳಲ್ಲಿ ದಿವ್ಯಜ್ಞಾನ ಮೂಡುತ್ತಿತ್ತು. ಅಂದೇ ಆಕೆಗೆ ತನ್ನನ್ನು ವಿಸ್ತಾರವಾದ ಚಿಚ್ಛಕ್ತಿಯೊಂದು ಸುತ್ತುವರಿದಿದೆ ಮತ್ತು ಅದ್ಭುತವಾದ ಉಜ್ವಲ ಪ್ರಭೆಯು ತನ್ನ ತಲೆಯ ಮೇಲೆ ನೇತು ಬಿದ್ದಿದೆ–ಎಂದು ಪದೇ ಪದೇ ಅನುಭವಕ್ಕೆ ಬರುತ್ತಿತ್ತು. ಅದನ್ನರಿಯಹೋದರೆ ಅವಳಿಗೇನೂ ಗೊತ್ತಾಗುತ್ತಿರಲಿಲ್ಲ. ಏಕೆಂದರೆ ಅವಳ ವಯಸ್ಸು ಅಷ್ಟು ಸಣ್ಣದಾಗಿತ್ತು. ಏಳನೆಯ ವರ್ಷದಿಂದ ಆಕೆ ಧ್ಯಾನ ಯೋಗಿನಿಯಾಗತೊಡಗಿದಳು– ಧ್ಯಾನವೆಂದರೇನೆಂಬುದು ಗೊತ್ತಿಲ್ಲದೆಯೇ! ತನಗಾಗಿಯೇ ಒಂದು ಸಣ್ಣ ಕುರ್ಚಿಯನ್ನು ಮಾಡಿಸಿಕೊಂಡು ಅದರಲ್ಲವಳು ಗಂಟೆಗಟ್ಟಲೆ ಧ್ಯಾನಮಗ್ನೆಯಾಗಿರುತ್ತಿದ್ದಳು. ಅವಳ ತಾಯಿ ಅಮೂಲಾಗ್ರವಾಗಿ ವಿಚಾರ ವಾದಿನಿಯಾಗಿದ್ದಳು. ಅವಳಿಗೆ ತನ್ನ ಮಗಳ ಮನಃ ಪ್ರಣಾಲಿ ರುಚಿಸುತ್ತಿರಲಿಲ್ಲ. ತನ್ನ ಮಕ್ಕಳು ಚುರುಕಾದವರೂ ಪ್ರಾಪಂಚಿಕರೂ ಆಗಿರಬೇಕೆಂಬುದು ಅವಳ ಅಪೇಕ್ಷೆಯಾಗಿತ್ತು. ಅವರು ಆಧ್ಯಾತ್ಮಿಕರಾಗುವುದು ಅವಳಿಗೆ ಬೇಡವಾಗಿತ್ತು. ಆದುದರಿಂದ ತನ್ನ ಮಗಳಿಗೊಳಗೊಳಗೆ ಏನಾಗುತ್ತಿತ್ತೆಂಬುದನ್ನರಿಯದೆ ಸ್ವಾಭಾವಿಕವಾಗಿ ಅವಳು ಮಾತೃಶ್ರೀಯ ಈ ಬಗೆಯನ್ನು ಕಂಡು ಸಹಿಸದವಳಾಗಿದ್ದಳು. ಒಂದು ದಿನ ಅವಳನ್ನು ಅವಳತಾಯಿ ಜೋರಾಗಿ ಕೇಳಿದಳು: ಯಾವಾಗಲೂ ಇಡೀ ಜಗತ್ತಿನ ಭಾರವೇ ನಿನ್ನ ಹೆಗಲಿನ ಮೇಲಿದೆ ಎನ್ನುವಂತೆ ಅದೇಕೆ ಮುಖಬಿಗಿದುಕೊಂಡು ಬಿಮ್ಮನೆ ಕುಳಿತಿರುತ್ತೀಯೆ?' ಮಾತೃಶ್ರೀ ಗಂಭೀರವಾಗಿ ಉತ್ತರವಿತ್ತಳು: 'ಹೌದು,

ಹಾಗೇ ಸರಿ, ಇಡಿ ಜಗತ್ತಿನ ದುಃಖವನ್ನು ನಾನು ಹೊತ್ತುಕೊಳ್ಳಬೇಕಾಗಿದೆ. ಅದರಿಂದಲೇ ನಾನು ಇಷ್ಟು ಗಂಭೀರವಾಗಿ ಕರ್ತವ್ಯದ ಬಿಗುವಿನಲ್ಲಿ ಇದ್ದೇನೆ.' ಹುಡುಗಿಗೆ ಹುಚ್ಚು ಹಿಡಿದಿದೆಯೆಂದು ಅವಳಮ್ಮ ತಿಳಿದುಕೊಂಡಳು."

ತನ್ನ ಮುಂದಿನ ಕಾರ್ಯಗಳಿಗಾಗಿ ಮಾತೃಶ್ರೀಗೆ ಉಪ ಶಿಕ್ಷಣ ದೊರಕಿದ್ದು ಬಹಳ ಹಿಂದೆಯೇ ಬರಲಾರಂಭಿಸಿದ್ದ ಅವಳ ಸ್ವಪ್ನಗಳಿಂದ. ಅವಳು ಕನಸಿನಲ್ಲಿ ಹಲವಾರು ಗುರುಗಳನ್ನು ಸಂದರ್ಶಿಸಿದಳು ಮತ್ತು ಪ್ರತಿರಾತ್ರಿಯೂ ಆಕೆ ತನ್ನ ಸ್ವಪ್ನದಲ್ಲಿ ಒಂದಾಗುತ್ತಿದ್ದಳು. ಸರಿಯಾಗಿ ಏನಾಗಿದೆಯೋ ಅದನ್ನಾಕೆ ತನ್ನ ದಿನಚರಿಯಲ್ಲಿ ಬರೆದಿಟ್ಟಿದ್ದಾಳೆ.

"ನಾನು ಕೂಸಾಗಿದ್ದಾಗ ಸುಮಾರು ೧೩ ಹಿಡಿದಾಗ ಸುಮಾರು ಒಂದು ವರ್ಷದವರೆಗೆ ನಾನು ಹಾಸಿಗೆಯಲ್ಲಿರುವಾಗಲೇ ಪ್ರತಿರಾತ್ರಿಯೂ ನನ್ನ ದೇಹವನ್ನು ಬಿಟ್ಟು ನೆಟ್ಟಗೆ ಮನೆ ಪಟ್ಟಣಗಳೆಲ್ಲವನ್ನೂ ಹತ್ತಿ ಮತ್ತೂ ಮೇಲೆ ಹೋಗುತ್ತಿದ್ದೇನೆ ಎನ್ನಿಸುತ್ತಿತ್ತು. ಆಗ ನಾನು ನನಗಿಂತ ಉದ್ದವಾದ ಒಂದು ಝಗಝಗಿಸುವ ಬಂಗಾರದ ಉಡುಪನ್ನು ಧರಿಸಿರುವಂತೆ ತೋರುತ್ತಿತ್ತು ಮತ್ತು ನಾನು ಮೇಲೆ ಮೇಲೆ ಹೋದಂತೆ ನನ್ನ ಉಡುಪು ಕೆಳಗಿಳಿದು ವೃತ್ತಾಕಾರದ ದೊಡ್ಡ ಮೇಲ್ಹಾವಣಿಯಾಗಿ ಪಟ್ಟಣವನ್ನು ಮುಸುಕುವಂತೆ ಕಾಣುತ್ತಿತ್ತು. ಆಮೇಲೆ ಎಲ್ಲ ದಿಕ್ಕುಗಳಿಂದಲೂ ಗಂಡಸರು, ಹೆಂಗಸರು, ಮಕ್ಕಳು, ಮುದುಕರು, ಕಾಯಿಲೆಬಡಿಕರು ಮತ್ತು ದುಃಖಿಗಳು ತಮ್ಮ ದೇಹಗಳಿಂದ ಹೊರಬರುತ್ತಿರುವುದನ್ನು ಕಾಣುತ್ತಿದ್ದೆ ಅವರೆಲ್ಲರೂ ಹರಹಿದ ನನ್ನ ಆ ಬಂಗಾರದ ಉಡುಪಿನ ಕೆಳಗೆ ಸೇರಿ ತಮ್ಮ ದುಃಖ, ತಾಪ, ನೋವು, ನುರಿ, ನರಳಿಕೆಗಳನ್ನು ಹೇಳಿಕೊಂಡು ಸಹಾಯ ಯಾಚಿಸುತ್ತಿರುವಂತೆ ತೋರುತ್ತಿತ್ತು. ಅದಕ್ಕೆ ಉತ್ತರವಾಗಿ ಆ ಚುರುಕೂ ಸಜೀವವೂ ಆದ ಉಡುಪು ಅವರಲ್ಲಿ ಒಬ್ಬೊಬ್ಬರನ್ನೇ ಹಾಸಿ ಸಮೀಪಿಸುತ್ತಿತ್ತು. ಅದನ್ನು ಮುಟ್ಟಿದೊಡನೆಯೇ ಅವರಿಗೆ ಗುಣವಾಗಿ ಸಮಾಧಾನವಾಗಿ ಮೊದಲಿಗಿಂತ ಹೆಚ್ಚು ಸುಧೃಢರೂ ಸುಖಿಗಳೂ ಆಗಿ ಸ್ವದೇಹಗಳನ್ನು ಹೊಗುತ್ತಿದ್ದರು. ಇನ್ನಾವುದೂ ನನಗೆ ಇಷ್ಟು ಸುಂದರ, ಇಷ್ಟು ಸುಖಕರ ಎನ್ನಿಸುತ್ತಿದ್ದಿಲ್ಲ. ದಿನದ ಚಟುವಟಿಕೆಗಳೆಲ್ಲವೂ ನಿರ್ಜೀವ, ಜಿಗುಪ್ಸಾಜನಕ ಎನ್ನಿಸುತ್ತಿತ್ತು. ಬಣ್ಣವಿಲ್ಲದ ಬೋಳೆಂದು ತೋರುತ್ತಿತ್ತು. ಮೇಲೆ ಹೇಳಿದ ರಾತ್ರಿಯ ಚಟುವಟಿಕೆಯ ಮುಂದೆ ಅದೆಲ್ಲ ಸಪ್ಪೆ. ಇರುಳ ಬಾಳೇ ನಿಜವಾದ ಬಾಳು ಎಂದು ಕಾಣುತ್ತಿತ್ತು. ಹಾಗೆ ನಾನು ಮೇಲೆರುತ್ತಿದ್ದಾಗಲೆಲ್ಲ ನನ್ನ ಎಡಕ್ಕೆ ಒಬ್ಬ ಮುದುಕ ಕಾಣಿಸುತ್ತಿದ್ದ ಅವನು ಮೌನಿಯೂ ಅಚಲನೂ ಆಗಿ ನನ್ನತ್ತನೋಡಿ ದಯಾಘನ ವಾತ್ಸಲ್ಯದಿಂದ ಉಪಸ್ಥಿತನಾಗಿರುವುದರ ಮೂಲಕ ನನ್ನನ್ನು ಪ್ರೋತ್ಸಾಹಿಸುತ್ತಿರುವಂತೆ ಕಾಣುತ್ತಿತ್ತು. ದಟ್ಟವಾದ ಬದನೆಬಣ್ಣದ ಬಟ್ಟೆಯುಟ್ಟ ಆ ಮುದುಕನು **ದುಃಖ ಪುರುಷ** ಎಂಬುದು ಆಮೇಲೆ ನನಗೆ ತಿಳಿದುಬಂತು."

"ಈ ಆಳವಾದ ಅನುಭವವು ಅವರ್ಣನೀಯವೆಂದೇ ಹೇಳಬೇಕು. ನನ್ನ ಮಿದುಳು ಈ ಸತ್ಯವನ್ನು ಇತರ ಭಾಗಗಳ ಮೂಲಕ ಅನುವಾದ ಮಾಡಿಕೊಂಡದ್ದು ಹೀಗಿದೆ;

"ಹಗಲಲ್ಲಿ ಮತ್ತು ಇರುಳಲ್ಲಿ ಬಹಳ ಸಲ ನನಗೆನ್ನಿಸಿದ್ದು ಈ ಬಗೆಯಾಗಿ. ನಾನೆಂದರೆ ನನ್ನ ಶುದ್ಧ ಚೇತನ. ಅದು ನನ್ನ ಹೃದಯದಲ್ಲಿ ಸಂಪೂರ್ಣ ಏಕಾಗ್ರವಾಗಿ ನೆಲೆಸಿದೆ. ಆ ಹೃದಯವು ಒಂದು ಅವಯವವೇ ಅಲ್ಲ ಅದೊಂದು ಭಾವನೆ ಕೂಡ ಅಲ್ಲ ಅದು ದಿವ್ಯಪ್ರೇಮ. ಅದು ಅವೈಯಕ್ತಿಕ, ಅಶರೀರ, ನಿತ್ಯ. ನಾನಿಂಥ ಪ್ರೇಮಸ್ವರೂಪವಾದಾಗ ಇಡೀ ಭೂಮಿಯ ಮೇಲಿರುವ ಪ್ರತಿಯೊಂದು ಪದಾರ್ಥದ ಕೇಂದ್ರ ಬಿಂದುವಿನಲ್ಲಿ ಬದುಕಿರುವಂತೆ ಅನುಭವವಾಗುತ್ತಿತ್ತು. ಜೊತೆಗೆ ನನ್ನೆದೆ ವಿಶ್ವಕ್ಕಿಂತ ವಿಶಾಲವಾಗಿತ್ತು; ಆದ್ದರಿಂದ ನಾನು ನನ್ನ ಅನಂತ ಬಾಹುಗಳನ್ನು ಚಾಚಿ ಅಮಿತ ಕೋಮಲತೆಯಿಂದ ಎಲ್ಲ ಜೀವಿಗಳನ್ನೂ ಆವರಿಸಿ, ಗುಂಪುಗೂಡಿಸಿ, ಅಪ್ಪಿಕೊಂಡು ಎದೆಗಿಟ್ಟು ಸಮಾಧಾನ ಪಡಿಸುವಂತೆ ತೋರುತ್ತಿತ್ತು... ಶಬ್ದಗಳು ಬಡಪಾಯಿಗಳು ಮತ್ತು ಹೊಲೆಗೆಟ್ಟಂಥವು. ಎಲೈ ದಿವ್ಯ ಗುರುವೇ, ಮಾನಸಿಕ ಭಾಷಾಂತರಗಳು ಯಾವಾಗಲೂ ಬಾಲಿಶ..."

ಆ ಚಿಕ್ಕವಯಸ್ಸಿನಲ್ಲಿ ಈ ಸ್ವಪ್ನಗಳ ಅರ್ಥವನ್ನು ಚೆನ್ನಾಗಿ ಮಾಡಿಕೊಳ್ಳಲಾಗದಿದ್ದರೂ ಮಾತೃಶ್ರೀಯು ಅವುಗಳ ಅಂತಃಪ್ರಭಾವವನ್ನು ಎಂದೂ ಮರೆಯಲಾರದಾದಳು. ಆದರೆ ವಯಸ್ಸು ಹಾಗೂ ಅನುಭವ ಹೆಚ್ಚುತ್ತ ಹೋದಹಾಗೆ ಅವಳಿಗೆ ತಾನು ಮಾಡತಕ್ಕ ಕೆಲಸ ಇದೇ ಎಂಬುದು ದೃಢಪಟ್ಟಿತು ಮತ್ತು ಈಗಲೂ ಅವಳಿದನ್ನೇ ಮಾಡುತ್ತಿದ್ದಾಳೆ. ವಿಶಾಲ ವಿಶ್ವದ ಎಲ್ಲೆಡೆಯಲ್ಲಿರುವ ಅಸಂಖ್ಯಾತ ಮಕ್ಕಳಿಗೆ ಉದಾರವಾಗಿ ಆಕೆ ಆಶ್ರಯ ನೀಡುತ್ತಿದ್ದಾಳೆ, ದುಃಖಿಗಳಿಗೆ ನೆರವೀಯುತ್ತಿದ್ದಾಳೆ, ತನ್ನ ಹರಕೆಗಳನ್ನು ಅನುಗ್ರಹವನ್ನೂ ನೀಡುತ್ತಿದ್ದಾಳೆ.

ಆದರೆ ದಿವ್ಯವಾಗಿದ್ದರೂ ಆಕೆಯ ಬಾಳೆಲ್ಲಾ ಸುಗಮವಾಗಿ ಸಾಗಿಲ್ಲ. ಅನೇಕ ಕಷ್ಟಗಳಲ್ಲವಳು ಹೊಕ್ಕು ಹೊರಡಬೇಕಾಯಿತು; ಅಗ್ನಿದಿವ್ಯಗಳಲ್ಲಿ ಸತ್ವ ಪರೀಕ್ಷೆಗಳಲ್ಲಿ ಸಿಲುಕ ಬೇಕಾಯಿತು. ಅನೇಕಾನೇಕ ಪ್ರತಿ ಸನ್ನಿವೇಶಗಳೊಡನೆ ವೀರೆಯಂತೆ ಹೋರಾಡ ಬೇಕಾಯಿತು. ಅವಳ ಸುದೀರ್ಘ ಸಾಧನಾವಧಿಯಲ್ಲಿ ಅವಳೆಷ್ಟು ಕಷ್ಟ, ಕಾರ್ಪಣ್ಯ, ಆಪತ್ತು, ಅಪಾಯ, ದುಃಖ, ದುವರ್ಮಾನ, ನೋವು, ನರಳಿಕೆಗಳನ್ನು ಅನುಭವಿಸಬೇಕಾಯಿತೋ ನಮಗರಿಯದು. ಆದರೆ ಅರವಿಂದರಿಗಿದೆಲ್ಲಾ ತಿಳಿದಿತ್ತು. ಅವರು ತಮ್ಮ ಒಂದು ಪತ್ರದಲ್ಲಿ ಕೆಲ ಸೂಚನೆ ಮಾಡಿದ್ದಾರೆ. ಮಹಾತಾಯಿಗೂ ನನಗೂ ಪರ್ವತೋಪಮ ಸಂಕಷ್ಟಗಳನ್ನು ದಾಟಬೇಕಾಗಿತ್ತು. ನಮ್ಮ ಪೂರ್ವಜರಲ್ಲಿ ಯಾರೂ ಮಾಡಿರದಷ್ಟು ಮಟ್ಟಿಗೆ ನಾವು ಕಠಿಣತರ ಪರಿಸ್ಥಿತಿಗಳನ್ನೆದುರಿಸಿ, ಕಠಿಣತರ

ಯುದ್ಧಗಳನ್ನು ಮಾಡಿ. ಕ್ರೂರತರ ಗಾಯಗಳನ್ನು ಸಹಿಸಿಕೊಂಡು, ಕಾಲಿಡಲು ತೆರವಿಲ್ಲದಂಥ ಅರಣ್ಯಗಳಲ್ಲಿ ಹೊಕ್ಕು ಹೊರಟು, ಸುಡುವ ಮರುಭೂಮಿಯಲ್ಲಿ ಕಾಲಿಟ್ಟು, ಎತ್ತಿ, ದ್ವೇಷಾವಿಷ್ಟ ಶತ್ರುಕೋಟಿಸ್ತೋಮಗಳನ್ನು ಗೆದ್ದು ಬಂದಿರುವೆವು."

ಇದು ಬಹಳ ವಿಷಯಗಳನ್ನು ವಿವರಿಸುತ್ತದೆ. ಮಾತೃಶ್ರೀಯ ದಿನಚರಿಯಿಂದಲೂ ನಮಗೆ ಎಷ್ಟೋ ಸಂಗತಿಗಳು ತಿಳಿದು ಬರುತ್ತವೆ. ಆಕೆ ಬಾಹ್ಯವಿಷಯಗಳ ಬಗೆಗೆ ಏನನ್ನೂ ಹೇಳಿರದಿದ್ದರೂ ಇವೆಲ್ಲವೂ ಆಕೆಯ ವಿವಿಧ ಪ್ರಾರ್ಥನೆಗಳ ಮೂಲಕ ವ್ಯಕ್ತವಾಗುತ್ತವೆ. ಇವೆಲ್ಲವನ್ನೂ ಮೂಲತಃ ಫ್ರೆಂಚ್ ಭಾಷೆಯಲ್ಲಿ ಬರೆದಿಡಲಾಗಿತ್ತು. ಅನಂತರ ಇವನ್ನು "ಮಹಾತಾಯಿಯ ಪ್ರಾರ್ಥನೆಗಳು ಮತ್ತು ಪ್ರಣಿಧಾನಗಳು" ಎಂಬ ಹೆಸರಿನಲ್ಲಿ ಇಂಗ್ಲೀಷಿಗೆ ಭಾಷಾಂತರಿಸಲಾಯಿತು. ಮೊದಲಿನಿಂದಲೂ ಆಕೆ ತನ್ನ ದೇವರಿಗೆ ಎಷ್ಟು ಪ್ರಾಮಾಣಿಕವಾಗಿಯೂ ಸಂಪೂರ್ಣವಾಗಿಯೂ ಭಕ್ತಿ ನಿಷ್ಠಳಾಗಿದ್ದಳು ಎಂಬುದನ್ನಿದು ಸ್ಪಷ್ಟವಾಗಿ ನಿದರ್ಶಿಸುತ್ತದೆ. ಪ್ರತಿ ಪುಟದಲ್ಲಿಯೂ ಅವಳು ದೇವರನ್ನು ಸಂಬೋಧಿಸಿರುವುದನ್ನು ನಾವು ಕಾಣುತ್ತೇವೆ; ಅವಳು ಆತನೊಡನೆ ಮಾತಾಡುವುದನ್ನು ಮತ್ತು ಅವನಿಂದ ಉತ್ತರವನ್ನು ಕೂಡ ಪಡೆಯುವುದನ್ನು ಅಲ್ಲದೆ, ಆ ಉತ್ತರವನ್ನು ಕೂಡಲೇ ಬರೆದುಕೊಂಡಿರುವುದನ್ನು ಅದರಲ್ಲಿ ನೋಡುತ್ತೇವೆ. ಅವಳು ಯಾರನ್ನು ಕರೆವಳೋ ಅವನು ಅವಳೆದುರೇ ಇದ್ದಾನೆ ಎಂಬಂತೆ ಆ ಪ್ರಾರ್ಥನಾಗ್ರಂಥ ಪಡಿಮೂಡಿಸಿದೆ. ಪ್ರಾರ್ಥಿಸುವುದು ಹೇಗೆಂಬುದನ್ನು ತಿಳಿದುಕೊಂಡು ಉಪಕೃತರಾಗಲಿ ಎಂದೀಗ ಆಕೆ ಈ ಪುಸ್ತಕವನ್ನು ಸಾರ್ವಜನಿಕರಿಗೆ ಕೊಟ್ಟಿದ್ದಾರೆ. ಅದೊಂದು ಗ್ರಂಥರತ್ನ. ಅವಳ ಮಧುರತಮ ವಾಣಿಯನ್ನು ನಾವದರಲ್ಲಿ ಕೇಳಬಹುದು.

ದಿನಚರಿಯಿಂದ ಖಂಡಿತವಾಗಿ ನಾವು ಹೆಚ್ಚಿನ ಸಂಗತಿಯನ್ನು ಕಲಿಯಬಹುದು. ಅದು ಸಂಪೂರ್ಣ ಸಮರ್ಪಣೆಯ ಗ್ರಂಥವಷ್ಟೇ ಅಲ್ಲ; ಅದರಲ್ಲಿ ತನ್ನ ಬಾಳಿನ ಭಿನ್ನ ಭಿನ್ನ ಅವಧಿಗಳಲ್ಲಿ ಅವಳು ಎಂಥ ಕಷ್ಟಕರ ಅವಿರ್ಭಾವಗಳಲ್ಲಿ ಮತ್ತು ಸಾಧನೆಯ ಎಷ್ಟು ವಿವಿಧ ಹಂತಗಳಲ್ಲಿ ಹೊಕ್ಕು ಹೊರಟಳು ಎಂಬುದನ್ನು ನಾವು ನೋಡಬಲ್ಲೆವು.

ದಿನಚರಿಯು ೧೯೧೨ರ ನವೆಂಬರ್ ೨ರಿಂದ ಆರಂಭವಾಗಿ ೧೯೩೧ರ ನವೆಂಬರ್ ೨೪ರಲ್ಲಿ ಮುಗಿಯುತ್ತದೆ. ಉದ್ಧೃತಾಂಶಗಳು ತೋರಿಸುವಂತೆ ಅದರಲ್ಲಿ ಏಳು ಬೀಳುಗಳೆಷ್ಟೋ ಇವೆ. ಒಂದನ್ನಿಲ್ಲಿ ನಾವು ಉದ್ಧರಿಸುತ್ತೇವೆ.

"ಓ ಉದಾತ್ತ ಈಶ್ವರನೇ, ನೀನು ಎಲ್ಲ ವಸ್ತುಗಳಲ್ಲಿಯೂ ಅವುಗಳ ಪ್ರಾಣ, ಬೆಳಕು ಮತ್ತು ಪ್ರೇಮ ಎನ್ನಿಸಿರುವೆ. ಸೈದ್ಧಾಂತಿಕವಾಗಿ ನನ್ನ ಇಡೀ ಇರವೂ ನಿನಗೆ ಸಮರ್ಪಿತವಾಗಿದ್ದರೂ ಈ ಸಮರ್ಪಣೆಯನ್ನು ವಿವರ ಪೂರ್ವಕವಾಗಿ ಆಚರಣೆಗೆ ತುರುವುದು ಈಗಲೂ ಕಷ್ಟಕರವೆನ್ನಿಸಿದೆ. ಈ ಲಿಖಿತ ದ್ಯಾನದ (ಪ್ರಣಿಧಾನದ) ಕಾರಣ ಅಥವಾ ಸಮರ್ಥನೆಯು ನಿನಗೆ ಅದನ್ನು ನಿತ್ಯವೂ ಸಂಬೋಧಿಸುವುದರಲ್ಲೇ

ಇದೆ ಎಂಬುದನ್ನು ತಿಳಿಯಲು ನನಗೆ ಹಲವಾರು ವಾರಗಳು ಬೇಕಾದವು. ಈ ಪ್ರಕಾರ ಪ್ರತಿದಿನವೂ ನಿನ್ನೊಡನೆ ಪದೇ ಪದೇ ಮಾಡಿದ ಸಂಭಾಷಣೆಯಲ್ಲಿ ಸ್ವಲ್ಪವನ್ನು ಭೌತಿಕ ರೂಪಕ್ಕೆ ಇಳಿಸುತ್ತೇನೆ. ಸಾಧ್ಯವಾದಷ್ಟು ಚೆನ್ನಾಗಿ ನಾನು ನಿನಗೆ ನನ್ನ ತಪ್ಪೊಪ್ಪಿಗೆಯನ್ನು ಸಲ್ಲಿಸುತ್ತೇನೆ: ನಿನಗೇನನ್ನಾದರೂ ನಾನು ಹೇಳಬಲ್ಲೆನೆಂದು ನಾನು ಹಾಗೆ ಮಾಡುವುದಿಲ್ಲ. ಏಕೆಂದರೆ, ನೀನೇ ಸ್ವತಃ ಸರ್ವ– ಆದರೆ ನಾವು ನೋಡುವ ಕೃತಕವೂ ಬಾಹ್ಯವೂ ಆದ ರೀತಿಯು, ಒಂದೊಮ್ಮೆ ಹಾಗೆ ಹೇಳಬಹುದಾದರೆ, ನಿನಗೆ ಅಪರಿಚಿತ–ನಿನ್ನ ಸ್ವಭಾವಕ್ಕೆ ವಿರುದ್ಧ. ಆದರೂ ನಿನ್ನತ್ತ ತಿರುಗುವುದರಿಂದ, ಈ ವಿಷಯುಗಳನ್ನೆಲ್ಲ ವಿವೇಚಿಸುವಾಗ ನಾನು ನನ್ನನ್ನು ನಿನ್ನ ಬೆಳಕಿನಲ್ಲಿ ಮುಳುಗಿಸುವುದರಿಂದ, ಮೆಲ್ಲಮೆಲ್ಲನೆ ಅವುಗಳು ನಿಜವಾಗಿಯೂ ಎಂಥವು ಎಂಬುದನ್ನು ಹೆಚ್ಚು ಹೆಚ್ಚಾಗಿ ಕಂಡುಕೊಳ್ಳುವೆನು ಅದು ಎಲ್ಲಿಯವರೆಗೆ? ನಿನ್ನೊಳಗೆ ನಾನು ಐಕ್ಯವಾಗುವ ದಿನದವರೆಗೆ. ಆಗ ನೀನಾಗಿ ಹೋಗಿರುತ್ತೇನೆ. ನಾನು ಮುಟ್ಟಬೇಕೆಂದಿರುವ ಗುರಿ ಇದು; ಈ ಜಯದತ್ತ ನನ್ನೆಲ್ಲ ಯತ್ನಗಳೂ ಹೆಚ್ಚುಹೆಚ್ಚಾಗಿ ಒಲಿಯುವುವು. ನಾನೆಂದು ಮುಂದೆಂದೂ ಹೇಳಲಾಗದಿರುವ ದಿನವನ್ನು ನಾನು ಬಯಸುತ್ತೇನೆ ಏಕೆಂದರೆ, ಆ ದಿನ ನಾನು ನೀನಾಗಿರುವೆನು.

"ಪ್ರತಿದಿನ ಎಷ್ಟು ಸಲ ನಿನಗೆ ಸಮರ್ಪಿಸದೆ ನಾನು ಈಗಲೂ ಕಾರ್ಯದಲ್ಲಿ ಉದ್ಯುಕ್ತೆಯಾಗುತ್ತೇನೆ. ಆ ಕೂಡಲೇ ನನಗೆ ಒಂದು ಅಲಕ್ಷಣೀಯವಾದ ಅಸ್ವಾಸ್ಥ್ಯ ಉಂಟಾಗುತ್ತದೆ; ಅದು ನನ್ನ ಶರೀರದ ಇಂದ್ರಿಯಪ್ರಜ್ಞೆಯ ಮೂಲಕ ನನ್ನ ಹೃದಯದಲ್ಲಿ ಒಂದು ಬಗೆಯ ಚುಚ್ಚುನೋವಿನ ರೂಪವನ್ನು ತಾಳುತ್ತದೆ; ಅದೇ ನಾನು ನಿನಗೆ ಸಮರ್ಪಿಸಲಿಲ್ಲವೆಂಬುದನ್ನು ಅರಿತುದರ ಗುರುತು. ಆಗ ನಾನು ನನ್ನ ಕಾರ್ಯವನ್ನು ನನಗೆ ಕರ್ಮಸ್ಥಾನದಲ್ಲಿ (ವಿಷಯದ ವಸ್ತುವಿನ ಸ್ಥಾನದಲ್ಲಿ) ಇಡುತ್ತೇನೆ– ಆಗ ಅದು ನನಗೆ ಹಾಸ್ಯಾಸ್ಪದವಾಗಿ ತೋರುತ್ತದೆ ಅಥವಾ ಬಾಲಿಶ ಇಲ್ಲವೆ ದೋಷಪೂರ್ಣ ಎಂದೆನಿಸುತ್ತದೆ; ಅದನ್ನು ನಾನು ನಿಂದಿಸುತ್ತೇನೆ, ಒಂದು ಕ್ಷಣ ನಾನು ಖಿನ್ನೆಯಾಗುತ್ತೇನೆ ಅನಂತರ ನಿನ್ನಲ್ಲಿ ಮಗುವಿನ ಶ್ರದ್ಧೆಯಿಂದ ಮುಳುಗುತ್ತೇನೆ ನಿನ್ನಿಂದ ಬರುವ ಬಲಕ್ಕಾಗಿ ಮತ್ತು ಸ್ಫೂರ್ತಿಗಾಗಿ ಕಾಯುತ್ತೇನೆ– ಆ ಮೂಲಕ ನನ್ನಲ್ಲಿಯ ಮತ್ತು ನನ್ನನ್ನಾವರಿಸಿದ ತಪ್ಪನ್ನು ತಿದ್ದುತ್ತೇನೆ ಎರಡು ವಸ್ತುಗಳು ಒಂದು; ಏಕೆಂದರೆ, ನನಗೀಗ ಎಲ್ಲ ಕಾರ್ಯಗಳ ಕೇವಲ ಪರಸ್ಪರಾವಲಂಬನವನ್ನು ನಿರ್ಧರಿಸುವ ವಿಶ್ವವ್ಯಾಪಕ ಐಕ್ಯದ ಸತತವೂ ಅಚ್ಚುಕಟ್ಟೂ ಆದ ಸಾಕ್ಷಾತ್ಕಾರವಾಗಿದೆ."

ಮಾತೃಶ್ರೀ ಆಗಲೇ ದೇವರೊಡನೆ ಆಪ್ತತೆಯನ್ನು ಪಡೆದಿದ್ದಾಳೆ ಎಂಬುದನ್ನಿದು ತೋರಿಸುತ್ತದೆ. ದೇವರೀಗ ಅವಳಿಗೆ ಹಳೆಯ ಗೆಳೆಯ, ಸುಪರಿಚಿತ ಪದೇ ಪದೇ ಆಕೆ ಅವನೊಡನೆ ಸಂಪರ್ಕ ಬೆಳೆಸುತ್ತಾಳೆ– ಆದರೂ ಆರ್ಜವದಿಂದ ತನ್ನ ಕರ್ತವ್ಯಚ್ಯುತಿಗಳನ್ನು

ಒಪ್ಪಿಕೊಳ್ಳುತ್ತಾಳೆ ಅದರಿಂದ ಅದರ ತಿದ್ದುಪಡಿಯಾದೀತೆಂದು ಅವಳ ನಿರೀಕ್ಷೆ. ಅವಳು ಆತನನ್ನು ಅನನ್ಯವಾಗಿ ಅವಲಂಭಿಸಿದ್ದಾಳೆ. ಆದ್ದರಿಂದ ಅವಳಿಗೆ ಜಯದ ಬಗೆಗೆ ಆತ್ಮವಿಶ್ವಾಸವಿದೆ

ಕೆಲವೆ ದಿನಗಳ ಅನಂತರ ಅವಳು ಮಾಡಿದ ಈ ಪ್ರಾರ್ಥನೆಯು ಅವಳಿಗೆ ದೇವಸಾಕ್ಷಾತ್ಕಾರವಾಗಿದೆ ಎಂಬುದಕ್ಕೆ ಸಾಕ್ಷಿಯಾಗಿದೆ;

**ನವೆಂಬರ್ ೧೯, ೧೯೧೨**

"ನಿನ್ನನ್ನು ಪ್ರಾಮಾಣಿಕ ಬಯಕೆಯಿಂದ ಅರಸುತ್ತಿದ್ದ ಆ ಆಂಗ್ಲನಿಗೆ ನಾನು ನಿನ್ನೆ ಹೇಳಿದೆ: ನಾನು ಖಂಡಿತವಾಗಿಯೂ ನಿನ್ನನ್ನು ಹುಡುಕಿತೆಗೆದಿದೇನೆ ಮತ್ತು ನಮ್ಮ ಐಕ್ಯವು ಸ್ಥಿರ ಎಂದು. ನನ್ನ ಜಾಗರದಲ್ಲಿರುವುದು ಅಂಥ ಸ್ಥಿತಿ. ನನ್ನ ಆಲೋಚನೆಗಳೆಲ್ಲವೂ ನಿನ್ನೆಡೆಗೆ ಹೋಗುತ್ತವೆ; ನನ್ನ ಕಾರ್ಯಗಳೆಲ್ಲವೂ ನಿನಗೆ ಮುಡಿಪಾಗಿವೆ; ನಿನ್ನ ಉಪಸ್ಥಿತಿಯು ನನ್ನಪಾಲಿಗೆ ಕೇವಲವೂ ಅಪರಿವರ್ತನೀಯವೂ ಅವಿಕಲ್ಪನೀಯವೂ ಆದ ಒಂದು ವಸ್ತುಸ್ಥಿತಿ. ನಿನ್ನ ಶಾಂತಿಯು ಸ್ಥಿರವಾಗಿ ನನ್ನ ಹೃದಯದಲ್ಲಿ ನೆಲೆನಿಂತಿದೆ. ಆದರೂ ಈ ಐಕ್ಯಸ್ಥಿತಿಯು ಬಡವಾದುದೆಂಬುದನ್ನು ಬಲ್ಲೆ. ಇದು ಅದೃಢವೂ ಹೌದು. ನಾಳೆ ನನಗೆ ಸಾಧ್ಯವಾಗುವುದರ ಜೊತೆಗೆ ಹೋಲಿಸಿದರೆ ಅನಿಸುವುದೇ ಹೀಗೆ. ಹಾಗೆ ಸಾಧ್ಯವಾಗುವ ಐಕ್ಯಸ್ಥಿತಿಯಿಂದ ಈಗ ನಾನು ಬಹಳ ದೂರದಲ್ಲಿದ್ದೇನೆ. ಆ ಐಕ್ಯಸ್ಥಿತಿಯಲ್ಲಿ ನಾನು ನಾನೆಂಬ ಭಾವವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವೆನು. ಆ ನಾನೆಂಬ ಭಾವವಾವುದು? ನನ್ನನ್ನು ಅಭಿವ್ಯಕ್ತ ಮಾಡಲು ಈಗ ನಾನು ಬಳಸುತ್ತಿರುವ 'ನಾನು.' ಆದರದು ಪ್ರತಿಸಲವೂ ಅಭಿವ್ಯಕ್ತವಾಗಲೆಳಸುವ ವಿಚಾರವನ್ನು ಹೇಳಲು ಅಯೋಗ್ಯವಾದ ಪದದಂತೆ ಸಂಕುಚಿತ; ಅರ್ಥಾತಃ ಪರಿಮಿತ, ನಿಯಂತ್ರಿತ... ನೀನು ಸರ್ವ, ಸರ್ವವ್ಯಾಪಿ, ಸರ್ವಾಂತರ್ಯಾಮಿ. ಕಾರ್ಯನಿರತವಾದ ಈ ಶರೀರವು ನಿನ್ನ ಸ್ವಂತ ಶರೀರ. ಇದೂ ದೃಶ್ಯವಾದ ಇಡಿ ಜಗತ್ತೂ ಸರಿಸಮ. ಈ ಜಗತ್ತು ನಿನ್ನ ಕಾಯವೇ ಅಲ್ಲವೇ? ಉಸಿರುಬಿಡುವವನು ನೀನು. ಆಲೋಚಿಸುವವನು ನೀನು, ಈ ದ್ರವ್ಯದಲ್ಲಿ ಪ್ರೀತಿಸುವವನು ನೀನು ಇದು ನೀನೇ ಆದ್ದರಿಂದಿದು ನಿನ್ನ ಬುದ್ಧಿಪೂರ್ವಕವಾದ ಸೇವಕನಾಗಬಯಸುತ್ತದೆ."

ಈ ಪ್ರಾರ್ಥನೆಯಲ್ಲಿ ಆಕೆ ಖಚಿತವಾಗಿ ತಾನು ತನ್ನ ದೇವರನ್ನು ಕಂಡುದಾಗಿ ಹೇಳುತ್ತಾಳೆ–ಅಲ್ಲದೆ. ಅವಳು ಆತನೊಡನೆ ಸತತ ಸಂಪರ್ಕವನ್ನಿಟ್ಟು–ಕೊಂಡಿರುವುದಾಗಿಯೂ ಅವನೊಡನೆ ತನ್ನನ್ನು ಐಕ್ಯಗೊಳಿಸಿಕೊಂಡಿರುವುದಾಗಿಯೂ ಈ ಸ್ಥಿತಿಯು ಇನ್ನಷ್ಟು ಗಭೀರ–ಗಭೀರತರವಾಗುತ್ತ ಹೋಗಿರುವುದಾಗಿಯೂ ಹೇಳುತ್ತಾಳೆ.

ಆದರೀ ವೈಯಕ್ತಿಕ ಮುಕ್ತಿಯ ಸಾಕ್ಷಾತ್ಕಾರವು ಅವಳ ಆತ್ಯಂತಿಕ ಧ್ಯೇಯವನ್ನು ಮುಟ್ಟುವ ಒಂದು ಹೆಜ್ಜೆಯಷ್ಟೇ ಆಗಿದೆ; ಅವಳು ಜಗತ್ತಿಗೇ ಸುಖ–ಶಾಂತಿಗಳನ್ನು

ತರಲು ಬಯಸುತ್ತಾಳೆ. ಅಜ್ಞಾನಿ, ದುಃಖಿ, ನಿರಾಶ, ಕ್ಲೇಶಮಗ್ನ ಎನ್ನಿಸಿರುವ ಜನಗಳೆಲ್ಲರಿಗೂ ಅವನ್ನು ಒದಗಿಸಲು ಹಾರಯಿಸುತ್ತಾಳೆ. ಅವಳ ಭಾವನೆಗಳನ್ನು ಈ ಕೆಳಗಿನ ಪ್ರಾರ್ಥನೆ ಸ್ಪಷ್ಟವಾಗಿ ಅಭಿವ್ಯಂಜಿಸುತ್ತದೆ;

**ಜೂನ್ ೧೭, ೧೯೧೩**

"ಹೇ ಈಶ್ವರ. ನನ್ನನ್ನು ಬೆಳಕು ಬೀರುವ ಮತ್ತು ಬೆಚ್ಚಗಿರಿಸುವ ಬೆಂಕಿಯಂತೆ, ಬಾಯಾರಿಕೆ ಹಿಂಗಿಸುವ ಬುಗ್ಗೆಯಂತೆ, ನೆರಳೀಯುವ ಮತ್ತು ಕಾಯುವ ಮರದಂತೆ ರೂಪಿಸು... ಜನರು ಅಷ್ಟು ಅಸುಖಿಗಳೂ ಅಜ್ಞಾನಿಗಳೂ ಆಗಿದ್ದಾರೆ; ಅವರಿಗೆ ಅಷ್ಟು ನೆರವು ಬೇಕು.

"ನನಗೆ ನಿನ್ನಲ್ಲಿರುವ ಅಂತಃ ಶ್ರದ್ಧೆ. ಒಳನಿಶ್ಚಯ ದಿನೇ ದಿನೇ ಬೆಳೆಯುತ್ತಿದೆ; ಹಾಗೇ ದಿನೇ ದಿನೇ ನಿನ್ನ ಪ್ರೇಮವು ನನ್ನ ಹೃದಯದಲ್ಲಿ ಹೆಚ್ಚು ಹೆಚ್ಚು ಸಜೀವವಾಗುತ್ತ ಹೋಗುತ್ತಿದೆ ನಿನ್ನ ಬೆಳಕು ಒಮ್ಮೆಲೇ ಹೆಚ್ಚು ಪ್ರಕಾಶಮಾನವೂ ಮೃದುವೂ ಆಗುತ್ತಿದೆ; ನಿನ್ನ ಸತ್ಯವು ಅದ್ಭುತ; ನಿನ್ನ ಸರ್ವಶಕ್ತ ಪ್ರೇಮವು ಜಗತ್ತನ್ನು ಸಂರಕ್ಷಿಸುತ್ತದೆ."

ತನ್ನ ಮನಸ್ಸು–ಹೃದಯಗಳಲ್ಲಿ ಆಕೆ ಮಾಡುತ್ತಿದ್ದ ಸಾಧನೆಯ ಅಂಗವಿದು. ಇದು ಅವಳಿಗಾಗಿ ಅಲ್ಲ– ಇಡಿ ಜಗತ್ತಿಗಾಗಿ. ಈ ಪ್ರಾರ್ಥನೆಯು ದಿನವೂ ಅವಳ ಇರವಿನಿಂದ ಹೊರಬೀಳುತ್ತಿತ್ತು. ದಿನಚರಿಯಿಂದ ಬರೆದ ಈ ಇಡೀ ಪುಸ್ತಕದಲ್ಲಿ ಆಕೆಯ ಉತ್ಕಂಠಿತ ಭಕ್ತಿ ಮತ್ತು ಧ್ಯೇಯಸಾಧನೆಯ ಆಶೆಗಳನ್ನುಳಿದರೆ ಯಾವ ಪುಟದಲ್ಲಿಯೂ ಇತರ ವಿಷಯವಿಲ್ಲ. ಅವು ಕವಿಸಹಜವಾದ ಅಥವಾ ಕಾವ್ಯಮಯ ಅಭ್ಯಾಸಕರ್ಮಗಳಲ್ಲ. ಅವುಗಳಲ್ಲಿ ಸಾಕಷ್ಟು ಕಾವ್ಯವಿರುವುದೇನೋ ನಿಜ. ಆದರದೆಂಥ ಕಾವ್ಯ? ಅದು ಪವಿತ್ರತರಕಾವ್ಯ; ಅದರಲ್ಲಿ ಹೊರಗಿನದೇನೂ ಇಲ್ಲ ಅವಳ ದೈವಭಕ್ತಿಯಷ್ಟೇ ಇದೆ– ಅವಳ ದುಃಖ ಕಾರುಣ್ಯಗಳಷ್ಟೇ ಇವೆ. ಯಾರ ಬಗೆಗೆ ಅವಳ ದುಃಖ–ಕಾರುಣ್ಯಗಳು? ಪರಮ ಸತ್ಯವನ್ನು ಮರೆತು ಕುರುಡರೂ ಅಜ್ಞಾನಿಗಳೂ ಅಸುಖಿಗಳೂ ಆಗಿ ಸುಖಕ್ಕಾಗಿ ಅತ್ತಿಂದಿತ್ತ ಅಲೆದಾಡಿ ಅಂತ್ಯವಿಲ್ಲದ ತೊಂದರೆಗಳಲ್ಲಿ ಸಿಕ್ಕಿಕೊಳ್ಳುವ ಜನರ ಬಗೆಗೆ. ಅವರ ಚೇತನೆಯನ್ನು ಬದಲಾಯಿಸಿ, ಅವರ ದುಃಖವನ್ನು ಪರಿಹರಿಸಿ, ಒಂದು ಹೊಸಸ್ಥಿತಿಗೆ ಅವರನ್ನು ಎತ್ತುವಂಥ ಶಕ್ತಿಯನ್ನು ವರವಾಗಿ ಕೊಡೆಂಬುದೇ ಅವಳ ಪ್ರಾರ್ಥನೆ. ಇದೊಂದೇ ವಿಷಯು ಅವಳ (ಪ್ರಾರ್ಥನೆಗಳಲ್ಲಿ) ವಿವೇಚಿಸಲ್ಪಟಿರುವುದು.

ಮಾತೃಶ್ರೀಯ ಮೊದಲ ಜೀವನ ಹಾಗಿತ್ತು. ಆಮೇಲೆ ಪ್ಯಾರಿಸ್ಸನ್ನು ಬಿಟ್ಟು ಹೊರಡುವ ಸಮಯ ಬಂತು. ಆಗ ಭಾರತಕ್ಕೆ ಬಂದು ಪಾಂಡಿಚೇರಿಗೆ ಹೋದಳು. ಅವಳು ಪ್ಯಾರಿಸ್ಸನ್ನು ಬಿಡುವ ಮೊದಲು ತನ್ನ ದಿನಚರಿ ಪುಸ್ತಕದಲ್ಲಿ ಹೀಗೆ ಬರೆದಳು:

**ಮಾರ್ಚ್ ೪, ೧೯೧೪**

“ಇದು ಕೊನೆಯ ಅವಧಿ. ನಿನ್ನ ಉಪಸ್ಥಿತಿಯಿಂದ ತುಂಬಿದ ಈ ಕೋಣೆಯಲ್ಲಿರುವ ಈ ಮೇಜನ್ನು ಆಧರಿಸಿ ನಾನು ಬರೆಯುವುದು ಬಹಳ ಕಾಲಾನಂತರ ಆಗಬಹುದು. ಈ ಪುಟದ ಬರೆಹ ಹರಿಯುತ್ತಿರುವ ಹಾಗೇ ನಾನು ಇದನ್ನು ಪ್ರಣಿಧಾನಿಸುತ್ತಿರುವುದು ಆಂತರಿಕ ಏಕಾಗ್ರತೆಯಿಂದ, ಅದು ತಿರುಗುತ್ತಲೇ ಹಿಂದಿನ ಸ್ವಪ್ನದಲ್ಲಿ ಅದೃಶ್ಯವಾಗುತ್ತದೆ. ಮುಂದಿನ ಖಾಲಿ ಪುಟದಲ್ಲಿ ಭವಿಷ್ಯತ್‌ಕಾಲದ ಸ್ವಪ್ನ ಸುಪ್ತವಾಗಿ ತುಂಬಿದೆಯೆಂದು ನಾನು ನಂಬುತ್ತೇನೆ. ಈಶ್ವರನೇ, ನಮ್ಮಲ್ಲಿರುವ ಎಲ್ಲವೂ ನಿನ್ನನ್ನು ಆರಾಧಿಸುವಂತೆ ಮತ್ತು ಸೇವಿಸುವಂತೆ ಅನುಗ್ರಹಿಸು, ಎಲ್ಲರಿಗೂ ಶಾಂತಿ ದೊರಕಲಿ!”

ತನ್ನ ಜಲಪ್ರಯಾಣಕಾಲದಲ್ಲಿ ಅದೇ ದಾಟಿಯಲ್ಲಿ ಅವಳು ಇತರ ಹಲವಾರು ಪ್ರಾರ್ಥನೆಗಳನ್ನು ಬರೆದಳು:

“ಒಂದೇ ಬಯಕೆಯಿಂದ ನನ್ನ ಪ್ರಾರ್ಥನೆಯು ನಿನ್ನೆಡೆಗೆ ಏಳುತ್ತದೆ: ನಿನ್ನ ವಾತ್ಸಲ್ಯವನ್ನು ಅಳವಡಿಸಿಕೊಂಡು ಬಾಳುವುದು, ನಿನ್ನ ವಾತ್ಸಲ್ಯವನ್ನು ಬೆಳಕಾಗಿ ಹರಿಸುವುದು ಎಲ್ಲರೂ ಸುರಕ್ಷಿತತೆಯ ಕೋಟೆಯಲ್ಲಿ ಭದ್ರವಾಗಿರುವಷ್ಟರಮಟ್ಟಿನ ಶಕ್ತಿ ಮತ್ತು ಪರಿಣಾಮಕತೆಯಿಂದ ಅದಾಗಬೇಕು ನಮ್ಮ ಸಂಬಂಧದಿಂದ ಎಲ್ಲರೂ ಉನ್ನತತರ ಪ್ರಜ್ಞಾಸ್ತರಕ್ಕೇರಿ ಬೆಳಕನ್ನು ಕಂಡವರಾಗಬೇಕು. ಬಾಳ ಬವಣೆಯನ್ನು ಪರಿಹರಿಸುವ, ಕ್ಲೇಶವನ್ನು ಕಳೆಯುವ ಪ್ರಶಾಂತ ಆತ್ಮವಿಶ್ವಾಸವನ್ನೂ ಶಾಂತಿಯನ್ನೂ ಹುಟ್ಟಿಸುವ, ತೀಕ್ಷ್ಣ ವೇದನೆಯನ್ನು ಒರಿಸಿ ಒಗೆದು ಅದರ ಜಾಗದಲ್ಲಿ ಏಕಮೇವಾದ್ವಿತೀಯವಾದ ನಿಜಸುಖವನ್ನು ತಂದಿರಿಸುವ ಎಂದೂ ಬಾಡದೆ ನಿನ್ನಲ್ಲಿ ಸ್ಥಿರವಾಗಿ ಬೇರುಬಿಟ್ಟಿರುವಂಥ ಆನಂದವನ್ನು ಪಡಿಮೂಡಿಸುವ ಶಕ್ತಿಯನ್ನು ಪಡೆಯಬೇಕೆಂಬುದೇ (ನನ್ನ ಪ್ರಾರ್ಥನೆ)...”

ಬಹುಬೇಗ ಪ್ರಾರ್ಥನೆಗಳು ಅವಳನ್ನು ಪ್ರಾರ್ಥಿತಗಳತ್ತ ಒಯ್ದಾವು. ಒಂದು ಹೊಸ ಅಧ್ಯಾಯವು ತೆರೆಯಲಿದೆ.

# ೫. ಪಾಂಡಿಚೇರಿಗೆ ಆಗಮನ

೧೯೧೪ನೆಯ ಮಾರ್ಚ್ ೨೯ನೆಯ ದಿನಾಂಕದಲ್ಲಿ ಮೊಟ್ಟಮೊದಲು ಮಹಾತಾಯಿ ಪಾಂಡಿಚೇರಿಗೆ ಆಗಮಿಸಿದಳು. ಅದೇ ದಿನ ಆಕೆ ಅರವಿಂದರನ್ನು ಸಂದರ್ಶಿಸಿದಳು; ಮತ್ತು ಕೂಡಲೇ ತಾನು ಸ್ವಪ್ನದಲ್ಲಿ ಕಾಣುತ್ತಿದ್ದ ಮತ್ತು ಹುಡುಕಾಡುತ್ತಿದ್ದ ಗುರು ಇವರೇ ಎಂದು ಅವಳು ಕಂಡುಕೊಂಡಳು. ಮರುದಿನ ಆಕೆ ತನ್ನ ದಿನಚರಿ ಪುಸ್ತಕದಲ್ಲಿ ಆ ಬಗ್ಗೆ ತನಗೆನ್ನಿಸಿದ್ದನ್ನು ಬರೆದಳು.

**೧೯೧೪ನೆಯ ಮಾರ್ಚ್ ೩೦**

"ನಿನ್ನ ಸಮಗ್ರ ಸೇವಕರಾಗಿರುವ ಮತ್ತು ನಿನ್ನ ಉಪಸ್ಥಿತಿಯ ಪೂರ್ಣಪ್ರಜ್ಞೆಯುಳ್ಳವರಾಗಿರುವ ಜನರೆದುರು ನಿಂತಾಗ ಹೀಗೆ ನಾನು ಆ ಸ್ಥಿತಿಯಿಂದ ಬಹುದೂರದಲ್ಲಿದ್ದೇನೆ– ಅದನ್ನಿನ್ನೂ ನಾನು ಪಡೆಯಬೇಕಾಗಿದೆ– ಎಂಬುದು ಗೊತ್ತಾಗುತ್ತದೆ. ಆದರೆ ಈ ತಿಳಿವಳಿಕೆಯು ನಿರ್ವಿಣ್ಣತೆಯನ್ನು ನನ್ನಲ್ಲಿ ಉಂಟು ಮಾಡುವುದರ ಬದಲು ನನ್ನ ಧ್ಯೇಯ ಸಾಧನಾಪೇಕ್ಷೆಯನ್ನೂ ಉತ್ಸಾಹವನ್ನೂ ಬಲಗೊಳಿಸಿ ಪ್ರೋತ್ಸಾಹಿಸುತ್ತದೆ– ಎಲ್ಲ ಅಡಿಗಳನ್ನೂ ಗೆಲ್ಲುವ ನನ್ನ ಸಂಕಲ್ಪವನ್ನು ಧೃಡಪಡಿಸುತ್ತದೆ... ಸ್ವಲ್ಪ ಸ್ವಲ್ಪವಾಗಿ ಕ್ರಮಶಃ ಕ್ಷಿತಿಜವು ನಿರ್ದಿಷ್ಟವಾಗುತ್ತದೆ, ದಾರಿ ಸ್ಪಷ್ಟವಾಗುತ್ತದೆ; ಮತ್ತು ನಾವು ಇನ್ನಷ್ಟು ಹೆಚ್ಚಿನ ನಿಶ್ಚಿತತೆಗೆ ತಲುಪುವೆವು.

"ಸಾಂದ್ರತಮ ಅಜ್ಞಾನದಲ್ಲಿ ನೂರಾರು ಜನರು ಮುಳುಗಿದ್ದರೆ ಮುಳುಗಿರಲಿ, ಅದರಿಂದಾವ ತೊಂದರೆಯೂ ನನಗಿಲ್ಲ. ನಿನ್ನೆ ನಾವು ಕಂಡವನು ಇಂದು ಭೂಮಿಯ ಮೇಲಿದ್ದಾನೆ; "ಒಂದು ದಿನ ಬರುತ್ತದೆ– ಅಂದು ಕತ್ತಲು ಬೆಳಕಾಗಿ ಪರಿವರ್ತನ ಹೊಂದುವುದು ಅಂದು ನಿನ್ನ ಆಳಿಕೆಯು ಭೂಮಿಯಲ್ಲಿ ಸ್ಥಾಪಿಸಲ್ಪಡುವುದು ಎಂಬುದನ್ನು ಸಿದ್ಧಮಾಡಲು ಆತನ ಉಪಸ್ಥಿತಿ ಸಾಕು."

ಪಾಂಡಿಚೇರಿಯಲ್ಲಿ ೩ ದಿನ ಇದ್ದಮೇಲೆ ೩-೪-೧೯೧೪ ರಂದು ಆಕೆ ತನ್ನ ದಿನಚರಿ ಪುಸ್ತಕದಲ್ಲಿ ಈ ಕೆಳಗಿನಂತೆ ಬರೆದಳು:

"ನಾನೊಂದು ಹೊಸ ಬಾಳಿನಲ್ಲಿ ಪುನರ್ಜನ್ಮತಾಳುತ್ತಿರುವಂತೆ ನನಗೆ ಭಾಸವಾಗುತ್ತಿದೆ; ಹಿಂದಿನ ಎಲ್ಲ ಕ್ರಮಗಳೂ ಅಭ್ಯಾಸಗಳೂ ಈಗ ನಿರುಪಯೋಗಿಗಳಾಗಿ ತೋರುತ್ತವೆ. ಹಿಂದೆ ಫಲವೆನ್ನಿಸಿದ್ದೀಗ ಬರಿ ಸಿದ್ಧತೆಯಾಗಿ ಕಾಣುತ್ತದೆ. ಇನ್ನೂ ನಾನೇನನ್ನೂ ಮಾಡಿಲ್ಲವೆಂದು ನನಗೆನ್ನಿಸುತ್ತದೆ. ಆಧ್ಯಾತ್ಮಿಕ ಜೀವನವನ್ನು ನಾನು

ನಡೆಸಿಯೇ ಇಲ್ಲವೆನ್ನಿಸುತ್ತದೆ. ಅದಕ್ಕೊಯ್ದು ತಲುಪಿಸುವ ಹಾದಿಯನ್ನು ಮಾತ್ರ ಹಿಡಿದಿದ್ದೆ ಎನ್ನಿಸುತ್ತದೆ; ನನಗೇನೂ ಅರಿಯದೆನ್ನಿಸುತ್ತದೆ. ಯಾವುದನ್ನೂ ನಾನು ಸೂತ್ರಿಸಲಾರೆ ಎಂದು ತೋರುತ್ತದೆ; ಎಲ್ಲ ಅನುಭವಗಳೂ ಇನ್ನು ಮುಂದೆ ಶುರುವಾಗಬೇಕು...ನಾನೀಗ ಖಂಡಿತವಾಗಿ ನನ್ನನ್ನು ತ್ಯಾಗಮಾಡಬೇಕು. ಹೇ ಭಗವನ್, ನಾನು ನಿನ್ನ ಆಲೋಚನೆ ಮತ್ತು ನಿನ್ನ ಸಂಕಲ್ಪಗಳು ನಿರಾತಂಕವಾಗಿ ಮುದ್ರಿತವಾಗತಕ್ಕ ಶುದ್ಧ ಶೂನ್ಯಪುಟವಾಗಬೇಕು– ಯಾವರೀತಿಯಿಂದಲೂ ಅವುಗಳ ಮುದ್ರಣ ವಿಕೃತವಾಗದಿರುವಷ್ಟು ಸುರಕ್ಷಿತೆಯನ್ನು ಕೊಡುವಂತಾಗಬೇಕು. ನನ್ನೆದೆಯಿಂದ ಹಿಡಿಸಲಾರದಷ್ಟು ಕೃತಜ್ಞತೆಯೇಳುತ್ತಿದೆ; ಕಟ್ಟಕಡೆಗೆ ಇಷ್ಟು ದಿನ ನಾನು ಅರಸುತ್ತಿದ್ದ ಹೊಸ್ತಿಲಿಗೆ ಬಂದು ತಲುಪಿದೆನೆಂದು ತೋರುತ್ತಿದೆ.”

ಆಕೆ ತನ್ನ ಈ ಪ್ರಾರ್ಥನೆಯಲ್ಲಿ ಬರೆದದ್ದರಲ್ಲಿ ಅವಳ ಸ್ವಂತದ ನಮ್ರತೆ ತುಂಬಿಕೊಂಡಿದೆ. ಆದರಾಕೆ ಆಗಲೇ ಸುಸಜ್ಜಿತೆಯೂ ಸಿದ್ಧೆಯೂ ಆಗಿದ್ದಳು–ಅವಳಲ್ಲಿ ಅಹಂಭಾವದ ಕಸರಿರಲಿಲ್ಲ; ಆದ್ದರಿಂದಲೇ ಅವಳಷ್ಟು ಸಾಧುಜೀವಿಯಾಗಿದ್ದಳು.

ಆಕೆ ಶ್ರೀಅರವಿಂದರನ್ನು ಸೇರಿದಳು. ಅವರನ್ನು ತನ್ನ ಗುರುವನ್ನಾಗಿ ಸ್ವೀಕರಿಸಿದಳು. ಅವರ ಆಧ್ಯಾತ್ಮಿಕ ಸಲಹೆಗಳನ್ನು ಅನುಸರಿಸಿದಳು. ಅವಳು ಪಾಂಡಿಚೇರಿಯಲ್ಲಿದ್ದು ತನಗೆ ಸಾಧ್ಯವಾದ ಎಲ್ಲವುಗಳಲ್ಲಿಯೂ ಅರವಿಂದರಿಗೆ ಸಹಾಯಮಾಡಲು ಯತ್ನಿಸಿದಳು. ಅವಳ ಹಾಗೂ ಅವಳ ಗಂಡನ ನೆರವಿನಿಂದ “ಆರ್ಯ” ಎಂಬ ನಿಯತಕಾಲಿಕವನ್ನು ಪ್ರಕಟಿಸಲಾಯಿತು. ವಿವಿಧ ವಿಷಯಗಳನ್ನು ಕುರಿತು ಅರವಿಂದರು ಅದರಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. ಆ ಪತ್ರಿಕೆಯ ಫ್ರೆಂಚ್ ರೂಪವೂ ಪ್ರಕಟವಾಗುತ್ತಿತ್ತು.

ಆದರೆ ಸುಮಾರು ಒಂದುವರ್ಷದೊಳಗೆ ಮೊದಲನೆಯ ಜಾಗತಿಕ ಯುದ್ಧ ಪ್ರಾರಂಭವಾಯ್ತು. ವಿದೇಶೀಯ ನಾಗರಿಕೆಯಾಗಿದ್ದುದರಿಂದ ಮಾತೃಶ್ರೀಯು ಗಂಡನೊಡನೆ ಪ್ಯಾರಿಸ್ಸಿಗೆ ಹಿಂದಿರುಗಬೇಕಾಯ್ತು. ಹಾಗೆ ಹಿಂದಿರುಗುವಾಗ ಅವಳು ತಾನು ಆಗತಾನೇ ಆರಂಭಿಸಿದ ತನ್ನೆಲ್ಲ ಕಾರ್ಯವನ್ನೂ ಇಲ್ಲೇ ಬಿಟ್ಟುಹೋಗಬೇಕಾಯ್ತು. ಅವಳ ಅಂದಿನ ಮನಃಸ್ಥಿತಿಯನ್ನು ಯಾರಾದರೂ ಸುಲಭವಾಗಿ ಊಹಿಸಬಲ್ಲರು. ಶಾಂತತೆಯಿಂದಲೂ ಸಮತ್ವ ಭಾವದಿಂದಲೂ ಅವಳೀ ದೌರ್ಭಾಗ್ಯವನ್ನು ಸಹಿಸಿದಳು.

ಯೂರೋಪಿಗೆ ಜಲಪ್ರಯಾಣದ ಮೂಲಕ ಹಿಂದಿರುಗುವಾಗ ಆಕೆ ತನ್ನ ದಿನಚರಿ ಪುಸ್ತಕದಲ್ಲಿ ಹೀಗೆ ಬರೆದಳು:

**೩–೩–೧೯೧೫**

“ಈ ಏಕಾಂತತೆಯು ಕ್ರೂರವೂ ತೀಕ್ಷ್ಣವೂ ಆಗಿದೆ. ಈಗ ಯಾವಾಗಲೂ ನನ್ನನ್ನು ಯಾರೋ ಅಂಧಕಾರ ನರಕದಲ್ಲಿ ತಲೆಕೆಳಗಾಗುವಂತೆ ನೂಕಿಬಿಟ್ಟಿದ್ದಾರೋ

ಏನೋ ಎಂಬಂತಹ ಬಲಿಷ್ಠ ಭಾವನೆ ಬಡಿದುಕೊಂಡಿದೆ. ನಾನು ಈ ಪ್ರಕಾರ ಹಿಂದೆಂದೂ ಯಾವ ಪರಿಸ್ಥಿತಿಯಲ್ಲಿಯೂ ಯಾವಕ್ಷಣದಲ್ಲಿಯೂ ನನಗೆ ಸತ್ಯವೆನ್ನಿಸಿದ, ನನ್ನ ಜೀವನಸಾರವೆನ್ನಿಸಿದ ಎಲ್ಲವುದಕ್ಕೂ ಸಂಪೂರ್ಣ ವಿರುದ್ಧವಾದ ಆವರಣದಲ್ಲಿ ಬದುಕಿರುವಂತೆ ನನಗೆನ್ನಿಸಿತು... ಆದರೆ ಒಮ್ಮೆಲೇ ನನ್ನ ಧ್ಯೇಯಸಾಧನೇಚ್ಛೆ ಇನ್ನಷ್ಟು ಉಜ್ವಲವಾಯ್ತು. ದುರ್ಬಲವಾಗುವುದರಿಂದ ಈ ಜೀವವನ್ನು ಉಳಿಸು; ಅದು ಯಾವುದೇ ಆಗಲಿ–ಈ ಜೀವನವನ್ನು ಈ ನಿನ್ನ ಕಾರ್ಯವನ್ನು ಮಾಡುವ ತಿಳಿಗಣ್ಣುಳ್ಳ ಮತ್ತು ಸುಲಭೋಪಶಿಕ್ಷಣೀಯವಾದ ಸಾಧನವನ್ನಾಗಿ ಮಾಡು."

**ಪುನಃ ಆಕೆ ೭–೩–೧೯೧೫ರಲ್ಲಿ ಬರೆದಳು:**

"... ನಾನು ನಿನ್ನ ಕರುಣೆಯನ್ನೂ ಬೇಡೆನು. ಏಕೆಂದರೆ ನನಗಾಗಿ ನೀನು ಏನನ್ನು ಸಂಕಲ್ಪಿಸುವೆಯೋ ಅದರಂತೆಯೇ ನಾನೂ ಸಂಕಲ್ಪಿಸುವೆನು. ದಾರಿಯಲ್ಲಿ ಎಂಥ ಆಳವಾದ ಅಂಧಕಾರ ಮತ್ತು ವಿಘ್ನಗಳೇ ಬರಲಿ–ಒಂದೊಂದೇ ಹೆಜ್ಜೆ ಮುಂದೆಹೋಗುವುದೇ–ಯಾವಾಗಲೂ ಮುಂದೆ ಮುಂದೆ ಹೋಗುವುದೇ ನನ್ನ ಎಲ್ಲ ಶಕ್ತಿಯು ಶ್ರಮಪಡುವುದರ ಗುರಿ..."

ಆಕೆ ಪ್ಯಾರಿಸ್ಸಿಗೆ ಮರಳಿದಳು; ತನ್ನ ಕ್ಲೇಶಮಯ ದಿನಗಳನ್ನು ಮೌನವಾಗಿ ಕಳೆದಳು. ಆದರೆ ಅವಳು ಈ ವಿಷಯದ ಬಗೆಗೆ ಯಾರಿಗೂ ಏನನ್ನೂ ಹೇಳಲಿಲ್ಲ; ತನ್ನ ದಿನಚರಿ ಪುಸ್ತಕದಲ್ಲಿಯೂ ಏನನ್ನೂ ಬರೆಯಲಿಲ್ಲ. ಏಕೆಂದರೆ, ಅವಳು ಯಾವ ಸ್ಥಿತಿಯಲ್ಲೇ ಇರಲಿ–ಅನುಭವದ ಲಾಭವನ್ನು ಪಡೆಯುತ್ತಲೇ ಇದ್ದಳು; ಅವಳಿಗೆ ಆಧ್ಯಾತ್ಮಿಕ ಸಾಕ್ಷಾತ್ಕಾರಗಳು ಒಂದಾದಮೇಲೊಂದರಂತೆ ಆಗುತ್ತಿದ್ದವು– ಆ ೫ ವರ್ಷಗಳ ಆಭಾಸಿಕ ನಿರಾಶೆಯಲ್ಲಿ ಆಕೆ ತನ್ನ ಭಾವಿ ಕಾರ್ಯಕ್ಕಾಗಿ ಸಿದ್ಧತೆ ನಡೆಸುತ್ತಿದ್ದಳು. ಆ ಅವಧಿಯಲ್ಲಿ ಆಕೆ ಬರೆದ ಪ್ರಾರ್ಥನೆಗಳು ಇದಕ್ಕೆ ಸಾಕ್ಷಿಗಳಾಗಿವೆ.

ಸುಮಾರು ಒಂದು ವರ್ಷದ ಮೇಲೆ ಆಕೆ ಜಪಾನಿಗೆ ಹೋದಳು. ೧೯೧೬ರ ಡಿಸೆಂಬರ್ ೫ನೆಯ ದಿನಚರಿಯಲ್ಲಿ ಅವಳು ಹೀಗೆ ಬರೆದಳು:

"ಭೂಮಿಯ ಕಡೆಗೆ ತಿರುಗು." ಅಪರಿವರ್ತನೀಯ ಐಕ್ಯದ ಮೌನದಲ್ಲಿ ರೂಢಿಯ ಆಜ್ಞೆ ಕೇಳಿಸುತ್ತಿತ್ತು. ಆಗ ನನ್ನ ಚೇತನೆಯು ಅನೇಕದಲ್ಲಿ ಒಂದೇ ಒಂದಾಗಿರುವ (ಸಚ್ಚಿದಾನಂದ) ತತ್ವದ ಚೇತನೆಯಾಗಿ ಹೋಯಿತು. ಎಲ್ಲಿಯೇ ಆಗಲಿ, ಯಾರಲ್ಲೇ ಆಗಲಿ ಆ ಒಂದನ್ನು ನೀನು ಕಾಣಬಲ್ಲೆಯಾದರೆ ದೇವರಲ್ಲಿಯ ಈ ಐಕ್ಯಪ್ರಜ್ಞೆಯ ಜಾಗರ ನಿನಗಾಗುವುದು; ನೋಡು... ಅದೊಂದು ಜಪಾನೀಯ ರಸ್ತೆ; ಅದರಲ್ಲಿ ಹರ್ಷಹರಿಸುವ ಲಾಂದ್ರಗಳು ಉಜ್ವಲವಾಗಿ ಹೊಳೆಯುತ್ತಿದ್ದವು. ವಿವಿಧ ವರ್ಣಗಳಿಂದ ಅದು ಚಿತ್ರಮಯವಾಗಿತ್ತು. ಸಚೇತನವಾದುದೆಲ್ಲವೂ ರಸ್ತೆಯ ಮುನ್ನಡೆದವು. ದೇವರು

ಆ ಪ್ರತಿಯೊಂದರಲ್ಲೂ ದೃಶ್ಯನಾದನು. ಒಂದು ಚಿಕ್ಕಮನೆಯು ಪಾರದರ್ಶಕವಾಯಿತು. ಅದರಲ್ಲಿ ಒಂದು ಬದನೆಬಣ್ಣದ 'ಕಿಮೋನೋ' ಧರಿಸಿದ ಒಬ್ಬಳು 'ತತಮಿ' ಯ ಮೇಲೆ ಕುಳಿತದ್ದನ್ನು ಯಾರಾದರೂ ಕಾಣಬಹುದಾಗಿತ್ತು. ಆ ಕಿಮೋನೋ ಸಾಕಷ್ಟು ದೊಡ್ಡದಾಗಿತ್ತು ಮತ್ತು ವಿವಿಧ ಬಣ್ಣಗಳಿಂದಲೂ ಬಂಗಾರದ ಗೆರೆಗಳಿಂದಲೂ ಅಲಂಕೃತವಾಗಿತ್ತು. ಆ ಹೆಂಗಸು ಸುಂದರಿಯಾಗಿದ್ದಳು– ಅವಳ ವಯಸ್ಸು ೩೫–೪೦ರ ನಡುವಿನದಾಗಿತ್ತು. ಅವಳು ಒಂದು ಬಂಗಾರದ ಬಣ್ಣದ 'ಸಮಿಸೆನ್ನ'ನ್ನು ಬಾರಿಸುತ್ತಿದ್ದಳು. ಅವಳ ಕಾಲ ಬದಿಯಲ್ಲೊಂದು ಮಗುವಿತ್ತು. ಆ ಹೆಂಗಸಿನಲ್ಲಿಯೂ ದೇವರು ತೋರುತ್ತಿದ್ದನು."

ಆಕೆ ಎಷ್ಟು ಉನ್ನತಮಟ್ಟದ ಸಾಕ್ಷಾತ್ಕಾರಕ್ಕೆ ಮುಟ್ಟಿದ್ದಳೆಂಬುದನ್ನು ನಾವಿಲ್ಲಿ ಸ್ಪಷ್ಟವಾಗಿ ಕಾಣಬಹುದು. ಅವಳಿಗೆ ದೇವರು ಎಲ್ಲವುಗಳಲ್ಲಿಯೂ ಎಲ್ಲವುದರ ಮೂಲಕವೂ ಕಾಣಿಸುತ್ತಿದ್ದನು. ಅವಳು ಎಲ್ಲಿ ನೋಡಿದರೂ ರಸ್ತೆಯ ಕಡೆ ನೋಡಿದರೂ ಅವಳಿಗವನು ಸಿಕ್ಕುತ್ತಾನೆ ಮತ್ತು ಅವಳವನನ್ನು ಗುರುತಿಸುತ್ತಾಳೆ. ಈ ಬಗೆಯ ಆಂತರಿಕ ಅನುಭವವು ದಿನಂಪ್ರತಿ ಮುಂಬರಿಯುತ್ತಿತ್ತು.

ದಾರಿದ್ರ್ಯವನ್ನೆದುರಿಸುತ್ತಿದ್ದಾಗಲೂ ಆಕೆ ಬರೆದಳು:

**೨೮–೧೧–೧೯೧೬**

"...ದಾರಿದ್ರ್ಯ, ದಾರಿದ್ರ್ಯ! ನನ್ನನ್ನು ನೀನು ಮರುಭೂಮಿಯಲ್ಲಿರಿಸಿದೆ. ಆ ಮರುಭೂಮಿಯು ಒಣ ಒಣ ಮತ್ತು ನಿರಾವರಣ– ಹೀಗಿದ್ದರೂ ಈ ಮರುಭೂಮಿಯು ನನಗೆ ಮಧುರ. ಓ ಒಡೆಯ, ನಿನ್ನಿಂದ ಬರುವುದೆಲ್ಲವೂ ಮಧುರ. ಈ ನಿರ್ವರ್ಣದ ಬಿಳುಪಿನಲ್ಲಿ. ಈ ಬೇಸರ ಬರಿಸುವ ಆವರಣದಲ್ಲಿ. ಈ ಹೊಳಪಿಲ್ಲದ ಬೂದಿ ಬಣ್ಣದ ಬೆಳಕಿನಲ್ಲಿ ಅನಂತ ಆಕಾರಗಳ ರುಚಿಯನ್ನು ಸವಿಯುತ್ತೇನೆ... ನಾನು ಅವಿಘ್ನಿತವಾದ ಏರಿಕೆಗಾಗಿ ರೆಕ್ಕೆತೆರೆಯುವ ಹಕ್ಕಿಯಂತಾಗಿರುವೆನೆನ್ನಿಸುತ್ತದೆ. ಆದರೆ ಹಕ್ಕಿಯು ಬಂಡೆಯ ಮೇಲೇ ಉಳಿದಿದೆ. ಅದರ ರೆಕ್ಕೆಗಳು ಹತ್ತಿಬಣ್ಣದ ಆಗಸದಲ್ಲಿ ಬಿಚ್ಚಿದ್ದರೂ ಏನೋ ಆಗಬೇಕೆಂದು ಅದು ಕಾದು ಕೂತಿದೆ–ಅದೇನೆಂಬುದು ಅದಕ್ಕೆ ಗೊತ್ತಿಲ್ಲ. ತನ್ನ ಹಾರಿಕೆಗೆ ಯಾವ ಬಂಧನವೂ ಅಡ್ಡಿಯಾಗಿಲ್ಲದಿರುವಾಗ ಅದು ಹಾರುವ ಆಲೋಚನೆಯನ್ನೇ ಮಾಡುವುದಿಲ್ಲ. ಸ್ವಾತಂತ್ರ್ಯ ತನಗಿದೆ ಎಂಬುದನ್ನು ತಿಳಿದ ಅದು ಅದನ್ನನುಭವಿಸುವುದಿಲ್ಲ; ಮತ್ತು ಮಿಕ್ಕವುಗಳಂತೆಯೇ ಆ ಹಕ್ಕಿ ಅಂಧಕಾರಮಯವಾದ ದಟ್ಟಮಂಜಿನಲ್ಲಿ ನೆಲದ ಮೇಲೆ ಕುಳಿತಿದೆ."

ಕೆಲಕಾಲಾನಂತರ, ಪರಿಸ್ಥಿತಿ ಬದಲಾಯಿಸಿರಬೇಕು, ದಾರಿದ್ರ್ಯ ಹೋಗಿ ಧನಿಕತೆ ಬಂತು–ಇಲ್ಲಿ ನೋಡಿರಿ:

೪–೧–೧೯೧೭

"ಹೇ ಈಶ್ವರ, ನೀನು ನಿನ್ನ ಲಾಭಗಳನ್ನು ನನ್ನ ಮೇಲೆ ರಾಶಿಹಾಕಿದೆ, ಈಗ ಈ ಜೀವ ಏನನ್ನೂ ನಿರೀಕ್ಷಿಸುತ್ತಿಲ್ಲ, ಬಾಳಿನಿಂದ ಏನನ್ನೂ ಬಯಸುವುದಿಲ್ಲ. ಬಾಳು ಅತ್ಯಮೂಲ್ಯ ವಸ್ತುಗಳನ್ನು ಅದಕ್ಕೆ ತಂದು ಕೊಟ್ಟಿದೆ. ಜನರು ಬಹಳವಾಗಿ ಬಯಸುವ ವಸ್ತುಗಳವು. ವ್ಯಕ್ತಿ ಜೀವನದ ಸಕಲ ಕ್ಷೇತ್ರಗಳಲ್ಲೂ ನೀನು ಮಾನಸಿಕ, ಅಂತರ್ಮಾನಸಿಕ ಮತ್ತು ಭೌತಿಕ ವರಗಳ ಹೊರೆಯನ್ನು ನನ್ನ ಮೇಲೆ ಹೊರಿಸಿರುವೆ. ನೀನು ನನ್ನನ್ನು ಐಶ್ವರ್ಯದಲ್ಲಿಟ್ಟಿರುವೆ. ಐಶ್ವರ್ಯವು ನನಗೆ ದಾರಿದ್ರ್ಯದಷ್ಟೇ ಸಹಜವಾಗಿ ತೋರುತ್ತದೆ. ನನಗದರಿಂದ ಹೆಚ್ಚು ಸಂತೋಷವಾಗದು. ಏಕೆಂದರೆ ದಾರಿದ್ರ್ಯದಲ್ಲಿದ್ದಾಗ ಆಧ್ಯಾತ್ಮಿಕ ಜೀವನವು ಹೆಚ್ಚು ಸಾಂದ್ರವೂ ಜಾಗರಿತವೂ ಆಗಿತ್ತು; ಆದರೆ ಈ ಐಶ್ವರ್ಯವೂ ನನ್ನ ವ್ಯಕ್ತಿ ಜೀವನವೂ (ಇದರ ಮೇಲೆ ನೀನು ನಿನ್ನ ವರಗಳನ್ನು ಹೇರಿರುವಾಗ) ಅವರ್ಣನೀಯ ಕೃತಜ್ಞತೆಯಿಂದ ನಿನ್ನ ಕಾಲಿಗೆ ಬೀಳುತ್ತವೆ. ನಿನ್ನ ಒಳ್ಳೆಯತನವು ಉಪಮಾತೀತ ಮತ್ತು ನಿನ್ನ ಕರುಣೆಯು ಅಪ್ರಮೇಯ."

ಅಪಕರ್ಷದಲ್ಲಿರಲಿ, ಉತ್ಕರ್ಷದಲ್ಲಿರಲಿ, ಮಾತೃಶ್ರೀಯು ತನ್ನ ಅಪರಿವರ್ತನೀಯ ಸಮತ್ವವನ್ನು ಉಳಿಸಿಕೊಂಡಿರುತ್ತಾಳೆ. ಇವೆಲ್ಲವನ್ನೂ ಸಹಜವೆಂದು ತಿಳಿಯುತ್ತಾಳೆ ಮತ್ತು ದೇವರಲ್ಲಿ ಅವಳಿಟ್ಟ ನಂಬಿಗೆ ಮತ್ತು ಶ್ರದ್ಧೆಗಳು ಅಚ್ಚಳಿಯದೆ ಇರುತ್ತವೆ.

ಕಟ್ಟಕಡೆಗೆ ಸಿದ್ಧತೆ–ನಿರೀಕ್ಷಣೆಗಳ ಅವಧಿ ಮುಗಿಯಿತು. ಬಹಳ ಕಾಲದಿಂದ ನಿರೀಕ್ಷಿಸುತ್ತಿದ್ದ ಕಾಲ ಬಂದಿತು. ೨೪–೪–೧೯೨೦ರಂದು ಆಕೆ ಒಳಿತಿಗಾಗಿ ಉಳಿಯಲು ಆಕೆ ಪಾಂಡಿಚೇರಿಗೆ ಮರಳಿ ಬಂದಳು.

ಆದರೆ ತನ್ನ ತೊಂದರೆಗಳಿನ್ನೂ ಮುಗಿಯಲಿಲ್ಲವೆಂಬುದನ್ನು ಬಂದ ಸ್ವಲ್ಪ ಕಾಲದಲ್ಲಿಯೇ ಆಕೆ ಅರಿತಳು. ದೇವಾಜ್ಞಪ್ತ ಕಾರ್ಯವನ್ನವಳು ಆರಂಭಿಸುವ ಮೊದಲೇ ಅವಳು ವಿವಿಧ ವಿಘ್ನ–ವಿರೋಧಗಳ ಎದುರು ಹೋರಾಡಬೇಕಾಯಿತು. ಇದನ್ನೊಪ್ಪಿ ಅವಳು ತನ್ನ ಪ್ರಾರ್ಥನೆಯಲ್ಲಿ, ಬರೆದಿದ್ದಾಳೆ:

೨೦–೬–೧೯೨೦,

ಮಾತಿಗೆ ಮೀರಿದ ಸಂತೋಷವನ್ನು ದಯಪಾಲಿಸಿದ ಬಳಿಕ ಓ ನನ್ನ ಒಲುಮೆಯ ಒಡೆಯನೇ ಹೋರಾಟವನ್ನು, ಅಗ್ನಿ ಪರೀಕ್ಷೆಯನ್ನು, ನೀನು ನನಗಾಗಿ ಕಳಿಸಿಕೊಟ್ಟಿರುವೆ. ಇದು ಕೂಡ ನಿನ್ನ ಒಬ್ಬ ಅನರ್ಘ್ಯ ದೇವದೂತನೆಂದು ಗ್ರಹಿಸಿ, ನಾನು ಮುಗುಳ್ನಗೆ ನಕ್ಕೆ. ಈ ಹಿಂದೆ ನಾನು ಸಂಘರ್ಷಕ್ಕೆ ಹೆದರುತ್ತಿದ್ದೆ; ಏಕೆಂದರದು ನನ್ನ ಸಾಮಶ್ರುತ್ಯ–ಶಾಂತಿಗಳ ಬಗೆಗಿನ ಪ್ರೇಮವನ್ನು ಗಾಸಿಗೊಳಿಸುತ್ತಿತ್ತು. ಆಕೆ ಗಡಿಬಿಡಿಯಲ್ಲಿರಲಿಲ್ಲ. ಶ್ರೀ ಅರವಿಂದರ ನೆರವಿನಿಂದ ತಾನು ಜಯಶೀಲೆಯಾಗುವೆನೆಂದು ಅವಳಿಗೆ ಗೊತ್ತಿತ್ತು.

# ೬. ಆಶ್ರಮ

ಮಹಾತಾಯಿ ಪಾಂಡಿಚೇರಿಯಲ್ಲಿರಬಂದಾಗ ಅಲ್ಲಿ ಆಶ್ರಮ ಇತ್ತೆಂದು ಹೇಳುವುದು ಕಷ್ಟವಾಗಿತ್ತು. ಶ್ರೀ ಅರವಿಂದರು ಒಂಟಿ ಮನೆಯೊಂದರಲ್ಲಿ ವಾಸವಾಗಿರುತ್ತಿದ್ದರು. ಉಪ್ಪರಿಗೆಯಲ್ಲಿ ಮಹಾಮಾತೆಗೊಂದು ಕೊಠಡಿಯನ್ನು ಕೊಡಲಾಯ್ತು. ಅರವಿಂದರು ತಮ್ಮ ಸಾಧನೆಯಲ್ಲಿ ಮತ್ತು ಓದುಬರಹಗಳಲ್ಲಿ ನಿರತರಾಗಿರುತ್ತಿದ್ದರು. ಕೇವಲ ೮–೧೦ ಶಿಷ್ಯರು ಅವರೊಂದಿಗಿರುತ್ತಿದ್ದರು. ಅವರು ಬಹಳ ಮಿತವ್ಯಯದ ಜೀವನ ನಡೆಸಬೇಕಾಗಿತ್ತು. ತಮ್ಮ ಕೈಯಲ್ಲಾದಷ್ಟನ್ನು ಶಿಷ್ಯರು ಮಾಡುತ್ತಿದ್ದರು. ಆದರದು ಕೊರತೆಯ ದುಃಖವನ್ನು ಪರಿಹರಿಸಲು ಸಾಕಾಗದಾಗಿತ್ತು.

ಕ್ರಮೇಣ ಮಾತೃಶ್ರೀ ಮನೆವಾರ್ತೆಯನ್ನು ಕೈಗೆ ತೆಗೆದುಕೊಂಡಳು. ಕೂಡಲೇ ಅವಳು ಅರವಿಂದರ ನಿಯತಕಾಲಿಕ ಸ್ನಾನ, ಊಟ ಮತ್ತು ವಿಶ್ರಾಂತಿ ಕಾಲಗಳನ್ನು ವ್ಯವಸ್ಥೆಗೊಳಿಸಿದಳು. ಅವಳು ಹೆಚ್ಚಾಗಿ ತನ್ನ ಕೋಣೆಯಲ್ಲೇ ಇರುತ್ತಿದ್ದಳು– ಮತ್ತು ಫಲಹಾರಕ್ಕೂ, ಊಟಕ್ಕೂ, ಗಂಜಿಯೂಟಕ್ಕೂ, ಚಹಕ್ಕೂ ಮಾತ್ರ ನಿರ್ದಿಷ್ಟ ವೇಳೆಗಳಲ್ಲಿ ಕೆಳಗೆ ಬರುತ್ತಿದ್ದಳು. ಆಗ ಆಕೆ ಶ್ರೀ ಅರವಿಂದರು ಹಾಗೂ ಅವರ ಶಿಷ್ಯರೊಡನೆ ಸಂಭಾಷಿಸುತ್ತಿದ್ದಳು. ಆದರೆ ಅವಳು ಮಾತಾಡುತ್ತಿದ್ದುದು ಬಹಳ ಸ್ವಲ್ಪ. ಆ ಹೊತ್ತಿಗೆ ಇತರರು ಅರವಿಂದರ ಸುತ್ತಲೂ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಿದ್ದರು. ಆದರೆ ಅವಳು ನೆಲದ ಮೇಲೆ ಅವರ ಪಾದದ ಬಳಿ ಕುಳಿತುಕೊಳ್ಳುತ್ತಿದ್ದಳು. ತನ್ನ ಯೂರೋಪಿಯ ವೇಷವನ್ನವಳು ತೆಗೆದೊಗೆದಳು ಮತ್ತು ಭಾರತೀಯವಾದ ಸೀರೆ–ರವಕೆಗಳನ್ನು ತೊಟ್ಟಳು. ಮೀನು–ಮಾಂಸಗಳ ಭೋಜನ ಬಿಟ್ಟು ಅವಳು ಶುದ್ಧ ಸಸ್ಯಾಹಾರಿಣಿಯಾದಳು. ಆ ಸಮಯದಲ್ಲಿ ಉಳಿದೆಲ್ಲರೂ ಶ್ರೀ ಅರವಿಂದರು ಕೂಡ ಹಾಗೆ ಅಪ್ಪಟ ಸಸ್ಯಾಹಾರಿಗಳಾಗಿರಲಿಲ್ಲ. ಬಹಳ ವರ್ಷಗಳ ಅನಂತರ ಅರವಿಂದರ ಸಲಹೆಯ ಪ್ರಕಾರ ಆಕೆ ಯೂರೋಪೀಯ ರೀತಿಯ ಉಡುಪನ್ನು ಧರಿಸತೊಡಗಿದಳು.

ಬಹು ನಿಧಾನವಾಗಿ ಅವಳ ಸಲಹೆ–ಸೂಚನೆಗಳ ಪ್ರಕಾರ ಆಶ್ರಮವು ರೂಪಿತವಾಯ್ತು. ಶಿಷ್ಯಸಂಖ್ಯೆ ಹೆಚ್ಚ ತೊಡಗಿತು; ಜಾಗದ ಕೊರತೆ ತಲೆ ದೋರಿತು. ಆದುದರಿಂದ ಸುತ್ತಲಿನ ಮನೆಗಳಲ್ಲಿ ಕೆಲವನ್ನಾಕೆ ಅವರ ವಾಸಕ್ಕಾಗಿ ಕೊಂಡುಕೊಂಡಳು. ಅವಳು ಅವರ ಊಟ, ವಸತಿ ಮತ್ತು ಇತರ ಸುಖಸಾಮಗ್ರಿಗಳನ್ನು ವ್ಯವಸ್ಥೆಗೊಳಿಸಿದಳು. ಹೀಗೆ ಆಶ್ರಮವು ಉದಯೋನ್ಮುಖವಾಯ್ತು. ತನ್ನ ಸಾಧನೆಯಲ್ಲವಳು ದೊಡ್ಡ ಪ್ರಗತಿಯನ್ನು ಸಾಧಿಸಿದಳು ಮತ್ತು ೧೯೨೬ರಲ್ಲಿ ಶ್ರೀಅರವಿಂದರು ಅವಳನ್ನು ಆಶ್ರಮದ ಮಾತೆ ಎಂದು ಘೋಷಿಸಿದರು.

೧೯೨೬ರ ನವೆಂಬರ್ ೨೪ರಂದು ಶ್ರೀ ಅರವಿಂದರು ತಮ್ಮ ಸಾಧನೆಯ ಮೂಲಕ ಪೂರ್ಣಸಿದ್ಧಿಯನ್ನು ಪಡೆದರು. ಅಂದಿನಿಂದ ಇನ್ನೂ ಹೆಚ್ಚಿನ ತೀವ್ರಸ್ವರೂಪದ ಸಾಧನೆಗಾಗಿ ಅವರು ಮತ್ತಷ್ಟು ಹೆಚ್ಚು ಏಕಾಂತವಾಸಿಗಳಾದರು. ಅತಿಮಾನಸ (ಸುಪ್ರಮಾಣಸ) ಚೇತನೆಯನ್ನು ಭೂಲೋಕಕ್ಕೆ ತರುವುದೇ ಅವರ ಉದ್ದೇಶವಾಗಿತ್ತು. ಆದುದರಿಂದ ಆಶ್ರಮದ ಎಲ್ಲ ಚಟುವಟಿಕೆಗಳನ್ನು ನಡೆಸುವ ಸರ್ವಾಧಿಕಾರವನ್ನವರು ಮಾತೃಶ್ರೀಗೆ ಕೊಟ್ಟರು ಮತ್ತು ಆಧ್ಯಾತ್ಮಿಕ ಸಿದ್ಧಿಗಾಗಿ ದುಡಿವ ಸಾಧಕರಿಗೆ ಮಾರ್ಗದರ್ಶನ ಮಾಡಲು ಹೇಳಿದರು. ವಾಸ್ತವಿಕವಾಗಿ ಅದರಿಂದ ಒಂದು ಬಗೆಯ ಶ್ರಮ ವಿಭಾಗ ಮಾಡಿದಂತಾಯ್ತು: ಶ್ರೀ ಅರವಿಂದರು ಉನ್ನತತರ ಚೈತನ್ಯವನ್ನು ಅವತರಿಸುವಂತೆ ಸಾಧನೆ ಮಾಡುವುದು ಮತ್ತು ಮಾತೃಶ್ರೀಯು ಆಶ್ರಮದ ಸಂಘಟನೆ–ವ್ಯವಸ್ಥಾಪನೆಗಳನ್ನು ಮಾಡುವುದು ೧೯೫೦ರ ಡಿಸೆಂಬರ್ ತಿಂಗಳಿನಲ್ಲಿ ಅವರು ತಮ್ಮ ಮರ್ತ್ಯದೇಹವನ್ನು ತ್ಯಜಿಸಿದಂದಿನಿಂದ ಅದೃಶ್ಯವಾದ ಇತರ ಕ್ಷೇತ್ರಗಳಲ್ಲಿ ಶ್ರಮಿಸುತ್ತಿರಬಹುದಾಗಿದೆ; ಮಾತೃಶ್ರೀಯು ಪಾಂಡಿಚೇರಿಯಲ್ಲಿ ತನ್ನ ಕಾರ್ಯವನ್ನು ಮುಂಬರಿಸಿಕೊಂಡು ಹೋಗುತ್ತಿದ್ದಾಳೆ. ಪ್ರತಿಯೊಂದು ವಿಧದಿಂದಲೂ ಆಶ್ರಮವನ್ನು ವಿಸ್ತರಿಸುತ್ತಲೂ ಸಂಪದ್ಭರಿತವನ್ನಾಗಿ ಮಾಡುತ್ತಲೂ ಇದ್ದಾಳೆ.

೧೯೨೬ರಲ್ಲಿ ಮಾತೃಶ್ರೀ ಆಶ್ರಮದ ಅಧಿಕಾರವನ್ನು ವಹಿಸಿಕೊಂಡಂದಿನಿಂದ ಅದಕ್ಕೆ 'ಶ್ರೀಅರವಿಂದಾಶ್ರಮ' ಎಂದು ಕರೆಯುವುದು ರೂಢಿಗೆ ಬಂದಿತು. ಹೆಚ್ಚು ಮನೆಗಳನ್ನು ಪಡೆದುಕೊಳ್ಳಲಾಯ್ತು, ಹೆಚ್ಚು ಜಾಗವನ್ನು (ಆಶ್ರಮವಾಸಿಗಳಿಗೆ) ಕೊಡಲಾಯ್ತು. ಏಕೆ? ಶಿಷ್ಯಸಂಖ್ಯೆಯೂ ಬೆಳೆಯಿತು, ಹೊರಗಿನ ಸಂದರ್ಶಕರ ಸಂಖ್ಯೆಯೂ ಹೆಚ್ಚಾಯ್ತು. ಅವಳ ವಾರಸುದಾರಿಕೆಯಲ್ಲಿ ಪಡೆದು ಬಂದಿದ್ದ ಹಣದಿಂದ ಈ ಎಲ್ಲವನ್ನೂ ಮಾಡಲು ಶಕ್ತೆಯಾದಳು ಮತ್ತು ವಿವಿಧ ಆಕರಗಳಿಂದ ಹೆಚ್ಚಿನ ಧನ ಸಂಗ್ರಹವೂ ಆಯಿತು. ಆಶ್ರಮಕ್ಕೆ ಸೇರಬಯಸುವವರು ತಮ್ಮ ಎಲ್ಲ ಆಸ್ತಿಯನ್ನು ಮಹಾತಾಯಿಗೆ ಕೊಟ್ಟು ಅವಳದೇಖ ರೇಖೆಗೆ ಒಳಪಡಬೇಕೆಂಬ ನಿಯಮವನ್ನು ಅರವಿಂದರು ಮಾಡಿದ್ದರು.

ಆಕೆಯ ಉಪಸ್ಥಿತಿ ಮತ್ತು ಸಂಘಟನೆಯ ಪ್ರತಿಭೆಗಳಿಲ್ಲದಿದ್ದರೆ ಆಶ್ರಮವೆಂದೂ ಉಳಿಯುತ್ತಿರಲಿಲ್ಲವೆಂಬುದು ವಸ್ತುಸತ್ಯ.

ಆದರೆ ಮೊಟ್ಟಮೊದಲು ಮಾತೃಶ್ರೀ ಹೆಚ್ಚು ಕಷ್ಟಪಟ್ಟು ಹೋರಾಡಬೇಕಾಯಿತು. ಆಶ್ರಮವಾಸಿಗಳಿಂದ ಅವಳು ಬುದ್ಧಿಪೂರ್ವಕವಾದ ಸಹಕಾರವನ್ನು ಬಯಸಿದಳು; ಆದರೆ ಅವರು ಅಷ್ಟು ಸುಲಭವಾಗಿ ಅವಳ ಕರೆಗೆ ಓಗೊಡಲಿಲ್ಲ.

ಮೊಟ್ಟಮೊದಲು, ಯಾರೂ ಸೋಮಾರಿಗಳಾಗಿರಬಾರದು, ಕೇವಲ ಧ್ಯಾನಮಗ್ನರಾಗಿರಬಾರದು, ಪ್ರತಿಯೊಬ್ಬರೂ ಇಲ್ಲಿ ಯಾವುದಾದರೂ ಒಂದು ಕೆಲಸ ಮಾಡಬೇಕು ಎಂದು ಮಾತೃಶ್ರೀ ನಿಯಮ ಮಾಡಿದಳು. ಅವರ ಸಂಯುಕ್ತ ಶ್ರಮದಿಂದ

ಆಶ್ರಮವು ಸ್ವಾವಲಂಬಿಯಾಗುವುದಲ್ಲದೆ, ಅದು ಅವರ ಸಾಧನೆಗೆ ನೆರವೀಯುತ್ತದೆ ಏಕೆಂದರೆ ಅದೇ ಅವರ ಕರ್ಮಯೋಗ, ಯೋಗದಲ್ಲಿ ಜ್ಞಾನವಲ್ಲದೆ ಕರ್ಮವು ಬೇಕು. ಆದ್ದರಿಂದ ಪ್ರತಿಯೊಬ್ಬರೂ ಅವರವರ ಶಕ್ತ್ಯನುಸಾರ ಕೆಲಸ ಮಾಡಬೇಕು. ಇದಕ್ಕಾಗಿ ಆಶ್ರಮದಲ್ಲಿ ವಿವಿಧ ಶಾಖೆಗಳನ್ನು ತೆರೆಯಲಾಯ್ತು; ಮತ್ತು ಪ್ರತಿಯೊಂದು ಶಾಖೆಯೂ ಒಬ್ಬ ಮುಖ್ಯಸ್ಥನ ಮೇಲ್ವಿಚಾರಣೆಯಲ್ಲಿ ಕೆಲಸಮಾಡುತ್ತ ಬಂತು.

ಆಮೇಲೆ ಪ್ರತಿಯೊಬ್ಬರೂ ಯಾವುದಾದರೊಂದು ಬಗೆಯ ವ್ಯಾಯಾಮವನ್ನು ನಿಯತವಾಗಿ ಮಾಡಬೇಕೆಂದು ಆಕೆ ವಿಧಿಸಿದಳು. ಸಾಧನೆ ಮಾಡಲು ಶರೀರವನ್ನು ಸಮರ್ಥವೂ ನಮ್ಯವೂ ಆಗಿ ಇಡಲು ಇದು ಅಗತ್ಯ. ದುರ್ಬಲವೂ ಜಡವೂ ಅನಾರೋಗ್ಯಯುಕ್ತವೂ ಆದ ಶರೀರದಿಂದ ಏನನ್ನು ಮಾಡಲೂ ಸಾಧ್ಯವಿಲ್ಲ. ಸಮಗ್ರಯೋಗದ ಸಾಧಕನು ಚುರುಕಾಗಿರತಕ್ಕದ್ದು. ಪ್ರತಿದಿನವೂ ಆಕೆ ಸ್ವತಃ ಮಧ್ಯಾಹ್ನದ ಮೇಲೆ ಹೊರ ಹೊರಟು ಟೆನಿಸ್ ಆಡುತ್ತಿದ್ದಳು.

ಕೆಲವರು ಈ ವಿಧಿಯನ್ನು ಅಪಾರ್ಥಮಾಡಿದರು. ಅವರನ್ನು ಒಲಿಸಿಕೊಳ್ಳುವುದು ಸುಲಭವಾಗಲಿಲ್ಲ. ಚಾತುರ್ಯದಿಂದಲೂ ಸಹನೆಯಿಂದಲೂ ಆಕೆ ತನ್ನ ಉದ್ದೇಶವನ್ನು ಸಾಧಿಸಿಕೊಂಡಳು. ಅವಳು ಅದ್ಭುತವನ್ನು ಸಾಧಿಸಬಲ್ಲಳೆಂದು ಎಲ್ಲರಿಗೂ ಮನವರಿಕೆಯಾಯಿತು–ಆತ್ಮವಿಶ್ವಾಸವನ್ನು ಹುಟ್ಟಿಸುವುದು, ಪ್ರತ್ಯಾಶೆ ಸುಖಗಳನ್ನು ಕುದುರಿಸುವುದು, ಶ್ರದ್ಧೆ–ಪ್ರೇಮ ಗೌರವಗಳನ್ನು ಸ್ಫುರಿಸುವಂತೆ ಮಾಡುವುದು, ವಾತ್ಸಲ್ಯಮಯ ತಾಯಿಯಂತೆ ನೆರವೀಯುವುದು–ಇವೇ ಅವಳು ಮಾಡುತ್ತಿದ್ದ ಅದ್ಭುತ. ನಿಜವಾಗಿ ಆಕೆ ಅವರಿಗೆ ತಾಯಿಗಿಂತ ಹೆಚ್ಚಿನವಳಾಗಿದ್ದಳು. ಶ್ರೀ ಅರವಿಂದರು ನ್ಯಾಯವಾಗಿ ಹಾಗೆ ಅಪ್ಪಣೆ ಕೊಡಿಸಿದರು. "ಸಾಮಾನ್ಯ ತಾಯಿ–ಮಕ್ಕಳ ಶರೀರನಿಷ್ಠ ಸಂಬಂಧಕ್ಕಿಂತ ಅವಳಿಗೂ ಅವಳನ್ನು ತಾಯಿಯೆಂದು ಒಪ್ಪಿದವರಿಗೂ ಇರುವ ಸಂಬಂಧ ಎಷ್ಟೋ ಪಾಲು ಹೆಚ್ಚಿನದು; ಅದು ಮಾನವ್ಯ ಮಾತೆ ಕೊಡಬಲ್ಲುದೆಲ್ಲವನ್ನೂ ಕೊಡುತ್ತದೆ–ಆದರೆ ಹಾಗೆ ಕೊಡುವುದನ್ನು ಉನ್ನತತರ ರೀತಿಯಿಂದ ಕೊಡುತ್ತದೆ"

"ಶ್ರೀ ಅರವಿಂದರು ನನ್ನ ಹತ್ತಿರ ಬಂದರು." ಎಂಬ ತಮ್ಮ ಪುಸ್ತಕದಲ್ಲಿ ದಿಲೀಪಕುಮಾರರಾಯರು ತಾವು ಒಮ್ಮೆ ಹೇಗೆ ದಂಗೆಯೆದ್ದಿದ್ದೆವೆಂಬುದನ್ನೂ ಹೇಗೆ ನಿಮಿಷಾರ್ಧದಲ್ಲಿ ಆಕೆ ತಮ್ಮನ್ನು ಸಂತೈಸಿದಳೆಂಬುದನ್ನೂ ಬಣ್ಣಿಸಿದ್ದಾರೆ.

"...ಒಂದು ಘಟನೆ ನಡೆದುದರಿಂದ ನನ್ನ ಮೇಲಿನ ಸುಳ್ಳು ಆರೋಪವೊಂದನ್ನಾಕೆ ನಂಬುವ ಮೂಲಕ ನನಗೆ ದೊಡ್ಡ ಅನ್ಯಾಯ ಮಾಡಿದಳೆಂದು ನಾನು ಗಡಿಬಿಡಿಯಲ್ಲಿ ನಿರ್ಧರಿಸಿದೆ. ಆದುದರಿಂದ ಅವಳ ಮೇಲಿನ ಶ್ರದ್ಧೆ ಹೊರಟು ಹೋಯಿತೆಂದೂ ಅವಳನ್ನು ನಾನಿನ್ನು ನೋಡುವುದಿಲ್ಲವೆಂದೂ ಅವಳಿಗೆ ಹೇಳಿ ಕಳಿಸಿದೆ. ಅದೇ ಕಾಲದಲ್ಲಿ ಕೇವಲ ನಿಮಗಾಗಿ ನಾನು ಆಶ್ರಮಕ್ಕೆ ಬಂದವನೆಂದು ಶ್ರೀ ಅರವಿಂದರಿಗೊಂದು

ಕಾಗದವನ್ನು ಬರೆದೆ... ನೀವು ಹೇಳಿದ್ದರಿಂದ ಮಾತ್ರ ನಾನವಳನ್ನು ತಾಯಿಯೆಂದು ಸ್ವೀಕರಿಸಿದ್ದು ಎಂದೂ ಅದರಲ್ಲಿ ಅವರಿಗೆ ನೆನಪು ಮಾಡಿಕೊಟ್ಟೆ... ಮಾತೃಶ್ರೀಗೇ ನಾನು ನೇರವಾಗಿ ಬರೆದೆ 'ನೀನು ನನ್ನ ಮೇಲೆ ಹುಬ್ಬುಗಂಟಿಕ್ಕುವೆಯಾದರೆ, ಅದಕ್ಕೆ ನಾನು ನಿನಗಿಂತ ಅರವಿಂದರನ್ನು ಹೆಚ್ಚಾಗಿ ಪ್ರೀತಿಸುವೆನೆಂಬುದು ಅದಕ್ಕೆ ಕಾರಣವಾದರೆ, ಆಗ ನಾನು ಮುಖ್ಯವಾಗಿ ಅವರಿಗಾಗಿಯೇ ಇಲ್ಲಿಗೆ ಬಂದವನು ಮತ್ತು ನಿನ್ನತ್ತ ತಿರುಗಬೇಕೆಂದು ಅವರು ಬಯಸಿದ್ದರಿಂದ ನನ್ನನ್ನು ನಾನು ತಾಯಿಯೆಂದು ಸ್ವೀಕರಿಸಿದ್ದು ಎಂಬುದು ಸತ್ಯವಾಗಿರುವುದರಿಂದ ನಾನು ಪಶ್ಚಾತ್ತಾಪ ಪಡದೆ ಉಳಿಯುವುದು ನ್ಯಾಯ. ಈಗ ನೀನು ಯಾವ ಕೇಡನ್ನು ಬೇಕಾದರೂ ನನಗೆ ಮಾಡಬಹುದು; ಈ ಸಂಜೆಯೇ ನಾನು ಆಶ್ರಮ ಬಿಡಲು ಸಿದ್ಧನಾಗಿದ್ದೇನೆ: ಆದರೆ ಅವರೇ ಸ್ವತಃ ನನ್ನನ್ನು ನಿವೃತ್ತನನ್ನಾಗಿ ಮಾಡಿ ಕಳಿಸಬೇಕು–ನೆನಪಿರಲಿ! ಏಕೆಂದರೆ ನಿನ್ನಿಂದ ಯಾವ ಅಪ್ಪಣೆಯನ್ನೂ ನಾನು ಪಡೆಯತಕ್ಕವನಲ್ಲ."

"ಅವಳಿಂದ ಒಂದು ಸಂದೇಶವನ್ನು ತೆಗೆದುಕೊಂಡು ನಳಿನೀಗುಪ್ತನು ನನ್ನೆಡೆಗೆ ಬಂದನು: ಅವಳು ನನ್ನನ್ನು ನೋಡಬಯಸಿದಳು. 'ನಾನು ಅವಳಲ್ಲಿಗೆ ಹೋಗಿ ಹುಬ್ಬುಗಂಟಿಕ್ಕಿಸಿಕೊಳ್ಳಲಾರೆ' ಎಂದು ಥಟ್ಟನೆ ಉತ್ತರವಿತ್ತೆ. 'ನಾನು ಗುರುದೇವನಿಂದ ಹೊರಟುಹೋಗಬೇಕೆಂಬ ಕಾಗದಕ್ಕಾಗಿ ಕಾಯುತ್ತಿದ್ದೇನೆ ಮತ್ತು ಅದು ಬಂದೊಡನೆಯೇ ನಾನು ಹೊರಟು ಹೋಗುವೆನು.' ಆಗ ಅವನೆಂದ: ನಿನ್ನ ಮೇಲೆ ಹುಬ್ಬುಗಂಟಿಕ್ಕಬೇಕೆಂದು ಮಾತೃಶ್ರೀ ಬಯಸಿಲ್ಲ. ಅದು ಬರಿ ತಪ್ಪು ಅರ್ಥಮಾಡಿಕೊಂಡ ಒಂದು ಪ್ರಕರಣ ಎಂದು ನನಗೆ ಆಕೆ ಹೇಳಿದಳು. ಏನೇ ಆಗಲಿ, ಬೇಕಾದ ಹಾಗೆ ವಿವರಿಸಲು ನಿನಗೆ ಅವಕಾಶಕೊಟ್ಟು ಆಕೆ ಸ್ವತಃ ಬಂದು ನೋಡೆಂದು ಹೇಳಿದಾಗ ನೀನು ಇಷ್ಟು ನಿರ್ದಾಕ್ಷಿಣ್ಯ ಪ್ರವೃತ್ತಿಯವನಾಗಕೂಡದು'... ಎಂದೂ ಅವನು ಹೇಳಿದನು.

"ಮನಸ್ಸಿಲ್ಲದ ಮನಸ್ಸಿನಿಂದ ನಾನು ಹೋದೆ. ನನಗೆ ಶಕ್ಯವಿದ್ದುದು ಅದೊಂದೇ ಆದುದರಿಂದ ನನ್ನತ್ತ ಮಾತೃಶ್ರೀ ಮುಗುಳುನಗೆ ನಕ್ಕಳು. ಆ ಪರಿಸ್ಥಿತಿಯಲ್ಲಿ ನಾನು ನನ್ನ ಕಣ್ಣುಗಳನ್ನೇ ನಂಬಲಾರದಾದೆ! ಆದರೆ ಅವಳ ಅನಿರೀಕ್ಷಿತ ಮಧುರಹಾಸವು ಹೃದಯಕ್ಕೆ ಸಮಾಧಾನಕರ' ಎಂಬ ಒಂದೇ ಒಂದು ವಿಶೇಷಣದಿಂದ ನಾನು ವರ್ಣಿಸಬಹುದಾದ ಆಲೋಚನೆಯೊಂದು ನನ್ನ ಮನದಲ್ಲಿ ಥಟ್ಟನೆ ಹೊಳೆಯಿತು. ಅಂದರೆ ಎಲ್ಲಾ ಇನ್ನೂ ಕಳೆದುಹೋಗಿಲ್ಲ ಸ್ವಲ್ಪ ಬಾಕಿ ಇರುವಂತಿದೆ... ಅವಳ ಸಹನೆ ಮತ್ತು ಔದಾರ್ಯಗಳ ಉದಾಹರಣೆಗಳನ್ನು ನಾನೇ ಸ್ವತಃ (ಹಿಂದೆ) ನೋಡಿಲ್ಲವೇ? ಅವಳ ಒಂದೇ ಒಂದು ಫಲವತ್ತಾದ ಮುಗುಳ್ನಗೆಯಿಂದ ಅಂಥ ಆಲೋಚನೆಗಳು ನನ್ನ ಶುದ್ಧ ನಿರ್ಧಾರವನ್ನು ಕದಲಿಸಿದವು. ಅನಂತರ ನಾನು ನೆಲದ ಮೇಲೆ ಕುಳಿತೆ. ಅವಳು ತನ್ನ ಸುಂದರವಾದ ಕೂದಲನ್ನು ಹರಹಿ ಬಿಟ್ಟು ಉಚ್ಚಪೀಠದಲ್ಲಿ ಕುಳಿತಿದ್ದಳು.

ಆಕೆ ತನ್ನ ಕೈಯನ್ನು ನನ್ನ ಹೆಗಲ ಮೇಲಿಟ್ಟಳು ಮತ್ತು ನೆಟ್ಟ ದೃಷ್ಟಿಯಿಂದ ನನ್ನನ್ನು ನೋಡಿದಳು. ನಾನು ಅಂಕೆತಪ್ಪಿ ಹೊರಬರುತ್ತಿದ್ದ ನನ್ನ ಕಂಬನಿಗಳೊಡನೆ ಹೋರಾಡಿದೆನು. 'ನಿನ್ನಂತೆ ಅರವಿಂದರನ್ನು ಪ್ರೀತಿಸುವ ಯಾರ ಬಗೆಗಾದರೂ ನಾನು ಕೋಪಗೊಳ್ಳುವುದು ಶಕ್ಯವಿದೆಯೆ?' ಎಂದಳಾಕೆ ಸರಳವಾಗಿ. ಅವಳ ಕಣ್ಣು ವಿಚಿತ್ರವಾದ ಬೆಳಕನ್ನು ಹೊರಸೂಸಿತು. ಅದು ಬಲ ಮಾರ್ದವ, ನಮ್ರತೆಗಳ ಒಂದು ವಿಚಿತ್ರ ಸಂಯೋಗವಾಗಿತ್ತು. 'ನನ್ನ ಭಾವನೆ ಏನೇ ಆಗಿರಲಿ, ಅರವಿಂದರು ನಿನ್ನನ್ನು ಎಷ್ಟು ಹೊತ್ತುಕೊಂಡಿದ್ದಾರೆ ಎಂಬುದನ್ನಾದರೂ ನಾನರಿಯನೆ? ಹೀಗಿರುವಾಗ ಅವರು ಮಂದಸ್ಮಿತದಿಂದ ಅಭಿನಂದಿಸುವ ಒಬ್ಬನ ಮೇಲೆ ನನಗೆ ಹುಬ್ಬುಗಂಟಿಕ್ಕಲು ಸಾಧ್ಯವೆಂದು ನೀನು ಹೇಗೆ ತಿಳಿದೆ? ನಾನು ಮತ್ತು ನನ್ನ ಎಲ್ಲವೂ ಅವರ ಸೇವೆಗಾಗಿಯೇ ಇರುವುದು ನಿನಗರಿಯದೆ? ಅವರ ಸಮೀಪಸ್ಥರೂ ಪ್ರೀತಿಪಾತ್ರರೂ ಆದರೂ ನಿಮ್ಮಂತೆಯೇ ನಾನೂ ಅಲ್ಲವೇ?' ನಾನು ಗಳಗಳನೆ ಅಳದಿದ್ದರೆ ಆಕೆ ಇನ್ನೂ ಏನೇನನ್ನೋ ಹೇಳುತ್ತಿದ್ದಳು... 'ಆದಿನ ನನಗೊಂದು ಹೊಸ ನೋಟ ಅಥವಾ ದರ್ಶನವೇ ದೊರಕಿತು. ಅದೆಂಥ ದರ್ಶನ? ನಿಜವಾದ ಆಧ್ಯಾತ್ಮಿಕ ಗೌರವಸ್ಥಿಕೆಯಿಂದ ಹುಟ್ಟಿದ ನಮ್ರತೆಯ ದರ್ಶನ! ಅವಳು ಹೇಳಿದ ಪ್ರಕಾರ ನಾನವಳನ್ನು ನನ್ನ ಆಧ್ಯಾತ್ಮಿಕ ತಾಯಿಯೆಂದೂ ನನಗವಳೂ ಪೂರ್ಣವು ಕೊನೆಯದೂ ಆದ ಆಧ್ಯಾತ್ಮ ಪ್ರವೇಶ ಮೂಡಿಸಿದವಳೆಂದೂ ಅದೇ ಬೆಳಗಿನಲ್ಲಿ ನಾನು ಸ್ವೀಕರಿಸಿದೆನು."

ಕೆಲ ಸಂಗತಿಗಳಲ್ಲಿ ಮಾತೃಶ್ರೀ ಬಿಗುವಿನವಳಾದರೆ ಆ ಬಿಗುವಿನ ಜೊತೆಗೇ ಅವಳಲ್ಲಿ ಸರ್ವರಿಗೂ ಮೀಸಲಾದ ಅಪ್ರಮಿತಮಾರ್ದವವೂ ಇದೆ. ಅವಳು ಎಲ್ಲರನ್ನೂ ಕ್ಷಮಿಸುತ್ತಾಳೆ. ಎಲ್ಲರಿಗೂ ಸಹಾಯ ಮಾಡುತ್ತಾಳೆ ಅವಳಿಗೆ ಪಂಕ್ತಿಭೇದವೆಂಬುದು ಇಲ್ಲವೇ ಇಲ್ಲ. ಅದು ಅವಳ ವೈಶಿಷ್ಟ್ಯ ಅದರಿಂದಲೇ ಅಷ್ಟೊಂದು ಜನರು ಮಾತೃಶ್ರೀಯ ಸತತವಾದ ಕಾವಲಿನಲ್ಲಿ ಅವಧಾನದಲ್ಲಿ, ಸುಖಿಗಳೂ ತೃಪ್ತರೂ ಪ್ರಾಮಾಣಿಕರೂ ವಿಧೇಯರೂ ಆಗಿ ಒಟ್ಟುಗೂಡಿ ಬದುಕಬಲ್ಲವರಾದರು.

ಈಗ ಆಶ್ರಮವು ಪಾಂಡಿಚೇರಿಯ ಪಟ್ಟಣದ ಹಳೆಯ ಗಡಿಗಳೊಳಗೆ ಸ್ವಾವಲಂಬಿಯಾಗಿದೆ. ಆಶ್ರಮಕ್ಕೆ ಸುಮಾರು ೨೦೦ ಮನೆಗಳಲ್ಲಿ ಸುಮಾರು ೧೫೦೦ ಜನರು ವಾಸಿಸುತ್ತಿದ್ದಾರೆ; ಹೊರಗಿನ ಕೆಲಸಗಾರರು ಸುಮಾರು ೭೦೦ ಜನರಿದ್ದಾರೆ. ಅತಿಥಿಗಳಿಗಾಗಿ ಹಲವಾರು ಅತಿಥಿಗೃಹಗಳು ಅಲ್ಲಿವೆ. ಅವುಗಳಲ್ಲೊಂದು ಆಶ್ರಮದ ಸಮೀಪದಲ್ಲೇ ಬಹಳ ವಿಶಾಲವಾಗಿಯೂ ಅನನ್ಯವಾಗಿಯೂ ಇದೆ. ಅದರ ಹೆಸರು 'ಗೊಲ್ಕೊಂಡೆ; ಅದರ ಯೋಜನೆಯನ್ನು ಸ್ವತಃ ಮಾತೃಶ್ರೀಯೇ ಸಿದ್ಧಗೊಳಿಸಿದ್ದಳು. ಅದನ್ನು ಕಟ್ಟಿದ್ದು ಅಮೇರಿಕದ ವಾಸ್ತುಶಿಲ್ಪಿಯೊಬ್ಬ, ಅದರೊಳಗಿನ ಕಚ್ಚು ಹಲಗೆ ಮುಂತಾದವುಗಳೂ ಪೀಠೋಪಕರಣಗಳೂ ಮಾತೃಶ್ರೀಯ ಹೇಳಿಕೆಯ ಪ್ರಕಾರ ಆಶ್ರಮದಲ್ಲಿಯೇ ಸಿದ್ಧವಾದಂಥವು. ಪ್ರತಿಯೊಂದನ್ನೂ ಎಚ್ಚರಿಕೆಯಿಂದ ಬಳಸುವಂತೆ

ಆಕೆ ವಿಶೇಷ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಾಳೆ. ಸ್ಪಷ್ಟವಾಗಿ ಅವಳು ನೋಟೀಸು ಹಚ್ಚಿದ್ದಳು: "ತಾನು ಬಳಸುವ ಭೌತಿಕ ವಸ್ತುಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳದಿರುವುದು ಜಾಢ್ಯ, ಅಜ್ಞಾನ, ಜಾಗರೂಕತೆಯಿಂದ ಬಳಸಿದವರಾದರೆ ನಿಮಗೆ ಭೌತಿಕವಾದ ಯಾವ ವಸ್ತುವನ್ನು ಬಳಸಲೂ (ಎಷ್ಟರ ಮಟ್ಟಿಗೂ) ಹಕ್ಕಿಲ್ಲ."

ಆಶ್ರಮವಾಸಿಗಳು ತಾಪತ್ರಯರಹಿತರೂ ತೃಪ್ತರೂ ಆಗಿದ್ದಾರೆ. ಏಕೆಂದರೆ ಯಾರೂ ತಮ್ಮ ದಿನದ ಊಟಕ್ಕಾಗಿಯೂ ಉಳಿವಿಗಾಗಿಯೂ ವಿಚಾರ ಮಾಡಬೇಕಾಗಿಲ್ಲ. ಮಾತೃಶ್ರೀಯ ಕಣಜದಿಂದ ಅವರ ಅವಶ್ಯಕತೆಗಳೆಲ್ಲವೂ ಪೂರೈಸಲ್ಪಡುತ್ತದೆ; ಮಾತೃಶ್ರೀಯೇ ಸ್ವತಃ ದೇಖರೇಖೆ ನೋಡುತ್ತಾಳೆ. ಪ್ರತಿ ತಿಂಗಳ ಕೊನೆಗೆ ಪ್ರತಿಯೊಬ್ಬನೂ ತನ್ನ ಅವಶ್ಯಕತೆಗಳ ಪಟ್ಟಿಯನ್ನು ಅವಳಿಗೆ ಒಪ್ಪಿಸಬೇಕು. ಪ್ರತಿ ತಿಂಗಳ ಮೊದಲ ದಿನ "ಅಭಿವೃದ್ಧಿ" ಎಂಬ ಹೆಸರಿನಲ್ಲಿ ಮಾತೃಶ್ರೀಯು ಸ್ವತಃ ತನ್ನ ಆಶೀರ್ವಾದಗಳೊಂದಿಗೆ ವಸ್ತುಗಳನ್ನು ಹಂಚುತ್ತಾಳೆ.

ಆದರೆ ಯೋಗಾಭ್ಯಾಸ ಮಾಡಲು ಬಂದಿದ್ದರೂ ಪ್ರತಿಯೊಬ್ಬನೂ ಆಶ್ರಮಕ್ಕಾಗಿ ಆಶ್ರಮದಲ್ಲಿ ಏನನ್ನಾದರೂ ಮಾಡಲೇಬೇಕು. ಏಕೆಂದರೆ, ದೇವರಿಗಾಗಿ ದುಡಿಯುವುದೆಂದರೆ ದೇಹಸಮೇತ ಪ್ರಾರ್ಥನೆ ಮಾಡುವುದು ಎಂದಿದ್ದಾಳೆ ಮಹಾತಾಯಿ. ಯಾವ ಕೆಲಸವೂ ಉಚ್ಚವಲ್ಲ, ನೀಚವಲ್ಲ ದೇವರ ದೃಷ್ಟಿಯಲ್ಲಿ ಎಲ್ಲ ಕೆಲಸಗಳೂ ಸಮಾನ ಮೌಲ್ಯವುಳ್ಳವು ಅವನ್ನು ಸರಿಯಾದ ಪ್ರಜ್ಞೆಯಿಂದ ಮಾಡಿದರೆ, ನೀವು ಏನು ಮಾಡುತ್ತೀರಿ ಎಂಬುದು ಮುಖ್ಯವಲ್ಲ ನೀವು ಹೇಗೆ ಮಾಡುತ್ತೀರಿ ಎಂಬುದು ಮುಖ್ಯ.

ಆಶ್ರಮದಲ್ಲಿ ಹಲವಾರು ಶಾಖೆಗಳಿವೆ. ಅವುಗಳಿಗೆ 'ಸೇವೆಗಳು' ಎಂದು ಹೆಸರು. ಉದಾಹರಣೆಗಾಗಿ 'ಕಟ್ಟಡಸೇವೆ' ಇದೆ: ಅದರಲ್ಲಿ ಆಶ್ರಮದ ಕಟ್ಟಡದ ದುರಸ್ತನ್ನು ಮಾಡಬೇಕು, ಅಲ್ಲದೆ ಕಟ್ಟಡಗಳನ್ನೂ ಕಟ್ಟಬೇಕು. ಆಶ್ರಮವು ತನ್ನದೇ ಆದ ಟೊಳ್ಳು ಇಟ್ಟಿಗೆಗಳನ್ನು ತಯಾರಿಸುತ್ತದೆ; ಸಿಮೆಂಟಿನ ಗಟ್ಟಿ ಮುಂತಾದವುಗಳನ್ನೂ ಸಿದ್ಧಗೊಳಿಸುತ್ತದೆ. ಅದರೊಡನೆ ಪೂರಕ ಸೇವೆಗಳೂ ಇವೆ; ಶೌಚಸೇವೆ, ಜಲಾನಯನ, ವಿದ್ಯುತ್ಸೇವೆ ಮೊದಲಾದವು ಪೂರಕ ಸೇವೆಗಳು: ತೊಳೆವಬಳಿವ ಗೃಹಸೇವೆಯೂ ಅಲ್ಲಿದೆ.

ಪೀಠೋಪಕರಣಸೇವೆಯವರು ಆಶ್ರಮದ ಎಲ್ಲ ಮನೆಗಳಿಗೂ ಕಿರು ಮನೆಗಳಿಗೂ ಮೇಜು, ಕುರ್ಚಿ, ಬಟ್ಟೆನಿಲುವು, ಕಪಾಟು ಮುಂತಾದವನ್ನು ಒದಗಿಸಬೇಕು. ಈ ಕೆಲಸಕ್ಕಾಗಿ ಎರಡು ಬಡಿಗಸಾಲೆಗಳಿವೆ. ಅಲ್ಲಿ ಒಂದು ದೊಡ್ಡ ಅಡಿಗೆಮನೆಯಿದೆ; ಅದರಲ್ಲಿ ಒಂದು ಸಲಕ್ಕೆ ಒಂದು ಸಾವಿರ ಜನರು ಕುಳಿತುಕೊಳ್ಳಬಹುದು. ಅನ್ನ, ರೊಟ್ಟಿ, ಹಾಲು, ಮೊಸರು, ಲಿಂಬೆಹಣ್ಣು ಮತ್ತು ಬಾಳೆಹಣ್ಣುಗಳನ್ನು ಬಡಿಸಲಾಗುತ್ತದೆ. ಅಡಿಗೆಮನೆಗೆ ಒಂದು ಮಲಾಪಕರ್ಷಣ ವಿಭಾಗವಿದೆ. ಚೆನ್ನಾದ ಬ್ರೆಡ್‌ತುಂಡುಗಳನ್ನು

ತಯಾರಿಸುವ ಪಾಕಶಾಲೆಯೂ ಅಲ್ಲಿದೆ, ಹಿಟ್ಟಿನ ಹಾಗೂ ಎಣ್ಣೆಯ ಗಿರಿಣಿಗಳೂ ಇವೆ. ಕಲ್ಲಿದ್ದಲನ್ನೂ ಕಟ್ಟಿಗೆಯನ್ನೂ ಒದಗಿಸುವ ಇಂಧನ ವಿಭಾಗ ಕೂಡ ಆಶ್ರಮದಲ್ಲಿದೆ.

ಹೊಲಿಗೆ ವಿಭಾಗವು ಗಂಡಸರಿಗೂ ಹೆಂಗಸರಿಗೂ ಯೋಗ್ಯವಾದ ಉಡುಪನ್ನು ತಯಾರಿಸಿಕೊಡುತ್ತದೆ. ಬಟ್ಟೆ ತೊಳೆದು ಇಸ್ತ್ರಿಮಾಡಲು ಅಲ್ಲೊಂದು ಅಗಸನಂಗಡಿ ಸಹ ಇದೆ. ಪಾದಸೇವಾ ವಿಭಾಗವು ಮೆಟ್ಟುಗಳನ್ನು ಎಲ್ಲರಿಗೂ ಒದಗಿಸುತ್ತದೆ.

ಗದ್ದೆ–ತೋಟಗಳಲ್ಲಿ ಶಿಷ್ಯರು ವಿಶಿಷ್ಟದಲ ಮಾಡಿಕೊಂಡು ಕೊಯ್ಲು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಅಲ್ಲಿ ಎರಡು ಹಾಲಿನ ಕೇಂದ್ರಗಳಿವೆ. ಅವುಗಳಲ್ಲಿ ವಿಶಿಷ್ಟ ತಳಿಯ ದನಗಳಿವೆ. ಕೋಳಿಸಾಕಣೆಯನ್ನಲ್ಲಿ ಮಾಡಲಾಗುತ್ತದೆ.

ಪುಷ್ಪಸೇವಾ ವಿಭಾಗದವರು ವಿವಿಧ ತೋಟಗಳಿಂದ ಹೂವುಗಳನ್ನು ಕೊಯ್ದು ಮಾತೃಶ್ರೀಗೂ ಇತರ ಆಶ್ರಮಿಗಳಿಗೂ ದೇವಾರ್ಚನೆಗಾಗಿ ಬೆಳಿಗ್ಗೆ ಒದಗಿಸುತ್ತಾರೆ.

ಮೋಟಾರು ಮತ್ತು ಯಂತ್ರಗಳ ದುರಸ್ತು, ಡಬ್ಬಿಗೆ ತುಂಬುವುದು, ಬೆಸಿಗೆ ಹಾಕುವುದು ಮುಂತಾದವುಗಳಿಗಾಗಿ ಕರ್ಮಶಾಲೆಗಳಿವೆ. ಅಕ್ಷರಶೀಲ ಕಾರ್ಖಾನೆ, ಕಮ್ಮಾರಸಾಲೆ ಮತ್ತು ಅದಕ್ಕೆ ಸೇರಿದ ದೃಢೀಕರಣಶಾಖೆ ಇವು ಕೂಡ ಇವೆ.

ಹೊಲಿಗೆ ಸೇವೆಯನ್ನೂ ಉಪಯುಕ್ತ ಮತ್ತು ವಿಲಾಸಿ ವಸ್ತುಗಳ ತಯಾರಿಕೆಯನ್ನೂ ಹೆಂಗಸರು ಮಾಡುತ್ತಾರೆ.

ಆಶ್ರಮದ ಅಚ್ಚುಕೂಟಕ್ಕೆ ನಾಲ್ಕು 'ಮೋಟೋಟೈಪ್' ಯಂತ್ರಗಳಿವೆ; ಕೆಲಸ ಬಹಳ. ಸುಮಾರು ೧೦ ವಿವಿಧ ಭಾಷೆಗಳ ಪುಸ್ತಕ ಹಾಗೂ ನಿಯತಕಾಲಿಕಗಳಲ್ಲಿ ಮುದ್ರಿತವಾಗುತ್ತವೆ. ಚಿತ್ರದಚ್ಚುಗಳೂ ಮುದ್ರಿಸಲ್ಪಡುತ್ತವೆ. ಒಂದು 'ಬೈಂಡಿಂಗ್' ವಿಭಾಗವನ್ನೂ ಅದಕ್ಕೆ ಜೋಡಿಸಲಾಗಿದೆ. ಆಶ್ರಮದ ವಿವಿಧ ಪ್ರಕಟಣೆಗಳನ್ನಲ್ಲಿ ಮುದ್ರಿಸಲಾಗುತ್ತದೆ.

ವಿವಿಧ ಭಾಷೆಗಳ ೫೦,೦೦೦ ಪುಸ್ತಕಗಳನ್ನುಳ್ಳ ಗ್ರಂಥಾಲಯವು ಆಶ್ರಮದಲ್ಲಿದೆ.

ಆಸ್ಪತ್ರೆ ಹಾಸಿಗೆಗಳಿಂದ ಕೂಡಿದ ಒಂದು ಚಿಕಿತ್ಸಾಲಯವನ್ನು ತೆರೆಯಲಾಗಿದೆ. ಔಷಧಗಳನ್ನದು ಒದಗಿಸುತ್ತದೆ. ದಂತ ಚಿಕಿತ್ಸಾಲಯ, ವೈದ್ಯಕೀಯ ಪ್ರಯೋಗಶಾಲೆ ಮತ್ತು ಅಂಗಸಂವಾಹನ ಶಾಲೆಗಳು ಅಲ್ಲಿವೆ.

ವಾಹನಸೇವಾ ಶಾಖೆಯಲ್ಲಿ ಜನರನ್ನೂ ಸಂದರ್ಶಕರನ್ನೂ ಒಯ್ಯಲು ಜೀಪು–ಕಾರುಗಳಿವೆ. ಸಂದರ್ಶಕರಿಗೂ ಹೊಸ ಆಗಂತುಕರಿಗೂ ನೆರವೀಯಲು ಸ್ವಾಗತಸೇವಾ ಶಾಖೆಯೊಂದಿದೆ.

ಇಷ್ಟೇ ಅಲ್ಲ; ಅಲ್ಲೊಂದು ಸಚಿವಾಲಯವೂ ಟಪ್ಪಾಲು ಸೇವಾಲಯವೂ ಇವೆ.

ಆಶ್ರಮವನ್ನು ನಡೆಸಲು ತಿಂಗಳಿಗೆ ಸುಮಾರು ಒಂದು ಲಕ್ಷಕ್ಕೂ ಹೆಚ್ಚು ಮತ್ತು ವರ್ಷಕ್ಕೆ ೧೪ ಲಕ್ಷ ರೂಪಾಯಿಗಳು ಬೇಕಾಗುತ್ತವೆ. ಅರವಿಂದರು ತೀರಿ ಹೋದಮೇಲೆ ಆಶ್ರಮದ ಆದಾಯ ಇಳಿದೀತೆಂಬ ಭೀತಿಯಿತ್ತು; ಆದರದು ಹೆಚ್ಚಿದೆ.

ಇದೆಲ್ಲವೂ ಸಾಧ್ಯವಾದದ್ದು ಮಾತೃಶ್ರೀಯ ಶಕ್ತಿಯಿಂದ ಮತ್ತು ಅವಳ ಉಪಸ್ಥಿತಿಯಿಂದ. ಹೊರಗಿನಿಂದ ಅದರ ಅದ್ಭುತ ಪರಿಣಾಮವನ್ನು ನಿರ್ಣಯಿಸಲು ಬರದು: ಏಕೆಂದರೆ, ಆಶ್ರಮದ ಚಟುವಟಿಕೆಗಳೆಲ್ಲವೂ ಅವಳ ವೈಯಕ್ತಿಕ ಸಲಹೆ ಮತ್ತು ಮೇಲ್ವಿಚಾರಣೆಗಳೊಳಗೆ ಸುಗಮವಾಗಿ ನಡೆಯುತ್ತಿವೆ. ಮೊದಲೇ ಮಾತೃಶ್ರೀಯ ಅಪ್ಪಣೆ ಪಡೆದುಕೊಳ್ಳದೆ ಯಾರೂ ಏನನ್ನೂ ಮಾಡರು. ಸಲಹೆ ಸೂಚನೆಗಳಿಗಾಗಿ ಎಲ್ಲ ಸೇವಾ ಶಾಖೆಯವರೂ ಬೇಕಾದಷ್ಟು ಸಲ ಮಾತೃಶ್ರೀಯನ್ನು ಸಂದರ್ಶಿಸುತ್ತಾರೆ. ಅವಳು ಎಲ್ಲವನ್ನೂ ನಿರ್ವಹಿಸುತ್ತಾಳೆ. ಯಾರಾದರೂ ಮುದ್ರಣಾಲಯದೊಳಗೆ ಹೋಗಬೇಕೆಂದರೆ ಅವಳಿಂದ ಸಹಿ ಮಾಡಲ್ಪಟ್ಟ ಅಪ್ಪಣೆ ಚೀಟಿಯನ್ನು ಪಡೆದುಕೊಂಡರೇ ಹಾಗೆ ಹೋಗಲು ಸಾಧ್ಯ. ಚಂದಾಹಣವನ್ನೊಳಗೊಂಡ ಬಹುಸಂಖ್ಯಾತ ಧನ ಪ್ರೇಷಣ ಪತ್ರಗಳ ರಶೀದಿಗಳಿಗೆಲ್ಲಾ ಅವಳೇ ರುಜು ಹಾಕುತ್ತಾಳೆ. ಅವಳ ರುಜುವೇ ಅವಳ ದಯೆಗೂ ವಿವರಗಳ ಬಗೆಗಿನ ಅವಳ ಅವಧಾನಕ್ಕೂ ಸೂಚಕವಾಗಿದೆ.

ಈ ವಿಘ್ನಿತ ಪ್ರಪಂಚಕ್ಕೆ ಆಶ್ರಮದಲ್ಲಿ ಮಾತೃಶ್ರೀಯ ಪ್ರತಿಭೆಯು ಒಂದು ಮಾದರಿಯನ್ನು ರಚಿಸಿತು. ಇದು ಜಗತ್ತಿನ ಎಲ್ಲ ಭಿನ್ನ ದೇಶಗಳ ಮತ್ತು ರಾಷ್ಟ್ರೀಯತೆಯ ಪರಿಷತ್ತು; ಈ ಎಲ್ಲ ಜನರು ಆಪ್ತ ಸೋದರರರಾಗಿದ್ದಾರೆ; ಸಹಜೀವನ ನಡೆಸುತ್ತಿದ್ದಾರೆ; ದೇವಶೋಧ ಮಾಡುತ್ತಿದ್ದಾರೆ; ಮಾತೃಶ್ರೀಗೆ ಭಕ್ತಿದೋರುತ್ತಿದ್ದಾರೆ ಅವಳು ಪರಮಾಧಿಕಾರಿಣಿ.

ಈ ರಾಜ್ಯವು ವಿಸ್ತರಿಸುತ್ತಿದೆ. ಮಾತೃಶ್ರೀಯ ಸಂಪತ್ತು ಅಪ್ರಮೇಯ; ಹಾಗೇ ಅವಳ ಯೋಜನೆಗಳೂ. ಪಾಂಡಿಚೇರಿಗೆ ಸ್ವಲ್ಪ ದೂರದಲ್ಲವಳೀಗ ಒಂದು ದೊಡ್ಡ ಪ್ರದೇಶವನ್ನು ಕೊಂಡುಕೊಂಡಿದ್ದಾಳೆ; ಅದು ಹವಳ ದ್ವೀಪದ ಹತ್ತಿರವಿದೆ. ಪ್ರತಿಯೊಂದು ರಾಷ್ಟ್ರದವರಿಗೂ ಪ್ರತ್ಯೇಕವಾದ ಪಟ್ಟಣವೊಂದನ್ನು ನಿರ್ಮಿಸಲು ಆಗಲೇ ವ್ಯವಸ್ಥೆ ಮಾಡಲಾಗುತ್ತಿದೆ. ಆ ಪಟ್ಟಣಗಳು ಸ್ವಯಂಪೂರ್ಣವೂ ಸ್ವಪ್ರಶಾಸಕವೂ ಆಗಿರುತ್ತದೆ. ಅವುಗಳ ಒಟ್ಟು ಹೆಸರು 'ಅರೋವಿಲೆ,' ಅದು ಅರವಿಂದರ ಹೆಸರನ್ನಾಧಾರಿಸಿದ್ದು. ಅರೋವಿಲೆಯಲ್ಲಿ ಪ್ರತಿಯೊಂದು ಪಟ್ಟಣ ಶಾಖೆಯೂ ವಿವಿಧ ದೇಶಗಳನ್ನು ಪ್ರತಿನಿಧಿಸುತ್ತದೆ. ಎಲ್ಲ ದೇಶಗಳ ಪ್ರಜೆಗಳೂ ಅಲ್ಲಿ ವಾಸಮಾಡುತ್ತಾರೆ. ಎಲ್ಲರೂ ಒಂದೇ ರಾಷ್ಟ್ರದವರಾಗಿ ಬಾಳುತ್ತಾರೆ; ಜಾತಿ–ಮತಗಳ ಪರಿಭೇದವಲ್ಲಿಲ್ಲ. ಅವರು ತಮ್ಮ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡಿರುತ್ತಾರೆ. ಆದರೂ ಅರವಿಂದರ ಉಪದೇಶಾನುಸಾರವಾಗಿ ಒಟ್ಟಾಗಿರುತ್ತಾರೆ. ತಾವು ಆಯ್ದುಕೊಂಡ ಉದ್ಯಮ ಸಾಹಸಗಳ

ನಿರ್ವಾಹಕ್ಕೆ ಬೇಕಾದ ಅನುಕೂಲತೆಗಳನ್ನು ಅವರು ಪಡೆಯುತ್ತಾರೆ. ಪ್ಯಾರಿಸ್ಸಿನಲ್ಲಿರುವ ಸಂಯುಕ್ತರಾಷ್ಟ್ರ ಸಂಘದ ಸಂಘಟನ ಶಾಖೆಯು ತಡಮಾಡದೆ ಈ ಯೋಜನೆಯನ್ನು ಸಮ್ಮತಿಸಿದೆ ಎಂಬುದು ಸ್ವಾಗತಾರ್ಹವಾದ ಸುದ್ದಿ. ಅದರ ಅಸ್ತಿಬಾರವನ್ನು ಆಗಲೇ ಹಾಕಲಾಗಿದೆ. ಅದಕ್ಕೆ ಜಗತ್ತಿನ ಎಲ್ಲ ಭಾಗಗಳಿಂದಲೂ ನೆರವು ದೊರೆಯುತ್ತಿದೆ.

ಮಾತೃಶ್ರೀ ಚಿಕ್ಕಂದಿನಲ್ಲಿ ಕನಸುಕಂಡದ್ದೆಲ್ಲ ಸತ್ಯವಾಗಿ ಪರಿಣಮಿಸುತ್ತಿದೆ. ಶಾಂತವಾಗಿ ಮತ್ತು ಸುರಕ್ಷಿತವಾಗಿ ಬದುಕಲು ತೀವ್ರವಾಗಿ ಬಯಸುವ ಯಾರಾದರೂ ಇಲ್ಲಿ ಸುರಕ್ಷಿತ ನೆರಳನ್ನು ಪಡೆಯುವರು. ಅವರಿಲ್ಲಿ ಮುಕ್ತವಾಗಿ "ಜಗತ್ಪ್ರಜೆ" ಗಳಾಗಿ ಬಾಳುವರು. ಮಾತೃಶ್ರೀ ಹೇಳಿದಂತೆ "ಈ ಸ್ವಪ್ನವು ಸತ್ಯವಾಗಿ ಪರಿಣಮಿಸುವುದರಲ್ಲಿದೆ."

# ಅಂತಾರಾಷ್ಟ್ರೀಯ ವಿದ್ಯಾಕೇಂದ್ರ

೧೯೫೧ರಲ್ಲಿ ವಿದ್ಯಾಕೇಂದ್ರವು ಮಾತೃಶ್ರೀಯಿಂದ ಉದ್ಘಾಟಿಸಲ್ಪಟ್ಟಿತು. ಅದಕ್ಕಾಕೆ "ಶ್ರೀ ಅರವಿಂದೋ ಅಂತಾರಾಷ್ಟ್ರೀಯ ವಿಶ್ವವಿದ್ಯಾನಿಲಯ ಕೇಂದ್ರ" ಎಂದು ಕರೆದಳು. ಶ್ರೀ ಅರವಿಂದರ ಜೀವಿತಾವಧಿಯಲ್ಲೇ ಸಣ್ಣ ಆರಂಭವಾಯ್ತು. ಆಗ ಆಶ್ರಮದ ಕೆಲ ಮಕ್ಕಳಿಗೆ ಪಾಠ ಹೇಳುತ್ತಿದ್ದಳು. ಮೊದಲು ಮಕ್ಕಳಿಗೆ ಅವಳು ಫ್ರೆಂಚ್ ಭಾಷೆಯನ್ನು ಕಲಿಸುತ್ತಿದ್ದಳು; ಎಲ್ಲರೂ ಅಲ್ಲಿರುತ್ತಿದ್ದರು; ಅವರಿಗೆ ಆಸಕ್ತಿ ಹುಟ್ಟಿಸುವ ಜ್ಞಾನವನ್ನವಳು ನೀಡುತ್ತಿದ್ದಳು. ಅದರಿಂದ ಅವಳ ತರಗತಿಗೆ ಸೇರಲು ಅಂಥ ಎಲ್ಲರೂ ಕುತೂಹಲಿಗಳಾಗುತ್ತಿದ್ದರು. ಚಿಕ್ಕ ಮಕ್ಕಳಿಗೆ ಪಾಠ ಹೇಳುವುದು ಅವಳಿಗೆ ಇಷ್ಟ. ಅವರಿಗೆ ಯಾವ ಅಭ್ಯಾಸವೂ ಆಗಿರದುದರಿಂದ ಅವರನ್ನು ಇಷ್ಟವಾದ ರೂಪಕ್ಕೆ ತಿರುಗಿಸಬಹುದಾಗಿತ್ತು. ಅವರವರ ಮನಃಪ್ರವೃತ್ತಿಗನುಗುಣವಾದ ವಿಷಯವನ್ನು ಕಲಿಯಲು ಅವರನ್ನು ಪ್ರೋತ್ಸಾಹಿಸಲಾಗುತ್ತಿತ್ತು. ಈ ಪ್ರಕಾರ ಸರಿಯಾದ ಒಂದು ಶಾಲೆ ಅಸ್ತಿತ್ವಕ್ಕೆ ಬಂದಿತು. ಆಶ್ರಮದ ಹೊರಗೆ ವಾಸಿಸುತ್ತಿದ್ದ ಶಿಷ್ಯರಿಗೆ ತಮ್ಮ ಮಕ್ಕಳನ್ನು ಆಶ್ರಮದೊಳಗಿಡುವುದು ಸಂತೋಷಕರವಾಗಿತ್ತು. ಮಕ್ಕಳೂ ಹಾಗೇ ಸಂತುಷ್ಟರಾಗಿರುತ್ತಿದ್ದರು. ಅವರಿಗೆ ಮಾತೃಶ್ರೀಯನ್ನು ಕಂಡರೆ ಮಹಾಪ್ರೀತಿ; ಅವರು ಅಲ್ಲೇ ಉಳಿಯಲು ಬಯಸುತ್ತಿದ್ದರು; ತಂದೆ ತಾಯಿಗಳು ಕರೆದರೂ ಕೆಲ ಮಕ್ಕಳು ಹೋಗಲೊಲ್ಲೆವೆನ್ನುತ್ತಿದ್ದರು. ತರಗತಿಗಳಲ್ಲಿ ಮಾತೃಶ್ರೀಯ ಭಾಷಣಗಳು ಬಹಳ ರುಚಿಕಟ್ಟಾಗಿರುತ್ತಿದ್ದವು. ಆದುದರಿಂದ ವಯಸ್ಕರು ಸಹ ಅವನ್ನು ಕೇಳಲು ಬರುತ್ತಿದ್ದರು. ಶಾಲೆಯ ಅಭ್ಯಾಸದ ನಿಯಮಗಳು ವಿಲಕ್ಷಣವಾಗಿದ್ದವು. ಒಂದು ವಿಷಯದಲ್ಲಿ ಹಿಂದುಳಿದ ವಿದ್ಯಾರ್ಥಿಗೆ ಇನ್ನೊಂದರಲ್ಲಿ ಮುಂದಾಗಲು ಯಾವ ಅಡ್ಡಿಯೂ ಇರಲಿಲ್ಲ. ಒಬ್ಬನು ಇತಿಹಾಸದಲ್ಲಿ ೪ನೆಯ ಇಯತ್ತೆಯಲ್ಲಿದ್ದರೆ ಗಣಿತದಲ್ಲಿ ೨ನೆಯ

ಇಯತ್ತೆಯಲ್ಲಿರುತ್ತಿದ್ದ. ತಾಯ್ನುಡಿಯಲ್ಲದೆ ಇತರ ಯಾವ ಭಾಷೆಯನ್ನು ಬೇಕಾದರೂ ಕಲಿಯಬಹುದಾಗಿತ್ತು.

ಶ್ರೀ ಅರವಿಂದರು ವಿಶ್ವವಿದ್ಯಾಲಯದ ಶಿಕ್ಷಣ ವ್ಯವಸ್ಥೆಯನ್ನು ಮಾಡಬೇಕೆಂದು ಆಲೋಚಿಸಿದ್ದನ್ನು ಹೇಳುತ್ತಿದ್ದರು. ಅದು ಅಂತಾರಾಷ್ಟ್ರೀಯ ಸ್ವರೂಪದ್ದಾಗಿರಬೇಕೆಂದು ಆಶಿಸಿದ್ದರು. ಮಾತೃಶ್ರೀ ಅದನ್ನು ಹೀಗೆ ವಿವರಿಸಿದ್ದರು: "ಈ ಕೇಂದ್ರವು ಅಂತಾರಾಷ್ಟ್ರೀಯ ಸ್ವರೂಪದ್ದಾಗಿರುವುದು ಎಲ್ಲ ದೇಶಗಳಿಂದ ವಿದ್ಯಾರ್ಥಿಗಳು ಬರುತ್ತಾರೆಂದೂ ಅಲ್ಲ, ಅವರವರ ಮಾತೃಭಾಷೆಗಳಲ್ಲೇ ಶಿಕ್ಷಣ ಕೊಡಲಾಗುತ್ತದೆಯೆಂದೂ ಅಲ್ಲ ಆದರೆ ಜಗತ್ತಿನ ವಿವಿಧ ಪ್ರದೇಶಗಳ ಸಂಸ್ಕೃತಿ ಇಲ್ಲಿ ಪ್ರತಿನಿಧಿಸಲ್ಪಡುವುದೆಂಬುದು ಅದಕ್ಕೆ ಮಹತ್ವದ ಕಾರಣ, ಅದು ಇಲ್ಲಿ ಸರ್ವಲಭ್ಯವಾಗಬೇಕು. ಹಾಗಾಗುವುದು ಭೌದ್ಧಿಕವಾಗಿ ಮಾತ್ರವಲ್ಲ ವಿಚಾರಗಳಲ್ಲಿ, ಸಿದ್ಧಾಂತಗಳಲ್ಲಿ, ತತ್ವಗಳಲ್ಲಿ, ಭಾಷೆಗಳಲ್ಲಿ ಮತ್ತು ಹೆಚ್ಚಾಗಿ ಆಚಾರ ಅನುಷ್ಠಾನಗಳಲ್ಲಿ ಹಾಗೂ ಕಲೆ ಮತ್ತು ಇತರ ರೂಪಗಳಲ್ಲಲ್ಲದೆ ಭೌತಿಕವಾಗಿ ಕೂಡ ಹೀಗಿರುವುದರಿಂದ ತಾವು ಸೇರಿರುವ ರಾಷ್ಟ್ರಗಳ ಮೂಲಭೂತ ಪ್ರತಿಭೆಯ ಜಾಗರವನ್ನು ಪಡೆಯುವಂತೆ ಮಾಡುವುದು ಪ್ರಥಮ ಧ್ಯೇಯ; ಅದೇ ಕಾಲದಲ್ಲಿ ಇತರ ರಾಷ್ಟ್ರಗಳ ಜೀವನಕ್ರಮಗಳೊಡನೆ ಅವರಿಗೆ ಸಂಪರ್ಕ ಉಂಟಾಗುವಂತೆಸಗುವುದು ಎರಡನೆಯ ಧ್ಯೇಯ; ಅದರಿಂದ ಜಗತ್ತಿನ ಎಲ್ಲ ದೇಶಗಳ ನಿಜಭಾವನೆಯನ್ನು ತಿಳಿದು ಅದನ್ನು ಗೌರವಿಸುವಂತೆ ಮಾಡುವುದು ಅದರಲ್ಲಿ ಮುಖ್ಯ. ಎಲ್ಲ ಜಾಗತಿಕ ಸಂಘಗಳೂ ನಿಜವೆನ್ನಿಸಬೇಕಾದರೆ ಮತ್ತು ಉಳಿಯಬೇಕಾದರೆ ರಾಷ್ಟ್ರ–ರಾಷ್ಟ್ರಗಳಲ್ಲಿಯೂ ವ್ಯಕ್ತಿ–ವ್ಯಕ್ತಿಗಳಲ್ಲಿಯೂ ಗೌರವ ಮತ್ತು ಪರಸ್ಪರ ತಿಳಿವಳಿಕೆ ಇರುವುದನ್ನದು ಆಧರಿಸಿರಬೇಕು. ಸಾಮೂಹಿಕ ವ್ಯವಸ್ಥೆ ಮತ್ತು ಸಂಘಟನೆಗಳೇ ಅವು ಪರಸ್ಪರ ಸಹಕಾರ–ಸದಾಶಯಗಳನ್ನಿಟ್ಟುಕೊಂಡಾಗ ಈಗ ಇರುವ ದುಃಖಕರ ಅರಾಜಕತೆಯಿಂದ ಮಾನವನನ್ನು ಮೇಲಕ್ಕೆ ಎತ್ತಬಲ್ಲವು."

ಆದುದರಿಂದ ಅರೋವಿಲೆಯ ಕಾರ್ಯವಿಧಾನವು ಶ್ರೀ ಅರವಿಂದರ ಆದರ್ಶಕ್ಕೆ ಹೊಂದಿಸಲಾಗಿದೆ. ನಿಜವಾಗಿ ನೋಡಿದರೆ ಉಕ್ತಸಂಸ್ಥೆಯು ಪೌರಸ್ತ್ಯವೂ ಅಲ್ಲ. ಪಾಶ್ಚಾತ್ಯವೂ ಅಲ್ಲ. ಆದರೂ ಇವೆರಡರ ಉತ್ತಮಾಂಶಗಳನ್ನೂ ಅದು ಒಳಗೊಂಡಿದೆ. ವಿದ್ವಾಂಸರೂ ಉದಾತ್ತ ಮನಸ್ಕರೂ ಆದ ಗುರುಗಳು ಅನೇಕ ದೇಶಗಳಿಂದ ಇಲ್ಲಿಗೆ ಬಂದಿದ್ದಾರೆ. ಇನ್ನೂ ಬರುತ್ತಿದ್ದಾರೆ. ಹಾಗೆ ಬಂದು ಗೌರವಧನ ತೆಗೆದುಕೊಂಡು ಕೆಲಸ ಮಾಡುತ್ತಿದ್ದಾರೆ. ಎಲ್ಲ ವಯಸ್ಸಿನ ವಿದ್ಯಾರ್ಥಿಗಳನ್ನೂ ಸೇರಿಸಿಕೊಳ್ಳಲಾಗಿದೆ. ಸೈದ್ಧಾಂತಿಕ ಮತ್ತು ಪ್ರಾಯೋಗಿಕ ವಿಜ್ಞಾನವನ್ನೊಳಗೊಂಡು ವಿವಿಧ ವಿಷಯಗಳನ್ನವರಿಗೆ ಕಲಿಸಲಾಗುತ್ತಿದೆ. ಗುರು–ಶಿಷ್ಯರು ಸಾಮಾನ್ಯವಾಗಿ ಒಟ್ಟಿಗೆ ಬದುಕುತ್ತಾರೆ. ಶಿಕ್ಷಣ ಉಚಿತ. ಮಾತೃಶ್ರೀ ಹೇಳಿದ್ದಾಳೆ, 'ನಾನು ವಿದ್ಯೆಯನ್ನು ಮಾರುವುದಿಲ್ಲ.'

ಸಮಗ್ರ ಆಧ್ಯಾತ್ಮಿಕ ದೃಷ್ಟಿ ಆಧಾರವಾಗಿರುವುದು ಈ ಕೇಂದ್ರದಲ್ಲಿಯ ವಿದ್ಯಾಭ್ಯಾಸದ ವೈಶಿಷ್ಟ್ಯ. ಇಲ್ಲಿಯ ಕೆಲ ಯಶಸ್ವಿ ವಿದ್ಯಾರ್ಥಿಗಳು ಸರಕಾರದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕೂತು ವಿಜೇತರಾಗಿದ್ದರೂ ಈ ವಿದ್ಯಾಸಂಸ್ಥೆಯಲ್ಲಿ ಸ್ವಾರ್ಥ ಸಾಧನೆ ಉದ್ದೇಶವೂ ಇಲ್ಲ. ಸ್ಪರ್ಧೆಯ ಪ್ರವೃತ್ತಿಯೂ ಇಲ್ಲ.

ಹುಡುಗರನ್ನೂ ಹುಡುಗಿಯರನ್ನೂ ಇಲ್ಲಿ ಸಮಾನತೆಯಿಂದ ನಡೆಸಿಕೊಳ್ಳಲಾಗುತ್ತದೆ.

೧೯೫೨ರಲ್ಲಿ ನಡೆದ ಉದ್ಘಾಟನ ಸಮಾರಂಭದಲ್ಲಿ ಸಭೆಯಲ್ಲಿ ಮಾತೃಶ್ರೀ ಹೇಳಿದಳು.

"ಶ್ರೀ ಅರವಿಂದರೀಗಲೂ ನಮ್ಮಲ್ಲಿ ಉಪಸ್ಥಿತರಾಗಿದ್ದಾರೆ. ಬಹಳ ಕಾಲದವರೆಗೆ ಇಂಥ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂದು ಅವರು ವಿಚಾರ ಮಾಡುತ್ತಿದ್ದರು. ಅತಿಮಾನಸದ ಬೆಳಕನ್ನು ಪಡೆಯುವುದಕ್ಕಾಗಿ ಸಿದ್ಧತೆ ನಡೆಸಲು ಮನುಷ್ಯನಿಗಿದೇ ಅತ್ಯುತ್ತಮ ಮಾರ್ಗ ಎಂದಿದ್ದರವರು. ಇದರ ನೆರವಿನಿಂದ ಆಧುನಿಕ ಮುಂಬರಿದ ಮಾನವ ಮಾದರಿಗಳು ಉದಯಿಸುವುವು ಮತ್ತು ಅವು ಒಂದು ಹೊಸ ಬೆಳಕನ್ನು, ಹೊಸ ಶಕ್ತಿಯನ್ನು ಮತ್ತು ಒಂದು ಹೊಸ ಜೀವನಾಭಿವ್ಯಕ್ತಿಯನ್ನು ಈ ಜಗತ್ತಿನೊಳಗೆ ತರುವುವು."

ಅರವಿಂದರಿಗೆ ಅರೋವಿಲೆಯ ಭವಿಷ್ಯತ್ತಿನ ಬಗೆಗೆ ದೊಡ್ಡ ಪ್ರತ್ಯಾಶೆಯಿತ್ತು, ಅದು ಕೊನೆಗೆ ಜಾಗತಿಕ ಪ್ರಾಮುಖ್ಯವುಳ್ಳ ಒಂದು ಸಂಸ್ಥೆಯಾಗಿ ಬೆಳೆಯುವುದು ಎಂದು ಅದರ ಉದ್ಘಾಟನೆಯ ಕಾಲದಲ್ಲಿ ಮಾತೃಶ್ರೀ ಹೇಳಿದಳು. ಕೆ.ಎಂ. ಮುನಶಿಯವರು ಬಂದಾಗ 'ನೀವು ೧೦ ವರ್ಷಗಳಾದ ಮೇಲೆ ಬನ್ನಿರಿ; ಇದು ಎಷ್ಟು ಪರಿಣತವಾಗಿರುವುದು ಎಂಬುದನ್ನು ಆಗ ನೋಡುವಿರಿ' ಎಂದಿದ್ದಳಾಕೆ.

ಇದರ ಒಬ್ಬ ವಿದ್ಯಾರ್ಥಿ ತನ್ನ ಸೋದರನಿಗೆ ಬರೆದ ಪತ್ರವೊಂದನ್ನಿಲ್ಲಿ ಉದ್ಧರಿಸುತ್ತೇವೆ. ಅದರಲ್ಲಿ ಅನಲಂಕೃತವಾದರೂ ಮೆಚ್ಚಬಹುದಾದ ಚಿತ್ರವನ್ನು ನೀವು ಕಾಣುವಿರಿ:

**೨೪–೩–೧೯೫೩**

"ನನ್ನ ಪ್ರಿಯ ಸೋದರ,

ಆಶ್ರಮದ ಬಗೆಗೆ ನಾನು ಬರೆದೇತೀರಬೇಕು. ನಾನಿಲ್ಲಿ ಬಹುಕಾಲವಿದ್ದುದರಿಂದ ನನಗದರ ಸ್ಥಿತಿಯ ಬಗೆಗೆ ಬೇಕಾದಷ್ಟು ಗೊತ್ತಿದೆ. ಯಾರೇ ಆಗಲಿ, ಒಂದು ತಿಂಗಳಿಗಿಂತ ಹೆಚ್ಚು ಕಾಲ ಇಲ್ಲಿ ಬಂದು ಉಳಿದರೆ ಹೊರಜಗತ್ತನ್ನವನು ಪ್ರೀತಿಸಲಾರನೆಂದು ನನ್ನ ಭಾವನೆ...

ನನ್ನ ಕೈಬರೆಹವನ್ನು ಗಣಿಸಬೇಡ. ನಾನು ಬಹಳ ಗಡಿಬಿಡಿಯಲ್ಲಿದ್ದೇನೆ. ಈಗ ರಾತ್ರಿ ೧೦–೩೦ ಗಂಟೆ. ನನಗೀಗ ನಿದ್ದೆ ಬರುವ ಹಾಗಿದೆ. ನಾನು ನಾಳೆ ಬೆಳಿಗ್ಗೆ ೫ ಗಂಟೆಗೆ ಏಳಬೇಕು; ಮತ್ತು ನಾನು ಓಡಲು, ಭರ್ಚಿ ಎಸೆಯಲು ಹಾಗೂ ಚಕ್ರ ಎಸೆಯಲು ಹೋಗಬೇಕಾಗಿದೆ. ಓ, ಅದೊಂದು ಸೊಗಸಾದ ಸಂಗತಿ. ಪ್ರತಿದಿನವೂ ನಾನು ವ್ಯಾಯಾಮ ಮಾಡುತ್ತೇನೆ ಮತ್ತು ಆಟಗಳನ್ನು ಆಡುತ್ತೇನೆ.

ನಾನು ನನ್ನ ಜೀವನದ ಅತ್ಯಂತ ಸುಖಕರವಾದ ದಿನಗಳನ್ನು ಕಳೆಯುತ್ತಿದ್ದೇನೆ ಎನ್ನಿಸುತ್ತದೆ. ನನ್ನ ಇಡಿ ಜೀವನವನ್ನು ಇಂಥ ಸುಖದಲ್ಲಿ ಕಳೆಯುವಂತೆ ದೇವರು ನನ್ನನ್ನು ಹರಸಲಿ.

ಶ್ರೀ ಅರವಿಂದರ "ಸಾವಿತ್ರಿ"ಯನ್ನು ನಾನು ಓದುತ್ತಿದ್ದೇನೆ ಮತ್ತು ಅದು ಬಹಳ ಆಕರ್ಶಕವಾದ ಪುಸ್ತಕ ಎಂಬುದು ನಿನಗೆ ಗೊತ್ತೇ? ಅದು ನನಗೆ ಬಹಳ ಸಹಾಯ ಮಾಡುತ್ತಿದೆ; ಒಮ್ಮೆ ಅದನ್ನು ತೆರೆದೆನೆಂದರೆ ಅದನ್ನು ಬಿಡಲು ಮನಸ್ಸೇ ಬರುವುದಿಲ್ಲ. ಅದರ ಭಾಷೆ ಅಷ್ಟು ಚೆನ್ನಾಗಿದೆ; ಅದರಲ್ಲೇ ಮೈಮರೆತಿರಬಹುದು. ಓ, ಹೌದು! ಒಂದು ಸಂಗತಿಯನ್ನು ನಾನು ನಿನಗೆ ಹೇಳಬೇಕೆಂದಿದ್ದೇನೆ ಇಲ್ಲಿ ಓದುತ್ತಿರುವ ಹುಡುಗ–ಹುಡುಗಿಯರೆಲ್ಲರೂ ಸಾಂಪ್ರದಾಯಿಕ ತಪಸ್ವಿಗಳಂತೆ ಯೋಗಾಭ್ಯಾಸ ಮಾಡುತ್ತಿದ್ದಾರೆ ಎಂದು ತಿಳಿಯಬೇಡ; ಆದರೂ ಅವರು ಅತ್ಯಂತ ಸ್ವಾಭಾವಿಕ ರೀತಿಯಲ್ಲಿ ಆಧ್ಯಾತ್ಮಿಕ ಜೀವನವನ್ನು ನಡೆಸುತ್ತಿದ್ದಾರೆ. ಕೆಲವರಿಗಿದು ಗೊತ್ತೇ ಇಲ್ಲ. ಎಳೆಯರೆಲ್ಲರಿಗೂ ಮಹಾಮಾತೆ ಮತ್ತು ಅರವಿಂದರ ಮೇಲೆ ಬಹಳ ಪ್ರೀತಿ–ಗೌರವಗಳಿವೆ. ಈ ವಿಶ್ವವಿದ್ಯಾನಿಲಯವನ್ನು ತಪ್ಪಿಸಬೇಡ. ಇದು ಈಗ ಮತ್ತು ಇನ್ನು ಮುಂದೆಯೂ ಇಡೀ ಜಗತ್ತಿನಲ್ಲಿ ಅನನ್ಯ ವಿಶ್ವವಿದ್ಯಾನಿಲಯ.

ಈಗ ನೀನು ಹೇಳಬಹುದು ಇಲ್ಲವೆ ಆಲೋಚಿಸಬಹುದು; ಈ ವಿಶ್ವವಿದ್ಯಾನಿಲಯಕ್ಕೂ ಹೊರಗಿನ ವಿಶ್ವವಿದ್ಯಾನಿಲಯಕ್ಕೂ ಯಾವ ಭೇಧವಿದೆ? ಓ ಬಹಳ ಭೇದವಿದೆ. ಉದಾಹರಣೆಗಾಗಿ ದೇಹದ ಕಣಪುಟದ (cell) ವಿಷಯವಾಗಿ ಚರ್ಚಿಸಲಾಗುತ್ತಿದ್ದ ಒಂದು ತರಗತಿಯಲ್ಲೊಮ್ಮೆ ಕುಳಿತಿದ್ದೆ. ನಮ್ಮ ಶಾಲೆಗಳಲ್ಲಿ ಈ ವಿಷಯವನ್ನು ಒಂದೆರಡು ದಿನಗಳಲ್ಲಿ ಮುಗಿಸಿ ಬಿಡುತ್ತಾರೆ; ಇದನ್ನಿಲ್ಲಿ ಕಳೆದ ೨ ತಿಂಗಳುಗಳಿಂದ ಕಲಿಸಲಾಗುತ್ತಿದೆ. ನಮ್ಮ ಪ್ರಕಾರ ಇಲ್ಲಿಯ ಗುರುಗಳು ಇಡಿವರ್ಷದಲ್ಲಿ ಸ್ವಲ್ಪ ಕಡಿಮೆ ಪಾಠ ಮಾಡುತ್ತಾರೆ; ಆದರೆ ಅವರು ಏನು ಹೇಳಿಕೊಟ್ಟರೂ ವಿವರ ಪೂರ್ವಕವಾಗಿ ಹೇಳಿಕೊಡುತ್ತಾರೆ. ಹುಡುಗರು ಅರವಿಂದ ಗುರುಗಳ ಸಾವಿತ್ರಿ ಅಥವಾ ಇತರ ಗ್ರಂಥಗಳಿಂದ ವಾಕ್ಯಗಳನ್ನು ಎತ್ತಿ ಹೇಳಿ ಕಣ ಪುಟದ ಮೇಲೆ ೧೨ ಪುಟಗಳಷ್ಟು ಬರೆಯುತ್ತಾರೆ. ಅವರ ಬರಹಗಳನ್ನೋದುವುದು ಅದರಲ್ಲೂ ಅಂಥ ಪ್ರಬಂಧಗಳನ್ನೋದುವುದು ಬಹಳ ಸೊಗಸಾಗಿರುತ್ತದೆ. ಇನ್ನೊಂದು ಝಳ ಹೊಡೆಯುವಂಥ ಸುದ್ದಿಯನ್ನು ನಿನಗೆ ಹೇಳಬೇಕೆಂದಿದ್ದೇನೆ. ಅದೇನೆಂದರೆ ೫–

೬ನೆಯ ಇಯತ್ತೆಯಲ್ಲಿ ಕಲಿಯುವ ಹುಡುಗ–ಹುಡುಗಿಯರು ಷೇಕ್ಸ್‌ಪಿಯರನ ಪದ್ಯಗಳನ್ನೂ ನಾಟಕಗಳನ್ನೂ ಸೊಗಸಾಗಿ ವಿಮರ್ಶೆ ಮಾಡುತ್ತಾರೆ. ಆ ರೀತಿ ನಮ್ಮ ಕಾಲೇಜಿನ ಹುಡುಗರು ಎಂದೂ ವಿಮರ್ಶೆ ಮಾಡಲಾರರು... ಇಲ್ಲಿ ಇಂಗ್ಲೀಷಿನ ಮಟ್ಟ ಬಹಳ ಉನ್ನತವಾಗಿದೆ. ನನಗೆ ಆಶ್ಚರ್ಯವನ್ನುಂಟುಮಾಡಿದ ಒಂದು ವಿಷಯವೆಂದರೆ ವಾರದ ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಉತ್ತರ ಬರೆಯಲಾರದ ಒಬ್ಬ ಹುಡುಗ ಮತ್ತು ಒಬ್ಬ ಹುಡುಗಿಯು ೫ ನಿಮಿಷ ಕೂತು ಧ್ಯಾನ ಮಾಡಿ ಕೂಡಲೇ ಉತ್ತರ ಬರೆಯಲಾರಂಭಿಸಿದ್ದಲ್ಲದೆ ಆ ಉತ್ತರಗಳನ್ನವರು ಬಹಳ ಚೆನ್ನಾಗಿಯೂ ಕ್ರಮಬದ್ಧವಾಗಿಯೂ ಬರೆದರು. ಈ ಎಲ್ಲದರ ಹಿಂದೆ ಮಾತೃಶ್ರೀಯ ಅನುಗ್ರಹ ಕೆಲಸಮಾಡುತ್ತಿದೆ. ಇಡೀ ಆಶ್ರಮದಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಒಂದಾದರೂ ಬಲಾತ್ಕಾರದ ಶಬ್ಧವಿಲ್ಲ. ನೀನು ಕಲಿಯಬಹುದು ಅಥವಾ ಬಿಡಬಹುದು. ಪ್ರತಿಯೊಬ್ಬ ಹುಡುಗನೂ ಸಂತೋಷದಿಂದ ಶಾಲೆಗೆ ಹೋಗುತ್ತಾನೆ. ಅವನ ಸುಖ–ಸಂತೋಷಗಳನ್ನು ನಾನು ನಿನಗೆ ಬರೆದು ತಿಳಿಸಲು ಅಸಮರ್ಥ.

ಮಕ್ಕಳು ಮಹಾಧೀರರು. ಅವರಿಗೀಜಗತ್ತಿನಲ್ಲಿ ಯಾವುದರ ಹೆದರಿಕೆಯೂ ಇಲ್ಲ. ಅಪ್ಪ–ಅಮ್ಮಂದಿರ ಭಯ ಕೂಡಾ ಇಲ್ಲ. ಆದರೆ ದುಷ್ಕಾರ್ಯಗಳನ್ನು ಮಾಡುವುದರ ಬಗೆಗೆ ಅವರಿಗೆ ಹೆದರಿಕೆ ಇದೆ; ಅವರಲ್ಲಿ ಯಾರೂ ಯಾವ ದುಷ್ಕಾರ್ಯವನ್ನೂ ಮಾಡರು. ಅವರೇನಾದರೂ ಮಾಡಿದರೆ ಆ ಕೂಡಲೇ ಮಾತೃಶ್ರೀಯಲ್ಲಿ ಹೋಗಿ ಒಪ್ಪಿಕೊಂಡುಬಿಡುತ್ತಾರೆ. ಅವಳು, ನಿನಗೆ ಗೊತ್ತಿರುವ ಹಾಗೆ, ದಿವ್ಯಮಾತೆ. ಆದ್ದರಿಂದ ಅವಳವರನ್ನು ಕ್ಷಮಿಸಿ ಮತ್ತೆ ಅವರು ಅಂಥ ತಪ್ಪನ್ನು ಮಾಡದಿರುವಂತೆ ಹರಸುತ್ತಾಳೆ. ಅವರಿಗೆ ಮಹಾತಾಯಿಯ ರಕ್ಷಣೆ ಇದೆ–ಅವರು ಧೀರರೆಂದರೆ ಧೀರರು... ಹುಡುಗರು ಎಷ್ಟೋ ಸಲ ಜಗಳವಾಡುತ್ತಾರೆ; ಆದರೆ ಎರಡೇ ನಿಮಿಷಗಳಲ್ಲಿ ಗೆಳೆಯರಾಗಿ ಬಿಡುತ್ತಾರೆ. ಹುಡುಗರು ಸುಳ್ಳು ಹೇಳರು ಮತ್ತು ನಿಷ್ಠಾವಂತರು ಹಾಗೂ ಸತ್ಯಸಂಧರು. ಸೋದರನೆ, ಇದು ನಮಗೆಲ್ಲಾ ಸ್ವರ್ಗವೆಂದೇ ನನ್ನ ಭಾವನೆ. ಭೂತಲದಲಿ ನೀನೆಲ್ಲೂ ಇಂಥ ಸುಖವನ್ನು ಪಡೆಯಲಾರೆ. ದುಃಖವೆಂಬುದು ಇಲ್ಲಿ ಇಲ್ಲವೇ ಇಲ್ಲ. ಪ್ರತಿಯೊಂದು ಮುಖವೂ ಇಲ್ಲಿ ಮಂದಸ್ಮಿತ ತಾಳಿರುತ್ತದೆ; ಮತ್ತು ಒಂದಲ್ಲಾ ಒಂದು ದಿನ ಇಡಿ ಜಗತ್ತೇ ಇಲ್ಲಿ ನೋಡಲು ಹಾಗೂ ಕಲಿಯಲೆಂದು ತುಂಬಿ ಹೋಗುವುದೆಂಬುದು ನನಗೆ ಖಾತ್ರಿಯಾಗಿದೆ. ನಮ್ಮ ಧ್ಯೇಯವಾದ ಏಕಮೇವಾದ್ವಿತೀಯ ಬ್ರಹ್ಮನನ್ನು ಸಮೀಪಿಸುವುದರಲ್ಲಿ ಮುಂಬರಿಯುವಂತೆ ದೇವರು ನಮಗೆ ಸಹಾಯ ಮಾಡಲಿ.

**ಗೌತಮ**

ಇಂಥ ಪ್ರಯೋಗಕ್ಕೆ ಸೇರಲು ಯಾರು ಸಿದ್ಧರಾಗದಿದ್ದಾರು? ಯಾರಿಗೆ ಇಂಥ ಅಮರ್ತ್ಯತೆಯ ಮೊಳಕೆಗಳು ಎತ್ತರ ಎತ್ತರವಾಗಿ ಬೆಳೆಯಲಿ ಎನ್ನಿಸದಿರದು?

# ಮಾತೃಶ್ರೀಯ ವಿದ್ಯಾದರ್ಶ

ಮಾತೃಶ್ರೀಯ ಪ್ರಕಾರ ವಿದ್ಯಾಭ್ಯಾಸವೆಂದರೆ 'ಬದುಕುವಶಾಸ್ತ್ರ,' ಅದಕ್ಕೆ ಆದಿ-ಅಂತಗಳಿಲ್ಲ ಮತ್ತು ಅದಕ್ಕೆ ಲಿಂಗಭೇದವು ಅಸಂಬದ್ಧ.

ಪ್ರಪಂಚದಲ್ಲಿಂದು ಬಳಕೆಯಲ್ಲಿರುವ ವಿದ್ಯಾಭ್ಯಾಸ ಕ್ರಮವು ಒಮ್ಮಗ್ಗುಲಿನ ಉಪಶಿಕ್ಷಣವನ್ನೂ ಜ್ಞಾನವನ್ನೂ ಕೊಡುತ್ತದೆ; ಮತ್ತು ಮನಸ್ಸಿನ ಒಂದು ಭಾಗ ಮಾತ್ರ ಅದರಿಂದ ಬೆಳೆಯುತ್ತದೆ ಉಳಿದೆಲ್ಲ ಭಾಗಗಳೂ ನಾಗರಿಕತೆಯ ಪ್ರಾರಂಭದೆಶೆಯಲ್ಲಿಯೂ ಅಜ್ಞಾನದಲ್ಲಿಯೂ ಉಳಿಯುವುವಲ್ಲದೆ ಅಂತರಾತ್ಮವು ಅವಿಕಾಸಿತ ಸ್ಥಿತಿಯಲ್ಲೇ ಬಿದ್ದಿರುತ್ತದೆ. ಸರಿಯಾದ ವಿದ್ಯಾಭ್ಯಾಸವು ಜೀವಿಯ ಎಲ್ಲ ಭಾಗಗಳ ಸಮನ್ವಿತ ಬೆಳವಣಿಗೆ ಅಭಿವೃದ್ಧಿಗಳ ಗುರಿಯುಳ್ಳದ್ದಾಗಿರಬೇಕು ಯಾವ ಭಾಗವೂ ಅಸ್ಪೃಷ್ಟವಾಗಿರಕೂಡದು.

ಆ ಉದ್ದೇಶ ಸಾಧನೆಗೆ-ಮಾತೃಶ್ರೀಯ ಪ್ರಕಾರ ಮೊದಲ ಹೆಜ್ಜೆಯೆಂದರೆ "ನೀನು ನಿನ್ನ ಜಾಗರ ಉಳ್ಳವನಾಗಿರಬೇಕು; ನಿನ್ನ ಇರವಿನ ವಿವಿಧ ಭಾಗಗಳ ಜ್ಞಾನವುಳ್ಳವನಾಗಿರಬೇಕು-ಅವುಗಳ ವಿಶಿಷ್ಟ ಚಟುವಟಿಕೆಗಳನ್ನು ಅರಿತುಕೊಂಡವನಾಗಿಯೂ ಇರಬೇಕು."

ಸರ್ವಾಂಗೀಣ ವಿದ್ಯಾಭ್ಯಾಸದ ಬಗೆಗೆ ಮಾತೃಶ್ರೀಯು ವಿಸ್ತಾರವಾಗಿ ಬರೆದಿದ್ದಾಳೆ ಮತ್ತು ಭಾಷಣ ಮಾಡಿದ್ದಾಳೆ; ನಾವಿಲ್ಲಿ ಅದರ ಸಾರವನ್ನು ಮಾತ್ರ ಕೊಡುತ್ತೇವೆ:

ಉಪದೇಶಕ್ಕಿಂತ ಆಚರಿಸಿ ತೋರಿಸುವುದೇ ಶಿಕ್ಷಣದ ಅತ್ಯುತ್ತಮ ಕ್ರಮ. ನಡೆದು ತೋರಿಸುವುದರಿಂದ ನೀವು ವಿದ್ಯಾರ್ಥಿಗಳಿಗೆ ನಡತೆಯನ್ನು ಕಲಿಸುತ್ತೀರಿ. ನೀವವರನ್ನು ಬೈಯಬಾರದು, ಬೆದರಿಸಬಾರದು; ಏಕೆಂದರೆ ಕೊನೆಯದಾಗಿ ಅದರಿಂದ ಅವರು ಅಸಾವಧಾನರೂ ಒರಟರೂ ಆಗಿ ನಿಮ್ಮ ಯತ್ನವೆಲ್ಲ ನಿಷ್ಪ್ರಯೋಜನವಾಗುವುದು. ನೀವು ಅದಕ್ಕಿಂತ ಅವರ ತಪ್ಪುಗಳನ್ನೂ ಕರ್ತವ್ಯಚ್ಯುತಿಗಳನ್ನೂ ಶಾಂತತೆಯಿಂದ ತೋರಿಸಿಕೊಡುವುದು ಲೇಸು; ಮತ್ತು ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವಂತೆ ಅವರಿಗೆ ಪ್ರೋತ್ಸಾಹ ನೀಡಬೇಕು ಅವರು ತಮ್ಮ ತಪ್ಪುಗಳನ್ನು ಒಪ್ಪಿಕೊಂಡ ಮೇಲೆ ಅವರನ್ನು ಬೈಯದೆ ಕ್ಷಮಿಸಿಬಿಡಬೇಕು. ಸತ್ಯಹೇಳಲು ಒಮ್ಮೆ ಅವರು ಹೆದರಿದರೆಂದರೆ ಸುಳ್ಳು ಹೇಳಲು ತೊಡಗುತ್ತಾರೆ, ಆಗ ಅವರನ್ನು ತಿದ್ದಲು ಮಾಡುವ ನಿಮ್ಮ ಯತ್ನಗಳೆಲ್ಲ ವಿಫಲವಾಗುವುವು. ಅವರ ಮನಸ್ಸಿನಲ್ಲಿ ಯಾವ ಭಯವೂ ಹೋಗಬಾರದು.

ಶಿಕ್ಷಣವು ವ್ಯಕ್ತಿತ್ವದ ದೈಹಿಕ, ಜೈವಿಕ, ಮಾನಸಿಕ, ಅಂತರ್ಮಾನಸಿಕ ಮತ್ತು ಆಧ್ಯಾತ್ಮಿಕ ಎಂಬ ಎಲ್ಲ ಮುಖಗಳನ್ನೂ ಮುಟ್ಟುವಂಥದಾಗಿರಬೇಕು. ಈ ಎಲ್ಲ

ಭಾಗಗಳನ್ನೂ ಒಟ್ಟಿಗೆ ಅದು ಸ್ಪರ್ಶಿಸಬೇಕು.

೧. ದೈಹಿಕ, ಚಿಕ್ಕವಯಸ್ಸಿನಿಂದಲೇ ದೈಹಿಕ ಶಿಕ್ಷಣವನ್ನು ನೀಡಲಾರಂಭಿಸುವುದು ಅತ್ಯುತ್ತಮ. ಅದಕ್ಕೆ ವಯೋಮಾನದ ನಿರ್ದಿಷ್ಟತೆ ಇಲ್ಲ. ಎಲ್ಲ ವಯಸ್ಸಿನಲ್ಲೂ ವ್ಯಾಯಾಮವು ಅಗತ್ಯ ಮತ್ತು ಉಪಯುಕ್ತ ಅದರ ಅಭ್ಯಾಸದ ಗುರಿಗಳು ಮೂರು: (೧) ಅವಯವಗಳೆಲ್ಲವೂ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುವಂತಾಗಬೇಕು; (೨) ವಿವಿಧ ಅವಯವಗಳೆಲ್ಲವೂ ಪರಸ್ಪರ ಸಮೀಕೃತವಾಗಿ ಕೆಲಸ ಮಾಡುವಂತಾಗ ಬೇಕು; ದೇಹದಲ್ಲಿಯ ನ್ಯೂನತೆಗಳು ಸರಿಪಡುವಂತಾಗಬೇಕು. ಎಲ್ಲ ವ್ಯಾಯಾಮಗಳೂ ಆಟಗಳೂ ಈ ಮೂರು ಗುರಿಗಳನ್ನು ಸಾಧಿಸಲು ಅನುಕೂಲವಾಗಿರಬೇಕು.

ಪ್ರತಿದಿನ ಬೆಳಿಗ್ಗೆ ಹಾಸಿಗೆಯಿಂದೆದ್ದು ಕೈಕಾಲು ತಲೆಗಳು ಆಲಸ್ಯವನ್ನು ಕೊಡಹಿ ಎಸೆಯುವಂತೆ ಮಾಡಬೇಕು; ಮತ್ತು ಅವುಗಳಲ್ಲಿ ಸ್ವಲ್ಪ ಕಸುವನ್ನು ತುಂಬಬೇಕು. ನಿಯತ ವ್ಯಾಯಾಮಾಭ್ಯಾಸವು ಸಾವಧಾನತೆಯನ್ನು ಚುರುಕನ್ನೂ ಉಂಟುಮಾಡುತ್ತದೆ; ಪದೇ ಪದೇ ಬರುವ ಕಾಯಿಲೆಗಳಿಂದ ಮುಕ್ತರಾಗಿ ಉಳಿಯುವಂತೆಸಗುತ್ತದೆ; ಔಷಧ ತೆಗೆದುಕೊಳ್ಳುವುದು ಆಗ ಅನಾವಶ್ಯಕವಾಗುತ್ತದೆ. ಅನಿವಾರ್ಯವಾದಲ್ಲದೆ ಔಷಧಿಗಳನ್ನೆಂದೂ ತೆಗೆದುಕೊಳ್ಳಬಾರದೆಂಬುದೇ ಮಾತೃಶ್ರೀಯ ಉಪದೇಶ.

ಆಹಾರ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಆಹಾರ ಅತಿ ಕಡಿಮೆಯೂ ಆಗಬಾರದು. ಅತಿ ಹೆಚ್ಚೂ ಆಗಬಾರದು; ಬಹಳ ಗುರುವೂ ಆಗಿರಬಾರದು, ಬಹಳ ಲಘುವೂ ಆಗಿರಬಾರದು ಎಷ್ಟು ಬೇಕೋ ಅಷ್ಟಿರಬೇಕು ಮತ್ತು ಪೋಷಕ ಅಂಶಗಳಿಂದ ಕೂಡಿರಬೇಕು. ಆಹಾರವಿರುವುದು ಆರೋಗ್ಯವನ್ನು ಕಾಪಾಡುವುದಕ್ಕಾಗಿ ಬಾಯಿರುಚಿಗಾಗಿ ಅಲ್ಲ ಎಂಬುದನ್ನು ನೆನಪಿಟ್ಟುಕೊಳ್ಳಬೇಕು. ಮೊದಲಿನಿಂದಲೇ ಈ ಅಂಶವನ್ನು ಶಿಷ್ಯರ ಮನಸ್ಸಿನಮೇಲೆ ಬಿಂಬಿಸಬೇಕು. ಮೈಯ ಆರೋಗ್ಯದಿಂದ ಮನಸ್ಸಿನ ಆರೋಗ್ಯ ಲಭ್ಯ ಮತ್ತು ಅನಾರೋಗ್ಯಯುಕ್ತ ಮನಸ್ಸನ್ನು ಕಟ್ಟಿಕೊಂಡು ಏನು ಮಾಡಲೂ ಸಾಧ್ಯವಿಲ್ಲ– ಎಂಬುದನ್ನು ವಿವರಿಸಬೇಕು.

೨. ಜೈವಿಕ, ಜೈವಿಕಕ್ಕೆ ತರಬೇತು ಕೊಡುವುದು ಬಹುಶಃ ಬಹುಮುಖ್ಯ ಮತ್ತು ಬಹು ಕಠಿನ. ಹೀಗಿದ್ದರೂ ಅಂಥ ಉಪ ಶಿಕ್ಷಣವನ್ನು ಕೊಡುವುದೇ ಬಹಳ ವಿರಳ ಕೊಟ್ಟರೂ ಕ್ರಮಬದ್ಧವಾಗಿರುವುದು ಬಹಳ ಕಡಿಮೆ. ಏಕೆಂದರೆ ಜನರಿಗಿದರ ಬಗ್ಗೆ ಸ್ಪಷ್ಟವಾದ ಕಲ್ಪನೆ ಇಲ್ಲ. ಅದಕ್ಕೆ ಸಹನೆ ಸತತೋದ್ಯಮ ಮತ್ತು ಸಂಕಲ್ಪ ಶಕ್ತಿಗಳು ಅಗತ್ಯ.

ಜೈವಿಕ ಶಕ್ತಿಯೇ ಜನರನ್ನು ಸಾಮಾನ್ಯವಾಗಿ ಕಾರ್ಯಮಗ್ನರನ್ನಾಗಿ ಮಾಡುವಂಥದು. ಅದು ಪ್ರೇರಣೆ ನೀಡಿ ಕೆಲಸಕ್ಕೆ ಬೇಕಾದ ಶಕ್ತಿಯನ್ನು ಹೊರಪಡಿಸುತ್ತದೆ. ಮಾನವರ

ಎಲ್ಲ ಚಟುವಟಿಕೆಗಳಲ್ಲಿಯೂ ಸಕ್ರಿಯ ಜೈವಿಕ ಚೈತನ್ಯವು ಅತ್ಯಗತ್ಯ ಮತ್ತು ಸಹಾಯಕ. ಆದರೆ ಅದರ ಅಧಿಕಾರದಾಸೆ ಮತ್ತು ಅವಲಂಬನೆಗಳು ಅಸಂಖ್ಯೇಯ. ತನ್ನನ್ನು ಸಂತೋಷಗೊಳಿಸಿಕೊಳ್ಳುವ ಸ್ಥಿರಭಾವವು ಪ್ರತಿಯೊಬ್ಬನಲ್ಲಿಯೂ ಇರುತ್ತದೆ. ಜೈವಿಕ ಸಂತರ್ಪಣವು ಜೀವನದ ಮುಖ್ಯ ಧ್ಯೇಯವೆಂದ ಪ್ರತಿಯೊಬ್ಬನೂ ತಿಳಿದಿರುವುದು ಹೆಚ್ಚು.

ಆದರೆ ಅದೊಂದು ತಪ್ಪು ತಿಳಿವಳಿಕೆ ಸತ್ಯಕ್ಕೆ ವಿಪರೀತವಾದದ್ದು. ಜೈವಿಕವಲ್ಲ ಅದಕ್ಕೆ ಅತೀತವಾದ ಆನಂದವನ್ನು ಪಡೆಯುವುದೇ ಜೀವನದ ಮುಖ್ಯ ಧ್ಯೇಯ. ದೇಹ ಸುಖದಂತೆ ಈ ಆಂತರಿಕ ಆನಂದವು ಪಾರ್ಥಿವ ತೃಪ್ತಿಯನ್ನವಲಂಬಿಸಿರದು. ದೇಹಸುಖಕ್ಕೆ (ಜೈವಿಕ ಸುಖಕ್ಕೆ) ಅಥವಾ ಇಂದ್ರಿಯ ಸಂತರ್ಪಣಕ್ಕೆ ಅಹಂಕಾರ ಸಂತರ್ಪಣ ಆಧಾರ; ಆದರೆ ಆನಂದವು ಅಹಂಮುಕ್ತವಾದ ಇನ್ನೊಂದು ವಿಧದ ಅಂತಃಪ್ರವೃತ್ತಿ ಮತ್ತು ಭಾವನೆಗಳಿಂದ ಬರುವಂಥದು.

ಈ ವ್ಯತ್ಯಾಸವನ್ನೂ ಪೂರ್ಣವಾಗಿ ಅರಿತುಕೊಳ್ಳಬೇಕು. ಅದಕ್ಕೆ ಅಂತರ್ನಿರೀಕ್ಷಣೆ ಮತ್ತು ಸ್ವಪ್ರವೃತ್ತಿ ವಿಶ್ಲೇಷಣೆಗಳು ಅಗತ್ಯ. ನಿಮ್ಮ ನಡತೆ, ಮನಃ ಪ್ರಣಾಳಿ ಮತ್ತು ಮನಃ ಸಂಚಾರಗಳನ್ನೂ ಸೂಕ್ಷ್ಮವಾಗಿ ನೋಡುವುದರಿಂದ ಅದು ಆರಂಭವಾಗಬೇಕು. ಸ್ವಭಾವಕ್ಕೆ ಎರಡು ವಿರುದ್ಧ ಮಗ್ಗಲುಗಳಿವೆ ಎಂಬುದು ಆಗ ನಿಮಗೆ ಬಹು ಬೇಗ ಗೊತ್ತಾಗುವುದು–ಒಂದು ಬೆಳಕಿನದು. ಇನ್ನೊಂದು ಕತ್ತಲಿನದು ಒಂದು–ಅನುಷೇಧಾತ್ಮಕ, ಇನ್ನೊಂದು ಪ್ರತಿಷೇಧಾತ್ಮಕ. ಅದರಿಂದಲೇ ಒಬ್ಬನು ಒಂದರಲ್ಲಿ ಧೀರನಾಗಿದ್ದರೆ ಇನ್ನೊಂದರಲ್ಲಿ ಅಧೀರನಾಗಿರುತ್ತಾನೆ, ಒಂದರಲ್ಲಿ ಉದಾರಿಯಾದವನು ಇನ್ನೊಂದರಲ್ಲಿ ಲೋಭಿಯಾಗಿರುತ್ತಾನೆ. ಒಂದರಲ್ಲಿ ಉದಾತ್ತಮನಸ್ಕನಾಗಿರುವಾದ ಇನ್ನೊಂದರಲ್ಲಿ ಅನುದಾತ್ತ ಮನಸ್ಕನಾಗಿರುತ್ತಾನೆ. ನಿಮ್ಮನ್ನು ನೀವು ಮೇಲ್ವಿಚಾರಕರ ಸ್ಥಾನದಲ್ಲಿರಿಸಿಕೊಂಡು ನೋಡಿದರೆ ಅವುಗಳಲ್ಲಿ ಘರ್ಷಣ ಉಂಟಾಗುವುದೂ ನಿಮ್ಮ ಚಾರಿತ್ರವು ತರಬೇತು ಅಥವಾ ಮನೋವೃತ್ತಿಯ ಪ್ರಕಾರ ಅತ್ತ ಅಥವಾ ಇತ್ತ ಒಲೆಯುವುದೂ ಕಂಡುಬರುತ್ತದೆ. ಜೈವಿಕ ತರಬೇತಿನ ಪ್ರಾಧಾನ್ಯವು ಇಲ್ಲಿದೆ.

## ಜೈವಿಕ ತರಬೇತಿಗೆ ಇನ್ನೆರಡು ಅಂಶಗಳಿವೆ:

ಮೊದಲು, ಇಂದ್ರಿಯಗಳ ಹಾಗೂ ಅವುಗಳ ಯೋಗ್ಯವಾದ ಬಳಕೆಗಳನ್ನು ಗಮನಿಸುವುದು; ಸ್ವಸ್ವಭಾವವನ್ನರಿತುಕೊಂಡು ಕ್ರಮಶಃ ಅದನ್ನು ಯತ್ನದಿಂದ ನಿಯಂತ್ರಣಕ್ಕೊಳಪಡಿಸುವುದು ಮತ್ತು ಪುನಾರಚಿಸುವುದು.

ಇಂದ್ರಿಯಗಳ ಮೇಲೆ ನಾಗರಿಕವಾದ ನಿಯಂತ್ರಣವನ್ನಿಟ್ಟುಕೊಳ್ಳುವುದನ್ನು ಚಿಕ್ಕವರಿಗೆ ಹೇಳಬೇಕು ಮತ್ತು ತರಬೇತು ಕೊಡಬೇಕು. ದೇಹವನ್ನು ಆರೋಗ್ಯಯುಕ್ತವನ್ನಾಗಿಟ್ಟು ಕೊಳ್ಳಬೇಕಾದರೆ ಇಂದ್ರಿಯಗಳ ಶುಚಿಯನ್ನು ಕಾದುಕೊಂಡಿರಬೇಕೆಂದು ತಿಳಿದುಕೊಳ್ಳಬೇಕು. ಒಳಗಿನ ಜೈವಿಕ ಚೇತನೆಯು ಸುಧಾರಿಸಿದರೆ ಇಂದ್ರಿಯಗಳ ಬಗೆಗಿನ ಹೊರ ದೃಷ್ಟಿಯು ಸುಧಾರಿಸುವುದು. ಆಗ ಅಸಹ್ಯವಾದ ಮತ್ತು ನಿಷೇಧಾರ್ಹವಾದ ನಡತೆಗಳು ಮಕ್ಕಳಲ್ಲಿ ಕಂಡುಬರಲಾರವು.

ಸ್ವಭಾವದ ಶುದ್ಧೀಕರಣ ಮತ್ತು ಬದಲಾವಣೆಗಳ ಬಗ್ಗೆ ಹೇಳುವುದಾದರೆ, ಬಲಾತ್ಕಾರದ ದಮನವು ಉಪಯುಕ್ತವಾಗದು– ಆಗ ಜೈವಿಕ ಚೇತನೆಯು ಸಹಕರಿಸದು. ನೀವು ಹೇಗೆ ಮತ್ತು ಏಕೆ ಹಾಗೆ ನಡೆದುಕೊಳ್ಳುತ್ತಿದ್ದೀರಿ ಎಂದು ಸೂಕ್ಷ್ಮವಾಗಿ ಪರಿಶೀಲಿಸಿಕೊಳ್ಳುವುದಗತ್ಯ. ತಮ್ಮ ಆಶೆಗಳು, ಮನಃಕ್ಷುಬ್ಧತೆ, ಮಮತ್ವ, ಪ್ರಭುತ್ವಾಗ್ರಹ, ಅಧಿಕಾರ ಲಾಲಸೆಗಳು ಎಲ್ಲಿ ಹುಟ್ಟುತ್ತವೆ ಎಂಬುದನ್ನು ಆಳವಾಗಿ ನೋಡಲು ಮಕ್ಕಳಿಗೂ ಕ್ರಮವಾಗಿ ಕಲಿಸಬೇಕು. ಈ ಅಂತರ್ನಿರೀಕ್ಷಣೆಯು ವಿವಿಧ ರೀತಿಗಳಿಂದ ಆರಂಭವಾಗಬಹುದು: ವಿವರಿಸುವುದರಿಂದ, ಪ್ರೇಮಾದರಗಳಿಂದ ಅಥವಾ ಸ್ವಾಭಿಮಾನವನ್ನು ಪ್ರೇರಿಸುವುದರಿಂದ; ಆದರೆ ನಾವೇ ಉದಾಹರಣೆಯಾಗುವುದರಿಂದ ಆರಂಭಿಸುವುದು ಅತ್ಯುತ್ತಮ ಮಾರ್ಗ. ತಮ್ಮನ್ನು ತಾವೇ ವಿಶ್ಲೇಷಿಸಿಕೊಳ್ಳುವ ನಿರ್ಧಾರ ಒಮ್ಮೆ ಸ್ಥಿರವಾಯಿತೆಂದರೆ, ಅದು ಸತತವೂ ಸಾಂದ್ರವೂ ಆಗುವುದು ಮತ್ತು ತಮ್ಮ ಗಮನಕ್ಕೆ ಬರುವ ಎಲ್ಲ ದೋಷಗಳನ್ನೂ ಮಕ್ಕಳು ಸರಿಪಡಿಸಿಕೊಳ್ಳುವರು. ಈ ಪ್ರಯತ್ನದಲ್ಲಿ ಮೊದಮೊದಲು ಸೋತರೂ ಹಾಗೇ ಮಾಡುತ್ತಹೋದರೆ ಕ್ರಮವಾಗಿ ಸುಧಾರಿಸುತ್ತ ಹೋಗಬಹುದು. ಅದು ದೈಹಿಕ ವ್ಯಾಯಾಮಕ್ಕೆ ಸರಿಸಮ. ವ್ಯಾಯಾಮದ ಆವೃತ್ತಿಯಿಂದ ನಿಮ್ಮ ಮಾಂಸಬಲವನ್ನು ಹೆಚ್ಚಿಸಿಕೊಂಡಂತೆ ಮಾನಸಿಕ ಪ್ರಯತ್ನದ ಆವೃತ್ತಿಯಿಂದ ನಿಮ್ಮ ಇಚ್ಛಾಶಕ್ತಿಯು ಬೆಳೆಯುವುದು ಮತ್ತು ಆಮೇಲೆ ನೀವು ಯಶಸ್ವಿಗಳಾಗುವಿರಿ.

೩. ಮಾನಸಿಕ, ಒಂದು ವಿಧದ ಮಾನಸಿಕ ಅಥವಾ ಬೌದ್ಧಿಕ ತರಬೇತನ್ನು ಕೊಡುವುದು ಎಲ್ಲ ಕಡೆಯ ರೂಢಿ. ಆದರೆ ಇಂದಿನ ಪದ್ಧತಿಯಲ್ಲಿ ಬಹಳ ತಪ್ಪು ಅಥವಾ ನ್ಯೂನತೆಗಳಿವೆ. ವಿದ್ಯಾರ್ಥಿಗಳು ಅತಿ ಹೆಚ್ಚು ನಿಯಮಗಳಿಂದ ಬದ್ಧರಾಗಿದ್ದಾರೆ; ಬಹಳ ವಿಷಯಗಳ ಪುಸ್ತಕೀಯ ಜ್ಞಾನದ ಭಾರ ಅವರ ಮೇಲಿದೆ: ತಮ್ಮ ಮಿದುಳಿಗವರು ಹೆಚ್ಚು ಕೆಲಸ ಕೊಡಬೇಕಾಗಿದೆ.

ಅವರಿಗೆ ಮಾನಸಿಕ ತರಬೇತಿನ ಕೆಲಸ ಕೊಡಬೇಕಾದರೆ ಈ ಕೆಳಗಿನ ಐದು ಅಂಶಗಳನ್ನು ಗಮನಿಸಬೇಕು:

(೧) ಅವರ ಧ್ಯಾನಶಕ್ತಿಯೂ ಅವಧಾನಶಕ್ತಿಯೂ ಹೆಚ್ಚಬೇಕು.

(೨) ವಿವಿಧ ಜ್ಞಾನಗಳ ಸಂಗ್ರಹ ಮಾಡುವ ಶಕ್ತಿಯನ್ನು ಹೆಚ್ಚಿಸಿ ಮನಸ್ಸನ್ನು ಸಂಪನ್ನಗೊಳಿಸಬೇಕು.

(೩) ಜೀವನದ ನಿಶ್ಚಿತಧ್ಯೇಯವನ್ನು ಬೆಳೆಯುವಂತೆ ಮಾಡಬೇಕು; ಏಕೆಂದರೆ ಧ್ಯೇಯರಹಿತ ಜೀವನವು ಯಾವಾಗಲೂ ದುಃಖಕರ ಜೀವನ.

(೪) ಆರೋಗ್ಯಕರವಾದ ವಿಚಾರಗಳು ಪುಷ್ಟಿಗೊಳ್ಳುವಂತೆಯೂ ಅನಾರೋಗ್ಯಕರವೂ ಹಾನಿಕರವೂ ಆದ ವಿಚಾರಗಳನ್ನು ತ್ಯಜಿಸುವಂತೆ ಮಾಡಬೇಕು.

(೫) ಕೆಲವೇಳೆ ಮನಸ್ಸನ್ನು ಆಲೋಚನಾರಹಿತವನ್ನಾಗಿ ಮಾಡಲು ಮಕ್ಕಳ ಮನಸ್ಸು ಶಕ್ತವಾಗುವಂತಾಗಬೇಕು.

ಅಸಂಬದ್ಧ ವಿಚಾರಗಳು ಮನಸ್ಸಿನ ಸುಧಾರಣೆಗೆ ವಿರುದ್ಧವಾಗಿ ಅತ್ಯಂತ ಹಠಹಿಡಿದು ಕಾಡಿಸುವ ವಿಘ್ನಗಳು. ಚಿಕ್ಕವರಲ್ಲಿ ಅವರ ಚಂಚಲ ವಿಚಾರಗಳು ಚಿಟ್ಟೆಗಳಂತೆ ಬಹುಬೇಗ ಸ್ಥಳ ಬದಲು ಮಾಡುತ್ತ ಸತತವೂ ಹಾರಾಡುತ್ತಿರುತ್ತವೆ; ಆದರೂ ಅವುಗಳಲ್ಲಿ ಒಂದು ಸುಪ್ತಶಕ್ತಿ ಇರುತ್ತದೆ. ಯಾವುದಾದರೂ ಒಂದರ ಮೇಲೆ ಅವರ ಆಸಕ್ತಿಯನ್ನೂ ಕುತೂಹಲವನ್ನೂ ಉದ್ಬೋಧಿಸಬಹುದು. ಅವರ ಅವಧಾನವಾದ ಕೂಡಲೇ ಸ್ತಿಮಿತಕ್ಕೆ ಬರುವುದು. ನಿಮಗಾಗ ಆ ಸ್ತಿಮಿತತೆಯನ್ನು ಆದಷ್ಟು ಹೆಚ್ಚುಕಾಲ ಉಳಿಯುವಂತೆ ಮಾಡುವ ಭಾರವಷ್ಟೇ ಉಳಿಯುವುದು.

ಏಕಾಗ್ರತೆ ಮತ್ತು ಅವಧಾನಗಳಲ್ಲದೆ, ಮಕ್ಕಳು ಬಹಿರ್ನಿರೀಕ್ಷಣೆ, ಕಲಿತುದರ ರಕ್ತಸಾತ್ಕರಣ ಮತ್ತು ಸ್ಮರಣ ಶಕ್ತಿಗಳನ್ನು ಗಳಿಸಿಕೊಳ್ಳಬೇಕು. ಆಸಕ್ತಿಯನ್ನು ಹೆಚ್ಚಿಸಿ ಅದನ್ನು ಹೆಚ್ಚು ಹೆಚ್ಚು ಸಕ್ರಿಯವನ್ನಾಗಿ ಮಾಡುವುದರಿಂದ ಈ ಅಭ್ಯಾಸ ರೂಪಿತವಾಗಬಲ್ಲದ್ದು. ರಕ್ತಸಾತ್‌ಕರಣವೇ ಬೇರೆ ಬರಿದೆ ಬಾಯಿಪಾಠ ಮಾಡುವುದು ಬೇರೆ. ಬರಿದೆ ಬಾಯಿಪಾಠ ಮಾಡಿದ್ದನ್ನು ನೀವು ಬೇಗ ಮರೆಯುವಿರಿ; ರಕ್ತಸಾತ್ಕೃತವನ್ನು ಸುಲಭವಾಗಿ ನೀವು ಮರೆಯಲಾರಿರಿ.

ಅವು ಕೇಳುವ ಯಾವ ಪ್ರಶ್ನೆಗೂ ಉತ್ತರ ಕೊಡಲು ನಿರಾಕರಿಸಬಾರದು. ಉತ್ತರ ಕೊಡಲು ಒಮ್ಮೆ ಸಾಧ್ಯವಾಗದೆ ಹೋದರೆ ಉತ್ತರ ಸಿಗುವ ಗ್ರಂಥಗಳನ್ನು ಹೇಳಿ ಅವುಗಳನ್ನು ನೋಡಿರಿ ಎನ್ನಬೇಕು. ಅದರಿಂದ ಅವುಗಳ ಉತ್ಸಾಹ ಹೆಚ್ಚಾಗುವುದು.

ಹೀಗೆ ಮನಸ್ಸನ್ನು ವಿಸ್ತಾರಗೊಳಿಸಬಹುದು. ಅವಕ್ಕೆ ಬಾಳಿನ ಯಾವ ಮುಖದ ಬಗ್ಗೆ ಕುತೂಹಲ ಉಂಟಾದರೂ ಸರಿಯೆ. ಅದಕ್ಕೆ ತಕ್ಕ ಉತ್ತರವನ್ನು ಕೊಟ್ಟು ಅವನ್ನು ತೃಪ್ತರನ್ನಾಗಿ ಮಾಡಬೇಕು. ಅಂಥ ಒಂದು ಉತ್ತರವು ಇನ್ನೊಂದಕ್ಕೆ ಒಯ್ದು

ಮುಟ್ಟಿಸುವುದು. ಅಲ್ಲದೆ, ಅವುಗಳ ಕಲ್ಪನಾಶಕ್ತಿಗೂ, ಕಲ್ಪನಾವಿಲಾಸಕ್ಕೂ ಪ್ರೋತ್ಸಾಹ ನೀಡಬೇಕು. ಅವಕ್ಕೆ ಆಕರ್ಷಕವಾದ ಪುಸ್ತಕಗಳನ್ನು ಬದಲು ಕೊಡಬೇಕು. ಅದರಿಂದ ಅವುಗಳ ಕಲ್ಪನಾಶಕ್ತಿಗೆ ತಾನೇತಾನಾಗಿ ಸ್ಫೂರ್ತಿ ದೊರಕುವುದು; ಆ ಮೂಲಕ ಅವಕ್ಕೆ ಹೆಚ್ಚು ಹೆಚ್ಚು ಕಲಿಯಲು ಕುತೂಹಲ ಉಂಟಾಗುವುದು; ಮತ್ತು ಹೊಸ ಶೋಧ ಮಾಡುವ ಪ್ರವೃತ್ತಿ ಕೂಡ ಅವುಗಳಲ್ಲಿ ಹುಟ್ಟಬಲ್ಲದು.

ಇಷ್ಟೇ ಅಲ್ಲ–ಮಾನಸಿಕ ಚಟುವಟಿಕೆಯ ಇನ್ನೊಂದು ಮಗ್ಗುಲೂ ಇದೆ. ಅದೇ ನವನಿರ್ಮಾಣ ಪ್ರವೃತ್ತಿ. ಅನೇಕ ಮಕ್ಕಳಲ್ಲಿ ಇದೊಂದು ನೈಸರ್ಗಿಕ ಒಲವಾಗಿರುವುದುಂಟು. ಅದನ್ನು ಚೆನ್ನಾಗಿ ಗಮನಿಸಿ ಸರಿಯಾದ ದಿಕ್ಕಿನಲ್ಲದು ಹರಿಯುವಂತೆ ಮಾಡಬೇಕು. ಏಕೆಂದರೆ, ಅವುಗಳ ಆಲೋಚನೆಗಳ ಪ್ರವಾಹ ಬೆಲೆಯುಳ್ಳದ್ದೋ ಅಲ್ಲವೋ ಮುಖ್ಯ ವಿಷಯಕ್ಕೆ ಅವೇನಾದರೂ ಸಂಬಂಧಿಸಿವೆಯೋ ಇಲ್ಲವೋ ಎಂಬುದನ್ನು ನಿರ್ಣಯಿಸಿ, ಹಾಗೆ ಸಂಬಂಧಿಸಿರದೆ ಹೋದರೆ ಆ ಆಲೋಚನೆಗಳನ್ನು ಪರಿತ್ಯಜಿಸಿಬಿಡಬೇಕು. ಈ ಬಗೆಯ ಕೆಲಸಕ್ಕೆ ನಿರ್ದಿಷ್ಟವಾದ ಅವಧಿಯನ್ನು ತೆಗೆದಿಡಬೇಕು.

ಮನಸ್ಸನ್ನು ಸುಮ್ಮನಿರಿಸುವುದು; ಮನಸ್ಸು ಶಾಂತವೂ ವಿಚಾರ ರಹಿತವೂ ಆಗುವಂತೆ ತರಬೇತುಕೊಡಬೇಕು. ಅದರಿಂದ ಮನಸ್ಸು (ಬಹಳ) ಬುದ್ಧಿವಂತಿಕೆಯಿಂದ ನಿಷ್ಕ್ರಿಯವಾಗಿರುವುದರ ಬದಲು, ಉನ್ನತ ಪ್ರಜ್ಞಾಸ್ತರದಿಂದ ಯಾವುದಾದರೂ ಒಂದು ಸ್ಫೂರ್ತಿ ಬಂದು ಮನಸ್ಸಿನ ಆ ಖಾಲಿಯಾದ ಸ್ಥಳವನ್ನು ಹೋಗುವ ಸಂಭವ ಉಂಟಾಗುವುದು. ಇಷ್ಟಲ್ಲದೆ, ಸತತಕ್ರಿಯಾಮಯವಾಗಿರುವ ಮನಸ್ಸಿಗೆ ಆಗ ಈಗ ವಿಶ್ರಾಂತಿಯೂ ಬೇಕು. ಮನಸ್ಸನ್ನು ನಿರ್ವಿಚಾರಗೊಳಿಸುವುದನ್ನು ಕಲಿತರೆ. ಬೇರೆ ಬಗೆಗಳಿಂದ ಸಾಧ್ಯವಾಗದೆ ಹೋದಾಗ ಎಷ್ಟೋ ಕಠಿನ ಸಮಸ್ಯೆಗಳನ್ನು ಈ ಬಗೆಯಿಂದ ಬಗೆ ಹರಿಸಲು ಸಾಧ್ಯವಾಗುವುದೆಂಬುದು ಗೊತ್ತಾಗುವುದು; ಇಷ್ಟಲ್ಲದೆ, ಇದರಿಂದ ಎಷ್ಟೊ ತೊಂದರೆಗಳನ್ನೂ ಅಪಾಯಗಳನ್ನೂ ತಪ್ಪಿಸಿಕೊಳ್ಳಬಹುದು ಮತ್ತು ಹೊಸ ಸಾಧ್ಯತೆಗಳನ್ನು ಹೆರುವ ಬೆಳಕಿನ ಯಾವುವಾದರೂ ಕಿರಣಗಳು ಮೂಡಿ ಬರುವಂತಾಗಬಹುದು.

೪. ಆಧ್ಯಾತ್ಮಿಕ. ಎಲ್ಲ ಮನುಷ್ಯ ಪ್ರಾಣಿಗಳಲ್ಲಿಯೂ ಸಾಮಾನ್ಯ ಪ್ರಜ್ಞೆಯಲ್ಲದೆ, ಎಲ್ಲೋ ಒಳಗೆ ಉರಿಯುತ್ತಿರುವ ಮಂದ ಜ್ವಾಲೆಯಂತೆ ತೋರುವ ಉಚ್ಚತರ ಪ್ರಜ್ಞೆಯು ಅಡಗಿರುವ ಸಂಭವವಿರುತ್ತದೆ. ಬಹಳ ಚಿಕ್ಕವರಾಗಿರುವಾಗ ಮಕ್ಕಳಿಗದು ಎಷ್ಟೋ ಸಲ ಆಶ್ಚರ್ಯಕರವಾಗಿ ಅನುಭವಕ್ಕೆ ಬರುವುದು; ಆದರೆ ಅವುಗಳ ಅಜ್ಞಾನಿಗಳಾದ ತಾಯ್ತಂದೆಗಳು ತಪ್ಪಾಗಿ ದಮನಗೊಳಿಸಿ ಅವುಗಳನ್ನು ಬೈದು (ತೆಪ್ಪಗೆ ಕುಳ್ಳಿರಿಸಿದರೆ) ಆ ಅನುಭವ ಹೊರಟು ಹೋಗುವುದು. ಹಾಗೆ ಅವುಗಳನ್ನು ಗದ್ದರಿಸಿ ಕುಳ್ಳಿರಿಸದಿದ್ದಲ್ಲಿ

ಸಕಾಲದಲ್ಲಿ ದೇವರನ್ನು ಅಥವಾ ಪರಮ ಸತ್ಯವನ್ನು ತಿಳಿಯಬೇಕೆಂಬ ಆಧ್ಯಾತ್ಮಿಕ ಜಿಜ್ಞಾಸೆ ಹುಟ್ಟಿದರೂ ಹುಟ್ಟಬಹುದಾಗಿರುತ್ತದೆ. ಅದು ಮನಸ್ಸಿನ ಬುದ್ಧಿಮತ್ತೆಯನ್ನು ಅವಲಂಬಿಸಿರುವುದಿಲ್ಲ; ಅದು ಸಂಪೂರ್ಣ ಬೇರೆ ಬಗೆಯ ಜ್ಞಾನವಾಗಿರುತ್ತದೆ. ಎಷ್ಟೋ ಮಕ್ಕಳಲ್ಲದು ಪರದೆಯ ಹಿಂದಿನಿಂದಲೋ ಎಂಬಂತೆ ಅವುಗಳಿಗೆ ಗೊತ್ತಾಗದ ಹಾಗೆ ಕೆಲಸ ಮಾಡುತ್ತಿರುತ್ತದೆ. ಅದರ ಒತ್ತಡವನ್ನು ಅನುಭವಿಸಲಾರಂಭಿಸಿದವು. ಆ ಆಧ್ಯಾತ್ಮಿಕ ಜ್ಞಾನದತ್ತ, ಯಾವ ಅಡೆತಡೆಗಳನ್ನೂ ಗಮನಿಸದೆ, ಆತ್ಮ ವಿಶ್ವಾಸದಿಂದಲೂ ಅದಮ್ಯ ಉತ್ಸಾಹದಿಂದಲೂ ಮುಂಬರಿಯುವುವು. ಅವು ಈ ಜ್ಞಾನವನ್ನು ಪಡೆಯಲು ನಿರ್ಧಾರ ಬುದ್ಧಿಯನ್ನು ಪ್ರಕಟಿಸಿದರೂ ಅದಕ್ಕೆ ಕೆಲ ಮಟ್ಟಿನ ಪ್ರಾಥಮಿಕ ತರಬೇತು ಬೇಕೇ ಬೇಕು. ಸಮರ್ಥ ಗುರುಗಳ ಸಹಾಯ ಅವಕ್ಕೆ ಸಿಕ್ಕಿದರೆ ಆಗ ಅದು ಸುಲಭವಾಗುವುದು; ಇಲ್ಲದಿದ್ದರೆ, ಅವು ತಮ್ಮ ಆತ್ಮದ ಆಳದಲ್ಲಿ ದೈವೋಪಸ್ಥಿತಿಯನ್ನು ಅನುಭವಿಸಲು ಬಹಳ ಕಷ್ಟಪಡಬೇಕಾಗುವುದು.

ಈ ಮಾರ್ಗವನ್ನು ಅನುಸರಿಸಬಯಸುವವರಿಗೆ ಈ ಕೆಳಗಿನ ಉಪದೇಶಗಳು ಉಪಯುಕ್ತವಾದಾವು.

(೧) ಬುದ್ಧಿಯಿಂದ ಯಾವ ಆಧ್ಯಾತ್ಮಿಕ ಪ್ರಶ್ನೆಯನ್ನೂ ನಿರ್ಣಯಿಸಕೂಡದು.

(೨) ವೈಯಕ್ತಿಕ ಸುಖ ಅಥವಾ ಗೆಲುವಿಗಾಗಿ ಯಾವ ಆಸೆಯನ್ನೂ ಇಟ್ಟುಕೊಳ್ಳಬಾರದು.

(೩) ಎಂದೂ ಕ್ಷೋಭೆಗೊಳಗಾಗಬಾರದು, ಹೆದರಬಾರದು; ಸಮತ್ವವನ್ನು ಸಾಧಿಸಬೇಕು.

(೪) ಹೊರ ಲಕ್ಷಣಗಳಿಂದ ಯಾವುದರ ಬೆಲೆಯನ್ನೂ ಕಟ್ಟಬಾರದು.

(೫) ಅನ್ಯರನ್ನೆಂದೂ ದೂಷಿಸಕೂಡದು.

(೬) ಬೆಳೆಸಿಟ್ಟುಕೊಂಡ ಧ್ಯೇಯದಿಂದ ಎಂದೂ ಕದಲಬಾರದು. ಯಾವಾಗಲೂ ಅದನ್ನೇ ಮೊದಲು ಚಿಂತಿಸಬೇಕು–ಯಾವ ಚಿಲ್ಲರೆ ವಿಷಯಗಳೆದುರಾದರೂ ಸರಿಯೆ: ಊಟ ಮಾಡುವ ಮೊದಲು ಗುರಿಮುಟ್ಟಲು ತಕ್ಕ ಶಕ್ತಿಯನ್ನು ಈ ಆಹಾರ ಕೊಟ್ಟೀತೆಂದು ಭಾವಿಸಿ ಊಟ ಮಾಡಬೇಕು. ಮರುದಿನ ಧ್ಯೇಯಸಾಧನೆಯ ಮಾರ್ಗದಲ್ಲಿ ಮುಂಬರಿಯಲು ಬೇಕಾದ ಹೊಸ ಶಕ್ತಿಯನ್ನು ಪಡೆಯಲನುಕೂಲವಾಗುವಂತೆ ದಿನದ ದಣಿವು ಅಡಗೀತು ಎಂದು ಭಾವಿಸಿಕೊಂಡು ಮಲಗಬೇಕು.

(೭) ಯಾವ ಕೆಲಸವನ್ನು ಮಾಡಬೇಕಾದರೂ ಮೊದಲು ಅದು ನಿನ್ನ ಸಾಧನೆಗೆ ವಿಘ್ನವಾಗದಿರುವಂತೆ ಎಚ್ಚರಿಕೆ ವಹಿಸಬೇಕು.

(೮) ಅನವಶ್ಯಕವಾದ ಮಾತುಕತೆಗಳಲ್ಲಿ ಭಾಗವಹಿಸಬಾರದು. ಹೇಳಬೇಕೆಂಬುದನ್ನು ಮೊದಲು ಆಲೋಚಿಸು; ಅದು ಧ್ಯೇಯ ಸಾಧನೆಗೆ ಹಾನಿಕರವಾಗುವುದೋ ಹೇಗೆಂಬುದನ್ನು ಮೊದಲು ವಿಚಾರ ಮಾಡಬೇಕು.

ಹೀಗೆ ಮುಂದುವರಿಸಿಕೊಂಡು ಹೋಗಲು ಸಾಧ್ಯವಾದರೆ, ತಪ್ಪು ಹೆಜ್ಜೆಯನ್ನಿಡದೆ ಸಾಧನೆಯನ್ನು ಸತತಗೊಳಿಸಲಾದರೆ, ಒಂದು ದಿನ ಒಮ್ಮೆಲೇ ಬಾಗಿಲೊಂದು ತೆರೆದದ್ದನ್ನು ಕಾಣಬಹುದು ಮತ್ತು ಒಂದು ಪ್ರಕಾಶಮಯ ಚೈತನ್ಯ ಸನ್ನಿಹಿತವಾದದ್ದನ್ನು ನೋಡಬಹುದು. ಆ ಚೈತನ್ಯವು (ಪ್ರಜ್ಞಾ ಪ್ರಕಾಶವು)–ನಾನು ಹಿಂದೆ ಇದ್ದೆ, ನಾನು ಮುಂದೆ ಇರುವೆ, ಸಾವು ಅಥವಾ ನಾಶ ಎಂಬುದು ನನಗಿಲ್ಲ– ಎಂಬ ಸ್ವರೂಪದ ಅಮೃತತ್ವದ ಬಗೆಗೆ ನಿಶ್ಚಯ ಬುದ್ಧಿಯನ್ನು ಹುಟ್ಟಿಸುವುದು. ಆಗ ಎಲ್ಲರೂ ಒಂದೇ ಆಗಿರುವುದರಿಂದ ಎಲ್ಲರೂ ಸಮಾನರು ಎಂಬುದು ಗೊತ್ತಾಗುವುದು. ಅದರಿಂದ ಸಾಧಕನಿಗೆ ತಾನು ಮುಕ್ತನಾದೆನೆಂಬುದೂ ತಾನು ಪ್ರಕೃತಿ ದಾಸನಲ್ಲವೆಂದೂ ಗೊತ್ತಾಗುವುದು. ಆದರೆ ಇನ್ನೂ ಮುಂದೆ ಹೋಗತಕ್ಕದ್ದಿದೆ.

(೯) ಅಂತರ್ಮಾನಸಿಕ. ವ್ಯಕ್ತಿತ್ವದ ಕ್ರಮಿತ ಪರಿವರ್ತನೆಗೆ ಈ ತರಬೇತೂ ಬೇಕು. ಇದರಿಂದ ಅಹಂಕಾರ ಅಡಗುವುದು ಮತ್ತು ಅಪ್ರಮೇಯವಾದ ಅತೀಂದ್ರಿಯ ಚೈತನ್ಯಲೋಕದಲ್ಲಿ ಪ್ರವೇಶ ದೊರಕುವುದು.

ಆದರಿದು ಕೊನೆಯ ಮಾತಲ್ಲ. ಇದಕ್ಕೂ ಮುಂದೆ ಹೊಸ ಲೋಕವೊಂದಿದೆ. ಅದಕ್ಕೆ ಹೋಗಲು ಅತಿಮಾನಸ (ಸುಪ್ರಮಾಣಸ) ತರಬೇತು ಅಗತ್ಯ. ಅದರ ಕೆಲಸವು ಮೇಲಿನಿಂದ ಕೆಳಕ್ಕೆ ಶುರುವಾಗುವುದು. ಅದು ಇರವಿನ ನಾನಾ ಸ್ತರಗಳನ್ನು ಹಾಯ್ದು ಹೋಗುವುದು; ಅನ್ನಮಯ ಕೋಶವನ್ನೂ ಹೊಕ್ಕು ಅಂತ್ಯದಲ್ಲದು ದಿವ್ಯಶರೀರವಾಗಿ ನಿಲ್ಲುವುದು. ಅವನೇ ದಿವ್ಯ ಮಾನವ. ಅವನಿಂದ ಭೂಲೋಕದಲ್ಲಿ ಹೊಸಕುಲ ಹುಟ್ಟುವುದು.

ಇದು ಸಂಕ್ಷಿಪ್ತವಾಗಿ ಮಾತೃಶ್ರೀಯ ಮಾತಿನಿಂದಲೇ ಪಾಕ್ಷಿಕವಾಗಿ, ಹೇಳಿದ ವಿದ್ಯಾಭ್ಯಾಸ ಮತ್ತು ಉಪಶಿಕ್ಷಣಗಳ ಆದರ್ಶ. (ಪಾಂಡಿಚೇರಿಯ) ವಿಶ್ವವಿದ್ಯಾನಿಲಯದಲ್ಲಿ ಈ ಮಾರ್ಗದಿಂದಲೇ ಕೆಲಸ ನಡೆಯುತ್ತಿದೆ. ಒಂದಲ್ಲ ಒಂದು ದಿನ, ಇದು ಇಡಿ ಜಗತ್ತೇ ಅನುಸರಿಸುವ ಅಥವಾ ಬೆಳಕಿಗೆ ಎದುರಾದ ಜಗದ್ಭಾಗವು ಅನುಸರಿಸುವ ಆದರ್ಶವಾದೀತೆಂದು ನಾವು ಪ್ರತ್ಯಾಶೆಯನ್ನಿಟ್ಟುಕೊಳ್ಳಬಹುದು.

# ೭. ಮಾತೃಶ್ರೀಯ ವ್ಯಕ್ತಿತ್ವ

ಆಶ್ರಮದಿಂದಲೂ ಅಲ್ಲಿಗೆ ಹೋಗಿ ಮಾತೃಶ್ರೀಯ ಸಂಪರ್ಕದಲ್ಲಿದ್ದ ಹೊರಗಿನವರಿಂದಲೂ ಅವಳ ವ್ಯಕ್ತಿತ್ವದ ಬಗೆಗೆ ಬಹಳ ಸಂಗತಿಗಳನ್ನು ತಿಳಿದುಕೊಳ್ಳಬಹುದು.

ಮೊದಲನೆಯದಾಗಿ, ಹೊರ ಹೊರಗೆ ನೋಡಿದರೆ ಸಹ ಮಾತೃಶ್ರೀ ಯಾವಾಗಲೂ ಕಾರ್ಯಮಗ್ನೆಯಾಗಿರುವುದು, ತನ್ನದೇ ಆದ ರೀತಿಯಿಂದ ಕೆಲಸಮಾಡುತ್ತಿರುವುದು ಕಂಡು ಬರುತ್ತದೆ. ಆಕೆಗೆ ವಿಶ್ರಾಂತಿ ವೇಳೆಯೇ ಇಲ್ಲ. ಇಡಿ ವರ್ಷದಲ್ಲಿ ಅವಳಿಗೆ ಒಂದು ದಿನದ ರಜೆಯೂ ಇಲ್ಲ, ಕುಳಿತು ವಿಶ್ರಾಂತಿ ತೆಗೆದುಕೊಳ್ಳಲು ಸಮಯವೇ ಇಲ್ಲ. ಇರುಳಿನಲ್ಲಿ ಅವಳು ಬಹುಶಃ ಎರಡು ಗಂಟೆಗಳ ಕಾಲ ನಿದ್ರಿಸುತ್ತಾಳೆ. ದಿನದ ೨೪ ಗಂಟೆಗಳಲ್ಲಿ ೨೨ ಗಂಟೆಗಳ ಕಾಲ ಅವಳು ಕೆಲಸ ಮಾಡುತ್ತಿರುತ್ತಾಳೆ. ಕೆಲಸದ ಪ್ರತಿಯೊಂದು ಅಂಗಕ್ಕೂ ಕಾಲನಿರ್ದೇಶವಿದೆ; ಅದರಿಂದ ವೇಳಾ ಪತ್ರಿಕೆಗೆ ಎಂದೂ ವ್ಯತ್ಯಯ ಉಂಟಾಗುವುದಿಲ್ಲ. ಉಷಃ ಕಾಲದಿಂದ ರಾತ್ರಿಯ ಬಹಳ ಕಾಲದವರೆಗೆ ಅವಳು ತನ್ನ ದೈನಂದಿನ ಕರ್ತವ್ಯದಲ್ಲಿ ಮಗ್ನಳಾಗಿರುತ್ತಾಳೆ. ರಾತ್ರಿಯ ೨ ರಿಂದ ೪ ಗಂಟೆಗಳವರೆಗೆ ಮಾತ್ರ ಅವಳು ವಿಶ್ರಾಂತಿ ತೆಗೆದುಕೊಳ್ಳುತ್ತಾಳೆ, ಅದೂ ಹಾಸಿಗೆಯ ಮೇಲಲ್ಲ ಸೋಫದ ಮೇಲೆ. ಆಗಲೂ ಆಕೆ ನಿದ್ರಿಸುವುದಿಲ್ಲ ಸಮಾಧಿಯಲ್ಲಿರುತ್ತಾಳೆ ಎಂದು ಕೆಲವರೆನ್ನುತ್ತಾರೆ, ಧ್ಯಾನ ಸಮಾಧಿಗಳು ನಿದ್ರೆಗಿಂತ ಹೆಚ್ಚು ವಿಶ್ರಾಂತಿದಾಯಕ ಎಂದು ಮಾತೃಶ್ರೀಯೇ ಹೇಳುತ್ತಿದ್ದಳು.

ಮೊದಲು, ಪ್ರತಿದಿನ ಬೆಳಿಗ್ಗೆ ಆರೂ ಕಾಲಿಗೆ ಸರಿಯಾಗಿ (ಮಹಡಿಯ ಮೇಲಿನ ಮುನ್ನಟ್ಟಳಿಗೆಯಲ್ಲಿ ಬಂದು ಅವಳು ನಿಲ್ಲುತ್ತಿದ್ದಳು. ಆಗ ಆಶ್ರಮವಾಸಿಗಳು ಹೊರ ಬಂದು ರಸ್ತೆಯ ಬದಿಗೆ ನಿಂತು ಅವಳ ದರ್ಶನವನ್ನು ಪಡೆಯುತ್ತಿದ್ದರು. ಅನಂತರ ಅವಳು ಆಶೀರ್ವದಿಸಲೆಂದು ಕೆಳಗೆ ಬರುತ್ತಿದ್ದಳು. ಆದರೀಗ ಈ ಯೆಲ್ಲವೂ ಬದಲಾಗಿದೆ.

ಬೆಳಿಗ್ಗೆ ಅವಳು ತನ್ನ ಕೋಣೆಯಲ್ಲಿದ್ದು ನಿತ್ಯದ ಕೆಲಸವನ್ನು ಮಾಡುತ್ತಿದ್ದಳು. ಕಾರ್ಯದರ್ಶಿಯು ೯ ಗಂಟೆಗೆ ಅವಶ್ಯಕವಾದ ಉಪದೇಶಗಳನ್ನು ಪಡೆಯಲು ಅವಳೆಡೆಗೆ ಹೋಗುತ್ತಿದ್ದನು. ೧೦ ಗಂಟೆಯಿಂದ ಅವಳು ಅಂದು ಸಂದರ್ಶಿಸಲು ಅಪ್ಪಣೆ ಪಡೆದವರನ್ನು ಅದರಲ್ಲೂ ಆ ದಿನ ಯಾರ ಹುಟ್ಟು ಹಬ್ಬವಾಗಿರುವುದೋ ಅವರನ್ನು ಸ್ವಾಗತಿಸುತ್ತಿದ್ದಳು. ಅವಳ ಮುಂದೆ ಒಬ್ಬರಾದ ಮೇಲೆ ಒಬ್ಬರಂತೆ ಅವರು ಬಂದು ನಿಲ್ಲುತ್ತಿದ್ದರು. ಅವರು ಆಗ ಹೇಳಬೇಕೆನ್ನಿಸಿದ್ದನ್ನು ಹೇಳಿ ಆಶೀರ್ವಾದ ಪಡೆದು

ಹೋಗುತ್ತಿದ್ದರು. ಶಾಖಾಧಿಪತಿಗಳೂ ಉಪದೇಶಗಳನ್ನು ಪಡೆಯಲು ಬರಬಹುದಾಗಿತ್ತು. ಆಮೇಲೆ ಅವಳು ಫಲಾಹಾರ ಮಾಡುತ್ತಿದ್ದಳು. ಅವಳು ಫಲಾಹಾರ ಮಾಡುತ್ತಿದ್ದುದು ಬಹಳ ಸ್ವಲ್ಪ; ದ್ರವಪದಾರ್ಥಗಳನ್ನೇ ಅವಳು ಹೆಚ್ಚಾಗಿ ತೆಗೆದುಕೊಳ್ಳುತ್ತಿದ್ದಳು. ಯಾರಾದರೂ ನೈವೇದ್ಯವೆಂದು ಆಕೆಗೆ ಯಾವುದಾದರೊಂದು ಖಾದ್ಯವನ್ನು ತಂದು ಕೊಟ್ಟರೆ ಅದರಲ್ಲಿ ಒಂದು ತುತ್ತನ್ನು ತೆಗೆದುಕೊಂಡು ಮಿಕ್ಕದ್ದನ್ನು ಪ್ರಸಾದವೆಂದು ಇತರರಿಗೆ ಕೊಟ್ಟು ಬಿಡುತ್ತಿದ್ದಳು.

ಮಧ್ಯಾಹ್ನ ಮೂರಕ್ಕೆ ಅವಳ ಲಕ್ಷ್ಯಕ್ಕೆ ಬೀಳಬೇಕಾದ ಕಾಗದ ಪತ್ರಗಳನ್ನು ಕಾರ್ಯದರ್ಶಿ ನಳಿನೀಗುಪ್ತರು ಅವಳೆಡೆಗೆ ಒಯ್ಯುತ್ತಿದ್ದರು. ಅವನ್ನು ಅವರು ಅವಳಿಗೆ ಓದಿ ಹೇಳುತ್ತಿದ್ದರು; ಅವಳು ಹೇಳಿದ ಉತ್ತರಗಳನ್ನು ಬರೆದುಕೊಳ್ಳುತ್ತಿದ್ದರು. ಈ ಕೆಲಸವನ್ನು ಮುಗಿಸಲು ದಿನವೂ ಸುಮಾರು ಎರಡು ಗಂಟೆಗಳು ಬೇಕಾಗುತ್ತಿದ್ದವು.

ಅನಂತರ ಸಲಹೆ–ಸೂಚನೆಗಳನ್ನು ಪಡೆಯಲು ವಿವಿಧ ಶಾಖೆಯ ಕೆಲಸಗಾರರು ಅವಳೆಡೆಗೆ ಹೋಗುತ್ತಿದ್ದರು. ಆ ಸಲಹೆ–ಸೂಚನೆಗಳಿಲ್ಲದೆ ಏನು ಮಾಡಲೂ ಆಗುತ್ತಿರಲಿಲ್ಲ. ಕೆಲವರಿಗೆ ಮಾತೃಶ್ರೀಯು ಲಿಖಿತ ಅಪ್ಪಣೆಗಳನ್ನು ಕೊಡುತ್ತಿದ್ದಳು. ಕೆಲವರಿಗೆ ಬಾಯಿ ಮಾತಿನಿಂದ ಹೇಳುತ್ತಿದ್ದಳು. ಹೀಗೆ ಆಯಾ ಶಾಖೆಗಳ ಕೆಲಸದ ಬಗೆಗೆ ಹೇಳಬೇಕಾದುದೆಲ್ಲವನ್ನೂ ಅವಳು ಹೇಳುತ್ತಿದ್ದಳು. ಎಲ್ಲ ಶಾಖೆಗಳ ಕಾರ್ಯ ವಿವರಗಳನ್ನೂ ಅವಳು ನೆನಪಿನಲ್ಲಿಟ್ಟುಕೊಳ್ಳುತ್ತಿದ್ದಳು.

ಮೊದಲು ಅವಳು ಮಧ್ಯಾಹ್ನ ನಾಲ್ಕೂವರೆಗೆ ಆಟದ ಬಯಲಿಗೆ ಹೋಗುವ ಸಂಪ್ರದಾಯವಿದ್ದಿತ್ತು. ಅವಳು ಸ್ವತಃ ಸುಮಾರು ಒಂದು ಗಂಟೆಯ ಕಾಲ ಟೆನಿಸ್ ಆಡುತ್ತಿದ್ದಳು. ಆಮೇಲೆ ಆಬಾಲ ವೃದ್ಧರೆಲ್ಲರೂ ಸಾಮೂಹಿಕ ಕವಾಯತಿಗಾಗಿ ಸೇರುತ್ತಿದ್ದರು ಅಥವಾ ಓಡುವ ವ್ಯಾಯಾಮ ಮಾಡುತ್ತಿದ್ದರು. ಇದಾದ ಮೇಲೆ ಆಟದ ಬಯಲಲ್ಲೇ ಅವಳು ಸಂದರ್ಶನ ಕೊಡುತ್ತಿದ್ದಳು.

ಆಮೇಲೆ ಅವಳೆದುರು ಎಲ್ಲರೂ ಮೌನವಾಗಿ ಎದ್ದು ನಿಂತು ಅವಳೊಡನೆ ಕೆಲ ಕಾಲ ಧ್ಯಾನ ಮಾಡುತ್ತಿದ್ದರು. ಧ್ಯಾನ ಮುಗಿದ ಮೇಲೆ ಮಾತೃಶ್ರೀಯು ಅಲ್ಲಿದ್ದವರೆಲ್ಲರಿಗೂ ಕಾಯಿ, ಪೆಪ್ಪರಮಿಂಟು ಮುಂತಾದ ಸಿಹಿ ತಿಂಡಿಗಳನ್ನು ಹಂಚುತ್ತಿದ್ದಳು. ಹಾಗೆ ಹಂಚುವಾಗ ಅವಳು ಎಷ್ಟೋ ಸಲ ಸಮಾಧಿಸ್ಥಳಂತಿರುತ್ತಿದ್ದಳು. ಆದರೆ ಯಾವುದೂ ಅವಳ ಕಣ್ಣು ತಪ್ಪಿಸುತ್ತಿರಲಿಲ್ಲ. ಯಾರಾದರೂ ಅನುಪಸ್ಥಿತರಾಗಿದ್ದರೆ "ಅವನೇಕೆ ಇಲ್ಲಿಲ್ಲ?" ಎಂದು ಕೂಡಲೇ ಅವಳು ಕೇಳಿಬಿಡುತ್ತಿದ್ದಳು.

ಕೆಲವು ಸಲ ಹೂವುಗಳನ್ನು ಹಂಚಿ ಆಶೀರ್ವಾದ ಮಾಡಲು ನಿಂತಾಗ ಅವಳು ಅಕಸ್ಮಾತ್ತಾಗಿ ಎಲ್ಲ ಚಲನವಲನಗಳನ್ನೂ ನಿಲ್ಲಿಸಿ ೧೦–೧೫ರಿಂದ ಮತ್ತು ಒಮ್ಮೆ ೪೫

ನಿಮಿಷಗಳವರೆಗೆ ನಿಷ್ಪಂದವಾಗಿದ್ದುಬಿಡುತ್ತಿದ್ದಳು. ಅವಳು ಬಹಿರ್ಮುಖಿಯಾಗುವವರೆಗೆ ಎದುರಿಗಿದ್ದ ಶಿಷ್ಯ ಕಾದುಕೊಂಡಿರಬೇಕಾಗಿತ್ತು. ಇದನ್ನು ಕಂಡು ಒಮ್ಮೆ ಒಬ್ಬರು ಮೆಲ್ಲಗೆ ಹೇಳಿದರು. "ತಾಯಿ, ನಾನು ಬಹಳ ಹೊತ್ತಿನಿಂದ ಕಾಯುತ್ತ ನಿಂತಿದ್ದೆ; ಬಹುಶಃ ನೀನು ಸಮಾಧಿಸ್ಥೆಯಾದೆ." ಅದಕ್ಕೆ ಮಂದಸ್ಮಿತೆಯಾಗಿ ಉತ್ತರ ಕೊಟ್ಟಳು, ನಿನ್ನ ಸಹನೆಯನ್ನು ಪರೀಕ್ಷಿಸುತ್ತಿದ್ದೆ ಎಷ್ಟು ಹೊತ್ತು ನೀನು ಕಾಯಬಲ್ಲೆ ಎಂಬುದನ್ನು ನೋಡುತ್ತಿದ್ದೆ" ಎಂದು.

ಆಟದ ಬಯಲಿಂದ ಹಿಂದಿರುಗಿದ ಬಳಿಕ ಅವಳು ಫ್ರೆಂಚ್ ಭಾಷೆಯ ಪಾಠ ಹೇಳುತ್ತಿದ್ದಳು. ಯುವಕರೊಡನೆ ಬಹಳ ಜನ ವೃದ್ಧರೂ ಆ ತರಗತಿಗಳಿಗೆ ಹೋಗುತ್ತಿದ್ದರು. ಒಂದು ಗಂಟೆ ಪಾಠ ಹೇಳಿದ ಮೇಲೆ ಅವಳು ತನ್ನ ಕೊಠಡಿಗೆ ಹೋಗುತ್ತಿದ್ದಳು.

ಆದರೆ ೧೯೬೭ರಿಂದ ಈ ಕಾರ್ಯಕ್ರಮಗಳನ್ನು ಬದಲಾಯಿಸಲಾಗಿದೆ. ಆಟದ ಬಯಲಿನಲ್ಲಿ ಅದೇ ಕಾರ್ಯಪದ್ಧತಿ ಇದೆ. ಆದರೆ ಮಾತೃಶ್ರೀ ಅಲ್ಲಿಗೆ ಹೋಗುವುದಿಲ್ಲ.

ತನ್ನ ಸಾಮಾನ್ಯ ಕೆಲಸಗಳಲ್ಲಲ್ಲದೆ ಅವಳು ಕಲೆಯಲ್ಲೂ ಆಸಕ್ತಿ ವಹಿಸುತ್ತಿದ್ದಳು; ಅದರಲ್ಲೂ ಏನಾದರೂ ಮಾಡುತ್ತಿದ್ದಳು. ಅವಳು ಬಣ್ಣದ ಚಿತ್ರ ಬರೆಯುತ್ತಿದ್ದಳು, ಲೇಖನಗಳನ್ನು ತಯಾರಿಸುತ್ತಿದ್ದಳು, ಪಿಯಾನೋವನ್ನು ನುಡಿಸುತ್ತಿದ್ದಳು. ಚಿಕ್ಕವಳಾಗಿದ್ದಾಗ ಅವಳು ವರ್ಣಶಿಲ್ಪವನ್ನು ಕಲಿತಿದ್ದಳು. ಈಗಲೂ ಆಕೆ ಸಮರ್ಥ ಶಿಷ್ಯರಿಗೆ ವರ್ಣಶಿಲ್ಪವನ್ನು ಕಲಿಸುತ್ತಾಳೆ.

ಅವಳ ಬರೆಹದ ಶೈಲಿ ಅವಳದೇ. ಅದು ಪ್ರಸನ್ನವೂ ಓಜಸ್ವಿಯೂ ಸರಳವೂ ಆಗಿದೆ. ಆಶ್ರಮದ ಪತ್ರಿಕೆಗೆ ಅವಳೇ ಬರೆಯುತ್ತಾಳೆ. ಅವಳು ಸಂಸ್ಕೃತವನ್ನು ಬರೆಯಲೂ ಓದಲೂ ಬಲ್ಲವಳಾಗಿದ್ದಾಳೆ.

ಇತ್ತೀಚೆಗೆ ಪಿಯಾನೋವನ್ನು ನುಡಿಸುತ್ತಿಲ್ಲ. ವರ್ಷದ ಕೊನೆಯ ದಿನದ ನಟ್ಟಿರುಳಿನಲ್ಲಿ ಹೊಸ ವರ್ಷವನ್ನು ಉದ್ಘಾಟಿಸಲು ಅವಳೊಮ್ಮೆ ಅದನ್ನು ಬಾರಿಸುತ್ತಾಳೆ.

ಈಯೆಲ್ಲ ಚಟುವಟಿಕೆಗಳಲ್ಲಿ ಮಾತೃಶ್ರೀಯ ಯಾವ ಚಟುವಟಿಕೆ ಅರ್ಥಪೂರ್ಣವಾದದ್ದು? ಅವಳ ನೋಟ ಮತ್ತು ಮುಗುಳ್ನಗೆ, ನಿಜವಾಗಿಯೂ ಎಲ್ಲರೂ ಇದನ್ನೊಪ್ಪುತ್ತಾರೆ; ಆದರೆ ಅಷ್ಟನ್ನೇ ಹೇಳಿಬಿಟ್ಟರೆ ಸಾಕಾಗದು. ಅವಳ ನೋಟವೂ ಮಂದಸ್ಮಿತವೂ ಅಪಾರ್ಥಿವ, ಸ್ವರ್ಗೀಯ. ಪಾಂಡಿಚೇರಿಗೆ ಬರುವ ಸಂದರ್ಶಕರು ಕೇವಲ ಅಷ್ಟಕ್ಕಾಗಿ ಅಲ್ಲಿಗೆ ಹೋದೆವೆಂದು ಹೇಳುತ್ತಾರೆ; ಅವರಿಗೆ ಮತ್ತೆ ಯಾವ ಉದ್ದೇಶವೂ ಇರುವುದಿಲ್ಲವಂತೆ, ಅವಳ ನೋಟವೂ ಮುಗುಳ್ನಗೆಯೂ ಉಲ್ಲಾಸಕರ, ಉನ್ನತಿಕರ–ಅದು ಅವರ್ಣನೀಯ; ಅವನ್ನು ಕಂಡೇ ಅನುಭವಿಸಬೇಕು. ನಿನಗಾಗಿಯೇ ಅವಳು ಹಾಗೆ ಮಂದಸ್ಮಿತ ಬೀರುವಳೆಂದು ನಿನಗೆನ್ನಿಸತೊಡಗುವುದು.

ಆದರೆ ಒಬ್ಬ ಕುರೂಪಿಯೂ ವಿಕಾರಿಯೂ ಆದವನು ಹೋದರೂ ಅದೇ ಪ್ರಕಾರ ಅವನತ್ತ ಅವಳು ಮಧುರವಾದ ಮುಗುಳ್ನಗೆಯಾಡುವಳು, ಆಗ ನೀನು ಆಶ್ಚರ್ಯ ಪಡುವೆ. ನೀನು ಎಷ್ಟು ಸಲ ಅವಳೆಡೆಗೆ ಹೋದರೂ ಅದೇ ಬದಲಾಗದ ಮುಗುಳ್ನಗೆಯನ್ನು ನೋಡುವೆ.

ಅಲ್ಲಿ ಹೋಗಿ ನೀನು ಅವಳೆದುರು ನಿಂತರೆ, ಅವಳು ನಿನ್ನತ್ತ ನೋಡುವಳು– ಅದಕ್ಕೂ ಹೆಚ್ಚಾಗಿ, ನಿನ್ನೊಳಹೊಕ್ಕು ನೋಡುವಳು. ಆ ನೋಟವೂ ನಿನ್ನ ಎದೆಯಾಳವನ್ನು ಬಗೆದು ಹೋಗುವುದು ಮತ್ತು ಅವಳಲ್ಲಿ ಮುಚ್ಚುಮರೆ ಯಾವುದೂ ಇಲ್ಲವೆಂಬುದು ನಿನ್ನ ಅನುಭವಕ್ಕೆ ಬರಲಾರಂಭಿಸುತ್ತದೆ. ಅನಂತರ ಅನುಗ್ರಹ ಪೂರ್ಣವಾಗಿ (ಪ್ರಸನ್ನತೆಯಿಂದ) ನಿನ್ನತ್ತ ಮಂದಹಾಸ ಬೀರುವಳು; ಅದರ ಪರಿಣಾಮ ಎಂಥದೆಂದರೆ ನಿನ್ನಲ್ಲಿರುವ ಕತ್ತಲೆಲ್ಲವೂ ನಿನ್ನಿಂದ ಮಾಯವಾಯ್ತೆನ್ನಿಸುತ್ತದೆ ನಿನಗೆ. ನಿನ್ನ (ವ್ಯಕ್ತಿತ್ವದ) ಪ್ರಚ್ಛನ್ನ ಮೂಲೆಯಲ್ಲಿರುವ ಅಂಧಕಾರಮಯವಾದ ಮಚ್ಚೆಯನ್ನು ಸರಿಯಾಗಿ ಗುರುತಿಸಿ ಅವಳು ತನ್ನ ದಯಾಮಯವಾದ ಮುಗುಳ್ನಗೆಯಿಂದಷ್ಟೇ ಮುಟ್ಟಿ ಆ ಕಳಂಕವನ್ನು ನಿನ್ನಿಂದ ಒರೆಸಿ ತೆಗೆದಳೆಂದು ನಿನಗೆ ಭಾಸವಾಗುವುದು.

ಇದಾದ ಮೇಲೆ ಅವಳು ಹರಸಲೆಂದು ತನ್ನ ಕೈಯಿಂದ ನಿನ್ನ ತಲೆಯನ್ನು ಮುಟ್ಟುವಳು. ಅವಳ ಈ ಹಸ್ತಸ್ಪರ್ಶವು ನಿಶ್ಚಿತವಾದ ಒಂದು ಶಕ್ತಿಯನ್ನುಳ್ಳದ್ದು. ಅದು ನಿನ್ನ (ಮನದ) ನೋವುನುರಿಗಳನ್ನು ಪರಿಹರಿಸುವುದು; ಉದ್ವೇಗ–ಬೇಸರಗಳನ್ನು ತೊಡೆದು ಹಾಕುವುದು. ನೀನು ವಿಯೋಗದಿಂದ ದುಃಖಿಯಾಗಿ ಭಾರವಾದ ಎದೆಯೊಡನೆ ಅವಳೆಡೆಗೆ ಹೋದರೆ ನೀನು ಅವಳನ್ನು ಬಿಟ್ಟು ಬರುವಾಗ ನಿರ್ದುಃಖಿಯೂ ಇಡಿಯೂ ಆಗಿ ಬರುವೆ. ಇದು ಪ್ರತಿದಿನದ ಅನುಭವ. ತಮ್ಮ ಬಂಧುಬಳಗಗಳನ್ನು. ಅಕ್ಕರೆಯ ಪುತ್ರನನ್ನು, ಗಂಡಂದಿರನ್ನು ಕಳೆದುಕೊಂಡ ಎಷ್ಟು ಜನ ದುಃಖ ಭಾರ ಮತ್ತು ಅವಳಲ್ಲಿಗೆ ಹೋಗಿ ಬರುವುದಿಲ್ಲ! ಅವಳು ಅವರನ್ನು ತನ್ನ ಕಿರುಮನೆಗೆ ಕರೆದೊಯ್ಯುತ್ತಾಳೆ; ಬಾಗಿಲು ಹಾಕುತ್ತಾಳೆ. ಯಾರಿಗೂ ಅರಿಯದ ಏನನ್ನೋ ಮಾಡುತ್ತಾಳೆ; ಅದರಿಂದ ಅವರು ಹೊರಗೆ ಬರುವಾಗ ತೃಪ್ತರಾಗಿ ಬರುವುದು ಕಂಡು ಬರುತ್ತದೆ. ಇದಾದ ಬಳಿಕ ಅವರು ತಮ್ಮ ಮಾಮೂಲು ವ್ಯವಹಾರವನ್ನು, ಏನೂ ಆಗಲಿಲ್ಲವೆಂಬಂತೆ, ಮಾಡುತ್ತ ಹೋಗುತ್ತಾರೆ.

ವಾಸ್ತವಿಕವಾಗಿ ನೋಡಿದರೆ ಅವಳು ಒಬ್ಬ ದಿವ್ಯ ದಾತ್ರಿ. ಅವಳು ಪಾರ್ಥಿವ ದಾನವನ್ನು ಕೊಡಳು, ಅದಕ್ಕೂ ಹೆಚ್ಚು ಬೆಲೆಯ ವಸ್ತುವನ್ನು ಕೊಡುತ್ತಾಳೆ. ಇದನ್ನವಳು ಮೂಲಭೂತವಾಗಿ ಎರಡು ತರಹಗಳಿಂದ ಮಾಡುತ್ತಾಳೆ. ಶ್ರೀ ಅರವಿಂದರು ಹೇಳುವಂತೆ, "ಉಭಯ ರೀತಿಯಿಂದ ಮಹಾತಾಯಿ ಕೊಡುತ್ತಾಳೆ: ಕಣ್ಣುಗಳ ಮೂಲಕ ಅಂತರ್ಮದಕ್ಕೂ ಕೈಗಳ ಮೂಲಕ ಭೌತಿಕ ಭಾಗಕ್ಕೂ ಅವಳು ಕೊಡುತ್ತಾಳೆ."

ಆದರೆ ಅವಳು ಇನ್ನೂ ಅನೇಕ ವಿಧದಿಂದ ಅವಳು ಕೊಡುತ್ತಾಳೆ: ಹತ್ತಿರವಿದ್ದವರಿಗಷ್ಟೇ ಅಲ್ಲ ಬಹುದೂರದಲ್ಲಿರುವವರಿಗೆ ಸಹ ಅವಳನ್ನು ಮೆಚ್ಚುವ ಹಾಗೂ ಗುರುವೆಂದು ಗ್ರಹಿಸಿದ ಸಾವಿರಾರು ಜನರು ಅವಳಲ್ಲಿ ಸಹಜ ಶ್ರದ್ಧೆಯನ್ನುಳ್ಳವರಾಗಿದ್ದಾರೆ. ಅವಳನ್ನು ಅವಲಂಬಿಸುತ್ತಾರೆ ಅವರು ಕಷ್ಟದಲ್ಲಿದ್ದಾಗಲೆಲ್ಲ ಅವಳಿಗೆ ಮೊರೆಹೋಗುತ್ತಾರೆ. ಅವರಲ್ಲಿ ಕೆಲವರು ಕಷ್ಟದಲ್ಲಿರುವವರು, ಕೆಲವರು ಅಪಾಯದಲ್ಲಿರುವವರು, ಕೆಲವರು 'ಅತ್ತದರಿ ಇತ್ತ ಪುಲಿ' ಎಂಬ ಸ್ಥಿತಿಯಲ್ಲಿರುವವರು, ಇನ್ನು ಉಳಿದವರು ರೋಗಗ್ರಸ್ತರು, ಅವರ ಕಾಗದ ಬರೆದೋ ಮೂಕವಾಗಿ ಪ್ರಾರ್ಥಿಸಿಯೋ ಅವಳ ನೆರವನ್ನು ಬೇಡುತ್ತಾರೆ. ಕಾಗದಗಳ ರಾಶಿಗಳೂ ಅತಿ ತ್ವರೆಯ ತಂತಿ ಸುದ್ದಿಗಳೂ ಪ್ರತಿದಿನವೂ ಸುರಿಯುತ್ತಿರುತ್ತವೆ. ಅವರಲ್ಲಿಯ ಪ್ರತಿಯೊಬ್ಬರಿಗೂ ಅವಳು ಉತ್ತರ ಬರೆಯುತ್ತಾಳೆ–ಅವಳಿಗೆ ಅತ್ಯುತ್ತಮವೆಂದು ಕಂಡ ಉತ್ತರವನ್ನು ಕೆಲವರಿಗೆ ಸ್ವಹಸ್ತಲೇಖನದಿಂದಲೂ ಕೆಲವರಿಗೆ ಕಾರ್ಯದರ್ಶಿಯ ಮೂಲಕವೂ ಕೆಲವರಿಗೆ ಮೌನದಿಂದಲೂ ಅವಳು ಉತ್ತರ ಕೊಡುತ್ತಾಳೆ. ಅದು ಯಾವರೀತಿಯದೇ ಆಗಿರಲಿ, ಅದು ಕೆಲಸ ಮಾಡುತ್ತದೆ, ಅವರವರ ಕಷ್ಟ ಪರಿಹಾರವಾಗುತ್ತದೆ.

ಅವರೆಲ್ಲರ ಅನುಭವಕ್ಕೂ ಅದು ಬಂದಿದೆ. ಅವರು ಯಾರೇ ಆಗಿರಲಿ, ಅವರು ಎಲ್ಲಿಯೇ ಇದ್ದಿರಲಿ ಅವರು ಭೂಮಿಯ ಈ ಭಾಗದವರಾಗಿರಲಿ, ಇನ್ನೊಂದು ಭಾಗದವರಾಗಿರಲಿ ಅವರಿಗೆ ತಾವು ಮಹಾ ಮಾತೃಶ್ರೀಯ ರಕ್ಷಣೆಯಲ್ಲಿಯೂ ಉಪಸ್ಥಿತಿಯಲ್ಲಿಯೂ ಇರುವಂತೆ ಹಾಗೂ ಅವಳ ಆಶೀರ್ವಾದಗಳಿಂದ ಆವೃತರಾದವರಂತೆ ಮತ್ತು ತಾವು ಸುರಕ್ಷಿತರಾಗಿರುವಂತೆ ತೋರುತ್ತದೆ. ಕೆಲವು ಸಲ ಸೂಕ್ಷ್ಮವಾಗಿ, ಆದರೆ ಸ್ಪಷ್ಟವಾಗಿ ಯಾವುದೋ ಒಂದು ಅಕಲ್ಪನೀಯ ರೀತಿಯಿಂದ ಅವರಿಗೆ ಅವಳ ದರ್ಶನವಾಗುವುದು.

ಕೆಲವರೆಂದದ್ದುಂಟು: ಅವಳ ನೆರವಿಗಾಗಿ ಬೇಡಿದಾಗ ಒಂದು ವಿಲಕ್ಷಣವಾದ ಎಲ್ಲಿಂದಲೋಬಂದ ಸುವಾಸನೆಯ ಮೂಲಕ ಅವಳು ಬಂದಂತೆನ್ನಿಸುತ್ತದೆ. ಆ ಸುಗಂಧವು ಹೂವು–ಲೋಬಾನಗಳಿಂದ ಬಂದಂತಿರುತ್ತದೆ. ಅದು ಬಹಳ ಹೊತ್ತು ಇರುತ್ತದೆ. ಬೇಡಿಕೆಯು ಬಹಳ ಭಕ್ತಿನಿರ್ಭರವೂ ತೀವ್ರವೂ ಆಗಿದ್ದಾಗ ಈ ಸುಗಂಧವು ತಲೆದೋರಿ ಇಡಿ ಅವರಣವನ್ನು ತುಂಬಿಕೊಳ್ಳುತ್ತದೆ. ಕೆಲವೊಮ್ಮೆ ಕೂಡಲೇ ಸಂಭವಿಸಬಹುದಾದ ಯಾವ ಅಪಾಯವೂ ಒಬ್ಬನ ಅರಿವಿಗೆ ಬಂದಿರದಿದ್ದಾಗಲೂ ಅವನು ಒಮ್ಮೆಲೇ ಆ ಸುಗಂಧವನ್ನು ಅನುಭವಿಸಿ ಆಶ್ಚರ್ಯಪಟ್ಟು ಮರುದಿನ ರೈಲಿನವಘಡದಂತಹ ಮರಣಾಂತಿಕ ಆಪತ್ತಿನಿಂದ ಅತ್ಯಲ್ಪಕಾಲದಲ್ಲಿ ತಪ್ಪಿಸಿಕೊಂಡದ್ದನ್ನು ಕಂಡದ್ದುಂಟು ಮಾತೃಶ್ರೀ ಅದನ್ನು ಮೊದಲೇ ತಿಳಿದು ಸಕಾಲದಲ್ಲಿ ನಡುವೆ ಬಂದು ತಪ್ಪಿಸಿರಬೇಕು.

ಆದರೆ ಅಂಥ ಪ್ರತಿಕೂಲ ಸಂನಿವೇಶಗಳಲ್ಲಲ್ಲದೆ ಎಷ್ಟೋ ಶುಭ ಸಂನಿವೇಶಗಳಲ್ಲಿಯೂ ಮಾತೃಶ್ರೀಯಿಂದ ನೀವು ಹರಕೆಗಳನ್ನು ಪಡೆಯಬಲ್ಲಿರಿ. ಅವಳ ಆರಾಧಕರು ಹುಟ್ಟುಹಬ್ಬ, ಮದುವೆ, ಭೂವಿಕ್ರಯ, ಗೃಹವಿಕ್ರಯ ಮುಂತಾದ ಸಂದರ್ಭಗಳಲ್ಲಿ ಸಹ ಅವಳ ಆಶೀರ್ವಾದಗಳನ್ನು ಬೇಡುತ್ತಾರೆ. ಒಬ್ಬರು ಮೋಟಾರು ಕಾರನ್ನು ಕೊಳ್ಳುವ ಮೊದಲು ಅವಳ ಹರಕೆಯನ್ನು ಪಡೆದು ಮೊದಲ ಸಲ ಹತ್ತಿ ತಿರುಗಾಡಲೆಂದು ಅವಳೆಡೆಗೆ ಕಳಿಸಿದರು. ಆದರೆ ವರ್ಧಂತಿಗಳಲ್ಲಿ ಅವಳು ತನ್ನ ಭಕ್ತರಿಗೆ ಯಾವಾಗಲೂ ತಪ್ಪದೆ ಸ್ವಹಸ್ತದಿಂದ 'ಶುಭವಾಗಲಿ' (ಸುದೈವ ಒದಗಲಿ) ಎಂದು ಹರಕೆಗಳನ್ನು ಬರೆದು ಕಳಿಸುತ್ತಾಳೆ.

ಇಡಿ ವರ್ಷಗಳಲ್ಲಿ ಅಂಥ ಎಷ್ಟು ಹರಕೆಗಳನ್ನವಳು ಕಳಿಸಬೇಕಾಗುವುದೆಂಬುದನ್ನು ಯಾರಾದರೂ ಊಹಿಸಿಕೊಳ್ಳಬಹುದು. ಆದರವಳು ಸುಸ್ತಾಗುವುದೇ ಇಲ್ಲ, ಇಲ್ಲವೆನ್ನುವುದೇ ಇಲ್ಲ, ಕೇಳಿದವರೆಲ್ಲರಿಗೂ ತನ್ನ ದಿವ್ಯ ಶಕ್ತಿಯಿಂದ ನೆರವೀಯಲು ಅವಳು ಯಾವಾಗಲೂ ಸಿದ್ಧಳಾಗಿರುತ್ತಾಳೆ.

ಪ್ರಾಣಿಗಳ ಬಗೆಗೆ ಸಹ ಅವಳಲ್ಲಿ ದಯೆಯಿದೆ. ಅವಳ ಹತ್ತಿರ ಒಂದು ಒಳ್ಳೆಯ ನಾಯಿಯಿತ್ತು. ಅದೀಗ ಸತ್ತು ಹೋಗಿದೆ. ಅವಳೊಡನೆ ಅವಳ ಬೆಕ್ಕೊಂದು ಕಣ್ಣುಮುಚ್ಚಿಕೊಂಡು ಧ್ಯಾನಕ್ಕೆ ಕುಳಿತುಕೊಳ್ಳುತ್ತಿತ್ತು. ಒಮ್ಮೆ ಆ ಬೆಕ್ಕಿಗೊಂದು ಚೇಳು ಕಚ್ಚಿತು. ಆಗ ಅದು ಆ ನೋವನ್ನು ಪರಿಹರಿಸೆಂದು ಕಣ್ಣುಗಳ ಮೂಲಕ ಪ್ರಾರ್ಥಿಸಿಕೊಂಡಿತು.

ತನಗೆ ಆಹಾರ ಬೇಕಾದಾಗೆಲ್ಲ ಒಂದು ಕಪ್ಪು ಕಾಗೆ ಅವಳ ತಳಿದಂಡೆಯ ಮೇಲೆ ಬಂದು ಕುಳಿತುಕೊಳ್ಳುತ್ತಿತ್ತು. ಮಾತೃಶ್ರೀ ಅದನ್ನು "ಕರಿಯ" ನೆಂದು ಕರೆಯುತ್ತಿದ್ದಳು; ಆಗ ಆ ಕಾಗೆ ನಿರ್ಭಯವಾಗಿ ಬಂದು ಅವಳ ಕೈಯಲ್ಲಿದ್ದ ಆಹಾರವನ್ನು ತಿಂದುಕೊಂಡು ಹೋಗುತ್ತಿತ್ತು. ಇದು ಬಹಳ ವರ್ಷಗಳವರೆಗೆ ನಡೆಯಿತು. ಮಾತೃಶ್ರೀ ಮಾಡುವುದನ್ನು ನೋಡಿ ಅವಳ ಕೆಲ ಸೇವಕರು ಹಾಗೆ ಮಾಡಹೋದಾಗ ಕೈಯಲ್ಲಿ ಆಹಾರವನ್ನಿಟ್ಟುಕೊಂಡು ಕರೆದರೂ ಅದು ಒಮ್ಮೆಯೂ ಅವರ ಹತ್ತಿರ ಬರಲೂ ಇಲ್ಲ. ಕೊಡಲೆತ್ತಿದ ಆಹಾರವನ್ನು ತಿನ್ನಲೂ ಇಲ್ಲ.

ಮಾತೃಶ್ರೀಗೆ ಹರಿತವಾದ ನೆನಪಿನ ಶಕ್ತಿಯಿದೆ. ಅವಳು ಅತಿ ಚಿಕ್ಕ ಸಂಗತಿಯನ್ನೂ ಮರೆತು ಬಿಡಳು. ಒಮ್ಮೆ ಕಲ್ಕತ್ತದಿಂದ ಬಂದ ಹೆಂಗಸೊಬ್ಬಳು ಶ್ರೀ ಅರವಿಂದರ ಕಿರುಮನೆಯಲ್ಲಿ ಕೆಲಕಾಲ ಕುಳಿತು ಧ್ಯಾನಮಾಡುವ ಆಸೆ ತನಗಿದೆ ಎಂದಳು. ಅನಂತರ ಅವಳು ಅದನ್ನು ಸಂಪೂರ್ಣವಾಗಿ ಮರೆತುಬಿಟ್ಟಳು. ಒಂದು ತಿಂಗಳಿದ್ದ ಮೇಲೆ ಅವಳು ಹೋಗಲು ಮಾತೃಶ್ರೀಯ ಅಪ್ಪಣೆಯನ್ನು ಕೇಳಹೋದಾಗ, "ಶ್ರೀ

ಅರವಿಂದರ ಕೋಣೆಯಲ್ಲಿ ಕುಳಿತು ನೀನು ಧ್ಯಾನ ಮಾಡುವುದಿಲ್ಲವೇ?" ಎಂದು ಮಾತೃಶ್ರೀ ಕೇಳಿ ಬಿಟ್ಟಳು.

ಅವಳ ಮಾತೆಂದೂ ತಪ್ಪದು. ಇದಕ್ಕೆ ಹಲವಾರು ಉದಾಹರಣೆಗಳಿವೆ. ಒಮ್ಮೆ ಒಬ್ಬರಿಗೆ ಆಟದ ಬಯಲಿನಲ್ಲಿದ್ದಾಗ ಹೊಟ್ಟೆ ನೋವು ಬಂತು. ಮಾತೃಶ್ರೀಗೆ ಅದು ಗೊತ್ತಾಗಿ ಅವಳು ಉಪ್ಪು ಹಾಕಿದ ಕೆಲ ಬಾದಾಮಿಗಳನ್ನು ತಿನ್ನಗೊಟ್ಟಳು. ಇದರಿಂದ ಅವರ ನೋವು ಹೊರಟು ಹೋಗುವುದು ಎಂದಳವಳು. ಅವರು ಬಾದಾಮಿ ತಿಂದರು, ಅವರ ಹೊಟ್ಟೆ ನೋವು ಹೊರಟುಹೋಯ್ತು. ಮತ್ತೊಬ್ಬ ಜ್ವರ ಬಂದಿದ್ದಾಗ ಆಟದ ಮೈದಾನಕ್ಕೆ ಹೋದ ಮತ್ತು ಆನುಷಂಗಿಕವಾಗಿ ಆ ವಿಷಯವನ್ನು ಮಾತೃಶ್ರೀಗೆ ಹೇಳಿದ ಅವಳು "ನೋಡುತ್ತೇನೆ" ಎಂದು ಅವನ ಹಣೆಯನ್ನು ಮುಟ್ಟಿದ ಸ್ವಲ್ಪಕಾಲಾವಧಿಯಲ್ಲೇ ಅವನ ಜ್ವರ ಅಡಗಿತು. ಆಶ್ರಮವಾಸಿಯೊಬ್ಬನಿಗೊಮ್ಮೆ ನಿನ್ನ ಮಗನಿಗೆ ಬಹಳ ಹುಷಾರಿಲ್ಲ ಎಂದು ಕಲ್ಕತ್ತದಿಂದ ತಂತಿ ಬಂತು. ಅಲ್ಲಿಗೆ ಹೋಗಲು ಅಪ್ಪಣೆ ಪಡೆಯಲೆಂದು ಅವನು ಮಾತೃಶ್ರೀಯಡೆಗೆ ಹೋದ. ಆದರವಳೆಂದಳು ಅವಸರವೇನಿಲ್ಲ, ಅವನಿಗೆಲ್ಲ ಸರಿಹೋಗುವುದು ಎಂದು. ಅವನಿಗಾಶ್ಚರ್ಯವಾಯಿತು. ಆದರೆ ಕೆಲದಿನಗಳಾದ ಮೇಲೆ ತನ್ನ ಮಗನ ಕಾಯಿಲೆ ಗುಣವಾಯ್ತೆಂದು ಅವನಿಗೆ ಸಮಾಚಾರ ಸಿಕ್ಕಿತು.

ಆಗ ಈಗ ಮಾತೃಶ್ರೀಯ ಆಕಾರ ಬದಲಾಗುವುದೆಂಬ ಅಪೂರ್ವ ಸಂಗತಿಯನ್ನು ಬಹಳ ಜನರು ನೋಡಿದ್ದಾರೆ. ಕೆಲವೊಮ್ಮೆ ಅವಳು ಅತಿ ಸುಂದರಿಯಾಗಿ ತೋರುವಳು (ಮಹೇಶ್ವರಿಯಂತೆ); ಕೆಲವೊಮ್ಮೆ ಓಜಸ್ವಿನಿಯಾಗಿಯೂ ರಭಸಯುಕ್ತಳಾಗಿಯೂ ತೋರುವಳು; ಕೆಲವು ಸಲ ಸುವರ್ಣಮಯಿಯಾಗಿ ತೋರುತ್ತಾಳೆ (ಮಹಾಲಕ್ಷ್ಮಿಯಂತೆ): ಮತ್ತೆ ಕೆಲ ಸಲ ಸರ್ವಶುಕ್ಲೆಯಾಗಿ ಕಾಣುತ್ತಾಳೆ (ಮಹಾಸರಸ್ವತಿಯಂತೆ). ಇದರ ಬಗೆಗೆ ಶ್ರೀ ಅರವಿಂದರು, "ಪಾರ್ಥಿವ ಶರೀರದ ಹಿಂದೆ ಮಾತೃಶ್ರೀಯ ಅನೇಕ ರೂಪಗಳೂ ಶಕ್ತಿಗಳೂ ವ್ಯಕ್ತಿತ್ವಗಳೂ ಇವೆ" ಎನ್ನುತ್ತಾರೆ.

ಅನೇಕರಿಗೆ ಅವಳ ಸುತ್ತ ವಿಶಿಷ್ಟವಾದ ಒಂದು ಪರಿಮಳವಿದೆ ಎನ್ನಿಸಿದೆ. ಇದನ್ನು ಶ್ರೀ ಅರವಿಂದರಿಗೆ ಹೇಳಿದಾಗ "ಮಾತೃಶ್ರೀಯ ಪರಿಮಳದಲ್ಲಿ ಜ್ಯೋತಿಗಳ ಹಾಗೂ ಶಕ್ತಿಗಳ ಲಾಸ್ಯವಿದೆ... ಜನ ಅದನ್ನು ಅರಿಯಬೇಕೆಂಬ ಇಚ್ಛೆ ಮಾತೃಶ್ರೀಗಿಲ್ಲ–ತಮ್ಮಷ್ಟಕ್ಕೆ ತಾವೇ ಆಶ್ರಮದ ೨೦–೩೦ ಜನರು ಅದನ್ನರಿತರು ಎಂದು ನಾನು ನಂಬುತ್ತೇನೆ."

ಮಾತೃಶ್ರೀಯ ವ್ಯಕ್ತಿತ್ವದ ಬಗೆಗೆ ಇನ್ನೂ ಎಷ್ಟೋ ಹೇಳಬಹುದು. ಇವನ್ನೆಲ್ಲ ಹೇಳುತ್ತ ಹೋದರೆ ಅಂತ್ಯವೇ ಇಲ್ಲವಾಗುವುದು. ಆದರೆ ಅವಳ ವ್ಯಕ್ತಿತ್ವದ ಇತರ ಮುಖಗಳಿವೆ. ಅವುಗಳತ್ತ ನಾವು ತಿರುಗೋಣ.

# ದುರ್ಗೆಯಾಗಿ

ಶ್ರೀ ಅರವಿಂದರ ಪ್ರಕಾರ, "ದುರ್ಗೆಯು ಮಾತೃಶ್ರೀಯ ರಕ್ಷಣಾಶಕ್ತಿ." ದುರ್ಗತಿಯಿಂದ ರಕ್ಷಿಸುವವಳು ದುರ್ಗೆ. ಅವಳು ಸರ್ವದಿಕ್ಕುಗಳಲ್ಲಿ ಕೆಲಸ ಮಾಡುವ ದೇವಬಲ. ಆದುದರಿಂದಲೇ ಅಸುರ ಸಂಹಾರಕ್ಕಾಗಿ ಹತ್ತು ಕೈಗಳಲ್ಲಿ ಹತ್ತು ಆಯುಧಗಳನ್ನು ಹಿಡಿದವಳನ್ನಾಗಿ ಚಿತ್ರಿಸಲಾಗುತ್ತದೆ. ವಾಸ್ತವಿಕವಾಗಿ ನೋಡಿದರೆ, ಅವಳು ಪರಮ ಸತ್ಯದ ಸೃಷ್ಟಿ ಸ್ಥಿತಿ ಲಯಕಾರಕ ಶಕ್ತಿ. ಗೋಪುರ ವೃತ್ತಗಳಿಂದ ವಿಕಾಸಪ್ರಕ್ರಿಯೆಯನ್ನು ಸಾಗಿಸಿಕೊಂಡು ಹೋಗತಕ್ಕವಳವಳು, ಅವಳೇ ಪರಾಪ್ರಕೃತಿ. ಅವಳು ಅಪರಾಪ್ರಕೃತಿಗಿಂತ ಬಹಳ ಮೇಲಿನವಳು. ಅಪರಾಪ್ರಕೃತಿಯು ನಮ್ಮ ವ್ಯಾವಹಾರಿಕ ಪ್ರಜ್ಞೆಯನ್ನು ಪ್ರೇರಿಸುವವಳು. ಅವಳು ಮೇಲಿನಿಂದ ಬಂದ ಆಜ್ಞೆಯನ್ನು ಕುರುಡು ನಂಬಿಗೆಯಿಂದ ಪಾಲಿಸುತ್ತ ಹೋಗುವವಳು; ಆ ನಿಯಮಗಳನ್ನು ಕಣ್ಣು ಮುಚ್ಚಿಕೊಂಡು ಅನುಸರಿಸುವವಳು.

ಅಪರಾಪ್ರಕೃತಿಯ ವಿಧಿ–ಕರ್ಮಗಳ ನಡುವೆ ಒಮ್ಮೊಮ್ಮೆ ಮಾತೃಶ್ರೀಯು (ಪರಾಪ್ರಕೃತಿಯು) ಯಾವುದಾದರೂ ಒಂದು ವಿಶಿಷ್ಟ ಉದ್ದೇಶಕ್ಕಾಗಿ ಅನುಗ್ರಹ ಬುದ್ಧಿಯಿಂದ ಬರುತ್ತಾಳೆ; ಉದಾಹರಣೆಗಾಗಿ ವಿಕಾಸದ ಮಂದಗತಿಯನ್ನು ತ್ವರಿತಗೊಳಿಸುವುದರ ಸಲುವಾಗಿ ಅದರಿಂದ ಅವಳು ತನ್ನ ನಿಸರ್ಗವನ್ನು ಮೀರಿ ಕೆಲಸ ಮಾಡುವ ಸರ್ವಶಕ್ತ ಮಹಿಮೆಯಿಂದ ವಿವಿಧ ರಕ್ಷಕ ಶಕ್ತಿಗಳನ್ನು ಪ್ರಕಟಿಸುವಳು.

ಹೊಸ ಪ್ರಜ್ಞೆಯೊಂದನ್ನು ಭೂಲೋಕಕ್ಕೆ ತರುವುದರ ಮೂಲಕ ಮಾತೃಶ್ರೀಯು ಜೀವನದ ಮಾಮೂಲು ಗತಿಗಳಿಗೆ ಹೊಸ ತಿರುವನ್ನು ಕೊಡಲು ಮಾತೃಶ್ರೀಯು ಮಾನವರೂಪ ತಳೆದು ಇಲ್ಲಿಗೆ ಬಂದಳು. ಅವಳ ಶಕ್ತಿ ಹೇಗೆ ಕೆಲಸ ಮಾಡುವುದೆಂಬುದನ್ನು ಯಾರೂ ಅರಿಯರು. ಅದು ಮೇಲೆಮೇಲಿಂದ ಕಾಣದು. ಆದರೆ ಬಹು ವಿಧವಾಗಿ ಅದರ ಪರಿಣಾಮಗಳು ಕಂಡುಬರುವುವು.

ಯೋಗಶಕ್ತಿ, ಮಾಯಾಶಕ್ತಿ, ರೋಗನಿವಾರಕಶಕ್ತಿ, ಅಪಾಯ ಪರಿಹಾರಕಶಕ್ತಿ, ಭಯನಿವಾರಣಾಶಕ್ತಿ, ವರಪ್ರದಾನಶಕ್ತಿ, ಮತ್ತು ಪ್ರಬೋಧನಶಕ್ತಿಗಳು ಅವಳ ಕೆಲವು ಶಕ್ತಿಗಳು.

ಒಮ್ಮೆ ದಿಲೀಪಕುಮಾರರಾಯರು ಯೋಗಶಕ್ತಿಯ ವ್ಯಾವಹಾರಿಕ ಪ್ರಮಾಣವನ್ನು ತೋರಿಸಬೇಕೆಂದು ಅವಳನ್ನು ಕೇಳಿದರು.

ಈ ಕೆಳಗಿನ ಕಥೆಯು ಮುಂದೇನಾಯಿತೆಂಬುದನ್ನು ತಿಳಿಸುತ್ತದೆ:

"ಸರಳವಾಗಿ ಆದರೆ ಹರಿತವಾಗಿ ನಿನ್ನನ್ನು ಕೇಳಬಂದಿದ್ದೇನೆ ನಿನ್ನಲ್ಲಿ ಯೋಗಶಕ್ತಿ ಇರುವುದನ್ನು ಖಾತ್ರಿಮಾಡಿಕೊಡಲು ನನಗೊಂದು ಪ್ರಾಯೋಗಿಕ ನಿದರ್ಶನವನ್ನು ಕೊಡು– ಎಂಬುದಾಗಿ...

"ಮಾತೃಶ್ರೀ ಮತ್ತೊಮ್ಮೆ ಮಂದಹಾಸ ಬೀರಿದಳು. 'ನಾನು ಪ್ರಯತ್ನಿಸಬಲ್ಲೆ, ನೀನು ಉಪಹಾರ ಗೃಹದಲ್ಲಿದ್ದೀಯಾ? ನೀನು ಇರುಳಲ್ಲಿ ಎಷ್ಟು ಹೊತ್ತಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತೀಯೆ? ಒಂಬತ್ತಕ್ಕೆ? ಆ ಹೊತ್ತಿಗೆ ನೀನು ನಿನ್ನ ಕೋಣೆಯಲ್ಲಿ ನೀನು ಧ್ಯಾನಮಾಡು. ನೀನು ನಿನ್ನ ಮನಸ್ಸನ್ನು ನನಗಾಗಿ ತೆರವು ಮಾಡು, ಆಗ ನಾನು ಇಲ್ಲಿಂದ ನಿನ್ನತ್ತ ಲಕ್ಷ್ಯವನ್ನು ಕೇಂದ್ರೀಕರಿಸುವೆನು. ವೈಜ್ಞಾನಿಕ ಅಥವಾ ಇನ್ನಿತರ ವ್ಯಾವಹಾರಿಕ ಎಂದು ವಿವರಿಸಲಾಗದ ಒಂದು ಅನುಭವ ನಿನಗೆ ಆಗುವುದು' ಎಂದು ಅವಳು ಸುಮ್ಮನೆ ಉತ್ತರ ಕೊಟ್ಟುಬಿಟ್ಟಳು.

"ಆ ಅನುಭವವು ಬಹಳ ವಿಲಕ್ಷಣವಾಗಿ ಬಂದಿತು. ಊಟವಾದ ಮೇಲೆ ನನ್ನ ಕಿರುಮನೆಗೆ ಹೋಗಿ ನೆಲದ ಮೇಲೆ ಕುಳಿತುಕೊಂಡೆ. ಅತಿ ವೇಗದಿಂದ ತಿರುಗುವ ಬೀಸಣಿಗೆಯದಿಂದ ಕೋಣೆ ಬಹಳ ತಂಪಾಗಿತ್ತು... ಆದುದರಿಂದ ಸಹಜವಾಗಿ ನಾನು ನಿರ್‌ದುಷ್ಟವಾದ ಆತ್ಮವಿಶ್ವಾಸದಿಂದ ಧ್ಯಾನಕ್ಕೆ ಕುಳಿತೆ. ಅನೇಕ ಸಂಗತಿಗಳನ್ನು ನೋಡಬಹುದೆಂದು ನಾನು ನಿರೀಕ್ಷಿಸಿದೆ; ಬಣ್ಣಗಳು; ಕೆಲ ಆಕೃತಿಗಳು; ನನ್ನ ಅದೃಷ್ಟ ಒಳ್ಳೆಯದಿದ್ದರೆ, ದೀಪ್ತ ರೂಪಗಳು, ಇವುಗಳನ್ನೆಲ್ಲಾ ನೋಡಬಹುದು–ಯಾರಿಗೆ ಗೊತ್ತು? ಆದರೆ ನಾನು ಎಚ್ಚರಿಕೆಯಿಂದಿರಬೇಕು ಎಂದುಕೊಂಡೆ...

"ಒಮ್ಮಿಂದೊಮ್ಮೆ ನನ್ನ ದೇಹ ಸೆಟೆದುಕೊಳ್ಳಲಾರಂಭಿಸಿದ್ದು ನನಗೆ ಕಂಡಿತು; ಮೈ ತುಂಬ ಬೆವರತೊಡಗಿತು; ಆಮೇಲೆ ನನಗೆ ಭಯವಾಗುವಷ್ಟು ವೇಗದಿಂದ ನನ್ನ ಎದೆ ಬಡಿದುಕೊಳ್ಳಲಾರಂಭಿಸಿತು. ಅದರಿಂದ ನನ್ನ ಅಸ್ವಾಸ್ಥ ಸಂಪೂರ್ಣವಾಯ್ತು. ಇದೆಲ್ಲ ಏನು? ಕೂಡಲೇ ನಾನು ಜ್ಞಾಪಿಸಿಕೊಂಡು ಮಾತೃಶ್ರೀಯ ಹೆಸರನ್ನು ಜಪಿಸತೊಡಗಿದೆ, ಎದೆಬಡಿತ ಕೂಡಲೇ ನಿಂತಿತು. ಆದರೆ ಬೆವರಿನಿಂದ ನನ್ನ ಮೈಯೆಲ್ಲ ಒದ್ದೆಯಾಗಿಬಿಟ್ಟಿತ್ತು; ನನ್ನ ದೇಹದ ಬಿಗಿತ ಹೆಚ್ಚಾಯಿತು; ಮಾಂಸಖಂಡಗಳು ನೋವಾಗುವಷ್ಟು ಬಿಗಿದುಕೊಂಡವು... ಯಾವುದೋ ಒಂದು ಶಕ್ತಿಯು ನನ್ನ ಮೇಲೆ ಅಧಿಕಾರ ನಡೆಸುತ್ತಿದೆ ಎಂಬುದು ನನಗೆ ಖಾತ್ರಿಯಾಯಿತು ಅದರಲ್ಲೂ ಹುಚ್ಚು ಹುಚ್ಚಾಗಿ ಅಲ್ಲದಿದ್ದರೂ ಯದ್ವಾತದ್ವಾ ಆಗಿ.

ಮಾರನೆಯ ದಿನ ಬೆಳಿಗ್ಗೆ ನನ್ನ ವಿಲಕ್ಷಣ ಅನುಭವಗಳ ವಿವರವೆಲ್ಲವನ್ನೂ ಮಾತೃಶ್ರೀಗೆ ಹೇಳಿದೆ. "ನನಗೆ ಶಾಂತಿಯನ್ನೂ ಸಂತೋಷವನ್ನೂ ಇನ್ನೂ ಇತರ ಗ್ರಾಹ್ಯವಾದವುಗಳನ್ನೂ ಕೊಡುವುದನ್ನು ಬಿಟ್ಟು ಅರ್ಥಹೀನವಾದ ನೋವನ್ನೇಕೆ ಉಂಟುಮಾಡಿದೆ?" ಎಂದು ಮಾತೃಶ್ರೀಯನ್ನು ಕೇಳಿದೆ.

"ನಾನು ನಿನಗೆ ನೋವನ್ನುಂಟುಮಾಡಬೇಕೆಂದು ಬಯಸಲೇ ಇಲ್ಲ." ಎಂದು ಕಚಗುಳಿಗೊಳಗಾದವಳಂತೆ ಅವಳು ನಕ್ಕಳು. "ನೀನು ನನ್ನ ಶಕ್ತಿಯನ್ನು ತಡೆಯುತ್ತಿದ್ದೆ; ನಿನ್ನ ವಿವೇಕಾರೂಢವಾದ ನಾಸ್ತಿಕತೆ ಮತ್ತು ಖಾತ್ರಿಯಾದ ಅಜ್ಞಾನಗಳ ಸರ್ವಾಯುಧಗಳಿಂದ ಅದನ್ನು ವಿರೋಧಿಸದೆ ಇದ್ದಿದ್ದರೆ ನಿನಗದು ಶಾಂತಿ–ಸಂತೋಷಗಳನ್ನು ತಂದುಕೊಡುತ್ತಿತ್ತು. ದೇವರಲ್ಲಿ ನಂಬಿಗೆ ಬೇಕು. ಆದರೆ ನೀನು ಚಿಂತೆಮಾಡಬೇಕಾಗಿಲ್ಲ. ಏಕೆಂದರೆ ನೀನು ಒಳ್ಳೆಯ ಗ್ರಹೀತನೆಂಬುದನ್ನು ನಾನು ಕಂಡುಕೊಂಡೆ. ಈಗ ನಾನು ಹೆಚ್ಚಿಗೆ ಹೇಳುವುದಿಲ್ಲ. ನೀನು ಧ್ಯಾನಮಾಡುತ್ತ ಹೋಗು; ನನ್ನ ನೆರವು ಯಾವಾಗಲೂ ನಿನಗೆ ಇದ್ದೇ ಇದೆ."

ಮಾತೃಶ್ರೀಯ ಯೋಗಶಕ್ತಿಗೆ ಒಂದೇ ಒಂದು ಉದಾಹರಣೆಯಿದೆ. ಆ ವಿಶಿಷ್ಟ ಶಕ್ತಿಯಿಂದ ಆಕೆ ಆಶ್ರಮದ ೨ನೆಯ ಅಟ್ಟದಲ್ಲಿರುವ ತನ್ನ ಕೋಣೆಯಲ್ಲೇ ಕುಳಿತು ಹೊರಗೆ ನಡೆಯುವುದೆಲ್ಲವನ್ನೂ ತಿಳಿದುಕೊಳ್ಳುತ್ತಿದ್ದಳು. ತನ್ನ ಹತ್ತಿರ ಬರುವವರನ್ನು ಕಂಡಕೂಡಲೇ ಒಂದೇ ನೋಟದಿಂದ ಅವಳು ಅವರ ಮನಸ್ಸನ್ನೂ ವಿಚಾರಗಳನ್ನೂ ತಿಳಿದುಕೊಂಡು ಬಿಡುತ್ತಿದ್ದಳು. ಆದರವಳು ಅದರ ಬಗ್ಗೆ ಏನನ್ನೂ ಹೇಳುವುದಿಲ್ಲ. ಆದರೆ ನಿನ್ನ ಅಗತ್ಯವೇನೆಂಬುದನ್ನವಳು ಬಲ್ಲಳು ಮತ್ತು ನೀನು ಪ್ರಾಮಾಣಿಕನಾದರೆ ಅದು ನಿನಗೆ ಸಿಕ್ಕಿಯೇ ಸಿಕ್ಕುತ್ತದೆ. ಅವಳ ಬಾಗಿಲನ್ನು ನೀನು ಭಕ್ತಿಯಿಂದಲೂ ಪ್ರಾಮಾಣಿಕತೆಯಿಂದಲೂ ಪ್ರಾರ್ಥಿಸಿ ಬಡಿದರೆ ಬಾಗಿಲು ತೆರೆಯುವುದು ಮತ್ತು ನಿನಗೆ ಬೇಕಾದದ್ದು ನಿನಗೆ ದೊರಕುವುದು.

ನಮ್ಮ ಮಾರ್ಗದರ್ಶನಕ್ಕೆ ಮಾತೃಶ್ರೀಯ ಸಹಾಯಕ ಶಕ್ತಿಯು ಬೇಕೇ ಬೇಕು. ಆ ಸಹಾಯವಿಲ್ಲದೆ ನಾವೇನನ್ನೂ ಮಾಡಲಾರೆವು. ಆದರೆ ನಾವು ಪ್ರಾಮಾಣಿಕರೂ ಅವಲಂಬಿಗಳೂ ಆಗಿರಬೇಕು. ಅವಳೊಡನೆ ಸಂಪರ್ಕ ಇಟ್ಟುಕೊಂಡಿರಬೇಕು. ಯಾವಾಗಲೂ ಅವಳನ್ನು ನೆನಪಿನಲ್ಲಿಟ್ಟುಕೊಂಡು ಪ್ರಾರ್ಥಿಸಬೇಕು. ತಲೆ ಕೆಡಿಸಿಕೊಳ್ಳದೆ ಕ್ಷುಬ್ಧನಾಗದೆ ನೀನು ಯಾವ ಕಷ್ಟಕಾಲದಲ್ಲೇ ಆಗಲಿ ಅಥವಾ ತೊಂದರೆಯಲ್ಲೇ ಆಗಲಿ. ಅವಳನ್ನು ಶಾಂತವಾಗಿಯೂ ಸತತವಾಗಿಯೂ ಪ್ರಾರ್ಥಿಸಿಕೊಂಡರೆ ನಿನಗೆ ಅಗತ್ಯವಾದ ಎಲ್ಲವನ್ನೂ ಅವಳು ಮಾಡುವಳು. ಏಕೆಂದರೆ, ಅವಳ ಶಕ್ತಿಯು ಯಾವಾಗಲೂ ನಿನ್ನ ನೆರವಿಗೆ ಸಿದ್ಧವಾಗಿರುತ್ತದೆ. ಪ್ರಾಮಾಣಿಕತೆಯಿಂದ ನೀನವಳನ್ನು ಪ್ರಾರ್ಥಿಸಿದರೆ ನಿನಗೆ ಅವಳು ಓಗೊಡುತ್ತಾಳೆ. ನೀನು ಯಾವ ರೀತಿಯಿಂದ ಅವಳನ್ನು ಕರೆದರೂ ಸರಿಯೆ, ನಿನ್ನ ಆತ್ಮದಲ್ಲಿ ಪ್ರಾಮಾಣಿಕತೆಯಿರಬೇಕು. ಬೇರೆ ಬೇರೆ ಕಾಲಗಳಲ್ಲಿ ಶ್ರೀ ಅರವಿಂದರು ನಮಗೆ ಈ ವಿಷಯದ ಬಗೆಗೆ ಆಶ್ವಾಸನವನ್ನು ಕೊಟ್ಟಿದ್ದಾರೆ.

"ನೀನು ನಿನ್ನನ್ನು ಅವಳ ಕೈಗೆ ಸಮರ್ಪಿಸಿಕೊಂಡರೆ ಅವಳು ನಿನ್ನನ್ನು ಬಿಡಳು."

“ನೀನು ಇತರ ಕಾರ್ಯಗಳನ್ನು ಜಯಪ್ರದವಾಗಿ ಮಾಡಲಾರೆಯಾದರೆ ಮತ್ತೆ ಮತ್ತೆ ಅವಳನ್ನು ಪ್ರಾರ್ಥಿಸು.”

“ಮಾರ್ಗದಲ್ಲಿ ನಿನ್ನನ್ನು ನಡೆಸಿಕೊಂಡು ಹೋಗಲು ಮಹಾತಾಯಿ ಯಾವಾಗಲೂ ನಿನ್ನೊಡನೆ ಇದ್ದಾಳೆ ಎಂಬುದರ ಬಗ್ಗೆ ಅನುಮಾನಿಸದಿರು.”

“ನಿನಗೆ ಗೊತ್ತಾಗದಿರುವಾಗಲೂ ಮಾತೃಶ್ರೀಯ ಶಕ್ತಿಯು ನಿನ್ನೊಡನಿರುತ್ತದೆ.”

“ನಿನ್ನ ಹೃದಯದಲ್ಲಿರುವ ಎಲ್ಲವನ್ನೂ ದಿವ್ಯಮಾತೆಯ, ಎದುರಿಗಿಡು. ಅದರಿಂದ ಅವಳ ಬೆಳಕು ನಿನ್ನ ಸದ್ಗತಿಗಾಗಿ ಅದರ ಮೇಲೆ ಕೆಲಸಮಾಡಲು ಅನುಕೂಲವಾಗುವುದು.”

“ನಿರುತ್ಸಾಹಿಯಾಗದೆ ಮುನ್ನಡೆ, ಮಾತೃಶ್ರೀಯ ಶಕ್ತಿಯು ಎಲ್ಲ ಕಷ್ಟಗಳ ಮೂಲಕವೂ ಒಂದೇ ಸಮನಾಗಿ ಕೆಲಸ ಮಾಡುತ್ತಿರುತ್ತದೆ ಮತ್ತು ಬೇಕಾದ ಎಲ್ಲವನ್ನೂ ಮಾಡುತ್ತದೆ ಎಂಬುದನ್ನು ಮನ್ನಿಸಿ ಮುಂದೆ ಸಾಗು.”

ಶ್ರೀ ಗುರುವಿನ ಈ ಮಾತುಗಳು–ಹೃದಯದ ಆಳಕ್ಕೆ ತೆಗೆದುಕೊಳ್ಳತಕ್ಕಂಥವು. ಅಪಾಯಕರವಾದ ರೋಗಗಳನ್ನು ಅದ್ಭುತವಾಗಿ ಗುಣಪಡಿಸುವುದು ಮಾತೃಶ್ರೀಯ ಒಂದು ವೈಶಿಷ್ಟ್ಯ. ಅಸಂಖ್ಯಾತ ಜನರು ಗ್ರಾಹ್ಯವಾದ ಪ್ರಮಾಣಗಳನ್ನಿದಕ್ಕೆ ಕೊಡಬಲ್ಲರು. ಅಕಾಲಿಕ ಮರಣದಿಂದ ಅನೇಕರು ಉಳಿಸಲ್ಪಟ್ಟಿದ್ದಾರೆ. ಮರಣಾಂತಿಕ ಕಾಹಿಲೆಗಳಿಂದ ಅನೇಕರು ಮುಕ್ತರಾಗಿದ್ದಾರೆ. ಆದರೆ ಶ್ರದ್ಧೆ, ವಿಶ್ವಾಸ, ಆಂತರಿಕ ಮುಕ್ತಭಾವ ಇದ್ದಲ್ಲಿ ಮಾತ್ರ ಈ ಶಕ್ತಿ ಕೆಲಸ ಮಾಡೀತು ಎಂದು ಆಕೆ ಹೇಳಿದ್ದಾಳೆ. ನಿನಗೆ ಸಂಶಯ, ಅನುಮಾನ ಏನಾದರೂ ಇದ್ದರೆ, ಅದು ಬಹುಶಃ ಕೆಲಸಮಾಡದು. ದಿಲೀಪಕುಮಾರರು ತಮ್ಮ ಪುಸ್ತಕದಲ್ಲಿ, ಮಹಾತಾಯಿಗೆ ಪ್ರಾರ್ಥನೆ ಮಾಡಿಕೊಂಡು, ಗುಣಪಡಿಸಲಸಾಧ್ಯವಾದ. ತಲೆಗೆ ಬಂದ ರಕ್ತ ಪಿಂಡೀಕರಣದ ರೋಗದಿಂದ ತಾವು ಸಂಪೂರ್ಣವಾಗಿ ಗುಣಹೊಂದಿದ್ದನ್ನು ಉಲ್ಲೇಖಿಸಿದ್ದಾರೆ.

ನಮಗೇ ಸ್ವತಃ ಅಂಥ ಪ್ರಕರಣವೊಂದು ಗೊತ್ತಿದೆ. ಮಾತೃಶ್ರೀಯ ಪ್ರಾಮಾಣಿಕ ಭಕ್ತರಾದ ಕಲ್ಕತ್ತದ ಜತಿನ್‌ದಾಸ್‌ಗುಪ್ತರು ಸರಳ ಹೃದಯದವರು. ಅಂಥವರು ಸಿಗುವುದೇ ದುರ್ಲಭ. ಅವರ ಸೋದರಳಿಯನೊಬ್ಬ ಅವರಿಗೆ ಮಗನಂತಿದ್ದನು. ಸ್ವಲ್ಪ ದೂರದಲ್ಲಿ ವಾಸಿಸುತ್ತಿದ್ದ ಅವನು (ಸಣ್ಣ) ಕರುಳು ಹುಣ್ಣಿನಿಂದ ನರಳುತ್ತಿದ್ದನು. ಆ ಹುಣ್ಣು ಒಮ್ಮೆಲೇ ಒಡೆಯಿತು. ಅಂಥ ಗಂಭೀರ ಸ್ಥಿತಿಯಲ್ಲಿ ಶೀಘ್ರ ಶಸ್ತ್ರಚಿಕಿತ್ಸೆಗಾಗಿ ಅವನನ್ನು ಕಲ್ಕತ್ತಕ್ಕೆ ತರಲಾಯ್ತು. ಶಸ್ತ್ರಚಿಕಿತ್ಸೆಯಾದ ಮೇಲೆ ಚಿಕಿತ್ಸಕರು ಬಹಳ ಗಂಭೀರ ಮುಖ ಮುದ್ರೆಯನ್ನು ತಾಳಿದ್ದು ಕಂಡು ಬಂದಿತು. ಹುಣ್ಣು ಕೊಳೆತಿದ್ದುದರಿಂದ ಜೀವ ಉಳಿಯುವುದು ಕಷ್ಟ ಎಂದು ಅವರು ಹೇಳಿದರು. ಆದರೆ ಈ ನಡುವೆ

ಜತಿನ್‌ದಾಸರು ಮಾತೃಶ್ರೀಗೆ ತಂತಿಯ ಮೂಲಕ ಪ್ರಕರಣವನ್ನು ತಿಳಿಸಿ ಆಶೀರ್ವಾದವನ್ನು ಕೇಳಿದ್ದರು ಮತ್ತು ಮಾತೃಶ್ರೀ ತಂತಿಯ ಮೂಲಕವೇ ಆಶೀರ್ವಾದವನ್ನು ಕಳಿಸಿದ್ದಳು. ಇದಾದ ಮೇಲೆ ಜತಿನ್ ದಾಸರು ತಮಗೇನೂ ಸಂಬಂಧವಿಲ್ಲವೆಂಬಂತೆ ನಿಶ್ಚಿಂತರಾಗಿದ್ದರು. ರೋಗಿಗೆ ನಾಡಿ ಬಡಿತವೂ ನಿಂತು ಹೋಗಿದೆ ಎಂದು ಸೇವಕರು ಬಂದು ಹೇಳಿದರೂ ಆ ಬಗ್ಗೆ ಯಾವ ಉತ್ಕಂಠೆಯನ್ನೂ ವ್ಯಕ್ತಪಡಿಸದೆ ಅವರು ತಮ್ಮ ಮಾಮೂಲು ಕೆಲಸದಲ್ಲಿ ಮಗ್ನರಾಗಿದ್ದರು. ಆದರೆ ಕೆಲ ಗಂಟೆಗಳಾದ ಮೇಲೆ ನಾಡಿ ಬಡಿತ ಶುರುವಾದುದನ್ನೂ ರೋಗಿ ಮಾತಾಡತೊಡಗಿದ್ದನ್ನೂ ಸೇವಕರು ಕಂಡರು. ಶಸ್ತ್ರಚಿಕಿತ್ಸಕರೂ ಆಶ್ಚರ್ಯ ಪಟ್ಟರು. ಅನಂತರ ರೋಗಿ ಗುಣ ಹೊಂದಿದನು.

ಅವಳನ್ನು ಬಲ್ಲ ಮತ್ತು ಅವಳನ್ನು ಪೂಜಿಸುವ ಎಲ್ಲರಿಗೂ ಅಪಾಯದಲ್ಲಿ ಸಿಕ್ಕಿದವರನ್ನು ಕಾಯುವ ಅವಳ ಶಕ್ತಿ ಚೆನ್ನಾಗಿ ಗೊತ್ತು. ಕಾಗದ ಬರೆದು ಮಾತೃಶ್ರೀಗೆ ತಿಳಿಸಿದರಾಯಿತು; ಅವರು ದೂರದಲ್ಲಿದ್ದರೆ ಅವರಿಗೆ ಉತ್ತರ ದೊರಕದು; ಆದರೆ ಕ್ರಮೇಣ ಗಂಭೀರ ಅಪಾಯ ಕಡಿಮೆಯಾಗುತ್ತ ಹೋದುದು ಅವರಿಗೆ ಗೊತ್ತಾಗುವುದು; ಹಾಗೆ ಕಡಿಮೆಯಾಗುತ್ತ ಹೋಗಿ ಅದು ಅತ್ಯಲ್ಪವಾಗಿ ಕೊನೆಯಲ್ಲಿ ಅದೃಶ್ಯವೇ ಆಗುವುದು. ಕಾಗದ ಬರುವ ಮೊದಲೇ, ಕೆಲವು ಸಲ ಮಾತೃಶ್ರೀಗೆ ಅಪಾಯದ ಸಂಭವ ಗೊತ್ತಾಗುತ್ತಿತ್ತು; ಆಗಲೇ ಅವಳು, ತನ್ನ ಶಕ್ತಿಯನ್ನು ಪ್ರಯೋಗಿಸಿರುತ್ತಿದ್ದಳು, ಹೀಗೆ ಬೇಕಾದಾಗಲೆಲ್ಲ ಅವಳು, ತನ್ನ ಭಕ್ತರು ಹತ್ತಿರವಿರಲಿ ಇಲ್ಲವೆ ದೂರದಲ್ಲಿರಲಿ, ತನ್ನ ರಕ್ಷಕ ಶಕ್ತಿಯನ್ನು (ಅವರಿಗಾಗಿ) ಬಳಸುತ್ತಾಳೆ.

'ನಾನು ಮಾತೃಶ್ರೀಯ ಪ್ರೀತಿಪಾತ್ರ ಭಕ್ತನಾದುದರಿಂದ ನನ್ನನ್ನು ಯಾವ ಅಪಾಯವೂ ಬಾದಿಸದು' ಎಂಬ ನಿರೀಕ್ಷೆಯಲ್ಲಿರುವುದು ತಪ್ಪೆಂದು ಶ್ರೀ ಅರವಿಂದರು ನಮಗೆಲ್ಲ ಎಚ್ಚರಿಕೆಯನ್ನು ನೀಡಿದ್ದಾರೆ. ಉಳಿದವರಿಗೆ ಬರುವ ಹಾಗೆ ಮಾತೃಶ್ರೀಯ ಪ್ರೀತಿಪಾತ್ರ ಭಕ್ತರಿಗೂ ಅಪಾಯಗಳು ಬರುತ್ತವೆ. ಆದರಾಕೆ–ನೀವು ಅವಳನ್ನೇ ಅವಲಂಬಿಸಿ ಅವಳಿಗೆ ನಿಷ್ಠರಾಗಿದ್ದರೆ ನಿಮ್ಮನ್ನು "ಅವುಗಳ ಮೂಲಕವೇ ದಾಟಿಸಿಕೊಂಡು ಹೋಗಿ ಪಾರು ಮಾಡುವಳು."

ಅದಕ್ಕಾಗಿಯೇ ಅವಳು ನಮ್ಮೊಡನೆ ಬಂದಿದ್ದಾಳೆ: ಪೂರ್ಣ ನಾಶದಿಂದ ನಮ್ಮನ್ನುಳಿಸಲು, ಬಾಳು ನಮಗೆ ಸಹ್ಯವಾಗುವಂತಾಗಲು, ಉನ್ನತ ಪ್ರಜ್ಞೆಯನ್ನು ಶೋಧಿಸುವ ನಮ್ಮ ಪ್ರಯತ್ನವನ್ನು ಸುಲಭಗೊಳಿಸಲು, ಆಕೆ ಇಲ್ಲಿ ಅವತರಿಸಿದ್ದಾಳೆ. ಹಿಂದಿನ ಕಾಲದಲ್ಲಿ ಆಧ್ಯಾತ್ಮಿಕ ಜ್ಞಾನವನ್ನು ಪಡೆದು ಅಜ್ಞಾನದಿಂದ ಮುಕ್ತರಾಗಬಯಸುವವರು ಮನೆ ಮಠಗಳನ್ನು ಬಿಟ್ಟು ಹೊರಟು ತಪಸ್ವಿ ಜೀವನವನ್ನು ನಡೆಸಬೇಕಾಗಿತ್ತು. ಆದರೀಗ ಶ್ರೀ ಅರವಿಂದರೂ ಮಾತೃಶ್ರೀಯೂ ನಮ್ಮ ದಾರಿಯನ್ನು

ಸುಲಭಗೊಳಿಸಿದ್ದಾರೆ; ನೀವು ಏನನ್ನೂ ಬಿಡಬೇಕಾಗಿಲ್ಲ. ಆಧ್ಯಾತ್ಮಿಕೋನ್ನತಿ ಸಾಧನೆಯ ಸಂಕಲ್ಪ ತಾಳಿ ಮಾತೃಶ್ರೀಗೆ ನಿಮ್ಮನ್ನು ಪ್ರಾಮಾಣಿಕವಾಗಿ ಸಮರ್ಪಿಸಿಕೊಂಡು ಬಿಟ್ಟರೆ ಸಾಕು– ಪ್ರಾರ್ಥಿಸಿಕೊಂಡು, ನಿಮ್ಮ ಸರ್ವಲಕ್ಷ್ಯವನ್ನೂ ಅವಳತ್ತ ಹರಿಯಿಸಿ, ಎಲ್ಲವನ್ನು ಆಕೆಯ ಕೈಗೆ ಬಿಟ್ಟು ಕುಳಿತುಕೊಂಡರೆ ಸರಿ ಅವಳು ನಿಮ್ಮನ್ನು ಗುರಿಗೆ ಒಯ್ದು ಮುಟ್ಟಿಸುವಳು. ಸಾಧ್ಯವಿರುವಷ್ಟರ ಮಟ್ಟಿಗೆ ಮಾತೃಶ್ರೀಯನ್ನು ಮಾತ್ರ ನೆನೆಯಿರಿ– ನಿಮ್ಮ ಯಾವ ಕೆಲಸಕಾರ್ಯಗಳಲ್ಲಿಯೂ ಅವಳನ್ನು ಮರೆಯದಿರಿ. ಕಾಲಕ್ರಮೇಣ ನಿಮಗೆ ದಿವ್ಯಜ್ಞಾನವು ಪ್ರಾಪ್ತವಾಗುವುದು.

ಈ ದಿವ್ಯಜ್ಞಾನವು ನಮ್ಮ ಮನೋಬುದ್ಧಿಯ ಜ್ಞಾನಕ್ಕಿಂತ ಮೇಲಿನದು. ಆದರದನ್ನು ನಿಮ್ಮ ವೈಯಕ್ತಿಕ ಪ್ರಯತ್ನ ಮಾತ್ರದಿಂದ ಪಡೆಯಲಾರಿರಿ. ಮಾತೃಶ್ರೀ ಮಧ್ಯ ಪ್ರವೇಶಿಸಿ ತನ್ನ ಅನುಗ್ರಹದ ಮೂಲಕ ನಿಮಗೆ ವರದಾನ ಮಾಡಿದ್ದಲ್ಲದೆ ಅದು ನಿಮಗೆ ದೊರಕದು. ಆ ಅನುಗ್ರಹ ದೊರಕಬೇಕಾದರೆ ಅದಕ್ಕೆ ಮುಂಚೆ ಅದನ್ನು ಸ್ವೀಕರಿಸಲು ತಕ್ಕ ಸಿದ್ಧತೆಯನ್ನು ಮಾಡಿಕೊಂಡಿರಬೇಕು. ನಿಮ್ಮ ಆಧಾರ ಪಾತ್ರೆಯನ್ನು ಸಿದ್ಧಗೊಳಿಸಿಕೊಂಡಿರಬೇಕು–ಅದರಲ್ಲೇ ನಿಮ್ಮ ಯತ್ನ, ಬೇಕಾಗುವಷ್ಟು ಸಾಧನೆ ಮತ್ತು ಆತ್ಮಸಮರ್ಪಣ ಅಗತ್ಯವಾಗಿರುವುದು. ಈ ಹಾದಿಯಲ್ಲಿ ಬಹಳ ವಿಘ್ನಗಳೂ ತೊಂದರೆಗಳೂ ಬರಬಹುದು; ಎಡಹಿಸುವ ಕಲ್ಲುಗಳೂ ಹೊಡೆತಗಳೂ ಬಂದು ಬೀಳಬಹುದು; ಸಂಶಯಗಳೂ ನಿರಾಶೆಗಳೂ ಎದುರಾದಾವು; ನಿರುಪಾಧಿಕ ಆತ್ಮಸಮರ್ಪಣೆಯ ಬಗೆಗೆ ಅರುಚಿ ಉಂಟಾದೀತು–ಆದರಿವುಗಳನ್ನು ತಪ್ಪಿಸಲು ಬರದು– "ಆಕಸ್ಮಿಕ ಹೊಡೆತ ಮತ್ತು ಒತ್ತಡಗಳ ಮೂಲಕವೇ ಜೀವಿಗಳು ವಿಕಾಸ ಹೊಂದಬೇಕೆಂಬುದು ನಿಯಮ." ಹೀಗಿದ್ದರೂ ಅದಕ್ಕೂ ನೀವು ಮಾತೃಶ್ರೀಯನ್ನೇ ಅವಲಂಬಿಸಬೇಕು. ಅವಳೆಲ್ಲ ನೋಡಿಕೊಳ್ಳುವಳು–ನೀವು ಅನಾಥರಾಗಿ ಉಳಿಯುವುದಿಲ್ಲ. ಶ್ರೀ ಅರವಿಂದರು ಹೇಳಿದ್ದಾರೆ– "ಕಷ್ಟಗಳು ಬರುವುವು. ಹೋಗುವುವು; ಆದರವಳು ನಿಮ್ಮೊಂದಿಗಿರುವುದರಿಂದ ಜಯ ಲಭಿಸುವುದು ಖಂಡಿತ" ಎಂದು. ಆಗ "ಅವಳ ಪ್ರೇಮವು ನಿಮ್ಮನ್ನು ಸುತ್ತಿಕೊಂಡು, ತನ್ನ ಕೈಯಲ್ಲೆತ್ತಿ ಹಿಡಿದು, ದೇವರತ್ತ ನಿಮ್ಮನ್ನೊಯ್ಯುವುದನ್ನು" ನೀವು ಕಾಣುವಿರಿ.

ಮಾತೃಶ್ರೀಯ ಮಾಂತ್ರಿಕಶಕ್ತಿಯು ಸುಸ್ಪಷ್ಟ. ಆದರವಳು ಯಾವ ಅದ್ಭುತ ಕಾರ್ಯವನ್ನೂ ಮಾಡಲೊಲ್ಲೆನೆನ್ನುತ್ತಾಳೆ. ನಿಸರ್ಗದ ಪ್ರಕ್ರಿಯೆಗಳನ್ನು, ಸಮತೋಲವನ್ನು ಕೆಡಿಸಲು ಅವಳು ಇಷ್ಟಪಡಳು. ತ್ವರಿತ ಅಗತ್ಯ ಆಕೆಗೆ ತೋರಿದಾಗ ಅವಳು ತನ್ನ ಶಕ್ತಿಯನ್ನು ಉಪಯೋಗಿಸುವಳು–ಆಗ ಅವಳು ಪ್ರಕೃತಿಯ ಸ್ವಾಭಾವಿಕವಾದ ಪರಿಣಾಮ ನಿಯಮಗಳಕೊಂಡಿಸರ ಮುರಿಯದಂತೆ ನೋಡಿಕೊಳ್ಳುವಳು.

# ಸಾವಿತ್ರಿಯಾಗಿ

ಮಾತೃಶ್ರೀ ಸಾವಿತ್ರಿಯೂ ಹೌದು. ಸಂಸ್ಕೃತದಲ್ಲಿ ಸವಿತೃವೆಂದರೆ ಬೆಳಕಿನ ಆಕರವೆಂದರ್ಥ. ಸವಿತೃಪುತ್ರಿಯೇ ಸಾವಿತ್ರಿ. ಈ ಸಾವಿತ್ರಿಯು ಮಾತೃಶ್ರೀಯಾಗಿ ಅವತರಿಸಿದ್ದಾಳೆ, ಈ ವಿಷಯದ ಮೇಲೆ ಶ್ರೀ ಅರವಿಂದರು ಸಾವಿತ್ರಿ ಎಂಬ ಬ್ರಹ್ಮ ಕಾವ್ಯವನ್ನು ಬರೆದಿದ್ದಾರೆ. ಅದೊಂದು ಐತಿಹ್ಯ, ಅದೊಂದು ಪ್ರತೀಕ.

ಮಹಾಭಾರತದಿಂದ ಸಾವಿತ್ರಿಯ ಐತಿಹ್ಯವನ್ನು ತೆಗೆದುಕೊಳ್ಳಲಾಗಿದೆ. ಧರ್ಮಾಭಿರಾಮನಾದ ಅಶ್ವಪತಿ ರಾಜನು ಮಕ್ಕಳಿಲ್ಲದವನಾಗಿದ್ದನು. ಆತನು ದೇವಿಯನ್ನು ಪ್ರಾರ್ಥಿಸಿಕೊಂಡು ಹತ್ತುವರ್ಷ ತಪಸ್ಸು ಮಾಡಿದನು. ಅವನ ತಪಸ್ಸಿಗೆ ಸಂತುಷ್ಟೆಯಾದ ದೇವಿಯು ಪ್ರತ್ಯಕ್ಷೆಯಾಗಿ ಅವನಿಗೆ ಮಗಳಾಗಿ ಹುಟ್ಟಲು ಒಪ್ಪಿದಳು. ಹುಟ್ಟಿದ ಆ ಮಗಳಿಗೆ ಸಾವಿತ್ರಿ ಎಂದು ಹೆಸರಿಡಲಾಯ್ತು. ಅವಳು ಬೆಳೆದ ಮೇಲೆ 'ನಿನಗೆ ಬೇಕಾದ ವರನನ್ನು ನೀನೇ ಆರಿಸಿಕೋ' ಎಂದು ಅವಳ ತಂದೆ ಹೇಳಿನು. ಅವಳು ಕುರುಡನಾಗಿ ಕಾಡಿನಲ್ಲಿ ವಾಸಿಸುತ್ತಿದ್ದ ದ್ಯುಮತ್ಸೇನನ ಮಗನಾದ 'ಸತ್ಯವಾನ್' ಎಂಬವನನ್ನು ಆಯ್ದುಕೊಂಡಳು. ಅದಕ್ಕೆ ನಾರದಮಹರ್ಷಿಯು, ಅವನ ಆಯುಷ್ಯ ಇನ್ನೊಂದು ವರ್ಷ ಮಾತ್ರ ಇದೆ ಎಂಬ ಕಾರಣದಿಂದ, ತಕರಾರು ತೆಗೆದನು. ಆದರೆ ಸಾವಿತ್ರಿಯು ಹಠ ಹಿಡಿದು ಸತ್ಯವಂತನನ್ನೇ ಮದುವೆಯಾದಳು. ಒಂದು ವರ್ಷಕಳೆದೊಡನೆಯೇ ಸತ್ಯವಂತನು ಕಾಡಿನಲ್ಲಿ ಕಟ್ಟಿಗೆಯನ್ನು ಸಂಗ್ರಹಿಸುತ್ತಿದ್ದಾಗ ಸಿಡಿಲುಬಡಿದು ಸತ್ತುಬಿದ್ದನು. ಸಾವಿನ ಅಧಿಕಾರಿಯಾದ ಯಮನು ಬಂದು ಸತ್ಯವಂತನ ಜೀವವನ್ನು ತೆಗೆದುಕೊಂಡು ಹೋದನು. ಆದರೆ ಸಾವಿತ್ರಿ ಅವನನ್ನು ಹಿಂಬಾಲಿಸಿದಳು; ಜೀವವನ್ನೊಯ್ಯಲು ಅವಳು ಬಿಡಲಿಲ್ಲ. ಸಾವಿನ ಅಪರಿಹಾರ್ಯತೆಯನ್ನು ಅವಳಿಗೆ ಯಮನು ವಿವರಿಸಿದನು ಮತ್ತು ಪರಿಪರಿಯಿಂದ ಅವಳಿಗೆ ಮನೆಗೆ ಹಿಂದಿರುಗ ಹೇಳಿದನು. ಆದರವಳು ಅವನ ಉಪದೇಶವನ್ನು ಕೇಳದೆ ಕಲ್ಲಾಗಿ ನಿಂತಳು. ಕೊನೆಯಲ್ಲಿ ಅವಳು ಗೆದ್ದಳು; ಯಮನು ಸತ್ಯವಂತನ ಜೀವವನ್ನು ಹಿಂದಿರುಗಿ ಕೊಡಬೇಕಾಯ್ತು. ಅವಳು ಸಜೀವನಾದ ಗಂಡನ ಜೊತೆಗೆ ಬಂದು ಸೂರ್ಯ ಎಂದೂ ಮುಳುಗದಿರುವ ಸ್ಥಳದಲ್ಲಿ ನೆಲೆಸಿದಳು.

ಈ ಪ್ರಸಿದ್ಧ ಐತಿಹ್ಯವನ್ನು ಅರವಿಂದರು ಕಂಡಿದ್ದರು. ಹೇಗೆ? ಒಂದು ಹೊಸ ಪ್ರತೀಕದ ಬೆಳಕಿನಲ್ಲಿ. ಅವರ ಕಾವ್ಯದಲ್ಲಿ ಅಶ್ವಪತಿಯು ಪಾರ್ಥಿವ ಮಾನವರ ಪ್ರತಿನಿಧಿ; ಅಶ್ವವು ಜೀವ ಚೈತನ್ಯದ ಪ್ರತೀಕ. ಮೊದಲಿನ ಸರ್ಗಗಳಲ್ಲಿ ವಿವರಿಸಲಾದ ಅಶ್ವಪತಿಯ ತಪಸ್ಸು ಅರವಿಂದರ ಒಳಬಾಳಿನ ಸಾದೃಶ್ಯವನ್ನು ಹೊಂದಿದೆ. ದೇವಿಯು ಅಶ್ವಪತಿಗೆ ಮಗಳಾಗಿ ಹುಟ್ಟಲು ಒಪ್ಪಿದಂತೆ ಮಾತೃಶ್ರೀಯು (ನಿತ್ಯ) ಸತ್ಯಪ್ರಜ್ಞೆಯನ್ನು

ಭೂಲೋಕಕ್ಕೆ ಇಳಿಸುವುದರಲ್ಲಿ ಅವರಿಗೆ ನೆರವೀಯಲು ಬಂದಳು. ಸತ್ಯವಂತನು ಮಾನವರ ಪ್ರತಿನಿಧಿ. ಮೂಲತಃ ಮಾನವರು (ಪರಮ) ಸತ್ಯದ ಮಕ್ಕಳು, ಸಾವಿತ್ರಿಯು ದಿವ್ಯಾನುಗ್ರಹದ ಪ್ರತಿನಿಧಿ. ಅವಳ ಗೈಮೆಯಿಲ್ಲದೆ ಅವರೆಂದೂ ಉದ್ಧಾರವಾಗರು. ತ್ವರಿತಗತಿಯಿಂದ ಅವರು ವಿನಾಶೋನ್ಮುಖರಾಗುತ್ತಿದ್ದಾರೆ–ಅನೃತ. ಅಜ್ಞಾನಗಳಲ್ಲಿ ಬಿದ್ದ ಅವರು ಜೀವನ್ಮೃತರಾಗಿದ್ದಾರೆ. ಇಲ್ಲಿಯೂ ಯಮ ಅವರಿಗೆ ಮರಣವನ್ನು ಕೊಡಬಯಸುತ್ತಾನೆ; ಸಾವಿತ್ರಿ ಅವರಿಗೆ ಹೊಸ ಬಾಳನ್ನು ಕೊಡಬಯಸುತ್ತಾಳೆ. ವಿರುದ್ಧ ಶಕ್ತಿಯಾದ ಮೃತ್ಯುರಾಜನಿಗೂ ದಿವ್ಯಶಕ್ತಿಯಾದ ಸಾವಿತ್ರಿಗೂ ವಾಗ್ಯುದ್ಧ ಶುರುವಾಗುತ್ತದೆ. ಕೊನೆಗೆ ಮಾತೃಶ್ರೀ ಗೆಲ್ಲುತ್ತಾಳೆ. ಮರ್ತ್ಯ ಪ್ರತಿನಿಧಿಯಾದ ಸತ್ಯವಂತನು ಉಳಿಸಲ್ಪಡುತ್ತಾನೆ ಮತ್ತು ಸೂರ್ಯ ಎಂದೂ ಮುಳುಗದಿರುವಲ್ಲಿ ಬದುಕುತ್ತಾನೆ.

ಈ ಇಡಿ ಚಿತ್ರವು ಅರವಿಂದರ ಪೂರ್ವದರ್ಶನ. ಅವರು ತಮ್ಮ ರಸದೃಷ್ಟಿಯಿಂದಲೂ ಯೋಗದೃಷ್ಟಿಯಿಂದಲೂ ಕಂಡದ್ದು ಅನತಿದೂರದ ಭವಿಷ್ಯತ್ತಿನಲ್ಲಿ ಸಾಧಿಸಲ್ಪಡುವುದು.

ಈ ಅಂಶವನ್ನುಳಿದರೂ ಅದರ ಪದ್ಯವೇ ಅನನ್ಯವಾದುದು–ಅದರ ರೀತಿ, ಅಲಂಕಾರ ಮತ್ತು ಭಾಷೆಗಳ ಅನನ್ಯತೆ ಹಾಗಿದೆ. "ಸಾವಿತ್ರಿ"ಯ ಈ ಕೆಳಗಿನ ಕೆಲ ಸಾಲುಗಳು ಮಾದರಿಗಳಾಗಿವೆ;

**ಎಲ್ಲ ಶಕ್ತಿ–ಮಾಹಾತ್ಮ್ಯಗಳವಳಲಿ**
**ಬಂದು ಸೇರ ಬೇಕು;**
**ರಸವು ಭೂಮಿಯಲಿ ಸಗ್ಗ ನಡೆಯೊಳೋ–**
**ಡಾಡುತ್ತಿರಬೇಕು,**
**ಅವಳ ಕೇಶ ಮೇಘಗಳ ಬಲೆಯೊಳಾ**
**ನಂದ ಮಲಗಬೇಕು.**
**ಅಮರ ಕೂರ್ಮೆಯವಳಲ್ಲಿ ಮನೆಮರದಿ**
**ಹಕ್ಕಿ ವಿಭವ ಪೂರ್ಣ**
**ರೆಕ್ಕೆಗಳನು ಬಡಿವಂತೆ ಬಡಿದು ತಾ**
**ಬಂದು ನೆಲಸಬೇಕು.**

ಮಾತೃಶ್ರೀಯ ಪಾರ್ಥಿವ ಅಸ್ತಿತ್ವದ ಅರಿವಿಲ್ಲದಿದ್ದಾಗ ಬಡೋದೆಯಲ್ಲಿ ವಾಸಿಸುತ್ತಿದ್ದ ಅರವಿಂದರು ಮೊಟ್ಟಮೊದಲು "ಸಾವಿತ್ರಿ"ಯನ್ನು ಬಹಳ ವರ್ಷಗಳ ಹಿಂದೆ ಬರೆಯಲಾರಂಭಿಸಿದ್ದೊಂದು ಕುತೂಹಲಕಾರಿಯಾದ ಸಂಗತಿ. ಅವರು ದೇಹತ್ಯಾಗ ಮಾಡುವುದಕ್ಕೆ ಸ್ವಲ್ಪ ಮುಂಚೆ ಈ ಮಹಾ ಕಾವ್ಯವನ್ನು ಬರೆದು ಮುಗಿಸಿದರು. ಈ ಸುದೀರ್ಘಾವಧಿಯಲ್ಲಿ ಅವರು ಬಹಳ ನಿಧಾನವಾಗಿ ಸ್ವಲ್ಪ ಸ್ವಲ್ಪವನ್ನು ಬರೆದು ಪದೇ

ಪದೇ ಬದಲಾಯಿಸುತ್ತಿದ್ದರು; ಹಾಗೆ ಬರೆದದ್ದನ್ನವರು ಕೆಲವೊಮ್ಮೆ ಹತ್ತು ಸಲ ಬದಲಾಯಿಸಿದ್ದೂ ಉಂಟು.

ಹೀಗೆ ಸಾವಿತ್ರಿಯಂಥ ಮಹಾತಾಯಿ ಭೂಲೋಕದಲ್ಲಿ ಎಲ್ಲೋ ಹುಟ್ಟಿದ್ದಾಳೆ ಮತ್ತು ಆಕೆ ಮನುಷ್ಯರನ್ನು ಅಜ್ಞಾನಾಂಧಕಾರದಲ್ಲಿ ಮುಳುಗಿ ನಾಶವಾಗುವುದರಿಂದ ತಪ್ಪಿಸುವ ತಮ್ಮ ಮಹಾಕಾರ್ಯದಲ್ಲಿ ನೆರವೀಯಲು ಬಂದು ಸೇರುವಳೆಂಬುದು ಅರವಿಂದರಿಗೆ ಮೊದಲೇ ಸಾಕ್ಷಾತ್ಕಾರವಾಗಿರಬೇಕು ಎಂದು ನಾವು ಊಹಿಸಬಹುದು. ತಾವು ಭೂಮಿಯಿಂದ ಅದೃಶ್ಯರಾದ ಮೇಲೆ ಅವಳೊಬ್ಬಳೇ ಕೆಲಸ ಮಾಡಬೇಕಾದೀತೆಂಬುದೂ ಅವರಿಗೆ ಮೊದಲೇ ಗೊತ್ತಿದ್ದಿರಬೇಕು. “ಒಬ್ಬರೇ ಆದಾಗ ಮಹಾತ್ಮರು ಮಹಾ ಬಲಿಷ್ಠರಾಗಿರುತ್ತಾರೆ” ಅವರು “ಸಾವಿತ್ರಿ”ಯಲ್ಲಿ ಹೀಗೆ ಬರೆದಿದ್ದಾರೆ.

**ಅಸಹಾಯೆಯಾಗಿ ಅವಳೊಬ್ಬಳೇ ಅತ್ಯಪಾಯದ ಇಳಿಕಲಲ್ಲಿ**
**ಇಡಿ ಜಗತ್ತಿನ ಮತ್ತು ಅವಳ ಅಳಿಗಾಲ ಬಂತೆಂಬ ಗತಿಯಲ್ಲಿ**
**ನಿಲುವ ದಿನವೊಂದು ಬಂದೀತು, ಲೋಕದ ಭವಿಷ್ಯವನು**
**ತನ್ನದೆಯ ಮೇಲೊಂಟಿಯಾಗಿ ಮಾನವಕುಲದ ಪ್ರತ್ಯಾಶೆಯ**
**ಹೃದಯದಲ್ಲಿಟ್ಟೊಬ್ಬಳೇ ಗೆಲ್ಲಬೇಕು ಅಥವಾ ಸೋಲಬೇಕು**
**ಎಂಬಂಥ ನೈರಾಶ್ಯ ಶಿಖರದಿಳಿಜಾರಿನಲ್ಲಿ ಕೊನೆಯದಾಗಿ**
**ಒಬ್ಬಳೇ ಒಬ್ಬಳೇ ಮೃತ್ಯುದೇವತೆಯೊಡನೆ ನಾಶದಂಚಿನಲಿ**
**ಕೊನೆಯ ಆ ಘೋರ ದೃಶ್ಯದೊಳವಳ ಒಕ್ಕೈಯ ಮಹಿಮೆ**
**ನಿಲ್ಲಬೇಕಾದೀತಪಾಯಕರ ಕಾಲ ಸೇತುವೆಯನ್ನು ದಾಟಿ**
**ಬಂದರೆಲ್ಲಾ ಬಂತು ಹೋದರೆಲ್ಲಾ ಹೋಯ್ತು ಮಾನವನಿಗೆಂಬ**
**ಜಗದದೃಷ್ಟದ ತುತ್ತ ತುದಿಯ ನವಳೇರಲೇ ಬೇಕು**
**ಎದೆಯೊಡೆವ ಆ ಮೌನದಲ್ಲೊಬ್ಬಳೇ ಕಳೆದು ಹೋಗಿ**
**ಜಗದಗತಿಯನ್ನತ್ತಲೋ ಇತ್ತಲೋ ಎಂದು ನಿರ್ಧರಿಸುವಾಗ**
**ಮರ್ತ್ಯ ಕಾಲವ ಹತ್ತಿ ದಾಟುತಿರಲವಳಾತ್ಮದಲ್ಲೊಬ್ಬಳೇ**
**ಮೃತ್ಯುವಿನ ಜೊತೆಗೆ ಯಾ ದೇವರೊಡನೊಬ್ಬಳೇ ನಿಂತುಕೊಂಡಾಗ**
**ಪ್ರತ್ಯೇಕವಾಗಿ ನಿಃಶಬ್ದ ನೈರಾಶ್ಯ ಗಿರಿಸಾನುವಿನ ಇಳಿಕಲಲ್ಲಿ**
**ಒಬ್ಬಳೇ ನಿಲಬೇಕು ಮೃತ್ಯುವಿನ ಜೊತೆಗೆ ಮೇಣ್ ತನ್ನೊಡನೆ,**
**ದೈವದೊಡನೆ**
**ಕಾಲಕೂ ನಿಷ್ಕಾಲಕೂ ನಡುವಿನೊಂದಂಚನೇರಿ ನಿಂತಂತೆ**
**ಅಸ್ತಿತ್ವವಳಿಯ ಬೇಕಿಲ್ಲವೆ ಪುನಾರಚಿಸಬೇಕು ಬುಡದ**
**ನೆಲಗಟ್ಟನೆಂಬಂಥ ಸಂದರ್ಭದಲ್ಲವಳು ತಾನೊಬ್ಬಳೇ**

**ಗೆಲ್ಲಬೇಕಿಲ್ಲದಿರೆ ಪಾತಾಳದಲಿ ಬಿದ್ದು ಸಾಯಬೇಕು.**
**ಆ ಗಳಿಗೆಯಲ್ಲಾವ ಮಾನವ ಸಹಾಯವೂ ಮುಟ್ಟದವಳನ್ನು**
**ಯಾವ ಅಂಗತ್ರಾಣ ಧಾರಿ ದೇವನು ಕೂಡ ನಿಂತಿರನು ಬಳಿಯಲ್ಲಿ**
**ಹೊಳೆಯುತ್ತ ರಕ್ಷಿಸಲು ಅವಳನಾದುರ್ಧರಾವಧಿಯಲ್ಲಿ ನೋಡದೋ.**
**ಮೊರೆಯಿಡದಿರಯ್ಯ ನೀ ಸಗ್ಗಕ್ಕೆ ಏಕೆಂದರವಳೊಬ್ಬಳೇ ತನ್ನನು**
**ಸಲಹಿಕೊಳ್ಳಬಲ್ಲಳೇಕೆಂಬೆಯಾ ಕೇಳು ನಿಃಶಬ್ಧ ಶಕ್ತಿಯಿದಿತ್ತ**
**ಬುದ್ಧಿಪೂರ್ವಕವಾಗಿ ಈ ರೂಪವನು ತಾಳಿ ದೈವಾಜ್ಞೆಯನು ಹೊತ್ತು**
**ಬಂದುದಿಲ್ಲಿಗೆ; ಸುವಿಜ್ಞಾತ ದೈವೇಚ್ಛೆಯವಳಲ್ಲಿ ಮಾನವ ರೂಪತಾಳಿ**
**ಬಂದಿರಲು ತನ್ನನೂ ಜಗವನೂ ರಕ್ಷಿಸಲು ಬಲ್ಲಳಾ ಅವಳೊಬ್ಬಳೇ.**

ಅವರು ಮೊದಲೇ ತಿಳಿದ ಸಂಗತಿಯೀಗ ನಿಜವಾಗಿ ಪರಿಣಮಿಸಿದೆ. ಸ್ವತಃ ಅವರೇ ಈಗ ಇಲ್ಲ. ಅವರು ಬರೆದಂತಾಯಿತು.

ಅದೇ ಮಾತನ್ನು ಮಾತೃಶ್ರೀಯ ಕಡೆಯಿಂದಲೂ ಹೇಳಬಹುದು. ಅವಳೂ ಇಲ್ಲಿ ನಾನು ಯಾರೆಂಬುದನ್ನೂ ಏತಕ್ಕಾಗಿ ಇರುವೆನೆಂಬುದನ್ನೂ ಮೊದಲೇ ಅರಿತಿದ್ದಳು. ಬಹಳ ವರ್ಷಗಳ ಹಿಂದೆ ಅವಳು ತನ್ನ ದಿನಚರಿಯಲ್ಲಿ ಅವಳು ಬರೆದಿದ್ದಳು:

೨೫–೯–೧೯೧೪

**"ಪ್ರಭು ಸಂಕಲ್ಪವ ಮಾಡಿಹ ನೀನದ**
**ನಡೆಯಿಸು; ಹೊಸ ಬೆಳಕಾವಿರ್ಭಸುವು–**
**ದಿಳೆಯಲಿ, ಹೊಸ ಜಗ ಹುಟ್ಟುವುದಲ್ಲದೆ**
**ಘೋಷಿಸಿದೆಲ್ಲವು ಪೂರ್ತಿಯಾಗುವುವು."**

ಅವಳು ತನ್ನ ಖಾಸಗಿ ಪುಸ್ತಕದಲ್ಲಿ ಇದನ್ನು ಬರೆದ ಮೇಲೆ ಅನೇಕ ವರ್ಷಗಳು ಕಳೆದವು. ಆಮೇಲವಳು ಪಾಂಡಿಚೇರಿಗೆ ಬಂದು ಶ್ರೀ ಅರವಿಂದರೊಡನೆ ತನ್ನ ಕೆಲಸವನ್ನು ಆರಂಭಿಸಿದಳು. ಅನಂತರ ಅವಳೊಬ್ಬಳನ್ನೇ ಬಿಟ್ಟು ಅರವಿಂದರು ನಿರ್ವಾಣ ಹೊಂದಿದರು. ಅವಳ ಕೆಲಸ ಹೆಚ್ಚಾಯಿತು. ಒಬ್ಬಳೇ ಅವಳು ಕೆಲಸ ಮಾಡಿದಳು; ಒಬ್ಬಳೇ ಹೋರಾಡಿದಳು; ಏಕಾಂಗಿನಿಯಾಗಿಯೇ ಅವಳು ಗೆದ್ದಳು. ಉನ್ನತಸ್ತರದ ಅತಿಮಾನಸ ಪ್ರಜ್ಞೆಯು ಭೂಮಿಗಿಳಿದು ಬರಬೇಕಾಗಿತ್ತು. ೧೯೫೬ರ ಫೆಬ್ರವರಿ ೨೯ ರಂದು ಅವಳು ಧೈರ್ಯವಾಗಿ ಸಾರಿದಳು:

**"ಪ್ರಭುವೇ ನೀ ಸಂಕಲ್ಪವ ಮಾಡಿಹೆ**
**ನಡೆಸುವೆ ನಾನದ; ಭೂಮಿಯಲಿ**
**ಪ್ರಭೆ ಹೊಸದೊಂದುದಯಿಸಿಹುದು. ಹೊಸಜಗ**

**ಹುಟ್ಟಿದೆ, ಮೊದಲೇ ಕೊಟ್ಟಂಥ**
**ವಚನಗಳಿಂದಿಗೆ ಸಫಲತೆ ಪಡೆದವು**
**ನಿಶ್ಚಿತ ನಿಶ್ಚಿತ ಹೊಸ ಪಂಥ."**

ಅತಿಮಾನಸ ಶಕ್ತಿಯು ಭೂಮಿಯ ಆವರಣದೊಳಗಿಳಿದಿದೆ. ಅದು ಕೆಲಸಮಾಡಲಾರಂಭಿಸಿದೆ.

"ಮಾನವೇತಿಹಾಸದ ಅತಿ ದೊಡ್ಡ ಘಟನೆ ಘಟಿಸಿದೆ. ಹೊಸ ಬೆಳಕು ಜಗತ್ತಿಗಿಳಿದು ಬಂದಿದೆ; ಅದರ ವಿಕಾಸಕ್ಕದು ಉತ್ಕ್ರಿಯ ತತ್ವವಾಗಿ, ಅದರೊಳಹೊಕ್ಕು, ಅದರ ಮೇಲೆ ತಾನು ಅನಂತ ಕಾಲ ತನ್ನ ಪ್ರಶಾಸನವನ್ನು ನಡೆಸುವುದು... ಆದುದರಿಂದಲೇ ಮಾತೃಶ್ರೀಯು ಹೊಸ ಮಾನವನ ಆಗಮನಕ್ಕೆ ಸಿದ್ಧತೆ ನಡೆಸುತ್ತಿದ್ದಾಳೆ; ಹೊಸ ಸಮಾಜದ, ಹೊಸ ನಾಗರಿಕತೆಯ, ಹೊಸ ಜಗತ್ತಿನ ಆಗಮನಕ್ಕೆ ಬೇಕಾದ ಪೂರ್ವ ತಯಾರಿಕೆಯನ್ನು ಮಾಡುತ್ತಿದ್ದಾಳೆ. ಆ ಮೂಲಕ ಅವಳು ಗುರುಗಳು ಕಂಡ ಭವಿಷ್ಯದ್ದರ್ಶನವನ್ನು ಹೀಗೆ ನಿಜವಾಗಿ ಮಾಡುವುದರಲ್ಲಿದ್ದಾಳೆ."

# ೮. ಮಾತೃಶ್ರೀಯ ಜ್ಯೋತಿ

ಅದು ಒಳಗಣ್ಣಿಗೆ ಮಾತ್ರ ಕಾಣುವ ಜ್ಯೋತಿ. ಅದನ್ನು ಶಬ್ದಗಳಿಂದ ಹೇಳಬಾರದು; ಮನಸ್ಸು ಊಹಿಸಲಾರದು. ಅನುಭವ ಹೊಂದಿದವರಿಗೆ ಮಾತ್ರ ಅದು ಗೊತ್ತು. "ಅದು ಮಡಿ ಮಾಡುತ್ತದೆ, ಹೊಳೆಯಿಸುತ್ತದೆ, ಪರಮ ಸತ್ಯದ ಸರ್ವಸಾರವನ್ನೂ ಶಕ್ತಿಯನ್ನೂ ಕೆಳಗೆ ತರುತ್ತದೆ ಮತ್ತು ಆ ಮೂಲಕ ಪರಿವರ್ತನೆಯನ್ನು ಸಾಧ್ಯಗೊಳಿಸುತ್ತದೆ."

ಜಗತ್ತಿನ ಮಹಾತ್ಮರೆಲ್ಲರೂ ದಿವ್ಯಜ್ಯೋತಿಯನ್ನು ಉಲ್ಲೇಖಿಸಿದ್ದಾರೆ. ಅವರದನ್ನು ವರ್ಣಿಸಲು ಯತ್ನಿಸಿದ್ದಾರೆ ಮತ್ತು ಅದರಿರುವಿಕೆಯನ್ನು ನಂಬದಿರಬಾರದೆಂದು ನಮ್ಮಲ್ಲಿ ಬೇಡಿಕೊಂಡಿದ್ದಾರೆ. ಶ್ರೀ ಅರವಿಂದರೆಂದಂತೆ, "ಎಲ್ಲ ಜ್ಯೋತಿಗಳೂ ಮಾತೃಶ್ರೀಯಿಂದ ಹೊರಬಿದ್ದ ಅವಳ ಜ್ಯೋತಿಗಳೇ."

ನಾವು ಆಗಲೇ ಮಾತೃಶ್ರೀಯ ಶಕ್ತಿಗಳನ್ನು (ಸಿದ್ಧಿಗಳನ್ನು) ಹೇಳಿ ಬಿಟ್ಟಿದ್ದೇವೆ. ಆ ಶಕ್ತಿಗಳನ್ನೂ ಈ ಜ್ಯೋತಿಯನ್ನೂ ಬೇರ್ಪಡಿಸಲು ಸಾಧ್ಯವಿಲ್ಲ. ಅವುಗಳ ಕೃತ್ಯಗಳೇನೋ ಬೇರೆ ಬೇರೆ–ಅವುಗಳ ಬಳಕೆಯೂ ಬೇರೆ ಬೇರೆ ಉದ್ದೇಶಗಳಿಗಾಗಿ. ಹಾಗೇ ಮಾತೃಶ್ರೀಯ ಶಕ್ತಿಗಳ ನೆರವನ್ನು ನಾವು ಪಡೆಯಬಹುದು ಮತ್ತು ಬಯಸಿದರೆ ನಾವು ಅವಳ ಜ್ಯೋತಿಯನ್ನೂ ದೊರಕಿಸಿಕೊಳ್ಳಬಹುದು. ಆದರೆ ಆ ಬಯಕೆಯು ಗಿಡ ಮರಗಳು ಸೂರ್ಯನ ಬೆಳಕಿಗಾಗಿ ಮಿಡುಕಾಡುವುದರಲ್ಲಿ ಕಂಡುಬರುಷ್ಟಾದರೂ ಸತತವೂ ಉತ್ಸಾಹಯುಕ್ತವೂ ಆಗಿರಬೇಕು. ಮಾತೃಶ್ರೀ ಅದನ್ನು ಈ ಪ್ರಕಾರ ವರ್ಣಿಸುತ್ತಾಳೆ;

"ಕಾಡುಗಳಲ್ಲಿ ಮರಗಿಡಗಳು ಹೇಗೆ ಏನಾದರೂ ಮಾಡಿ ಬೇರೆ ಬೇರೆ ರೀತಿಯಿಂದ ತಮ್ಮ ಎಲೆಗಳನ್ನೂ ಶಾಖೆಗಳನ್ನೂ ಸೂರ್ಯಜ್ಯೋತಿ ತಮ್ಮ ಮೇಲೆ ಬೀಳಲೆಂದು ನೀಡುವುದನ್ನು ನೀವು ನೋಡಿಲ್ಲವೇ? ಅದು ಅವುಗಳ ಆಂತರಿಕ ಬಯಕೆಯ ಭೌತಿಕ ಸಂಜ್ಞೆ; ಮನುಷ್ಯರಿಗಿಂತ ಹೆಚ್ಚು ದೃಢವಾಗಿ ಅವು ಬಯಸುತ್ತವೆ. ತಮ್ಮ ಭೌತದ್ರವ್ಯದಲ್ಲಿಯೇ ಅವುಗಳ ಈ ದೃಢ ಬಯಕೆ ಅಡಗಿದೆ. ಜ್ಯೋತಿಯೆಂದರೆ ದಿವ್ಯಜ್ಯೋತಿ; ಸೂರ್ಯನು ಪರಮಪ್ರಜ್ಞೆಯ ಸಂಕೇತ. ಮರಗಳೂ ಗಿಡಗಳೂ ಅಜ್ಞಾನಿಗಳು, ಅಂಧರು, ಸರಳರು–ಆಗಿರುವುದೇನೋ ನಿಜ. ಆದರೆ ತಮ್ಮ ಅಂತಃಪ್ರಜ್ಞೆಯಲ್ಲಿ ಅವು ನಿಜವಾದ ಬಯಕೆಗಾಗಿ ಚಡಪಡಿಸುತ್ತಿರುತ್ತವೆ. ಅದರಿಂದಲೇ ಅದು ಅಷ್ಟು ಬಲಿಷ್ಠವೂ ಸತತವೂ ಆಗಿರುತ್ತದೆ."

ಸೂರ್ಯನು ಹೊರಜಗತ್ತಿಗೆ ಜ್ಯೋತಿರ್ದಾತನಾಗಿರುವುದು ಹೇಗೋ ಹಾಗೇ ಮಾತೃಶ್ರೀಯು ಒಳಜಗತ್ತಿಗೆ ಜ್ಯೋತಿರ್ದಾತ್ರಿಯಾಗಿದ್ದಾಳೆ. ನಿನ್ನಲ್ಲಿರುವ ಒಳಗತ್ತಲನ್ನು ಕಳೆದು ಮಾತೃಜ್ಯೋತಿಯಿಂದ ಬಾಳನ್ನು ಬೆಳಗಿಕೊಳ್ಳಬೇಕೆನ್ನುವೆಯಾದರೆ ನೀನು ದೃಢವಾಗಿ, ಪ್ರಾಮಾಣಿಕವಾಗಿ ಮತ್ತು ಸತತವಾಗಿ ಬಯಸಬೇಕು. ಎಂಥ ಎಡರುತೊಡರುಗಳು ಬಂದರೂ ನೀನು ಬಯಸುತ್ತಲೇ ಹೋದರೆ ಸ್ವಲ್ಪ ಹೆಚ್ಚು ಕಡಿಮೆ ಕಾಲದಲ್ಲಿ ಈ ದಿವ್ಯಜ್ಯೋತಿಯು ನಿನ್ನಲ್ಲಿ ಹೊನಲಾಗಿ ಹರಿಯುವುದು, ಒಂದು ಕತ್ತಲು ಕೋಣೆಯಲ್ಲಿ ಸಾವಿರ ದೀಪಗಳನ್ನು ಹಚ್ಚಿಟ್ಟಂತೆ ನಿನಗೆ ತೋರುವುದು ಮತ್ತು ಆ ಝಗಝಗಿಸುವ ಪ್ರಕಾಶದಲ್ಲಿ ನಿನ್ನ ಚಿಕ್ಕದಾದ ಅಹಂಪ್ರಜ್ಞೆ ಉಳಿಯಲು ಶಕ್ತವಾಗದು.

ಆದರೆ ಜ್ಯೋತಿಯನ್ನು ಪಡೆದು ಉಳಿಸಿಕೊಳ್ಳಬೇಕಾದರೆ ನೀನು ಸಿದ್ಧವೂ ಅರ್ಹವೂ ಆದ ಆಧಾರವಾಗಲು ತಕ್ಕ ಸ್ವೀಕರ್ತೃತ್ವವನ್ನು ಸಂಪಾದಿಸಿಕೊಂಡು ಸಿದ್ಧನಾಗಬೇಕು. ಅದಕ್ಕೆ ನೀನು ಅಗ್ನಿ ಪರೀಕ್ಷೆಗಳಲ್ಲಿ ಹೊಕ್ಕು ಹೊರಡಬೇಕು; ಅನೇಕ ಸನ್ನಿವೇಶಗಳ ಮೂಲಕ ಹಾದುಹೋಗಬೇಕು–ನಾನಾ ವಿಧದ ತೊಂದರೆ–ಅಪಾಯಗಳ, ದೈನ್ಯ ಶೋಷಣೆಗಳ, ಸೋಲು–ನಿರಾಶೆಗಳ ಹಾವಳಿಯಲ್ಲಿ ನುಗ್ಗಿ ಪಾರಾಗಬೇಕು. ಆಗ ನೀನು ಪಾತ್ರತೆಯನ್ನು ಪಡೆಯುವೆ. ಆದರೆ ನೀನು ಅಸಹಿಷ್ಣುವಾಗಬಾರದು. ಹೆದರಬಾರದು, ನಿರಾಶನಾಗಿ ಪ್ರಯತ್ನವಾಗಿ ಬಿಡಬಾರದು. ಬಹಳ ಕಷ್ಟವಿಲ್ಲದೆ ನೀನು ಇದನ್ನು ಸಾಧಿಸಲು 'ಸೂರ್ಯಪ್ರಕಾಶಕ್ಕೊಳಗಾದ ಪಥವನ್ನು' ನೀನು ಬಿಡದೆ ಹಿಡಿದುಕೊಂಡಿದ್ದರೆ ಸರಿ–ಅಂದರೆ ಪ್ರಸನ್ನನೂ ಲಘುಭಾವಸಂಪನ್ನನೂ ಆಗಿರುವುದು–ಹಾಗಾಗಿರಬೇಕಾದರೆ ಕಷ್ಟಗಳೂ ಅಪಾಯಗಳೂ ಕಳೆದುಹೋಗುವುವು ಎಂದು ಅರಿತಿರಬೇಕು; ಯಾವಾಗಲೂ ಎಲ್ಲ ಪರಿಸ್ಥಿತಿಯಲ್ಲೂ ಮಾತೃಶ್ರೀಯನ್ನು ಅವಲಂಬಿಸಿರಬೇಕು; ಗುರುಗಳ ಮಾತಿನಲ್ಲಿ ನಿಃಶಂಕ ಶ್ರದ್ಧೆಯನ್ನಿಟ್ಟಿರಬೇಕು. "ಕಷ್ಟಗಳು ಬರುತ್ತವೆ, ಹೋಗುತ್ತವೆ; ಆದರೆ ಮಾತೃಶ್ರೀ ನಿನ್ನೊಡನಿರುವುದರಿಂದ, ಜಯ ನಿನಗೆ ಖಚಿತ." ನೀನೀ ಶ್ರದ್ಧೆಗಂಟಿಕೊಂಡರೆ ನೀನು ಗೆಲ್ಲುವುದು ಖಂಡಿತ. ನಿನ್ನ ಪ್ರಯತ್ನಗಳಷ್ಟನ್ನೇ ಅವಲಂಬಿಸುವುದಲ್ಲ; ಮಹಾತಾಯಿಗೆ ಶರಣಾಗತನಾಗುವುದು. ನಿನ್ನವಳಕೈಯಲ್ಲಿರಿಸುವುದು ಸರಿಯಾದ ಕ್ರಮ. ಆದರದು ಪರಿಪೂರ್ಣ ಆತ್ಮಸಮರ್ಪಣೆಯಾಗಿರಬೇಕು. ಪರಿಪೂರ್ಣವೆಂದರೆ ಶ್ರೀ ಅರವಿಂದರ ಮಾತಿನಲ್ಲಿ 'ಸಮಗ್ರ.' ನಿನ್ನ ಆತ್ಮಸಮರ್ಪಣೆಯು ನಿಜವೂ ಸ್ಥಾಯಿಯೂ ಆದಾಗ ಈ ದಿವ್ಯಜ್ಯೋತಿಯು ನಿನ್ನಲ್ಲಿ ಬಂದು ನೆಲೆಸುವುದು.

ಈ ಜ್ಯೋತಿಯು ಕದ ಮುಚ್ಚಿದ ನಿನ್ನೆದೆಯ ಬಾಗಿಲನ್ನು ತೆರೆಯುವುದು ಮತ್ತು ನಿನ್ನ ಇಡಿ ಇರವನ್ನು ಬೆಳಗುವುದು (ಜ್ಞಾನಮಯವನ್ನಾಗಿ ಮಾಡುವುದು).

ಕವಿಯ ಮಾತಿನಲ್ಲಿ ಸಣ್ಣ ಹುಲ್ಲೆಳೆಯ ಮೇಲಿರುವ ಹೇಳ ಹೆಸರಿಲ್ಲದ ಇಬ್ಬನಿಯು ಅತಿ ದೂರದಲ್ಲಿರುವ ಸೂರ್ಯನನ್ನು ಬಯಸುತ್ತದೆ; ವಾತ್ಸಲ್ಯದಿಂದ ಸೂರ್ಯನು ತನ್ನ ಕಿರಣಗಳಿಂದ ಆ ಇಬ್ಬನಿಯ ಹೃದಯವನ್ನು ಹೊಕ್ಕು ಮುಟ್ಟಿದೊಡನೆಯೇ ಅದು ಅಪೂರ್ವವಾದ ಒಂದು ಪ್ರಕಾಶಮಯ ವಜ್ರದಂತೆ ಕಣ್ಣು ಕೋರಯಿಸುವ ಹಾಗೆ ಝುಗಝುಗಿಸುವುದು. ದಿವ್ಯಮಾತೆಯ ಜ್ಯೋತಿಯು ನಿನ್ನನ್ನು ಮುಟ್ಟಿದೊಡನೆ ನೀನೂ ಹಾಗೇ ಆಗುವೆ. ಈ ಜ್ಯೋತಿಯಿಂದ ನಿನ್ನ ದೃಷ್ಟಿಯು ವಿಸ್ತರಿಸಿ ದೂರದ ಕ್ಷಿತಿಜವನ್ನು ದಾಟಿ ಎಂದೆಂದೂ ಕಾಣದಂತಹ ಸಂಗತಿಗಳನ್ನು ಕಾಣುವೆ. ಜಡದಲ್ಲಿ ಜೀವವನ್ನು ಕಾಣುವೆ; ಆಭಾಸಿಕ ಕುರೂಪಿಯಲ್ಲಿ ಸುರೂಪವನ್ನು ಕಾಣುವೆ; ಅಚೇತನವಾದ ಮರದ ಕೊರಡಿನಲ್ಲಿ ಚೇತನೆ ಇರುವುದನ್ನು ಕಾಣುವೆ; ಹೂವುಗಳ ಎಸಳುಗಳಲ್ಲಿ ಪ್ರೀತಿ ಅರಳುವುದನ್ನು ಕಾಣುವೆ; ಕಣ್ಣೀರ ಹಿಂದೆ ಮುಗುಳ್ನಗೆಯನ್ನು ಕಾಣುವೆ; ಗಾಯದ ಹಿಂದೆ ಅದು ಮಾಯುವುದನ್ನೂ, ನಷ್ಟದ ಹಿಂದೆ ಲಾಭವನ್ನೂ ನೀನು ಕಾಣುವೆ. ಇದು ಒಂದು ಅದ್ಭುತವಾದ ಶೋಧ. ಅದು ನಿನ್ನಲ್ಲಿ ಎಷ್ಟು ವಿದ್ಯೆಯಿದೆ. ಎಷ್ಟು ಬುದ್ಧಿಯಿದೆ ಎಂಬುದನ್ನು ಆದರಿಸಿರದು ನೀನು ಯಾವ ಬಾಹ್ಯ ಪರಿಸ್ಥಿತಿಯಲ್ಲಿರುವೆ ಎಂಬುದನ್ನು ಅವಲಂಬಿಸದು.

ಮಾತೃಶ್ರೀಯ ದಿವ್ಯಜ್ಯೋತಿ ಈ ಬಗೆಯದು. ಅದು ಅವಳಿಗೆ ಹೇಗೆ ಲಭ್ಯವಾಯ್ತು? ಅವಳದಕ್ಕೆ ಹೇಗೆ ಆಕರವಾದಳು?

## ಶ್ರೀ ಅರವಿಂದರದನ್ನೇ ಹೇಳಿದ್ದಾರೆ:

“ಮಾತೃಶ್ರೀಯ ಪ್ರಜ್ಞೆಯು ದಿವ್ಯ (ದೇವತಾತ್ಮಕ); ಅದರಿಂದ ಬರುವ ಜ್ಯೋತಿಯು ದಿವ್ಯ ಸತ್ಯದ್ದು (ಪರಮ ಸತ್ಯದ ಬೆಳಕು). ಮಾತೃಶ್ರೀಯ ಜ್ಯೋತಿಯನ್ನು ಸ್ವಾಗತಿಸಿ ಸ್ವೀಕರಿಸಿ ಅದರಲ್ಲಿಯೇ ಬದುಕುವಾತನು ಮಾನಸ, ಜೈವಿಕ ಮತ್ತು ಕಾಯಿಕ (ಭೌತಿಕ) ಎಂಬೆಲ್ಲ ಪ್ರಜ್ಞಾಸ್ತರಗಳಲ್ಲೂ ಸತ್ಯವನ್ನು ನೋಡಲಾರಂಭಿಸುವನು. ಅದಿವ್ಯವಾದುದೆಲ್ಲವನ್ನೂ ಅವನು ಪರಿತ್ಯಜಿಸುವನು... ಅದರಿಂದಲೇ ಯಾವಾಗಲೂ ಮಾತೃಶ್ರೀಯ ಅವಳ ಜ್ಯೋತಿಯ ಹಾಗೂ ಶಕ್ತಿಯ ಸಂಪರ್ಕವನ್ನಿಟ್ಟುಕೋ ಎಂದು ನಾನು ಯಾವಾಗಲೂ ಹೇಳುತ್ತಿರುವುದು; ಹಾಗಿದ್ದರೆ ಮಾತ್ರ ಈ ಗೊಂದಲ ಮತ್ತು ಅಸ್ಪಷ್ಟತೆಗಳಿಂದ ಹೊರಬಿದ್ದು ನೀನು ಮೇಲಿಂದ ಬರುವ ಮಹಾಸತ್ಯವನ್ನು ಸ್ವಾಗತಿಸಲು ಸಮರ್ಥನಾಗುವೆ.”

ಆದರೆ ನನಗೂ ನನ್ನಂತೆ ನಿರಾಶ ಸ್ಥಿತಿಯಲ್ಲಿರುವ ಎಲ್ಲರಿಗೂ ಹತಭಾಗ್ಯರಿಗೂ, ದೇಹ-ಮನಗಳಲ್ಲಿ ಸುಸ್ತಾದವರಿಗೂ, ಆಶಾಭಂಗ ಹೊಂದಿದವರಿಗೂ ಈ ಸಂದೇಶ

ಯಾವ ಉಪಯೋಗಕ್ಕೆ ಬರುತ್ತದೆ? ಎಂದು ಕೆಲವರು ಕೇಳುತ್ತಾರೆ. ಇಂಥವರು ಅಂಥ ಜ್ಯೋತಿಯ ಸ್ವರ್ಗೀಯ ವರವನ್ನು ಹೇಗೆ ಕನಸಿನಲ್ಲಿಯಾದರೂ ಕಂಡಾರು? ಸುದೈವಿಗಳಾದ ಒಬ್ಬಿಬ್ಬರಿಗಷ್ಟೇ ಅದು ಲಭ್ಯ–ತಮ್ಮಂಥವರಿಗಲ್ಲ ಎನ್ನುತ್ತಾರೆ ಅವರು.

ಆದರೆ ಮಾತೃಶ್ರೀಯೇ ಶೋಕ–ನಿರಾಶೆಗಳ ಈ ಸ್ಥಿತಿಗಳೆಲ್ಲವುಗಳ ಮೂಲಕವೂ ಹಾದುಹೋಗಬೇಕಾಗಿ ಬಂದಿತ್ತು. ಅವಳು ಎಲ್ಲ ಕಷ್ಟ ಕಾರ್ಪಣ್ಯಗಳನ್ನೂ ಸಹಿಸಬೇಕಾಗಿತ್ತು. ಪ್ರಶ್ನಕಾರರಿಗೆ ಹೇಳಿದ್ದನ್ನವಳು ಹೇಳಲು ತಕ್ಕ ಅಧಿಕಾರಿಣಿಯಾಗಿದ್ದಾಳೆ; "ಕೇಳಿರಿ, ಎಲ್ಲರೂ ಕೇಳಿರಿ ಅಧಃಪಾತಿತರಾದ, ದುಃಖಶೋಕ ಸಮನ್ವಿತರಾದ, ಎಂದೂ ತಲೆಯೆತ್ತಲಾರೆವೆಂದುಕೊಂಡಿರುವ ನೀವೆಲ್ಲರೂ ಒಮ್ಮೆ ನಿಮ್ಮಂತೆಯೇ ನರಳುತ್ತಿದ್ದ, ನಿಮ್ಮೆಲ್ಲ ತಾಪತ್ರಯಗಳನ್ನೂ ಬಲ್ಲ ಮತ್ತು ನಿಮ್ಮ ಬಗ್ಗೆ ನಿಜವಾದ ಸಹಾನುಭೂತಿಯುಳ್ಳ ನಾನು ಹೇಳುವುದನ್ನು ಕೇಳಿರಿ. ನೀವು ಅನುಭವಿಸುತ್ತಿರುವ ಎಲ್ಲ ನೋವು ನುರಿ–ಗೋಳುಗಸಣಿಗಳನ್ನೂ ನಾನು ಅನುಭವಿಸಿದ್ದೆ. ಸುಟ್ಟುರಿವ ಬಿಸಿಲಿನ ಕೆಳಗೆ ಅಪಾರವೂ ಕ್ರೂರವೂ ಆದ ಮರುಭೂಮಿಯನ್ನು ನಾನು ದಾಟಬೇಕಾಯಿತು. ಅತ್ಯಂತ ಏಕಾಂಗಿನಿಯಾಗಿರುವ ಬಾಳನ್ನು ನಾನು ಬಾಳಬೇಕಾಯಿತು; ಹೃದಯದ ಅಸಹ್ಯ ತಿಕ್ತವಾದ ಅನಾಥತೆಯನ್ನೂ, ದಾರಿದ್ರ್ಯವನ್ನೂ ಅನುಭವಿಸಬೇಕಾಯ್ತು; ಒಡೆಯಲಾರದ ಸಂದೇಹದ ಗಂಟುಗಳೊಳಹೊಕ್ಕು ಹೊರಡಬೇಕಾಯ್ತು ಹೃದಯವಿದ್ರಾವಕವಾದ ಸಂಘರ್ಷ–ಹೋರಾಟಗಳಲ್ಲಿ ಹಾದುಹೋಗಬೇಕಾಯ್ತು..." ಆದರೀಗ ಅವಳು ಸ್ವಾನುಭವದಿಂದ ಹೇಳುತ್ತಾಳೆ; "ಸ್ವಚ್ಛವಾದ ಉಷಃಕಾಲದಲ್ಲಿ ಕೊನೆಗೊಳ್ಳದ ಕತ್ತಲಿನಿರುಳು ಇರಲಿಲ್ಲ; ಇರುಳು ಹೆಚ್ಚು ಅಂಧಕಾರಮಯವಾಗಿದ್ದಷ್ಟೂ ಮುಂಬೆಳಗು ಹೆಚ್ಚು ಸ್ವಚ್ಛವಾಗಿರುತ್ತಿತ್ತು. ಸೂರ್ಯಜ್ಯೋತಿಯಿಂದ ಹೊಡೆದೋಡಿಸಲ್ಪಡದಂಥ ಮಬ್ಬಿಲ್ಲ. ಬೆಳಗಿನ ಮುಗುಳ್ನಗೆಯೊಡನೆ ಆರಿಹೋಗದಂಥ ಕಣ್ಣೀರಿಲ್ಲ. ವಸಂತ ಅನುಸರಿಸಿಬಾರದ ಶಿಶಿರವಿಲ್ಲ."

"ವಿಧಿಯಿಂದಲೋ ನಿನ್ನ ಕರ್ಮಫಲದಿಂದಲೋ ನೀನು ದುರ್ದೆಶೆಗೆ ಬಿದ್ದಿದ್ದರೂ ನೀನು ನಿರಾಶನಾಗಬಾರದು. ದೇವರ ಅನುಗ್ರಹವೂ, ಪ್ರೀತಿಯೂ ನೀನಿರುವ ಸ್ಥಿತಿಯಲ್ಲಿಯೇ ನಿನ್ನ ಮೇಲೆ ಇಳಿದುಬರುವುವು. ವಿಘ್ನಾಗ್ನಿಯಲ್ಲಿ ಸುಟ್ಟು ನೀನು ಶುದ್ಧವಾಗಿರುವ ನೀನು ಮೇಲೇಳುವುದನ್ನು ಯಾರು ತಡೆಯಬಲ್ಲರು?"

"ನೀನು ನಿರ್ಜನವೂ ನೀರವವೂ ಆದ ಪ್ರದೇಶದಲ್ಲಿರುವಾಗ ನಿನ್ನ ಕಿವಿಯನ್ನು ತೆರೆದಿದ್ದರೆ ಮೌನದ ಮಧುರ ಕರೆಯನ್ನು ಕೇಳುವೆ. ನಿನ್ನ ಕಿವಿಗಳು ಹೊರಗಿನ ಹುಸಿ ಹೊಗಳಿಕೆಗಳನ್ನು ಕೇಳುವ ಅಭ್ಯಾಸವುಳ್ಳದ್ದಾಗಿರಬೇಕು; ಆದರೀಗ ನೀರವತೆಯ ಆಳವಾದ ಒಡಕುದನಿ ನಿನ್ನ ಆತ್ಮವನ್ನು ಶಾಂತಗೊಳಿಸುವುದು. ನಿಶ್ಚಲವೂ ನಿಷ್ಪ್ರಭವೂ ಆದ ರಾತ್ರಿಯಲ್ಲಿ ಅಲೆದಾಡುತ್ತಿರುವಾಗ ಅಲ್ಲಿ ಇಲ್ಲಿ ನಿನಗೆ ಕೆಲ ಅಮೂಲ್ಯ ರತ್ನಗಳು

ಸಿಕ್ಕುವುವು; ನಿನ್ನ ನಿರ್ಧನ ಜೇಬಿನಲ್ಲಿ ಅವನ್ನು ಸಂಗ್ರಹಿಸಿ ಇಡು. ಅವು ಉಪಯೋಗಕ್ಕೆ ಬರುವುವು. ಹೃದಯವನ್ನು ಪ್ರಾಮಾಣಿಕವಾಗಿ ಇಟ್ಟುಕೊಳ್ಳುವುದನ್ನು ಮಾತ್ರ ಬಿಡಬೇಡ– ಅತಿ ಕನಿಷ್ಠವಾದವುಗಳ ನಡುವೆಯೂ ನಿನಗೆ ಅತಿ ವರಿಷ್ಠವಾದವುಗಳು ಸಿಗುತ್ತವೆ."

"ಕತ್ತಲಿಗಂಜದಿರು; ದುರ್ದೈವಕ್ಕೆ ಹೆದರಬೇಡ. ಏಕೆಂದರೆ ಅದರಿಂದಲೇ ಮಾತೃಶ್ರೀಯ ಗುಪ್ತ ಶುಕ್ಲಜ್ಯೋತಿ ಮೂಡಿ ಬರುವುದು."

"ಸಡಿಲ ಬಿಡದಿರು. ಬಿಗಿಯಾಗಿ ಹಿಡಿದುಕೋ, ಎಲ್ಲಾ ಕಳೆದು ಹೋಯ್ತೆಂದು ತೋರುವಾಗಲೇ ಎಲ್ಲವೂ ಉಳಿಯುವಂತಾಗುತ್ತದೆ."

ಭೌತ ಜಗತ್ತಿನಲ್ಲಿ ನಾವು ಬಣ್ಣಗಳ ಲೀಲೆಯನ್ನು ನೋಡುತ್ತೇವೆ. ಬಾನು ನೀಲ, ನಮ್ಮನ್ನು ಸಜೀವವಾಗಿ ಇಡಲೆಂದು ಸೂರ್ಯನ ಬಳಿ ಬೆಳಕು ನಮ್ಮನ್ನು ಬಂದು ಮುಟ್ಟುತ್ತದೆ. ಆಧ್ಯಾತ್ಮಿಕ ಪ್ರಪಂಚದಲ್ಲಿಯೂ ಹೀಗೇ ಆಗುತ್ತದೆ. ಆಧ್ಯಾತ್ಮಿಕ ಸಾಕ್ಷಾತ್ಕಾರ ಪಡೆದವರ ಪ್ರಕಾರ ನಿತ್ಯವೂ ಅನಂತರವೂ ಆದ ಸತ್ಯದ ಬಣ್ಣ ನೀಲ ಮತ್ತು ದಿವ್ಯ ಮಾತೃಶ್ರೀಯ ಬಣ್ಣ ಬಿಳಿ ಅದು ನಮ್ಮನ್ನು ಮುಟ್ಟಿ ಸಜೀವವಾಗಿ ಇಡುತ್ತದೆ. ಶ್ರೀ ಅರವಿಂದರು ತಮ್ಮ ಬಣ್ಣ ನೀಲವೆಂದೂ ಮಹಾ ಮಾತೆಯ ಬಣ್ಣ ಬಿಳಿಯೆಂದೂ ದೃಢಪಡಿಸುತ್ತಾರೆ.

ಒಮ್ಮೆ ನೀನು ಆ ಬೆಳಕಿನಲ್ಲಿ ಹೊಕ್ಕು ಹೊರಟರೆ ನಿನಗೆ ತುಲನಾತ್ಮಕವಾಗಿ ಭೌತಿಕವಾದ ಸೂರ್ಯ ಜ್ಯೋತಿಯು ಮಂದವೂ ಕಪ್ಪು ಕಪ್ಪೂ ದುರ್ಲಭವೂ ಆಗಿ ತೋರುವುದು ಎಂದು ಮಾತೃಶ್ರೀ ಹೇಳಿದ್ದಾಳೆ.

# ೯. ಮಾತೃಶ್ರೀಯ ವಾತ್ಸಲ್ಯ

"ಸಾರಸ್ವರೂಪದಲ್ಲಿ ಪ್ರೀತಿ ಇರುವುದು ಐಕ್ಯಭಾವದಿಂದ ಹುಟ್ಟುವ ಸಂತಸದಲ್ಲಿ ಸಾಮರಸ್ಯದ ಆನಂದವೇ ಅದರ ತುತ್ತತುದಿ." ಮಗುವಿನ ಮೇಲಿರುವ ಮಾತೃಪ್ರೇಮವು ದೈವಿಕವೂ ಗಾದೆ ಮಾತೂ ಆಗಿದೆ. ಮಗುವನ್ನು ಸಜೀವವಾಗಿ ಇಟ್ಟಿರುವುದು ಅವಳ ವಾತ್ಸಲ್ಯವೇ. ಭಕ್ತಕವಿ ರಾಮಪ್ರಸಾದನು.

**"ಬರಿದೆ ಮಗುವನು ಹಡೆವ ತಾಯಿ ತಾಯಲ್ಲ**
**ಎದೆಯೊಲುಮೆಯಲಿ ಹೆಸರ ಸಾರ್ಥಕತೆಯವಳ"**

ಎಂದು ಹಾಡಿದ್ದಾನೆ.

ತಾಯಿಗೆ ಪಕ್ಷಪಾತವೆಂಬುದಿಲ್ಲವೇ ಇಲ್ಲ. ಎಲ್ಲ ಮಕ್ಕಳೂ ಅವಳಿಗೆ ಸೇರಿದಂಥವು. ಅವಳ ತಾಯ್ತನದ ಎಚ್ಚರಿಕೆಯನ್ನೂ ವಾತ್ಸಲ್ಯವನ್ನೂ ಪಡೆಯಲು ಎಲ್ಲವೂ ಸಮಾನಾರ್ಹತೆಯನ್ನುಳ್ಳವುಗಳು. ಆದರೆ ಮಾನವ್ಯ ಮಾತೃವಿನ ವಾತ್ಸಲ್ಯವು ಪ್ರಮಿತ; ಅವಳ ಮಕ್ಕಳ ಸಂಖ್ಯೆಯೂ ಪ್ರಮಿತ. ಹಾಗಲ್ಲದೆ, ದಿವ್ಯಮಾತೆಯ ವಾತ್ಸಲ್ಯವು ಅಪ್ರಮಿತ ಮತ್ತು ಅವಳ ಮಕ್ಕಳೂ ಅಸಂಖ್ಯಾತ ಹಾಗೂ ಅನೇಕ ಸ್ವರೂಪದವುಗಳು. ಮಾತೃಶ್ರೀ ಹೇಳುತ್ತಾಳೆ "ಎಲ್ಲರೂ ಒಬ್ಬಳೇ ಮಹಾತಾಯಿಯ ಮಕ್ಕಳು; ಅವಳ ವಾತ್ಸಲ್ಯವು ಅವರೆಲ್ಲರ ಮೇಲೂ ಒಂದೇ ಸಮನಾಗಿ ಹಬ್ಬಿದೆ. ಆದರೆ ಪ್ರತಿಯೊಂದು ಮಗುವಿಗೂ ಅದರದರ ಸ್ವಭಾವ ಮತ್ತು ಸ್ವೀಕಾರ ಶಕ್ತಿಗಳಿಗನುಗುಣವಾಗಿ ಅವಳು ತನ್ನ ವಾತ್ಸಲ್ಯವನ್ನು ತೋರಿಸುತ್ತಾಳೆ."

ಪ್ರೀತಿಯೆಂದರೇನೆಂಬುದನ್ನು ನಾವೆಲ್ಲ ಬಲ್ಲೆವು; ಮಾತೃವಾತ್ಸಲ್ಯವೂ ನಮಗೆ ಗೊತ್ತು. ಆದರೆ ದಿವ್ಯಪ್ರೇಮವೆಂದರೇನು?

ಅದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಲು ವಾತ್ಸಲ್ಯ ಮತ್ತು ದಿವ್ಯ ವಾತ್ಸಲ್ಯಗಳ ಬಗೆಗೆ ಮಾತೃಶ್ರೀ ಹೇಳಿದ್ದನ್ನು ಗಮನಿಸಬೇಕು.

"ವಾತ್ಸಲ್ಯವು ಅಪ್ರತಿಹತವಾದ ಒಂದು ಶಕ್ತಿ. ನಿತ್ಯಚೈತನ್ಯವು ತನ್ನೊಳಗಿಂದ ಅದನ್ನು ಕೆಳಗೆ (ಇಲ್ಲಿಗೆ) ಕಳಿಸಿದೆ. ಈ ಜಗತ್ತು ಅಸ್ಪಷ್ಟವೂ ಅಂಧಕಾರಮಯವೂ ಆಗಿದೆ. ಇದರಲ್ಲಿರುವ ಜೀವಿಗಳನ್ನೂ ಇದನ್ನೂ ದಿವ್ಯಚೈತನ್ಯದೆಡೆಗೆ ತಿರುಗಿ ತರುವುದೇ ಹಾಗೆ ಕಳಿಸಿರುವುದರ ಉದ್ದೇಶ. ಈ ಭೌತ ಜಗತ್ತು ಅಜ್ಞಾನ–ಅಂಧಕಾರಗಳ ದೆಶೆಯಿಂದ

ದಿವ್ಯಚೈತನ್ಯವನ್ನು (ಪರಮಸತ್ಯವನ್ನು) ಮರೆತಿದೆ. ವಾತ್ಸಲ್ಯವು ಈ ಕತ್ತಲೆಡೆಗೆ ಬಂದಿತು; ಅಲ್ಲಿ ನಿದ್ರಿಸಿದ್ದ ಎಲ್ಲವನ್ನೂ ಎಚ್ಚರಿಸಿತು. ಅದು ಪಿಸುಮಾತಾಡಿತು. ಬೀಗ ಮುದ್ರೆಗೊಳಪಟ್ಟಿದ್ದ ಕಿವಿಗಳನ್ನು ತೆರೆಯಿಸಿತು. ಎಚ್ಚತ್ತು ನೋಡತಕ್ಕದ್ದೊಂದಿದೆ. ಬದುಕನ್ನು ಸಾರ್ಥಕಗೊಳಿಸುವ ವಸ್ತುವೊಂದಿದೆ–ಅದೇ ವಾತ್ಸಲ್ಯ!' ಈ ವಾತ್ಸಲ್ಯದ ಪ್ರಜ್ಞೆ ಉದಯಿಸಿದಾಗ ದಿವ್ಯಸತ್ಯದೆಡೆಗೆ ಪುನಃ ಮರಳುವ ಸಾಧ್ಯತೆ ಪ್ರಪಂಚವನ್ನು ಪ್ರವೇಶಿಸಿತು. ಈ ಸೃಷ್ಟಿಯು ವಾತ್ಸಲ್ಯದ ಮೂಲಕ ಮೇಲೆ ಮೇಲೇರುತ್ತ ದಿವ್ಯಸತ್ಯದ (ದೇವರ, ಈಶ್ವರನ ಅಥವಾ ಮಾತೃಶಕ್ತಿಯ) ಸಮೀಪಕ್ಕೆ ಚಲಿಸುತ್ತದೆ. ಇದಕ್ಕೆ ಪ್ರತಿಯಾಗಿ ಅದರ ದಿವ್ಯವಾತ್ಸಲ್ಯವೂ ಅನುಗ್ರಹಪ್ರಸಾದವೂ ಸೃಷ್ಟಿಯತ್ತ ಒಲೆಯುತ್ತದೆ."

ಹೀಗೆ ಪ್ರೀತಿ ಸಾರ್ಥಕವಾಗಲು ಎರಡು ಮಗುಲುಗಳಿವೆ; ಸೃಷ್ಟಿಯಿಂದ ದೇವರತ್ತ (ಅಧಿಯಜ್ಞದತ್ತ, ಈಶ್ವರನತ್ತ, ಪುರುಷೋತ್ತಮನತ್ತ) ಹರಿಯುವ ಭಕ್ತಿಪ್ರವಾಹವೊಂದು; ದೇವರತ್ತಣಿಂದ ಸೃಷ್ಟಿಯತ್ತ ಹರಿಯುವ ವಾತ್ಸಲ್ಯ ಪ್ರವಾಹವಿನ್ನೊಂದು. ಈ ಭಕ್ತಿಯೂ ವಾತ್ಸಲ್ಯವೂ ಮೂಲತಃ ಒಂದೇ. ಆದರೀ ಎದುರು ಬದುರಿನ ಪ್ರವಾಹಗತಿಯು ಅಗತ್ಯ. ಮೂಲ ಆಕಾರ ಮತ್ತು ಅದರಿಂದ ಸಿಡಿದು ದೂರವಾದ ಕಣಗಳು ಒಂದುಗೂಡಲು ಪರಸ್ಪರ ಆಕರ್ಷಣೆ ಬೇಕು; ಅಂಥ ಆಕರ್ಷಣೆ ಪರಸ್ಪರವಾಗಿ ಅವುಗಳೊಳಗೂ ಬೇಕು. ಸಂಕುಚಿತವೂ ಸ್ವಾರ್ಥಪರವೂ ಆದ ಬೇಡಿಕೆಗಳ ದೆಸೆಯಿಂದ ಮಾನವ್ಯ ಪ್ರೀತಿಯು ವಿಕೃತವಾಗಿ ಹೋಗಿರುವುದು ಖೇದಕರ. ಮಾನವ ಪ್ರಪಂಚದಲ್ಲಲ್ಲದೆ ಇನ್ನೆಲ್ಲಿಯೂ ಇಂಥ ವಿಕಾರ ಕಂಡುಬರದು. ಮಾತೃಶ್ರೀ ಉವಾಚ:–

"ವಾತ್ಸಲ್ಯದ ಚಲನವು ಮಾನವರಿಗೆ ಪರಿಸೀಮಿತವಲ್ಲ. ಅದು ಬಹುಶಃ ಮನುಷ್ಯೇತರ ಪ್ರಪಂಚದಲ್ಲಿ ಕಡಿಮೆ ವಿಕೃತವಾಗಿದೆ. ಹೂವುಗಳನ್ನೂ ಮರಗಳನ್ನೂ ನೋಡಿರಿ. ಸೂರ್ಯ ಮುಳುಗಿದಾಗ ಎಲ್ಲವೂ ನಿಃಶಬ್ದವಾಗಿರುವಾಗ ಕುಳಿತುಕೊಂಡು ಒಂದು ಕ್ಷಣ ನಿಸರ್ಗದೊಡನೆ ಸಂಪರ್ಕ ಬೆಳೆಸಿಕೋ; ಮರಗಳ ಬೇರುಗಳ ಕೆಳಗಿನ ಸ್ಥಳದಿಂದ ತಮ್ಮ ನಾರುಗಳ ಮೂಲಕ ಅವು ಅತ್ಯುನ್ನತವಾಗಿ ಹಬ್ಬಿದ ಶಾಖೆಗಳವರೆಗೆ ಮೇಲೇರುವುದನ್ನು ನೀವು ಅನುಭವಿಸುವಿರಿ. ಅದು ಅವುಗಳ ದೃಢವಾದ ಭಕ್ತಿಯ ಬಯಕೆಯ ಸಂಕೇತ. ಅದು ಜ್ಯೋತಿಯನ್ನೂ ಸುಖವನ್ನೂ ತರುವ ಬಯಕೆ..."

ಮಾನವರಲ್ಲಿಯೂ ಇದು ಸಾಧ್ಯವಾಗಬೇಕು. ಸ್ವಾರ್ಥದ ಪ್ರೀತಿಯ ಬದಲಿಗೆ ಸ್ವಾರ್ಥತ್ಯಾಗದ. ಸ್ವಾರ್ಥವಿಸ್ಮೃತಿಯ ಭಾವ ಮೂಡಬೇಕು. ಅದು ಎಲ್ಲವನ್ನೂ ದಾನ ಮಾಡುವ ಪ್ರತಿಫಲವನ್ನು ಬಯಸದ ಭಾವ ಅದು. ಮಾತೃಶ್ರೀ ಅದನ್ನು ಸಾಕಷ್ಟು ಚೆನ್ನಾಗಿ ಸಿದ್ಧಮಾಡಿತೋರಿಸಿದ್ದಾಳೆ. ಅದು ಶುದ್ಧವೂ ನಿಃಸ್ವಾರ್ಥವೂ ಆದ ಪ್ರೇಮ. ಅದು ಅವಳ ಸುಖಕ್ಕಾಗಿ ಅಲ್ಲ ದಿವ್ಯ ಪ್ರೇಮವನ್ನು ಪ್ರಕಟಪಡಿಸುವುದಕ್ಕಾಗಿ. ಅದು ಅವಳಲ್ಲಿ ಚಿಕ್ಕಂದಿನಿಂದಲೂ ಇತ್ತು. ಅವಳು ತನ್ನ "ಪ್ರಾರ್ಥನೆಗಳಲ್ಲಿ" ಹೀಗೆ ಬರೆದಿದ್ದಾಳೆ:

"ದೇವರೇ, ನಿನ್ನ ಗುಚ್ಛದಲ್ಲಿರುವ ಎಲ್ಲ ಹೂವುಗಳನ್ನೂ ಒಂದು ಗೂಡಿಸುವುದೇ ಪ್ರೇಮು– ಅದು ಮತ್ತಾವುದೂ ಅಲ್ಲ. ಅದು ಆಗ್ರಹದಿಂದ ತಲೆಹಾಕದ, ದಾಕ್ಷಿಣ್ಯಮಯವಾದ, ಅನಭಿಜ್ಞಾತವಾದ ಭಾವ. ಅದರ ಪಾತ್ರ ಸಾರತಃ ಸ್ವಾರ್ಥರಹಿತ. ಅದರ ಈ ಅವೈಕ್ತಿಕತೆ (ಅಶಾರೀರಿಕತೆ) ಯಲ್ಲಿಯೇ ಅದರ ಪ್ರಯೋಜನವೆಲ್ಲಾ ಇದೆ."

ಮುಂದೆ: "ದಿವ್ಯ ವಾತ್ಸಲ್ಯವನ್ನು ವ್ಯಕ್ತಪಡಿಸಲು ನೀನು ಅದನ್ನು ಸ್ವಾಗತಿಸಿ ಸ್ವೀಕರಿಸಲು ಶಕ್ತನಾಗಿರಬೇಕು. ಅದರ ಸಹಜಗತಿಗೆ ಮುಕ್ತಾವಕಾಶವನ್ನೀಯುವ ಸ್ವಭಾವವುಳ್ಳವರೇ ಅದನ್ನು ವ್ಯಕ್ತಗೊಳಿಸಬಲ್ಲರು." ಅವಳು ಸ್ವತಃ ಈ ದಿವ್ಯ ವಾತ್ಸಲ್ಯ ಸ್ವರೂಪದವಳಾಗಿದ್ದಾಳೆ. ಅದರಿಂದ ಅವಳು ಇದನ್ನು ವ್ಯಕ್ತಪಡಿಸಲೂ ವಿತರಿಸಲೂ ಬಲ್ಲಳು; ಇದರ ಪರಿಣಾಮಕತೆಯ ಬಗೆಗೆ ಅವಳಿಗೆ ನಿಶ್ಚಿತ ನಂಬಿಗೆಯಿದೆ.

"ಅದರ ಸರ್ವಶಕ್ತ ಕಾರ್ಯದೆದುರಾಗಿ ಯಾರು ಹೋರಾಡಬಲ್ಲರು? ಅದು ಎಲ್ಲವುದರ ಒಳಹೊಕ್ಕು ಎಲ್ಲ ಅಡಚಣೆಗಳನ್ನೂ ಹಾದುಹೋಗುವುದು–ಆ ಅಡಚಣೆಯು ಗುರುತಮ ಅಜ್ಞಾನದ ಜಾಡ್ಯವಾಗಿರಲು ಇಲ್ಲವೆ ಅರ್ಥಮಾಡಿಕೊಳ್ಳದ ದುಃಸಂಕಲ್ಪದ ಪ್ರತಿಭಟನೆಯ ಸ್ವರೂಪದ್ದಾಗಿರಲಿ... ಈ ಪ್ರಭಾ ವೈಭವವು ಹೆಚ್ಚು ಹೆಚ್ಚು ಶಕ್ತಿಯುತವಾಗುತ್ತ ಹೋಗಿ ಇಡಿ ಜಗತ್ತಿನ ಮೇಲೆ ತನ್ನ ಕಿರಣಗಳನ್ನು ಪಸರಿಸುತ್ತ ಹೋಗಿ ಪ್ರತಿಯೊಂದು ಚೇತನೆ (ಪ್ರಜ್ಞಾಸ್ತರ)ಗೂ ಪ್ರತ್ಯಕ್ಷವಾಗುವುದು..."

ಈ ದಿವ್ಯ ವಾತ್ಸಲ್ಯವನ್ನು ತುಂಬಿಕೊಂಡಿರುವುದರಿಂದಲೇ ಅವಳು ಸಂಪರ್ಕಮಾಧ್ಯಮವಾಗಿದ್ದಾಳೆ. ಮೇಲು–ಕೆಳಗುಗಳ ಹಾಗೂ ನಮ್ಮ ನಡುವಿನ, ಅರ್ಥಾತ್ ಪಾರ್ಥಿವ ಪದಾರ್ಥಗಳ ಹಾಗೂ ದೇವರ (ಈಶ್ವರನ) ನಡುವಿನ ಜೋಡಣೆಯ ಕೊಂಡಿಯಾಗಿದ್ದಾಳೆ. ಈ ಅನುರಾಗದ ಕೋಟೆಯನ್ನು ಕಟ್ಟಿಕೊಂಡ ಅವಳ ಜಡವೂ ಅಸ್ಪಷ್ಟವೂ ಆದ ಭೌತದ್ರವ್ಯದ ಆಳದಲ್ಲಿ ಮುಳುಗಿದ್ದಾಳೆ; ನಮ್ಮ ಸಣ್ಣತನ, ಮಿಥ್ಯಾತ್ವ ಮತ್ತು ಅವಿದ್ಯೆಗಳಲ್ಲಿ ಹೊಕ್ಕಿದ್ದಾಳೆ. ಆ ಮೂಲಕ ಪಾರ್ಥಿವ ಪ್ರಜ್ಞೆಯನ್ನು ದೇವೋನ್ಮುಖಗೊಳಿಸುವುದು ಅವಳ ಬಯಕೆ.

ಅದು ಅವಳ ವ್ರತೋದ್ದೇಶ.

"ಮಾತೃಜ್ಯೋತಿಯಲ್ಲಿ" ಎಂಬ ತಮ್ಮ ಗ್ರಂಥದಲ್ಲಿ ಋಷಭಚಂದರು ಇದನ್ನು ವಿವರಿಸಿದ್ದಾರೆ.

"ಈ ಪ್ರೇಮವು ಅಕ್ಷರಶಃ ಮಾತೃಶ್ರೀಯಲ್ಲಿ–ಅವಳ ಇರವು, ವರ್ತನೆ. ಮಾತುಕತೆ, ಹಾವ–ಭಾವಗಳಲ್ಲಿ ಮತ್ತು ಅವಳ ಎಲ್ಲ ರೀತಿ–ನೀತಿಗಳಲ್ಲಿಯೂ ಮಾನವರೊಡನೆ ಮಾಡುವ ವ್ಯವಹಾರಗಳಲ್ಲಿಯೂ– ಮೂರ್ತಿಮತ್ತಾಗಿದೆ. ಆದುದರಿಂದ ಮಾತೃಶಬ್ದಕ್ಕೆ ವಾತ್ಸಲ್ಯವೆಂಬ ಅರ್ಥ ಬಂದಿದೆ. ಅವಳ ಹತ್ತಿರ ಇರುವುದೆಂದರೆ ದಿವ್ಯಪ್ರೇಮದ

ಭೌತಿಕ ಉಪಸ್ಥಿತಿಯೊಡನಿರುವುದೆಂದೇ ಅರ್ಥ. ಅದು ಅಪ್ರಮೇಯ ವಿವೇಕದಿಂದೊಡಗೂಡಿದ ಮೂಲ ಪ್ರವೃತ್ತಿ; ಸರ್ವಶಕ್ತ ರಭಸದಿಂದೊಡಗೂಡಿ ಅದು ಸ್ಪಂದಿಸುತ್ತದೆ. ಈ ವಾತ್ಸಲ್ಯದ ಅದ್ಭುತ ರಹಸ್ಯದ ಆಳವನ್ನು ಮುಳುಗಿ ನೋಡಲು ಮಾನವನ ಮಾನಸಿಕ ಪ್ರಣಾಳಿಗಳು ಅಶಕ್ತ–ಅವು ಪ್ರಮಿತವಾಗಿರುವುದರಿಂದ. ಅವು ಇದಕ್ಕೆ ವಶವರ್ತಿಗಳಾಗಿ, ರೋಮಾಂಚಿತವಾಗಿ, ಪ್ರಕಾಶಿತವಾಗಿ ಮತ್ತು ಪ್ರಭಾವಿತವಾಗಿ ಮಾತ್ರ ನಿಲ್ಲಬಲ್ಲವು. ಇದು ತನ್ನ ಆಲೋಕ–ಆಹ್ಲಾದಗಳಿಂದ ನಮ್ಮ ಇರವನ್ನು ಹೊನಲಾಗಿ ತುಂಬಿಕೊಳ್ಳುತ್ತದೆ; ನಮ್ಮ ಎಲ್ಲ ದುರದೃಷ್ಟಗಳನ್ನೂ ಕಾಹಿಲೆಗಳನ್ನೂ ಗುಣಪಡಿಸುತ್ತದೆ; ನಮ್ಮ ಎಲ್ಲ ಬಂಧನಗಳನ್ನೂ ಮುರಿದು ಸಹಜ ಪಾವಿತ್ರ್ಯ–ಪೂರ್ಣತೆಗಳನ್ನು ಹೋಗುವಂತೆ ಇದು ನಮ್ಮನ್ನು ಮುಕ್ತಗೊಳಿಸುತ್ತದೆ."

ಮಾತೃಶ್ರೀಯಲ್ಲಿ ದಿವ್ಯವಾತ್ಸಲ್ಯವು ಸಕಾಯವಾಗಿರುವುದು ಹೀಗೆ. ಇದರ ದೆಸೆಯಿಂದ ಆಕೆ ಎಲ್ಲವನ್ನೂ ಪ್ರೀತಿಸಬಲ್ಲಳು, ಎಲ್ಲವನ್ನು ಸಹಿಸಬಲ್ಲಳು, ಎಲ್ಲ ತಪ್ಪುಗಳನ್ನು ಕ್ಷಮಿಸಬಲ್ಲಳು. ಅವಳೆಂದೂ ಯಾರಿಂದಲೂ ಅಸಂತುಷ್ಟೆಯಾಗಳು; ವ್ಯಕ್ತವಾಗಿ ಅವಳನ್ನೆದುರಿಸಿ ತಂಟೆಮಾಡುವವರನ್ನೂ ಅವಳು ಕ್ಷಮಿಸುತ್ತಾಳೆ; ಅವರು ಹಾಗೆ ಮಾಡಿದಾಗಲೂ ತಿದ್ದಿಕೊಳ್ಳಲು ಅವರಿಗಾಕೆ ಅವಕಾಶ ಕೊಡುತ್ತಾಳೆ. ಅವಳ ಸಹನೆ ಅನಂತ ಕರುಣೆ ಅಪ್ರಮಿತ–ಸರ್ವಶಕ್ತ ಭಗವಂತನಲ್ಲಿರುವ ಹಾಗೆ. ಏಕೆಂದರೆ ಅವಳು ದೇವರ (ಪರಮಾತ್ಮನ, ಭಗವಂತನ, ಈಶ್ವರನ) ಆನಂದ–ಶಕ್ತಿಸ್ವರೂಪಿಣಿ.

ಎಷ್ಟು ಉನ್ನತವಾದ ಮಾನವ್ಯಪ್ರೇಮವೂ ಈ ದಿವ್ಯವಾತ್ಸಲ್ಯವನ್ನು ಹೋಲದು. ಅದರಲ್ಲಿ ಇದರ ಗುಣಗಳು ಎಲ್ಲೋ ಒಳಗೆ ಅವಿತುಕೊಂಡಿರುವುದಷ್ಟು ನಿಜ. ಮಾತೃಶ್ರೀ ಹೇಳುವಂತೆ "ಮಾನವರಲ್ಲಿ ಸಹ ಅನುರಾಗದ ಪ್ರಥಮ ಸ್ಪರ್ಷವು ಇದರ ಪವಿತ್ರತರ ಸಾರಾಂಶವನ್ನು ಕೆಲಮಟ್ಟಿಗೆ ಭೂಲೋಕಕ್ಕೆ ಇಳಿಸಿ ತರುತ್ತದೆ; ಒಂದು ಕ್ಷಣ ಅವರು ತಮ್ಮನ್ನು ತಾವು ಮರೆಯ ಬಲ್ಲವರಾಗುತ್ತಾರೆ. ಆ ಕ್ಷಣದಲ್ಲಿ ಇದರ ದಿವ್ಯಸ್ಪರ್ಶವು ನುಣ್ಪೆಗರುಳ್ಳ ಎಲ್ಲವನ್ನೂ ಜಾಗರಿತಗೊಳಿಸಿ ಅತಿಶಯಿಸುತ್ತದೆ. ಆದರೆ ಆಮೇಲೆ ಮಾನವ ಸ್ವಭಾವವು ಮೇಲಕ್ಕೆ ಬರುತ್ತದೆ; ಅದರ ತುಂಬ ಅಪವಿತ್ರ ಬೇಡಿಕೆಗಳು ತುಂಬಿರುತ್ತವೆ. ಅದು ವಿನಿಮಯವಾಗಿ ಪ್ರತಿ ಪದಾರ್ಥವನ್ನು ಬೇಡುತ್ತದೆ–ತಾನು ಕೊಟ್ಟದ್ದಕ್ಕೆ ಬದಲಾಗಿ ಪ್ರತಿದಾನವನ್ನು ಬಯಸುತ್ತದೆ..."

ಅನೇಕ ಬಾರಿ ನಾವು ಮತ್ತೊಂದು ತಪ್ಪನ್ನೂ ಮಾಡುತ್ತೇವೆ: ಅದು ನನ್ನ, ನಿನ್ನ ಅಥವಾ ಅವನ ಪ್ರೀತಿಯೆಂದು ಆಲೋಚಿಸುತ್ತೇವೆ. ಆದರದು ಹಾಗಿಲ್ಲ. ಅದು ಯಾರ ವಿಶೇಷಣವೂ ಅಲ್ಲ, ಯಾರಿಂದ ಸ್ಪಷ್ಟವಾದುದೂ ಅಲ್ಲ. ಅದು ಮೇಲಿಂದ ಬರುತ್ತದೆ. ಅದು ನಿಮ್ಮ ಪ್ರಜ್ಞೆಯೊಳ ಹೊಕ್ಕಾಗ ಅದು ನಿಜವಾಗಿ ಬಂದು ಉನ್ನತತರ ಶಕ್ತಿಯಾದರೂ ಅದು ನಿಮ್ಮೊಳಗಿನಿಂದಲೇ ಹುಟ್ಟಿ ಬೆಳೆದಂತೆ ನಿಮಗೆನ್ನಿಸುತ್ತದೆ.

"ಪ್ರೇಮ ಅಥವಾ ವಾತ್ಸಲ್ಯವು ವಿಶ್ವಸಾಮಾನ್ಯವಾದ ಮಹಾಶಕ್ತಿಗಳಲ್ಲಿ ಒಂದು; ಅದು ತಾನೇ ತಾನಾಗಿರುತ್ತದೆ. ಅದು ನೆಲೆಸಿರುವ ಮತ್ತು ಹೊಕ್ಕು ಹೊರಡುವ ಪದಾರ್ಥಗಳಿಂದ ಅದರ ಗತಿ ಸ್ವತಂತ್ರ. ವ್ಯಕ್ತವಾಗಲು ಸಾಧ್ಯತೆ ದೊರಕಿದಲ್ಲೆಲ್ಲಾ ಸ್ವೀಕಾರಕತ್ವವಿರುವಲ್ಲೆಲ್ಲಾ ಬಾಳ ಹೋಗುವ ಅವಕಾಶವಿರುವಲ್ಲೆಲ್ಲಾ ಅದು ಆವಿರ್ಭವಿಸುತ್ತದೆ. ನೀವು ಪ್ರೇಮ, ಪ್ರೀತಿ ವಾತ್ಸಲ್ಯ ಎಂಬುದು– ಅದು ಖಾಸಗಿಯದು ಅಥವಾ ವೈಯಕ್ತಿಕವಾದುದು ಎಂದು ನೀವು ನಂಬುವುದು–ಈ ವಿಶ್ವಸಾಧಾರಣ ಶಕ್ತಿಯನ್ನು ಸ್ವೀಕರಿಸಿ ಅಭಿವ್ಯಕ್ತಗೊಳಿಸುವ ನಿಮ್ಮ ಸಾಮರ್ಥ್ಯ ಪರಿಮಾಣವಷ್ಟೇ ಆಗಿದೆ. ಅದು ವಿಶ್ವಸಾಧಾರಣ ಶಕ್ತಿಯಾಗಿರುವುದರಿಂದ ಅವಿಜ್ಞಾತಲಕ್ಷಣವುಳ್ಳದ್ದಲ್ಲ; ಅದು ಅತ್ಯಂತ ಸುವಿಜ್ಞಾತವಾದ ಶಕ್ತಿ. ತನ್ನ ಅಭಿವ್ಯಕ್ತಿಗಾಗಿಯೂ ಭೂಲೋಕದಲ್ಲಿ ತನ್ನ ಸಾಕ್ಷಾತ್ಕಾರಕ್ಕಾಗಿಯೂ ಅದು ಸುವಿಜ್ಞಾತವಾಗಿ ಪ್ರಯತ್ನಿಸುತ್ತದೆ; ಸುವಿಜ್ಞಾತವಾಗಿಯೇ ಅದು ತನ್ನ ಪಾತ್ರಗಳನ್ನು ಆರಿಸಿಕೊಳ್ಳುತ್ತದೆ; ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಬಲ್ಲವರನ್ನು ತನ್ನ ಸ್ಪಂದನದಿಂದ ಅದು ಜಾಗರಿತಗೊಳಿಸುತ್ತದೆ. ತನ್ನ ನಿತ್ಯ ಧ್ಯೇಯವನ್ನು ಅವರಲ್ಲಿ ಸಾಕ್ಷಾತ್ಕರಿಸಲು ಅದು ಪ್ರಯತ್ನಿಸುತ್ತದೆ. ಪಾತ್ರವು ಅನರ್ಹವೆಂದು ಕಂಡು ಬಂದಾಗ ಅದನ್ನು ಬಿಟ್ಟು ಇತರ ಪಾತ್ರಗಳನ್ನು ಹುಡುಕಿಕೊಂಡು ಹೋಗುತ್ತದೆ. ತಾವು ಒಮ್ಮೆಲೇ ಪ್ರೇಮಪಾಶದಲ್ಲಿ ಬಿದ್ದೆವೆಂದು ಜನರು ತಿಳಿದುಕೊಳ್ಳುತ್ತಾರೆ. ತಮ್ಮ ಪ್ರೀತಿಯು ಬರುವುದನ್ನೂ ಬೆಳೆಯುವುದನ್ನೂ ಬಾಡಿ ಹೋಗುವುದನ್ನೂ ಅವರು ನೋಡುತ್ತಾರೆ– ಅಥವಾ, ಅದು ದೀರ್ಘಗತಿಗೆ ವಿಶೇಷವಾಗಿ ಪಾತ್ರರಾದ ಕೆಲವರಲ್ಲಿ ಸ್ವಲ್ಪ ಹೆಚ್ಚು ಕಾಲ ಉಳಿಯಬಹುದು. ಆದರೆ ಅದರಲ್ಲಿ ಅವರಿಗಾದ ಖಾಸಗಿ ಅನುಭವವೆಂಬುದು ಒಂದು ಬ್ರಾಂತಿ. ಅದು ವಿಶ್ವಪ್ರೇಮದ ಶಾಶ್ವತಸಮುದ್ರದ ಒಂದು ಅಲೆ."

ಇದು ಪ್ರೇಮದ ನಿಜಸ್ವರೂಪ. ಅದು ಪಾರ್ಥಿವವೂ ಮಾನವ್ಯವೂ ಆಗಿರುವಾಗ ಬೇಗನೆಯೋ ತಡವಾಗಿಯೋ ಬಾಡುತ್ತದೆ; ಅದು ದಿವ್ಯವಾಗಿರುವಾಗ ಉಳಿಯುತ್ತದೆ. ಬೆಳೆಯುತ್ತದೆ–ಏಕೆಂದರೆ ಅಲ್ಲಿ ಅದು ತನ್ನ ಉದ್ದೇಶವನ್ನು ಸಾಧಿಸಿಕೊಳ್ಳುತ್ತದೆ. ಆ ಉದ್ದೇಶವೆಂದರೆ ಸೃಷ್ಟಿಯನ್ನೂ ಸೃಷ್ಟಿಕರ್ತನನ್ನೂ ಒಂದಿಸುವುದು, ಮೂಲದ ಇಡಿಯನ್ನೂ ಅದರ ಬಿಡಿಗಳನ್ನೂ ಏಕೀಕರಿಸುವುದು. ದ್ಯಾವಾಪೃಥಿವಿಗಳಲ್ಲಿ ಸರ್ವಾಂಗೀಣ ಸಂಪರ್ಕವನ್ನುಂಟು ಮಾಡುವುದು.

ಮನುಷ್ಯರಲ್ಲಿಯೂ ದಿವ್ಯಪ್ರೇಮಕ್ಕೆ ಸ್ಥಾನವಿದೆ. ಅತಿ ಅಲ್ಪಸಂಖ್ಯಾತರಲ್ಲಿ ಅದು ಮೊಟ್ಟ ಮೊದಲಿನಿಂದಲೂ ಸ್ಪಷ್ಟವಾಗಿರುತ್ತದೆ. ಮಾತೃಶ್ರೀ ವಾಸ್ತವಿಕವಾಗಿ ಅದರೊಡನೆಯೇ ಹುಟ್ಟಿಬಂದವಳಾಗಿರುವುದು ನಿದರ್ಶನ. ಮತ್ತೆ ಕೆಲವರಲ್ಲಿ ಬಿಲ್ವಮಂಗಲನಿಗಾದಂತೆ ಅವರ ಮಾನವ್ಯ ಪ್ರೀತಿಯು ತನ್ನ ಸಣ್ಣತನಕ್ಕೆ ಆಶ್ಚರ್ಯಪಟ್ಟು ಒಮ್ಮಿಂದೊಮ್ಮೆ ಸುತ್ತ ತಿರುಗಿ ದಿವ್ಯಶಕ್ತಿಗಾಗಿ ಮಾಡುವ ಪ್ರೇಮ(ಭಕ್ತಿ) ಅಥವಾ

ದಿವ್ಯಪ್ರೇಮ ಎಂಬ ಎತ್ತರಕ್ಕೆ ಎತ್ತಲ್ಪಡುತ್ತದೆ. ಈ ಭಕ್ತಿ ಹಿಡಿದಾಗ ಅವರು ದೇವರಿಗಾಗಿ ದುಡಿಯದಿರರು– ಅಂದರೆ ತಮ್ಮ ಉಚ್ಚ ಪ್ರಜ್ಞೆಯಲ್ಲಿ ಭಕ್ತಿರಸ ಪರಿಪೂರ್ಣವಾಗಿ ತುಂಬಿರುವಾಗ ಪಾರ್ಥಿವ ಜೀವಿಗಳಾದ ನಮ್ಮನ್ನವರು ಆಕರ್ಷಿಸುತ್ತಾರೆ ಮತ್ತು ಆ ಭಕ್ತಿಬಲದಿಂದ ಅವರು ನಮ್ಮ ಪ್ರಜ್ಞೆಯನ್ನು ಈಗಿರುವುದಕ್ಕಿಂತ ಉನ್ನತತರ ಮಟ್ಟಕ್ಕೆ ಬದಲಾಯಿಸುವರು. ಮಾತೃಶ್ರೀ ಮಾಡುತ್ತಿರುವುದು ಇದನ್ನೇ.

ಅವಳ ಬಳಗಕ್ಕೆ ಇಷ್ಟೆಲ್ಲಾ ಜನರನ್ನು ಸೇರಿಸಿದ್ದು ಅವಳ ಈ ಪ್ರೇಮವೇ. ಇದೇ ಅವರಿಗೆ ನೆಳಲನ್ನೂ ಕಾಪನ್ನೂ ಕೊಟ್ಟು ಉಚ್ಚತರ ಪ್ರಜ್ಞಾಸ್ತರದ ಹಾದಿಯಲ್ಲಿ ಕರೆದುಕೊಂಡು ಹೋಗುತ್ತಿರುವುದು. ಆಶ್ರಮದ ಹೊರಗೆ ದೂರದಲ್ಲಿರುವ ಸಾವಿರಾರು ಜನರು ಈಲಾಭವನ್ನು ಪಡೆಯುತ್ತಿದ್ದಾರೆ. ಅವಳೀ ಆಸೆಯನ್ನು ಎಂದೋ ವ್ಯಕ್ತಪಡಿಸಿದ್ದಳು; "ಓ ದೇವರೇ, ಹೆಚ್ಚು ಹೆಚ್ಚಾಗಿ ಈ ಕೂಡುಕೊಂಡಿಯಾಗಲು, ನೆಂಟಿನ ಗಂಟಾಗಲು, ನಿನ್ನ ಚೆಲ್ಲಿ ಸುರಿದ ಚೈತನ್ಯದ ಚೂರುಗಳನ್ನು ಒಟ್ಟುಗೂಡಿಸಲು, ಉತ್ತಮ ಉತ್ತಮತರವಾಗಿ ಪುನಾರಚಿತವಾಗುವಂತೆ ಗುಂಪುಗೂಡಿಸಲು–ಅದರಲ್ಲೂ ಏಕ ಕಾಲದಲ್ಲಿ ಅವು ಏಕವೂ ಅನೇಕವೂ ಆಗಿರುವಂತೆ ಮಾಡಲು..."

ಅದೇ ನಾವಾಗಿದ್ದೇವೆ–ದಿವ್ಯಚೈತನ್ಯದ ಚೂರುಗಳು–ಇವನ್ನು ತೆಗೆದು ಅವಳು ಒಂದಲ್ಲಾ ಒಂದು ದಿನ ಇಡಿಯನ್ನಾಗಿ ಮಾಡುವಳು.

# ೧೦. ಮಾತೃಶ್ರೀಯ ಆಶೀರ್ವಾದಗಳು

ಯಾರು ಬೇಡುವರೋ ಯಾರಿಗೆ ಅಗತ್ಯವೋ ಅವರೆಲ್ಲರಿಗೂ ಮಾತೃಶ್ರೀ ತನ್ನ ಆಶೀರ್ವಾದಗಳನ್ನು ಕೊಡುತ್ತಾಳೆ. ಹೂವುಗಳ ಮೂಲಕ ಆಶೀರ್ವಾದ ಕೊಡುವುದು ಅವಳದೇ ಆದ ವಿಶಿಷ್ಟ ವಿಧಾನ. ಅದು ದೇವರ ಸ್ವಂತದ ಕ್ರಮಗಳಲ್ಲಿ ಒಂದು ಕ್ಲೇಶತಪ್ತವಾದ ಈ ಲೋಕಕ್ಕೆ ಅಸಂಖ್ಯಾತ ಜಾತಿಯ ಪುಷ್ಪಗಳನ್ನು ವರವಾಗಿ ಕಳಿಸಿಕೊಡುವುದು; ಅವುಗಳಿಗೆ ತಮ್ಮ ಸುಗಂಧ–ಸೌಂದರ್ಯಗಳಿಂದ ಜನರಿಗೆ ಸಂತಸ. ಪ್ರತ್ಯಾಶೆ, ಸಮಾಧಾನಗಳನ್ನು ತರುವುದನ್ನು ಬಿಟ್ಟರೆ ಬೇರೆಯ ಕೆಲಸವೇ ಇಲ್ಲ. ಅದರಿಂದಲೇ ದೇವರ ಆಶೀರ್ವಾದಗಳ ಉಚಿತ ವರಗಳೆನ್ನಿಸಿರುವ ಹೂವುಗಳು ನಮಗೆ ಎಲ್ಲೆಲ್ಲಿಯೂ ಸಿಕ್ಕುತ್ತವೆ.

ಮಾತೃಶ್ರೀಯೇ ಸ್ವತಃ ಹೂವುಗಳನ್ನು ಪೂಜಿಸುತ್ತಾಳೆ. ಪುಷ್ಪಸೇವೆಯ ಒಂದು ವಿಶಿಷ್ಟ ಶಾಖೆಯನ್ನೇ ಅವಳು ಸಂಸ್ಥಾಪಿಸಿರುತ್ತಾಳೆ. ಅನೇಕ ದೊಡ್ಡ ಹೂದೋಟಗಳು ಆಶ್ರಮದ ಆಸ್ತಿಯಾಗಿವೆ. ಅಲ್ಲಿ ಅನೇಕ ಬಗೆಯ ಗಿಡಗಳೂ ಹೂವಿನ ಏರಿಗಳೂ ಇವೆ. ಆಶ್ರಮಕ್ಕೆ ಸೇರಿದ ಪ್ರತಿ ಮನೆಗಳಲ್ಲಿ ಎಂಬಂತೆ ನೈದಿಲೆಯ ಕೊಳಗಳೂ ಇವೆ. ಆಶ್ರಮದ ಮುಖ್ಯ ಕಟ್ಟಡದಲ್ಲಿಯೇ ಗೋಡೆಬದಿಗಳಲ್ಲಿ ಮತ್ತು ಲಭ್ಯವಾದ ಮೂಲೆಗಳಲ್ಲಿ ಪೊದೆ, ಗಿಡ, ಬಳ್ಳಿಗಳು ಚಿತ್ರವಿಚಿತ್ರ ವರ್ಣಗಳ ಹೂವುಗಳಿಂದ ಇಡಿ ವರ್ಷ ತುಂಬಿರುತ್ತವೆ. ಶ್ರೀ ಅರವಿಂದರ ಸಮಾಧಿಗೂ ಮಾತೃಶ್ರೀಗೂ ದಿನವೂ ಬುಟ್ಟಿಯಲ್ಲಿ ತುಂಬಿದ ಹೂವುಗಳನ್ನು ಕಳಿಸಲಾಗುತ್ತದೆ; ಅವನ್ನು ಮಾತೃಶ್ರೀ ಆಶೀರ್ವಾದಗಳೆಂದು ಹಂಚುತ್ತಾಳೆ.

ತನ್ನ ವಿಶಿಷ್ಟ ವರ್ಣ–ವಾಸನೆಗಳಿಂದ ವ್ಯಕ್ತಪಡಿಸುವ ಸ್ವಂತ ಭಾಷೆಯು ಪ್ರತಿಯೊಂದು (ಜಾತಿಯ) ಹೂವಿಗೂ ಇದೆ. ಅದರ ಬಾಳಿನಲ್ಲಿ ಸತ್ಯದ ಒಂದೇ ಒಂದು ಸಂದೇಶವಿರುತ್ತದೆ; ಅಪಾರ್ಥಕ್ಕೆಡೆಯೆಂದೂ ಉಂಟಾಗದಂತೆ ಅದು ಆ ಸಂದೇಶವನ್ನು ಚಿತ್ರಿಸುತ್ತದೆ. ಇಷ್ಟರಮೇಲೆ ಹೂವಿನ ಹೃದಯ ಯಾವಾಗಲೂ ತೆರೆದಿರುತ್ತದೆ. ಅದರಿಂದ ನೀವು ಅದಕ್ಕೆ ಯಾವ ವಿಶೇಷಾರ್ಥವನ್ನು ಬೇಕಾದರೂ ಕೊಡಬಹುದು. ಅದು ಆ ವಿಶೇಷಾರ್ಥವನ್ನು ಯಾರನ್ನು ಉದ್ದೇಶಿಸಿ ಕೊಡಲಾಗಿದೆಯೋ ಅವರಿಗದನ್ನು ಪ್ರಾಮಾಣಿಕವಾಗಿ ಒಯ್ದು ಮುಟ್ಟಿಸುತ್ತದೆ; ಅದೇ ಅರ್ಥವನ್ನದು ನೋಡಿದಾಗಲೆಲ್ಲಾ ಉದ್ದಿಷ್ಟವ್ಯಕ್ತಿಗಳಿಗೆ ಪುನರುಚ್ಚರಿಸುತ್ತದೆ. 'ನಿಮಗೆ ಹೇಳಬೇಕೆಂದಿರುವುದನ್ನೆಲ್ಲಾ ಹೂವುಗಳೊಡನೆ ಹೇಳಿರಿ' ಎಂದು ಅದಕ್ಕಾಗಿಯೇ ಹೇಳಲಾಗುತ್ತದೆ.

ಒಂದು ಹೂವಿನ ಮೂಲಕ ತನ್ನ ಪ್ರಜ್ಞೆಯನ್ನು ಹೆಚ್ಚು ಸುಲಭವಾಗಿ (ಜನರಿಗೆ) ತಿಳಿಸಬಹುದೆಂಬುದು ಮಾತೃಶ್ರೀಯ ಅನುಭವ. ಹೂವಿಗೆ ಮನಸ್ಸೆಂಬುದಿಲ್ಲವಾದರೂ ತನಗಿರುವ ಸ್ವೀಕಾರ ಶಕ್ತಿಯ ಮೂಲಕ ಅದು ತನ್ನ ಅಂತರ್ಮಾನಸಿಕ ಪ್ರಜ್ಞೆಯನ್ನು ಬೇಕಾದ ಹಾಗೆ ತೆಗೆದುಕೊಳ್ಳಬಲ್ಲದು. ಜನರು ಬಂದು ಅವಳಿಗೆ ಹೂವುಗಳನ್ನು ಅರ್ಪಿಸಿದಾಗ ಅವರ ಸರಿಯಾದ ಮನಃ ಪ್ರಣಾಲಿಯನ್ನವು ಅವಳಿಗೆ ತಿಳಿಸುವುವು. ಅವಳೇ ಸ್ವತಃ ಅವರಿಗೆ ಹೂವುಗಳನ್ನಿತ್ತಾಗ ತನ್ನ ಅನುಕ್ತ ಆಶೀರ್ವಾದಗಳ ಪ್ರತ್ಯೇಕಾರ್ಥವನ್ನು ಅವಳು ಅವುಗಳ ಮೂಲಕ ತಿಳಿಸುತ್ತಾಳೆ. ಯೋಗ್ಯವಾದ ಸ್ವೀಕಾರ ಶಕ್ತಿಯುಳ್ಳವರು ಅದನ್ನು ತಿಳಿದುಕೊಂಡು ಅವುಗಳನ್ನು ಭಯ ಭಕ್ತಿಗಳಿಂದ ಇಟ್ಟುಕೊಂಡಿರುತ್ತಾರೆ.

ಹೂವುಗಳನ್ನು ಕೊಡುವುದರ ಮತ್ತು ಕಳೆಸುವುದರ ಅರ್ಥವೇನೆಂದರೆ–ಅವು ಮಹಾ ಮಾತೆಯ ಸರ್ವಸಾಧಾರಣವಾದ ಮಾಮೂಲು ಆಶೀರ್ವಾದಗಳನ್ನಲ್ಲದೆ, ಬಹಳ ಸಹಾಯಕಾರಿಯಾದ ಅಮೂಲ್ಯ ವಾರ್ತೆಗಳನ್ನೂ ಶಕ್ತಿಯನ್ನೂ ರೋಗನಾಶಕ ಗುಣವನ್ನೂ ಹೊತ್ತೊಯ್ಯುವುವು. ಶ್ರೀ ಅರವಿಂದರೇ ಸ್ವತಃ ಆ ಬಗ್ಗೆ ಬರೆದಿದ್ದಾರೆ: "ಅದರಿಂದಲೇ ಮಾತೃಶ್ರೀಯು ಆಶೀರ್ವಾದವೆಂದಲ್ಲದೆ ಕಾಯಿಲೆಯಲ್ಲಿ ಸಹಾಯಕವೆಂದೂ ಹೂವುಗಳನ್ನು ಕೊಡುತ್ತಾಳೆ."

ಮಾತೃಶ್ರೀಯು ಹೂವುಗಳಿಗೆ ವಿಶಿಷ್ಟವಾದ ಆಧ್ಯಾತ್ಮಿಕ ಅರ್ಥವನ್ನು ಕೊಟ್ಟಿದ್ದಾಳೆ. ಹೂವುಗಳ ಬೇರೆ ಬೇರೆ ಬಗೆಗಳಿಗೆ ಅವಳು ಕೊಟ್ಟ ಅರ್ಥಗಳನ್ನು ತೋರಿಸುವ ಪುಸ್ತಿಕೆಯೊಂದನ್ನು ಪ್ರಕಟಿಸಲಾಗಿದೆ.

ಸಾಮಾನ್ಯ ಜಾತಿಗಳನ್ನು ನಾವಿಲ್ಲಿ ಕೊಡುತ್ತೇವೆ;

ಚೆಂಗುಲಾಬಿ–ದಿವ್ಯವಾತ್ಸಲ್ಯ.
ಬೆಳ್‌ಗುಲಾಬಿ–ಶುದ್ಧೀಕೃತ ಪ್ರೇಮ
ಹಳದಿಗುಲಾಬಿ–ದೇವಜಿಜ್ಞಾಸೆ.
ಕೆಂದಾವರೆ–ಶ್ರೀ ಅರವಿಂದರ ಪ್ರತೀಕ
ಬೆಳ್ದಾವರೆ–ದಿವ್ಯಾನುಗ್ರಹ, ದಿವ್ಯಪ್ರಸಾದ
ಜಾಜಿ–ಸಮಗ್ರ ಪಾವಿತ್ರ್ಯ
ಕದಂಬ–ಅತಿಮಾನಸ ಸೂರ್ಯ
ಸೇವಂತಿಗೆ–ಜೀವ ಶಕ್ತಿ
ದೊಡ್ಡ ಡೇರೆ ಹೂವು–ಸಹಿಷ್ಣುತೆ
ಸಣ್ಣ ಡೇರೆಹೂವು–ಅಂತರ್ಮಾನಸಿಕ ಗಾಂಭೀರ್ಯ
ಸೂರ್ಯಕಾಂತಿ ಹೂವು–ಅತಿಮಾನಸೋನ್ಮುಖ ಪ್ರಜ್ಞೆ

ದಾಸವಾಳ–ದೈವೈಕ್ಯಪ್ರಜ್ಞೆ
ಲಿಂಬೆಹೂವು–ಪಾತಿವ್ರತ್ಯದಂಥ ನಿರ್ದೋಷ ನಿಷ್ಠೆ
ಗೈಲಾರ್ದಿಯ–ಭಾವಿ ಜಯ
ಡಯಾಂತಸ್–ಸಹಕಾರ
ಯುಫೋರಿಯ–ಏಕಾಗ್ರತೆ
ಕಾಬಾಳೆ–ಭಾವನಾ ಕೇಂದ್ರ
ಪೆಟೂನಿಯ–ಉತ್ಸಾಹ
ಬೆಗೋನಿಯ–ಸಮತೋಲ
ಕಾಡುಸಂಪಿಗೆ–ಜಾಗರ.
ಅಂಬೆಹಳದಿ ಹೂವು–ಮಾನಸಿಕ ಜಯ
ಉನ್ಮತ್ತ(ಧತ್ತೂರ)–ತಪಸ್ಸು
ಡೆಯಿಸಿ–ಸಮಗ್ರ ಸರಳತೆ
ಶಿರೀಷ(ಬಾಗಳ)–ವಿವೇಕ
ನೀರ್ನೈದಿಲೆ–ಐಶ್ವರ್ಯ
ಹುಲ್ಲುಹೂವು–ಪಶ್ಚಾತ್ತಾಪ
ಕತ್ತಿಕಾಯಿಹೂವು–ಸಾಕ್ಷಾತ್ಕಾರ
ಕಾಗದಹೂವು–ಕಾಪು, ರಕ್ಷಣೆ
ಶೇಫಾಲಿಕೆ–(ಆಧ್ಯಾತ್ಮಿಕ) ಬಯಕೆ, ಸಾಧನೇಚ್ಛೆ
ಆರ್ಕಿಡ್–ದೇವಸಂಗ
ಜಿರೇನಿಯಂ–ಆಧ್ಯಾತ್ಮಿಕ ಸುಖ
ಬಾಬುಲ್–ಜ್ಞಾನ
ಪೊಪಿ–ವಿಶ್ರಾಮಶೀಲ
ಮದರಂಗಿ ಹೂವು–ದೇವರಿಗಾಗಿ ಶಕ್ತಿ
ಮಾಧವಿ–ಆಧ್ಯಾತ್ಮಿಕ ಜಯ
ಮಾಲತಿ–ಉದಯ ತಾರೆ
ಚಂಪೆ(ಸಂಪಿಗೆ)–ಅತಿಮಾನಸ ಸಾಕ್ಷಾತ್ಕಾರ
ಚಂಡುಹೂವು(ಗೊಂಡೆ)–ನಮ್ರತೆ
ಚೇಲ, ಯೂಥಿಕೆ, ಮಲ್ಲಿಗೆ, ಕಾಮಿನಿ–ಅಂತರ್ಮಾನಸಿಕ ಪಾವಿತ್ರ್ಯ
ದಾಳಿಂಬೆ ಹೂವು–ದಿವ್ಯವಾತ್ಸಲ್ಯ ದಿವ್ಯಪ್ರೇಮ
ತುಳಸಿ–ಭಕ್ತಿ ಮತ್ತು ಪ್ರಾರ್ಥನೆ
ಬಿಲ್ವದಳ–ಪೂಜೆ

ಪ್ರತಿಯೊಬ್ಬರ ಜನ್ಮದಂದು ವಿಶೇಷತಃ ಅವಳು ಹೂವುಗಳನ್ನು ತೆಗೆದುಕೊಳ್ಳುತ್ತಾಳೆ ಮತ್ತು ಕೊಡುತ್ತಾಳೆ. ಈ ವಿಶಿಷ್ಟ ಹರಕೆಯನ್ನವಳಿಂದ ಪಡೆಯಲು ಹೊರಗಿನ ಬಹುದೂರದ ಊರುಗಳಿಂದ ಭಕ್ತರು ಆಶ್ರಮಕ್ಕೆ ಹೋಗುತ್ತಾರೆ.

ಅದಲ್ಲದೆ ವರ್ಷದ ನಾಲ್ಕು ದರ್ಶನ ದಿನಗಳಾದ ಫೆಬ್ರುವರಿ ೨೧, ಏಪ್ರಿಲ್ ೨೪, ಆಗಸ್ಟ್ ೧೫ ಮತ್ತು ನವೆಂಬರ್ ೨೪ರಂದು ಅವಳು ಎಲ್ಲರಿಗೂ ಹೂವುಗಳನ್ನು ಕೊಡುತ್ತಾಳೆ. ಕಾರ್ಯಕ್ರಮದಲ್ಲಿ ಪಾಲುಗೊಂಡು ಮಾತೃಶ್ರೀಯ ದರ್ಶನವನ್ನು ಪಡೆದುಕೊಂಡು ಹೋಗಲು ಅನೇಕಾನೇಕ ಜನರು ನೆರೆಯುತ್ತಾರೆ. ಅವರೆಲ್ಲರೂ ಬೇಕಾದಷ್ಟು ಹೂವುಗಳನ್ನು ಪಡೆಯುತ್ತಾರೆ. ಈ ಹೂವುಗಳನ್ನೊಯ್ದು ತಮ್ಮ ಗೆಳೆಯರ ಬಳಗಕ್ಕೆ ಹಂಚುತ್ತಾರೆ. ಆಶ್ರಮ ವಾಸಿಗಳೂ ತಮ್ಮ ಗೆಳೆಯರಿಗೂ ನೆಂಟರಿಗೂ ಕವರಿನಲ್ಲಿ ತುಂಬಿ ಹೂವುಗಳನ್ನು ಕಳಿಸುತ್ತಾರೆ. ಈ ಹೂವುಗಳೆಲ್ಲವೂ ಮಾತೃಶ್ರೀಯ ಹರಕೆಗಳನ್ನು ಹೊತ್ತೊಯ್ಯುತ್ತವೆ. ಅವಳ ಹರಕೆಗಳು ಈ ಪ್ರಕಾರ ಸುತ್ತಲೂ ಹಬ್ಬಿ ಪ್ರತಿಯೊಂದು ದೇಶವನ್ನೂ ಎಂಬಂತೆ ತಲುಪುತ್ತವೆ. ಅವಳು ಮನುಕುಲವನ್ನೇ ಹರಸುತ್ತಾಳೆ.

ಮಿಕ್ಕ ವಿಶೇಷ ಸಂದರ್ಭಗಳಲ್ಲಿಯೂ ಅವಳು ಹೂವುಗಳನ್ನು ಹಂಚುತ್ತಾಳೆ; ಶ್ರೀ ಅರವಿಂದರು ಪಾಂಡಿಚೇರಿಯನ್ನು ಬಂದು ಸೇರಿದ ಏಪ್ರಿಲ್ ೪, ಅಷ್ಟಮೀ ಪೂಜೆಯ ದಿನ, ವಿಜಯದಶಮಿಯ ದಿನ, ಕಾಳೀ ಪೂಜೆಯ ದಿನ, ಲಕ್ಷ್ಮೀ ಪೂಜೆಯ ದಿನ, ಸರಸ್ವತೀ ಪೂಜೆಯ ದಿನ, ಕ್ರಿಸ್‌ಮಸ್ ಮತ್ತು ಯುಗಾದಿಯ ದಿನ.

ಮಾತೃಶ್ರೀ ಕೊಟ್ಟ ಹೂವುಗಳಲ್ಲಿ ಉತ್ಕ್ರಿಯಾತ್ಮಕ ಶಕ್ತಿ ಕೆಲಸ ಮಾಡುತ್ತಿರುತ್ತದೆ. ಆದರೆ ಅದರ ಪೂರ್ಣಲಾಭವನ್ನು ಪಡೆಯಬೇಕಾದರೆ ಮನುಷ್ಯನಿಗೆ ಶ್ರದ್ಧೆ–ಆತ್ಮವಿಶ್ವಾಸಗಳಿರಬೇಕು ಆಗ ಮಾತ್ರ ಆ ಶಕ್ತಿ ಕೆಲಸ ಮಾಡುತ್ತದೆ.

# ೧೧. ಮಾತೃಶ್ರೀಯ ಅನುಗ್ರಹ

'ಅನುಗ್ರಹ' ಎಂದರೇನು? ನಮಗೆ ಗೊತ್ತಿರುವ ಹಾಗೆ ಅದು ತರ್ಕಾತೀತ. ನಿನಗೆ ಅರ್ಹತೆಯಿಲ್ಲದಿರುವಾಗಲೂ ಏಕಾಏಕಿ ದೇವರು ಕೊಟ್ಟ ವರವಾಗಿ ನಿನಗೆ ಪೂರ್ವಸೂಚನೆಯಿಲ್ಲದೆ ನಿನ್ನೆಡೆಗದು ಬಂದದ್ದನ್ನು ನೀನು ಕಾಣಬಹುದು. ಹಕ್ಕಿನಿಂದ ನೀನದನ್ನು ಪಡೆಯಲಾರೆ ಅಥವಾ ಏನಾದರೂ ಕಾರಣ ಕೊಟ್ಟು ಅದನ್ನು ಬೇಡಲಾರೆ. ಅದಕ್ಕೆ ಕೊಡಬೇಕಾದ ಕಾರಣವಿಲ್ಲ. ಮನುಷ್ಯಕೃತವಾದ ಯಾವ ನಿಯಮದಂತೆಯೂ ಅದು ವರ್ತಿಸದು. ಅದು ಸರ್ವ ವಿಧಿ ನಿಯಮಗಳಿಗೂ ಹೆಚ್ಚಿನದು.

ಅನುಗ್ರಹ ಅಥವಾ ಪ್ರಸಾದವು ವಾತ್ಸಲ್ಯಕ್ಕೆ ಸರಿದೊರೆ. ವಾತ್ಸಲ್ಯ ಮತ್ತು ಅನುಗ್ರಹ ಇರುವುದರಿಂದ ಈ ಜಗತ್ತಿನಲ್ಲಿಯ ನಮ್ಮ ಬಾಳು ಸಾರ್ಥಕ; ಇಲ್ಲವಾದರೆ ಇದು ಅಸಹನೀಯವಾಗಿಬಿಡುತ್ತಿತ್ತು.

ವಾತ್ಸಲ್ಯ–ಅನುಗ್ರಹಗಳ ಮೂಲ ಆಕರ ಮೇಲಿದೆ. ಆದರೆ ವಾತ್ಸಲ್ಯ–ಕರುಣೆಗಳಿಗಿಂತ ಅನುಗ್ರಹವು ಒಂದು ಹೆಜ್ಜೆ ಮುಂದಿದೆ. ಅದು ದಿವ್ಯ ಚೈತನ್ಯದ ಒಂದು ವಿಶಿಷ್ಟ ಶಕ್ತಿ. ಅದೇ ಮರ್ತ್ಯರಾದ ನಮ್ಮನ್ನು ಉಳಿಸಿ, ರಕ್ಷಿಸಿ, ಉದ್ಧರಿಸುವುದು.

ವಿಶ್ವಸಾಮಾನ್ಯವಾದ ನಿಸರ್ಗದ ನಿಯಮಗಳನ್ನು ಇಡೀ ಜಗತ್ತು ತಪ್ಪದೆ ಅನುಸರಿಸುತ್ತದೆ. ಪ್ರತಿಯೊಂದರಲ್ಲೂ ನಿಸರ್ಗ ತನ್ನ ಹಾದಿಯಲ್ಲೇ ಹೋಗುತ್ತದೆ. ದೇವರ ಅಥವಾ ಮಾತೃಶ್ರೀಯ ಅನುಗ್ರಹ ಒದಗಿ ಬಂದಾಗ ಮಾತ್ರ ಅದು ಎಲ್ಲ ನಿಯಮಗಳನ್ನೂ ಮೀರಿ ಅಪವಾದವನ್ನು ನಿರ್ಮಿಸುತ್ತದೆ. ಆದುದರಿಂದಲೇ ಹಿಂದಿನ ಕಾಲದಿಂದ ದೈವಾನುಗ್ರಹವಾದಲ್ಲಿ ಮೂಕರು ಮಾತಾಡಬಲ್ಲರು. ಕುಂಟರು ಗುಡ್ಡವನ್ನು ದಾಟಬಲ್ಲರು ಎಂದು ಹೇಳುತ್ತ ಬಂದದ್ದುಂಟು. ಪಾಪಿಗೂ ಸ್ವೇಚ್ಛಾಚಾರಿಗೂ ದೇವರ ಅನುಗ್ರಹ ದೊರಕಬಹುದು. ಈ ಮಾತಿಗೆ ಬಿಲ್ವಮಂಗಲ, ಜಾಗೈಮಧೈ, ಸೇಂಟ್ ಆಗಸ್ಟೈನ್ ಮತ್ತು ಇತರ ಎಷ್ಟೋ ಜ್ಞಾತಾಜ್ಞಾತ ವ್ಯಕ್ತಿಗಳ ಉದಾಹರಣೆಗಳಿವೆ.

ಆದರೆ ಕಾರ್ಯಕರವಾಗಬೇಕಾದರೆ ದೈವಾನುಗ್ರಹಕ್ಕೆ ಕೆಲ ಆಂತರಿಕ ಉಪಾಧಿಗಳಿವೆ. ಅದಕ್ಕೆ ಪ್ರದಾತೃ ಆದಾತೃಗಳಿರಬೇಕು. ಆದಾತೃವಿಗೆ ಎಲ್ಲಾದರೂ ಎಷ್ಟಾದರೂ ಸ್ವೀಕಾರಾರ್ಹತೆ ಇರಬೇಕು. ಈ ಉಪಾಧಿಗೆ 'ಅನುಗ್ರಹಾರ್ಹಸ್ಥಿತಿ' ಎಂದು ಹೆಸರು. ಎಷ್ಟೋ ವೇಳೆ ವ್ಯಕ್ತಿಯಲ್ಲಿ ಈ 'ಅನುಗ್ರಹಾರ್ಹಸ್ಥಿತಿ' ಸಿದ್ಧವಾಗುವುದು ಮಾನಸಾತೀತವೂ ಬುದ್ಧ್ಯತೀತವೂ ಆದ ದಪ್ಪಪರದೆಗಳ ಹಿಂದೆ; ಅನುಗ್ರಹಾರ್ಹ ಸ್ಥಿತಿ ಬಂದಾಗ ಅನುಗ್ರಹವು ಸ್ವತಃ ಕೆಲಸಮಾಡುತ್ತದೆ.

ಈ ಅನುಗ್ರಹವನ್ನು ಭೂತಲದಲ್ಲಿ ತಂದುನಿಲ್ಲಿಸಲೆಂದೇ ಮಾತೃಶ್ರೀ ಇಲ್ಲಿಗೆ ಅವತರಿಸಿ ಬಂದಿದ್ದಾಳೆ. ಶ್ರೀ ಅರವಿಂದ ಉವಾಚ:

"... ಇಲ್ಲಿ ಅವಳು ಶರೀರಸ್ಥೆಯಾಗಿ ಭೌತಿಕ ಪ್ರಪಂಚವನ್ನು ಪರಿವರ್ತಿಸುವುದರ ಸಲುವಾಗಿ ಈವರೆಗೂ ವ್ಯಕ್ತವಾಗದಿರುವ ಏನೋ ಒಂದನ್ನು ಇಲ್ಲಿಗೆ ತಂದಿಳಿಸಲು ಕೆಲಸ ಮಾಡುತ್ತಿದ್ದಾಳೆ–ಆ ಉದ್ದೇಶಕ್ಕಾಗಿ ದೇವತಾ ಶಕ್ತಿ ಇಲ್ಲಿಗೆ ಬಂದು ದುಡಿಯುತ್ತಿದೆ ಎಂದೇ ನೀವು ಅವಳ ಬಗೆಗೆ ತಿಳಿದುಕೊಳ್ಳಬೇಕು."

ಈ ದಿವ್ಯಾನುಗ್ರಹ ಕಾರ್ಯಕಾರಿಯಾಗುವಾಗ, ಏನಾಗುತ್ತದೆ? ಪರಿವರ್ತನ–ಇಡಿ ಬಾಳಿನ ಬದಲಾವಣೆ. ಅದು ಸ್ವಭಾವವನ್ನೂ ದೃಷ್ಟಿ ಕೋನವನ್ನೂ ಬದಲಾಯಿಸುವುದು; ಕ್ರಮಶಃ ಮನಸ್ಸಿನಲ್ಲಿ ಒಂದು ಬದಲಾವಣೆಯಾಗುವುದು; ಪ್ರಾಣಮಯ–ಅನ್ನಮಯ ಕೋಶಗಳಲ್ಲೂ ಪರಿವರ್ತನವಾಗುವುದು. ಆದರೆ ಹೊರ ಪರಿಸರದಲ್ಲಿ ಒಮ್ಮೆ ಯಾವ ಬದಲಾವಣೆಯೂ ಉಂಟಾಗದಿರಬಹುದು– ಅದರಲ್ಲೊಮ್ಮೆ ಬಡತನ ಕಷ್ಟಕಾರ್ಪಣ್ಯಗಳು ತುಂಬಿರಬಹುದಾಗಿದೆ. ಆದರೆ ನಿನ್ನ ದೈವ ಬದಲಾಯಿಸಲಿರುವುದರಿಂದ, ನಿನ್ನ ಮನಃ ಪ್ರಣಾಲಿ ಬದಲಾಯಿಸುವುದು. ದಿವ್ಯಾನುಗ್ರಹದ ಬಲದಿಂದ ನೀನಾಯೆಲ್ಲವನ್ನೂ ಸುಲಭವಾಗಿ ಹೊಕ್ಕು ಹೊರಬೀಳುವೆ. ನೀನು ಎಲ್ಲ ಅಂಜಿಕೆ, ಉತ್ಕಂಠೆ, ದುಃಖಗಳಿಂದ ಮುಕ್ತನೂ ಸುರಕ್ಷಿತನೂ ಆಗುವೆ. "ದಿವ್ಯಮಾತೆ" ಎಂಬ ಗ್ರಂಥದಲ್ಲಿ ಶ್ರೀ ಅರವಿಂದರೆಂದದ್ದನ್ನು ಕಿವಿಗೊಟ್ಟು ಕೇಳಿರಿ:

"ದಿವ್ಯಮಾತೆಯ ಅನುಗ್ರಹವೂ ರಕ್ಷಣೆಯೂ ನಿಮಗೆ ದೊರಕಿರುವಾಗ ನಿಮ್ಮನ್ನು ಯಾರು ಮುಟ್ಟಿಯಾರು? ಯಾರಿಗೆ ನೀವು ಅಂಜ ಬೇಕಾದ್ದಿದೆ? ಅದರ ಅಲ್ಪಾಂಶವಿದ್ದರೂ ಸಾಕು–ಅದು ನಿಮ್ಮನ್ನು ಕಷ್ಟಗಳಿಂದ, ಅಡಚಣೆಗಳಿಂದ, ಅಪಾಯ–ಆಪತ್ತುಗಳಿಂದ–ಆ ಮೂಲಕ–ಪಾರುಮಾಡುವುದು... ಅದರ ಸ್ಪರ್ಷವು ಕಷ್ಟಕರ ಸನ್ನಿವೇಶಗಳನ್ನು ಸದವಕಾಶಗಳನ್ನಾಗಿ ಪರಿವರ್ತಿಸಬಲ್ಲದು– ಸೋಲನ್ನು ಗೆಲುವನ್ನಾಗಿಯೂ ದೌರ್ಬಲ್ಯವನ್ನು ಚಾಚೂತಪ್ಪದ ಬಲವನ್ನಾಗಿಯೂ ಬದಲಾಯಿಸಬಲ್ಲದು. ಏಕೆಂದರೆ ದಿವ್ಯಮಾತೆಯ(ಮಾತೃಶ್ರೀಯ) ಅನುಗ್ರಹವೆಂಬುದು ಪರಮಾತ್ಮನ ಅನುಮತಿ; ಅದು–ಇಂದಲ್ಲದಿದ್ದರೆ ನಾಳೆ–ಫಲಿಸಿಯೇ ತೀರುತ್ತದೆ–ಅದು ಆಜ್ಞಪ್ತ, ಅಪರಿಹಾರ್ಯ, ಅಪ್ರತಿಭಟನೀಯ."

ಭಯ–ಶಂಕೆಗಳೆಲ್ಲವುಗಳಿಂದ ಮುಕ್ತವಾಗಿ, ನೀವು ಬದಲಾದ ಮನುಷ್ಯರಾಗಿಬಿಡುವಿರಿ: ನೀವು ಶಾಂತಿ, ಸಂತೋಷ, ಸುಬೋಧ, ಆನಂದಗಳಲ್ಲಿ ಬಾಳುವಿರಿ. ಸಂಕುಚಿತವಾದ ಅಹಂಭಾವವೂ ಸ್ವಾರ್ಥಮತಿಯೂ ಅದೃಶ್ಯವಾಗುವುವು. ಏಕೆಂದರೆ, ನಿಮ್ಮನ್ನು ಸೇರಿಸಿಕೊಂಡು ಎಲ್ಲವೂ ದೇವರಿಗೆ ಸೇರಿದವುಗಳೆಂಬುದು ನಿಮಗೆ ಸಾಕ್ಷಾತ್ಕಾರವಾಗುವುದು.

ಸಾಮಾನ್ಯನಲ್ಲಿರಲಿ–ಸಾಧಕ ಕೂಡ ಇದನ್ನು ನಂಬುವುದು ಕಷ್ಟವೆಂಬುದು ಯಾರಾದರೂ ಒಪ್ಪಲೇಬೇಕು. ದೇವತಾನುಗ್ರಹ ಎಲ್ಲವನ್ನು ಮಾಡುವುದಾದರೆ ನನ್ನ ವೈಯಕ್ತಿಕ ಶಕ್ತಿಗೂ ಪ್ರಯತ್ನಕ್ಕೂ ಯಾವ ಬೆಲೆಯಿದೆ? ಎಂದು ಕೇಳಬಹುದು. ನನಗೆ ವೈಯಕ್ತಿಕ ಶಕ್ತಿ–ಸಾಮರ್ಥ್ಯಗಳನ್ನೇಕೆ ದೇವರು ಕೊಟ್ಟ? ನನ್ನ ವೈಯಕ್ತಿಕ ಪ್ರಯತ್ನದಿಂದ ನನಗೇನೂ ಸಿಕ್ಕಲಾರದೇನು? ನನಗೆ ನನ್ನಲ್ಲಿ ವಿಶ್ವಾಸ ಇರಲೇಬಾರದೇ? ಎಂದೆಲ್ಲಾ ಕೇಳಿಯಾನು. ಇಂಥ ಎಲ್ಲ ಪ್ರಶ್ನೆಗಳಿಗೂ ಶ್ರೀ ಅರವಿಂದರು ಸ್ವಭಾವಸಹಜ ಉತ್ತರವನ್ನು ಕೊಟ್ಟಿದ್ದಾರೆ.

"ಬಲ–ಅನುಗ್ರಹಗಳೆಂದು ನಾನು ಹೇಳುವುದರಲ್ಲಿ ಯಾವ ಅಂಶವೂ ಅರ್ಥವಾಗದಿರುವಂಥದಲ್ಲ. ಬಲಕ್ಕೆ ಆಧ್ಯಾತ್ಮಿಕ ಸಾಕ್ಷಾತ್ಕಾರದ ಪ್ರಯತ್ನದಲ್ಲಿ ಉಪಯುಕ್ತತೆಯಿದೆ. ಆದರೆ ಇನ್ನಾವುದರ ನೆರವೂ ಇಲ್ಲದೆ ಅದೊಂದೇ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಮಾಡಬಲ್ಲದೆಂಬುದು ಘಾತಕವಾದ ಅತಿಶಯೋಕ್ತಿ. ಅತಿ ಒರಟಾದ ಅತ್ಯುಕ್ತಿ. ಅನುಗ್ರಹವು ಕಪೋಲಕಲ್ಪಿತವಲ್ಲ–ಅದು ಆಧ್ಯಾತ್ಮಿಕ ಅನುಭವಕ್ಕೆ ಸೇರಿದ ಒಂದು ವಾಸ್ತವಿಕ ಸಂಗತಿ. ವಿವೇಕಿಗಳಿಂದಲೂ, ಬಲಿಷ್ಠರಿಂದಲೂ ಶೂನ್ಯಾತ್ಮರೆಂದು ಗಣಿತವಾಗಬಹುದಾದವರು ಅನುಗ್ರಹವನ್ನು ಸಂಪಾದಿಸಿರುವರು. ಅನಕ್ಷರರೂ ಮಾನಸಿಕ ಶಕ್ತಿ–ತರಬೇತುಗಳಿಲ್ಲದವರೂ ಚಾರಿತ್ರ–ಸಂಕಲ್ಪ ದಾರ್ಢ್ಯವಿಲ್ಲದವರೂ ಅನುಗ್ರಹವನ್ನು ಬಯಸಿ ಒಮ್ಮೆಲೇ ಅಥವಾ ಬಹುಬೇಗ ಆಧ್ಯಾತ್ಮಿಕ ಸಾಕ್ಷಾತ್ಕಾರದೆತ್ತರಕ್ಕೆ ಬೆಳೆದದ್ದುಂಟು. ಅವರಲ್ಲಿ ಶ್ರದ್ಧೆಯಿತ್ತು ಅಥವಾ ಪ್ರಾಮಾಣಿಕತೆಯಿತ್ತು ಎಂಬ ಕಾರಣದಿಂದ. ಇವೆಲ್ಲಾ ಕಲ್ಪನಾವಿಲಾಸಗಳೆಂದು ತಿಳಿದು–ಈ ಸಾಮಾನ್ಯ ಆಧ್ಯಾತ್ಮಿಕ ಅನುಭವಗಳನ್ನು–ಇವು ಆಧ್ಯಾತ್ಮಿಕ ಇತಿಹಾಸದ ವಾಸ್ತವಿಕ ಸಂಗತಿಗಳಾಗಿರುವಾಗ–ಚರ್ಚಿಸಿ, ವಾದಿಸಿ ಏಕೆ ಅಲ್ಲವೆನ್ನಬೇಕೋ ನನಗೇನೂ ತಿಳಿಯದು.

"ಬಲವು ಆಧ್ಯಾತ್ಮಿಕವಾದುದೇ ಆದರೆ, ಆಧ್ಯಾತ್ಮಿಕ ಸಾಕ್ಷಾತ್ಕಾರದ ಒಂದು ಶಕ್ತಿಯೇ ಸರಿ; ಅದಕ್ಕೂ ಹೆಚ್ಚಿನ ಶಕ್ತಿಯೆಂದರೆ ಪ್ರಾಮಾಣಿಕತೆ; ಎಲ್ಲವುದಕ್ಕೂ ಹೆಚ್ಚಿನ ಶಕ್ತಿಯೆಂದರೆ ಅನುಗ್ರಹ. ಒಬ್ಬನು ಪ್ರಾಮಾಣಿಕನಾದರೆ ಎಷ್ಟು ವಿಲಂಬವಾದರೂ ಎಂಥ ಕಷ್ಟಗಳೆದುರಾದರೂ ಅವನ್ನೆಲ್ಲಾ ದಾಟಿ ಅವನು ಗುರಿಯನ್ನು ಮುಟ್ಟುವನು" ಎಂದು ಎಷ್ಟೋ ಸಲ ನಾನು ಹೇಳಿದ್ದೇನೆ. ನಾನು ದೇವತಾನುಗ್ರಹವನ್ನು ಪದೇ ಪದೇ ಉಲ್ಲೇಖಿಸಿದ್ದೇನೆ. "ಅಳಬೇಡ–ನಾನು ನಿನ್ನನ್ನು ಎಲ್ಲ ಪಾಪ–ದೌರ್ಜನ್ಯಗಳಿಂದ ಮುಕ್ತಗೊಳಿಸುವೆನು" ಎಂಬ ಗೀತೋಕ್ತಿಯನ್ನು ಅನೇಕ ಬಾರಿ ಎತ್ತಿ ಹೇಳಿದ್ದೇನೆ."

ನಮ್ಮ ವೈಯಕ್ತಿಕ ಶಕ್ತಿ–ಪ್ರಯತ್ನಗಳಿಗಿಂತ ಅನುಗ್ರಹವು ಹೆಚ್ಚು ಹೆಚ್ಚು ಶಕ್ತಿಯುತವಾದುದು. ನಾವು ನಮ್ಮ ಬಲವನ್ನು ಬಳಸಬೇಕೆಂಬುದೇನೋ ನಿಜ. ಆದರೆ ಕೊನೆಯ ಪರಿಣಾಮಕ್ಕಾಗಿ ದೇವತಾನುಗ್ರಹವನ್ನು ಅವಲಂಬಿಸಬೇಕು. ಅದು

ನಮ್ಮ ನೆರವಿಗೆ ಬಂದರೆ ಎಲ್ಲವನ್ನೂ ಸುಲಭಗೊಳಿಸುತ್ತದೆ. ಆದರೆ ನಮ್ಮ ಹಕ್ಕೆಂದು ಅದನ್ನು ಕೇಳಲಾರೆವು–ಅದಕ್ಕೆ ಯಾವ ಕಾಲದ ಮಿತಿಯನ್ನೂ ನಾವು ಹಾಕಲಾರೆವು. ಏಕೆಂದರದು ತನ್ನದೇ ಆದ ರೀತಿಯಿಂದ ಮತ್ತು ತನಗೆ ಬೇಕಾದ ಕಾಲದಲ್ಲಿ ಬರುವುದು.

ಆದರೆ ದೈವಾನುಗ್ರಹ ಅಥವಾ ಮಾತೃಶ್ರೀಯ ಅನುಗ್ರಹ ಹೇಗೆ ಬಂದು ಕೆಲಸ ಮಾಡುವುದು? ಅದರ ಕಾರ್ಯದ ಕ್ರಮ ಯಾವುದು? ಕೆಲ ವಿವರಗಳೊಂದಿಗೆ ಅರವಿಂದರು ಆ ಬಗ್ಗೆ ಬರೆದಿದ್ದಾರೆ:

"ನಾನು ದಿವ್ಯಾನುಗ್ರಹದ ಬಗ್ಗೆ ಸ್ವಲ್ಪ ಹೇಳಬಯಸುತ್ತೇನೆ–ಏಕೆಂದರೆ, ಮಾನವ ಬುದ್ಧಿ ಹೋಗುವ ಹಾದಿಯಿಂದ ಬಹಳ ಭಿನ್ನವಲ್ಲದ ಹಾದಿಯನ್ನು ಹಿಡಿದುಹೋಗುವ ಒಂದು ವಿಧದ ದಿವ್ಯ ಬುದ್ಧಿ ಅದು ಎಂದು ನೀವು ತಿಳಿದಿರುವಂತೆ ತೋರುತ್ತದೆ. ಆದರದು ಅದಲ್ಲ... ಅದು ಎಲ್ಲ ನಿಯಮಗಳಿಗಿಂತ ವಿಶ್ವನಿಯಮಕ್ಕಿಂತ ಹೆಚ್ಚಿನದು. ಏಕೆಂದರೆ ಎಲ್ಲ ಆಧ್ಯಾತ್ಮಿಕ ದ್ರಷ್ಟಾರರೂ ವಿಶ್ವನಿಯಮವನ್ನು ಅನುಗ್ರಹದಿಂದ ಬೇರೆಯೆಂದು ವಿಂಗಡಿಸಿದ್ದಾರೆ. ಆದರೂ ಅದು ಅವಿವೇಕಿಯಲ್ಲ. ಆದರದೇ ಆದ ವಿವೇಕವೊಂದು ಅದಕ್ಕಿದೆ. ಆ ವಿವೇಕದ ಬಲದಿಂದ ಅದು ವಸ್ತು, ವ್ಯಕ್ತಿ, ಯುಕ್ತಾವಧಿ, ಯುಕ್ತ ಋತುಮಾನಗಳನ್ನು ಮಾನಸಿಕ ಅಥವಾ ಇನ್ನಾವುದಾದರೂ ನೈಸರ್ಗಿಕ ದರ್ಶನಶಕ್ತಿಯಿಂದ ಭಿನ್ನವಾದ ದರ್ಶನಶಕ್ತಿಯಿಂದ ನೋಡುತ್ತದೆ.

"ಅದು ತನ್ನದೇ ಆದ ಅದ್ಭುತ ರಹಸ್ಯದ ರೀತಿಯಿಂದ ಕೆಲಸ ಮಾಡುತ್ತದೆ. ಮೊಟ್ಟಮೊದಲದು ಅವಕುಂಠನದೊಳಗಿನಿಂದ ಕೆಲಸಮಾಡುತ್ತದೆ; ವಸ್ತುಗಳನ್ನು ಸಿದ್ಧಗೊಳಿಸುತ್ತದೆ ಆದರೆ ತಾನು ಪ್ರಕಟವಾಗುವುದಿಲ್ಲ. ಅನಂತರ ಅದು ಪ್ರಕಟವಾಗಬಹುದು. ಆದರೆ ತನ್ನಲ್ಲಿ ಏನಾಗುತ್ತಿದೆಯೆಂಬುದನ್ನು ಸಾಧಕ ಚೆನ್ನಾಗಿ ಅರಿಯಲಾರ: ಕೊನೆಯಲ್ಲಿ ಆ ಸಾಮರ್ಥ್ಯ ಅವನಲ್ಲಿ ತಲೆದೋರಿದಾಗ ಅವನು ಅನುಭವಿಸುತ್ತಾನೆ, ಅರ್ಥ ಮಾಡಿಕೊಳ್ಳುತ್ತಾನೆ ಅಥವಾ ಆ ಅನುಭವ–ಅರ್ಥಗ್ರಹಣವನ್ನು ಆರಂಭಿಸುತ್ತಾನೆ..."

"ಆದರೆ ಯಾರೂ ಅನುಗ್ರಹವನ್ನು ತನ್ನ ಹಕ್ಕೆಂದೋ ಅಧಿಕಾರಕ್ಕೆ ವಶವರ್ತಿಯೆಂದೋ ಆಗ್ರಹಿಸಿ ಬೇಡಲಾರರು–ಅಂಥವರಿಗದು ಅನುಗ್ರಹವಾಗದು. ಕೂಗಿದ ಕೂಡಲೇ ಉತ್ತರ ಬರಬೇಕೆಂದು ಯಾರೂ ಹಕ್ಕು ಸಾಧಿಸಲಾರರೆಂಬುದನ್ನು ನೀವು ಬಲ್ಲಿರಿ. ಇಷ್ಟೇ ಅಲ್ಲ–ದೇವತಾನುಗ್ರಹ ಬರುವ ಮೊದಲು ಮತ್ತು ಅನಂತರ ಅದೃಷ್ಟವಾದ ಸುದೀರ್ಘ ಸಿದ್ಧತೆ ನಡೆದಿರುತ್ತದೆ; ಅನುಗ್ರಹೀತನು ತನಗೆ ದೊರೆತ ಅನುಗ್ರಹವನ್ನು ಉಳಿಸಿಕೊಳ್ಳಲು ಮತ್ತು ಬೆಳೆಸಿಕೊಳ್ಳಲು ಇನ್ನೂ ಬಹಳ ಕೆಲಸ ಮಾಡಬೇಕಾಗುತ್ತದೆ–ಎಂಬುದು ನನ್ನ ಅನುಭವ..."

"ದಿವ್ಯಾನುಗ್ರಹದ ಬಗೆಗೆ ಯಾವ ಸಂದೇಹವೂ ಇರಲಾರದು. ಪ್ರಾಮಾಣಿಕನು ದೇವರನ್ನು ಸೇರುತ್ತಾನೆ ಎಂಬುದೂ ಸಂಪೂರ್ಣ ಸತ್ಯವಾದ ಮಾತು."

ಶ್ರೀ ಅರವಿಂದರೂ ಮಾತೃಶ್ರೀಯೂ ದಿವ್ಯಾನುಗ್ರಹವೂ ಆಯ್ದ ಅಲ್ಪ ಸಂಖ್ಯಾತರಿಗಷ್ಟೇ ಮೀಸಲಲ್ಲ–ಅದು ಸರ್ವರಿಗೂ ಲಭ್ಯ ಎಂದಿದ್ದಾರೆ. ಆದರೆ ನೀವು ಅದಕ್ಕೆ ಬೇಕಾದ ಸ್ವೀಕತೃತ್ವವನ್ನೂ ಸಾಮರ್ಥ್ಯವನ್ನೂ ಸಂಪಾದಿಸಿರಬೇಕು; ನಿಮ್ಮಲ್ಲಿ 'ಅನುಗ್ರಹಾರ್ಹತೆ' ಇರಬೇಕು; ಅಂತಃ ಸಿದ್ಧತೆ ನಿಮಗಿರಲೇಬೇಕು.

ನಾನು ಹೀಗೆ ಅಂತಃಸಿದ್ಧತೆಯನ್ನು ಮಾಡಿಕೊಳ್ಳಬಲ್ಲೆ? ಎರಡೇ ಎರಡು ಅದಕ್ಕೆ ಅಗತ್ಯ; ಉಜ್ವಲ ಬಯಕೆ ಮತ್ತು ಪ್ರಾಮಾಣಿಕತೆ. ನೀನು ಬಯಸಬೇಕು–ಗಂಭೀರವಾಗಿ ಬೇಡಬೇಕು–ದೇವರಿಗೆ ಅಥವಾ ಮಾತೃಶ್ರೀಗೆ ನಿನ್ನನ್ನು ಸಮರ್ಪಿಸಿಕೊಳ್ಳಬೇಕು ಮತ್ತು ಅನುಗ್ರಹವನ್ನು ಯಾಚಿಸಬೇಕು; ಇನ್ನಾವ ತಪಸ್ಸೂ ಅಗತ್ಯವಿಲ್ಲ. ಶ್ರದ್ಧೆ, ಭಕ್ತಿ, ಪ್ರೀತಿ, ದೇವತಾವಲಂಬನೆ, ದೈವಸಮರ್ಪಣ ಭಾವಗಳಾಗ ತಾವಾಗಿಯೇ ಉದಯಿಸುವುವು.

ಮೊಟ್ಟಮೊದಲು ಇರಬೇಕಾದವು ದೃಢ ವಿಶ್ವಾಸ ಮತ್ತು ಆತ್ಮ ಪ್ರತ್ಯಯ. ವಿಶ್ವಾಸವು ಭಕ್ತಿ, ಪ್ರೀತಿ ಮುಂತಾದ ಎಲ್ಲವನ್ನೂ ತರುತ್ತದೆ. ಸಮರ್ಪಣೆ ಎಂದರೆ ನಿರುಪಾಧಿಕವಾದ ಆತ್ಮತ್ಯಾಗ; 'ನಾನು ನಿನಗೆ ಎಲ್ಲವನ್ನೂ ಬಿಟ್ಟು ಕೊಡುತ್ತೇನೆ. ನೀನು ನನಗೆ ಬೇಕಾದುದನ್ನು ಮಾಡು' ಎಂದೋ ಶ್ರೀ ರಾಮಕೃಷ್ಣಪರಮಹಂಸರೆಂದಂತೆ. 'ಮಾರ್ಜಾರ ಕಿಶೋರದ ಹಾಗೆ' ತಾಯಿ ಬರುವವರೆಗೆ ಅವಳನ್ನು ಕರೆಯುತ್ತಾ ಹೋಗುವುದು ಆತ್ಮತ್ಯಾಗ ಎನ್ನಿಸುತ್ತದೆ. ಅರವಿಂದರೂ ಈ ಅಂಶವನ್ನು ಒತ್ತಿ ಹೇಳಿದ್ದಾರೆ: ಮಾರ್ಜಾರ ಕಿಶೋರ ಮನಸ್ಕರಿಗೆ ಅನುಗ್ರಹವು ಬಹು ಸುಲಭವಾಗಿ ದೊರಕುತ್ತದೆ–ಎಂದು ಸೂರ್ಯಪ್ರಕಾಶದ ಅವಲಂಬನ ಮಾರ್ಗವೆಂದು ಅದನ್ನವರು ಕರೆದಿದ್ದಾರೆ.

ಆದರೆ ಈ ಬಗೆಯ ಸಾಧನಮಾರ್ಗವನ್ನು ಹಿಡಿಯಬೇಕಾದರೆ ನೀನು ಕುಳಿತಿರು, ಕೆಲಸಮಾಡುತ್ತಿರು, ಉಣ್ಣುತ್ತಿರು, ವಿಶ್ರಮಿಸುತ್ತಿರು ಅಥವಾ ಮಲಗಿರು, ಯಾವಾಗಲೂ ದೇವರನ್ನು ನೆನೆಯುತ್ತಿರಬೇಕು–ಅದೇ ಒಂದು ಅಭ್ಯಾಸವಾಗಬೇಕು ಅಭ್ಯಾಸವಾಗಲು ಸ್ವಲ್ಪಕಾಲ ಬೇಕು, ಆದರೆ ಬಯಕೆ ದೃಢವಾದುದಾದರೆ ಅದು ತಾನಾಗಿಯೇ ಬರುತ್ತದೆ. ಧ್ಯಾನಕಾಲದಲ್ಲಿ ಅಥವಾ ವಿರಾಮಕಾಲದಲ್ಲಿ ಸುಮ್ಮನೆ ನೆನಪು ಮಾಡಿಕೊಳ್ಳುವುದು ಕೆಲಸಕ್ಕೆ ಬರದು; ಧ್ಯಾನವು ಮನದಲ್ಲಿ ಯಾವಾಗಲೂ ಸಾಗುತ್ತಿರಬೇಕು–ಹೊರಗೆ ನೀನು ಯಾವುದರಲ್ಲಿ ಮಗ್ನವಾಗಿದ್ದರೂ ಸರಿಯೆ. ದೇವಾಹ್ವಾನ ಬಂದವರೆಲ್ಲರಿಗೂ ಅದು ಸ್ವಾಭಾವಿಕವಾಗಿಯೇ ಇರುತ್ತದೆ. ನಿನಗಾಕಡೆಯ ಒಲೆತವಿದ್ದರೆ ದೇವರ ಕರೆ ಬಂದಿದೆ ಎನ್ನಬೇಕು. ಶ್ರೀ ಅರವಿಂದರೆನ್ನುತ್ತಾರೆ; "ಅಪ್ರಮೇಯನನ್ನಾಯ್ದುಕೊಂಡವನನ್ನು ಅಪ್ರಮೇಯ ಆಯ್ದುಕೊಳ್ಳುತ್ತಾನೆ; ಮಾತೃಶ್ರೀ ಕೂಡ, "ಇದನ್ನೆಂದೂ ಮರೆಯದಿರು. ನಿನಗೆ ದೇವರ ಆಲೋಚನೆ ಬಂದಿದ್ದರೆ ಅದು ದೇವರು ನಿನ್ನ ಬಗ್ಗೆ ಆಲೋಚನೆ

ಮಾಡಿದುದರಿಂದ ಒಮ್ಮೆ ನೀನು ದೇವವೃತನಾದರೆ ಸಾಕು–ನಿನ್ನ ಸಮಾಚಾರ ಖಾತ್ರಿಯಾದ ಹಾಗೆಯೇ ಸರಿ' ಎಂದಿದ್ದಾಳೆ."

ಆದುದರಿಂದ ಇದು ಒಮ್ಮುಖದ ಸಂಗತಿಯಲ್ಲ. ಅರವಿಂದರು ಸ್ಪಷ್ಟವಾಗಿ ಹೇಳಿದ್ದಾರೆ: ಎಲ್ಲ ಬಗೆಯ ಅಂಜಿಕೆಗಳಿಂದ ಅಪಾಯಗಳಿಂದ ಮತ್ತು ಅಪಘಾತಗಳಿಂದ ಕಾಪಾಡಿಕೊಳ್ಳಲೆಂದು ಅಂಗತ್ರಾಣಗಳನ್ನು ಧರಿಸಿ ಹೊರಡುವುದಾದರೆ ಅದಕ್ಕೆ ಎರಡು–ಯಾಗಲೂ ಒಟ್ಟಾಗಿ ಇರುವ ಎರಡು–ಅಂದರೆ–ಮಾತೃಶ್ರೀಯ ಅನುಗ್ರಹ ಮತ್ತು ನಿನ್ನೊಳಗೆ ಶ್ರದ್ಧೆ, ಪ್ರಾಮಾಣಿಕತೆ ಮತ್ತು ಸಮರ್ಪಣ ಭಾವ ಎಂಬ ತ್ರಿಪುಟ ಇರಬೇಕು."

ಆದುದರಿಂದ ಇದು ಪರಸ್ಪರಾಹ್ವಾನದ ಒಂದು ಪ್ರಕರಣ. ಒಂದು ಮೇಲಿಂದ, ಮತ್ತೊಂದು ಕೆಳಗಿನಿಂದ–ಇಳಿಯುವುದು, ಹತ್ತುವುದು (ಅವರೋಹಣ, ಆರೋಹಣ).

ನಿನ್ನ ಕಡೆಯಿಂದ ಮಾಡಬೇಕಾದುದೆಂದರೆ, ಕ್ರಮಶಃ ನೀನು ನಿನ್ನೊಳಗೆ ಅಂತಃಸ್ಥಿತಿಯನ್ನು ರಚಿಸಿಕೊಳ್ಳುತ್ತ ಹೋಗಬೇಕು. ಅದನ್ನು ಗಡಿಬಿಡಿಯಿಂದ ಮಾಡಲು ಸಾಧ್ಯವಿಲ್ಲ; ದೀರ್ಘಾವಧಿಯ ಸಮವೇಗದ ಪ್ರಯತ್ನ ಬೇಕಾದೀತು. ಆ ಪ್ರಯತ್ನದ ಮುಖ್ಯಾಂಗವೆಂದರೆ ಮನಸ್ಸನ್ನು ಮೌನಗೊಳಿಸುವುದು. ಮನಸ್ಸೇ ಸ್ವತಃ ಆಲೋಚನೆಗಳನ್ನು ಹುಟ್ಟಿಸುವುದು. ಮನವೆಂಬುದು ಅವಿರತ ಅಲೆಗಳನ್ನು ಹುಟ್ಟಿಸುವ ಆಲೋಚನೆಗಳೆಂಬ ಹೆದ್ದೆರೆಗಳು ಬಂದು ಹೋಗುವ ಕೊಳ ಅಥವಾ ಪಾತ್ರೆಯಂತಿದೆ. ಈ ಅವಿಶ್ರಾಂತ ಮನವನ್ನು ಸ್ವಲ್ಪಕಾಲವಾದರೂ ಶಾಂತಗೊಳಿಸಬೇಕು–ಆಗ ಅದು ನಿರ್ವಿಚಾರ (ನಿರಾಲೋಚನ) ವಾಗುವುದು. ನಿನ್ನ ಅಕ್ಷುಬ್ಧವೂ ಶಾಂತವೂ ಆದ ಕೊಳದಲ್ಲಿ ಸ್ವರ್ಗೀಯ ಚಂದ್ರಮನು ತನ್ನ ಅವಿಚ್ಛಿನ್ನ ಪ್ರತಿಮೆಯೊಡನೆ ಪ್ರತಿಬಿಂಬಿಸಲಿ. ಆಗ ಆ ಪ್ರತಿಫಲನವು ಪೂರ್ಣವೂ ನಿರ್ವಿಕಾರವೂ ಆಗುವುದು. ನಿನ್ನ ದೇವಾಲಯದ ಎಲ್ಲ ಹೊಲೆ–ಹೊಲಸುಗಳನ್ನು ತೆಗೆದು ಬಿಸಾಟು ಸ್ವಚ್ಛಗೊಳಿಸು. ಆಗ ನಿನ್ನ ದೇವರು ಅಲ್ಲಿ ಸುಲಭವಾಗಿ ಹೊಕ್ಕು ಉಳಿದುಕೊಳ್ಳುವನು. ನಿನ್ನ ಮನಸ್ಸು ನಿರ್ವಿಚಾರ ಸ್ವರೂಪದ ಸಮಾಧಿಯನ್ನು ಹೊಂದಿದಾಗ ಹಿಂಡು ತಪ್ಪಿದ ವಿಚಾರವೊಂದೆರಡು ಹೊರ ಹೊರಗೆ ಮೈದೋರಿದರೂ ಅವುಗಳನ್ನು ಒಳಹೊಗಗೊಡಬೇಡ. ಎಲ್ಲವುಗಳಿಂದಲೂ ದೂರವಿರು. ಆಗ ಅವು ಮಿಂಚಿ ಮಾಯವಾಗುವ ಮೋಡಗಳಂತಾಗುವುವು. ಮನಸ್ಸು ಸ್ತಿಮಿತವೂ ಶಾಂತವು ಆದಾಗ ಮಾತೃಶ್ರೀಗೆ ಉನ್ಮುಖವಾಗಿ ಅದನ್ನು ತೆರೆದಿಡು ಮತ್ತು ಅವಳ ಕೃಪೆಯನ್ನು (ಅನುಗ್ರಹವನ್ನು) ಬೇಡು.

ಇದು ಕಠಿನ: ಆದರೆ ಇದೇನೂ ಅಸಾಧ್ಯವಾದುದಲ್ಲ. ಅನುಗ್ರಹವು ನಿನ್ನೆಡೆಗೆ ಬರಲು ಸಿದ್ಧವಾದಾಗ ಈ ಸ್ಥಿತಿ ಬಹುಬೇಗ ಬರುವುದು, ಅಜ್ಞಾನಿ ಅನಕ್ಷರ ದೈವಭಕ್ತರಲ್ಲೂ ಇದು ಸಂಭವಿಸುವುದು; ಹಾಗೆ ಸಂಭವಿಸುವುದು ತಮ್ಮದೇ ಆದ ಮನಃ ಶಮನ ಮಾರ್ಗವು ಅವರಿಗೆ ಗೊತ್ತಿರುವುದರಿಂದ.

ಆದರೆ ಜಾಗರೂಕತೆಯಿಂದಿರಬೇಕಾದ ಇನ್ನೊಂದು ಅಂಶವಿದೆ; ನಿನ್ನ ಮನಸ್ಸು ನಿರ್ವಿಚಾರ ಸ್ಥಿತಿಯಲ್ಲಿರುವಾಗ ಯಾವುದಾದರೂ ಅದಿವ್ಯ (ದೈತ್ಯ) ಶಕ್ತಿಗಳು ಒಳಹೋಗಲು ಈ ಅವಕಾಶವನ್ನು ಬಳಸಿಕೊಂಡು ನಿನ್ನನ್ನು ಅಡ್ಡಹಾದಿಗೆಳೆಯಲು ಯತ್ನಿಸಬಹುದು. ಆದುದರಿಂದ ನೀನು (ಕಾವಲುಗಾರನಂತೆ) ಎಚ್ಚರದಿಂದಿದ್ದು ನಿನ್ನ ವಿವೇಚನ ಶಕ್ತಿಯನ್ನು ಉಪಯೋಗಿಸಬೇಕು. ಅನುಗ್ರಹಾಶೆಯು ಸಡಿಲವಾಗಬಾರದು–ಅದು ನಿತ್ಯನೂತನವೂ ಉಜ್ವಲವೂ ಆಗಿರಬೇಕು–ಏಕೆಂದರೆ, ದೇವರ ಕೃಪಾಕಟಾಕ್ಷ ನಿನ್ನ ಮೇಲೆ ಎಂದು ಬೀಳುವುದೆಂಬುದು ನಿನಗರಿಯದು. ಆದುದರಿಂದ ನೀನು ನಿನ್ನನ್ನು ಸದಾ ಸ್ವೀಕರ್ತೃತ್ವದಿಂದ ಸಿದ್ಧಗೊಳಿಸಿ ಇಟ್ಟು ಕೊಂಡಿರಬೇಕು.

ಕೊಡುವುದಕ್ಕೂ ತೆಗೆದುಕೊಳ್ಳುವುದಕ್ಕೂ ನಡುವೆ ಅಂತರವಿರುವುದೂ ಉಂಟೆಂಬುದನ್ನು ನೆನಪಿಟ್ಟುಕೊಳ್ಳಬೇಕು. ನಿನ್ನ ಅನುಗ್ರಹವನ್ನು ಕಳಿಸಿಕೊಡೆಂದು ಮಾತೃಶ್ರೀಯನ್ನು ಯಾಚಿಸಿ ಅವಳ ಕರುಣೆಯನ್ನು ಎಚ್ಚರಗೊಳಿಸುವುದು ಅಷ್ಟೇನೂ ಕಷ್ಟವಲ್ಲ, ಆದರೂ ಅದನ್ನು ಸ್ವೀಕರಿಸುವುದರಲ್ಲಿ ವಿಲಂಬವುಂಟಾಗಬಹುದು. ಏಕೆಂದರೆ ಪಾತ್ರೆ ಪಾತ್ರತೆಯನ್ನಿನ್ನೂ ಪಡೆದಿರುವುದಿಲ್ಲ. ಅದರಲ್ಲಿ ಇನ್ನೂ ಸ್ವಲ್ಪ ನ್ಯೂನತೆ, ಅಶುಚಿ, ಅಪ್ರಾಮಾಣಿಕತೆ ಅಡಗಿದ್ದು ಅದು ಸಂಕುಚಿತವಾಗಿರುವುದರಿಂದ. ನಿಕಟವಾದ ಶಾರೀರಿಕ ಸಂಪರ್ಕದಿಂದಷ್ಟೇ ಅನುಗ್ರಹವನ್ನು ಪಡೆಯಲು ಬರದು. ನಿತ್ಯವೂ ಶಾರೀರಿಕ ಸಂಪರ್ಕ ದೊರೆತಾಗಲೂ ಒಬ್ಬನಿಗೆ ಅನುಗ್ರಹ ದೊರಕದಿರಬಹುದು. ಹಾಗಲ್ಲದೆ, ಯಾವಾಗಲೂ ಒಳ ಸಂಪರ್ಕವನ್ನಿಟ್ಟುಕೊಂಡಾತ ಬಹಳ ದೂರದಲ್ಲಿದ್ದರೂ ಅವನಿಗೆ ಅವಳ ಅನುಗ್ರಹ ದೊರಕಬಹುದು.

ಆ ಅತರ್ಕ್ಯ ಅನುಗ್ರಹವನ್ನು ನೀನು ಪಡೆದಾಗ ಎಲ್ಲವೂ ಸುಲಭವಾಗುವುದು. ವಿಕಾಸದ ಇಡಿ ಪ್ರಕ್ರಿಯೆಯನ್ನದು ತ್ವರಿತಗೊಳಿಸುವುದು. ಜನ್ಮಾಂತರಗಳು ಕಳೆದಮೇಲೆ ಸಾಧಿಸಬಹುದಾದುದು ಇಂದೇ, ಈ ಬಾಳಿನಲ್ಲೇ, ಈ ಜನ್ಮದಲ್ಲೇ ಸಾಧ್ಯವಾಗುವುದು (ಸಿದ್ಧಿಸುವುದು). ಅನುಗ್ರಹವು ನಿನ್ನನ್ನು ನಿನ್ನ ಆತ್ಯಂತಿಕ ಗುರಿಗೆ ಒಯ್ದು ಮುಟ್ಟಿಸುವುದು. ನಡೆದುಕೊಂಡು ಹೋಗುವುದಕ್ಕೂ ವಿಮಾನ ಪ್ರಯಾಣದಿಂದ ಹೋಗುವುದಕ್ಕೂ ಇರುವ ವ್ಯತ್ಯಾಸವು ನಿರನುಗ್ರಹ ಸಾನುಗ್ರಹ ವಿಕಾಸಸಿದ್ಧಿಗಳ ನಡುವೆ ಇದೆ.

ಆದರೆ ನೀವಿದನ್ನು ನೆನಪಿಟ್ಟುಕೊಳ್ಳಬೇಕು: ಅನುಗ್ರಹವು ನಿನ್ನ ವೈಯಕ್ತಿಕ ಲಾಭಕ್ಕಾಗಿ ಮಾತ್ರ ಅಲ್ಲ. ಅನುಗ್ರಹಸಂಪನ್ನನೂ ಅನುಗ್ರಹ ಸಮರ್ಥನೂ ಆದವನು ಮುಂದಕ್ಕೆ ಹೋಗಬೇಕು. ಮಾತೃಶ್ರೀಯ (ದೇವರ) ಕಾರ್ಯದಲ್ಲಿ ನೆರವಿಗನಾಗಬೇಕು: ದೇವರಿಗಾಗಿ ನಿನ್ನ ಹೊಸಶಕ್ತಿಯನ್ನು ಬಳಸಬೇಕು.

# ೧೨. ಮಾತೃಶ್ರೀಯ ಸೇವಾಧರ್ಮವನ್ನು ಕುರಿತು

ಇಲ್ಲಿ ಕೆಲಸಮಾಡಲೆಂದು ನಾವೆಲ್ಲ ಇಲ್ಲಿ ಹುಟ್ಟಿದ್ದೇವೆ. ನಾವು ಕೆಲಸ ಮಾಡಲೇ ಬೇಕು. ಯಾವ ಕೆಲಸವೂ ಇಲ್ಲದೆ ಯಾರೂ ಬದುಕಲಾರರು. ಯಾವುದಕ್ಕಾಗಿ ಯಾರಿಗಾಗಿ ನಾವು ಕೆಲಸ ಮಾಡಬೇಕು? ಕೇವಲ ನಮಗಾಗಿ ನಾವು ಕೆಲಸಮಾಡಬೇಕೇ? ನನಗಾಗಿ ಮಾತ್ರವೇ? ಈ ಜೀವನದ ಉದ್ದಕ್ಕೂ ನಾವು ಕೆಲಸ ಮಾಡಿ ಸಾಯುವೆವು. ಅನಂತರ ಇನ್ನೊಂದು "ನಾನಿ"ಗಾಗಿ ದುಡಿಯಲು ಹುಟ್ಟುವೆವು, ಎಂದಮೇಲೆ ನಾವು ದುಡಿಯುವುದು ಆ "ನನಗೆ" ಈ "ನನಗೆ" ಎಂಬುದು ಸುಳ್ಳು. ಹಾಗಾದರೆ ಈ ಎಲ್ಲ ಕೆಲಸದ ಉದ್ದೇಶವೇನು? ಯಾವಾಗಲೂ ಸಕ್ರಿಯವಾಗಿರುವ ಈ ಸೃಷ್ಟಿಯ ಉದ್ದೇಶವೇನು? ಒಮ್ಮೆ ಎಬ್ಬಿಸಿದರೆ ಈ ಪ್ರಶ್ನೆಗಳಿಗೆ ಉತ್ತರ ಕೊಡುವುದು ಕಷ್ಟವಾಗುವುದು.

ವಿಜ್ಞಾನವು ಈವರೆಗೆ ಯಾವ ಸಮರ್ಪಕ ಉತ್ತರವನ್ನು ಕೊಟ್ಟಿಲ್ಲ. ಕ್ರಮಿಕ ಪ್ರಜ್ಞಾ ವಿಕಾಸವು (ಕ್ರಮಮುಕ್ತಿಯು) ಸೃಷ್ಟಿಯ ಉದ್ದೇಶವೆಂದು ಅರವಿಂದರು ಎತ್ತಿ ತೋರಿಸಿದ್ದಾರೆ. ಈ ಲೀಲೆಯನ್ನು ಮುಂಬರಿಸಿಕೊಂಡು ಹೋಗಲೆಂದು ಮೂಲಭೂತ ದಿವ್ಯಪ್ರಜ್ಞೆಯು (ಈಶ್ವರ) ಜಡ ಅಜ್ಞಾನ ದ್ರವ್ಯದಲ್ಲಿ ತನ್ನನ್ನು ತಾನೆ 'ಸಿಲುಕಿಸಿಕೊಂಡಿತು.' ದ್ರವ್ಯವೆಂದರೆ, ಸೂರ್ಯನಿಂದ ಹೇಗೋ ಹೊರದೂಡಲ್ಪಟ್ಟು ಅಪಕ್ಷಿಪ್ತವಾದ ಘನೀಭೂತ ಜ್ವಲತ್ ಸಾಮಗ್ರಿ. ಕ್ರಮೇಣ ತಣ್ಣಗಾದ ಈ ಉರಿವೊಡಲೆಂಬುದು ಪೃಥಿವಿಯಾಗಿ ಪರಿಣಮಿಸಿತು. ಪ್ರಜ್ಞಾ (ಚೇತನೆ) ಲೀಲೆಗದು ರಂಗಸ್ಥಳವಾಗಬೇಕೆಂಬುದು ಉದ್ದೇಶ. ತಣಿದ ಈ ಪೃಥ್ವಿಯ ಮೇಲೆ ಮೊಟ್ಟಮೊದಲು ಹಸಿರು ಹಸಿರಾದ ಕಡಲುಗಳೆ ಮತ್ತು ಗಿಡಗಳು ಮೈದೋರಿದವು ಮತ್ತು ಅವ್ಯಕ್ತ ಚೇತನೆಯ ಕೆಲ ಅಂಶಗಳೊಡನೆ ಸಸ್ಯಜಾತಿ ತಲೆದೋರಿತು. ಅನಂತರ ಕ್ರಮೇಣ ಪ್ರಾಣಿ ಜಾತಿಯು ಮೈದೋರತೊಡಗಿತು. ಅದರಲ್ಲಿ ವಿವಿಧ ಉಪಜಾತಿಗಳಿಗೆ ಸೇರುವ ಚಿಕ್ಕ ದೊಡ್ಡ ಪ್ರಾಣಿಗಳು ಹುಟ್ಟಿದವು. ಅವುಗಳಲ್ಲಿ ಚೇತನೆಯು (ಪ್ರಜ್ಞೆಯು, ಚೈತನ್ಯವು) ಪ್ರಮುಖವಾಯಿತು. ಆದರೆ ಅವುಗಳಲ್ಲಿ ಮನಸ್ಸು ಇರಲಿಲ್ಲ. ಆ ಮೇಲೆ ಮಾನವಕುಲ ಉದಯಿಸಿತು. ಅದಕ್ಕೆ ಜೀವಶಕ್ತಿ ಮನಃಶಕ್ತಿಗಳೆರಡೂ ಇವೆ. ಇಲ್ಲಿಯವರೆಗೆ ನಾವು ಕ್ರಮವಿಕಾಸ ಪಥವನ್ನು ಅರ್ಥಮಾಡಿಕೊಳ್ಳಬಹುದು. ಆದರೆ ಈ ವಿಕಾಸ ಲೀಲೆ ಇಲ್ಲಿಗೆ ಮುಗಿದಿಲ್ಲ. ಮಾನವ ಮನಸ್ಸು ಕೊನೆಯ ಹಂತವಲ್ಲ. ಈ ಮಾನಸ ಮಾನವನಿಂದ ಒಂದು ವಿಧದ ಅತಿಮಾನಸವುಳ್ಳ ಅತಿಮಾನಸ ಬೆಳೆದು ನಿಲ್ಲುತ್ತಾನೆ.

ಆದರೆ ಅವರು ಮತ್ತೆ ಹೇಳುತ್ತಾರೆ–ವಿವಿಧ ಶಕ್ತಿಗಳನ್ನುಳ್ಳ ಮನಸ್ಸನ್ನು ನಮಗೆ ದೇವರು ಕೊಟ್ಟಿದ್ದಾನೆ. ಚೈತನ್ಯದ ಮುಂದಿನ ವಿಕಾಸ ಲೀಲೆಯಲ್ಲಿ ನೆರವಾಗುವ ಶಕ್ತಿಯನ್ನೂ ಕೆಲ ಮಟ್ಟಿನ ವಿಕಲ್ಪವನ್ನೂ ಅವನು ನಮಗೆ ಕೊಟ್ಟಿದ್ದಾನೆ; ಆ ಮೂಲಕ ವಿಕಾಸ ಪ್ರಕ್ರಿಯೆಯನ್ನು ತ್ವರಿತಗೊಳಿಸಲಾಗುತ್ತದೆ. ಇದು ದೇವರ ಕೆಲಸದಲ್ಲಿ ಸೇರಿಕೊಳ್ಳಲು ನಮಗೆ ಅನನ್ಯ ಅವಕಾಶ. ಆದರೆ ಅವನು ಅದನ್ನು ಮಾಡಲು ಒತ್ತಾಯ ತರುವುದಿಲ್ಲ. ನಮ್ಮದೇ ಆದ ಹಾದಿಯಲ್ಲಿ ಹೋಗಲು ನಮಗೆ ಮುಕ್ತ ಆಯ್ಕೆಯ ಅವಕಾಶವನ್ನು ಕೊಟ್ಟಿದ್ದಾನೆ. ನಾವೇ ನಿರ್ಣಯ ಮಾಡಲು ಬೇಕಾದ ಬುದ್ಧಿಯನ್ನೂ ಅವನು ನಮಗೆ ಕೊಟ್ಟಿದ್ದಾನೆ.

ನಾವು ಇನ್ನೂ ಅಸ್ಪಷ್ಟವಾಗಿರುವ ಸುಪ್ತ ಚೇತನೆಯನ್ನು ಹೆಚ್ಚು ಹೆಚ್ಚಾಗಿ ಎಬ್ಬಿಸಲು ಪ್ರಯತ್ನಿಸಿ ಮೂಲಭೂತ ಜಡತೆಯನ್ನು ದೂರೀಕರಿಸಬೇಕೆಂಬುದು ಅತಿ ಮುಖ್ಯವಾದ ಅಂಶವೆಂಬುದು ಮೇಲಿನ ಮಾತಿನಿಂದ ತಿಳಿದು ಬರುತ್ತದೆ. ಬಹುಶಃ ಅವಿಜ್ಞಾತವಾಗಿ ಕೆಲ ಮಟ್ಟಿಗೆ ಆ ಕೆಲಸವನ್ನು ನಾವು ಮಾಡುತ್ತಲೇ ಇದ್ದೇವೆ ಎಂಬುದು ನಿಜ ಸಂಗತಿ. ಬಾಲ್ಯದಿಂದ ಪ್ರೌಢತ್ವಕ್ಕೆ ಬೆಳೆದು ಬರುವಾಗ ನಾವು ವರ್ಷಕಳೆದ ಹಾಗೆ ಹೆಚ್ಚು ಹೆಚ್ಚು ಪ್ರಜ್ಞಾವಂತರಾಗುತ್ತ ಹೋಗುತ್ತೇವೆ. ಇದು ನಮ್ಮ ವೈಯಕ್ತಿಕ ಲಾಭಕ್ಕಾಗಿ ಎಂದು ನಾವು ತಿಳಿಯುತ್ತೇವೆ– ಅಷ್ಟೆ. ನಮ್ಮ ಬುದ್ಧಿಯನ್ನು ಅತ್ತ ತಿರುಗಿಸುತ್ತೇವೆ. ವೈಯಕ್ತಿಕ ಲಾಭಕ್ಕಾಗಿ ನಮ್ಮ ಪ್ರಜ್ಞೆಯನ್ನು ಬಳಸಿಕೊಳ್ಳುತ್ತೇವೆ; ಆದರೆ ಬಹಳ ಸಲ ನಮ್ಮ ತರ್ಕವು ಸೋಲುವುದನ್ನು ನಾವು ಕಾಣುತ್ತೇವೆ.

ಈ ಅಹಂನಿಷ್ಠ ಅಥವಾ ವೈಯಕ್ತಿಕ ದೃಷ್ಟಿಕೋನವನ್ನು ಬದಲಾಯಿಸಬೇಕು. ವೈಯಕ್ತಿಲಾಭದ ವಿಚಾರವು ಮಿಥ್ಯೆ. ದೇವರ ಅಥವಾ ಮಾತೃಶ್ರೀಯ ಕೆಲಸ ನಾವೆಲ್ಲ ಮಾಡುತ್ತಿರುವುದು. ನಮ್ಮ ಸಂಕಲ್ಪ ಶಕ್ತಿಯಿಂದ ನಾವು ನಿಜವಾಗಿ ಏನನ್ನೂ ಮಾಡುವುದಿಲ್ಲ. ಪರಿಸ್ಥಿತಿಯ ತಿರುಹಿನಿಂದ ನಾವು ಆ ಈ ಕೆಲಸವನ್ನು ಮಾಡಲು ಪ್ರಚೋದಿತರಾಗುವೆವು. ದೈವೇಚ್ಛೆಯಂತೆ ನಡೆಯಲೆಂದೇ ನಾವು ದೈವಸಂಕಲ್ಪದಿಂದ ನಿರ್ದೇಶಿಸಲ್ಪಡುತ್ತೇವೆ. ಉತ್ತೇಜನವು ಅಲ್ಲಿಂದ ಬರುತ್ತದೆ. ಆದರೆ ನಾವೇನೋ ನಮ್ಮ ಬುದ್ಧಿವಂತಿಕೆಯಿಂದ ಹಾಗೂ ಶಕ್ತಿಮತ್ತೆಯಿಂದಲೇ ಆ ಕೆಲಸವೆಲ್ಲ ಆಯ್ತೆಂದು ತಿಳಿದುಕೊಳ್ಳುತ್ತೇವೆ. ಅದೆಲ್ಲ ಬುಡವಿಲ್ಲದ ಕಲ್ಪನೆ. ಅದನ್ನು ಬಿಡಬೇಕು. ನಾವು ಏನಾದರೂ ಕೆಲಸ ಮಾಡತೊಡಗಿದರೆ ಶ್ರಮ ಸಾಧ್ಯವಾದ ಕೆಲಸವನ್ನು ಮಾಡತೊಡಗಿದರೆ–ಅನಿರೀಕ್ಷಿತವಾಗಿ ನಮಗೆ ಆ ಕೆಲಸಕ್ಕೆ ಬೇಕಾದಷ್ಟು ಬಲ ಬರುತ್ತದೆ. ಅದೆಲ್ಲಿಂದ ಬರುತ್ತದೆ? ನಮ್ಮಿಂದ ಅಲ್ಲ. "ನಮ್ಮ ಬಲ ನಮ್ಮದಲ್ಲ; ಆಡಬೇಕಾದ ಆಟಕ್ಕೆ, ಮಾಡಬೇಕಾದ ಕೆಲಸಕ್ಕೆ ಅಗತ್ಯವಿರುವಷ್ಟನ್ನು ನಮಗೆ ಕೊಡಲಾಗಿದೆ. ಸರ್ವಶಕ್ತಿ ತತ್ವವು ನಮ್ಮ ಮೇಲಿದೆ. ಒಳಗಿದೆ, ಸುತ್ತಲೂ ಇದೆ. ನಮ್ಮ ಕೆಲಸಕ್ಕಾಗಿ ನಾವು

ಅದನ್ನೇ ಅವಲಂಬಿಸಬೇಕು." ಅದು ದೇವರ ಕೆಲಸ ಮತ್ತು ದೇವರಿಂದ ಅಗತ್ಯವಾದ ಬಲವನ್ನು ಪಡೆಯುತ್ತೇವೆ.

ಆದುದರಿಂದ ನಿಜವಾದ ಸತ್ಯವನ್ನು ನಾವು ಸ್ವೀಕರಿಸಬೇಕು. ಮತ್ತು ನಮ್ರತೆಯಿಂದ ಮಾತೃಶ್ರೀಗೆ ನಮ್ಮನ್ನು ಸಮರ್ಪಿಸಿಕೊಳ್ಳಬೇಕು. ಎಲ್ಲವೂ ಅವಳ ಕೆಲಸವೇ–ನಮ್ಮದಲ್ಲ ಎಂದು ಭಾವಿಸಿಕೊಳ್ಳಬೇಕು.

ತನ್ನ ಬಾಲ್ಯದಿಂದಲೇ ಮಾತೃಶ್ರೀ ಸ್ವತಃ ಅಂಥ ವಿಚಾರವನ್ನು ವ್ಯಕ್ತಪಡಿಸುತ್ತಿದ್ದಳು. ಅವಳು ತನ್ನ ದಿನಚರಿಯಲ್ಲಿ ಹೀಗೆ ಬರೆದಳು;

"ಪ್ರಭುವೇ, ನಿನ್ನನ್ನು ದಿನವೂ ಹೆಚ್ಚು ಚೆನ್ನಾಗಿ ತಿಳಿದುಕೊಳ್ಳುವುದೂ ಸೇವಿಸುವುದೂ ನನ್ನ ಮುಖ್ಯ ಬಯಕೆ. ಹೊರ ಪರಿಸ್ಥಿತಿ ಏನಾದರೇನು? ದಿನ ಹೋದಂತೆ ಅವೆಲ್ಲಾ ಹೆಚ್ಚು ಹೆಚ್ಚು ನಿಷ್ಫಲವೂ ಮಾಯಾಮಯವೂ ಆಗಿ ತೋರುತ್ತವೆ; ನನಗೆ ಹೊರ ಹೊರಗೆ ಆಗುವ ಎಲ್ಲವುದರಲ್ಲೂ ನಾನು ಕಡಿಮೆ ಕಡಿಮೆ ಆಸಕ್ತಿಯನ್ನು ವಹಿಸುತ್ತಲಿದ್ದೇನೆ. ನನಗೆ ಮುಖ್ಯವೆಂದು ತೋರುವ ಒಂದೇ ಒಂದರಲ್ಲಿ ಹೆಚ್ಚು ಹೆಚ್ಚು ಗಾಢವಾದ ಆಸಕ್ತಿಯುಳ್ಳವಳಾಗಿದ್ದೇನೆ; ನಿನ್ನ ಸೇವೆಯನ್ನು ಚೆನ್ನಾಗಿ ಮಾಡುವುದರ ಸಲುವಾಗಿ ನಿನ್ನನ್ನು ಹೆಚ್ಚು ಚೆನ್ನಾಗಿ ಅರಿತುಕೊಳ್ಳಬೇಕೆಂದಿದ್ದೇನೆ. ಹೊರ ಘಟನೆಗಳೆಲ್ಲವೂ ಈ ಗುರಿಯತ್ತ ನನ್ನನ್ನು ಒಯ್ಯಬೇಕು– ಅದರತ್ತಲೇ ಒಯ್ಯಬೇಕು. ಅದಕ್ಕೆ ಅವುಗಳ ಬಗೆಗಿನ ನಮ್ಮ ಮನಃಪ್ರಣಾಲಿಯನ್ನೇ ಅವು ಅವಲಂಬಿಸಿವೆ. ಯಾವಾಗಲೂ ಎಲ್ಲವುದರಲ್ಲೂ ನಿನ್ನನ್ನು ಹುಡುಕುತ್ತಲೇ ಇರುವುದು. ನಿನ್ನನ್ನು ಪ್ರತಿ ಸಂದರ್ಭದಲ್ಲೂ ಹೆಚ್ಚು ಹೆಚ್ಚು ಚೆನ್ನಾಗಿ ಅಭಿವ್ಯಕ್ತಗೊಳಿಸಲು ಸಂಕಲ್ಪಿಸುತ್ತಲಿರುವುದು ನನ್ನ– ಮನಃಪ್ರಣಾಲಿ. ಈ ಮನಃಪ್ರಣಾಲಿಯಲ್ಲಿ ಪರಮಶಾಂತಿ, ಪೂರ್ಣ ಅಪ್ರಕ್ಷುಬ್ಧತೆ, ನಿಜವಾದ ತೃಪ್ತಿ ಕಂಡುಬರುತ್ತವೆ; ಅದರಲ್ಲಿ ಜೀವ ಅರಳುತ್ತದೆ, ಅಗಲವಾಗುತ್ತದೆ ಯಾವ ಬಿರುಗಾಳಿಯೂ ತೊಂದರೆ ಕೊಡಲಾರದಷ್ಟು ರಾಜಗಾಂಭೀರ್ಯದ ಉತ್ಸರ್ಜನಗಳನ್ನು ವೈಭವಪೂರ್ಣವಾಗಿ ಹರಡುತ್ತದೆ."

ಅಂಥ ಉದಾತ್ತ ಭಾವಗಳು ನಮ್ಮಲ್ಲಿ ಒಮ್ಮೆಲೇ ಹುಟ್ಟಿ ನಮ್ಮ ಸ್ಥಿರೀಕೃತ ಭಾವಗಳನ್ನೂ ಅಭ್ಯಾಸಗಳನ್ನೂ ಬದಲಾಯಿಸುವವೆಂದು ನಾವು ನಿರೀಕ್ಷಿಸಲು ಬರದು. ಆದರೆ ನಾವೀ ಮಾನಸಿಕ ಅಭ್ಯಾಸವನ್ನು ಬದಲಾಯಿಸಲು ನಿರ್ಧರಿಸಿ, ಈ ಹೊಸ ವಿಚಾರವನ್ನು ಪೋಷಿಸಲು ತೊಡಗಿದರೆ ಇದು ಕ್ರಮೇಣ ಸ್ಥಿರಪಡುವುದು. ಶ್ರೀ ಅರವಿಂದರು ಹೇಳಿದ್ದಾರೆ:

"ಮೊಟ್ಟ ಮೊದಲು ಮಾತೃಶ್ರೀಯ ಸಂಕಲ್ಪದಲ್ಲಿ ಸಾಧಕರು ತನ್ನ ಸಂಕಲ್ಪವನ್ನು ಐಕ್ಯಗೊಳಿಸಬೇಕು. ತನ್ನ ಸಂಕಲ್ಪವು ಕೇವಲ ಸಾಧನ, ಅದರ ಹಿಂದಿರುವ ಮಾತೃಶ್ರೀಯ

ಸಂಕಲ್ಪವೇ ಪರಿಣಾಮವನ್ನುಂಟು ಮಾಡಬಲ್ಲದು– ಎಂಬುದನ್ನು ಅರಿತಿರಬೇಕು. ಅನಂತರ ಪ್ರತಿಯೊಬ್ಬ ಪ್ರತ್ಯೇಕ ವ್ಯಕ್ತಿಗೂ ಪ್ರತ್ಯೇಕ ಕೆಲಸವೊಂದನ್ನು ನಿಶ್ಚಿತಗೊಳಿಸಲಾಗಿದೆ; ಆ ವೊಂದು ಕೆಲಸವನ್ನು ಮಾತ್ರ ಆ ವ್ಯಕ್ತಿ ಮಾಡಬಲ್ಲನಲ್ಲದೆ ಇನ್ನೊಂದನ್ನಲ್ಲ. ಎಲ್ಲರಿಗೂ ಎಲ್ಲ ಕೆಲಸವನ್ನೂ ದೇವರು ನಿಶ್ಚಯಿಸಿಕೊಟ್ಟಿರುತ್ತಾನೆ.

ದೇವರ (ಮಾತೃಶ್ರೀಯ) ಕೆಲಸವೆಂದರೆ ಯಾವುದೋ ಅಪೂರ್ವ ಸ್ವರೂಪದ್ದು ಎಂದು ತಿಳಿಯಬಾರದು. ಅದು ಸಾಮಾನ್ಯ ಜೀವನದಲ್ಲಿ ನಾವು ಮಾಡುವ ಕೆಲಸಕ್ಕಿಂತ ವಿಲಕ್ಷಣವಾದುದಲ್ಲ. ಈ ಸಾಮಾನ್ಯ ಚಟುವಟಿಕೆಗಳನ್ನು ನೀವು ಬಿಡಬೇಕೆಂದು ಭಾವಿಸಬೇಡಿರಿ. ಮಾತೃಶ್ರೀಗಾಗಿ ಯಾವುದಾದರೂ ನಿಜವಾದ ಕೆಲಸವನ್ನು ಮಾಡುವುದರ ಸಲುವಾಗಿ ಯುಕ್ತವಾದ ಸಾಧನವೆನ್ನಿಸಲು ಹಾಗೇನೂ ಬಿಡಬೇಕಾಗಿಲ್ಲ; ಈ ಎಲ್ಲವುದಕ್ಕಿಂತಲೂ ಹೆಚ್ಚಿನದೊಂದಿದೆಯೆಂದು ಎಣಿಸಬೇಕಾಗಿಲ್ಲ. ಅದು ಹಾಗಿರದು. ನೀವು ಸ್ವಲ್ಪ ಆಳವಾಗಿ ವಿಚಾರಮಾಡಿದರೆ, ನೀವು ಮಾಡುವ ಪ್ರತಿಯೊಂದು ಕೆಲಸವೂ ನಿಜವಾಗಿ ಮಾತೃಶ್ರೀಯ ಕೆಲಸವೇ ಆಗಬಲ್ಲದು ಮತ್ತು ಆಗಿರುತ್ತದೆ.

ನಿಮ್ಮ ಕುಟುಂಬವನ್ನು ಹೊರೆಯಲು ವ್ಯಕ್ತವಾಗಿ ನೀವು ದೈನಂದಿನ ಕಾರ್ಯಗಳನ್ನು ಮಾಡುವುದರಲ್ಲಿ ಮಗ್ನರಾಗಿರುವೆವೆಂದು ನೀವು ಹೇಳಬಹುದು. ಅವು ಮಾತೃಶ್ರೀಯ ಕೆಲಸಗಳೆಂತಾದಾವು ಎಂಬ ಪ್ರಶ್ನೆ ಏಳಬಹುದು. ಆದರೆ ನಿಮ್ಮ ಕುಟುಂಬವು ಮಾತೃಶ್ರೀಯು ಕುಟುಂಬವೇ. ಕುಲವನ್ನು ಮುಂಬರಿಸಿಕೊಂಡು ಹೋಗಿ ತಲೆತಲಾಂತರದವರೆಗೆ ವಿಕಾಸ ಕಾರ್ಯವನ್ನು ಸಾಗಿಸಿಕೊಂಡು ಹೋಗಲು ಅವು ಬೇಕಾದಂಥವುಗಳು. ಅವುಗಳನ್ನು ನಡೆಸಿಕೊಂಡು ಹೋಗುವ ಹೊಣೆಯನ್ನು ನಿಮಗೆ ವಹಿಸಿಕೊಡಲಾಗಿದೆ. ಹೀಗೆ ನೋಡಿದಾಗ, ಕುಟುಂಬ ಪೋಷಣೆಯು ತಾಯಿಯ ಕೆಲಸವೇ ಆಗಿರುವುದು ಕಂಡುಬರುತ್ತದೆ. ಈ ಮನಃಪ್ರಣಾಲಿಯನ್ನು ವಹಿಸಿದರೆ, ಕುಟುಂಬಕ್ಕೆ ಕಬ್ಬಿಣದ ಸರಪಳಿಯಿಂದ ನಿಮ್ಮನ್ನು ಕಟ್ಟಿಹಾಕಲಾಗಿದೆ, ಈ ಜನರನ್ನು ಸಾಕಲು ನೀವು ಕಷ್ಟಪಟ್ಟು ದುಡಿಯಬೇಕು ಎಂಬಂಥ ಆಲೋಚನೆಗಳೆಲ್ಲ ಮಾಯವಾಗುವುವು. ಆಗ ನಿಮಗೆ ಎಲ್ಲವನ್ನೂ ನೀವು ಮಾತೃಶ್ರೀಯ ಸೇವೆಯ ಅಂಗವಾಗಿ ಮಾಡುತ್ತಿದ್ದೀರಿ ಎಂಬುದು ಗೊತ್ತಾಗುತ್ತದೆ ಮತ್ತು ಅನುಭವಕ್ಕೆ ಬರುತ್ತದೆ.

ಅಥವಾ ನೀವು ಒಬ್ಬ ವಿಜ್ಞಾನಿ ಮತ್ತು ಸಂಶೋಧಕರಾಗಿದ್ದೀರಿ ಎಂದು ಇಟ್ಟುಕೊಳ್ಳಿರಿ. ಆ ಸಂಶೋಧನೆ ನಿಮ್ಮದೆಂದು ನೀವು ಭಾವಿಸುತ್ತೀರಿ. ಆದರೆ ಪ್ರಜ್ಞಾವಂತ ವಿಜ್ಞಾನಿ ಹಾಗೆಂದೂ ಹೇಳನು. ಸಂಶೋಧನೆಯ ಆಲೋಚನೆಯು ಆಕಸ್ಮಿಕವಾಗಿ ತನ್ನ ಮಿದುಳಿಗೆ ಹೊಳೆಯಿತೆಂದು ಅವನು ಹೇಳುತ್ತಾನೆ. ಅದು ಸತ್ಯವಾದ ಸಂಗತಿ. ನಿಸರ್ಗದ ರಹಸ್ಯಗಳ ಪ್ರಕಟಣೆಯಲ್ಲಿ ವಿಕಾಸ ಮಾರ್ಗದಲ್ಲಿ ಅಂಥ ಹೊಸ ಶೋಧಕ್ಕೆ ತಕ್ಕ ಕಾಲವೊದಗಿಬಂದಿತ್ತು; ಆದುದರಿಂದ ವಿಜ್ಞಾನಿಯ ಮಿದುಳಿನ ಮೂಲಕ ಅದು

ಸೂಚಿತವಾಗಿ ಸತ್ಯವು ಸಂಶೋಧಿಸಲ್ಪಟ್ಟಿತು. ವಿಜ್ಞಾನಿ ಕೇವಲ ಕರಣ (ಸಾಧನ). ದೇವರು ಅಥವಾ ಮಾತೃಶ್ರೀ ಅದರ ಕರ್ತ್ರಿ.

ಅಥವಾ ನೀವೊಬ್ಬ ದೊಡ್ಡ ವ್ಯಾಪಾರಿಗಳು. ಸಾವಿರ ಜನರು ನಿಮ್ಮ ಕೆಳಗೆ ಕೆಲಸ ಮಾಡುತ್ತಿದ್ದಾರೆ. ಅವರ ಯಜಮಾನರು ಮತ್ತು ಪೋಷಕರು ನೀವೇ ಎಂದು ನೀವು ತಿಳಿಯುತ್ತೀರಿ. ಸತ್ಯವಾದ ಸಂಗತಿಯೆಂದರೆ ಅವರೆಲ್ಲರೂ ಮಾತೃಶ್ರೀಯ ಮಕ್ಕಳು; ಅವರನ್ನು ಹೊರೆಯಲು, ಅವರ ರಕ್ಷಕರಾಗಲು ನಿಮ್ಮನ್ನು ಆರಿಸಲಾಗಿದೆ.

ನೀವು ರಾಷ್ಟ್ರನಾಯಕರಾಗಿದ್ದರೆ, ದೇಶದ ಜನರಿಗಾಗಿ ನೀವು ಬಹಳ ಸ್ವಾರ್ಥತ್ಯಾಗ ಮಾಡುತ್ತಿರುವುದಾಗಿ ತಿಳಿದುಕೊಂಡಿರುವಿರಿ. ಆದರೆ ಅದೂ ಮಾತೃಶ್ರೀಯ ಕೆಲಸ; ಅದನ್ನು ಮಾಡಲು ನಿಮ್ಮನ್ನು ಆರಿಸಿಕೊಳ್ಳಲಾಗಿದೆ– ಅಷ್ಟೆ.

ನೀವು ಒಬ್ಬ ಉಳುಮೆಯವರಾದರೆ (ಹೂಡುವವರಾದರೆ) ಭೂಮಿಯನ್ನು (ಗದ್ದೆಯನ್ನು) ಉಳುತ್ತೀರಿ. ಬೀಜಗಳನ್ನು ಬಿತ್ತುತ್ತೀರಿ; ಕಾಳು ಬೆಳೆದಾಗ ನೀವದನ್ನು ಬೆಳೆದವರೆಂದು ಭಾವಿಸುತ್ತೀರಿ–ಆದರೆ ಮಾತೃಶ್ರೀಯೇ ಅದನ್ನು ತನ್ನ ಮಕ್ಕಳಿಗಾಗಿ ಬೆಳೆಸುತ್ತಾಳೆ–ನೀವು ಆ ಕೆಲಸದಲ್ಲಿ ನೆರವೀಯಲೆಂದಷ್ಟೇ ನಿಯುಕ್ತರಾಗಿದ್ದೀರಿ.

ನೀವು ಯಾರೇ ಆಗಿ ಇರಬಹುದು; ಉದ್ಯೋಗಿಗಳೋ ಕರಣಿಕರೋ, ಯಂತ್ರಶಿಲ್ಪಿಗಳೋ, ವೈದ್ಯರೋ, ಕೈಕಸಬುಗಾರರೋ– ಯಾರಾದರೂ ಸರಿಯೆ– ನಿಮ್ಮ ವೃತ್ತಿಯನ್ನು ದೇವರು ಆಯ್ದದ್ದು ಎಂಬುದನ್ನು ನೆನಪಿಟ್ಟುಕೊಳ್ಳಿರಿ. ಅದೆಲ್ಲವೂ ಮಾತೃಶ್ರೀಯ ಕೆಲಸ.

ಮಾತೃಶ್ರೀಯ ಎದುರು ಚಿಕ್ಕಕೆಲಸ. ದೊಡ್ಡ ಕೆಲಸ, ಎಂಬ ಭೇದವಿಲ್ಲ. ಅವಳಿಗೆ ಎಲ್ಲ ಕೆಲಸಗಳೂ ಒಂದೇ ತರದ ಪ್ರಾಮುಖ್ಯವುಳ್ಳವು. ನಿಮ್ಮ ಕೆಲಸ ಎಷ್ಟೋ ಸಣ್ಣದಾಗಿದ್ದರೂ ಅದು ಅನಾಮಧೇಯ (ಕಿಮ್ಮತ್ತಿಲ್ಲದ್ದು) ಎಂದು ತಿಳಿಯಬೇಡಿರಿ. ಮಾತೃಶ್ರೀಯ ದೃಷ್ಟಿಯಲ್ಲಿ ಅದಕ್ಕೆ ಪ್ರತ್ಯೇಕವಾದ ಒಂದು ನೆಲೆ ಇದ್ದೇ ಇದೆ. ನೀವು ಮಾಡುತ್ತಿರುವ ಕೆಲಸ ಎಷ್ಟೇ ದೊಡ್ಡದಾಗಿರಲಿ ಅಥವಾ ಕೌಶಲ ಸಾಧ್ಯವಾದುದಾಗಿರಲಿ. ಅದರ ಬಗ್ಗೆ ಹೆಮ್ಮೆಪಟ್ಟುಕೊಳ್ಳಬೇಡಿರಿ. ಮಾತೃಶ್ರೀಯ ದೃಷ್ಟಿಯಲ್ಲಿ ಉಳಿದೆಲ್ಲರೂ ಮಾಡುವ ಕೆಲಸಗಳಿಗಿರುವಷ್ಟೇ ಬೆಲೆ ನಿಮ್ಮ ಕೆಲಸಕ್ಕೂ ಇದೆ–ಹೆಚ್ಚಲ್ಲ. ಕೆಲಸ ನಿಮ್ಮದೆಂದು ಭಾವಿಸಿದೊಡನೆಯೇ ಫಜೀತಿಯುಂಟಾಗುತ್ತದೆ ಆದ್ದರಿಂದ ಮಾತೃಶ್ರೀ ಹೇಳಿದ್ದಾಳೆ: "ತಮ್ಮ ಕೆಲಸ ಎಂಬ ಮಾತನ್ನು ಜನರು ನಿಲ್ಲಿಸಲು ಬಲ್ಲವರಾದರೆ, ಎಷ್ಟೋ ತೊಂದರೆಗಳು ಅದರಿಂದ ಪರಿಹಾರವಾದಾವು."

ಆಧ್ಯಾತ್ಮಿಕ ಜೀವನ ನಡೆಸಬೇಕಾದರೆ ದುಡ್ಡಿನೊಡನೆ ಯಾವ ಸಂಬಂಧವೂ ಇರಬಾರದು–ಎಂಬುದು ಜನಾಭಿಪ್ರಾಯ. ಮಾತೃಶ್ರೀಯ ಪ್ರಕಾರ ಹಾಗೇನೂ

ಮಾಡಬೇಕಾಗಿಲ್ಲ; ನಿಮಗೆ ನೀವು ಸಂಪಾದಿಸುವುದೆಲ್ಲವೂ ದೇವರಿಗಾಗಿ ಎಂಬ ಶ್ರದ್ಧೆ ಇದ್ದರೆ ಸರಿ. ನಿಮಗಾಗಿ ನೀವುಗಳಿಸುತ್ತಿದ್ದೀರಿ ಎಂಬ ಭಾವನೆ ಇಲ್ಲದಿದ್ದರೆ ಆಯಿತು. ನೀವು ಗಳಿಸುವುದೆಲ್ಲಾ ಮಾತೃಶ್ರೀಯ ಹಣ. ಆದುದರಿಂದ ಸರಿಯಾಗಿ ಲೆಕ್ಕ ಇಡಿರಿ ಮತ್ತು ಎಚ್ಚರ ತಪ್ಪಿ ಖರ್ಚುಮಾಡಬೇಡಿರಿ.

ನಿಮ್ಮನ್ನು ನೀವು ಮಾತೃಶ್ರೀಯ ಕೋಶಾಧಿಕಾರಿಗಳೆಂದು ತಿಳಿದುಕೊಳ್ಳಿರಿ. ರಾಮಪ್ರಸಾದರು ಹಾಡಿದ್ದಾರೆ:

'ಮಾಡೆನ್ನ ನೀ ನಿನ್ನ ಕೋಶಾಧಿಕಾರಿಯನ್ನಾಗಿ

ನಾನೆಂದಿಗೂ ಮೋಸ ಮಾಡೆ (ನಾಗಿರೆ ಕರ್ಮಯೋಗಿ)

ದುಡ್ಡುಗಳಿಸು; ನ್ಯಾಯವಾದ ಉದ್ದೇಶಗಳಿಗಾಗಿ ಖರ್ಚು ಮಾಡು; ಸುಂದರವಾದ ಮನೆಗಳನ್ನೂ ತೋಟಗಳನ್ನೂ ಕಟ್ಟಿಸು–ಬಹಳ ದುಡ್ಡಿದ್ದರೆ; ಆದರೆ ನೀನು ಮಹಾವೈಭವ ಸಂಪನ್ನನಾದ ಒಡೆಯ ಎಂದು ತಿಳಿದುಕೊಳ್ಳಬೇಡ. ಏಕೆಂದರೆ, ಇಡಿ ಜಗತ್ತು ಮಾತೃಶ್ರೀಯ ಆಸ್ತಿ; ಪ್ರಪಂಚದಲ್ಲಿರುವ ಎಲ್ಲವೂ ಅವಳಿಗೆ ಸೇರಿದ್ದು. ನೀನು ಗಳಿಸಿದರೆ ಅದು ಅವಳ ಆಸ್ತಿಯನ್ನು ಬೆಳೆಯಿಸಿದಂತೆಯೇ ಸರಿ. ನೀನೊಂದು ರಾಜ್ಯವನ್ನೇ ಸ್ಥಾಪಿಸಿದರೂ ಅದನ್ನು ಮಾತೃಶ್ರೀಯ ಹೆಸರಿಗೆ ಅಂಕಿತಗೊಳಿಸಬೇಕು. ಮಹಾರಾಜ ರಣಜಿತ್ಸಿಂಗನು ಗುರುನಾನಕನ ಹೆಸರಿನಲ್ಲಿ ಸಾಮ್ರಾಜ್ಯವನ್ನು ನಿರ್ಮಿಸಿದನು. ಅವನು ಅದನ್ನು ನೋಡಿಕೊಳ್ಳುವವ (ಸರ್ಕಾರ) ಮಾತ್ರ. ಮಹಾರಾಷ್ಟ್ರದ ಮಹಾನಾಯಕ ಶಿವಾಜಿ ಮಾಡಿದ್ದು ಹಾಗೇ. ಅವನು ಗುರುವಿನ ಹೆಸರಿನಲ್ಲಿ ಯುದ್ಧಮಾಡಿ ಗೆದ್ದನು. ಅದು ಸರಿಯಾದ ಮನಃಪ್ರಣಾಳಿ. ಶ್ರೀ ಅರವಿಂದರು ಹೇಳಿದಂತೆ, "ಶಾಂತವಾದ ಸಂತೃಪ್ತಿಯಿರಬೇಕು. ಕೆಲಸಕ್ಕೂ ಅದರ ಫಲಕ್ಕೂ ವೈಯಕ್ತಿಕ ಆಸಕ್ತಿಯನ್ನು ಇಟ್ಟುಕೊಂಡಿರಬಾರದು; ಆದರೆ ಅದೇ ಕಾಲಕ್ಕೆ ದೇವರ ಉದ್ದೇಶಕ್ಕಾಗಿ ತನ್ನ ಶಕ್ತಿ ಉಪಯುಕ್ತವಾಗುತ್ತಿದೆಯೆಂದು ಬಹಳ ಸಂತೋಷಪಡಬೇಕು."

ನಿಜವಾಗಿ ಹೇಳುವುದಾದರೆ ಈ ಸಂಗತಿಯು ಸರಿ ಅಥವಾ ತಪ್ಪು ಮನಃಸ್ಥಿತಿಗೆ ಸೇರಿದ್ದು. ಇದು ನಿನ್ನ ಬಾಳೆಂದಷ್ಟೇ ನೀನು ತಿಳಿದುಕೊಳ್ಳುತ್ತೀಯೇ: ನಿನ್ನದೇ ಕುಟುಂಬ ಮನೆ, ಕೆಲಸ, ಎಲ್ಲಾ ಎಂದು ಭಾವಿಸುತ್ತೀಯೆ. ಆದರೆ ಅದರ ಬದಲು ಈಗ ನೀನು ಬೇರೆ ವಿಧವಾಗಿ ಆಲೋಚಿಸಿದರೆ, ಯಾವುದೂ ನಿನ್ನದಲ್ಲವೆಂಬ ತೀರ್ಮಾನಕ್ಕೆ ನೀನು ಬರುವೆ. ಏಕೆಂದರೆ ಸರ್ವಶಕ್ತನ ಮಾತೃಶಕ್ತಿ ಜಗತ್ತನ್ನು ಸೃಷ್ಟಿಸಿದೆ ನಮ್ಮನ್ನೆಲ್ಲಾ ಹುಟ್ಟಿಸಿದೆ ಮತ್ತು ಬದುಕಲು ಉಣ್ಣಬೇಕು, ಕೆಲಸ ಮಾಡಲು ಬದುಕಬೇಕು ಎಂದು ಆಜ್ಞಾಪಿಸಿದೆ. ಅದಕ್ಕಾಗಿ ಅವಳು ನಮಗಾಗಿ ಈ ಎಲ್ಲ ವಿವಿಧ ಕೆಲಸಗಳನ್ನು ಕೊಟ್ಟಿದ್ದಾಳೆ. ನೀನು ಮಾಡಿದರೂ ಸರಿ, ಬಿಟ್ಟರೂ ಸರಿ, ಕೆಲಸ ನಡದೇ ಹೋಗುವುದು. ಅದು ನಿನ್ನದೇ ಕೆಲಸವೆಂದು ಭಾವಿಸುವುದೂ ನೀನು ಅಪರಿಹಾರ್ಯನೆಂದು ತಿಳಿದುಕೊಳ್ಳುವುದೂ

ಕೇವಲ ಡಾಂಭಿಕತೆ. ನಮ್ಮ ತಂದೆ ತಾಯಿಗಳೂ ಆವರಣವೂ ಮಕ್ಕಳಾಟಿಕೆಯಿಂದ ಮಮಕಾರವನ್ನು ನಮ್ಮಲ್ಲಿ ಪ್ರವೇಶಗೊಳಿಸಿದ್ದಾರೆ. ಈ ಅಹಂಭಾವ ತಪ್ಪೆಂದು ಮೊದಲಿನಿಂದ ನಮಗೆ ತರಬೇತು ಕೊಟ್ಟಿದ್ದರೆ ನಾವು ಬೇರೆಯ ಮನಃಪ್ರಣಾಲಿಯೊಡನೆ ಬೆಳೆದು ಬರುತ್ತಿದ್ದೆವು. ಆಶ್ರಮದ ಮಕ್ಕಳಿಗೆ ಈ ಉಚಿತ ತರಬೇತು ಸಿಕ್ಕುತ್ತಿದೆ. ಅವು ದೊಡ್ಡವರಾದ ಮೇಲೆ ನಮಗಿಂತ ಭಿನ್ನವಾದವರಾದಾವೆಂದು ನಮ್ಮ ಪ್ರತ್ಯಾಶೆ.

ಆದರೆ ಈಗಲೂ ನಮ್ಮ ಮನಃಪ್ರಣಾಳಿಯನ್ನು ತಿದ್ದಬಹುದು. ಹಾಗೆ ಮಾಡಲು ಮಾತೃಶ್ರೀಯನ್ನು ಸದಾ ನೆನೆಯುತ್ತಾ ಹೊಸ ಬಗೆಯ ವಿವೇಕವನ್ನು ಅಳವಡಿಸಿಕೊಳ್ಳಬೇಕು. ಹಾಗೇ ಹೋಗುತ್ತ ಉದ್ದಕ್ಕೂ ಮಾತೃಶ್ರೀಯ ನೆರವು ಅಂಥ ಬದಲಾವಣೆಗೆ ದೊರಕುವುದೆಂದು ನಿರೀಕ್ಷಿಸಿದರೆ, ಕ್ರಮೇಣ ಮಾತೃಶ್ರೀಯ ಸಲಹೆಯೂ ಶಕ್ತಿಯೂ ಒಳಗೆ ಕೆಲಸ ಮಾಡುತ್ತಿದೆ ಎಂಬುದು ನಿನ್ನ ಅನುಭವಕ್ಕೆ ಬರುತ್ತದೆ. ನೀನು ಮಹಾತಾಯಿಯ ಕೆಲಸಕ್ಕೆ ಬೇಕಾದ ಒಂದು ಉಪಕರಣ ಮಾತ್ರ ಎಂಬುದು ನಿನ್ನ ತಿಳಿವಳಿಕೆಗೆ ಬರುತ್ತದೆ. ನೀನು ಅಹಂಕಾರಿಕ ಪ್ರೇರಣೆಗಳಿಂದ ಮುಕ್ತನಾಗುವೆ. ಸ್ವೇಚ್ಛೆ ಸ್ವಾಗ್ರಹಗಳಿಂದ ಬಿಡುಗಡೆ ಹೊಂದುವೆ.

ಆಶ್ರಮದಲ್ಲಿ, ನಾವು ಹೇಳಿದಂತೆ, ಅದೇ ತತ್ವವನ್ನು ಅನುಸರಿಸಲಾಗುತ್ತದೆ. ಗಂಡಸಾಗಲಿ, ಹೆಂಗಸಾಗಲಿ ಪ್ರತಿಯೊಬ್ಬರೂ ಏನಾದರೊಂದು ಕೆಲಸ ಮಾಡಬೇಕು. ಅದಾವುದೆಂಬುದನ್ನು ಮಾತೃಶ್ರೀ ಹೇಳುತ್ತಾಳೆ. ಅದನ್ನು 'ಮಾತೃಸೇವೆ' ಎಂದು ಸಂಬಳ ತೆಗೆದುಕೊಳ್ಳದೆ ಮಾಡಬೇಕು. ಅವರೆಲ್ಲರಿಗೂ ತಾವು ಮಾತೃಶ್ರೀಯ ಕೆಲಸವನ್ನು ಮಾಡುತ್ತೇವೆ ಎಂಬುದು ಗೊತ್ತು. ಅದರಿಂದ ಅವರೆಲ್ಲರೂ ಸುಖಿಗಳಾಗಿದ್ದಾರೆ. ಯಾರೂ ಸೋಮಾರಿಗಳಾಗಿಲ್ಲ.

ಅಜ್ಞಾತರಾಗಿದ್ದ ಜೋಗಾನಂದರು ಒಮ್ಮೆ ಪಾಂಡಿಚೇರಿಗೆ ಬಂದರು. ಅವರು ತಮ್ಮ ಬಾಲ್ಯದಿಂದ ಗುರೂಪದೇಶದಂತೆ ಸಾಧಕರಾಗಿದ್ದವರು. ಅವರು ಗಂಭೀರವಾದ ಜಪವನ್ನೂ ಕಠಿನ ಸಾಧನೆಯನ್ನೂ ಮಾಡುತ್ತಿದ್ದರು. ಅವರು ಆಶ್ರಮದಲ್ಲಿ ಸೇರಿಕೊಳ್ಳಬಯಸಿದರು. ಶ್ರೀ ಅರವಿಂದರು ಬರೆದರು; "ನಮ್ಮ ಆಶ್ರಮ ಉಳಿದ ಆಶ್ರಮಗಳಂತಿಲ್ಲ; ನಮ್ಮ ಗುರಿ ಸನ್ಯಾಸವಲ್ಲ, ಮೋಕ್ಷ ಸಾಧನೆಯೂ ಅಲ್ಲ; ಕರ್ಮದ ಮೂಲಕ ಸಾಕ್ಷಾತ್ಕಾರ ಮಾಡಿಕೊಳ್ಳುವುದು ನಮ್ಮ ತತ್ವ. ಅದರ ಸಿದ್ಧತೆಗಾಗಿ ಕೆಲಸ ಮಾಡಬೇಕು–ಅದೇ ಇಲ್ಲಿಯ ನಿಯಮ: ಇಲ್ಲಿಯ ಕೆಲಸವು ಬೇಸರ ಬರಿಸುವಂಥದೂ ಆಸಕ್ತಿ ಹುಟ್ಟಿಸದಂಥದೂ ಆಗಿ ತೋರೀತು. ತನ್ನ ಪದ್ಧತಿಯನ್ನೆಲ್ಲಾ ಬಿಟ್ಟು ಕೊಟ್ಟು ನಮ್ಮ ನಿಯಮಗಳಂತೆ ನಡೆದುಕೊಳ್ಳಲು ಸಿದ್ಧನಾದರೆ ಮಾತ್ರ ಆತನು ಇಲ್ಲಿರಬಹುದು– ಎಂದು ಅವನಿಗೆ ತಿಳಿಸಿರಿ." ಜೋಗಾನಂದರು ಅದಕ್ಕೆ ಒಪ್ಪಿ ಅಂದಿನಿಂದ ಈವರೆಗೂ ಆಶ್ರಮದಲ್ಲಿಯೇ ಇದ್ದಾರೆ.

ನಲಿನೀಕಾಂತ ಸರ್ಕಾರರು ಸಾಹಿತಿಗಳೂ ಸುಪ್ರಸಿದ್ಧ ಹಾಸ್ಯ ಕವಿತಾ ಗಾಯಕರೂ ಕುಟುಂಬಸ್ಥರೂ ಇಬ್ಬರು ಹೆಣ್ಣುಮಕ್ಕಳ ತಂದೆಯೂ ಆಗಿದ್ದರು. ಒಮ್ಮೆ ಅವರು ಕ್ರಾಂತಿಕಾರಿಗಳೂ ಆಗಿದ್ದರು. ಅವರು ಆಶ್ರಮದ ಆಸರೆಯನ್ನು ಪಡೆಯಲು ಆಶಿಸಿದ್ದರು. ದುಡಿಯಲು ಸಿದ್ಧರಾಗಿರಬೇಕೆಂಬ ಶರ್ತದ ಮೇರೆಗೆ ಶ್ರೀ ಅರವಿಂದರು ಅವರಿಗೆ ಆಶ್ರಯವನ್ನು ಕೊಟ್ಟರು. ಅವರೂ ಅವರ ಇಬ್ಬರು ಹೆಣ್ಣುಮಕ್ಕಳೂ ಆಶ್ರಮದ ಮುದ್ರಣಾಲಯದ ಕಠಿನ ಕೆಲಸವನ್ನು ಮಾಡುತ್ತಿದ್ದಾರೆ. ಆದರವರು ಸುಖಿಗಳಾಗಿದ್ದಾರೆ.

ಆಶ್ರಮದಲ್ಲಾಗಲಿ, ಹೊರಗಾಗಲಿ, ಕರ್ಮವು ಒಂದು ಪರಿಣಾಮಕಾರಿಯಾದ ಸಾಧನ–ಅದನ್ನು ಸರಿಯಾದ ಭಾವನೆಯಿಂದ ಮಾಡಿದರೆ, ಸಂಪೂರ್ಣ ಪ್ರಾಮಾಣಿಕತೆ ಇದ್ದರೆ, ಪದೇ ಪದೇ ಮಾತೃಶ್ರೀಯನ್ನು ನೆನೆಯುತ್ತಿದ್ದರೆ, ಅವಳ ಅನುಗ್ರಹಕ್ಕೆ ಎದೆಯನ್ನು ತೆರೆದಿಟ್ಟುಕೊಂಡಿದ್ದರೆ–ಮಾತೃಶ್ರೀಯ ಕೆಲಸ ಮಾಡುತ್ತಿದ್ದೇನೆ ಎಂಬ ಪ್ರಜ್ಞೆಯ ಮೂಲಕ ಕ್ರಮೇಣ ಉನ್ನತ ತರ ಪ್ರಜ್ಞೆ ಇಳಿದು ಬರುತ್ತದೆ ಮತ್ತು ಸಾಧಕನ ಇಡೀ ಬಾಳನ್ನು ಬದಲಾಯಿಸುತ್ತದೆ.

ಇಷ್ಟಲ್ಲದೆ, ಈ ಭಾವನೆಯನ್ನು ಇಟ್ಟುಕೊಂಡಿದ್ದರೆ ಇನ್ನೊಂದು ರೀತಿಯಿಂದ ಪಡೆಯಲಾರದ ವಿಶಿಷ್ಟ ಲಾಭವನ್ನು ಸಾಧಕ ಪಡೆಯುವನು. ಅವುಗಳಲ್ಲಿ ಕೆಲವು ಇಂತಿವೆ;

ಲೋಭ, ಈರ್ಷ್ಯೆ, ಅಸೂಯೆ, ಸೇಡು, ದುರ್ಭಾವನೆ ಮತ್ತು ಕೆಲಸ ಧಂದೆಗಳಿಗೆ ಸಂಬಂಧಿಸಿದ ಸ್ಪರ್ಧಾತ್ಮಕ ಆತುರಗಳಿಗೆ ಉನ್ಮುಖವಾದ ಪ್ರವೃತ್ತಿಯು ಸಾಧಕನಲ್ಲಿ ಮಾಯವಾಗಿಬಿಡುವುವು. ಏಕೆಂದರೆ, ವೈಯಕ್ತಿಕ ಲಾಭ–ನಷ್ಟಗಳ ಪ್ರಶ್ನೆಯೇ ಇರದು. ಶಕ್ತಿಗೆ ತಕ್ಕಷ್ಟು ಮಾತೃಕಾರ್ಯವನ್ನು ಸಾಧಕ ಮಾಡುವನು. ಜಗಳವಂತೂ ಇಲ್ಲವೇ ಇಲ್ಲ.

ಜಯಾಪಜಯಗಳ ಬಗೆಗೆ ಸಂತೋಷ–ಅಸಂತೋಷಗಳಿಲ್ಲ. ಎರಡರಿಂದಲೂ ಸಾಧಕನು ಮುಕ್ತ. ಏಕೆಂದರೆ ಅದೆಲ್ಲ ದಿವ್ಯ ಮಾತೃಕಾರ್ಯವೆಂಬುದು ಅವನ ಅನುಭವ. ಸಾಧಕ ಯಥಾಶಕ್ತಿ ದುಡಿದಿದ್ದಾನೆ ಎಂಬುದು ಮಾತೃಶ್ರೀಗೆ ಗೊತ್ತು. ಜಯಾಪಜಯಗಳು ಅವಳನ್ನು ಅವಲಂಬಿಸಿವೆ. ಸಾಧಕನಿಗೆ ಅಕ್ಷುಬ್ಧವಾದ ಸಮಮನಸ್ಕತೆ ಇರುತ್ತದೆ.

ಜಯಾಪಜಯಗಳ ಬಗೆಗೆ ಸಂತೋಷ–ಅಸಂತೋಷಗಳಿಲ್ಲ. ಎರಡರಿಂದಲೂ ಸಾಧಕನು ಮುಕ್ತ. ಏಕೆಂದರೆ ಅದೆಲ್ಲ ದಿವ್ಯ ಮಾತೃಕಾರ್ಯವೆಂಬುದು ಅವನ ಅನುಭವ. ಸಾದಕ ಯಥಾಶಕ್ತಿ ದುಡಿದಿದ್ದಾನೆ ಎಂಬುದು ಮಾತೃಶ್ರೀಗೆ ಗೊತ್ತು. ಜಯಾಪಜಯಗಳು ಅವಳನ್ನು ಅವಲಂಭಿಸಿವೆ. ಸಾಧಕನಿಗೆ ಅಕ್ಷುಬ್ಧವಾದ ಸಮ ಮನಸ್ಕತೆ ಇರುತ್ತದೆ.

ಲಾಭವಾದೀತೆಂದು ಆಲೋಚಿಸಿ ಸಾಮಾನ್ಯವಾಗಿ ಜನರು ಮೋಸ, ದಗ, ದುರ್ವ್ಯವಹಾರಗಳಿಗೆ ಕೈಹಾಕುತ್ತಾರೆ. ಸಾಧಕ ಎಂದೂ ಆ ಒಂದಕ್ಕೂ ಕೈಹಾಕನು. ಮಾತೃಶ್ರೀ ಒಪ್ಪಳೆಂಬುದನ್ನು ಅಂಥ ಕೆಲಸದತ್ತ ಪ್ರಲುಬ್ಧನಾದಾಗ ಸಾಧಕ ನೆನೆದುಕೊಂಡು ಅದರಿಂದ ವಿಮುಖನಾಗುತ್ತಾನೆ. ಅವನು ಋಜುವೂ ಪ್ರಾಮಾಣಿಕನೂ ಆಗಿರುವನಲ್ಲದೆ ಎಂದೂ ಸುಳ್ಳುಗಾರನಾಗನು.

(ಇಂಥ ಸಾಧಕತ್ವದಿಂದ) ನಿಮಗೆ ಜೀವನದ ನಿಜವಾದ ಅರ್ಥವೂ ಗುರಿಯೂ ಗೊತ್ತಾಗುವುದು. ಸಾಮಾನ್ಯ ಜೀವನದಲ್ಲಿ ಬಿಡುವಿಲ್ಲದೆ ದಿನವೂ ದುಡಿಯುವುದರಿಂದ ಪ್ರಯೋಜನವೇನು? ಅದರಿಂದ ಆತ್ಯಂತಿಕವಾಗಿ ಯಾವ ಲಾಭ ದೊರಕುತ್ತದೆ? ಯಾರು ಅದರ ಫಲಭೋಕ್ತಾರರು? ಯಾರು ಇದಕ್ಕಾಗಿ ನನಗೆ ಕೃತಜ್ಞರಾಗಿರುತ್ತಾರೆ? ಮುಂತಾದ ಪ್ರಶ್ನೆಗಳಿಗೆ ಉತ್ತರ ದೊರಕದೆ ನೀವು ಆಶ್ಚರ್ಯಪಡುವುದು ಸರ್ವಸಾಧಾರಣ. ಆದರೆ ನಿಮಗೆ ನೀವು ಮಾಡುತ್ತಿರುವುದೀಗ ಮಾತೃಕಾರ್ಯ. ಅದು ಮಾತೃಶ್ರೀಗಾಗಿ, ಮತ್ತಾರಿಗಾಗಿಯೂ ಅಲ್ಲ, ಅದನ್ನು ಮಾಡಲೆಂದೇ ನೀವಿಲ್ಲಿದ್ದೀರಿ–ಎಂಬುದು ಖಾತ್ರಿಯಾಗುತ್ತದೆ. ಮರಣಭಯ ಮಾಯವಾಗುತ್ತದೆ ಮಾತೃಶಕ್ತಿ ನಿಮ್ಮನ್ನು ಸಲಹುತ್ತದೆ ಎಂಬುದು ನಿಮಗೆ ಗೊತ್ತಾಗುತ್ತದೆ. ಮಾತೃಕಾರ್ಯಕ್ಕೆ ಬೇಕಾಗಿರುವಷ್ಟರವರೆಗೆ ನೀವೆಂದೂ ಸಾಯಲಾರಿರಿ. ಜ್ಯೋತಿಷಿಗಳೂ ಅವರ ಜಾತಕಗಳೂ ಏನು ಹೇಳಿದರೂ ಅವು ನಿಮಗೆ ತಟ್ಟಲಾರವು–ಮಾತ್ರಿಚ್ಛೆ ಹಾಗಿದ್ದರೆ. ಆದುದರಿಂದ ಮರಣದ ಬಗೆಗಿನ ಎಲ್ಲ ದೌರ್ಬಲ್ಯ, ನರಬಡಿತ, ಗಾಬರಿಗೆಡಿಸುವ ವಿಚಾರಗಳೂ ಓಡಿಹೋಗುವುವು. ನೀವು ಮಾತೃ ಕಾರ್ಯವೊಂದನ್ನಲ್ಲದೆಸಾವನ್ನೆಂದೂ ಚಿಂತಿಸದಿರುವಿರಿ. ದುರ್ಬಲಗೊಳಿಸುವ ರೋಗದ ಭಯವೂ ಅದೃಶ್ಯವಾಗುವುದು.

ಆದರೆ ಅಂಥ ಮನಃ ಪ್ರಣಾಲಿಯನ್ನು ಅಲ್ಪಕಾಲದಲ್ಲಿ ರೂಪಿಸಿಕೊಳ್ಳಲು ಸಾಧ್ಯವಾಗದು; ಸತತ ಪ್ರಯತ್ನ ಅದಕ್ಕೆ ಬೇಕಾದೀತು. ಕೇವಲ ಮಾನಸಿಕ ನಿರ್ಧಾರ ಅಥವಾ ಸಕಾಲಿಕ ಅಸ್ತವ್ಯಸ್ತ ಪ್ರಯತ್ನಗಳು ಫಲಿಸವು. ಮರೆಯದಿರಬೇಕಾದರೆ, ಅದನ್ನು ಪದೇ ಪದೇ ನೀವು ನೆನೆದುಕೊಳ್ಳಬೇಕು. ಒಮ್ಮೆ ಕಾಲಾಂತರ ಉಂಟಾದರೂ ಹೊಸದಾಗಿ ನೆನೆದುಕೊಂಡು ನಿಮ್ಮ ತಪ್ಪನ್ನು ನೀವು ತಿದ್ದಿಕೊಳ್ಳಬಹುದು. ಅತಿ ಚಿಕ್ಕ ಕೆಲಸವನ್ನು ಕೂಡ ನೀವು ಮಾತೃಶ್ರೀಗೆ ಅರ್ಪಿಸಲು ಕಲಿಯಬೇಕು. ಆಗ ಕ್ರಮೇಣ ಅವಳ ಉಪಸ್ಥಿತಿಯೂ ಸಲಹೆಯೂ ನಿಮ್ಮ ಅನುಭವಕ್ಕೆ ಬರುವುದು.

"ನಿಮ್ಮ ಶಕ್ತಿ ಪರಿಮಿತವಾಗಿದ್ದರೂ ನಿಮ್ಮ ಕೆಲಸ ಅಲ್ಪವಾಗಿದ್ದರೂ ಅಡ್ಡಿಯಿಲ್ಲ. ನೀವು ಸಣ್ಣಮನುಷ್ಯರಾಗಿ ಸಣ್ಣ ವ್ಯವಹಾರ ಮಾಡುತ್ತಿದ್ದರೂ ಪರವಾಗಿಲ್ಲ. ನೀವು ನಿಮ್ಮ ಕಾರ್ಯದಲ್ಲಿ ಪ್ರಾಮಾಣಿಕರಾಗಿದ್ದರೆ, ಶಕ್ತಿಗೆ ತಕ್ಕಂತೆ ದುಡಿದರೆ–ಅದೇ ಸಾಕು. ನಿಮಗೆ ಕೊಡಲು ಸಾಧ್ಯವಿಲ್ಲದುದನ್ನು ಮಾತೃಶ್ರೀ ಬಯಸಳು; ಹಾಗೇ ಸಾಧ್ಯವಾದುದಕ್ಕಿಂತ

ಕಡಿಮೆಯನ್ನೂ ಬಯಸಳು. ಕೆಲಸದ ಬೆಲೆಯನ್ನು ಅದರ ಗುಣ–ಪರಿಮಾಣಗಳಿಂದ ಅವಳು ಅಳೆಯಳು. ಮಾತೃಶ್ರೀಯೆ ಹೇಳುವ ಹಾಗೆ–ಅದನ್ನು ಒಂದು ಸತತವೂ ಸರ್ವಸಾಧಾರಣವೂ ಆದ ವಿಧಿಯಿಂದ ಅಥವಾ ಮನಃ ಪ್ರಣಾಲಿಯಿಂದ ಅಳೆಯಲಾಗುವುದು ಅದನ್ನು ಅನುಭವಿಸಿಯೆ ತಿಳಿದುಕೊಳ್ಳಬೇಕು... ಆಗ ಪೂರ್ಣವಾದ ವೈಯಕ್ತಿಕ ಅನಾಸಕ್ತಿಯನ್ನು ಆಧರಿಸಿದ ವರ್ತನಾ ನಿಯಮಗಳಿಂದ ಕಾರ್ಯಗಳ ಬೆಲೆ ನಿರ್ಧರಿಸಲ್ಪಡುವುವು."

ಈಗ ನೀವು ಮುಂದೆ ನೋಡಿರಿ. ನಿಮ್ಮ ಕಣ್ಣೆದುರಿಗೆ ಸತ್ವ ಪೂರ್ಣವೂ ಸಜೀವವೂ ಆದ ಉದಾಹರಣೆಯು ಮಾತೃಶ್ರೀಯ ರೂಪದಲ್ಲಿ ಸಶರೀರವಾಗಿ ಇದೆ. ಅವಳಿಗೀಗ ವಯಸ್ಸಾಗಿದೆ. ಆದರೂ ಅವಳು ಕೆಲಸಮಾಡುತ್ತಿದ್ದಾಳೆ. ಅವಳ ಕೆಲಸ ಹಗಲಿರುಳೂ ಅವಿಶ್ರಾಂತವಾಗಿ ನಡೆಯುತ್ತಿದೆ. ಅವಳಿಗಾಗಿ ಅಲ್ಲ; ಹೆಸರುಗಳಿಸಲೆಂದೂ ಅಲ್ಲ; ಎಲ್ಲ ಸಂಘಟನೆಯಲ್ಲಿಯೂ ಶ್ರೀ ಅರವಿಂದರ ಹೆಸರನ್ನವಳು ಮುಂದೆ ತರುತ್ತಾಳೆ ತನ್ನದನ್ನಲ್ಲ, ಅವಳ ಶ್ರಮವೆಲ್ಲಾ ನಿಮಗಾಗಿಯೇ. ಇದನ್ನು ಅರಿತುಕೊಳ್ಳಲು ಕಲಿಯಿರಿ. ಅವಳನ್ನನುಸರಿಸಲು ಕಲಿಯಿರಿ, ಅವಳೊಡನೆ ಕೆಲಸಕ್ಕೆ ಸೇರಿರಿ ಮತ್ತು ನಿಮ್ಮ ಪ್ರಜ್ಞೆ ಅರಳುವಂತೆ ನೆರವೀಯಿರಿ.

ಇದಾದಾಗ ವರ್ತಮಾನ ಪರಿಸ್ಥಿತಿಯು ಬದಲಾಗುವುದು; ಹೊಸ ಬೆಳಕು ಮೂಡುವುದು; ಭೂಮಿಯು ಸ್ವರ್ಗದಂತಾಗುವುದು.

ಆ ಬದಲಾವಣೆಯನ್ನು ಹತ್ತಿರ ಹತ್ತಿರಕ್ಕೆ ತರಲೆಂದೇ ಮಾತೃಶ್ರೀ ಇಲ್ಲಿದ್ದಾಳೆ.

ಮಾತೃಶ್ರೀಗೆ ಜಯವಾಗಲಿ!

# ೧೩. ಮಾತೃಶ್ರೀಯ ವಚನಗಳು

೧. ಅದದರ ಕಾಲಕ್ಕೆ ಸರಿಯಾಗಿ ಎಲ್ಲವೂ ಬರುತ್ತದೆ; ಶ್ರದ್ಧಾಮಯವಾದ ಸಹನೆಯನ್ನಿಟ್ಟುಕೊಳ್ಳಿರಿ–ಆಗ ಎಲ್ಲವೂ ಸರಿಯಾಗುವುದು.

೨. ಆಗಬೇಕಾದಂತೆ ಆಗದಿರುವಾಗಲೂ ಚಿಂತೆಯೆಂದೂ ಕೆಲಸವನ್ನೂ ಉತ್ತಮಗೊಳಿಸಲು ನೆರವೀಯದು. ಶಾಂತ ಆತ್ಮವಿಶ್ವಾಸವೊಂದೇ ಶಕ್ತಿಯ ಆಕರ.

೩. ನಿಮ್ಮ ದೇಹದಲ್ಲಿ ಹೆಚ್ಚಿನ ಶಾಂತಿಯನ್ನೂ ಅಕ್ಷೋಭವನ್ನೂ ನೆಲೆ ನಿಲ್ಲಿಸಿಕೊಳ್ಳಿರಿ. ಅದು ನಿಮಗೆ ಕಾಹಿಲೆಯನ್ನು ಅಥವಾ ಇತರ ಪ್ರಹಾರಗಳನ್ನು ತಡೆಯಲು ತಕ್ಕ ಶಕ್ತಿಯನ್ನು ಕೊಡುತ್ತದೆ.

೪. ಅಜ್ಞಾನ, ಅಜಾಗರೂಕತೆ ಮತ್ತು ಅಹಂಭಾವದ ಇತಿಮಿತಿಗಳ ತ್ಯಾಗವನ್ನು ಮಾತ್ರ ನಾನು ಕೇಳುತ್ತೇನೆ–ಆದರೆ ಅದಕ್ಕೆ ಬದಲಾಗಿ ನಿಮಗೆ ಎಂಥ ಅದ್ಭುತ ಲಾಭ ದೊರಕುತ್ತದೆ!

೫. ದೇವರ ಕೈಗಳಲ್ಲಿ ವಿಶ್ರಾಂತಿ ತೆಗೆದುಕೊಳ್ಳುವುದರಿಂದ ಎಲ್ಲ ಸಮಸ್ಯೆಗಳೂ ಪರಿಹಾರವಾಗುವುವು; ಈ ಕೈಗಳು ಯಾವಾಗಲೂ ಪ್ರೇಮದಿಂದ ನಮ್ಮನ್ನು ಕಾಯಲು ತೆರೆದಿರುವುವು.

೬. ಅಕ್ಷುಬ್ಧ ಸುಖಿಗಳಾಗಿರುವುದಕ್ಕಿಂತ ಹೆಚ್ಚಿನ ಕೃತಜ್ಞತಾ ಸಮರ್ಪಣೆಯ ಮಾರ್ಗ ಇನ್ನೊಂದಿಲ್ಲ.

೭. ದೇವರು ನಿಮಗೆ ಕೊಟ್ಟಿದ್ದನ್ನು ಯಾವಾಗಲೂ ಸಂತೋಷದಿಂದ ಸ್ವೀಕರಿಸಿರಿ.

೮. ಹಗೆಯತ್ತ ಮುಗುಳ್ನಗುವುದು ಅವನನ್ನು ನಿರಾಯುಧನನ್ನಾಗಿ ಮಾಡಿದ ಹಾಗೆ.

೯. ಸ್ವಪ್ರಭುತ್ವವು ಮಹಾ ವಿಜಯ. ಅದು ಬಹುಕಾಲ ಇರುವ ಸುಖಕ್ಕೆ ಆಧಾರ.

೧೦. ನಮ್ಮ ಸುಖದ ಬಗೆಗೆ ಎಚ್ಚರಿಕೆ ವಹಿಸುವುದೆಂಬುದು ಸುಖಿಗಳಾಗಲು ಅತ್ಯಂತ ಖಾತ್ರಿಯಾದ ಮಾರ್ಗ.

೧೧. ನಮ್ಮ ದೇಹದ ಕಣ ಕಣಗಳಲ್ಲಿ ಶಾಂತಿಯನ್ನು ತರಬಲ್ಲವರಾದಾಗ ನಾವು ರೋಗ ಮುಕ್ತರಾಗುವೆವು.

೧೨. ಸುಖವೂ ಸರಿಯಾದ ಆರೋಗ್ಯವೂ ಜಗತ್ತಿನಲ್ಲಿ ಇನ್ನೂ ಸಾಮಾನ್ಯ ಸಮಸ್ಥಿತಿಯೆನ್ನಿಸಿಲ್ಲ. ಅವುಗಳ ಹಗೆಗಳಿಂದ ಅವುಗಳನ್ನು ನಾವು ಬಹು ಎಚ್ಚರಿಕೆಯಿಂದ ಕಾಪಾಡಬೇಕು.

೧೩. ದೇವರ ಮೇಲಿನ ನಮ್ಮ ನಂಬಿಗೆಯು ಹೊರ ಪರಿಸ್ಥಿತಿಗಳನ್ನು ಆಧರಿಸಿರಬಾರದು.

೧೪. ದೇವರನ್ನು ಅರಿತುಕೊಳ್ಳಬೇಕಾದರೆ ನಾವು ಅದಕ್ಕಿಂತ ಇದು ಲೇಸು ಎಂಬ ಭಾವವನ್ನಿಟ್ಟುಕೊಳ್ಳಬಾರದು.

೧೫. ದೇವರನ್ನೇ ಧ್ಯಾನಿಸು; ಈಗ ದೇವರು ನಿನ್ನೊಡನಿರುವನು.

೧೬. ದೇವರಿಗಾಗಿ ಕೆಲಸ ಮಾಡುವುದೆಂದರೆ ದೇಹದ ಮೂಲಕ ಪ್ರಾರ್ಥಿಸುವುದೆಂದರ್ಥ.

೧೭. ನಾವು ನಿಷ್ಕೃಷ್ಟವಾದ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿದ ಮೇಲೆ ದೇವರ ಅದೃಶ್ಯ ಶತ್ರುಗಳು ಸೇಡು ತೀರಿಸಿಕೊಳ್ಳಲು ಯತ್ನಿಸುವುವು. ಆತ್ಮಕ್ಕೆ ಹಾನಿಯನ್ನುಂಟು ಮಾಡಲಾರದಾದಾಗ ಅವು ದೇಹಕ್ಕೆ ಹೊಡೆತಹಾಕುವುವು. ದೇವರ ಅನುಗ್ರಹ ನಮ್ಮ ಮೇಲಿರುವುದರಿಂದ ಅವುಗಳ ಪ್ರಯತ್ನಗಳೆಲ್ಲಾ ನಿಷ್ಫಲವಾಗಿ ಕೊನೆಗೆ ಅಪಜಯ ಹೊಂದುವುವು.

೧೮. ದೇವರಲ್ಲಿ ನಾವಿಟ್ಟ ಶ್ರದ್ಧೆಗೂ ದೇವರ ಅನುಗ್ರಹ (ನಮಗಾಗಿ) ಕೆಲಸಮಾಡಿ ನೆರವೀಯುವುದಕ್ಕೂ ಆನುಪಾತಿಕ ಸಂಬಂಧವಿದೆ.

೧೯. ಪರ್ವತಮಾರ್ಗವು ಯಾವಾಗಲೂ ಇಮ್ಮೊಗವುಳ್ಳದ್ದು ಮೇಲ್ಮೊಗ ಮತ್ತು ಕೆಳಮೊಗ. ಅದೆಲ್ಲಾ ನಮ್ಮ ಹಿಂದೆ ನಾವೇನನ್ನಿಟ್ಟುಕೊಳ್ಳುವೆವೋ ಅದನ್ನವಲಂಬಿಸಿದೆ.

೨೦. ಅಸ್ಪಷ್ಟವಾದ ಭೌತಿಕ ನಿಸರ್ಗದ ಮೇಲೆ ನಾವು ಪಡೆವ ಒಂದೊಂದು ಗೆಲುವೂ ಅದಕ್ಕೂ ಹೆಚ್ಚಿನ ಮುಂಬರುವ ವಿಜಯದ ಆಶ್ವಾಸನೆ.

೨೧. ಒಂದು ಆಸೆಯನ್ನು ಪೂರೈಸುವುದಕ್ಕಿಂತ ಗೆಲ್ಲುವುದು ಹೆಚ್ಚು ಸಂತಸವನ್ನು ತರುವುದು.

೨೨. ನಮ್ಮಲ್ಲಿರುವ ಪ್ರದರ್ಶನಶೀಲವನ್ನು ಪ್ರೋತ್ಸಾಹಿಸುವ ಎಲ್ಲವನ್ನೂ ತಪ್ಪಿಸಲು ನಾವು ಯಾವಾಗಲೂ ಬಹಳ ಜಾಗರೂಕರಾಗಿರೋಣ.

೨೩. ನಮ್ಮ ದೋಷಗಳನ್ನು ನಾವು ಗುರುತಿಸುವುದು ಅತ್ಯುದಾತ್ತವಾದ ಧೀರತೆ.

೨೪. ಇತರರು ನಮಗೆ ಮಾಡುವ ತಪ್ಪುಗಳನ್ನು ಅಪಮಾನಗಳನ್ನು ಮೀರಿರುವುದು ನಮ್ಮನ್ನು ನಿಜವಾಗಿ ದೊಡ್ಡಸ್ತಿಕೆಗೇರಿಸುತ್ತದೆ.

೨೫. ಯಾವಾಗಲೂ ಸತ್ಯವನ್ನು ಹೇಳುವುದು ಔದಾತ್ಯದ ಅತ್ಯುನ್ನತ ಗುರುತು.

೨೬. ಸದಭಿರುಚಿಯು ಕಲೆಯ ಕುಬೇರ ಪ್ರಭುತ್ವ.

೨೭. ಜಗತ್ತಿನ ಅದ್ಭುತಗಳಿಗೆ ಕೊನೆಯಿಲ್ಲ. ನಮ್ಮ ಸಣ್ಣ ಅಹಂತ್ವದ ಇತಿಮಿತಿಗಳಿಂದ ನಾವು ಹೆಚ್ಚು ಹೆಚ್ಚು ಮುಕ್ತರಾಗುತ್ತ ಹೋದಹಾಗೆ ಈ ಅದ್ಭುತಗಳು ತಾವಾಗಿಯೇ ಹೆಚ್ಚು ಹೆಚ್ಚಾಗಿ ನಮ್ಮೆದುರು ಮೈದೋರುತ್ತಾ ಹೋಗುವುವು.

೨೮. ಪ್ರತಿಯೊಂದು ಹೊಸ ಮುಂಬೆಳಗೂ ಹೊಸ ಪ್ರಗತಿಯ ಸಾಧ್ಯತೆಯನ್ನು ತರುತ್ತದೆ.

೨೯. ಗಡಿಬಿಡಿಯಿಲ್ಲದೆ ನಾವು ಮುನ್ನಡೆಯುತ್ತೇವೆ. ಏಕೆಂದರೆ ನಮಗೆ ನಮ್ಮ ಭವಿಷ್ಯವು ಖಾತ್ರಿಯಾಗಿರುತ್ತದೆ.

೩೦. ನಾವು ಮೆಚ್ಚಿಕೊಂಡದ್ದರಂತೆಯೇ (ಪ್ರೀತಿಸುವವರಂತೆಯೇ) ಆಗುವೆವು.

೩೧. ನಾವು ಆಲೋಚಿಸುವ ವಸ್ತುಗಳಿಂದಲೇ ಯಾವಾಗಲೂ ನಾವು ಆವೃತವಾಗಿರುವೆವು.

೩೨. ನಮ್ಮ ಚೇತನೆಯು (ಪ್ರಜ್ಞೆಯು) ಒಂದು ಚಿಕ್ಕ ಹಕ್ಕಿಯ ಹಾಗಿದೆ. ಅದು ತನ್ನ ರೆಕ್ಕೆಗಳನ್ನು ಬಳಸಲು ಕಲಿಯಬೇಕು.

೩೩. ಹಗಲಿರುಳೂ ದೇವರು ಉಪಸ್ಥಿತನಾಗಿರುತ್ತಾನೆ. ಸುಮ್ಮನೆ ನಾವು ಅಂತರ್ಮುಖರಾದರೆ ಸಾಕು; ನಮಗದು ಗೊತ್ತಾಗುವುದು.

೩೪. ಪ್ರಾಮಾಣಿಕತೆಯಲ್ಲಿಯೇ ಜಯದ ನಿಶ್ಚಿತತೆಯಿದೆ. ಪ್ರಾಮಾಣಿಕತೆ, ಪ್ರಾಮಾಣಿಕತೆ! ನಿನ್ನ ಉಪಸ್ಥಿತಿಯ ಪಾವಿತ್ರ್ಯವೆಷ್ಟು ಮಧುರ!

೩೫. ಸರಳತೆಯಲ್ಲೊಂದು ಮಹಾಸೌಂದರ್ಯವಿದೆ.

೩೬. ಕಾದಿರುವುದು ಹೇಗೆಂಬುದನ್ನು ತಿಳಿದಿರುವುದು ಕಾಲವನ್ನು ನಿನ್ನ ಕಡೆಗೆ ತಿರುಗಿಸಿಕೊಂಡ ಹಾಗೆ, ಸಹನೆಯಿಂದ ಯಾರಾದರೂ ಗುರಿಯನ್ನು ಮುಟ್ಟಿಯೇ ಮುಟ್ಟುತ್ತಾರೆ. ಸತತ ಪ್ರಯತ್ನವು ಎಲ್ಲ ವಿಘ್ನಗಳನ್ನೂ ದಾಟುವುದು.

೩೭. ಕ್ಷಣಿಕ ಉತ್ತೇಜನಕ್ಕೊಳಗಾಗಿ ಏನನ್ನೂ ಮಾಡಹೋಗಕೂಡದು. ಕ್ಷಣಿಕ ಭಾವಪ್ರೇರಿತನು ಆತ್ಮಸಂಯಮವಿಲ್ಲದವನು. ಅವನ ಜೀವನ ಅಸ್ತವ್ಯಸ್ತ.

೩೮. ಪೂರ್ಣತೆಯು ಪರಾಕಾಷ್ಠೆಯೂ ಅಲ್ಲ, ಪರಾಂತವೂ ಅಲ್ಲ. ಅದು ಸಮತೋಲ, ಸಮ ಶ್ರುತಿಕರಣ.

೩೯. ಕೃತಜ್ಞತಾ ಶಕ್ತಿಯಿಂದ ಒಬ್ಬನ ಉದಾತ್ತತೆ ಅಳೆಯಲ್ಪಡುತ್ತದೆ.

೪೦. ಸಮಚಿತ್ತತೆಯು ಯಾರಿಗೂ ಎಂದೂ ಹಾನಿ ಮಾಡಿಲ್ಲ.

೪೧. ಕೆಲಸಕ್ಕೆ ಬಾರದ ಶಬ್ದಗಳಿಂದ ಜಗತ್ತಿನ ಕಿವಿ ಕಿವುಡಾಗಿದೆ.

೪೨. ದೇವರೇ, ಇರುವ ಹಾಗೂ ಆಗುವ ಎಲ್ಲವುಗಳ ಆಳದಲ್ಲಿ ನಿನ್ನ ದಿವ್ಯವೂ ಅಪರಿವರ್ತನೀಯವೂ ಆದ ಮುಗುಳ್ನಗೆಯಿದೆ.

೪೩. ಸಹಿಸಿಕೋ, ಆಗ ನೀನು ಗೆಲ್ಲುವೆ. ದೇವರು ನಿನ್ನ ಬೆಂಬಲಕ್ಕಿದ್ದಾನೆ.

೪೪. ಪ್ರೇಮವೂ ಅತ್ಯಂತಿಕ ವಿಜಯಿ.

೪೫. ನೋಡಿದ್ದನ್ನು ಯಾ ಕೇಳಿದ್ದನ್ನು ಒಬ್ಬ ಪ್ರೀತಿಸನು. ಆಕೃತಿ ಮತ್ತು ಶಬ್ದಗಳ ಮೂಲಕ ಪ್ರತಿಯೊಬ್ಬನೂ ಪ್ರೀತಿಯನ್ನು ಪ್ರೀತಿಸುವನು. ದೇವರ ಪ್ರೀತಿಯೇ ಅತ್ಯಂತ ಪ್ರೀತ್ಯಾಸ್ಪದವೂ ಪೂರ್ಣವೂ ಆದ ಪ್ರೀತಿ.

೪೬. ನಿತ್ಯಸತ್ಯ ಪ್ರೇಮಿಯನ್ನು ದೇವರು ಪ್ರೀತಿಸುತ್ತಾನೆ. ಅವನ ಶಕ್ತಿಯು ಅವರನ್ನು ಗೆಲ್ಲಿಸುತ್ತದೆ.

೪೭. ಸಿಂಹಗಳು ನಿಜವಾಗಿಯೂ ಚೆನ್ನಾಗಿರುತ್ತವೆ. ನನ್ನ ಹತ್ತಿರ ಯಾವಾಗಲೂ ಒಂದಾದರೂ ಸಿಂಹವಿದ್ದೇ ಇರುತ್ತದೆ. ಆದರೆ ಆ ಸಿಂಹ ಭೌತಿಕವಾದುದಲ್ಲ. ಏಕೆಂದರೆ ಭೌತಿಕ ಸಿಂಹವನ್ನು ಕಂಡು ಜನರು ಬಹಳ ಹೆದರುವುದರಿಂದ ಎಲ್ಲಾ ಗಲಿಬಿಲಿಯಾಗಿಬಿಡುತ್ತದೆ.

೪೮. ಪರಿಸ್ಥಿತಿ ಕೆಟ್ಟಷ್ಟೂ ದೇವರ ಪ್ರೀತಿ ಹೆಚ್ಚು ಹೆಚ್ಚಾಗುವುದು. ದೇವರನ್ನಷ್ಟೇ ಚಿಂತಿಸು, ಅವನನ್ನಷ್ಟೇ ಧ್ಯಾನಿಸು. ಅವನೊಡನಿರುವುದು ಎಲ್ಲ

ದುಃಖಗಳಿಂದಾದ ನಷ್ಟವನ್ನೂ ತುಂಬಿಕೊಟ್ಟಂತೆನ್ನಿಸುವುದು. ಭೌತಿಕ ನಷ್ಟಕೂಡ ಭರ್ತಿಯಾದ ಅನುಭವ ನಿನಗೆ ಬರುವುದು.

೪೯. ಸಾಧ್ಯವಾದ ಅತ್ಯುತ್ತಮ ಪರಿಸ್ಥಿತಿಯುಂಟಾಗುವುದು. ಇಡೀ ಜಗತ್ತು ತನ್ನ ಬಂಗಾರದಂಥ ಪರಿವರ್ತನದತ್ತ ಸಾಧ್ಯವಾದಷ್ಟು ಬೇಗ ಸಾಗುತ್ತಿದೆ.

೫೦. ಒಂದು ಸಂಗತಿಯನ್ನು ನೀನು ತಿಳಿದುಕೊಂಡಿರಬೇಕು ಹಾಗೂ ಎಂದೂ ಮರೆಯದಿರಬೇಕು ಅದೆಂದರೆ. ನಿಜವೂ ಪ್ರಾಮಾಣಿಕವೂ ಆದ ಎಲ್ಲವೂ ಉಳಿಯುವುದು. ಬರಿ ಅನೃತವೂ ಅಪ್ರಾಮಾಣಿಕವೂ ಆದಂಥವು ಅಳಿಯುವುವು.

೫೧. ನಾವು ಗೆದ್ದೇ ಗೆಲ್ಲುವೆವು. ಗೆಲ್ಲಲೇ ಬೇಕು–ಮತ್ತೆ ಮತ್ತೆ ಹೋರಾಡಬೇಕಾಗಿ ಬಂದರೂ ಸರಿಯೆ. ನಾನೆಂದೂ ನಿರುತ್ಸಾಹಿತೆಯಾಗಲಿಲ್ಲ–ನೀನೂ ಆಗಬೇಡ ಎಂದು ಹೇಳುತ್ತೇನೆ. ಏಕೆಂದರೆ, ದೇವರ ಅಂತ್ಯಜಯವು ಖಚಿತ.

೫೨. ನನ್ನ ಯಾವ ಮಗುವೂ ಸೊನ್ನೆಯಾಗದು. ನನ್ನ ಮಕ್ಕಳಲ್ಲಿ ಪ್ರತಿಯೊಂದಕ್ಕೂ ಅದದರ ಸ್ಥಾನವಿದೆ. ಸಾಧಿಸಬೇಕಾದ ವಿಶಿಷ್ಟ ಧ್ಯೇಯವಿದೆ. ನಾನವುಗಳೆಲ್ಲವನ್ನೂ ಸಮಾನವಾಗಿ ಪ್ರೀತಿಸುತ್ತೇನೆ. ಅದದರ ಯೋಗಕ್ಷೇಮಕ್ಕೂ ಪ್ರಗತಿಗೂ ಅಗತ್ಯವಾದುದನ್ನು ನಾನು ಮಾಡುತ್ತೇನೆ. ಅವುಗಳಲ್ಲಿ ನನಗೆ ಪ್ರಾಥಮ್ಯವೂ ಇಲ್ಲ. ಪಕ್ಷಪಾತವೂ ಇಲ್ಲ. ಅವುಗಳಿಗೆ ಬೀಳುವ ಹೊಡೆತಗಳು ಸುದೀರ್ಘಕಾಲದವು. ಕೂಡಲೇ ಅವನ್ನು ನಿಲ್ಲಿಸಲು ಸಾಧ್ಯವಾಗದಿರಬಹುದು. ಆದರೆ ಒಂದಲ್ಲಾ ಒಂದು ದಿನ ಅವು ನಿಲ್ಲಲೇಬೇಕು. ಈ ನಡುವೆ ಅವುಗಳನ್ನು ಚಿಕ್ಕವುಗಳನ್ನಾಗಿಯೂ ಕಡಿಮೆ ನೋಯಿಸುವಂಥವುಗಳನ್ನಾಗಿಯೂ ಮಾಡಬಹುದು. ಹಾಗೆ ಮಾಡಲು ನೀವು ನನ್ನ ಆಶ್ವಾಸನೆಯಲ್ಲಿ ಶ್ರದ್ಧೆಯಿಡಬೇಕು. ಯಾವಾಗಲೂ ಲಭ್ಯವಾಗಿರುವ ನನ್ನ ನೆರವನ್ನು ಬೇಡಬೇಕು.

೫೩. ಜಗತ್ತು ಇರುವ ಹಾಗೆ ಇದೆ ಸಣ್ಣತನ, ಅಷ್ಪಷ್ಟತೆಗಳಿಂದ ತುಂಬಿಹೋಗಿದೆ. ದೇವರೊಬ್ಬನೇ ದೀಪ್ತಿ, ದೇವರೊಬ್ಬನೇ ವ್ಯಾಪ್ತಿ ಅವನೇ ನಿತ್ಯ ಸತ್ಯ, ನಿಜಕರುಣೆ. ಆದುದರಿಂದ ದೇವರನ್ನು ಶರಣುಹೋಗು. ಜಗತ್ತಿನ ಕ್ಷುದ್ರತೆಯನ್ನು ಗಮನಿಸಬೇಡ. ಅದು ನಿನ್ನ ಶಾಂತಿಯನ್ನು ಕದಡದಂತೆ ನೋಡಿಕೋ. ಅಕ್ಷೋಭ–ಶಾಂತಿಗಳಿಂದ ಕೂಡಿದ ದೇವತಾ ಸಾನ್ನಿಧ್ಯವನ್ನು ಮಾತ್ರ ಇಟ್ಟುಕೋ.

೫೪. ಹಗೆಯನ್ನು ಬಿಡಬೇಡ. ವಿರುದ್ಧ ಶಕ್ತಿಗಳೇ ಹಗೆಗಳು, ಅವನ್ನು ತಡೆ, ಸಮರದಲ್ಲಿ ನಾನು ನಿನ್ನೊಡನಿರುವೆ. ನಾವು ಗೆಲ್ಲಲೇ ಬೇಕು.

೫೫. ದೇವರು ಹೇಗೆ ಒಬ್ಬನೇ ಒಬ್ಬನೊ, ಸತ್ಯವೂ ಹಾಗೇ ಒಂದೇ ಒಂದು.

೫೬. ನನ್ನ ಕೈಯ ನೆಳಲಿನಲ್ಲಿರು. ಅದು ನಿನಗೆದುರಾಗುವ ಎಲ್ಲವುದರಿಂದಲೂ ನಿನ್ನನ್ನು ಉಳಿಸುತ್ತದೆ. ನನ್ನ ನೆರವಿಗಾಗಿ ನಿನ್ನ ಎದೆಯನ್ನು ತೆರೆದಿಟ್ಟುಕೋ– ಅದೆಂದೂ ಬಾರದಿರದು.

೫೭. ಅರಮ್ಯ ವಿಚಾರ ಹಾಗೂ ಕೀಳು ಭಾವನೆಗಳು ಮನವನ್ನು ಹೊಲಸುಗೊಳಿಸಿ ನನ್ನ ಕಾವಿನ ಹೊರಗೆ ಅದನ್ನೊಯ್ಯದಂತೆ ನೋಡಿಕೋ.

೫೮. ಒಂದು ಶಬ್ದವನ್ನು ಬರೆಯುವುದೇನೂ ದೊಡ್ಡದಲ್ಲ. ನಾನೀಯುವ ನಿಜವಾದ ಸಹಾಯವನ್ನು ನಾನು ಮೌನವಾಗಿ, ಉಪಸ್ಥಿತೆಯಾಗಿಯೋ ಅನುಪಸ್ಥಿತಿಯಾಗಿಯೋ ಈಯುತ್ತಿದ್ದೇನೆ. ಆ ಕೆಲಸವು ಜನರಿಗೆ ಗೊತ್ತಾಗಿರಲಿ, ಇಲ್ಲದಿರಲಿ ಅವರು ಮನ್ನಿಸಲಿ, ಮನ್ನಿಸದಿರಲಿ ಅತ್ಯಂತ ಪರಿಣಾಮಕಾರಿ.

೫೯. ಹೌದು, ಮಗು, ಹೌದು, ನಿಸರ್ಗ (ಪ್ರಕೃತಿ)ವು ಯೋಗಾಭ್ಯಾಸದಿಂದ ಸಂಪೂರ್ಣವಾಗಿ ಬದಲಾಗಬಲ್ಲದು. ದೈವಾನುಗ್ರಹಕ್ಕೆ ಯಾವುದೂ ಅಸಾಧ್ಯವಲ್ಲ. ಸಂಪೂರ್ಣ ಅಸಾಧ್ಯವೆನ್ನಿಸಿದ್ದೆಲ್ಲವನ್ನೂ ಸಾಧ್ಯಗೊಳಿಸುವುದಲ್ಲದೆ, ಮಾಡಿ ಮುಗಿಸುವ ಮೂಲಕ ಸಂಪೂರ್ಣವಾಗಿ ಅದು ಒಬ್ಬನ ಇರವನ್ನು ಬದಲಾಯಿಸಬಲ್ಲದು. ಅನುಗ್ರಹದಲ್ಲಿ ಬದಲಾವಣೆಗಾಗಿ ಕೆಲಸ ಮಾಡುತ್ತಿರುತ್ತದೆ.

೬೦. ಅತಿ ಹೆಚ್ಚಾದ ದೈಹಿಕ ನೋವು ಕೂಡ ಅಕ್ಷುಬ್ಧತೆಯಿಂದ ಶಾಂತವಾಗಿ ಎದುರಿಸಿದರೆ ಕಡಿಮೆಯಾಗುತ್ತಾ ಹೋಗಿ ಸಹ್ಯತೆಗಿಳಿಯುವುದು. ಮರ್ಮ ಭೇದಕ ವೇದನೆಗೂ ನಾವು ದೇವರ ಮೇಲೆ ಭಾರಹಾಕಬಹುದು. ಮತ್ತು ದೇವರು ನಮ್ಮ ವೇದನೆಯನ್ನು ಸಂತೋಷವನ್ನಾಗಿ ಪರಿವರ್ತಿಸಬಲ್ಲ.

೬೧. ನಿನ್ನೆದೆಯ ಬಾಗಿಲನ್ನು ಪ್ರೀತಿಯ ಮಾಧುರ್ಯ ಬರುವಾಗ ಮುಚ್ಚಬೇಡ. ಅದೊಂದೇ ದುಃಖವೆಲ್ಲವನ್ನೂ ಪರಿಹರಿಸಬಲ್ಲದು ಮತ್ತು ಅದರ ಜಾಗದಲ್ಲಿ ಸತತವೂ ಶಾಂತವೂ ಆದ ಸುಖವನ್ನು ತಂದಿಡಬಲ್ಲದು.

೬೨. ಹೆದರಬೇಡ–ವಿರುದ್ಧ ಶಕ್ತಿಗಳು ಬರಲು ಹೆದರಿಕೆ ನೆರವೀಯುತ್ತದೆ. ಶಂಕೆ ಪಡಬೇಡ–ಶಂಕೆ ಅವು ಬರವಲಕಾಶ ಕೊಡುತ್ತದೆ. ನೀನು ಹಾಗೆ ಹೀಗೆ ಎಂದು ನಿರೀಕ್ಷಿಸಬೇಡ. ನಿರೀಕ್ಷೆ ಅದನ್ನು ಬರಗೊಡುತ್ತದೆ. ನನ್ನನ್ನೇ ಧ್ಯಾನಿಸು ಮತ್ತು ಬರಲಿರುವ ಜಯದ ಮೇಲೆ ಮನಸ್ಸಿಡು. ಅದನ್ನು ಯಾವಾಗಲೂ ಬೆನ್ನಟ್ಟಿ ಹೋಗಲು ಅದು ಬಲಿಷ್ಠ ಆಯುಧ. ಧೈರ್ಯ–ಶ್ರದ್ಧೆಗಳನ್ನಿಡು; ನಾನು ನಿನ್ನೊಡನಿರುವೆನು.

೬೩. ಧೈರ್ಯ, ಪ್ರತ್ಯಾಶೆ, ಶ್ರದ್ಧೆ! ಸುರಂಗದ ತುದಿಯಲ್ಲಿ ಬೆಳಕಿದೆ; ಅಗ್ನಿ ಪರೀಕ್ಷೆಯ ನಂತರ ಗೆಲುವು.

೬೪. ದೇವರ ಬಗ್ಗೆ ಲಕ್ಷ್ಯ ಹಾಕಿದ ಕೂಡಲೇ ನಿನಗೆ ಕಾಹಿಲೆ ಬರುತ್ತದೆ–ಮನುಷ್ಯನ ಪ್ರಕೃತಿಯೇ ಹೀಗೆ. ನಿನ್ನ ಹೃದಯ ಮತ್ತು ಭಾವನೆಗಳತ್ತ ನೀನು ಲಕ್ಷ್ಯ ಹಾಕಿದಾಗ ನಿನಗೆ ಅಸುಖವಾಗುತ್ತದೆ. ಮನಸ್ಸಿನತ್ತ ಲಕ್ಷ್ಯ ಹಾಕಿದಾಗ ಗಲಿಬಿಲಿಯುಂಟಾಗುತ್ತದೆ.

೬೫. ಅತಿದುರ್ಬಲ ದೌರ್ಬಲ್ಯದ ಹಿಂದೆ ಧೈವಶಕ್ತಿಯು ಪರಮ ಸಾಮರ್ಥ್ಯವಿರುತ್ತದೆ.

೬೬. ನನ್ನ ಹೆಸರಿನಿಂದ ಭಯವನ್ನು ದೂರ ಕಳಿಸು. ಭಯ ಅತ್ಯಂತ ಕೆಟ್ಟದ್ದು. ನನ್ನ ಮಗು ಎಂದೂ ಭಯ ಪಡಬಾರದು.

೬೭. ಕಷ್ಟಗಳೂ ಅನಾಹುತಗಳೂ ಸತ್ಯ ಪರೀಕ್ಷೆಗಳು; ಅದನ್ನು ದೇವರ ಅನುಗ್ರಹವೆಂದು ತಿಳಿದುಕೊಳ್ಳಬೇಕು. ಆಗ ಅವು ಹಾಗಾಗುವುವು ಮತ್ತು ಬೇಗನೆ ನಿನ್ನನ್ನವು ನಿನ್ನ ಗುರಿಯತ್ತ ಒಯ್ಯುವುವು.

೬೮. ಜಾತಕಕ್ಕಿಂತ ಬಲಿಷ್ಠನಾಗಲು ನೀನು ದೇವರನ್ನು ಬಿಡಲೊಲ್ಲೆಯಾ? ಮಹಾದೇವನಿಗೆ ಯಾವ ಜಾತಕವೂ ಅನಿವಾರ್ಯ ಪರಿಣಾಮಕತೆಯುಳ್ಳದ್ದಲ್ಲ. ದೇವರ ದಯೆಯಲ್ಲಿ ನಂಬಿಗೆಯಿಡು; ಆಗ ಎಲ್ಲವೂ ಬದಲಾಗಬಲ್ಲದು, ಬದಲಾಗುವುದು.

॥ ಓ ತತ್ ಸತ್ ॥

**ಭಕ್ತಕೋಟಿಗೀ ಜಗನ್ಮಾತೆ–ಕೊ**
**ಟ್ಟಾಶ್ವಾನಗಳಿಗೆ**
**ಯುಕ್ತ ಪಾತ್ರನೋದುಗನಾದಾನೆಂ**
**ಬಾಶೆಯುಳ್ಳ ನನಗೆ**
**ಶಕ್ತಿ ಕೊಡಲಿ ಸಚ್ಚಿದಾನಂದಸತಿ**
**ಶಾಂತಿಸ್ಥಾಪನೆಯ**
**ರಿಕ್ತಪುಣ್ಯರಳು ಬಾಳಿನಲ್ಲಿ ಈ**
**ನಾಡಿನ ಮನೆಮನೆಯ!**

**–ಬಿ.ಹೆಚ್. ಶ್ರೀಧರ**
(ಅನುವಾದಕರು)

# ಅನುಬಂಧಗಳು

## ಪ್ರೊ.ಬಿ.ಎಚ್.ಶ್ರೀಧರ : ಜೀವನದ ಮುಖ್ಯ ಘಟನೆಗಳು

| | | |
|---|---|---|
| ಜನನ | : | ೨೪ ಏಪ್ರಿಲ್ ೧೯೧೮ |
| | | ಬಿಜೂರು ಗ್ರಾಮ (ಅವಿಭಜಿತ ದಕ್ಷಿಣ ಕನ್ನಡ)ದ ಬವಲಾಡಿಯಲ್ಲಿ |
| ತಂದೆ | : | ಸೀತಾರಾಮ ಹೆಬ್ಬಾರ |
| ತಾಯಿ | : | ನಾಗಮ್ಮ |
| ತಂಗಿಯರು | : | ರುಕ್ಮಿಣಿ, ಸುಶೀಲ, ರಮ |
| ಶಿಕ್ಷಣ | | |
| ಪ್ರಾಥಮಿಕ | : | ಬಿಜೂರಿನ ಪ್ರಾಥಮಿಕ ಶಾಲೆಯಲ್ಲಿ |
| ಮಾಧ್ಯಮಿಕ | : | ಮಿಡಲ್ ಸ್ಕೂಲ್, ಸೊರಬ (೩ ವರ್ಷ) ಮಿಡಲ್ ಸ್ಕೂಲ್, ಸಾಗರ (೧ ವರ್ಷ) |
| ಪ್ರೌಢ | : | ಮುನಿಸಿಪಲ್ ಹೈಸ್ಕೂಲ್, ಸಾಗರ, ಎಸ್.ಎಸ್.ಎಲ್.ಸಿ. ಶಿವಮೊಗ್ಗ ಕೇಂದ್ರದಲ್ಲಿ |
| ಇಂಟರ್ ಮಿಡಿಯಟ್ | : | ಮೈಸೂರಿನ ಯುವರಾಜ ಕಾಲೇಜಿನಲ್ಲಿ |
| ಬಿ.ಎ. (ಆನರ್ಸ್) | : | ಮೈಸೂರಿನ ಮಹಾರಾಜ ಕಾಲೇಜಿನಲ್ಲಿ (೧೯೪೧)ರಲ್ಲಿ ರಾಜ್ಯಕ್ಕೆ ಮೊದಲಿಗನಾಗಿ ಉತ್ತೀರ್ಣ ಪೂರ್ಣ ಕೃಷ್ಣರಾವ್ ಬಂಗಾರದ ಪದಕ ನವೀನಂ ರಾಮಾನುಜಾಚಾರ್ಯ ಬಂಗಾರದ ಪದಕ 'ಕವಿಯೂ ವಿಜ್ಞಾನಿಯೂ' ಪ್ರಬಂಧಕ್ಕೆ ಹೊನ್ನಸೆಟ್ಟಿ ಬಹುಮಾನ |
| ಎಂ.ಎ. ಆನರ್ಸ್ | : | ಮಹಾರಾಜ ಕಾಲೇಜು, ಮೈಸೂರು. |
| ವಿವಾಹ | : | ಮೇ (೧೯೪೬) ರಮಾದೇವಿಯವರೊಡನೆ |

| | | |
|---|---|---|
| ಮಕ್ಕಳು | : | ಸುಮಾ, ಪ್ರತಿಭಾ, ವಿಜಯಾ, ರಾಜಶೇಖರ, ರಾಜೇಶ್ವರಿ |
| ವೃತ್ತಿ | : | ಪುಣೆಯ ಫೀಲ್ಡ ಕಂಟ್ರೋಲರ್ ಆಫ್ ಮಿಲಿಟರಿ ಎಕೌಂಟ್ಸ್ ಆಫೀಸಿನಲ್ಲಿ ಒಂದು ವರ್ಷ 'ಗುಮಾಸ್ತಗಿರಿ' (೧೯೪೨) |
| | * | ಭಟ್ಕಳದ ಇಸ್ಲಾಮಿಯು ಆಂಗ್ಲೋ ಉರ್ದು ಹೈಸ್ಕೂಲಿನಲ್ಲಿ ಸಹ ಶಿಕ್ಷಕರಾಗಿ ೪ ವರ್ಷ ಹಾಗೂ ಹೆಡ್ ಮಾಸ್ಟರ್ ಆಗಿ ಒಂದು ವರ್ಷ |
| | * | 'ಕರ್ಮವೀರ' ವಾರಪತ್ರಿಕೆ (ಹುಬ್ಬಳ್ಳಿ)ಯು ಉಪಸಂಪಾದಕರಾಗಿ (೧೯೪೭–೫೧) |
| | * | ಕುಮಟದ ಕೆನರಾ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕ (೧೯೫೧–೬೨)ರಾಗಿ |
| | * | ಶಿರಸಿಯು ಎಂ.ಎಂ. ಕಲಾ–ವಿಜ್ಞಾನ ಮಹಾವಿದ್ಯಾಲಯದಲ್ಲಿ ಉಪ ಪ್ರಾಚಾರ್ಯರಾಗಿ (೧೯೬೨–೬೯) ಸಂಸ್ಕೃತ ಮತ್ತು ಕನ್ನಡ ಪ್ರಾಧ್ಯಾಪಕರಾಗಿ. |
| | * | ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನಲ್ಲಿ ಪ್ರಾಚಾರ್ಯರಾಗಿ (೧೯೬೯–೭೬) |
| | * | ಶಿರಸಿಯ ಮಾಡರ್ನ್ ಎಜ್ಯುಕೇಷನ್ ಸೊಸೈಟಿಯ ಆನರರಿ ಮೆನೇಜರ್‌ಗಾಗಿ ೧೫–೬–೧೯೮೨ ರವರೆಗೆ |
| ನಿಧನ | : | ಏಪ್ರಿಲ್ ೨೪, ೧೯೯೦ |
| ಪ್ರಕಟಣೆಗಳು | : | ೧೯ನೇಯ ವಯಸ್ಸಿನಲ್ಲಿ ಇಂಟರ್ ಮೀಡಿಯಟ್ ಓದುತ್ತಿದ್ದಾಗ ಬೆಂಗಳೂರಿನ 'ಸುಬೋಧ' ರಾಮರಾಯರ ಕರೆಯ ಮೇರೆಗೆ ಬರೆದು ಪ್ರಕಟಿಸಿದ ಚಂಪಕಮಾಲಾ ವೃತ್ತದಲ್ಲಿದ್ದ ಕವನ ಮೊದಲ ಪ್ರಕಟಣೆ. ೧೯೯೦ರಲ್ಲಿ ಕೈಗಾ ಅಣು ವಿದ್ಯುತ್ ಸ್ಥಾವರ ಕುರಿತು 'ನಾಗರಿಕ' ಪತ್ರಿಕೆಯಲ್ಲಿ ಕೊನೆಯ ಲೇಖನ. ಈ ಮಧ್ಯದಲ್ಲಿ ೫೦ಕ್ಕೂ ಹೆಚ್ಚು ಪುಸ್ತಕಗಳು, ನೂರಾರು ಲೇಖನಗಳು ಪ್ರಕಟವಾದವು. |

**ಪ್ರಶಸ್ತಿ/ಗೌರವಗಳು**

| | | |
|---|---|---|
| ಕಾವ್ಯಸೂತ್ರ | : | ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ |
| | | ತೀ.ನಂ.ಶ್ರೀ ಸ್ಮಾರಕ ಬಹುಮಾನ |
| | | ಮೈಸೂರು ವಿ.ವಿ. ಸುವರ್ಣ ಮಹೋತ್ಸವ ಬಹುಮಾನ |
| ರಾಷ್ಟ್ರಸೂತ್ರ | : | ರಾಜ್ಯ ಸರಕಾರ ಅನುದಾನ |
| | | ಮೂರು ಸಾವಿರ ಮಠ, ಹುಬ್ಬಳ್ಳಿ, ಬಹುಮಾನ |
| ಜ್ಞಾನಸೂತ್ರ | : | ಹುಬ್ಬಳ್ಳಿಯ ಲೋಕ ಶಿಕ್ಷಣ ಟ್ರಸ್ಟ್ ಬಹುಮಾನ |
| ಮಾನಸ ದರ್ಪಣ | : | ಮದ್ರಾಸ್ ಕ್ರಿಶ್ಚಿಯನ್ ಟೆಕ್ಸ್ಟ್‌ಬುಕ್ ಕಮಿಟಿ ಬಹುಮಾನ |
| ನೌಕಾಗೀತ | : | ಕೇಂದ್ರ ಸರಕಾರದ ಸಂರಕ್ಷಣಾ ಶಾಖೆ ಬಹುಮಾನ |
| ರಸಯಜ್ಞ | : | ದೇವರಾಜ ಬಹಾದೂರ ಬಹುಮಾನ |
| ಮನುಸ್ಮೃತಿ (ರಾಜಧರ್ಮ) | : | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ಪದವಿ ತರಗತಿ ಪಠ್ಯಪುಸ್ತಕ |
| | | ೫೫ನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪತ್ರಿಕಾ ಗೋಷ್ಠಿ ಅಧ್ಯಕ್ಷ ಉ.ಕ. ಜಿಲ್ಲಾ ಮೂರನೆಯ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ (೧೯೭೪) |
| | | ಕುಂದಾಪುರದಲ್ಲಿ 'ಜೇಸೀ' ಸನ್ಮಾನ (೧೯೮೦) |
| | | ಶಿರಸಿಯ ರೋಟರಿ ಕ್ಲಬ್ ಸನ್ಮಾನ (೧೯೮೭) |
| | | ಶಿರಸಿಯ 'ರಂಗ ಸಂಗ' ಕಲಾರಂಗದವರಿಂದ ಪೌರ ಸನ್ಮಾನ (೧೯೮೭) |
| | | ಯುಗ ಪುರುಷದ ಬಳಗದಿಂದ ಕಿನ್ನಗೋಳಿಯಲ್ಲಿ ಸನ್ಮಾನ (೧೯೮೮) |

# ಬಿ.ಎಚ್.ಶ್ರೀಧರ ಕೃತಿ ಸೂಚಿ

**೧. ಕಾವ್ಯ**

| | | |
|---|---|---|
| ಮೇಘನಾದ | ಸಾಹಿತ್ಯ ಮಂದಿರ, ಮೈಸೂರು | ೧೯೪೫ |
| ಕಿನ್ನರಗೀತ | ಕಥಾಂಜಲಿ ಗ್ರಂಥಮಾಲೆ, ಬೆಂಗಳೂರು | ೧೯೪೭ |
| ಅಮೃತಬಿಂದು | ಸಂಯುಕ್ತ ಕರ್ನಾಟಕ ಕಾರ್ಯಾಲಯ, ಹುಬ್ಬಳ್ಳಿ | ೧೯೪೯ |
| ಮಂಜುಗೀತ | ಲೇಖಕರು, ಕುಮಟ | ೧೯೫೮ |
| ರಸಯಜ್ಞ | ವಿದ್ಯಾರಣ್ಯ ಪ್ರಕಾಶನ ಸಂಸ್ಥೆ, ಶಿರಸಿ | ೧೯೬೪ |
| ಮುತ್ತುರತ್ನ | ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ಮ.ಮು. ೧೯೮೭) | ೧೯೬೮ |
| ನೌಕಾಗೀತ | ಅಪ್ರಕಟಿತ (ಖಾಸಗಿ ಪ್ರಸಾರದಲ್ಲಿ) | ೧೯೬೮ |
| ಕದಂಬ ವೈಭವ | ಪ್ರಬುದ್ಧ ಕರ್ನಾಟಕದಲ್ಲಿ | ೧೯೭೦; |
| | ಸಾಹಿತ್ಯ ಮಂದಿರ ಶಿರಸಿ | ೧೯೮೭ |
| ಕಂಟಕಾರಿ ಮಹಾಕಾವ್ಯಂ | ದೀನಬಂಧು ಪ್ರಜಾಶನ, ಹೊನ್ನಾವರ | ೧೯೮೧ |
| ಜಾತವೇದ | ಪಿ.ಎ.ಎನ್. ಪಬ್ಲಿಷರ್ಸ್, ಬೆಂಗಳೂರು | ೧೯೮೪ |
| ಅಮೃತಬಿಂದು (ಶ್ರೀಧರ ಕಾವ್ಯ ವಾಚಿಕೆ) | ಸಾಹಿತ್ಯ ಪರಿಷತ್ತು ಬೆಂಗಳೂರು | ೨೦೦೭ |

**೨. ಯಕ್ಷಗಾನ**

ಯಕ್ಷಗಾನ ಪಂಚರಾತ್ರ ವಾರ್ಧಿಕ್ಯ, ಶಿರಸಿಯ 'ಧ್ಯೇಯನಿಷ್ಠ ಪತ್ರಕರ್ತ' ದಿನಪತ್ರಿಕೆಯಲ್ಲಿ ೫–೧೨–೧೯೯೩ ರಿಂದ ೮–೫–೧೯೯೪ರ ವರೆಗೆ ಪ್ರತಿ ಭಾನುವಾರ

**೩. ನಾಟಕ**

| | |
|---|---|
| ಮಯೂರ ಶರ್ಮ, ಯುಗಪುರುಷ ಪ್ರಕಟಣಾಲಯ, ಕಿನ್ನಿಗೋಳಿ | ೧೯೮೮ |
| ಸೋಮಾರಿಗಳ ಕ್ಲಬ್ (ಅಪ್ರಕಟಿತ) | ೧೯೮೭ |

**೪. ಆತ್ಮಕಥೆ**

ಜೀವಯಾನ, ಬಿ.ಎಚ್.ಶ್ರೀ. ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ ೧೯೯೪

**೫. ವಿನೋದ–ವಿಡಂಬನೆ**

| | | |
|---|---|---|
| ಬೇತಾಳಗಳ ಕುಣಿತ | ಸರ್ವೋದಯ ಸಾಹಿತ್ಯ ಮಾಲೆ, ಹುಬ್ಬಳ್ಳಿ | ೧೯೫೧ |
| ಭಾಷಣಗಳ ಭೈರವರ ಒಡ್ಡೋಲಗ | ಎ.ಎಂ.ಜಿ. ಸಾಹಿತ್ಯ ಪ್ರಕಾಶನ, ಉಡುಪಿ | ೧೯೬೬ |

**೬. ವಿಮರ್ಶೆ**

| | | |
|---|---|---|
| ಬೇಂದ್ರೆ | ಎಂ.ಜಿ.ಎಂ. ಕಾಲೇಜು ಉಡುಪಿ | ೧೯೫೬ |
| ಹೊಸಗನ್ನಡ ಸಾಹಿತ್ಯ ಶೈಲಿ | ಪ್ರತಿಭಾ ಗ್ರಂಥಮಾಲೆ, ಧಾರವಾಡ | ೧೯೫೬ |
| ಕವೀಂದ್ರ ರವೀಂದ್ರ | ಶಶಿ ಪ್ರಕಾಶನ, ಬೆಂಗಳೂರು | ೧೯೫೯ |
| ಕಾವ್ಯಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೮ |
| ಪ್ರತಿಭೆ | ರವೀಂದ್ರ ಪ್ರಕಾಶನ, ಕಾರ್ಗಲ್ | ೧೯೭೮ |
| ಸಂಸ್ಕೃತಗಳ ಕನ್ನಡಗಳ ಬಾಂಧವ್ಯ | ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ ಮಂಗಳೂರು | ೧೯೮೧ |
| ಪಸರಿಪ ಕನ್ನಡಕ್ಕೊಡೆಯನೀಗ ದರಾಂಕಿತ ಬೇಂದ್ರೆ | ಶ್ರೀಮಾತಾ ಪ್ರಕಾಶನ ಧಾರವಾಡ | |
| ಜನ್ನ (ಸಂ.ವಿ.ಸಿ) | ಐ.ಬಿ.ಎಚ್.ಪ್ರಕಾಶನ ಬೆಂಗಳೂರು | ೧೯೭೫ |

**೭. ವೈಚಾರಿಕ**

| | | |
|---|---|---|
| ಭಾರತೀಯ ನಾಗರಿಕತೆಗೆ | ಪ್ರಸಾರಾಂಗ | ೧೯೫೯ |
| ಮನುವಿನ ಕೊಡುಗೆ | ಕ.ವಿ.ವಿ. ಧಾರವಾಡ (ಮರುಮುದ್ರಣ) | ೧೯೭೧ |
| ಪಂಚಮುಖಿ | ಅಂತರಂಗ ಕಾರ್ಯಾಲಯ, ಉಡುಪಿ | ೧೯೫೫ |
| ವಿದೇಶದ ತಿಳಿವಳಿಕೆಗಳು | ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ್, ಕುಮಟ | ೧೯೫೯ |
| ಜ್ಞಾನಸೂತ್ರ | ವಿದ್ಯಾರಣ್ಯ ಗ್ರಂಥ ಪ್ರಕಾಶನ, ಶಿರಸಿ | ೧೯೬೯ |
| ಮಾನಸದರ್ಪಣ (ಹನುಮಂತರಾವ್ ಅವರೊಂದಿಗೆ) | ಸಮಾಜ ಪುಸ್ತಕಾಲಯ, ಧಾರವಾಡ | ೧೯೭೩ |
| ರಾಷ್ಟ್ರಸೂತ್ರ | ವಿಶ್ವ ಪ್ರಕಾಶನ, ಹುಬ್ಬಳ್ಳಿ | ೧೯೭೪ |
| ವಿಚಾರ ವಿಜಯ | ರವೀಂದ್ರ ಪುಸ್ತಕಾಲಯ, ಕಾರ್ಗಲ್ | ೧೯೮೧ |
| ಭಾರತೀಯ ಮೂರ್ತಿಶಿಲ್ಪ | ಬಂಡಾಯ ಪ್ರಕಾಶನ, ಅರೆಅಂಗಡಿ | ೨೦೦೯ |

**೮. ಇತಿಹಾಸ**

ಬನವಾಸಿಯ ಕದಂಬರು ಶತಮಾನೋತ್ಸವ ಸಮಿತಿ, ಬನವಾಸಿ ೧೯೬೬
(ಎಲ್.ಟಿ. ಶರ್ಮಾರೊಂದಿಗೆ)
ಬನವಾಸಿಯ ಇತಿಹಾಸ ಸಾಹಿತ್ಯ ಮಂದಿರ, ಶಿರಸಿ ೨೦೦೪

**೯. ಇತರೆ**

ಮಯೂರ ಶರ್ಮ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೧
(ಮರುಮುದ್ರಣ ೧೯೭೧)
ಕೌಶಿಕ ರಾಮಾಯಣ ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ೧೯೭೨
ರಮಣ ಮಹರ್ಷಿ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೬೯
ಉತ್ತರ ಕನ್ನಡ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು (ಉಪಲಬ್ಧವಿಲ್ಲ)
ಬನವಾಸಿಯ ಕೈಪಿಡಿ ೧೯೭೧
ಸಾಹಿತ್ಯ ಚಿಂತನ (ಮಂಜುವಾಣಿಯಲ್ಲಿ ಧಾರಾವಾಹಿಯಾಗಿ)
ಶಿವಪುರಾಣ (ಮಂಜುವಾಣಿಯಲ್ಲಿ ಧಾರವಾಹಿಯಾಗಿ)
ವೇದರಹಸ್ಯಸಾರ ರಾಜಶೇಖರ ಹೆಬ್ಬಾರ, ಶಿರಸಿ ೨೦೦೩

**೧೦. ಅನುವಾದ**

(ಇಂಗ್ಲಿಷಿನಿಂದ)
ಭಾರತೀಯ ರಾಜ್ಯಧರ್ಮದ ಸತ್ವ ಮತ್ತು ಸ್ವರೂಪ
(ಆರವಿಂದರ The Foundations of Indian Culture (ಭಾಗ–೧) ಅನುವಾದ)
ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೫
ಭಾರತೀಯ ವಾಙ್ಮಯ
(ಅರವಿಂದರ The Foundations of Indian Culture (ಭಾಗ–೨) ಅನುವಾದ)
ಎನ್.ಆರ್.ರಾವ್‌ರೊಂದಿಗೆ ಸುಲಭ ಸಾಹಿತ್ಯ ಪ್ರಕಾಶನ, ಕುಮಟ ೧೯೫೭
ಟಿ.ಎಸ್.ಈಲಿಯಟ್ (ಎ.ಸಿ.ಬ್ರ್ಯಾಡ್ ಬ್ರೂಕ್‌ರ T.S.Eliot ಅನುವಾದ)
ಎಂ.ಜಿ.ಎಂ. ಕಾಲೇಜು ಉಡುಪಿ. ೧೯೫೭
ಸ್ವಾತಂತ್ರ್ಯ ಮೀಮಾಂಸೆ
(ಜೆ.ಎಸ್. ಮಿಲ್ಲರರ On Liberty ಅನುವಾದ ಎನ್.ಆರ್. ರಾವ್‌ರೊಂದಿಗೆ)
ಕುಮಟ ೧೯೬೧
ಮಾತೃಶ್ರೀ (ಪಶುಪತಿಯವರ On the Mother Divine ಅನುವಾದ)
ಶ್ರೀ ಅರವಿಂದೋ ಸೊಸೈಟಿ, ಶಿವಮೊಗ್ಗ ೧೯೭೫

ವೇದರಹಸ್ಯ (ಅರವಿಂದ The Secret of the Veda ಅನುವಾದ) (ಅಪ್ರಕಟಿತ)
ನೆಹರೂ ಉವಾಚ (ಉಪಲಬ್ಧವಿಲ್ಲ)
ರಮಣ ಮಾರ್ಗ ಭಾಗ ೧ ಮತ್ತು ಭಾಗ –೨
(ಓಂ ಸಾಧು ಅವರ The Path of Ramana Part-1 & Part 2 ಅನುವಾದ)
ಅಪ್ರಕಟಿತ

**ಅನುವಾದ (ಸಂಸ್ಕೃತ)**

| | | |
|---|---|---|
| ಕಾಳಿದಾನ ಕಾವ್ಯ ಸೌರಭ | ರೋಟರಿ ಕ್ಲಬ್, ಕುಮಟ (ಉಪಲಬ್ಧವಿಲ್ಲ) | ೧೯೬೨ |
| ಕುಂದಮಾಲೆ (ನಾಟಕ) | ಗೀತಾ ಬುಕ್ ಹೌಸ್, ಮೈಸೂರು | ೧೯೬೭ |
| ಸಂಸ್ಕೃತ ಸುಭಾಷಿತ ಸಂಗ್ರಹ | ಪ್ರಸಾರಾಂಬ, ಕ.ವಿ.ವಿ. ಧಾರವಾಡ | ೧೯೭೧ |
| ರಾಜಧರ್ಮ | ಪ್ರಸಾರಾಂಗ, ಕ.ವಿ.ವಿ. ಧಾರವಾಡ | ೧೯೭೪ |

(ಮನುಸ್ಮೃತಿ ೭ನೇ ಅಧ್ಯಾಯದ ಅನುವಾದ – ಟಿಪ್ಪಣಿ, ಪೀಠಿಕ ಸಹಿತ ಬಿ.ಆರ್.ಮೋಡಕರೊಂದಿಗೆ)

**೧೧. ಸಂಪಾದಿತ**

ನವರತ್ನ (ಮಿಸಲೆನಿ) ಸುಲಭ ಸಾಹಿತ್ಯ ಪ್ರಕಾಶನ, ಕುಮಟ (ವರ್ಷ ನಮೂದಿಸಿಲ್ಲ)

ಬವವಾಡಿ ಹಿರಿಯಣ್ಣ ಹೆಬ್ಬಾರ್ ವಿರಚಿತ
ಭಾನುಮತಿ ಕಲ್ಯಾಣ (ಯಕ್ಷಗಾನ) ಕಾವ್ಯಾಲಯ ಪ್ರಕಾಶಕರು, ಮೈಸೂರು ೧೯೫೮

ರಸೋ ವೈ ಸಃ (ಹಿರಿಯಣ್ಣ ಹೆಬ್ಬಾರರ ಯಕ್ಷಗಾನ ಮತ್ತು ಭಕ್ತಿ ಸ್ತೋತ್ರಗಳು)
'ಸಾಹಿತ್ಯ ಮಂದಿರ' ಶಿರಸಿ ೧೯೮೭

# ಕೆಲವು ಲೇಖನಗಳು

**೧. ಅಭಿನಂದನ ಗ್ರಂಥಗಳಲ್ಲಿ**

| | | |
|---|---|---|
| ಸಂಸ್ಕೃತ ನಾಟಕ | ಅಭಿನಂದನೆ | ೧೯೫೬ |
| ಕನ್ನಡ ಸಾಹಿತ್ಯಕ್ಕೆ ಮುಗಳಿ ಕೊಡುಗೆ | ರಸಿಕರಂಗ ದರ್ಶನ | ೧೯೬೬ |
| ಸೌಂದರ್ಯ ಮೀಮಾಂಸೆ | ಉಪಾಯನ | ೧೯೬೭ |
| ಯಕ್ಷಗಾನ ಬಯಲಾಟ | ಕಾರಂತ ಪ್ರಪಂಚ | ೧೯೬೯ |
| ಬೆಂಗಳೂರು ಭಾರ್ಗವ (ಅ.ನ.ಕೃ) | ರಸಚೇತನ | ೧೯೭೦ |
| ಗುರುಗಳಿಗೆ ನಮಸ್ಕಾರ | ಸಮರ್ಪಣೆ | ೧೯೭೦ |
| ಕುವೆಂಪು ಗದ್ಯ | ಸಹ್ಯಾದ್ರಿ | ೧೯೭೪ |
| ಯಕ್ಷಗಾನದ ಸಾಂಸ್ಕೃತಿಕ ಕೊಡುಗೆ | ರಸ ಋಷಿ | ೧೯೭೪ |
| ಬೇಂದ್ರೆ ಕಾವ್ಯ ಸ್ತೋತ್ರ | ಇಳಿದು ಬಾ ತಾಯಿ | ೧೯೭೭ |
| ಕಾವ್ಯಾನುಶಾಸನ | ಬ್ರಹ್ಮಗಿರಿ | ೧೯೭೭ |
| ಅಭಿಜಾತ ಕೃತಿ–ನಲ್ಮೆ | ವಾಙ್ಮಯ ತಪಸ್ವಿ | ೧೯೭೭ |
| ಜ್ಞಾನದ ಪೂರ್ಣಕುಂಭ | ನಮನ | ೧೯೭೮ |
| ಮಿತ್ರಾಭಿನಂದನ | ಪ್ರವೃತ್ತ | ೧೯೭೬ |
| ಆಧುನಿಕ ಸಾಹಿತ್ಯ ಸಮೀಕ್ಷೆ ಇತ್ಯಾದಿ | ಬೆಳ್ವೊಲ | ೧೯೮೧ |

**೨. ಸಂಸ್ಮರಣ ಸಂಚಿಕೆಗಳಲ್ಲಿ**

| | | |
|---|---|---|
| ಹೈವನಾಡಿನ ಚರಿತ್ರೆ | ಉ.ಕ.ದರ್ಶನ, ಕ.ಸಾ.ಪ. ಬೆಂಗಳೂರು | ೧೯೮೬ |
| ಬನವಾಸಿಯ ಚಕ್ರವರ್ತನ | ಪಡುವಣ (೪೫ನೇಯ ಕನ್ನಡ ಸಾಹಿತ್ಯ ಸಮ್ಮೇಳನ) | |
| ಶಿರಸಿಯ ಚಾರಿತ್ರಿಕ ಹಿನ್ನೆಲೆ | ಶಿರಸಿ ನಗರಸಭಾ ಸಂಚಿಕೆ | ೧೯೬೬ |
| ಹೊನ್ನಾವರ ಚರಿತ್ರೆ | ಹೊನ್ನಾವರ ಭೂ ಅಭಿವೃದ್ಧಿ ಬ್ಯಾಂಕ್ | ೧೯೭೭ |

| | | |
|---|---|---|
| ಸಿದ್ದಾಪುರದ ಚಾರಿತ್ರಿಕ ಹಿನ್ನೆಲೆ | ಅರ್ಬನ್ ಬ್ಯಾಂಕ್, ಸಿದ್ದಾಪುರ | ೧೯೭೯ |
| ಭಾರತದ ಗ್ರಂಥಾಲಯಗಳ ಇತಿಹಾಸ | ಶಿರಸಿ ಪಂಡಿತ್ ಲೈಬ್ರರಿ | ೧೯೭೦ |
| ಕೌಶಿಕ ರಾಮಾಯಣ | ಕದಂಬ (ಸಾಹಿತ್ಯ ಸಮ್ಮೇಳನಾಂಕ) | ೧೯೮೨ |
| ವಿದ್ವತ್ಕವಿ ಪಾಂಡೇಶ್ವರರು | ತಾಂಬೂಲ (ಉ.ಕ.ಸಾಹಿತ್ಯ ಸಮ್ಮೇಳನಾಂಕ) | ೧೯೮೧ |
| ಕನ್ನಡ ಸಾಹಿತ್ಯ ನಡೆದು ಬಂದ ದಾರಿ | ಮೈಸೂರು ದಸರಾ ದರ್ಶಿನಿ | ೧೯೬೪ |
| ಇತ್ಯಾದಿ | | |

**೩. ಪತ್ರಿಕೆಗಳು**

| | | |
|---|---|---|
| ಇಂದಿನ ಕನ್ನಡ ಪ್ರಬಂಧಗಳು | ಕನ್ನಡ ಸಾಹಿತ್ಯ ಪರಿಷತ್ಪತ್ರಿಕ | ೪೬/೧ |
| ಔಚಿತ್ಯ | ಜೂನ್ ೧೯೬೭ | |
| | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪೨/೧ ಜೂನ್ ೧೯೪೭ | |
| ಕುಂದಗನ್ನಡ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪೧, ೪೨, ೪೩ ಜೂನ್ ೧೯೪೬/೫೮ | |
| ಹೊಸಗನ್ನಡ ಛಂದೋವಿಕಾಸ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೪/೧–೨ ಜೂನ್ –ಡಿಸೆಂ. | |
| ಕನ್ನಡತ್ರಯ ವಿಭಾಗಯೋಗ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ | |
| | ೬೨/೧ ಜೂನ್ – ಡಿಸೆಂ. ೧೯೭೭ | |
| ವಿಮರ್ಶೆ | ಸಾಧನ, ಸಂಪುಟ ೧, ಸಂಚಿಕೆ ೩೧ | |
| ಸ್ವಾತಂತ್ರ್ಯ ಮತ್ತು ಭ್ರಮೆ | ಜೀವನ | |
| | ಜುಲೈ ೧೯೬೮ | |
| ರಂಗ ಬಿನ್ನಪ | ಪ್ರಬುದ್ಧ ಕರ್ನಾಟಕ ಚಿನ್ನದ ಸಂಚಿಕೆ | |
| | ೧೯೬೯ | |
| ಸಾಹಿತ್ಯ ಚಿಂತನ–ಲೇಖನ ಸರಣಿ | ಮಂಜುವಾಣಿ | |
| | ೧೯೮೧ ರಿಂದ ೧೯೮೩ | |
| ಶಿವ ಪುರಾಣ–ಲೇಖನ ಸರಣಿ | ಮಂಜುವಾಣಿ | |
| | ೧೯೮೪ ರಿಂದ ೧೯೮೬ | |
| ಜನಜೀವನ ಹಾಗೂ | ಕಾನಡಾವೃತ್ತ | |

| | |
|---|---|
| ಜಾನಪದ ಕಲೆಗಳು | ೧೦೮೨ |
| ಯಕ್ಷಗಾನ : ಉಗಮ ಮತ್ತು ಇತಿಹಾಸ | ಸಂಯುಕ್ತ ಕರ್ನಾಟಕ ೨೪–೬–೧೯೮೪ |
| ಸಾಹಿತ್ಯ ಮತ್ತು ಮಹಾಕಲ್ಪನೆ | ಜನತಾ ೧೨–೮–೧೯೬೩ |
| ಮಾನವ ಸಂಸ್ಕೃತಿ | ಜಯಕರ್ನಾಟಕ ಜುಲೈ ೧೯೫೩ |
| ಕಾವ್ಯದಲ್ಲಿ ಪ್ರಾಸ ಏಕೆ ಬೇಕು? | ಕನ್ನಡ ನುಡಿ ೧–೪–೧೯೭೩ |
| ವಿಮರ್ಶಾ ಪರಿಭಾಷೆ | ತಾಯಿ ನುಡಿ ದೀಪಾವಳಿ ಸಂಚಿಕೆ |

* ಮುಂತಾದ ಸಾವಿರಾರು ಲೇಖನಗಳು

೪. ಇಂಗ್ಲಿಷ್ ಲೇಖನಗಳು

| | | |
|---|---|---|
| Manu's Theory of Kingship | JL of K.U.D. YV | 1971 |
| Experience and expression | XVII | 1973 |
| Classical and Modern Plays | The Mysore Orientalist | 1969 |
| Aesthetic Experience | Mysore Oriental Research Institute | 1972 |
| Indian History-A Challenge to some Fundamental Assumptions | JL of Mysore University | 1977 |
| The Hindu View of History etc. | P.B.Desai Fel. Vol Dharwad | |

## ಶ್ರೀಧರರ ಕುರಿತು

### ೧. ಕಿರುಹೊತ್ತಿಗೆ

| | | |
|---|---|---|
| ರಾಜಶೇಖರ ಹೆಬ್ಬಾರ ಹಾಗೂ ಕಿರಣ ಭಟ್ಟ | ಪ್ರೊ.ಬಿ.ಎಚ್.ಶ್ರೀಧರ ಬಿ.ಎಚ್.ಶ್ರೀ ಸಾಹಿತ್ಯ ಪ್ರಶಸ್ತಿ ಸಮಿತಿ, ಶಿರಸಿ | ೧೯೯೨ |
| ರಾಜಶೇಖರ ಹೆಬ್ಬಾರ | ಪ್ರೊ.ಬಿ.ಎಚ್.ಶ್ರೀಧರ | ೨೦೦೭ |
| ರಾಜಶೇಖರ ಹೆಬ್ಬಾರ | ಶ್ರೀಧರ ಪ್ರಶಸ್ತಿ | ೨೦೧೦ |
| ಡಾ.ಶ್ರೀಪಾದ ಭಟ್ಟ | | |

**೨. ಸಂದರ್ಶನ**

| | | |
|---|---|---|
| ಪಾ.ವೆಂ.ಆಚಾರ್ಯ | ಕಸ್ತೂರಿ | ಫೆಬ್ರವರಿ ೧೯೭೪ |
| ಭುವನೇಶ್ವರಿ ಹೆಗಡೆ | ತರಂಗ | ೧೯೮೭ |
| ಭಾಗೀರಥಿ ಹೆಗಡೆ | ಉಷಾವಾಣಿ | ೨೧-೮-೧೯೮೮ |
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬-೪-೧೯೮೭ |
| ಮುಂತಾದವು | | |

**೩. ಸಾಹಿತ್ಯ ವಿಮರ್ಶೆ**

ಎಚ್.ಆರ್.ಅಮರನಾಥ-ಪರಂಪರೆಯ ಕಾವಲುಗಾರ:
ಬಿ.ಎಚ್.ಶ್ರೀಧರರ ಕಾವ್ಯ ಸಮೀಕ್ಷೆ ಸೃಜನವೇದಿ ಏಪ್ರಿಲ್ ೧೯೮೭
ಪ್ರೊ.ಬಿ.ಎಚ್.ಶ್ರೀಧರ-ರಾಜಶೇಖರ ಹೆಬ್ಬಾರ ೨೦೦೭

**೪. ಗ್ರಂಥಾವಲೋಕನ**

| | | |
|---|---|---|
| ಮೇಘನಾದ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-೩೧, ೨ | |
| ಮಂಜುಗೀತ | ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ-೪೩, ೨ | |
| ಜಾತವೇದ | ಪ್ರಜಾವಾಣಿ | ೫-೧-೧೯೮೬ |
| ಜಾತವೇದ | ನಾಗರಿಕ | ೧೯೮೫ |
| ಜಾತವೇದ | ಸಂಯುಕ್ತ ಕರ್ನಾಟಕ | ೫-೧-೧೯೮೬ |
| ಕಂಟಕಾರೀ ಕಾವ್ಯಂ | ಗ್ರಂಥಲೋಕ | ೧-೪-೧೯೮೨ |
| ಕವೀಂದ್ರ ರವೀಂದ್ರ | ಕರ್ನಾಟಕ ಭಾರತಿ | ೧೯೬೪ |
| ಕಾವ್ಯ ಸೂತ್ರ | ಸಂಯುಕ್ತ ಕರ್ನಾಟಕ | ೧೧-೧೦-೧೯೬೯ |
| ಬೇಂದ್ರೆ | ಶಿರಸಿ ಸಮಾಚಾರ | ೧-೭-೧೯೮೭ |
| ಪ್ರಜ್ಞಾವಾದ | ವನಶ್ರೀ ಉ.ಕ.ಜಿಲ್ಲಾ ಸಾಹಿತ್ಯ ಸಮ್ಮೇಳನ ಯಲ್ಲಾಪುರ | ೧೯೭೪ |
| ಭಾರತೀಯ ಮೂರ್ತಿಶಿಲ್ಪ | The Indian Express | ೧-೮-೧೯೮೮ |

**೫. ಬದುಕು-ಬರೆಹ ಪರಿಚಯದ ಲೇಖನಗಳು**

| | | |
|---|---|---|
| ಮೋಹನ ಹೆಗಡೆ | ಸಂಯುಕ್ತ ಕರ್ನಾಟಕ | ೨೬-೪-೧೯೮೭ |
| ರಾಜಶ್ರೀ ಹೆಗಡೆ | The Indian Express | ೧೧-೫-೧೯೮೭ |
| ಎಂ.ಎ.ಶರ್ಮ ತದ್ದಲಸೆ | ಪ್ರಜಾಮತ | ೨೪-೫-೧೯೮೭ |

| | | |
|---|---|---|
| ಹಾ.ಮಾ.ನಾಯಕ | ಪ್ರಜಾವಾಣಿ | ೨೧–೫–೧೯೮೭ |
| ಹಾ.ಮಾ.ನಾಯಕ | ಪ್ರಜಾವಾಣಿ | ೨೦–೫–೧೯೯೦ |
| ಟಿ.ಎಂ.ಸುಬ್ಬರಾಯ | ಉದಯವಾಣಿ | ೬–೫–೧೯೯೦ |
| ಎಚ್ಚೆಸ್ಕೆ | ಸುಧಾ | ೨೪–೫–೧೯೮೭ |
| ಪಾ.ವೆಂ.ಆಚಾರ್ಯ | ಉದಯವಾಣಿ | ೬–೫–೧೯೯೦ |
| ಕಿರಣ ಭಟ್ ಹಾಗೂ ಅಮರನಾಥ | ಪ್ರಜಾವಾಣಿ | ೨೧–೬–೧೯೯೧ |
| ರಾಜೇಶ್ವರಿ ಹೆಬ್ಬಾರ | ಸಂಯುಕ್ತ ಕರ್ನಾಟಕ | ೨೦೦೯ |

* ಮುಂತಾದವು.

**೬. ಶ್ರೀಧರ ಸ್ಮರಣೆ** – ಸಂ. ಡಾ.ಎಂ.ಜಿ.ಹೆಗಡೆ ೧೯೯೯
(ಅಭಿನಂದನ ಗ್ರಂಥ)

**೭. ಶ್ರೀಧರರ ನೆನಪು**

ಶ್ರೀಧರರ ನೆನಪು ಚಿರಂತನವಾಗಿ ಉಳಿಯುವಂತೆ ಮಾಡಲು ಅವರ ಕುಟುಂಬದವರು ಶಿಷ್ಯರು ಹಾಗೂ ಅಭಿಮಾನಿಗಳ ಪರವಾಗಿ ಡಾ.ಟಿ.ನಾರಾಯಣ ಭಟ್, ಎಚ್.ಆರ್.ಅಮರನಾಥ, ಕಿರಣಭಟ್, ವಿಷ್ಣುಹೆಗಡೆ ಹಾಗೂ ರಾಜಶೇಖರ ಹೆಬ್ಬಾರ, ಜಗದೀಶ ಭಂಡಾರಿ, 'ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಸಮಿತಿಯನ್ನು ರೂಪಿಸಿ ಪ್ರತಿ ವರ್ಷ ಕನ್ನಡದ ಉತ್ತಮ ಸಾಹಿತ್ಯ ಕೃತಿಗೆ ಬಹುಮಾನ ನೀಡುವ ವ್ಯವಸ್ಥೆ ಮಾಡಿದ್ದಾರೆ (೧೯೯೧ ರಿಂದ) –ಸಿ.ಎನ್.ಹೆಗಡೆ, ಸಿ.ಆರ್.ಶಾನಭಾಗ, ಯು.ಎ.ಐತಾಳ, ವಿಠಲ ಭಂಡಾರಿ, ಶ್ರೀಪಾದ ಭಟ್, ಯಶವಂತ ನಾಯಕ ಇವರು ಸದಸ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

# ಬಿ.ಎಚ್.ಶ್ರೀಧರ ಸಾಹಿತ್ಯ ಪ್ರಶಸ್ತಿ ಪುರಸ್ಕೃತರು

| ವರ್ಷ | ಪ್ರಶಸ್ತಿ | ಕೃತಿ | ಅಧ್ಯಕ್ಷತೆ |
|---|---|---|---|
| ೧೯೯೧ | ನಾ.ಮೊಗಸಾಲೆ | ಪ್ರಭವ (ಕಾವ್ಯ) | ಕೀರ್ತಿನಾಥ ಕುರ್ತಕೋಟಿ |
| ೧೯೯೨ | ಗಿರೀಶ ಕಾರ್ನಾಡ | ತಲೆದಂಡ (ನಾಟಕ) | 'ಎನ್ಕೆ' ಕುಲಕರ್ಣಿ |
| ೧೯೯೩ | ಪಿ.ಲಂಕೇಶ ಹಾಗೂ | ಅಕ್ಕ (ಕಾದಂಬರಿ) | |
| | ದು.ನಿಂ.ಬೆಳಗಲಿ | ದೇವದಾಸಿ (ಕಾದಂಬರಿ) | ಶಿವರಾಮ ಕಾರಂತ |
| ೧೯೯೪ | ಪುರುಷೋತ್ತಮ ಬಿಳಿಮಲೆ | ಶಿಷ್ಟ ಪರಿಶಿಷ್ಟ (ವಿಮರ್ಶೆ) | ಕೆ.ವಿ.ಸುಬ್ಬಣ್ಣ |
| ೧೯೯೫ | ಎಚ್.ಎಸ್.ವೆಂಕಟೇಶಮೂರ್ತಿ | ಎಷ್ಟೊಂದು ಮುಗಿಲು (ಕವನ) | ಪಾಟೀಲ ಪುಟ್ಟಪ್ಪ |
| ೧೯೯೬ | ಜಿ.ಎಸ್.ಆಮೂರ | ಕನ್ನಡ ಕಥನ ಸಾಹಿತ್ಯ ಕಾದಂಬರಿ ವಿಮರ್ಶೆ | ಪ್ರಸನ್ನ |
| ೧೯೯೭ | ಜಯಂತ ಕಾಯ್ಕಿಣಿ | ಅಮೃತಬಳ್ಳಿ ಕಷಾಯ (ಕಥಾಸಂಕಲನ) | ವೇಣುಗೋಪಾಲ |
| ೧೯೯೮ | ಸವಿತಾ ನಾಗಭೂಷಣ | ಸ್ತ್ರೀಲೋಕ (ಕಾದಂಬರಿ) | ಸಿ.ಎನ್.ರಾಮಚಂದ್ರನ್ |
| ೧೯೯೯ | ಕೆ.ವಿ.ನಾರಾಯಣ | ಬೇರು–ಕಾಂಡ–ಚಿಗುರು (ವಿಮರ್ಶೆ) | ವಿಷ್ಣುನಾಯ್ಕ |
| ೨೦೦೦ | ಪ್ರತಿಭಾ ನಂದಕುಮಾರ್ | ಕವಡೆ ಆಟ (ಕವನ) | ಗಿರಡ್ಡಿ ಗೋವಿಂದರಾಜ್ |
| ೨೦೦೧ | ಕೆ.ರಾಘವೇಂದ್ರರಾವ್ | Imagining the unimaginable communities | ಟಿ.ನಾ.ಭಟ್ |
| ೨೦೦೨ | ಮೊಗಳ್ಳಿ ಗಣೇಶ | ಭೂಮಿ (ಕಥಾ ಸಂಕಲನ) | ಬರಗೂರು ರಾಮಚಂದ್ರಪ್ಪ |
| ೨೦೦೩ | ಶಿವರಾಮ ಪಡಿಕ್ಕಲ್ | ನಾಡು ನುಡಿಯ ರೂಪಕ (ವಿಮರ್ಶೆ) | ಬಿ.ಎ.ಸನದಿ |
| ೨೦೦೪ | ಚಿಂತಾಮಣಿ ಕೊಡ್ಲೆಕೆರೆ | ತಲೆಮಾರಿನ ಕೊನೆಯ ಕೊಂಡಿ | ಜಯಂತ ಕಾಯ್ಕಿಣಿ |
| ೨೦೦೫ | ಎ.ಎನ್.ಪ್ರಸನ್ನ | ರಥಸಪ್ತಮಿ (ಕಥಾಸಂಕಲನ) | ಜಿ.ಎಸ್.ಆಮೂರ |
| ೨೦೦೬ | ಎಸ್.ದಿವಾಕರ | ನಾಪತ್ತೆಯಾದ ಗ್ರಾಮಾಫೋನ್ ಮತ್ತು ಇತರ ಪ್ರಬಂಧಗಳು (ವೈಚಾರಿಕ ಗದ್ಯ) | ಶಂಭು ಹೆಗಡೆ |
| ೨೦೦೭ | ಎಸ್.ಮಂಜುನಾಥ | ಕಲ್ಲ ಪಾರಿವಾಳಗಳ ಬೇಟ (ಕವನ) | ಚಿಂತಾಮಣಿ ಕೊಡ್ಲೆಕೆರೆ |
| ೨೦೦೮ | ಗಿರಡ್ಡಿ ಗೋವಿಂದರಾಜ್ | ಹಿಡಿಯದ ಹಾದಿ (ಪ್ರಬಂಧ) | ಕಿ.ರಂ.ರಾಮಚಂದ್ರನ್ |
| ೨೦೦೯ | ಅಶೋಕ ಹೆಗಡೆ | ವಾಸನೆ, ಶಬ್ದ, ಬಣ್ಣ ಇತ್ಯಾದಿ (ಕಥಾ ಸಂಕಲನ) | ಸಿ.ಎನ್.ರಾಮಚಂದ್ರನ್ |
| ೨೦೧೦ | ಪ್ರಸನ್ನ ಹೆಗ್ಗೋಡು | ಬಾಲಗೋಪಾಲ (ಕಾದಂಬರಿ) | ಲಕ್ಷ್ಮೀಶ ತೋಳ್ಪಾಡಿ |
| ೨೦೧೧ | ಆರ್.ಪಿ.ಹೆಗಡೆ | ಸಮಗ್ರ ಸಾಧನೆಗೆ | ಜಯಂತ ಕಾಯ್ಕಿಣಿ |
| ೨೦೧೨ | ವಿವೇಕ ಶಾನಭಾಗ | ವಿಶಿಷ್ಟ ಸಾಹಿತ್ಯ | ಗೋಪಾಲಕೃಷ್ಣ ಪೈ |
| ೨೦೧೩ | ರಾಜೇಂದ್ರ ಚೆನ್ನಿ | ಸಮಗ್ರ ಸಾಧನೆಗೆ | ಎಮ್. ರಮೇಶ |

| | | | |
|---|---|---|---|
| ೨೦೧೪ | ಭುವನೇಶ್ವರಿ ಹೆಗಡೆ | ಸಮಗ್ರ ಸಾಧನೆಗೆ | ವೈದೇಹಿ |
| ೨೦೧೫ | ಕೆ.ವಿ. ಅಕ್ಷರ | ಸಮಗ್ರ ಸಾಧನೆಗೆ | ಟಿ.ಪಿ. ಅಶೋಕ |
| ೨೦೧೬ | ಕೆ. ಸತ್ಯನಾರಾಯಣ | ಸಮಗ್ರ ಸಾಧನೆಗೆ | ಗಿರಡ್ಡಿ ಗೋವಿಂದರಾಜ |
| ೨೦೧೭ | ನಾಗೇಶ ಹೆಗಡೆ | ಸಮಗ್ರ ಸಾಧನೆಗೆ | ಪ್ರಕಾಶ ಭಟ್ಟ |

* ಡಾ.ಟಿ.ಪಿ.ಅಶೋಕ, ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಸುವರ್ಣ, ಗೌರೀಶ ಕಾಯ್ಕಿಣಿ, ಡಾ.ಆರ್.ಪಿ.ಹೆಗಡೆ, ಪ್ರೊ.ಜಿ.ಎಸ್.ಅವಧಾನಿ, ಡಾ.ಆರ್.ವಿ.ಭಂಡಾರಿ, ಡಾ.ಎಂ.ಜಿ.ಹೆಗಡೆ, ಪ್ರೊ.ಎಂ.ರಮೇಶ, ರಾಜಶೇಖರ ಹೆಬ್ಬಾರ, ಡಾ.ಶ್ರೀಪಾದ ಭಟ್ ಇವರೆಲ್ಲ ನಿರ್ಣಾಯಕರಾಗಿ ಕಾರ್ಯನಿರ್ವಹಿಸಿದ್ದಾರೆ.

## ಬಿ.ಎಚ್.ಶ್ರೀಧರ ಶಿಕ್ಷಣ ಪ್ರಶಸ್ತಿ ಪುರಸ್ಕೃತರು

(೧೯೯೫ ರಿಂದ ಕೃಷ್ಣ ಲೋಕರೆಯವರು ನೀಡಿದ ಮೂಲಧನದಿಂದ ಆರಂಭವಾದ ಈ ಪ್ರಶಸ್ತಿಗೆ ಸಿದ್ಧಾಪುರದ ಎಂ.ಜಿ.ಸಿ. ಕಾಲೇಜಿನ ಬಿ.ಎ. ಭಾಗ–೩ ರಲ್ಲಿ ಪ್ರಥಮರಾದ ವಿದ್ಯಾರ್ಥಿಗೆ ಪ್ರತಿವರ್ಷ ನೀಡಲಾಗುತ್ತಿದೆ.)

| | |
|---|---|
| ೨೦೦೫ | ವರದುರ್ಗಾ ಭಟ್ |
| ೨೦೦೬ | ಪ್ರಜ್ಞಾ ಭಟ್ |
| ೨೦೦೭ | ಪ್ರಜ್ಞಾ ಹೆಗಡೆ |
| ೨೦೦೮ | ಗೀತಾ ನಾಯ್ಕ |
| ೨೦೦೯ | ವೆಂಕಟೇಶ ನರಸಿಂಹ ಹೆಗಡೆ |
| ೨೦೧೦ | ಮಧುಲತಾ ಗೌಡರ್ |
| ೨೦೧೧ | ಸಿ.ಆರ್.ರೇಷ್ಮಾ |
| ೨೦೧೨ | ಶ್ರುತಿ ಭಟ್ |
| ೨೦೧೩ | ಕಾವ್ಯಶ್ರೀ ನಾಯ್ಕ |
| ೨೦೧೪ | ಆಶಾ ಹೆಗಡೆ |
| ೨೦೧೫ | ಲೋಹಿತ್ ಮಹಾಲೆ |
| ೨೦೧೬ | ಮಾಲತಿ ನಾಯ್ಕ |
| ೨೦೧೭ | ಇಂದಿರಾ ಸಬ್ನೀಸ್ |

# ಚಿತ್ರಸಂಪುಟ



ಬಿ.ಎಚ್. ಶ್ರೀಧರರು – ನಿಷ್ಕಪಟ ನಗು



ಬಿ.ಎಚ್. ಶ್ರೀಧರರು – ಮಾತಿನ ಓಘದಲ್ಲಿ



(ಎಡದಿಂದ) ಕುಳಿತವರು – ರಮಾದೇವಿ. ಬಿ.ಎಚ್.ಶ್ರೀ, ಮೊಮ್ಮಗ ರಮಣ,
ಟಿ.ಎಮ್. ಸುಬ್ಬರಾಯ, ರಾಜಶೇಖರ ಹೆಬ್ಬಾರ, ಸಾವಿತ್ರಿ (ಸೊಸೆ), ಮೊಮ್ಮಗ ಬ್ರಹ್ಮಾನಂದ




ಕುಂದಾಪುರದಲ್ಲಿ ಕನ್ನಡ ಸಾಹಿತ್ಯೋತ್ಸವ – ಕಾರಂತರೊಂದಿಗೆ ಕಾರ್ಯಕ್ರಮ – 1.11.1988




'ಭಾರತೀಯ ಮೂರ್ತಿಶಿಲ್ಪ' ಪುಸ್ತಕ ಬಿಡುಗಡೆ (1988) ಸಮಾರಂಭದಲ್ಲಿ ಕಲಾವಿದ
ಆರ್.ಜಿ. ರಾಯ್ಕರ, ಡಾ. ಟಿ. ನಾರಾಯಣಭಟ್ ಹಾಗೂ ಬಿ.ಎಚ್.ಶ್ರೀಧರ



ಅಭ್ಯಾಸ ನಿರತ ಬಿ.ಎಚ್.ಶ್ರೀಧರರು




ಬಿ.ಎಚ್.ಶ್ರೀಧರರ ಪ್ರಕಟಿತ ಪುಸ್ತಕಗಳ ಚಿತ್ರ



**26.4.1987ರ ಸನ್ಮಾನ – ನಿಂತವರು – ಶ್ರೀ ಎಲ್.ಆರ್. ಭಟ್, ಅವರ ಪತ್ನಿ ನಳಿನಿ (ಭಾರತೀಸುತರ ಮಗಳು), ಕುಳಿತವರು – (ಎಡದಿಂದ) ಶಂತರ ಕಾರಂತ (ಅಳಿಯ), ರಾಜಶೇಖರ ಹೆಬ್ಬಾರ (ಮಗ), ರಮಣ (ಮೊಮ್ಮಗ), ಸಚಿನ್ (ತಂಗಿಯ ಮೊಮ್ಮಗ), ಶ್ರೀಧರರು, ರಮಾದೇವಿ, ಸುಶೀಲೆ (ತಂಗಿ), ವಿಜಯಾ (ಮಗಳು)**



**ಬಿ.ಎಚ್.ಶ್ರೀಧರ, ರಮಾದೇವಿ, ಬ್ರಹ್ಮಾನಂದ (ಮೊಮ್ಮಗ)**



ಮಗಳು ಪ್ರತಿಭಾ ಮತ್ತು ಅಳಿಯ ರಮೇಶ ವೈದ್ಯರೊಂದಿಗೆ ಶ್ರೀಧರ ದಂಪತಿ



ಶಿವರಾಮಕಾರಂತರಿಂದ ಬಿ.ಎಚ್. ಶ್ರೀಧರರಿಗೆ ಸಿದ್ದಾಪುರದಲ್ಲಿ ನಡೆದ
ಸನ್ಮಾನ ಸಮಾರಂಭದಲ್ಲಿ ಮಾತನಾಡುತ್ತಿರುವ ಬಿ.ಎಚ್. ಶ್ರೀ



ಶಿವರಾಮಕಾರಂತರಿಂದ ಶ್ರೀಧರರಿಗೆ ಸನ್ಮಾನ (ಸಿದ್ದಾಪುರ – 1974)



ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ
ಕೆ.ವಿ. ಸುಬ್ಬಣ್ಣನವರೊಂದಿಗೆ ಪ್ರಿನ್ಸಿಪಾಲ್ ಶ್ರೀಧರರು




ಸಿದ್ದಾಪುರದ ಎಮ್.ಜಿ.ಸಿ. ಕಾಲೇಜಿನ ಕಾರ್ಯಕ್ರಮದಲ್ಲಿ
ಚಿತ್ರನಟ ಉದಯಕುಮಾರರೊಂದಿಗೆ ಬಿ.ಎಚ್.ಶ್ರೀಧರ



ಸಿದ್ದಾಪುರದ ಕಾಲೇಜಿನ ಕಾರ್ಯಕ್ರಮವೊಂದರಲ್ಲಿ ಬಿ.ಎಚ್.ಶ್ರೀ,
ರಾಜ್ಯಪಾಲ ಧರ್ಮವೀರ, ಶ್ರೀ ರಾಮಕೃಷ್ಣ ಹೆಗಡೆ ಮತ್ತಿತರು



ಮುಖ್ಯಮಂತ್ರಿ ವೀರೇಂದ್ರ ಪಾಟೀಲರಿಗೆ ಶ್ರೀಧರರಿಂದ ಗೌರವಾರ್ಪಣೆ



ಶಿವರಾಮಕಾರಂತರಿಗೆ ಮಾಲಾರ್ಪಣೆ ಮಾಡುತ್ತಿರುವ ಶ್ರೀಧರರು




ಸಿದ್ದಾಪುರದ ಕಾಲೇಜಿನ ಶಿಲನ್ಯಾಸ ಕಾರ್ಯಕ್ರಮ (ಎಡದಿಂದ) – ಬಿ.ಎಚ್.ಶ್ರೀ, ರಾಮಕೃಷ್ಣ ಹೆಗಡೆ, ಗಣೇಶ ಹೆಗಡೆ ಮತ್ತಿತರು



ಕವಿ ಬೇಂದ್ರೆ ಮತ್ತಿತರೊಡನೆ ಉಪಹಾರ ಸೇವನೆ



ಶಿವಮೊಗ್ಗದಲ್ಲಿ ಬೇಂದ್ರೆಯವರಿಂದ ಸನ್ಮಾನ



ಗೋಪಾಲಕೃಷ್ಣ ಅಡಿಗರೊಂದಿಗೆ (ನಾಲ್ಕನೆಯವರು) ಕುಮಟೆಯ ಕೆನರಾ ಕಾಲೇಜಿನಲ್ಲಿದ್ದಾಗ




**26.4.1987ರಂದು ಶ್ರೀಧರರ 70ನೇ ಹುಟ್ಟುಹಬ್ಬದಂದು ಶಿರಸಿಯಲ್ಲಿ ನಡೆದ ಸನ್ಮಾನದ ಚಿತ್ರ. (ಎಡದಿಂದ) – ಜಿ.ವಿ. ಭಟ್, ಡಿ.ಎನ್. ಶಾನಭಾಗ, ಬಿ.ಎಚ್.ಶ್ರೀ, ರಮಾದೇವಿ**



**ಬಿ.ಎಚ್.ಶ್ರೀಧರ (1968ರ ಸುಮಾರಿಗೆ)**



**ಹುಬ್ಬಳ್ಳಿಯ 'ಕರ್ಮವೀರ' ವಾರಪತ್ರಿಕೆಯ ಉಪಸಂಪಾದಕರಾಗಿದ್ದಾಗಿನ ಬಿ.ಎಚ್.ಶ್ರೀ (1947–51)**



**ಕುಮಟೆಯಲ್ಲಿ ವಾಸವಿದ್ದ ಮನೆಯೆದುರು (1951–1962)**



ಮೈಸೂರಿನ ಮಹಾರಾಜ ಕಾಲೇಜಿನ ದಿಗ್ಗಜ ಪ್ರಾಧ್ಯಾಪಕರೊಂದಿಗೆ ಶಿಷ್ಯ ಶ್ರೀಧರ
(ನಿಂತವರದಲ್ಲಿ (ಬಲಗಡೆಯಿಂದ) ಎರಡನೇ ಸಾಲಿನಲ್ಲಿ ಮೊದಲನೆಯವರು)



ಸಭೆಯೊಂದರಲ್ಲಿ ಬಿ.ಎಚ್. ಶ್ರೀಧರರು ಮಾತನಾಡುತ್ತಿರುವುದು



ಕುಮಟೆಯ ಸಾಹಿತ್ಯ ಸಮ್ಮೇಲನದಲ್ಲಿ – (ನಿಂತವರು) – ಬಿ.ಎಚ್. ಶ್ರೀಧರ, ವೈಎನ್.ಕೆ.
(ಕುಳಿತವರು) – ಗೋಪಾಲಕೃಷ್ಣ ಅಡಿಗ, ತ.ರಾ.ಸು., ರಾಮಚಂದ್ರ ಶರ್ಮ, ಸು.ರಂ. ಎಕ್ಕುಂಡಿ



‘ಕಾವ್ಯಸೂತ್ರ’ ದಲ್ಲಿ ಕಾವ್ಯಮೌಲ್ಯಕ್ಕೆ ವಿಶ್ವವ್ಯಾಪಕ ನಿಕಷ ಅಗತ್ಯವೆಂದು ಶ್ರೀಧರರು ವಾದಿಸುತ್ತಾರೆ. ತಾತ್ವಿಕವಾಗಿ ವಿಶ್ವಸಾಹಿತ್ಯದ ಪರಿಕಲ್ಪನೆ ಅವರಿಗೆ ಸಮ್ಮತವಾದದ್ದು. ಇದೇ ರೀತಿ “ಭಾರತೀಯ ಸಾಹಿತ್ಯ”ದ ಪರಿಕಲ್ಪನೆ ಕೂಡ. ಭಾಷೆ ಮತ್ತು ಸಾಹಿತ್ಯಗಳ ‘ಬಾಂಧವ್ಯ’ವನ್ನು ಚರ್ಚಿಸುವ ಹಿಂದಿನ ಅವರ ಗ್ರಹೀತ ಈ ಪರಿಕಲ್ಪನೆಯೇ. ಅನುವಾದಗಳ ನೆರವಿಲ್ಲದೆಯೇ ಇಂತಹ ಪರಿಕಲ್ಪನೆಗಳನ್ನು ಊಹಿಸಿಕೊಳ್ಳುವುದೂ ಸಾಧ್ಯವಾಗುವುದಿಲ್ಲ. ಈ ಕಾರಣದಿಂದ ಶ್ರೀಧರರ ವಾಙ್ಮಯದಲ್ಲಿ ಒಂದು ದೊಡ್ಡ ಸವಾಲು ಅನು–ವಾದ ಹಾಗೂ ಭಾಷಾಂತರಗಳದ್ದು.

ದಿಙ್ನಾಗನ ‘ಕುಂದಮಾಲೆ’ಯ ಅನುವಾದದ ಮೊದಲ ಮಾತಿನಲ್ಲಿ ಭಾಷಾಂತರ ನೀತಿಯ ಬಗ್ಗೆ ತಮ್ಮ ನಿಲುವನ್ನು ಶ್ರೀಧರರು ಸ್ಪಷ್ಟಪಡಿಸಿದ್ದಾರೆ. “ಅಪತಿವ್ರತೆಯಲ್ಲದ, ಆದರೆ ಆತ್ಮಹತ್ಯೆಗೆ ಕೂಡಲೇ ಸಿದ್ಧವಾಗುವ ಅತಿಪತಿವ್ರತೆಯೂ ಆಗದ ದಿಙ್ನಾಗನ ಸೀತೆಯಂತೆ ಭಾಷಾಂತರವು ಮಾಧ್ಯಮದ ಹಾಗೂ ರಂಗಪ್ರದರ್ಶನದ ವರ್ತಮಾನ ಕಾಲೀನ ರೂಢಿ – ಸಂಪ್ರದಾಯಗಳನ್ನು ಪಾತ್ರಗಾಂಭೀರ್ಯಕ್ಕೆ ಧಕ್ಕೆ ಬಾರದಂತೆ ಉಳಿಸಿಕೊಂಡು ಹೋಗುವುದು ಅಗತ್ಯ.” ಅಂದರೆ, ಅವರ ಉದ್ದೇಶ ಸಾಮಾನ್ಯ ಭಾಷಾಂತರಕಾರನ ಉದ್ದೇಶಕ್ಕಿಂತ ಸೃಜನಶೀಲವಾದದ್ದು. ಮೂಲಭಾಷೆ ಹಾಗೂ ಕೃತಿಗಿಂತ ಗುರಿ – ಭಾಷೆ ಮತ್ತು ಓದುಗರೊಡನೆಯ ಸಂಬಂಧವೇ ಅವರಿಗೆ ಮುಖ್ಯವಾದದ್ದು. ಕಾವ್ಯ – ನಾಟಕಗಳಲ್ಲದೇ ವೈಚಾರಿಕ ಗದ್ಯದ ಭಾಷಾಂತರದಲ್ಲೂ ಅವರು ಈ ನೀತಿಯನ್ನು ಅನುಸರಿಸಿದರು. ಹೀಗಾಗಿಯೇ ಅವೆಲ್ಲ ಅನು ವಾದಗಳು.

ಶ್ರೀಧರರ ಆರಂಭಿಕ ಅನುವಾದಗಳಲ್ಲೊಂದಾದ **J.S. Mill** ನ **‘On Liberty’** – ‘ಸ್ವಾತಂತ್ರ್ಯ ಮೀಮಾಂಸೆ’ಗೆ ಬರೆದ ಸುದೀರ್ಘವಾದ ಮುನ್ನುಡಿಯಲ್ಲಿ ಡಿ.ವಿ.ಜಿ.ಯವರು ಶ್ರೀಧರರನ್ನು “ವಿದ್ವಾಂಸರು, ಕನ್ನಡದಲ್ಲಿ ಬರವಣಿಗೆಯ ಅಭ್ಯಾಸಕ್ಕಾಗಿ ಪರಿಶ್ರಮ ಮಾಡಿರುವವರು, ಪ್ರಪಂಚದ ಇಂದಿನ ಪರಿಸ್ಥಿತಿಯನ್ನು ವಿಚಾರದಿಂದ ಕಂಡುಕೊಂಡಿರುವವರು, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಜನದಲ್ಲಿ ಜ್ಞಾನೋನ್ನತಿಯೂ, ವಿಚಾರೋನ್ನತಿಯೂ ಬೆಳೆಯಬೇಕೆಂದು ತಮ್ಮ ಹೃದಯದಲ್ಲಿ ಆಸೆ ಆಕಾಂಕ್ಷೆಗಳನ್ನು ಬೆಳೆಸಿಕೊಂಡಿರುವವರು” ಎಂದು ಶ್ಲಾಘಿಸಿದ್ದಾರೆ. ಅನುವಾದಿಸಲು ಶ್ರೀಧರರಿಗಿದ್ದ ಅಧಿಕಾರ ಹಾಗೂ ಅವರ ಅನುವಾದಗಳ ಉದ್ದೇಶಗಳನ್ನು ಸೂಚಿಸುವ ಮಾತುಗಳಿವು.

– ಡಾ. ಎಮ್.ಜಿ. ಹೆಗಡೆ



ತೇಜು ಪಬ್ಲಿಕೇಷನ್ಸ್